# ಹಣತೆ

## ಜಿ. ಎಸ್. ಶಿವರುದ್ರಪ್ಪ ಅಭಿನಂದನ ಗ್ರಂಥ

ಸಂಪಾದಕರು

ಡಿ. ಎಸ್. ನಾಗಭೂಷಣ

ನಟರಾಜ ಬೂದಾಳು

ಸವಿತಾ ನಾಗಭೂಷಣ

ಲೋಹಿಯಾ ಪ್ರಕಾಶನ

ಬಳ್ಳಾರಿ

**HANATE**

*Dr. G. S. Shivarudrappa Felicitation Volume,* edited by D. S. Nagabhushana, S. Nataraja Budal & Savita Nagabhushana

Published by
**LOHIYA PRAKASHANA**
'Kshitija' Kappagallu Road
Gandhi Nagar, Bellary - 583 103
Tel: 08392 - 57412

ISBN 81-87731-27-3

FIRST IMPRESSION - 2001



PAGES: 624 + xxii

PRICE: Rs. 300

COVER :

PHOTOS: Front - K. N. Nagesh Kumar
Back - Dr. H. Chandrasekhar
Design Sudhakara Darbe

D.T.P.: Sreedhar R. S.

PRINTED AT: Shakti Printers, Rajajinagar
Bangalore - 10. Ph: 3305820

ಎಲ್ಲೋ ಹುಡುಕಿದೆ ಇಲ್ಲದ ದೇವರ
ಕಲ್ಲುಮಣ್ಣುಗಳ ಗುಡಿಯೊಳಗೆ
ಇಲ್ಲೇ ಇರುವ ಪ್ರೀತಿ-ಸ್ನೇಹಗಳ
ಗುರುತಿಸದಾದೆನು ನಮ್ಮೊಳಗೆ.

* * *

ಪ್ರೀತಿ ಇಲ್ಲದ ಮೇಲೆ
ಹೂವು ಅರಳೀತು ಹೇಗೆ?
ಮೋಡ ಕಟ್ಟೀತು ಹೇಗೆ?
ಹನಿಯೊಡೆದು ಕೆಳಗಿಳಿದು
ನೆಲಕ್ಕೆ ಹಸಿರು ಮೂಡೀತು ಹೇಗೆ?

* * *

ಸುತ್ತಲು ಕವಿಯುವ ಕತ್ತಲೆಯೊಳಗೆ
ಪ್ರೀತಿಯ ಹಣತೆಯ ಹಚ್ಚೋಣ
ಬಿರುಗಾಳಿಗೆ ಹೊಯ್ದಾಡುವ ಹಡಗನು
ಎಚ್ಚರದಲಿ ಮುನ್ನಡೆಸೋಣ

* * *

ಹೇಗೋ ನನ್ನ ಪಾಡಿಗೆ ನಾನು ಬದುಕುತ್ತೇನೆ:
ಇದ್ದಷ್ಟು ನೆಲವ ಉತ್ತು ಬಿತ್ತಿ ನೀರೆರೆದು
ಮಲಗಿರುವ ಬೀಜಗಳ ಕಣ್ಣು ತೆರೆಸುತ್ತೇನೆ.
ನಾಳೆ ಈ ಸಸಿಗಳೆಲ್ಲಾ ವಟವೃಕ್ಷವಾಗಿ
ಸಾವಿರ ಜನಕ್ಕೆ ನೆರಳಾದಾವೆಂಬ ಮಹದಾಸೆ ಇರದಿದ್ದರೂ,
ಒಂದೆರಡಾದರೂ ಬೀಜವಾಗುವಂಥ
ಹಣ್ಣು ಬಿಟ್ಟಾವೆಂದು ನಂಬಿ ಕಾಯುತ್ತೇನೆ.

## ಸಂಪಾದಕರ ಮಾತು

ಕನ್ನಡದ ಹಿರಿಯ ಕವಿಗಳೂ, ಕಾವ್ಯಮೀಮಾಂಸಕರೂ, ಪ್ರಾಧ್ಯಾಪಕರೂ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಇಂದಿನ ಕನ್ನಡ ಸಾಂಸ್ಕೃತಿಕ ಲೋಕದ ಎಲ್ಲ ಸೂಕ್ಷ್ಮ ಹಾಗೂ ಸಮತೋಲನಗಳ ಪ್ರಾತಿನಿಧಿಕ ಶಕ್ತಿಯೂ ಆಗಿರುವ ಡಾ. ಜಿ. ಎಸ್. ಶಿವರುದ್ರಪ್ಪನವರಿಗೆ ಈಗ ಎಪ್ಪತ್ತೈದು ವರ್ಷಗಳು. ನೂರು ವರ್ಷ ಬಾಳಲಿ ಎಂಬ ಹಾರೈಕೆಯೇ ಅತ್ಯಂತ ಶ್ರೇಷ್ಠ ಹಾರೈಕೆಯೆನಿಸಿರುವ ನಮ್ಮ ಪರಂಪರೆಯಲ್ಲಿ ಜಿಎಸ್ಎಸ್ ಅವರಂತಹ ಒಂದು ಬಹುಮುಖ ಪ್ರತಿಭೆಯ ಚೇತನ ಎಪ್ಪತ್ತೈದು ವರ್ಷಗಳ ಬಾಳನ್ನು ಪೂರ್ಣಗೊಳಿಸಿರುವ ಸಂದರ್ಭವು, ಆ ಚೇತನದ ಸಂಪರ್ಕಕ್ಕೆ ಬಂದು ಒಂದಲ್ಲ ಒಂದು ರೀತಿಯಲ್ಲಿ ತಮ್ಮ ಬಾಳನ್ನು ಸಂಪನ್ನಗೊಳಿಸಿಕೊಂಡವರ ಪಾಲಿಗೆ ಒಂದು ವಿಶೇಷ ಆಚರಣೆಯ ಸಂದರ್ಭವೂ ಹೌದು. ಈ ವಿಶೇಷ ಆಚರಣೆಯ ಪ್ರತೀಕವೇ ಈ ಅಭಿನಂದನ ಗ್ರಂಥ 'ಹಣತೆ': ಹಣತೆ ಜಿಎಸ್ಎಸ್ ಅವರ ಕಾವ್ಯಲೋಕದ ಸ್ಥಾಯೀ ಪ್ರತೀಕ ಹೇಗೋ ಹಾಗೆಯೇ ಕನ್ನಡ ಸಾಂಸ್ಕೃತಿಕ ಲೋಕದಲ್ಲಿ ಅವರು ನಿರ್ವಹಿಸುತ್ತಾ ಬಂದಿರುವ ಪಾತ್ರದ ಪ್ರತೀಕವೂ ಆಗಿದೆ ಎಂಬುದು ನಮ್ಮ ನಂಬಿಕೆ.

ಈ ಅಭಿನಂದನ ಗ್ರಂಥದ ಸಿದ್ಧತೆಯ ಅಂಗವಾಗಿ ನಾವು ಜಿಎಸ್ಎಸ್ ಅವರ ಬಗ್ಗೆ ಆದರ-ಅಭಿಮಾನ-ಗೌರವಗಳನ್ನಿಟ್ಟುಕೊಂಡಿರುವರೆಂದು ಬಗೆದ ಹಲವರಿಗೆ ಲೇಖನಗಳನ್ನು ಕೋರಿ ಪತ್ರ ಬರೆದಾಗ, ಹಿರಿಯ ಸಾಹಿತಿಯೊಬ್ಬರು 'ಜಿಎಸ್ಎಸ್‌ಗೆ ಈಗಾಗಲೇ ಕನ್ನಡ ಜನತೆ ಒಂದು ಅಭಿನಂದನ ಗ್ರಂಥ ಸಲ್ಲಿಸಿ ಒಳ್ಳೆಯ ಕೆಲಸ ಮಾಡಿದೆ' ಎಂಬುದನ್ನು ನೆನಪಿಸಿ ತಮಗೆ ಲೇಖನ ಬರೆಯಲು ಸಾಧ್ಯವಾಗುತ್ತಿಲ್ಲವೆಂದು ತಿಳಿಸಿದರು. ನಾವು ಈ ಅಭಿನಂದನ ಗ್ರಂಥದ ಯೋಜನೆಯಲ್ಲಿ ತೊಡಗಿದಾಗ, ಜಿಎಸ್ಎಸ್ ಅವರಿಗೆ 50 ವರ್ಷ ತುಂಬಿದ ಸಂದರ್ಭದಲ್ಲಿ 'ಸ್ನೇಹ ಕಾರ್ತೀಕ' ಎಂಬೊಂದು ಅಭಿನಂದನ ಗ್ರಂಥವನ್ನು ಸಮರ್ಪಿಸಲಾಗಿತ್ತು ಎಂಬುದು ಗೊತ್ತಿತ್ತು. ಆದರೂ ನಾವು ಅವರ 75ನೇ ಹುಟ್ಟುಹಬ್ಬದ ವರ್ಷದಲ್ಲಿ ಅಭಿನಂದನ ಗ್ರಂಥವೊಂದನ್ನು ಸಮರ್ಪಿಸಲು ಮುಂದಾಗಿರುವುದಕ್ಕೆ ವಿಶೇಷ ಕಾರಣಗಳಿವೆ. ಅವುಗಳಲ್ಲಿ ಮುಖ್ಯವಾದುದು, ಜಿಎಸ್ಎಸ್ ತಮ್ಮ 50ನೇ ವಯಸ್ಸಿನ ನಂತರ ಒಂದು ವಿಶಾಲ ಸಾಂಸ್ಕೃತಿಕ ವ್ಯಕ್ತಿತ್ವವಾಗಿ ಬೆಳೆದಿರುವ ಬಗೆ. ಆಗ ಜಿಎಸ್ಎಸ್ ಒಬ್ಬ ಪ್ರಖ್ಯಾತ ಕವಿ, ಪ್ರಾಧ್ಯಾಪಕ ಅಷ್ಟೆ. ಈ ಇಪ್ಪತ್ತೈದು ವರ್ಷಗಳಲ್ಲಿ ಜಿಎಸ್ಎಸ್ ಒಬ್ಬ ಕವಿಯಾಗಿಯೂ ಬೆಳೆದಿದ್ದಾರೆ, ಆಧುನಿಕ ಕನ್ನಡದ ಅಪರೂಪದ ಕಾವ್ಯಮೀಮಾಂಸಕರೆನಿಸಿಕೊಂಡಿದ್ದಾರೆ; ಬೆಂಗಳೂರು ವಿಶ್ವವಿದ್ಯಾನಿಲಯ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ ಅದನ್ನು

ಕಟ್ಟಿ ಬೆಳೆಸಿದ ವಿಶೇಷ ರೀತಿ-ನೀತಿಗಳಿಂದಾಗಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿ ಅವರು ಈ ಸಂಸ್ಥೆಗೆ ಒದಗಿಸಿದ ಹೊಸ ಪ್ರಭೆಯಿಂದಾಗಿ, ಕಾಲಕಾಲಕ್ಕೆ ನಮ್ಮ ಸಾಹಿತ್ಯದ-ಸಾಂಸ್ಕೃತಿಕ ಲೋಕದ ಬೆಳವಣಿಗೆಗಳ ವ್ಯಾಖ್ಯಾನಕಾರರಾಗಿ-ಮಾಗಿದ ಧ್ವನಿಯ ವಕ್ತಾರರಾಗಿ, ತಮ್ಮ ನಂತರದ ತಲೆಮಾರುಗಳ ಹಲವಾರು ಪ್ರತಿಭಾವಂತರನ್ನು ಯಾವುದೇ ಪೂರ್ವಾಗ್ರಹಗಳಿಲ್ಲದೆ ಗುರುತಿಸಿ ಬೆಳೆಸಿದ ಹಿರಿಯರಾಗಿ, ಒಟ್ಟಾರೆ ಇಂದು 'ಕನ್ನಡ'ವೆಂಬ ಶಬ್ದದಲ್ಲಿನ ಸಾಂಸ್ಕೃತಿಕ ಧ್ವನಿತರಂಗಕ್ಕೆ ಸಂಕೇತವೆನಿಸಿಕೊಂಡಿದ್ದಾರೆ. ಅದನ್ನು ಈ ಅಭಿನಂದನ ಗ್ರಂಥದ ರೂಪದಲ್ಲಿ ಗುರುತಿಸಿ ಗೌರವಿಸುವ ಮೂಲಕ ನಾವು ಅವರ ಈ ವ್ಯಕ್ತಿತ್ವ ವಿಕಸನದ ಸಂದರ್ಭದಲ್ಲಿ ಬದುಕಿ ಬೆಳೆದು, ಪಟ್ಟ ಸಂತೋಷಕ್ಕೆ ನಮ್ಮ ಕೃತಜ್ಞತೆಯನ್ನು ಸಲ್ಲಿಸುತ್ತಿದ್ದೇವೆ.

ಶಿವರುದ್ರಪ್ಪನವರಿಗೆ ಪಂಪ ಪ್ರಶಸ್ತಿ ಬಂದ ಸಂದರ್ಭದಲ್ಲಿ 1999ರಲ್ಲಿ ಶಿವಮೊಗ್ಗದಲ್ಲಿ ಅಲ್ಲಿನ 'ಆಸಕ್ತಿ' ಬಳಗ ಏರ್ಪಡಿಸಿದ್ದ ಅಭಿನಂದನಾ ಸಮಾರಂಭದ ಅಂಗವಾಗಿ ಅವರ ಸಾಹಿತ್ಯ ಕುರಿತಂತೆ ಗೋಷ್ಠಿಗಳನ್ನು ಆಯೋಜಿಸಲಾಗಿತ್ತು. ಈ ಗೋಷ್ಠಿಗಳಲ್ಲಿ ಮಂಡಿತವಾದ ಪ್ರಬಂಧಗಳು ಒಂದು ಸಂಕಲನವಾಗಿ ಪ್ರಕಟವಾಗುವ ನಿರೀಕ್ಷೆ ಎರಡು ವರ್ಷಗಳ ನಂತರವೂ ಈಡೇರದಿದ್ದಾಗ, ಜಿಎಸ್‌ಎಸ್ ಅವರ ಕಿರಿಯ ಮಿತ್ರ ನಟರಾಜ ಬೂದಾಳು ಅವರು, ಅವನ್ನು—ಯು.ಆರ್. ಅನಂತಮೂರ್ತಿ, ಸಿ.ಎನ್. ರಾಮಚಂದ್ರನ್, ಎಚ್.ಎಸ್. ವೆಂಕಟೇಶಮೂರ್ತಿ, ರಾಜೇಂದ್ರ ಚೆನ್ನಿ ಹಾಗೂ ನರಹಳ್ಳಿ ಬಾಲಸುಬ್ರಹ್ಮಣ್ಯ ಅವರ ಲೇಖನಗಳನ್ನು—ಸಂಗ್ರಹಿಸಿ, ಇನ್ನೊಂದಿಷ್ಟು ಲೇಖನಗಳ ಜೊತೆಗೂಡಿಸಿ ಈ ವರ್ಷ ಪ್ರಕಟಿಸುವ ಆಸಕ್ತಿ ತೋರಿದರು. ಇದರ ಪ್ರಕಟನೆಗೆ ಮುಂದಾದ ಬಳ್ಳಾರಿಯ ಲೋಹಿಯಾ ಪ್ರಕಾಶನದ ಸಿ. ಚನ್ನಬಸವಣ್ಣ ಅವರು ಅನ್ಯಕಾರ್ಯನಿಮಿತ್ತ ಚಿತ್ರದುರ್ಗಕ್ಕೆ ಒಮ್ಮೆ ಬಂದಿದ್ದಾಗ ನನ್ನೊಡನೆ ಈ ಬಗ್ಗೆ ಪ್ರಸ್ತಾಪಿಸಿದಾಗ, ನಾನು ಜಿಎಸ್‌ಎಸ್ ಅವರ ವ್ಯಕ್ತಿತ್ವವು ಅವರ ಈ 75ನೇ ಹುಟ್ಟು ಹಬ್ಬದ ವರ್ಷದಲ್ಲಿ ಇದಕ್ಕಿಂತ ದೊಡ್ಡ ಪ್ರಮಾಣದ, ವಿಸ್ತಾರದ ಹಾಗೂ ಹೆಚ್ಚು ಅರ್ಥಪೂರ್ಣವಾದ ಅಭಿನಂದನ ಗ್ರಂಥಕ್ಕೆ ಅರ್ಹವಾಗಿದೆ ಎಂದು ನನ್ನ ಅಭಿಪ್ರಾಯ ಸೂಚಿಸಿದೆ. ಜಿಎಸ್‌ಎಸ್ ಕುರಿತ ನನ್ನ ಈ ಸಹಜ ವಿಶ್ವಾಸ-ಅಭಿಮಾನಗಳ ಮಾತನ್ನು ಅಷ್ಟೇ ಸಹಜವಾಗಿ ನನಗೇ ಹಿಂದಿರುಗಿಸುವಂತೆ, ಚೆನ್ನಬಸವಣ್ಣನವರು ಅಂತಹ ಗ್ರಂಥದ ಸಂಪಾದನೆಯ ಜವಾಬ್ದಾರಿಯನ್ನು ನನಗೇ ವಹಿಸಿಬಿಟ್ಟರು. ಈ ಸಂಬಂಧವಾಗಿ ಆಗಲೇ ಪ್ರಾಥಮಿಕ ಸಿದ್ಧತೆ ನಡೆಸಿದ್ದ ನಟರಾಜ ಬೂದಾಳು ಹಾಗೂ ಜಿಎಸ್‌ಎಸ್ ಬಗ್ಗೆ ವಿಶೇಷ ಗೌರವವುಳ್ಳ ಸವಿತಾ ಈ ಜವಾಬ್ದಾರಿಯನ್ನು ನನ್ನೊಡನೆ ಹಂಚಿಕೊಳ್ಳಲು ಸಂತೋಷದಿಂದ ಒಪ್ಪಿದರು. ನಾವು ಜಿಎಸ್‌ಎಸ್ ಕುರಿತು ಪ್ರೀತಿ-ವಿಶ್ವಾಸ-ಗೌರವಗಳನ್ನಿಟ್ಟುಕೊಂಡವರೆಂದು ಭಾವಿಸಿದ ಆಯ್ದ ಸುಮಾರು ನೂರು-ನೂರಿಪ್ಪತ್ತೈದು ಜನರಿಗೆ ವಿಷಯ ವಿಂಗಡಿಸಿ ನೀಡಿ ಪತ್ರ ಬರೆದೆವು. ಈ ಗ್ರಂಥದ ಒಟ್ಟಾರೆ ಉದ್ದೇಶ ಜಿಎಸ್‌ಎಸ್ ಅವರ ವ್ಯಕ್ತಿತ್ವದ ವಿವಿಧ ಆಯಾಮಗಳ ಪರಿಚಯ—ಅವರ ಗೆಳೆಯ, ಶಿಷ್ಯ, ಅಭಿಮಾನಿ, ವಿಶ್ವಾಸಿ ಹಾಗೂ ಆಪ್ತರ ಮೂಲಕವೇ ಆಗಲೆಂಬುದು. ನಾವು ಪತ್ರ ಬರೆದವರಲ್ಲಿ ಕೆಲವರು

ಸಕಾಲದಲ್ಲೂ, ಇನ್ನು ಕೆಲವರು ತಡವಾಗಿಯಾದರೂ ಲೇಖನ ಕಳಿಸಿ ಸಹಕರಿಸಿದರು. ಮತ್ತೆ ಕೆಲವರು ಜಿಎಸ್ಎಸ್ ಕುರಿತ ತಮ್ಮ ಹಳೆಯ ಲೇಖನಗಳನ್ನು ಬಳಸಿಕೊಳ್ಳುವಂತೆ ಸೂಚಿಸಿ ಆ ಲೇಖನಗಳ ಪ್ರತಿಗಳನ್ನು ಕಳಿಸಿಕೊಟ್ಟರು. ಹಾಗೆಯೇ ನಾವು ಕೂಡಾ ಈ ಗ್ರಂಥದ ಮೂಲ ಕಲ್ಪನೆಯನ್ನು ಆದಷ್ಟೂ ಸಾಕಾರಗೊಳಿಸುವ ಪ್ರಯತ್ನವಾಗಿ ಇನ್ನೂ ಕೆಲವು ಹಳೆಯ ಲೇಖನಗಳನ್ನೂ, ಸಂದರ್ಶನಗಳನ್ನೂ, ಪತ್ರಿಕಾ ವಿಮರ್ಶೆಗಳನ್ನೂ ಸಂಗ್ರಹಿಸಿದೆವು. ಈ ಎಲ್ಲ ಬರಹಗಳ ಲೇಖಕರಿಗೆ, ಈ ಬರಹಗಳನ್ನು ಒದಗಿಸಿದ ಮಹನೀಯರುಗಳಿಗೆ ನಾವು ಆಭಾರಿಯಾಗಿದ್ದೇವೆ. ಈ ಸಂದರ್ಭದಲ್ಲಿ ದಾಖಲಿಸಬೇಕಾದ ವಿಷಾದದ ಸಂಗತಿ ಯೆಂದರೆ ಜಿಎಸ್ಎಸ್ ಅವರ ಆಪ್ತ ಗೆಳೆಯರೆಂದೋ ಪಟ್ಟಶಿಷ್ಯರೆಂದೋ ಹೆಸರಾದ ಹಲವರು ನಮ್ಮ ಪತ್ರಕ್ಕೆ ಒಂದು ಸಾಲಿನ ಉತ್ತರವನ್ನೂ ಕೊಡದೆ ಅಥವಾ ಕಡೇ ಘಳಿಗೆಯವರೆಗೂ ಲೇಖನ ಕಳಿಸಿಕೊಡುವುದಾಗಿಯೇ ಹೇಳುತ್ತಾ ಬಂದು ಕೊನೆಗೂ ಕಳಿಸದೆ, ನಮಗೆ ನಿರಾಶೆಯನ್ನುಂಟುಮಾಡಿದುದು. ಇದಕ್ಕೆ ಕಾಲ ಮಹಿಮೆಯಷ್ಟೇ, ನಮ್ಮ ಸಂಪಾದಕ ಮಂಡಳಿ ಸದಸ್ಯರ ವ್ಯಕ್ತಿತ್ವಗಳ ಮಿತಿಗಳೂ ಕಾರಣವಾಗಿರಬಹುದು.

ಅದೇನೇ ಇರಲಿ, ಈ ಅಭಿನಂದನ ಗ್ರಂಥ ಜಿಎಸ್ಎಸ್ ಅವರ ಬಗ್ಗೆ ಮತ್ತು ಅವರ ಸಾಹಿತ್ಯಿಕ-ಸಾಂಸ್ಕೃತಿಕ ಕೊಡುಗೆಗಳ ಬಗ್ಗೆ ನಿರ್ವ್ಯಾಜ ಪ್ರೀತಿ-ವಿಶ್ವಾಸ-ಅಭಿಮಾನವಿರುವವರ ಲೇಖನಗಳಿಂದ ಸಪೂರವಾಗಿ, ಶೋಭಾಯಮಾನವಾಗಿಯೇ ಸಿದ್ಧಗೊಂಡಿದೆ. ಜಿಎಸ್ಎಸ್ ಅವರ ಸಾಂಸ್ಕೃತಿಕ ವ್ಯಕ್ತಿತ್ವ ಸಮಗ್ರ ಕರ್ನಾಟಕವನ್ನು ಪ್ರತಿನಿಧಿಸುವಂತಹದ್ದು. ಅದು ಎಲ್ಲ ಜಾತಿ-ವರ್ಗ-ಪಂಥಗಳ ಎಲ್ಲೆಗಳನ್ನು ಮೀರಿದ್ದು ಎಂಬುದರ ದ್ಯೋತಕವಾಗಿ ವಿಭಿನ್ನ ಭೌಗೋಳಿಕ, ಸಾಮಾಜಿಕ, ಸಾಂಸ್ಕೃತಿಕ ಹಿನ್ನೆಲೆಯುಳ್ಳ ಮಹನೀಯರುಗಳು ಇಲ್ಲಿ ಬರೆದಿದ್ದಾರೆ—ಜಿಎಸ್ಎಸ್ ಅವರ ವ್ಯಕ್ತಿತ್ವವನ್ನು ತಾವು ಗ್ರಹಿಸಿದಂತೆ ಕೆತ್ತಿದ್ದಾರೆ; ಆ ಮೂಲಕ ತಮ್ಮ ವ್ಯಕ್ತಿತ್ವ-ಕೌಶಲ್ಯಗಳನ್ನು ಅನಾವರಣಗೊಳಿಸಿದ್ದಾರೆ. ಹೀಗಾಗಿ ಶಿವರುದ್ರಪ್ಪನವರು ತಮ್ಮ ಸಾಹಿತ್ಯವನ್ನೂ ಮೀರಿದ ಒಂದು ವ್ಯಕ್ತಿತ್ವವಾಗಿ ಕನ್ನಡ ಸಂಸ್ಕೃತಿಗೆ ಏನೆಲ್ಲ ಸತ್ವವನ್ನೂ, ವೈವಿಧ್ಯತೆಯನ್ನೂ ಒದಗಿಸಿದ್ದಾರೆ ಎಂಬುದರ ಚರಿತ್ರೆಯೇ ಇಲ್ಲಿದೆ. ಕಳೆದ 25-30 ವರ್ಷಗಳ ರಾಜಕೀಯ ಅಲ್ಲೋಲ-ಕಲ್ಲೋಲಗಳು, ಅವು ಕನ್ನಡ ಸಾಂಸ್ಕೃತಿಕ ಲೋಕದಲ್ಲಿ ಉಂಟುಮಾಡಿದ ದೃಷ್ಟ್ಯಾತ್ಮಕ, ರಾಚನಿಕ ಹಾಗೂ ಭಾಷಿಕ ಪಲ್ಲಟಗಳು ಹಾಗೂ ಅವು ಗಳಿಂದುಂಟಾದ ತಲ್ಲಣಗಳು, ಅವುಗಳಿಗೆಲ್ಲ ಮೂಕಸಾಕ್ಷಿಯಾಗಿ ನಿಂತಂತೆ ಕಾಣುತ್ತಿರುವಾಗಲೇ ಜಿಎಸ್ಎಸ್, ಎಲ್ಲವನ್ನೂ ಒಂದು ಒಟ್ಟಂದಕ್ಕೆ ತರುವ ಶಕ್ತಿಯಾಗಿಯೂ ಕೆಲಸ ಮಾಡಿದ ವಿಸ್ಮಯವೂ ಇಲ್ಲಿ ಸೇರಿಕೊಂಡು ಇಲ್ಲಿನ ಈ ಬರಹಗಳು, ಸಂದರ್ಶನಗಳು ಹಾಗೂ ವಿಮರ್ಶೆಗಳು ಒಟ್ಟಾರೆಯಾಗಿ ಒಂದು ಸಾಂಸ್ಕೃತಿಕ ದಾಖಲೆಯ ಸ್ವರೂಪ ಪಡೆದುಕೊಂಡು ಬಿಟ್ಟಿವೆ.

ಜಿಎಸ್ಎಸ್ ಕುವೆಂಪು ಪರಂಪರೆಯವರು ಎಂದು ಪ್ರತೀತಿ. ಇರಬಹುದು; ಆದರೆ ಕುವೆಂಪು ಪರಂಪರೆಯ ಒಳ್ಳೆಯದೆಲ್ಲವನ್ನು ಹೀರಿಕೊಂಡು ಪರಿಪುಷ್ಟರಾಗಿದ್ದ ಜಿಎಸ್ಎಸ್,

ಆ ಪರಂಪರೆಯನ್ನೂ ದಾಟಿ ನಿಂತವರು ಎಂಬುದನ್ನು ಬಹಳ ಜನ ಗಂಭೀರವಾಗಿ ಗಮನಿಸಿದಂತಿಲ್ಲ. ಕುವೆಂಪು ಅವರ ದಿಕ್ಕು ಆಕಾಶವಾದರೆ ಶಿವರುದ್ರಪ್ಪನವರ ದಿಕ್ಕು ಭೂಮಿ. ಇದರಿಂದಾಗಿ ಅವರ ವ್ಯಕ್ತಿತ್ವ ಒಂದು ಆತ್ಯಂತಿಕ ಭವ್ಯತೆಯನ್ನು ಕಳೆದುಕೊಂಡಿತೇನೋ ಎನಿಸುವುದಾದರೂ, ಇದರಿಂದ ಉಂಟಾದ ಚಾರಿತ್ರಿಕ ಪ್ರಯೋಜನಗಳನ್ನು ಯಾರೂ ಕಡೆಗಣಿಸುವಂತಿಲ್ಲ. ಕುವೆಂಪು ಅವರ ಆಕಾಶಪ್ರೀತಿ ಎಲ್ಲದರಲ್ಲೂ ದೈವತ್ವವನ್ನು ಕಾಣುವುದರಲ್ಲಿ ಕೊನೆಗೊಂಡರೆ, ಜಿಎಸ್ಎಸ್ ಅವರ ಭೂಮಿಪ್ರೀತಿ ಎಲ್ಲದರಲ್ಲೂ ಮನುಷ್ಯತ್ವವನ್ನು ಕಾಣುವುದರಲ್ಲಿ ಕೊನೆಗೊಳ್ಳುತ್ತದೆ. ಹೀಗಾಗಿಯೇ ಶಿವರುದ್ರಪ್ಪನವರ ಸುತ್ತಲಿನ ಸಾಂಸ್ಕೃತಿಕ ಲೋಕ ಒಂದು ಸಾಮಾಜಿಕ ಪ್ರಯೋಗ ಲೋಕವೂ ಹೌದು. ಇಂತಹ ಸಾಂಸ್ಕೃತಿಕ ಲೋಕದ ನಿರ್ಮಾಣಕ್ಕಾಗಿ ಜಿಎಸ್ಎಸ್ ಮಾಡಿಕೊಂಡ ರಾಜಿಗಳು ಅವರ ಸಾಹಿತ್ಯ ಹಾಗೂ ಸಾಹಿತ್ಯಚಿಂತನೆಯ ಮೇಲೆ ಹೇಗೋ ಹಾಗೇ ಆ ಕಾಲದ ಸಾಹಿತ್ಯದ ಮೇಲೂ ಉಂಟುಮಾಡಿದ ಪರಿಣಾಮಗಳ ಸೂಚನೆಗಳನ್ನೂ ಇಲ್ಲಿನ ಕೆಲವು ಲೇಖನಗಳಲ್ಲಿ ಕಾಣ ಬಹುದು.

ಜಿಎಸ್ಎಸ್ ಕಳೆದ 25-30 ವರ್ಷಗಳ ಕಾಲಾವಧಿಯಲ್ಲಿ ಕನ್ನಡ ಸಾಂಸ್ಕೃತಿಕ ಲೋಕದ ಕೇಂದ್ರಬಿಂದುವಾಗಿ ಮೂಡತೊಡಗಿದಾಗಿನಿಂದ ಅವರ ಕೃತಿಗಳು, ಕೆಲಸಗಳು ಹಲವು ಆಸಕ್ತರ ಕಣ್ಣಿಗೆ ಬಿದ್ದಿವೆ, ಮೆಚ್ಚುಗೆ ಪಡೆದಿವೆ. ಹಾಗೆಂದೇ ಈ ಗ್ರಂಥದ ಹಲವಾರು ಲೇಖನಗಳಲ್ಲಿ ಅವರ ಕೃತಿಗಳ—ವಿಶೇಷವಾಗಿ ಅವರ ಕಾವ್ಯ—ಕುರಿತಂತೆ ಹಾಗೂ ಕೆಲಸಗಳ ಕುರಿತಂತೆ ಪುನರಾವರ್ತನೆಗಳಿವೆ, ಕೆಲವೆಡೆ ಬೇಸರ ಬರುವಷ್ಟು. ಇದನ್ನು ಸಂಪಾದಕರು ಸಹಿಸಿದಂತೆಯೇ ಓದುಗರೂ ಸಹಿಸಬೇಕೆಂದು ಕೋರುತ್ತೇವೆ. ಏಕೆಂದರೆ ಅಭಿನಂದನ ಗ್ರಂಥ, ಎಲ್ಲವನ್ನೂ ಭಟ್ಟಿಮಾಡಿ ಒಂದು ಸೌಂದರ್ಯ ಸೃಷ್ಟಿಸುವ ಸೃಜನಶೀಲ ಪ್ರಯತ್ನವಲ್ಲ. ಬದಲಾಗಿ ಅದು ಸಂಬಂಧಪಟ್ಟ ಸರ್ವರನ್ನೂ ಅವರವರ ನೋಟ-ಅಭಿಪ್ರಾಯ-ವಿಮರ್ಶೆಗಳೊಂದಿಗೆ ಮಾನ್ಯ ಮಾಡುವ ಮೂಲಕ ಒಬ್ಬ ವ್ಯಕ್ತಿಯ ಸಾಧನೆಗಳನ್ನು ಅಭಿನಂದನಾರ್ಹಗೊಳಿಸಿ ಗೌರವಿಸುವ ಸಾಮಾಜಿಕ ಜವಾಬ್ದಾರಿಯನ್ನು ಬೇಡುವಂತಹ ಕೆಲಸ. ಈ ಸಾಂಸ್ಕೃತಿಕ-ಸಾಮಾಜಿಕ ಜವಾಬ್ದಾರಿಯನ್ನು ನಾವು ಶ್ರದ್ಧೆಯಿಂದ, ಸಂತೋಷ ದಿಂದ, ಮುಕ್ತಮನಸ್ಸಿನಿಂದ ನಿರ್ವಹಿಸಿದ್ದೇವೆ ಎಂಬ ತೃಪ್ತಿ ನಮಗಿದೆ. ಇಂತಹ, ಹೆಮ್ಮೆ ಪಡುವಂತಹ ಜವಾಬ್ದಾರಿಯನ್ನು ನಮಗೆ ವಹಿಸುವ ಮೂಲಕ ಲೋಹಿಯಾ ಪ್ರಕಾಶನದ ಸಿ. ಚನ್ನಬಸವಣ್ಣ ಅವರು ನಮ್ಮನ್ನು ಉಪಕೃತರನ್ನಾಗಿ ಮಾಡಿದ್ದಾರೆ. ಇದಕ್ಕಾಗಿ ಮತ್ತು ಇಂತಹ ಗೌರವಾರ್ಹ ಯೋಜನೆಯನ್ನು ಸಂತೋಷ-ಧೈರ್ಯಗಳಿಂದ ಕೈಗೆತ್ತಿಕೊಂಡ ಅವರಿಗೆ ಧನ್ಯವಾದಗಳನ್ನೂ, ಅಭಿನಂದನೆಗಳನ್ನೂ ಸಲ್ಲಿಸುತ್ತೇವೆ.

9.6.2001
ಚಿತ್ರದುರ್ಗ

**ಡಿ. ಎಸ್. ನಾಗಭೂಷಣ**
ಸಂಪಾದಕ ಮಂಡಳಿ ಪರವಾಗಿ

# ಪ್ರಕಾಶಕರ ಮಾತು

ಡಾ. ಜಿ. ಎಸ್. ಶಿವರುದ್ರಪ್ಪ ಅವರು ಜಿಎಸ್‌ಎಸ್ ಎಂದೇ ಪ್ರಸಿದ್ಧರು. ಅವರ ಬಹುಮುಖಿ ವ್ಯಕ್ತಿತ್ವ ಕರ್ನಾಟಕದ ಸಾಂಸ್ಕೃತಿಕ ಬದುಕಿನಲ್ಲಿ ಕಳೆದ ಅರ್ಧ ಶತಮಾನಕ್ಕೂ ಮೀರಿದ ಅವಧಿಯಲ್ಲಿ ಹಲವು ತೆರನ ವಿಶಿಷ್ಟತೆಗಳು ಮೆರೆಯುತ್ತಾ ಬರುತ್ತಿದೆ. ಸಾಹಿತ್ಯ ಕ್ಷೇತ್ರದ ಸೀಮೆಯನ್ನು ಮೀರಿ ಜಿಎಸ್‌ಎಸ್ ಅವರು ಕ್ರಮಿಸಿರುವ ಈ ಹಾದಿಯನ್ನು ಕಂಡುಕೊಳ್ಳುವುದು ನಾಡಿನ ಚರಿತ್ರೆಯಲ್ಲಿನ ಸಾಂಸ್ಕೃತಿಕ ರಂಗದ ಹೆಜ್ಜೆಗುರುತುಗಳನ್ನು ಕಾಣುವಂಥದೂ ಆಗಿದೆ. ಕುವೆಂಪು ಅವರ ನಂತರ ಕರ್ನಾಟಕದ ಸಾಂಸ್ಕೃತಿಕ ಲೋಕದಲ್ಲಿ ಔನ್ನತ್ಯದ ವ್ಯಕ್ತಿತ್ವವನ್ನು ತೋರುವ ಜಿಎಸ್‌ಎಸ್ ಅವರ ಜೀವನಗಾಥೆ ಸಮಷ್ಟಿಪ್ರಜ್ಞೆಗೆ ಸಾಕ್ಷಿಯಾಗಿ ನಿಲ್ಲುವಂತಿದೆ. ರಾಜಕಾರಣದ ರಾಡಿ ಸಾಂಸ್ಕೃತಿಕ ಲೋಕಕ್ಕೂ ವ್ಯಾಪಿಸಿಕೊಳ್ಳುತ್ತಿದೆ ಎಂಬ ಕೂಗಿಗೆ ಪ್ರತಿಯಾಗಿ ಜಿಎಸ್‌ಎಸ್ ಅವರು ಆರೋಗ್ಯಪೂರ್ಣ ಪರಿಸರವನ್ನು ತಮ್ಮ ಸುತ್ತ ನಿರ್ಮಿಸಿರುವುದು ನಮ್ಮ ಕಣ್ಣೆದುರಿಗಿದೆ.

ಜಿಎಸ್‌ಎಸ್ ಅವರಿಗೆ ಐವತ್ತು ವರ್ಷಗಳು ತುಂಬಿದಾಗ 'ಸ್ನೇಹ ಕಾರ್ತೀಕ' ಎಂಬ ಅಭಿನಂದನ ಗ್ರಂಥವನ್ನು ಅರ್ಪಿಸಲಾಗಿತ್ತು. ಅದು ಸಾಹಿತ್ಯಕವಾಗಿ ಜಿಎಸ್‌ಎಸ್ ಅವರ ಸಾಧನೆಗೆ ಒತ್ತುಕೊಟ್ಟಿತ್ತು. ಆನಂತರದ ಕಾಲು ಶತಮಾನದಲ್ಲಿ ಜಿಎಸ್‌ಎಸ್ ಅವರ ವ್ಯಕ್ತಿತ್ವದ ಸಾಧನೆಗಳನ್ನು ದಾಖಲಿಸುವ ಯತ್ನ ಇದುವರೆಗೂ ನಡೆದಿರಲಿಲ್ಲ. ಪ್ರಸ್ತುತ ಕೃತಿ 'ಹಣತೆ' ಜಿಎಸ್‌ಎಸ್ ಅವರ ಬಹುಮುಖಿತ್ವವನ್ನು ಕಂಡುಕೊಳ್ಳುವ ಪ್ರಯತ್ನ ಮಾಡಿರುವಂತೆಯೇ, ಅವರ ಸಾಹಿತ್ಯಕ ಕೃತಿಗಳತ್ತಲೂ ವಿಮರ್ಶಾತ್ಮಕವಾದ ಲೇಖನಗಳನ್ನು ಒಳಗೊಂಡಿದೆ.

ಡಾ. ಜಿಎಸ್‌ಎಸ್ ಅವರಿಗೆ 'ಪಂಪಪ್ರಶಸ್ತಿ' ಬಂದ ಸಂದರ್ಭದಲ್ಲಿ ಶಿವಮೊಗ್ಗೆಯ 'ಆಸಕ್ತಿ' (ಕನ್ನಡದ ಸಾಹಿತ್ಯಾಸಕ್ತ ಮುಸ್ಲಿಮರ ವೇದಿಕೆ) ಯು 7.2.99 ರಂದು ಅರ್ಥಪೂರ್ಣ ಅಭಿನಂದನಾ ಸಮಾರಂಭ ಏರ್ಪಡಿಸಿತ್ತು. ಶಿವಮೊಗ್ಗೆಯಲ್ಲಿ ಅಂದು ನಡೆದ ವಿಚಾರ ಸಂಕಿರಣದಲ್ಲಿ ಮಂಡಿತವಾದ ವಿಚಾರಗಳನ್ನು ಸಂಗ್ರಹಿಸಿ ಪುಸ್ತಕರೂಪದಲ್ಲಿ ತರಲು ಕೆಲವರು ಯೋಚಿಸಿದಾಗ, 'ಆಸಕ್ತಿ'ಯ ಗೌರವಾಧ್ಯಕ್ಷರಾದ ಎಚ್. ಇಬ್ರಾಹೀಂ ಅವರು, ಬಳ್ಳಾರಿಯ ಲೋಹಿಯಾ ಪ್ರಕಾಶನ ಈ ಪುಸ್ತಕವನ್ನು ತರಲಿ ಎಂದು ಅಭಿಪ್ರಾಯ ವ್ಯಕ್ತಪಡಿಸಿದರಂತೆ. ಈ ದಿಸೆಯಲ್ಲಿ ತುಮಕೂರಿನ ಗೆಳೆಯ ನಟರಾಜ ಬೂದಾಳು ಕಾರ್ಯ ಪ್ರವೃತ್ತರಾಗಿ ಲೇಖನಗಳನ್ನು ಸಂಗ್ರಹಿಸತೊಡಗಿದರು. ನಾಡಿನ ಪ್ರೀತಿಯ ಕವಿಯಾದ

ಜಿಎಸ್‌ಎಸ್ ಅವರನ್ನು ಕುರಿತ ಪುಸ್ತಕವನ್ನು ಪ್ರಕಟಿಸಲು ಲೋಹಿಯಾ ಪ್ರಕಾಶನ ಸಂತೋಷದಿಂದ ಒಪ್ಪಿಕೊಂಡಿತು.

ಚಿತ್ರದುರ್ಗಕ್ಕೆ ಹೋದಾಗ, ಲೋಕಾಭಿರಾಮವಾಗಿ ಈ ವಿಷಯವನ್ನು ಗೆಳೆಯ ಡಿ. ಎಸ್. ನಾಗಭೂಷಣ ಅವರಿಗೆ ತಿಳಿಸಿದಾಗ, ಇಷ್ಟರಲ್ಲೇ ಜಿಎಸ್‌ಎಸ್ ಅವರಿಗೆ 75 ತುಂಬಲಿರುವುದರಿಂದ, ಅವರ ಸಮಗ್ರ ಸಾಹಿತ್ಯ ಮತ್ತು ವ್ಯಕ್ತಿತ್ವವನ್ನು ಪ್ರತಿಬಿಂಬಿಸುವ ಒಂದು ಅಭಿನಂದನ ಗ್ರಂಥವನ್ನು ತಂದರೆ ಒಳ್ಳೆಯದು ಎಂದರು. ಈಗಾಗಲೇ ನಟರಾಜ ಬೂದಾಳು ಕೆಲವು ಲೇಖನಗಳನ್ನು ಸಂಗ್ರಹಿಸಿರುವುದರಿಂದ ಅವುಗಳನ್ನೊಳಗೊಂಡು, ನೀವೇ ಸಂಪಾದಿಸುವುದಾದರೆ ಸಂತೋಷದಿಂದ ಪ್ರಕಟಿಸುವುದಾಗಿ ತಿಳಿಸಿದೆ.

ಈ ಕೈಂಕರ್ಯವನ್ನು ಒಪ್ಪಿ, ತುಂಬ ಪ್ರೀತಿ, ಶ್ರದ್ಧೆಯಿಂದ ಈ ಗ್ರಂಥವನ್ನು ಸಂಪಾದಿಸಿಕೊಟ್ಟ ಡಿ. ಎಸ್. ನಾಗಭೂಷಣ, ಸವಿತಾ ನಾಗಭೂಷಣ, ನಟರಾಜ ಬೂದಾಳು ಅವರಿಗೆ—

ಮೊದಲಿಗೆ ಶಿವಮೊಗ್ಗೆಯ ಅಭಿನಂದನಾ ಸಮಾರಂಭದಲ್ಲಿನ ವಿಚಾರಗಳನ್ನು ಪುಸ್ತಕ ರೂಪದಲ್ಲಿ ತರಲು ಲೋಹಿಯಾ ಪ್ರಕಾಶನದ ಹೆಸರನ್ನು ಸೂಚಿಸಿದ ಎಚ್. ಇಬ್ರಾಹೀಂ ಅವರಿಗೆ—

ಪ್ರಕಟಣೆಯ ಕಾರ್ಯದಲ್ಲಿ ನೆರವಾದ ಪ್ರಕಾಶನದ ಹಿರಿಯ ಮಿತ್ರರಾದ ಡಾ. ರಾಜಶೇಖರ ನೀರಮಾನ್ವಿ, ಲಿಂಗರಾಜು ಅವರಿಗೆ—

ಅಚ್ಚುಕಟ್ಟಾಗಿ ಅಕ್ಷರ ಜೋಡಣೆ ಮಾಡಿಕೊಟ್ಟ ಶ್ರೀಧರ್ ದಂಪತಿಗಳಿಗೆ—

ಮುಖಪುಟ ವಿನ್ಯಾಸಮಾಡಿಕೊಟ್ಟ ಕಲಾವಿದ ಸುಧಾಕರ ದರ್ಬೆ, ಛಾಯಾಚಿತ್ರಗಳನ್ನು ಒದಗಿಸಿದ ಡಾ|| ಎಚ್. ಚಂದ್ರಶೇಖರ್ ಮತ್ತು ಕೆ. ಎನ್. ನಾಗೇಶ್‌ಕುಮಾರ್; ರೇಖಾಚಿತ್ರ ರಚಿಸಿಕೊಟ್ಟ ಕಲಾವಿದ ಗುಜ್ಜಾರಪ್ಪ, ಸುಂದರವಾಗಿ ಮುದ್ರಿಸಿಕೊಟ್ಟ ಶಕ್ತಿ ಪ್ರಿಂಟರ್ಸ್‌ನ ಚಂದ್ರು ಮತ್ತು ಸಿಬ್ಬಂದಿ ವರ್ಗ—ಇವರೆಲ್ಲರಿಗೂ ಪ್ರಕಾಶನ ಕೃತಜ್ಞವಾಗಿದೆ.

**ಸಿ. ಚನ್ನಬಸವಣ್ಣ**
ಪ್ರಕಾಶನದ ಪರವಾಗಿ

# ಒಳಪುಟಗಳಲ್ಲಿ....

## ಜಿಎಸ್‌ಎಸ್: ಸಾಹಿತ್ಯ ಸಂದರ್ಭ

## ಕಾವ್ಯನಮನ



## ಜಿಎಸ್‌ಎಸ್ ಕಾವ್ಯ-ನನ್ನ ಕಣ್ಣಲ್ಲಿ

## ನಾ ಕಂಡ ಜಿಎಸ್ಎಸ್

## ನಮ್ಮ ಮೇಷ್ಟ್ರು ಜಿಎಸ್‌ಎಸ್

ಮನೆಯಂಗಳದಿಂದ



ಮುಖಾಮುಖಿ

# ನಮ್ಮ ಕಾಲದ ದ್ರೋಣರು

ಯು. ಆರ್. ಅನಂತಮೂರ್ತಿ

ಜಿಎಸ್‌ಎಸ್ ಮೇಷ್ಟು. ಕುವೆಂಪು, ಬೇಂದ್ರೆ ಕೂಡಾ. ನಾವೆಲ್ಲ ಮಾಸ್ತರರೇ. ಆದರೆ ಕನ್ನಡಕ್ಕೆ ಕೆಲವರು ದ್ರೋಣರಿದ್ದಾರೆ. ನಮ್ಮ ಕಾಲದ ದ್ರೋಣರೆಂದರೆ ಜಿಎಸ್‌ಎಸ್ ಎನ್ನಬಹುದು. ಕನ್ನಡದಲ್ಲಿ ಹೊಸ ರೀತಿಯ ಚಿಂತನೆ ಎದ್ದಿದೆ. ಕೆಲವು ಯೂನಿವರ್ಸಿಟಿಗಳಿಗೆ ಇಂತಹ ಚಿಂತನೆಗಳನ್ನು ಕಂಡು ಈ ಯುವಕರೇನೋ ಅಧಿಕಪ್ರಸಂಗ ಮಾಡುತ್ತಿದ್ದಾರೆ, ಇವರಿಗೆ ಯಾವ ಜಾಗವನ್ನೂ ಕೊಡಬಾರದು ಎನ್ನುವ ಧೋರಣೆ ಇದೆ. ಆದರೆ ನಿಜವಾಗಿಯೂ ಬಹಳ risk ತಗೊಂಡು, ಹೊಸಕಾಲಕ್ಕೆ ಅಗತ್ಯವಾದ ಒಂದು ಇಲಾಖೆಯನ್ನು ಕಟ್ಟಿದ ಮಹಾನುಭಾವರು ಜಿಎಸ್‌ಎಸ್. ಇದು ಇಡೀ ಕರ್ನಾಟಕದಲ್ಲಿ ನಡೆದ ಏಕೈಕ ಘಟನೆ. ಹಾಗಾಗಿ ಜಿಎಸ್‌ಎಸ್ ನಮ್ಮ ಸಾಹಿತ್ಯ ಚರಿತ್ರೆಯಲ್ಲಿ ಬಹಳ ಮುಖ್ಯರಾಗುತ್ತಾರೆ. ಜಿಎಸ್‌ಎಸ್‌ರವರ ಎಷ್ಟೋ ಸಭೆಗಳಲ್ಲಿ ನಾವೆಲ್ಲ ಸಾಕಷ್ಟು ಜಗಳಮಾಡಿದ್ದೇವೆ. ಇದಕ್ಕೆಲ್ಲ, ನೋಡಲು ಗಂಭೀರ ಸ್ವಭಾವದವರಂತೆ ಕಾಣುವ ಜಿಎಸ್‌ಎಸ್ ಹೇಗೆ ಅನುವು ಮಾಡಿ ಕೊಟ್ಟರೆಂಬುದು ಇಂದಿಗೂ ಅಚ್ಚರಿಯ ಸಂಗತಿ. ಅಂದರೆ ಸಾಹಿತ್ಯಕ್ಕೊಂದು ನಿಜವಾದ ಕಳೆ, ಜೀವ, ಪ್ರಾಣ ಬಂತು. ನಾವು ಅವರು ಕಟ್ಟಿಕೊಟ್ಟ ವೇದಿಕೆಯಲ್ಲಿ ಜಗಳ ಆಡುತ್ತಿದ್ದುದಲ್ಲದೆ, ಊಟಕ್ಕೆ ಹೋದಾಗ, ಬೀದಿಯಲ್ಲೂ ಜಗಳ ಮಾಡಿಕೊಂಡು ನಮ್ಮ ಸ್ನೇಹಗಳನ್ನು ಗಟ್ಟಿಮಾಡಿಕೊಂಡೆವು. ಬಹುಶಃ ಭಾರತದ ಇತರೆ ಯಾವ ಭಾಷೆಯಲ್ಲೂ ಇಷ್ಟು ಜಗಳವಾಡಿಕೊಂಡು ಮಾತಾಡುವ ಸಾಹಿತಿಗಳು ಕಡಿಮೆ. ಅದಕ್ಕೆ ಜಿಎಸ್‌ಎಸ್ ಕಟ್ಟಿಕೊಟ್ಟ ವಾತಾವರಣ ಕೂಡಾ ಮುಖ್ಯವಾದುದು. ಇಲ್ಲಿ ಸಾಂಸ್ಥಿಕತೆಯನ್ನು ವಿರೋಧಿಸುವ ಸಾಹಿತ್ಯಿಕ ಚಳುವಳಿ ಹುಟ್ಟಿತು. ಸಾಂಸ್ಥಿಕತೆಯನ್ನೇ ವಿರೋಧಿಸುವ ಚಳುವಳಿಯಾದರೂ ಅಂತಹ ಸಾಹಿತ್ಯ ಚಳುವಳಿಗೂ ಒಂದು ಸಂಸ್ಥೆಯ ಅಗತ್ಯವಿತ್ತು. ಆ ಸಂಸ್ಥೆಯ ಅಗತ್ಯವನ್ನು ಜಿಎಸ್‌ಎಸ್ ಪೂರೈಸಿದರು. ಇಲ್ಲದಿದ್ದರೆ ಅವು ಒಟ್ಟಾಗುತ್ತಿರಲಿಲ್ಲ, ಬೆಳೆಯುತ್ತಿರಲಿಲ್ಲ, ನಮ್ಮ ಆಲೋಚನೆಗಳು ಹರಿತವಾಗುತ್ತಿರಲಿಲ್ಲ. ಇದು ಮೊದಲನೆಯ ಸಂಗತಿ.

ಇನ್ನೊಂದು, ಚಾರಿತ್ರಿಕವಾಗಿ ನಾವು ಯಾವ ಮುಚ್ಚುಮರೆಯೂ ಮಾಡದೆ ಹೇಳಬೇಕಾದ ಒಂದು ವಿಷಯವಿದೆ. ಕಂಬಾರರು ಎಂ.ಎ. ಪಾಸ್ ಮಾಡಿಕೊಂಡಾಗ ಅವರನ್ನು ಮೈಸೂರು ವಿ.ವಿ.ಗೆ ಸೇರಿಸಬೇಕು ಅಂತಾ ಗೋಪಾಲಗೌಡರೂ ನಾನೂ ಹೋಗಿ

ಪ್ರಯತ್ನಪಟ್ಟೆವು. ಆಗಲಿಲ್ಲ. ಅವರನ್ನು ಜಿಎಸ್ಎಸ್ ತಮ್ಮ ಇಲಾಖೆಗೆ ತಗೊಂಡರು. ಅಷ್ಟೇ ಅಲ್ಲ ಅವರು ಇಲಾಖೆಗೆ ತಗೊಂಡ ಕಿ.ರಂ ನಾಗರಾಜ್, ಡಿ.ಆರ್. ನಾಗರಾಜ್ ಇವರೆಲ್ಲರೂ ಒಂದು ಇಲಾಖೆಯಲ್ಲಿ ಒಂದು ಶಿಸ್ತಿನಲ್ಲಿ ಇಡಲಿಕ್ಕೆ ಕಷ್ಟವಾದ ವ್ಯಕ್ತಿಗಳೇ, ಬಹಳ ಬುದ್ಧಿವಂತರು. ಅಂತಹ ಕಷ್ಟಗಳನ್ನೆಲ್ಲ ಜಿಎಸ್ಎಸ್ ಎದುರಿಸಿದ್ದಾರೆ. ಅಲ್ಲಿ ಬೇರೆ ಬೇರೆ ರೀತಿಯ ಆಲೋಚನಾ ಕ್ರಮಗಳಿದ್ದವು. ಅಷ್ಟು ಜನರನ್ನು ಜಿಎಸ್ಎಸ್ ಒಟ್ಟಿಗೇ ಇಟ್ಟು ನಿರ್ವಹಿಸಿದ ಕ್ರಮದಿಂದಾಗಿ, ನಮ್ಮ ಕಾಲದ ಸಂಸ್ಥೆಗಳನ್ನು ಕಟ್ಟಿದ ಚರಿತ್ರೆಯನ್ನು ಬರೆಯುವಾಗ ಜಿಎಸ್ಎಸ್ ಎಲ್ಲರ ನಡುವೆ ದೊಡ್ಡವರಾಗುತ್ತಾರೆಂದು ನಾನು ತಿಳಿದಿದ್ದೇನೆ. ಆದ್ದರಿಂದಲೇ ನಮ್ಮ ಕಾಲದಲ್ಲಿ ಅವರು ದ್ರೋಣನ ಕೆಲಸ ಮಾಡಿದವರು.

ಅವರಿಗೆ ಒಂದು ಅನ್ಯಾಯ ಮಾಡಿದ್ದೇವೆ. ಸಮನ್ವಯ ಕವಿಗಳೆಂದು ಜಿಎಸ್ಎಸ್ ರವರನ್ನೂ, ಕಣವಿಯವರನ್ನೂ ಕರೆದಿದ್ದೇವಲ್ಲ ಅದು ಬಹಳ ದೊಡ್ಡ ತಪ್ಪು. ಈ ಸಮನ್ವಯ ಎನ್ನುವುದನ್ನು ಎರಡು ರೀತಿಯಲ್ಲಿ ಅರ್ಥೈಸಿಕೊಳ್ಳಲು ಸಾಧ್ಯ. ಒಂದು ನಾವೆಲ್ಲಾ ಯಾವುದೋ ದೊಡ್ಡ ಸತ್ಯದ ಪರವಾಗಿ ಹೋರಾಡುತ್ತಿದ್ದಾಗ ಇವರು ರಾಜಿ ಮಾಡಿಕೊಳ್ಳುವ ಕವಿಗಳು ಅಂತ; ಇನ್ನೊಂದು ರೀತಿಯಲ್ಲಿ ಉಳಿದವರೆಲ್ಲ ಅತಿರೇಕಕ್ಕೆ ಹೋಗುತ್ತಿರುವುದರಿಂದ, ಇವರೇ ನಿಜವಾಗಿ ದೊಡ್ಡಕವಿಗಳು, ಸಮನ್ವಯ ಕವಿಗಳು ಎಂದು. ಹೀಗೆ ಇರೋರೆಲ್ಲರಿಗಿಂತಾ ದೊಡ್ಡೋರು ಎನ್ನಲೂ ಸಮನ್ವಯವನ್ನು ಬಳಸಬಹುದು. ಆದರೆ ಹೀಗೆ ಬಳಸುವುದು ಸರಿಯಲ್ಲ. ಯಾಕೆಂದರೆ ಒಬ್ಬ ಒಳ್ಳೆಯ ಸಾಹಿತಿ ಯಾವ ಕಾಲದಲ್ಲೇ ಇರಲಿ ಅವನು ಬೇರೆ ಬೇರೆ ರೀತಿಯ ಸಮನ್ವಯಗಳನ್ನು ಮಾಡಿಯೇ ಇರುತ್ತಾನೆ. ಅದು ಎಲ್ಲ ಕಾಲದ ಕಾವ್ಯಕ್ಕೂ ಇರಬೇಕಾದ ಒಂದು ಗುಣ. ನಾವು ಇಡೀ ಭಾರತದ ತಾತ್ವಿಕ ಇತಿಹಾಸವನ್ನು ಗಮನಿಸಿದರೆ, ಒಂದೊಂದಕ್ಕೂ ಎಷ್ಟೊಂದು ಅಂತರಪಠ್ಯಗಳಿರ್ತಾವೆ ಅನ್ನೋದು ಗೊತ್ತಾಗುತ್ತೆ. ಒಂದು ವಸ್ತುವಿಗೆ ಎರಡು ಪಠ್ಯಗಳಿದ್ದರೆ, ಹೊಸದರಲ್ಲಿ ಇವೆರಡೂ ಸೇರಿರ್ತವೆ. ನಮ್ಮ ಹಿಂದಿನವರೆಲ್ಲ ನಮ್ಮೊಳಗಿರ್ತಾರೆ. ಹೀಗೆ ಒಂದು ರೀತಿಯ ಸಮನ್ವಯ ಕಾರ್ಯ ನಡೀತಾನೇ ಇರುತ್ತೆ. ದೇಸೀ ಮೂಲದಿಂದ ಬಂದಿದೆ, ಎಲ್ಲವೂ ದೇಸಿಯದ್ದೇ ಅಂದುಕೊಂಡಿದ್ದರೆ, ಅದು ಮಾರ್ಗದಿಂದ ಬಂದದ್ದನ್ನು domesticate ಮಾಡಿಬಿಟ್ಟಿರ್ತದೆ, ಪಳಗಿಸಿ ತನ್ನೊಳಗೆ ಸೇರಿಸಿಕೊಂಡಿರ್ತದೆ; ತದ್ಭವಗೊಳಿಸಿರ್ತದೆ. ಅನೇಕ ತತ್ಸಮಗಳು ತದ್ಭವಗಳಾಗಿ ಒಳಗೆ ಬರ್ತಿರ್ತವೆ. ತದ್ಭವಗಳು ತತ್ಸಮಗಳ ಜಾಗದಲ್ಲಿ ಹೋಗಿ ಕೂತಿರ್ತವೆ. ಈ ರೀತಿಯ ಅಂತರ್‌ಪಠ್ಯ ಆಗ್ತಾನೇ ಇರ್ತದೆ. ಇದು ಕಾವ್ಯದ ಮುಖ್ಯಗುಣ. ಆದ್ದರಿಂದಲೇ ಈ ಮುಖ್ಯಕವಿಗಳನ್ನು ಸಮನ್ವಯ ಕವಿಗಳೆಂದು ಕರೆದದ್ದು. ಯಾವುದೇ ಚಳುವಳಿ ಇರಲಿ, ಅಲ್ಲಿ ಎಲ್ರೂ ಇರ್ತಾರೆ. ಆದರೆ ನಾವು ನಾವು ಒಳಗೆ ಬರುವಾಗ ಒಂದು ವಿಶೇಷ ದೃಷ್ಟಿಕೋನ ಇಟ್ಟುಕೊಂಡು ಬರಬೇಕು. ಆ ವಿಶೇಷ ಏನಾದ್ರೂ ಇರ್‍ಲಿ, ಈ ಅಂತರ್‌ಪಠ್ಯಗಳ ಅಥವಾ ಆಗ್ತಾ ಹೋಗುವ ಈ ಕಾವ್ಯದ ಸತತ ಪ್ರಕ್ರಿಯೆಯಲ್ಲಿ ಎಲ್ಲರೂ ಒಂದು ಮುಖ್ಯವಾಹಿನಿಯಲ್ಲಿ ಬೆರೆಯಬೇಕು. ಯಾಕೆಂದರೆ ಜಿಎಸ್ಎಸ್‌ರವರು ಬರೆದ 'ಜಡೆ' ಕವನವಾಗಲೀ, ಕೃಷ್ಣನ ಸಾವಿನ ಬಗ್ಗೆ ಅವರು

ಬರೆದಿರುವ ಕವನವಾಗಲೀ, ಅವು ನವೋದಯಕಾಲದ ದೊಡ್ಡ ಚಳುವಳಿ ಇಲ್ದೇ ಇದ್ದರೆ ಬರ್ತಿರಲಿಲ್ಲ, ನವ್ಯ ಚಳುವಳಿ ಇಲ್ದೆ ಇದ್ರೂ ಬರ್ತಿರಲಿಲ್ಲ, ಬಂಡಾಯ ಚಳುವಳಿ ಇಲ್ದೇ ಇದ್ರೂ ಬರ್ತಿರಲಿಲ್ಲ. ಅಂದ್ರೆ ಜಿಎಸ್‌ಎಸ್‌ರವರು ಸೃಜನಶೀಲರಾದ್ದರಿಂದ ತಮಗಿಂತ ಕಿರಿಯರಿಂದಲೂ ಕಲ್ತಿದ್ದಾರೆ, ಅಂತಾ ನಾನು ಗೌರವದಿಂದ ಹೇಳಬಯಸುತ್ತೇನೆ. ಅದೇನು ಕಡಿಮೆಯ ಸಂಗತಿಯಲ್ಲ. ಯೇಟ್ಸ್ ಬಹಳ ಮುದುಕನಾಗಿದ್ದಾಗ ಕಿರಿಯರನ್ನು ಕಂಡು ಹೊಟ್ಟೆಕಿಚ್ಚು ಪಡ್ತಾ ಇದ್ದ ಹಾಗೆ. ಹಿರಿಯರಿಗೆ ಕಿರಿಯರನ್ನು ಕಂಡು ಪ್ರೀತಿ-ವಾತ್ಸಲ್ಯಗಳಿಂದ ಕೂಡಿದ ಅಸೂಯೆ ಇದ್ರೆ ಅವರಿನ್ನೂ ಜೀವಂತವಾಗಿದ್ದಾರೆ ಅಂತಾ ಅರ್ಥ. ಅಸೂಯಾತೀತನಾದ ಮನುಷ್ಯ ಒಮ್ಮೊಮ್ಮೆ ಜಡನಾಗಿಬಿಟ್ಟ ಅಂತಲೂ ಅನ್ನಿಸಬಹುದು.

ಜಿಎಸ್‌ಎಸ್ ಸ್ಪಂದಿಸುವ ಗುಣವನ್ನು ಉಳಿಸಿಕೊಂಡಿದ್ದಾರೆ. ಆದುದರಿಂದ, ಅವರ ಕಾವ್ಯ ಎಷ್ಟು ಒಳ್ಳೆಯದು ಅನ್ನುವುದನ್ನು ಚರ್ಚಿಸುವಾಗ ಜಿಎಸ್‌ಎಸ್‌ರವರು ಎದುರಿಗಿದ್ದರೂ ಮುಕ್ತವಾಗಿ ಚರ್ಚಿಸಬಹುದು. ಅಲ್ಲದೆ, ಹಾಗೆ ಚರ್ಚಿಸುವಾಗ ಇಡೀ ಕನ್ನಡ ಕಾವ್ಯವನ್ನೇ ದೃಷ್ಟಿಯಲ್ಲಿಟ್ಟುಕೊಂಡು, ಈ ಕಾವ್ಯ ಹೇಗೆ ವಿಶಿಷ್ಟವಾಗಿದೆ, ಹೊಸದಾಗಿದೆ, ಯಾವ ಪ್ರಸಾದ ಗುಣವನ್ನು ಅದು ಕನ್ನಡ ಕಾವ್ಯಕ್ಕೆ ತರ್ತದೆ ಎನ್ನುವುದರ ಜೊತೆಗೆ, ಯಾವ ಪ್ರಸನ್ನತೆ? ಎಷ್ಟು ಕಷ್ಟದ ಸನ್ನಿವೇಶದಲ್ಲಿ? ಎಷ್ಟು ಆಳವಾಗಿ ಸಂಪಾದಿಸಿಕೊಂಡಿದ್ದಾಗಿದೆ ಎನ್ನುವುದು ಮುಖ್ಯ. ಯಾಕೆಂದರೆ ಪ್ರಸನ್ನತೆ ಇದ್ದರೂ ಆಳವಿಲ್ಲದಿರಬಹುದು, ಸುಲಭವಾಗಿ ಹುಟ್ಟಿದ್ದಿರಬಹುದು, ದಟ್ಟವಾದ ಜೀವಾನುಭವದಲ್ಲಿ, ನೊಂದು ಬೆಂದು ಅದು ಏನನ್ನೂ ಹೇಳದೆ ತತ್ಫಲವಾಗಿ ಹುಟ್ಟಿದ ಪ್ರಸನ್ನತೆಯನ್ನು ನಮಗೆ ಕೊಡುತ್ತಿರಬಹುದು. ಅದೆಲ್ಲವನ್ನೂ ನಾವು ಗಮನಿಸಬೇಕು. ಅದು ನಿಜವಾಗಿಯೂ ಒಬ್ಬ ಕವಿಗೆ ಕೊಡಬೇಕಾದ ಗೌರವ. ಆದರೆ ಕನ್ನಡದಲ್ಲಿ ಯಾವಾಗಲೂ ಒಂದು ತೊಂದರೆ ಇದೆ. ಬರೆಯುವವರು ಅಧಿಕಾರದ ಸ್ಥಾನದಲ್ಲಿದ್ದಾಗ, ಜನ ಸತ್ಯವನ್ನು ಹೇಳುವುದಿಲ್ಲ. ಆದರೆ ಜಿಎಸ್‌ಎಸ್ ಬಗೆಗೆ ನಮಗೆಂದೂ ಹಾಗನ್ನಿಸಿಯೇ ಇಲ್ಲ. ಆ ಸೌಲಭ್ಯವನ್ನು ತಮ್ಮ ಸುತ್ತಮುತ್ತ ಉಳಿದವರಿಗೆ ಅವರು ಕೊಟ್ಟಿದ್ದಾರೆ. ಅದು ಅವರ ಪ್ರಸಾದ ಗುಣಕ್ಕೆ ಒಂದು ಉದಾಹರಣೆ ಎಂದು ತಿಳಿದಿದ್ದೇನೆ.

ಇವತ್ತು ದಿನಬೆಳಗಾಗಿ ದಿನಪತ್ರಿಕೆಗಳನ್ನು ನೋಡಿದರೆ ಅತ್ಯಂತ ಹೊಲಸಾದ ರಾಜಕೀಯವನ್ನು ನೋಡ್ತೇವೆ. ಅದನ್ನೆಲ್ಲ ನೋಡಿದರೆ ಏನೂ ಮಾಡುವುದೇ ಬೇಡ ಅಂತ ಅನ್ನಿಸ್ತದೆ. ಆದರೆ ಜಗತ್ತಿನ ಅತ್ಯಂತ ಶ್ರೇಷ್ಠ ಸಾಹಿತ್ಯ ಇಂತಹ ಕಾಲಗಳಲ್ಲೇ ಹುಟ್ಟೋದು. ಅದಕ್ಕೆ ಗಟ್ಟಿತನ ಬೇಕು; ಸದ್ಯದಲ್ಲೇ ನಾನು ಸಲ್ಲಬೇಕು ಅನ್ನೋ ಆಸೆ ಇರಬಾರದು; ತುಂಬಾ unpopular ಆಗುವ ಧೈರ್ಯ ಇರಬೇಕು. ನಮಗೆ ನಿಜವಾಗಿ ಅನ್ನಿಸಿದ್ದನ್ನು ಯಾರು ಏನಂದುಕೊಂಡರೂ ವ್ಯಕ್ತಗೊಳಿಸಬೇಕು ಎನ್ನುವ ಧೈರ್ಯವಿರಬೇಕು. ಯಾಕೆಂದರೆ ಇಂದು ಸಾತತ್ಯವನ್ನು ಪಡೆಯುವುದು ಬಹಳ ಕಷ್ಟದ ಕೆಲಸ. ಹಿಂದಿನವರಿಗೆ ಸಾತತ್ಯ ಸುಲಭವಾಗಿ ದೊರಕುತ್ತಿತ್ತು. ಆದರೆ ಸಾತತ್ಯವಾದದ್ದನ್ನು ಹುಡುಕದೇ ಇದ್ರೆ ನಾವು ಸಾಹಿತ್ಯದಲ್ಲಿ ಚಿಲ್ಲರೆ ರಾಜಕಾರಣಿಗಳ ಹಾಗೆ ಆಗಿರ್ತೇವೆ. ಹಾಗೇ ಸುಲಭವಾದ ಸಾತತ್ಯವನ್ನು ಪಡಕೊಂಡರೆ

ನಾವು ಗೊಡ್ಡಾಗಿರ್ತೇವೆ. ಅಂಥಾದ್ದನ್ನು ಹುಡುಕದೇ ಇದ್ದರೆ ಚಿಲ್ಲರೆಗಳಾಗಿರ್ತೇವೆ. ಅದು ಬಿಟ್ಟು ನಾವು ಕಷ್ಟವಾದ ಹಾದಿಯಲ್ಲಿ ಪ್ರಕೃತಕ್ಕೆ, ಪ್ರಕೃತಿಗೆ ಸದಾ ಸ್ಪಂದಿಸುತ್ತ ಇಡೀ ಕನ್ನಡದ ಪರಂಪರೆಯ—ಅದರಲ್ಲೂ ಪ್ರಗತಿಪರರೆಂದರೆ—ಇಡೀ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಪ್ರಗತಿಪರನಲ್ಲದ ಒಬ್ಬನೇ ಒಬ್ಬ ದೊಡ್ಡ ಸಾಹಿತಿಯೂ ಇದ್ದಾನೆಂದು ನನಗನ್ನಿಸುವುದಿಲ್ಲ. ಪಂಪ ಪ್ರಗತಿಪರನಲ್ಲವೆ, ಬಸವಣ್ಣ, ಕುಮಾರವ್ಯಾಸ? ಯಾರು ಪ್ರಗತಿಪರರಲ್ಲ? ಬೇಂದ್ರೆ, ಕುವೆಂಪು, ಮಾಸ್ತಿ, ಕಾರಂತ, ಪುತಿನ ಎಲ್ಲರೂ ಪ್ರಗತಿಪರರೇ. ಇಂದು ಕನ್ನಡದಲ್ಲಿ 'ಬರೆಯುವುದೇ' ಒಂದು ಬಂಡಾಯ ಆಗುವ ಸ್ಥಿತಿಗೆ ನಾವಿಂದು ಮುಟ್ಟಿದ್ದೇವೆ. ಅಂದರೆ ಕನ್ನಡದಲ್ಲಿಯೂ ಅತ್ಯುತ್ತಮವಾದುದನ್ನು, ಬರೆಯಲಿಕ್ಕೆ, ಹೇಳಲಿಕ್ಕೆ, ಪಾಠ ಮಾಡಲಿಕ್ಕೆ ಸಾಧ್ಯ ಅನ್ನೋದು; ಕನ್ನಡದಲ್ಲಿರುವ ಲೇಖಕರೆಲ್ಲ ಮುಖ್ಯರು, ನಾವೂ ಒಂದು ಮುಖ್ಯ ಪ್ರವಾಹದಲ್ಲಿದ್ದೇವೆ ಅನ್ನೋದು. ಇದನ್ನು ಜಿಎಸ್ಎಸ್ ಒಮ್ಮೆ ಹೀಗೆ ಹೇಳಿದರು 'ಕನ್ನಡದಲ್ಲಿ ಅತ್ಯಂತ ಹೆಚ್ಚು ಸೃಜನಶೀಲರು ಬಂದ ಕಾಲ ಇದು. ಎಲ್ಲ ಜಾತಿಗಳಿಂದ ಸಾಹಿತಿಗಳು ಬಂದ ಕಾಲ ಇದು' ಅಂತಾ. ಅಂತಹವರನ್ನು ಸೃಷ್ಟಿಸಿದ ದ್ರೋಣರಲ್ಲಿ ಇವರೂ ಇಬ್ಬರು. ಬಿಎಂಶ್ರೀ ಕಾಲದಿಂದಲೂ ದ್ರೋಣ ಪರಂಪರೆ ನಮ್ಮಲ್ಲಿದೆ. ಆದ್ದರಿಂದ ಕನ್ನಡದ ಪರವಾಗಿ ನಿಲ್ಲೋದು ಇವತ್ತೊಂದು ಪ್ರತಿಭಟನೆಯ ಕಾರ್ಯವೇ. ಆದ್ದರಿಂದ ಈ ವಿಶಾಲವಾದ ಮನೋಭಾವವನ್ನಿಟ್ಟುಕೊಂಡು ತುಂಬಾ ಪ್ರಸನ್ನತೆಯಿಂದ ಕನ್ನಡದಲ್ಲಿ ಬಂದಿರುವ ಸಾಹಿತ್ಯವನ್ನು ನೋಡುವ ದೃಷ್ಟಿಕೋನವನ್ನು ಬೆಳೆಸಿಕೊಳ್ಳಬೇಕು ಎನ್ನುವುದು. ಅದು ನಮ್ಮೆಲ್ಲರಲ್ಲಿ ಸಾಧ್ಯವಾದಾಗ ಶಿವರುದ್ರಪ್ಪನವರ ಮೇಷ್ಟ್ರ ಕೆಲಸ ಸಫಲವಾದ ಹಾಗೆ ಮತ್ತು ಅವರ ಕಾವ್ಯದ ಕೆಲಸವೂ ಸಫಲವಾದ ಹಾಗೆ.



# ಮನೆಯ ಹಿರಿಯ

ಡಾ|| ಹೆಚ್. ನರಸಿಂಹಯ್ಯ

**ಡಾ.** ಜಿ.ಎಸ್. ಶಿವರುದ್ರಪ್ಪನವರು ಕನ್ನಡದ ದೊಡ್ಡ ಕವಿಗಳು, ವಿಮರ್ಶಕರು ಹಾಗೂ ಕನ್ನಡದ ಏಳಿಗೆಗಾಗಿ ಅನೇಕ ವರ್ಷಗಳಿಂದ ಕೆಲಸ ಮಾಡುತ್ತಿರುವವರು. ನಾನು ಅವರನ್ನು ಹಲವು ವರ್ಷಗಳಿಂದ ಬಲ್ಲೆ. ಸ್ವಾಮಿ ವಿವೇಕಾನಂದ ಮತ್ತು ರಾಮಕೃಷ್ಣ ಪರಮಹಂಸರಲ್ಲಿ ನಮ್ಮಿಬ್ಬರಿಗೂ ಸಮಾನ ಆಸಕ್ತಿಯಿದೆ. ನಾನು ಬಸವನಗುಡಿ ನ್ಯಾಷನಲ್ ಕಾಲೇಜಿನ ಪ್ರಾಂಶುಪಾಲನಾಗಿದ್ದಾಗಲೇ ನನಗೆ ಅವರ ಸಂಪರ್ಕ ಬಂದಿತ್ತು. ನಮ್ಮ ಕಾಲೇಜಿನ ಸಭೆ ಸಮಾರಂಭಗಳಲ್ಲಿ ಅವರು ಅತಿಥಿಯಾಗಿ ಭಾಗವಹಿಸಿದ್ದರು. ಈ ಸಂಪರ್ಕವು ಇನ್ನಷ್ಟು ನಿಕಟವಾಗಿದ್ದು ನಾನು ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಯಾಗಿದ್ದ ಐದು ವರ್ಷಗಳ ಅವಧಿಯಲ್ಲಿ. ಆಗ ಅವರು ಅಲ್ಲಿನ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿದ್ದರು. ಕನ್ನಡ ವಿಭಾಗವು ಇಡೀ ರಾಜ್ಯದಲ್ಲೇ ಅತ್ಯಂತ ಕ್ರಿಯಾಶೀಲ ವಾಗಿತ್ತೆಂದರೂ ತಪ್ಪಾಗಲಾರದು. ಇಡೀ ವಿಭಾಗವು ಒಂದು ತಂಡದಂತೆ ಕೆಲಸಮಾಡಿ ವಿಶೇಷ ಸಾಧನೆಮಾಡಲು ಅಗತ್ಯವಾದ ನಾಯಕತ್ವವನ್ನು ಒದಗಿಸಿದವರು ಡಾ. ಶಿವರುದ್ರಪ್ಪನವರು. ಅವರು ವಿಭಾಗಕ್ಕೆ ಸೇರಿಸಿಕೊಂಡ ತರುಣರು ಇಂದು ನಾಡಿನಲ್ಲಿಯೇ ಹೆಸರುವಾಸಿಯಾಗಿದ್ದಾರೆ. ದಲಿತರು ಮತ್ತು ಹಿಂದುಳಿದವರಲ್ಲಿ, ಗುಣವನ್ನು ಗುರುತಿಸಿ ಗೌರವ ನೀಡುವ ಅವರ ಸ್ವಭಾವ ನನಗೆ ಇಷ್ಟವಾಗಿದೆ.

ಪುಸ್ತಕ ಪ್ರಕಾಶನ ಮತ್ತು ವಿಚಾರಸಂಕಿರಣಗಳು ಯಾವುದೇ ವಿಭಾಗವು ಸಾರ್ವಜನಿಕ ಸಂಪರ್ಕವನ್ನು ಬೆಳೆಸಿಕೊಳ್ಳುವ ಮುಖ್ಯವಾದ ದಾರಿಗಳು. ಅದರಲ್ಲಿಯೂ ಕನ್ನಡ ವಿಭಾಗವು ಜನರೊಡನೆ ನೇರವಾಗಿ ಮಾತನಾಡುವ ಹೊಣೆಹೊತ್ತಿರುತ್ತದೆ. ಜಿಎಸ್ಎಸ್ ಅವರು ಈ ವಿಷಯವನ್ನು ಚೆನ್ನಾಗಿ ತಿಳಿದಿದ್ದರು. ಅವರು ಪ್ರಾರಂಭಿಸಿದ 'ಮನೆಗೊಂದು ಮಣಿದೀಪ' ಮಾಲೆಯು ಈ ಕೆಲಸವನ್ನು ಚೆನ್ನಾಗಿ ಮಾಡಿತು. ಕುವೆಂಪು, ಕೈಲಾಸಂ, ಗುಬ್ಬಿವೀರಣ್ಣ ಮುಂತಾದ ಮಹನೀಯರನ್ನು ಕುರಿತ ಪುಸ್ತಕಗಳು ಮಹತ್ವದ ಸಂಗತಿಗಳನ್ನು ಸಾಮಾನ್ಯನಿಗೂ ಅರ್ಥವಾಗುವ ಶೈಲಿಯಲ್ಲಿ ತಿಳಿಸಿಕೊಟ್ಟವು. ಅವರು ಪ್ರಕಟಿಸಿದ 'ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ'ಯ ಹತ್ತು ಸಂಪುಟಗಳಂತೂ ಜನಸಾಮಾನ್ಯರು ಮತ್ತು ವಿದ್ಯಾರ್ಥಿಗಳಿಗೆ ಮಾತ್ರವಲ್ಲ, ಆ ವಿಷಯಗಳಲ್ಲಿ ಪಂಡಿತರಿಗೆ ಕೂಡ ತುಂಬ ಉಪಯುಕ್ತವಾದವೆಂದು ನಾನು ಕೇಳಿದ್ದೇನೆ.

ಇವಲ್ಲದೆ ಸಮಗ್ರ ಸಾಹಿತ್ಯ ಚರಿತ್ರೆಯ ಸಂಪುಟಗಳು ಕೂಡ ಇದೇ ಕಾಲದಲ್ಲಿ ಬರತೊಡಗಿದವು.

ಕನ್ನಡವಿಭಾಗವು ಪ್ರತಿವರ್ಷವೂ ಒಂದು ವಿಚಾರಸಂಕಿರಣವನ್ನು ನಡೆಸುತ್ತಿತ್ತು. ಇದರಲ್ಲಿ ಕರ್ನಾಟಕದ ಬೇರೆ ಬೇರೆ ಭಾಗಗಳಿಂದ ಬಂದ ವಿದ್ವಾಂಸರು ಹಾಗೂ ಸಾಹಿತಿಗಳು ಭಾಗವಹಿಸುತ್ತಿದ್ದರು. ಬೌದ್ಧಿಕವಾದರೂ ಹಬ್ಬದಂತೆ ನಡೆಯುತ್ತಿದ್ದ ಆ ಸಂಕಿರಣಗಳನ್ನು ನಾನು ಹತ್ತಿರದಿಂದ ನೋಡಿಬಲ್ಲೆ. ಪ್ರತಿ ಸಂಕಿರಣದಲ್ಲಿಯೂ ಅದರ ಹಿಂದಿನ ವರ್ಷ ನಡೆದ ಸಂಕಿರಣದಲ್ಲಿ ಓದಿದ ಪ್ರಬಂಧಗಳನ್ನು ಪುಸ್ತಕರೂಪದಲ್ಲಿ ಬಿಡುಗಡೆ ಮಾಡುತ್ತಿದ್ದರು. ಇದು ಬಹಳ ಒಳ್ಳೆಯ ಕೆಲಸ. ಗಾಳಿಯಲ್ಲಿ ತೇಲಿಹೋಗುವ ಮಾತುಗಳು ಬರವಣಿಗೆಯಲ್ಲಿ ಬಹಳಕಾಲ ಉಳಿಯುತ್ತವೆ. ಬೇರೆ ಅನೇಕರಿಗೆ ಉಪಯೋಗ ವಾಗುತ್ತವೆ. ಇವುಗಳ ಜೊತೆಗೆ ಬಂದ ಅನೇಕ ಪುಸ್ತಕಗಳಲ್ಲಿ ರಷ್ಯಾ ದೇಶದ ದೊಡ್ಡ ಸಾಹಿತಿ ಮತ್ತು ತತ್ವಶಾಸ್ತ್ರಜ್ಞನಾದ ಟಾಲ್‌ಸ್ಟಾಯ್‌ನ ವಿಚಾರಗಳನ್ನು ಕನ್ನಡಕ್ಕೆ ಅನುವಾದಿಸಿ ಪುಸ್ತಕರೂಪದಲ್ಲಿ ತಂದಿದ್ದು ನನಗೆ ತುಂಬಾ ಸಂತೋಷದ ವಿಷಯ. ಅವರು ನನ್ನ ಆದರ್ಶವಾದ ಮಹಾತ್ಮಾಗಾಂಧಿಯವರ ವಿಚಾರಗಳ ಮೇಲೆಯೇ ಪ್ರಭಾವ ಬೀರಿದವರು.

ನಾನು ಉಪಕುಲಪತಿಯಾಗಿದ್ದಾಗ ಕೈಗೊಂಡ ಅನೇಕ ಪ್ರಗತಿಪರವಾದ ಕೆಲಸಗಳಲ್ಲಿ ಡಾ. ಶಿವರುದ್ರಪ್ಪನವರು ಮತ್ತು ಅವರ ವಿಭಾಗದ ಸಹೋದ್ಯೋಗಿಗಳು ಪ್ರೀತಿಯಿಂದ ಸಹಕರಿಸಿದರು. ಪದವಿ ತರಗತಿಗಳಿಗೆ 'ಸಾಮಾನ್ಯ ಶಿಕ್ಷಣ' ಕಾರ್ಯಕ್ರಮದ ಅಂಗವಾಗಿ ತಯಾರಿಸಿದ ಪಠ್ಯಪುಸ್ತಕಗಳಾದ, 'ಚಿಂತನ ದೀಪ್ತಿ', 'ಶಿಕ್ಷಣ ಚಿಂತನ', 'ವಿಜ್ಞಾನ ಮತ್ತು ಸಮಾಜ' ಮುಂತಾದ ಕೃತಿಗಳನ್ನು ಸಿದ್ಧಪಡಿಸುವುದರಲ್ಲಿ ಅವರು ನೆರವಾದರು. ಹಾಗೆಯೇ ಮೂಢನಂಬಿಕೆಗಳು ಹಾಗೂ ಪವಾಡಗಳನ್ನು ಪರಿಶೀಲಿಸುವ ಸಮಿತಿಯ ಕೆಲಸದಲ್ಲಿ ಕುವೆಂಪು ಅವರ ಪ್ರಿಯ ಶಿಷ್ಯರಾದ ಜಿಎಸ್‌ಎಸ್‌ರವರು ಸದಾ ವೈಚಾರಿಕವಾಗಿ ನನ್ನೊಂದಿಗೆ ಇರುತ್ತಿದ್ದರು. ವಿಶ್ವವಿದ್ಯಾಲಯದ ಇತಿಹಾಸದಲ್ಲಿಯೇ ಮೊದಲಬಾರಿಗೆ ಅಂತರ ಕಾಲೇಜು ಸಾಂಸ್ಕೃತಿಕ ಸ್ಪರ್ಧೆಗಳನ್ನು ಏರ್ಪಡಿಸಿದಾಗಲೂ ಅವುಗಳ ಯಶಸ್ವೀ ನಿರ್ವಹಣೆಯಲ್ಲಿ ಅವರ ಹಾಗೂ ಕನ್ನಡ ವಿಭಾಗದ ಗೆಳೆಯರ ಸಹಕಾರ ಇರುತ್ತಿತ್ತು. ಈ ವಿಧವಾದ ನೆರವಿನಿಂದ ನನಗೆ ಅಂಥ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನೆರವೇರಿಸಲು ಸಾಧ್ಯವಾಯಿತು.

ನಾನು ಉಪಕುಲಪತಿ ಪದವಿಯಿಂದ ನಿವೃತ್ತನಾದ ಮೇಲೆ ಕೂಡ ನಮ್ಮ ಗೆಳೆತನವು ಹಾಗೆಯೇ ಮುಂದುವರೆದಿದೆ. ನನ್ನ ಆತ್ಮಕಥೆಯಾದ 'ಹೋರಾಟದ ಹಾದಿ' ಪುಸ್ತಕವನ್ನು ಬರೆದಾಗ ಅವರು ಅದಕ್ಕೆ ತುಂಬು ಮನಸ್ಸಿನಿಂದ ಮುನ್ನುಡಿ ಬರೆದು ಕೊಟ್ಟರು. ವಿಜ್ಞಾನದ ವಿದ್ಯಾರ್ಥಿಯಾದ ನನ್ನ ಸಾಹಿತ್ಯಕ ಪ್ರಯತ್ನವನ್ನು ಪ್ರೀತಿಯಿಂದ ನೋಡಿ ಅದರ ಗುಣಗಳನ್ನು ಗುರುತಿಸಿದರು. ಅದು ಮತ್ತು ನನ್ನ 'ತೆರೆದ ಮನ' ಪುಸ್ತಕದ ಬಗ್ಗೆ ಪ್ರೀತಿಯ ಪ್ರತಿಕ್ರಿಯೆ ತೋರಿಸಿದ್ದಾರೆ. ಇದು ಅವರ ಸಹೃದಯತೆಯ ದ್ಯೋತಕವಾಗಿದೆ.

ಶಿವರುದ್ರಪ್ಪನವರು ಹಲವಾರು ಸಾಮಾಜಿಕ ಮಹತ್ವದ ಹಾಗೂ ಜನಪರವಾದ

ಕೆಲಸಗಳಲ್ಲಿ ಭಾಗವಹಿಸುತ್ತಾ ಬಂದಿರುವುದನ್ನು ನಾನು ಅನೇಕ ವರ್ಷಗಳಿಂದ ಗಮನಿಸಿದ್ದೇನೆ. ಕನ್ನಡ ಪರವಾದ ಚಳುವಳಿಗಳ ಮಾತೂ ಹಾಗೆಯೇ. ಅಲ್ಲಿ ಅವರದು ವಿವೇಕದ ದಾರಿಯೇ ವಿನಾ ಆವೇಶದ ದಾರಿಯಲ್ಲ. ಸತ್ಯ ನಿಷ್ಠುರಿಯಾದರೂ ಒರಟಾಗಿ ಮಾತನಾಡುವುದು, ಭಾವನೆಗಳಲ್ಲಿ ಮುಳುಗಿ ತೇಲುವುದು ಅವರ ಜಾಯಮಾನಕ್ಕೆ ಬಂದಿಲ್ಲ. ನಾನು 'ಕನ್ನಡ ಅಭಿವೃದ್ಧಿ ಪ್ರಾಧಿಕಾರ'ದ ಅಧ್ಯಕ್ಷನಾಗಿದ್ದಾಗ ಅವರ ಇಂತಹ ನಿಲುವುಗಳು ಮತ್ತು ಸಲಹೆ ಸೂಚನೆಗಳು ನನಗೆ ತುಂಬ ಉಪಯುಕ್ತವಾದವು. ಅವರು ಅಗತ್ಯ ಬಂದಾಗ ಯಾರ ವಿರೋಧವನ್ನೂ ಕಟ್ಟಿಕೊಳ್ಳಲು ಹಿಂಜರಿಯುವುದಿಲ್ಲವೆಂಬುದನ್ನು ನಾನು ಅನೇಕ ವರ್ಷಗಳಿಂದ ಗಮನಿಸಿದ್ದೇನೆ. 'ಧರ್ಮಕಾರಣ' ಕಾದಂಬರಿಗೆ ಸಂಬಂಧಿಸಿದ ವಿವಾದದಲ್ಲಿ, ಇತ್ತೀಚೆಗೆ ಜನಗಣತಿಗೆ ಸಂಬಂಧಪಟ್ಟ ವಾಗ್ವಾದಗಳಲ್ಲಿ ಅವರು ಹೀಗೆ ಬಹು ದಿಟ್ಟವಾದ ನಿಲುವನ್ನು ತೋರಿಸಿದ್ದಾರೆ. ಇದು ಅಷ್ಟು ಸುಲಭವಲ್ಲ.

ನಾನು ಮತ್ತು ಶಿವರುದ್ರಪ್ಪನವರು ಅನೇಕ ಸಮಿತಿಗಳಲ್ಲಿ ಹಾಗೂ ಆಯ್ಕೆ ಸಮಿತಿಗಳಲ್ಲಿ ಒಟ್ಟಾಗಿ ಕೆಲಸ ಮಾಡಿದ್ದೇವೆ. ಅಲ್ಲಿಯೂ ಅವರು ನಿಷ್ಪಕ್ಷಪಾತವಾದ, ಜಾತಿ, ಗೆಳೆತನ ಮುಂತಾದ ಸಂಗತಿಗಳಿಂದ ಪ್ರೇರಿತವಲ್ಲದ ನಿಲುವನ್ನು ತಳೆದಿದ್ದಾರೆ. ಹೀಗೆ, ಶಿವರುದ್ರಪ್ಪನವರು ಬೆಂಗಳೂರಿನ ಮತ್ತು ಕರ್ನಾಟಕದ ಹಿರಿಯ ನಾಗರಿಕರಲ್ಲಿ ಒಬ್ಬರು. ಪ್ರತಿ ಮನೆಗೂ ಒಬ್ಬ ಹಿರಿಯರು ಬೇಕು. ನಾಡು ಕೂಡ ಮನೆಯೇ. ಅಂಥ ಮನೆಯ ಹಿರಿಯರಾಗಿ ಜಿಎಸ್‌ಎಸ್ ಅವರು ಈಗ ಇದ್ದಾರೆ. ಈಗ ಅವರಿಗೆ ಎಪ್ಪತ್ತೈದು ವರ್ಷಗಳು ತುಂಬುತ್ತಿವೆ. ಮುಪ್ಪು ಬರುವುದು ಮೈಗೆ ಹೊರತೂ ಮನಸ್ಸಿಗೆ ಅಲ್ಲ. ಇದು ಅವರಿಗಿಂತ ತುಸು ಹಿರಿಯನಾದ ನನ್ನ ಅನುಭವದ ಮಾತು. ಶಿವರುದ್ರಪ್ಪನವರ ಗೆಳೆತನ ನನಗೆ ಮತ್ತು ಮಾರ್ಗದರ್ಶನ ನಾಡಿಗೆ ಇನ್ನೂ ಹಲವು ಕಾಲ ದೊರೆಯಲೆಂದು ನಾನು ತುಂಬುಹೃದಯದಿಂದ ಹಾರೈಸುತ್ತೇನೆ.

■

# ಆತ್ಮೀಯ ಮೇಷ್ಟ್ರು; ಸಹೃದಯ ಸಹೋದ್ಯೋಗಿ

ಡಾ|| ಎಂ. ಚಿದಾನಂದಮೂರ್ತಿ

1968ರಲ್ಲಿ ಬೆಂಗಳೂರು ವಿಶ್ವವಿದ್ಯಾಲಕ್ಕೆ ನಾನು ಡಾ. ಜಿ.ಎಸ್. ಶಿವರುದ್ರಪ್ಪನವರ ಸಹೋದ್ಯೋಗಿಯಾಗಿ ಬಂದ ಆರಂಭದ ದಿನಗಳವು. ಅವರೂ 'ರೀಡರ್', ನಾನೂ 'ರೀಡರ್'. ಅವರು ಒಂದು ದಿನ ಹೇಳಿದ್ದರು—"ನೋಡಿ ಮೂರ್ತಿ, ನಿಮ್ಮನ್ನು ಬಹುವಚನದಿಂದ ಮಾತನಾಡಿಸುವುದು ನನಗೆ ಕಷ್ಟವಾಗಿದೆ". ಅದನ್ನು ಗ್ರಹಿಸಲು ನನಗೆ ಕಷ್ಟವಾಗಲಿಲ್ಲ—"ಸರ್, ಹಿಂದಿನಂತೆಯೇ ನನ್ನನ್ನು ಏಕವಚನದಲ್ಲೇ ಕರೆಯಬೇಕು. ನೀವು ನನ್ನ ಗುರುಗಳು". ಅಲ್ಲಿಗೆ ಅವರಿಗೆ ಸಮಾಧಾನವಾಯ್ತು. ನನ್ನ ಬಗ್ಗೆ ಅವರ ಮಾತಿನಲ್ಲಿ ಬಹುವಚನ ಪ್ರಯೋಗವಾದುದು ಅದೇ ಮೊದಲು, ಅದೇ ಕೊನೆ. ನನಗೆ "ಗುರು" ಎಂಬುದು ಬರೀ ಶಬ್ದವಲ್ಲ, ಅದೊಂದು ಉನ್ನತ ಭಾವನೆ, ಆದರ್ಶ, ಪರಿಕಲ್ಪನೆ, ಉದಾತ್ತ ತತ್ತ್ವ. ನನ್ನ ಪ್ರಾಥಮಿಕ ಶಿಕ್ಷಣದಿಂದ ಹಿಡಿದು ಪಿಎಚ್.ಡಿ ಪದವಿ ಪಡೆಯುವವರೆಗೆ ನನಗೆ ಪಾಠ ಹೇಳಿದವರೆಲ್ಲ ನನಗೆ ಸಮಾನ ಪೂಜ್ಯರು. ಪಾಠ ಹೇಳದಿದ್ದರೂ ತಮ್ಮ ಬದುಕಿನ ಮೂಲಕ, ಪ್ರೀತಿಯಿಂದ ಮಾರ್ಗದರ್ಶನ ಮಾಡಿದ ಎಲ್ಲರೂ ಗುರುಗಳೇ. ನಾನು ಹಲವರ ಮುಂದೆ ಹೆಮ್ಮೆಯಿಂದ ಹೇಳಿಕೊಂಡಿದ್ದೇನೆ—ನನ್ನ ಬಗ್ಗೆ ಅನ್ಯರು ಅಸೂಯೆ ಪಡಬಹುದಾದದ್ದು ಏನೂ ಇಲ್ಲ. ಆದರೆ ಒಂದು ವಿಷಯದಲ್ಲಿ ಅಸೂಯೆ ಪಡುವಂತಹದ್ದು ಇದೆ—ನನಗೆ ದೊರಕಿದಂತಹ ಶ್ರೇಷ್ಠ ಗುರುವರ್ಗ ಬಹಳ ಜನಕ್ಕೆ ದೊರಕಿರಲಾರದು. ನನ್ನ ಬದುಕನ್ನು ಜನರೆಲ್ಲರೂ ಕಟೆದಿದ್ದಾರೆ, ರೂಪಿಸಿದ್ದಾರೆ. ಆದರೆ ನನ್ನಲ್ಲಿ ಅವರು ಕಟೆದ ನಂತರವೂ ಉಳಿದಿರುವ ಹಲವು ಉಬ್ಬು, ತಗ್ಗುಗಳಿಗೆ ನಾನು ಕಾರಣ. ಅವರ ಪ್ರೀತಿಯ ಮೊನಚಾದ ಗಟ್ಟಿ ಉಳಿಯಿಂದಲೂ ಆ ಉಬ್ಬುತಗ್ಗುಗಳನ್ನು ಸರಿಮಾಡಲು ಬಹುಶಃ ಸಾಧ್ಯವಾಗಲಿಲ್ಲ. ನನ್ನ ವಿದ್ಯಾರ್ಥಿ ಜೀವನದಲ್ಲಿ ನಾನು ಅವರಿಗೆಲ್ಲ ಸಂಪೂರ್ಣ ಒಪ್ಪಿಸಿಕೊಂಡುಬಿಟ್ಟಿದ್ದೆ.

1949: ಆಗ ನಾನು ದಾವಣಗೆರೆ ಇಂಟರ್‌ಮಿಡಿಯೆಟ್ ಕಾಲೇಜಿನಲ್ಲಿ ಎರಡನೆಯ ವರ್ಷದ ವಿದ್ಯಾರ್ಥಿ. ಮೊದಲ ವರ್ಷ ತೀ.ನಂ. ಶ್ರೀಕಂಠಯ್ಯನವರು, ಎಲ್. ಬಸವರಾಜು ಕನ್ನಡ ಪಾಠ ಹೇಳಿ ನಮ್ಮ ಪ್ರೀತಿಯನ್ನು ಗೆದ್ದುಕೊಂಡಿದ್ದರು. ಅದರಲ್ಲೂ ಬಸವರಾಜು ಪಾಠ ನಮ್ಮ ಮೇಲೆ ತೀವ್ರ ಪ್ರಭಾವವನ್ನು ಬೀರಿತ್ತು. ಅವರು ದಾವಣಗೆರೆಯಲ್ಲಿ ನಾನು ಇದ್ದ ಜಯದೇವ ವಿದ್ಯಾರ್ಥಿ ನಿಲಯದಲ್ಲೇ ವಾರ್ಡನ್ ಆಗಿದ್ದು ನಮ್ಮೆಲ್ಲರ ಅಭಿಮಾನಕ್ಕೆ

ಪಾತ್ರರಾಗಿದ್ದರು. ಅವರ ಜಾಗಕ್ಕೆ ಬಂದ ಶಿವರುದ್ರಪ್ಪನವರು ತಮ್ಮ ವೃತ್ತಿಜೀವನದಲ್ಲಿ ಹೊಸದಾಗಿ ಕೋಟು ಪ್ಯಾಂಟು ಧರಿಸಿ ಪಾಠಮಾಡಿದ ಮೊದಲ ತರಗತಿಯ ಮುಂದಿನ ಬೆಂಚಿನ ವಿದ್ಯಾರ್ಥಿ ನಾನು. ಆ ದಿನ ಅವರು ಕುವೆಂಪು ಅವರ 'ಚಿತ್ರಾಂಗದಾ' ಕಾವ್ಯವನ್ನು ಆರಂಭಿಸುವ ಮೊದಲು ಮಹೋಪಮೆ ಬಗ್ಗೆ ಉಪನ್ಯಾಸ ಕೊಟ್ಟರು. ನಮಗೆಲ್ಲ ಏನೂ ಅರ್ಥವಾಗಲಿಲ್ಲ. ನಾವೆಲ್ಲ "ಏನೂ ಪ್ರಯೋಜನವಿಲ್ಲದ ಮೇಷ್ಟ್ರು" ಎಂಬ ಸಾರ್ವಜನಿಕ ಅಭಿಪ್ರಾಯಕ್ಕೆ ಬಂದೆವು. ಬಸವರಾಜು ಜೊತೆ ಹೋಲಿಸಿ ನಿರ್ದಯವಾಗಿ ವಿಮರ್ಶಿಸಿದೆವು. ಒಂದು ವರ್ಷದ ಬಳಿಕ ನಾನು ಓದಿದ ಕುವೆಂಪು ಅವರ 'ಮಹೋಪಮೆ' ಎಂಬ ಪ್ರಬಂಧದಿಂದ ಪುಂಖಾನುಪುಂಖವಾಗಿ ವಾಕ್ಯ, ಪದಪುಂಜಗಳನ್ನು ಆಯ್ದು ತಂದು ಅಂದು ಶಿವರುದ್ರಪ್ಪನವರು ನಮ್ಮ ಮೇಲೆ—ದಾವಣಗೆರೆ ಹುಡುಗರ ಮೇಲೆ—ಪ್ರಯೋಗ ಮಾಡಿದ್ದರು.

ಕ್ರಮೇಣ, ಅವರು ನಮ್ಮ ಮಟ್ಟಕ್ಕೆ ಇಳಿಯುತ್ತ ಬಂದರು. ಅರ್ಥಾತ್ ಆರಂಭದ ಅಳುಕನ್ನು ಬಿಟ್ಟು ನಿರಾಳವಾಗಿ ಪಾಠ ಮಾಡಲಾರಂಭಿಸಿದರು. ನೆಲದ ಮೇಲೆ ನಿಂತು ಪಾಠ ಮಾಡಲು ಆರಂಭಿಸಿದ ಮೇಲೆ ನಮಗೆಲ್ಲ ಅವರ ಪಾಠಗಳು ಹಿಡಿಸಿದುವು ಎಂದು ಹೇಳಿದರೆ ತೀರ ಸರಳವಾಯ್ತು. ಕುವೆಂಪು ಹೇಳಿಕೊಂಡಿರುವಂತೆ ಆ ಕಾವ್ಯ ಬರೆವಾಗ ಅವರಿನ್ನೂ ಬ್ರಹ್ಮಚಾರಿ. 'ನಿರನುಭವಿ'ಯಾಗಿದ್ದ ಅವರು ಅರ್ಜುನ ಚಿತ್ರಾಂಗದೆಯರ ಪ್ರಣಯ ಪ್ರಸಂಗಗಳನ್ನು ವರ್ಣಿಸಲು ಶಾರದೆಯನ್ನೇ ಕೇಳಿಕೊಳ್ಳುತ್ತಾರೆ. ಜಿಎಸ್‌ಎಸ್ ಕೂಡ ಆಗ 'ನಿರನುಭವಿ'ಯೇ. ಸರಿ ಕೇಳಬೇಕೇ, ಆ ಶೃಂಗಾರದ ಭಾಗಗಳನ್ನು ಓದಿ ಪಾಠ ಮಾಡುತ್ತ ಚಿತ್ರಾಂಗದೆಯನ್ನು ನಮ್ಮ ಮೇಷ್ಟ್ರು ಆ ಪದ್ಮಮುಖಿ, ಭೃಂಗ ಕುಂತಳೆ, ಲತಾಂಗಿ, ನಳಿನ ನೇತ್ರಿ, ಮತ್ತ ಗಜಗಮನೆ, ಕೋಕಿಲಮಣಿ ಎಂದು ಮುಂತಾಗಿ ಚಿತ್ರಾಂಗದೆಯನ್ನು ವರ್ಣಿಸುತ್ತ ಮೈಮರೆತು ತಲ್ಲೀನರಾದಾಗ ಅದೇ ತಾನೇ ಯೌವನಕ್ಕೆ ಕಾಲಿಡುತ್ತಿದ್ದ ನಮಗೆ ನಗು ತಡೆಯುವುದು ಕಷ್ಟವಾಯ್ತು. ಇಡೀ ತರಗತಿ ಕಿಸಕ್ಕನೆ ನಕ್ಕಿತು. ಮೇಷ್ಟ್ರಿಗೆ ಸಿಟ್ಟು ಉಕ್ಕಿ ಮೇರೆವರಿಯಿತು—"ನೀವು ದಾವಣಗೆರೆ ಹುಡುಗರು ಶೇಂಗಾ ತಿನ್ನಲು ಲಾಯಕ್" ಎಂದು ಆಸ್ಫೋಟಿಸಿದಾಗ ಅದಕ್ಕೆ, ಒಳ್ಳೆಯ ಪಾಠ ಕೇಳಲೂ ಲಾಯಕ್ಕಾಗಿದ್ದ ನಮಗೆ ಸ್ವಲ್ಪವೂ ಕೋಪ ಬರಲಿಲ್ಲ. ಆ ಮಾತು ಕೇಳಿ ಇನ್ನು ಹೆಚ್ಚು ನಿಶ್ಯಬ್ದವಾಗಿ ಒಳಗೇ ನಕ್ಕೆವು. ಅವರ ಭರ್‍ರೆಂದು ಏರಿದ್ದ ಕೋಪ ಸರ‍್ರೆಂದು ಇಳಿದು ಪಾಠ ಮುಂದುವರಿಯಿತು. ಹಾಗಾಗುವುದೆಂಬುದು ನಮಗೆ ತಿಳಿದಿತ್ತು.

ಸ್ವಲ್ಪ ಕಾಲದ ಬಳಿಕ ಅವರಿಗೆ ನಮ್ಮ ವಿದ್ಯಾರ್ಥಿನಿಲಯದಲ್ಲಿ ಕೊಠಡಿ ನೀಡಿ ವಾರ್ಡನ್ನರಾಗಿ ಅವರನ್ನು ಆಡಳಿತವರ್ಗ ಬರಮಾಡಿಕೊಂಡಿತು. ಹೀಗಾಗಿ ನಮ್ಮ ಜೊತೆಯಲ್ಲೇ ಇದ್ದುಬಿಟ್ಟರು. ನಮ್ಮ ತರಗತಿಗಳೆಲ್ಲ 12.00ಕ್ಕೆ ಮುಗಿಯುತ್ತಿದ್ದುವು. ಊಟಕ್ಕೆ ಅವರು ಹೋಟಲಿಗೆ ಹೋಗಿ ವಾಪಸು ಬಂದು ಮಧ್ಯಾಹ್ನ ಎರಡರಿಂದ ಮೂರರವರೆಗೆ ಅದೇ ತಾನೇ ಪ್ರಕಟವಾಗಿದ್ದ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯವನ್ನು ನಾಲ್ಕಾರು

ಹುಡುಗರಿಗೆ ಓದಿ ಹೇಳಿ ವಿವರಿಸುತ್ತ ತಾವೂ ಕಾವ್ಯವನ್ನು ಸವಿದರು. ತರಗತಿಯಲ್ಲಿ ಕಿರು ಕಾವ್ಯ 'ಚಿತ್ರಾಂಗದಾ'; ಅವರ ಕೊಠಡಿಯಲ್ಲಿ ಮಹಾಕಾವ್ಯ 'ರಾಮಾಯಣ ದರ್ಶನಂ'. ನಮಗೆ ಎಷ್ಟೋ ಬಾರಿ ಮಹಾಕಾವ್ಯಕ್ಕಿಂತ ಮೇಷ್ಟ್ರ ಓದು-ವ್ಯಾಖ್ಯಾನ ಪ್ರಿಯವಾಗುತ್ತಿತ್ತು.

ಪರೀಕ್ಷೆ ಮುಗಿಯಿತು. ವಿಜ್ಞಾನದ ವಿದ್ಯಾರ್ಥಿಯಾಗಿದ್ದ ನನಗೆ ಪ್ರಥಮ ದರ್ಜೆಯಲ್ಲಿ ಉತ್ತೀರ್ಣವಾಗುವ ಬಗ್ಗೆ ಸಂದೇಹವೇ ಇರಲಿಲ್ಲ. ಬೇಸಗೆ ರಜೆಯನ್ನು ಊರಲ್ಲಿ ಕಳೆಯುತ್ತ ಮುಂದಿನ ಭವಿಷ್ಯದ ಬಗ್ಗೆ ಯೋಚನೆ ಮಾಡಲೇಬೇಕಿತ್ತು. ಬಾಲ್ಯದಿಂದ ನನ್ನಲ್ಲಿ ನಿಕ್ಷಿಪ್ತವಾಗಿದ್ದ ಸಾಹಿತ್ಯದ ಅಧ್ಯಯನದ ಒಲವು ಜಿಎಸ್‌ಎಸ್ ಅವರಿಂದ ಗರಿಗೆದರಿತ್ತು. ನಾನು ಸಾಹಿತ್ಯವನ್ನು ಓದಬೇಕು, ಕುವೆಂಪು ವಿದ್ಯಾರ್ಥಿಯಾಗಬೇಕು, ಕನ್ನಡ ಮೇಷ್ಟ್ರಾಗಬೇಕು ಎಂಬ ಕನಸನ್ನು ಕಟ್ಟಿದೆ, ಅದರಲ್ಲೇ ತೇಲಿದೆ. ಫಲಿತಾಂಶ ಬಂದಾಗ ಆಶ್ಚರ್ಯವೊಂದು ಕಾದಿತ್ತು—ನನ್ನ ನಿರೀಕ್ಷೆಯಂತೆ ಪ್ರಥಮದರ್ಜೆಯಲ್ಲಿ ಉತ್ತೀರ್ಣನಾಗಿದ್ದುದರ ಜೊತೆ ಮೈಸೂರು ರಾಜ್ಯಕ್ಕೆ ಹತ್ತನೆಯ ರ್‍ಯಾಂಕೂ ಲಭಿಸಿತ್ತು. ಎಂ.ಬಿ.ಬಿ.ಎಸ್, ಬಿ.ಇ., ಬಿ.ಎಸ್‌ಸಿ (ಆನರ್ಸ್) ಯಾವುದೇ ಕೋರ್ಸಿಗೆ ಅರ್ಜಿ ಹಾಕಿದರೆ ಸಾಕಾಗಿತ್ತು. ಎಲ್ಲರೂ ನಾನು ವೈದ್ಯಕೀಯ ಅಥವಾ ಇಂಜನಿಯರ್ ಕೋರ್ಸ್ ಆಯ್ಕೆ ಮಾಡಿಕೊಳ್ಳುವುದನ್ನು ನಿರೀಕ್ಷಿಸಿದ್ದರೆ, ನಾನು ನನ್ನ ತಂದೆ ಮುಂದೆ ಕನ್ನಡ ಆನರ್ಸ್‌ಗೆ ಅರ್ಜಿ ಹಾಕುವುದಾಗಿ ಹೇಳಿದೆ. ಅವರು ಉದ್ದಕ್ಕೂ ಸ್ವಾತಂತ್ರ್ಯವನ್ನು ಕೊಟ್ಟವರು ಎಂದು ಹೇಳಿದರೆ ತಪ್ಪಾದೀತು. ಅವರಿಗೆ ಆ ವಿಷಯದಲ್ಲಿ ಸಲಹೆ ಕೊಡುವುದೂ ತಿಳಿಯದಷ್ಟು ಮುಗ್ಧರು. ಎಲ್ಲರೂ ನನ್ನ ತಂದೆಗೆ 'ಇಲ್ಲ ಬಾರದಂಗೆ ಹೇಳಿದರು' (ಇದು ಆ ಪ್ರದೇಶದ ಉಕ್ತಿ) ನಾನು ಒಬ್ಬ ಹುಚ್ಚ ಎಂಬಂತಹ ಮಾತುಗಳೂ ಕೇಳಿ ಬಂದುವು. ಎಲ್ಲ ಬಿಟ್ಟು ಆ ಕಾಲದಲ್ಲಿ "ಕನ್ನಡ ಮೇಷ್ಟ್ರಾ"ಗುವುದು ಹಳ್ಳಿಯ ಅಕ್ಷರಸ್ಥರಿಗೆ ವಿಲಕ್ಷಣವಾಗಿ ಕಂಡಿತ್ತು. ನನ್ನ ತಂದೆಯನ್ನು ಒಪ್ಪಿಸುವುದು ಕಷ್ಟವೇ ಆಗಲಿಲ್ಲ. ಮೈಸೂರಿಗೆ ಹೋಗಿ ಕನ್ನಡ ಆನರ್ಸಿಗೆ, ಕಾಟಾಚಾರಕ್ಕೆ ಅಲ್ಲಿಯ ಮೆಡಿಕಲ್ ಕಾಲೇಜಿಗೆ ಅರ್ಜಿ ಹಾಕಿದೆ. ನಾನು ಅಲ್ಲಿಗೆ ಹೋದಾಗ ಭೇಟಿಯಾದ ಚೆನ್ನಗಿರಿಯವರೇ ಆದ ಮತ್ತು ಆಗ ವೈದ್ಯಕೀಯ ವಿದ್ಯಾರ್ಥಿಯಾಗಿದ್ದ ಡಾ. ಬಸವಣ್ಣೆಯ್ಯನವರು ನನ್ನ ನಿರ್ಧಾರವನ್ನು ಕೇಳಿ ಬಹುವಾಗಿ ನೊಂದುಕೊಂಡರು. "ಡಾ. ಶಿವರುದ್ರಪ್ಪನವರು ಸಿಗಲಿ, ಆ ಹುಡುಗನ ಜೀವನ ಹಾಳು ಮಾಡಿದ್ದು ಸರಿಯೇ ಎಂದು ಕೇಳಿಬಿಡುತ್ತೇನೆ" ಎಂದು ಅವರು ನನ್ನ ಆತ್ಮೀಯರೊಬ್ಬರ ಮುಂದೆ ತಮ್ಮ ಆಕ್ರೋಶವನ್ನು ವ್ಯಕ್ತಪಡಿಸಿಯೂ ಇದ್ದರು. ನನಗೆ ಮೆಡಿಕಲ್ ಕಾಲೇಜಿಂದ ಸಂದರ್ಶನಕ್ಕೆ ಬಂದರೂ ಹೋಗಲಿಲ್ಲ. ನನ್ನ ಬದಲು ನನ್ನ ಸಹಪಾಠಿಗೆ ಸ್ಥಾನ ದೊರಕಿತು.

ನಾನು ಕನ್ನಡ ಆನರ್ಸಿಗೆ ಸೇರಿಯೇ ಬಿಟ್ಟೆ. ಆ ಹಿಂದಿನ ಬೇಸಿಗೆ ರಜೆಯಲ್ಲಿ ಮೇಷ್ಟ್ರಿಗೆ ಮದುವೆಯೂ ಆಯ್ತು. ಅನನುಭವಿ ಕವಿ ಬರೆದ ಕಾವ್ಯವನ್ನು ಪಾಠ ಹೇಳಿದ ಇನ್ನೊಬ್ಬ ತರುಣ ಅನನುಭವಿ ಕವಿಯಿಂದ ಪಾಠ ಕೇಳಿದ ನಾನು ಕನ್ನಡ ಆನರ್ಸಿಗೆ ಓಡಿದೆ; ಆ ತರುಣ

ಕವಿಗಳ ಮೇಲೂ ತಾವು ಹೇಳಿದ ಪಾಠದ ಪ್ರಭಾವ ಆಗಿತ್ತು: ಅವರು ಮದುವೆ ಆದರು ಎಂದು ಹಲವು ಬಾರಿ ಅಂದುಕೊಂಡು ನಾನೇ ವಿನೋದಿಸಿದ್ದೇನೆ.

ನಾನು 1951-52ರಲ್ಲಿ ಎರಡನೆಯ ಆನರ್ಸ್ ವಿದ್ಯಾರ್ಥಿಯಾಗಿದ್ದಾಗ ಶಿವರುದ್ರಪ್ಪನವರು ದಾವಣಗೆರೆಯಿಂದ ಮೈಸೂರಿನ ಯುವರಾಜಾ ಕಾಲೇಜಿಗೆ ವರ್ಗಾವಣೆ ಪಡೆದು, ಪಕ್ಕದ ಮಹಾರಾಜಾ ಕಾಲೇಜಿನಲ್ಲಿ ಎಂ.ಎ. ವಿದ್ಯಾರ್ಥಿ ಆಗಿ ಸೇರಿಕೊಂಡು ಒಂದು ಬಾಡಿಗೆ ಮನೆ ಹಿಡಿದರು. ಆಗ ಅವರ ಪತ್ನಿ ರುದ್ರಾಣಿಯವರು ಗರ್ಭಿಣಿಯಾಗಿ ತೌರುಮನೆಯಲ್ಲಿದ್ದರು. ಮೇಷ್ಟು ನಾನು ಬಾಡಿಗೆ ಹಿಡಿದಿದ್ದ ರೂಮನ್ನು ಬಿಡಿಸಿ ತಮ್ಮ ಮನೆಗೇ ಬಂದಿರಲು ಹೇಳಿದರು. ಆ ಮನೆ ಅವರ ಗುರುಗಳಾಗಿದ್ದ ನನಗೂ ಗುರುಗಳಾಗಿದ್ದ ತ.ಸು. ಶಾಮರಾಯರು ಬಾಡಿಗೆಗಿದ್ದ ಮನೆ. ಕೃಷ್ಣಮೂರ್ತಿಪುರಂನ ದೊಡ್ಡ ಹೆಂಚಿನ ಮನೆಯಲ್ಲಿ ನಾವಿಬ್ಬರೇ. ಅವರ ಅಧ್ಯಯನ, ಬೋಧನೆ, ಕಾವ್ಯರಚನೆ ನಡೆದಿದ್ದವು. ನಾನು ಮಹಾರಾಜಾ ಕಾಲೇಜಿನಲ್ಲಿ ಆನರ್ಸ್ ವಿದ್ಯಾರ್ಥಿ; ಅವರು ಅದೇ ಕಾಲೇಜಿನಲ್ಲಿ ಎಂ.ಎ. ವಿದ್ಯಾರ್ಥಿ ಮತ್ತು ಪಕ್ಕದ ಯುವರಾಜಾ ಕಾಲೇಜಿನಲ್ಲಿ ಅಧ್ಯಾಪಕರು. ನನ್ನ ಊಟ ಸಮೀಪದ ಸುತ್ತೂರು ಉಚಿತ ವಿದ್ಯಾರ್ಥಿನಿಲಯದಲ್ಲಿ. ಅವರು ನನ್ನನ್ನು ಬಹುಪ್ರೀತಿಯಿಂದ ನೋಡಿಕೊಂಡರು ಎಂದು ಹೇಳಿದರೆ ಸಾಲದು. ಅವರ ಕೆಲವು ಕವನಗಳು ಜನ್ಮತಾಳಿದ್ದು ನನಗೆ ನೆನಪಿದೆ. ಆ ಮನೆಯ ಹಿಂದಿನ ತೋಟದಲ್ಲಿ ಅರಳಿದ್ದ ಮಲ್ಲಿಗೆಯಿಂದ ಪ್ರಚೋದಿತರಾಗಿ "ಇದೋ ಇಲ್ಲರಳಿ ನಗುತಿದೆ, ಏಳು ಸುತ್ತಿನ ಮಲ್ಲಿಗೆ" ಕವನವನ್ನು ಬರೆದು ಓದಿ ಹೇಳಿದ್ದು ಚೆನ್ನಾಗಿ ನೆನಪಿದೆ. ಅವರದು ಬಹು ಶಿಸ್ತಿನ ಜೀವನವಾಗಿತ್ತು; ಮತ್ತು ಎಲ್ಲದರಲ್ಲೂ ಒಪ್ಪ, ಓರಣ. ನನ್ನ ಸ್ವಭಾವ ಅದಕ್ಕೆ ಸ್ವಲ್ಪ ವಿರುದ್ಧವಾಗಿತ್ತು—ಆಗಲೂ, ಈಗಲೂ ಕೂಡ; ಖಚಿತ, ಮುಂದಿನ ಲೋಕದಲ್ಲೂ ಕೂಡ.

ನಾನು ಒಂದು ರೀತಿಯಲ್ಲಿ ಅವರ ಮನೆಯವನೇ ಆಗಿಬಿಟ್ಟೆ. ಆ ವರ್ಷದ ಕೊನೆಯಲ್ಲಿ, ನನ್ನ ವಾರ್ಷಿಕ ಪರೀಕ್ಷೆ ಹತ್ತಿರ ಬಂದಿರುವಾಗ, ಅವರು ತಮ್ಮ ಪತ್ನಿ ರುದ್ರಾಣಿಯವರು, ಚೊಚ್ಚಲ ಮಗು ಕುಮಾರನ (ಜಯದೇವ / ಜಯಕುಮಾರ) ಜೊತೆ ರೈಲಿಗೆ ಬಂದಾಗ, ನಾನು ನಿಲ್ದಾಣಕ್ಕೆ ಹೋಗಿ ಸಂತೋಷದಿಂದ ಸ್ವಾಗತಿಸಿದೆ. ಸಣ್ಣಗೆ ಕಪ್ಪಗಿದ್ದು ಅಂಗಿ ಪೈಜಾಮ ಧರಿಸಿದ್ದ ನನ್ನನ್ನು ರುದ್ರಾಣಿಯವರು ನೋಡಿ "ಯಾರೀ ಹಳ್ಳಿ ಹುಡುಗ, ಬಹುಶಃ ಸಾಮಾನು ಹೊರುವ ಹುಡುಗ ಇರಬೇಕು" ಎಂದು ಅಂದುಕೊಂಡರಂತೆ. ಕುಮಾರನನ್ನು ನಾನು ಎತ್ತಿ ಆಡಿಸಿದೆ; ಮೇಷ್ಟು ಮತ್ತು ರುದ್ರಾಣಿಯವರು ಅಂದು ಇಟ್ಟಿದ್ದ ವಾತ್ಸಲ್ಯವನ್ನು ಇಂದಿಗೂ ಇಟ್ಟಿದ್ದಾರೆ. ಆ ಹೆಂಚಿನ ಮನೆಯಲ್ಲಿ ಅಂಬೆಗಾಲಿಡುತ್ತ ತೆವಳುತ್ತಿದ್ದ ತಮ್ಮ ಶಿಶುವನ್ನು ನೋಡಿಯೇ ಅವರು "ಹರಿದಾಡುವನು ಇವನು ಮನೆತುಂಬ, ನೆಲವ ಮಿದುವಾಯಿತು!" ಎಂಬ ಪದ್ಯ ಬರೆದದ್ದು. ಮೇಷ್ಟು ತಮ್ಮ ಅಜ್ಜಿಯನ್ನು ಬಹು ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರು. ಆ ಅಜ್ಜಿ ನನ್ನನ್ನೂ ಅಷ್ಟೇ ಪ್ರೀತಿಯಿಂದ ಕಾಣುತ್ತಿತ್ತು. ಆ ಮನೆಯ ಮುಂಭಾಗದಲ್ಲಿ ನನ್ನ ಅದೃಷ್ಟಕ್ಕೆ ಒಂದು ಪುಟ್ಟ

ಕೊಠಡಿಯಿದ್ದು, ಅದರಲ್ಲಿ ನಾನು ವ್ಯಾಸಂಗ ಮಾಡಲು ಅನುಕೂಲವಾಯ್ತು. ಆ ಮನೆಯ ಸಮೀಪದಲ್ಲೇ ಪ್ರೊ. ತ.ಸು. ಶಾಮರಾಯರ ಮನೆಯಿದ್ದು ಶಿವರುದ್ರಪ್ಪನವರನ್ನು ಅವರು ಅಕ್ಷರಶಃ ಪುತ್ರವಾತ್ಸಲ್ಯದಿಂದ ಕಾಣುತ್ತಿದ್ದರು. ಅದೇ ವಾತ್ಸಲ್ಯವನ್ನು ಅವರು ತಮ್ಮ ಎಲ್ಲ ವಿದ್ಯಾರ್ಥಿಗಳಿಗೂ ತೋರುತ್ತಿದ್ದರು. ಅವರೆಲ್ಲ ನಮ್ಮನ್ನು ಏಕವಚನದಿಂದಲೇ ಮಾತನಾಡಿಸುತ್ತಿದ್ದುದು. ಮೂರನೆಯ ಆನರ್ಸ್ ವಿದ್ಯಾರ್ಥಿಯಾಗಿದ್ದಾಗ (1952-53) ನಾನು ಸುತ್ತೂರು ಹಾಸ್ಟೆಲು ಸಮೀಪವೇ ಬೇರೊಂದು ಬಾಡಿಗೆ ಕೊಠಡಿ ಪಡೆದು ಅಲ್ಲಿ ಅಧ್ಯಯನವನ್ನು ಮುಂದುವರಿಸಿದೆ. 1953ರಲ್ಲಿ ಶಿವರುದ್ರಪ್ಪನವರು ಎಂ.ಎ. ಪದವೀಧರರಾದರು; ನಾನು ಆನರ್ಸ್ ಪದವೀಧರನಾಗಿ ಬೆಂಗಳೂರಿಗೆ ಕಾಲೇಜು ಅಧ್ಯಾಪಕನಾಗಿ ಹೋಗಿ ಕೆಲಸಕ್ಕೆ ಸೇರಿಕೊಂಡೆ. ಕನ್ನಡ ಮೇಷ್ಟ್ರಾಗುವ ನನ್ನ ಕನಸು ನನಸಾಯ್ತು. ಹಾಗೆ ಆದುದಕ್ಕೆ ಎಂದೂ ನನಗೆ ವ್ಯಥೆ ಆಗಿಲ್ಲ ಎಂಬ ಮಾತಂತೂ ಸತ್ಯ. ನನಗೆ ನನ್ನ ಮಾಧ್ಯಮಿಕ ಶಾಲೆಯಿಂದ ಹಿಡಿದು ಪದವಿ ತರಗತಿಯವರೆಗೆ ದೊರಕಿದ ಕನ್ನಡ ಉಪಾಧ್ಯಾಯರೆಲ್ಲ ಆದರ್ಶವಾದಿಗಳೂ ಬದುಕಿನಲ್ಲಿ ದೊಡ್ಡದನ್ನು ಸಾಧಿಸಬೇಕೆಂಬ ದೃಢನಿಶ್ಚಲರೂ ಆಗಿದ್ದುದು ನನ್ನ ಮೇಲೆ ತುಂಬ ಪ್ರಭಾವವನ್ನು ಬೀರಿದ್ದಿತು. ಈ ಎಲ್ಲ ವಿವರಗಳಿಗೆ ಇಲ್ಲಿ ಅವಕಾಶವಿಲ್ಲ.

ನಾನು ಎರಡು ವರ್ಷ ಮೇಷ್ಟ್ರಾಗಿದ್ದು, ಬಳಿಕ ಮೈಸೂರಿಗೆ ಎಂ.ಎ. ಓದಲು ಬಂದು ಎಂ.ಎ. ಪದವೀಧರನಾಗಿ ಯುವರಾಜಾ ಕಾಲೇಜಿನಲ್ಲಿ ಉಪಾಧ್ಯಾಯನಾಗಿ ಸೇರಿಕೊಂಡೆ. ನನ್ನ ಎಂ.ಎ. ಕೋರ್ಸ್ ಮುಗಿಯುತ್ತಿದ್ದಂತೆ, ಮೈಸೂರಿನಿಂದ ಶಿವಮೊಗ್ಗಕ್ಕೆ ಹೋಗಿದ್ದ ಶಿವರುದ್ರಪ್ಪನವರು ಮೈಸೂರಿಗೆ ವರ್ಗಾವಣೆ ಪಡೆದು ಸರಸ್ವತಿಪುರದಲ್ಲಿ ಮನೆ ಮಾಡಿದರು. ಅವರ ಮನೆ ನಮ್ಮ ಹಲವು ಚಟುವಟಿಕೆಗಳ ಗೂಡಾಯ್ತು. ಆಗ 'ಪಂಚಪಾಂಡವರ ತಂಡ' ಎಂದೇ ಪ್ರಖ್ಯಾತವಾಗಿದ್ದ ತಂಡದ ಸದಸ್ಯರು—ಶಿವರುದ್ರಪ್ಪ, ಪ್ರಭುಶಂಕರ್, ಕೆ.ಬಿ. ಪ್ರಭುಪ್ರಸಾದ್, ಎ. ವೆಂಕಟರಾವ್ ಮತ್ತು ನಾನು. ಆ ತಂಡಕ್ಕೆ ಎ. ಸುಬ್ಬರಾವ್ ಎಂಬ ಮಿತ್ರರೂ ಸೇರ್ಪಡೆಯಾಗುತ್ತಿದ್ದರು. ಆ ತಂಡದಲ್ಲೆಲ್ಲ ಗೃಹಸ್ಥರೆಂದರೆ ಶಿವರುದ್ರಪ್ಪನವರೇ. ಉಳಿದವರೆಲ್ಲ ಬ್ರಹ್ಮಚಾರಿಗಳು; ಮತ್ತು ಅವರಲ್ಲಿ ಜೀವನದುದ್ದಕ್ಕೂ ಅಖಂಡ ಬ್ರಹ್ಮಚಾರಿಗಳಾಗಿಯೇ ಉಳಿಯಬೇಕೆಂದು ಸಂಕಲ್ಪಿಸಿ, ಮುಂದೆ ಆ ಸಂಕಲ್ಪವನ್ನು ಅತ್ತ ತಳ್ಳಿ ಮದುವೆ ನೊಗಕ್ಕೆ ಕೊರಳು ಕೊಟ್ಟ ಇಬ್ಬರು (ಪ್ರಭುಶಂಕರ ಮತ್ತು ಅವರಲ್ಲೆಲ್ಲ ಚಿರಂಜೀವಿಯಾಗಿದ್ದ ನಾನು). ನಾವು ಸಾಧ್ಯವಾದರೆ ಪ್ರತಿ ದಿನ, ಅಥವಾ ವಾರದಲ್ಲಿ ಕನಿಷ್ಠ ನಾಲ್ಕೈದು ಬಾರಿ ಸೇರಲೇಬೇಕಿತ್ತು. ಚರ್ಚೆ, ಹಾಸ್ಯ, ನಗು, ಹರಟೆ ಇವುಗಳ ಮಧ್ಯೆ ಕಾಲ ಕಳೆದುದೇ ಗೊತ್ತಾಗುತ್ತಿರಲಿಲ್ಲ. ನಮ್ಮ ಮಾತುಕತೆಯಲ್ಲಿ ಎಂದೂ ಕೆಟ್ಟ ಮಾತು, ಸಣ್ಣ ಆಲೋಚನೆ, ಇನ್ನೊಬ್ಬರ ಅವಹೇಳನ ಸುಳಿಯುತ್ತಿರಲಿಲ್ಲ. ಎಲ್ಲರೂ ರಾಮಕೃಷ್ಣ ಪರಮಹಂಸರು, ಆನಿಬೆಸಂಟ್, ಗಾಂಧೀಜಿ ಪ್ರಭಾವಕ್ಕೆ ಒಳಗಾಗಿದ್ದವರು. ವೆಂಕಟರಾಮ್ ವಂಶವಂತೂ ಥಿಯೊಸಫಿಯ ಪ್ರಚಾರಕ್ಕೆ ಮೀಸಲಾಗಿದ್ದಿತು.

ರುದ್ರಾಣಿಯವರು ಮಗು ಸಮೇತ ಊರಿಗೆ ಹೋದರೆಂದರೆ ಅವರ ಮನೆ ನಮ್ಮ

ವಶಕ್ಕೆ ಬರುತ್ತಿದ್ದಿತು. ಅಲ್ಲಿ ಎಲ್ಲ ಸೇರಿ ಅಡುಗೆ ತಯಾರಿಸುತ್ತಿದ್ದೆವು. ವೆಂಕಟರಾವ್ ಅಡುಗೆ ಮಾಡುವುದರಲ್ಲಿ, ತಿನ್ನುವುದರಲ್ಲಿ ನಿಸ್ಸೀಮರು. ನನ್ನನ್ನು ಒಲೆಯ ಹತ್ತಿರಕ್ಕೂ ಬಿಡುತ್ತಿರಲಿಲ್ಲ—ನನ್ನ ತಿನ್ನುವ ಸಾಮರ್ಥ್ಯದಲ್ಲಿ ಅವರಿಗೆ ನಂಬಿಕೆಯಿದ್ದರೂ ಪಾಕಶಾಸ್ತ್ರ ಕ್ಷೇತ್ರದ ಸೃಜನಶೀಲ ವ್ಯಕ್ತಿಯಲ್ಲವೆಂದು ಅವರಿಗೆ ಖಚಿತವಾಗಿತ್ತು. ಹಾಗಾಗಿ ನನ್ನದು ಪಾತ್ರೆತೊಳೆಯುವ ತರಕಾರಿಗಳನ್ನು ಹೆಚ್ಚಿ ಕೊಡುವ ಕೆಲಸವಾಗಿತ್ತು. ಮಾಡಿದ ಅಡುಗೆಗಿಂತ, ಅಡುಗೆ ಮಾಡುವ ಕ್ರಿಯೆಯೇ ನನಗೆ ಹೆಚ್ಚಿನ ಮೋಜಿನದಾಗಿರುತ್ತಿತ್ತು. ನಗಿಸಿ ಗಟ್ಟಿಯಾಗಿ ನಗುತ್ತಿದ್ದವರು ಪ್ರಭುಶಂಕರ್; ತೀರ ಕಡಮೆ ನಗುತ್ತಿದ್ದವರು ಶಿವರುದ್ರಪ್ಪನವರು. ಸ್ವಲ್ಪ ಗಂಭೀರವೇ ಎಂದು ಹೇಳಬಹುದಾದ ಅವರೂ ಒಮ್ಮೊಮ್ಮೆ ತಾರಸಿ ಬಿರಿಯುವಂತೆ ನಗಲು ಪ್ರಭುಶಂಕರ್ ಕಾರಣ. ಆ ತಾರುಣ್ಯದ ಲೋಕದ ನೆನಪು ನಿಜವಾಗಿಯೂ ಅವಿಸ್ಮರಣೀಯ.

ಆ ದಿನಗಳಲ್ಲಿ (1959-60) ಅವರ ಜೊತೆ ಮಾಡಿದ ಪ್ರವಾಸವನ್ನು ಇಲ್ಲಿ ಹೇಳಲೇ ಬೇಕು. ಒಂದು ವಾಹನವನ್ನು ಮಾಡಿಕೊಂಡು ಮೇಲೆ ಹೇಳಿದ 'ಪಂಚಪಾಂಡವ'ರ ತಂಡ, ಜೊತೆಗೆ ಇತರರೂ ಸೇರಿದಂತೆ ದಕ್ಷಿಣ ಭಾರತದ ಪ್ರವಾಸ ಕೈಗೊಂಡೆವು. ತಮಿಳುನಾಡಿನ ಚಿದಂಬರಂ, ಮಧುರೈ, ತಂಜಾವೂರು, ತಿರುಚನಾಪಳ್ಳಿ, ರಾಮೇಶ್ವರ, ಕನ್ಯಾಕುಮಾರಿ, ಕೇರಳದ ತಿರುವನಂತಪುರ, ಕೊಚ್ಚಿನ್ ಇತ್ಯಾದಿ ನೋಡಿಕೊಂಡು ಊಟಿಯ ಮೂಲಕ ಹಿಂದಿರುಗಿದೆವು. ದಾರಿಯುದ್ದಕ್ಕೂ ಹಾಡುಗಳು, ಜೋಕುಗಳು, ಭಜನೆಗಳು. ವಿನೋಬಾ ಭಾವೆಯವರ ಭೂದಾನ ಚಳುವಳಿಗೆ ನನ್ನನ್ನು ಸಂಪೂರ್ಣ ಒಪ್ಪಿಸಿಕೊಂಡು ಆಜನ್ಮ ಬ್ರಹ್ಮಚಾರಿಯಾಗಿ ಉಳಿದು ಆಧ್ಯಾತ್ಮಿಕ ಜೀವನವನ್ನು ನಡೆಸಬೇಕೆಂಬ ಕನಸಿನ ನನಗೆ ಆ ಪ್ರವಾಸ ಬಹುದೊಡ್ಡ ಅನುಭವವನ್ನು ತಂದಿತ್ತಿತು. ನಮ್ಮ ತಂಡದ ಎಲ್ಲರೂ ರಾಮಕೃಷ್ಣ, ವಿವೇಕಾನಂದರ ನಿಷ್ಠಾವಂತ ಭಕ್ತರಾಗಿದ್ದರು; ಮತ್ತು ಸ್ವತಂತ್ರ ಚಿಂತನಶೀಲರಾಗಿದ್ದರು. ನಮ್ಮ ನೇರಜೀವನದ ಆದರ್ಶಗಳನ್ನು ಆ ಪ್ರವಾಸ ದೃಢಗೊಳಿಸಿತು.

ಮೈಸೂರಿನ ಸರಸ್ವತಿಪುರದ ಶಿವರುದ್ರಪ್ಪನವರ ಮನೆಗೆ ಸಮೀಪದಲ್ಲಿಯೇ ನಾನೂ ಒಂದು ಬಾಡಿಗೆ ಮನೆ ಹಿಡಿದು ನನ್ನ ತಂದೆ ತಾಯಂದಿರನ್ನು ತಂಗಿಯನ್ನು ಅಲ್ಲಿಗೆ ಕರೆತಂದೆ. ನನ್ನ ತಂದೆ ತಾಯಂದಿರಾಗಲೇ ವೃದ್ಧಾಪ್ಯವನ್ನು ಸಮೀಪಿಸಿದ್ದರು. ಅವರಿಗಿದ್ದ ಏಕೈಕ ಕನಸು; ನನ್ನ ಮತ್ತು ನನ್ನ ತಂಗಿಯ ಮದುವೆ ನೆರವೇರಿಸುವುದು. ನನ್ನ ಬಗ್ಗೆ ಅವರಾಗಲೇ ಹೆದರಿ ಬಿಟ್ಟಿದ್ದರು. ಅವರು ನೋಡಿಕೊಂಡು ಬರಲು ಹೇಳಿದ್ದ ಯಾವ ಹೆಣ್ಣನ್ನೂ ನಾನು ನೋಡಲೂ ಬಯಸಲಿಲ್ಲ. ಆದರೆ ಹುಡುಗಿಯರನ್ನು ನಾನು ಕದ್ದು ನೋಡುತ್ತಿದ್ದುದು ನಿಜವಲ್ಲವೆಂದರೆ ಯಾರೂ ನಂಬರು. ನನ್ನ ತಂದೆಗೆ ಇದ್ದ ಒಂದೇ ಮಾರ್ಗ—ಶಿವರುದ್ರಪ್ಪನವರ, ಪ್ರಭುಶಂಕರರ ಮೂಲಕ ನನಗೆ ಹೇಳಿಸುವುದು. ಆ ಇಬ್ಬರೂ ನನಗೆ ಹಲವು ಬಾರಿ ಹೇಳಿದರು, ನನ್ನ ತಂದೆಯ ಅಳಲನ್ನು ವರ್ಣಿಸಿದರು. ನಾನು ಜಪ್ಪಯ್ಯ ಎನ್ನಲಿಲ್ಲ. ಅವರೇನೂ ಆ ವಿಷಯ ಕೈಬಿಡಲಿಲ್ಲ. ದೇಹ ಸಂಬಂಧಿ ಕೆಲವು ವಾಸ್ತವಗಳು ನಾನು ಸ್ವಲ್ಪ ಶಾಂತವಾಗಿ ಚಿಂತಿಸುವಂತೆ ಮಾಡಿದುವು. ರಾತ್ರಿ ಎಂಟು-ಒಂಬತ್ತು ಆದ ಮೇಲೆ ನಾನು

ಮನೆಗೆ ನಡೆದು ಬರುವಾಗ ಜನ ನನ್ನನ್ನು ಗುಮಾನಿಯಿಂದ ಕಾಣುತ್ತಾರೆ ಎಂಬ ಗುಮಾನಿ ನನಗೇ ಬರುತ್ತಿತ್ತು. ಆ ಬಗ್ಗೆ ಜನ ತಲೆ ಕೆಡಿಸಿಕೊಂಡಿರಲಿಲ್ಲವೆಂಬುದು ಒಂದು ವಾಸ್ತವ. ಆದರೆ ಹುಡುಗಿಯರ ಜೊತೆ ಮಾತನಾಡಬೇಕು, ಅವರನ್ನು ನೋಡಬೇಕು ಇತ್ಯಾದಿ ಆಸೆಗಳನ್ನು ಅದುಮಿಡುವುದು ಕಷ್ಟವಾಯಿತು. ನನ್ನ ತಂಗಿಗೆ ಗಂಡುಗಳನ್ನು ವಿಚಾರಿಸುತ್ತಿದ್ದೆ. ಒಂದು ಘಟ್ಟದಲ್ಲಿ ನನ್ನನ್ನು ನಾನು ಬ್ರಹ್ಮಚಾರಿ ಜೀವನಕ್ಕೆ ತಳ್ಳಿಕೊಂಡುಬಿಡಬೇಕೆಂದು ನಿರ್ಧರಿಸಿ ನನ್ನ ಬಳಿಯಿದ್ದ ಇಡೀ ಪುಸ್ತಕ ಸಂಗ್ರಹವನ್ನು ಹರಾಜು ಹಾಕಿ ಆ ಹಣದಲ್ಲಿ ಚೀನಾದೊಡನೆ ಯುದ್ಧದಲ್ಲಿ ನಿರತರಾಗಿದ್ದ ಗಡಿಯ ಭಾರತೀಯ ಸೈನಿಕರಿಗೆ ಕಂಬಳಿ ಕಳುಹಿಸಿಕೊಟ್ಟೆ. ಆದರೂ, ಏಕೋ, ನನ್ನ ಕಾಮನೆಗಳನ್ನು ಅದುಮಿಡುವುದು ನನಗೇ ಅಸಾಧ್ಯವಾಗಿ ತೋರಿಬಂತು. ಇಡೀ ಜೀವನವನ್ನು ಇಂದ್ರಿಯಗಳನ್ನು ಅದುಮಿಡುವುದರಲ್ಲೇ ಕಳೆದರೆ ಇನ್ನೇನೂ ಸಾಧಿಸಲಾರದೆ ಹೋಗಬಹುದೆಂಬ ಭಯವೂ ಕಾಡಿತು. ಇಂದ್ರಿಯ ನಿಗ್ರಹವು ಇನ್ನೇನೋ ಮಹತ್ತ್ವವಾದುದನ್ನು ಸಾಧಿಸಲು ಸಾಧನವಾಗಬೇಕು. ಅಂತಹ ಇಂದ್ರಿಯ ನಿಗ್ರಹ ನನ್ನಿಂದ ಸಾಧ್ಯವಾಗದೆಂಬ ಸತ್ಯ ಹೊಳೆಯುತ್ತ ಬಂದಿತು. ಈ ತಾಕಲಾಟದಲ್ಲೇ ಪುಟ್ಟಪರ್ತಿಗೆ ಹೋಗಿ ಪೂಜ್ಯ ಸಾಯಿಬಾಬಾರ ಜೊತೆ ಮಾತನಾಡಿದೆ. ಅವರ ಆಶೀರ್ವಾದ ದೊರಕಿತು. ಅಲ್ಲಿಂದ ಬಂದ ದಿನವೇ ಸಂಜೆ ನಾನು ಮದುವೆಯಾಗುವ ನಿರ್ಧಾರವನ್ನು ಮೊದಲು ತಿಳಿಸಿದ್ದು ಶಿವರುದ್ರಪ್ಪ ದಂಪತಿಗಳಿಗೆ. ಅವರಿಗೆ ತೀರ ಹರ್ಷವಾಯಿತೆಂದು ಹೇಳಬೇಕಾಗಿಲ್ಲ. ಅವರ ಮನೆಯಲ್ಲೇ ಊಟ ಮುಗಿಸಿಕೊಂಡು ರಾತ್ರಿ ಹನ್ನೊಂದರ ಹೊತ್ತಿಗೆ ನನ್ನ ಮನೆಗೆ ಬಂದರೆ ಎಲ್ಲರೂ ಊಟ ಮಾಡಿ ಹೊರಗಿನ ದೀಪ ಆರಿಸಿದ್ದರು. ನನ್ನ ತಂಗಿ ವರಾಂಡದ ದೀಪ ಹಾಕುತ್ತಿದ್ದಂತೆ, ನನಗೂ ಮುಂಬಾಗಿಲಿಗೂ ಮಧ್ಯೆ ಹೆಡೆಯೆತ್ತಿ ನಿಂತಿದ್ದ ನಾಗರಹಾವು ನಾನು ಚಿಲಕ ಸದ್ದು ಮಾಡಿದಾಗ ಕತ್ತಲಲ್ಲೇ ಹಿಸುಗುಟ್ಟಿದ್ದು, ದೀಪದ ಬೆಳಕಲ್ಲಿ ಹಾಗೇ ಹೆಡೆ ಕೆಳಗೆ ಹಾಕಿ ಹೋದದನ್ನು ಕಂಡು ಒಂದು ಕ್ಷಣ ನಡುಕ. ಒಳಗೆ ಹೋಗಿ ನನ್ನ ತಂದೆ-ತಾಯಿಯವರಿಗೆ ನನ್ನ ಮದುವೆ ನಿರ್ಧಾರ ತಿಳಿಸಿದಾಗ ಅವರಿಗಾದ ಆನಂದದ ಬಗ್ಗೆ ಹೇಳಬೇಕಾಗಿಲ್ಲ.

ಮುಂದೆ ನನ್ನ ತಂಗಿಯ ಮತ್ತು ನನ್ನ ಮದುವೆಗಳು ನನ್ನ ಹಳ್ಳಿಯಲ್ಲಿ ನಡೆದಾಗ ಆ ಪೂಜ್ಯ ದಂಪತಿಗಳಿಬ್ಬರೂ ಹೈದರಾಬಾದಿನಿಂದ ಬಂದು ಭಾಗವಹಿಸಿ ಹರಸಿ, ಹರ್ಷಿಸಿ ಹೋದರು. ಮುಂದೆ, ನಾನು ನನ್ನ ಹೆಂಡತಿ 'ಮಧುಚಂದ್ರ'ಕ್ಕಾಗಿ ಹೈದರಾಬಾದನ್ನು ಆರಿಸಿದೆವು. ಅಲ್ಲಿ ಮೇಷ್ಟು ಕನ್ನಡ ವಿಭಾಗದಲ್ಲಿ ರೀಡರ್ ಆಗಿ ಕೆಲಸ ಮಾಡುತ್ತಿದ್ದರು. ಅವರು ಹೈದರಾಬಾದಿಗೆ ಹೋಗಲು ಕಾರಣವಿತ್ತು. ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದ ಪ್ರೊ. ತೀ.ನಂ. ಶ್ರೀಕಂಠಯ್ಯನವರು, ಮಹಾರಾಜಾ ಕಾಲೇಜಿನಿಂದ ಕನ್ನಡ ಸ್ನಾತಕೋತ್ತರ ವಿಭಾಗವು ಮಾನಸಗಂಗೋತ್ರಿಗೆ ಸ್ಥಳಾಂತರಗೊಂಡಾಗ ಮಹಾರಾಜಾಕಾಲೇಜಿನಿಂದ ಶಿವರುದ್ರಪ್ಪನವರನ್ನು, ಯುವರಾಜಾ ಕಾಲೇಜಿನಿಂದ ನನ್ನನ್ನು ಮಾನಸಗಂಗೋತ್ರಿಗೆ ವರ್ಗಾಯಿಸಲು ಶಿಫಾರಸು ಮಾಡಿದರು. ಯುವರಾಜಾ ಕಾಲೇಜಿನಿಂದ ನಾನು ಬಿಡುಗಡೆ

ಹೊಂದಿ ಗಂಗೋತ್ರಿಗೆ ಹೋದೆ. ಆದರೆ ಶಿವರುದ್ರಪ್ಪನವರನ್ನು ಮಹಾರಾಜಾ ಕಾಲೇಜಿನ ಪ್ರಿನ್ಸಿಪಾಲರು ಬಿಡುಗಡೆ ಮಾಡಲಿಲ್ಲವಾದ ಕಾರಣ ಅವರು ಅಲ್ಲೇ ಉಳಿಯಬೇಕಾಯ್ತು. ಹೈದರಾಬಾದಿನಲ್ಲಿ ಸ್ನಾತಕೋತ್ತರ ವಿಭಾಗವಿದ್ದು ಅಲ್ಲಿ ಉನ್ನತ ತರಗತಿಗೆ ಪಾಠ ಹೇಳಬಹುದೆಂದು ಅವರು ಅಲ್ಲಿಗೆ ಹೋಗಿ ಕೆಲಸಕ್ಕೆ ಸೇರಿದರು. ವಿಶ್ವವಿದ್ಯಾಲಯದ ಆವರಣದಲ್ಲಿದ್ದ ಅವರ ಮನೆಯಲ್ಲಿ ನನ್ನ ಹೆಂಡತಿ ಮತ್ತು ನಾನು ಕೆಲವು ದಿನ ಇದ್ದು, ಅಲ್ಲಿಂದ ವಾಹನ ಮಾಡಿಕೊಂಡು ಅವರ ಇಡೀ ಕುಟುಂಬ ಮತ್ತು ನಾವು ನಾಗಾರ್ಜುನಕೊಂಡ, ನಾಗಾರ್ಜುನ ಸಾಗರಗಳನ್ನು ನೋಡಿಕೊಂಡು ಬಂದೆವು. ಆಗಿನ್ನೂ ನಾಗಾರ್ಜುನ ಸಾಗರದ ಕೆಲಸ ಭರದಿಂದ ಸಾಗಿತ್ತು. ಅವರು ಮದುವೆ ಉಡುಗೊರೆಯಾಗಿ ನಮಗೆ ಕೊಟ್ಟ ಮರದ ಕೆತ್ತನೆಯ ಹರಿವಾಣ ಈಗಲೂ ಇದೆ.

ಅವರು ಮೈಸೂರಿನ ಮಾನಸಗಂಗೋತ್ರಿ ಸ್ನಾತಕೋತ್ತರ ವಿಭಾಗಕ್ಕೆ ಆಯ್ಕೆಯಾಗಿ ಬರದಂತಹ ವಾತಾವರಣ ನಿರ್ಮಾಣವಾಯ್ತು. ಅವರು ಹೈದರಾಬಾದಿನಲ್ಲಿ ಸುಖವಾಗಿದ್ದರೂ, ಓದು ಬರಹ ಪ್ರಕಟಣೆಗಳಿಗೆ ಅಂತಹ ಅನುಕೂಲ ವಾತಾವರಣ ಅಲ್ಲಿರಲಿಲ್ಲ. ಹೀಗಾಗಿ ಅವರು ಹೊಸದಾಗಿ ಆರಂಭವಾಗಿದ್ದ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ರೀಡರ್ ಆಗಿ ನೇಮಕಗೊಂಡು ಬಂದಾಗ ಮೈಸೂರಿನ ನಮಗೆಲ್ಲ ಹರ್ಷವಾಗಿತ್ತು. ಮೈಸೂರಲ್ಲಿ ತಾವು ಬಾಡಿಗೆಗಿದ್ದ ಮನೆಯನ್ನೇ ಕೊಂಡುಕೊಂಡಿದ್ದ ಅವರಿಗೆ ಅಲ್ಲೇ ನೆಲಸುವ ಅವರ ಕನಸು ಭಗ್ನಗೊಂಡಿತ್ತು. ನಾನಂತೂ ಮಾನಸಗಂಗೋತ್ರಿಯ ಸ್ನಾತಕೋತ್ತರ ವಿಭಾಗದಲ್ಲಿ ಅಧ್ಯಾಪಕನಾಗಿ ಕೆಲಸ ಮಾಡಲು ಅವಕಾಶ ದೊರೆತದ್ದು ಒಂದು ಪೂರ್ವಜನ್ಮದ ಸುಕೃತವೆಂದೇ ಭಾವಿಸಿದ್ದೆ. ರೀಡರ್ ಆಗಿ ಬಡ್ತಿ ಹೊಂದದೆ ಇದ್ದರೂ ಸರಿಯೇ, ಎಂ.ಎ. ತರಗತಿಗೆ ಪಾಠ ಹೇಳುವ ಅವಕಾಶ ಸಿಕ್ಕಿದ್ದೇ ಸಾಕು ಎಂದು ಹಲವರ ಮುಂದೆ ಹೇಳಿಕೊಂಡು ಹಿಗ್ಗಿದ್ದೆ. ಶಿವರುದ್ರಪ್ಪನವರು ಹೈದರಾಬಾದಿನಿಂದ ಮೈಸೂರಿಗೆ ಬಂದಾಗ ನನ್ನ ಮನೆಯಲ್ಲಿ ಒಂದೆರಡು ಬಾರಿ ಉಳಿದದ್ದುಂಟು.

1967-68ರಲ್ಲಿ ನಾನು ಅಮೆರಿಕದಲ್ಲಿ ಒಂದು ವರ್ಷವಿದ್ದು ಬರಲು ಹೊರಟಾಗ ಶಿವರುದ್ರಪ್ಪನವರು ತಮ್ಮ ಮನೆಯವರ ಸಮೇತ ವಿಮಾನ ನಿಲ್ದಾಣಕ್ಕೆ ಬಂದು ಬೀಳ್ಕೊಟ್ಟರು. ಅಲ್ಲಿಂದ ನಾನು ವಾಪಸು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಹಿಂದಿರುಗಿದಾಗ ಅಲ್ಲಿ ನಾನು ಸ್ವಾಭಿಮಾನ ಸಮೇತ ಕೆಲಸಮಾಡುವುದು ಕಷ್ಟವೆಂಬ ಭಾವನೆ ನನ್ನಲ್ಲಿ ಮೂಡಲು ಬಹಳ ಕಾಲ ಹಿಡಿಯಲಿಲ್ಲ. ಶಿವರುದ್ರಪ್ಪನವರಿಗೆ ನಾನು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಬರಬೇಕೆಂದು ಅಪೇಕ್ಷೆ. ಅವರು ಹೊಸದಾಗಿ ನಿರ್ಮಾಣ ಮಾಡಿದ್ದ ರೀಡರ್ ಹುದ್ದೆಗೆ ಅರ್ಜಿ ಹಾಕಲು ಪತ್ರ ಬರೆದು ಅರ್ಜಿಯನ್ನು ಕಳುಹಿಸಿಕೊಟ್ಟಿದ್ದರು. (ಅವರು ಹೈದರಾಬಾದಿನಲ್ಲಿದ್ದಾಗ ಮೈಸೂರು ವಿಶ್ವವಿದ್ಯಾಲಯಕ್ಕೆ ರೀಡರ್ ಹುದ್ದೆಗೆ ಅರ್ಜಿ ಹಾಕಲು ಅವರಿಗೆ ಅರ್ಜಿ ಕಳುಹಿಸಿಕೊಟ್ಟು ನಾನು ಮೈಸೂರಲ್ಲಿ ಕೆಲವು ಕಟುಮಾತುಗಳನ್ನೂ ಕೇಳಬೇಕಾಯ್ತು) "ನೀನು ಇಲ್ಲಿಗೆ ಬರುವ ವಿಷಯದಲ್ಲಿ ನಾವೆಲ್ಲ ಕಾತರರಾಗಿದ್ದೇವೆ"

ಎಂಬರ್ಥದ ಅವರ ಪತ್ರವೂ ಜೊತೆಯಲ್ಲಿತ್ತು. ಮೈಸೂರಲ್ಲಿ ಒಳ್ಳೆಯ ಜಾಗದಲ್ಲಿ ಒಳ್ಳೆಯ ಮನೆ ಕಟ್ಟಿದ್ದೆ; ಅಲ್ಲಿ ಹಂಗಾಮಿಯಾಗಿ ರೀಡರ್ ಕೂಡ ಆಗಿದ್ದೆ. ಆದರೆ ನನ್ನನ್ನು ಮೈಸೂರಿನಿಂದ ಮಂಗಳೂರಿನ ಕನ್ನಡ ಸ್ನಾತಕೋತ್ತರ ವಿಭಾಗಕ್ಕೆ ವರ್ಗಾವಣೆ ಮಾಡುವ ಅಳುಕು ನನಗಿತ್ತು. ಎಲ್ಲಕ್ಕಿಂತ ಹೆಚ್ಚಾಗಿ, ಸ್ವಾಭಿಮಾನದ ಪ್ರಶ್ನೆ. ಎಲ್ಲವನ್ನೂ ಆಲೋಚಿಸಿ ನಾನು ಬೆಂಗಳೂರಿಗೆ ಅರ್ಜಿ ಹಾಕಿ, ಸಂದರ್ಶನಕ್ಕೂ ಹಾಜರಾದೆ. ಪ್ರೊ. ಗೋಕಾಕರು ಕುಲಪತಿಗಳು, ಡಾ ರಂ. ಶ್ರೀ ಮುಗಳಿಯವರು ಪ್ರಾಧ್ಯಾಪಕರಾಗಿದ್ದ ಕಾರಣ ನನ್ನ ಆಯ್ಕೆ ಕಷ್ಟವಾಗಲಿಲ್ಲ. ಮೈಸೂರಿನ ಆಕರ್ಷಣೆ ಎಷ್ಟೇ ಬಲವಾಗಿದ್ದರೂ ಬೆಂಗಳೂರಿಗೆ ಬಂದು ಕೆಲಸದ ಮೇಲೆ ಹಾಜರಾದೆ. ನಾನು ಬಾಡಿಗೆ ಮನೆ ಮಾಡುವವರೆಗೆ ಶಿವರುದ್ರಪ್ಪನವರ ಮನೆಯಲ್ಲೇ ಎರಡು ಮೂರು ತಿಂಗಳಿದ್ದೆ. ಕನ್ನಡ ವಿಭಾಗದ ಇಡೀ ವಾತಾವರಣ ನನಗೆ ಬಹು ಆಪ್ಯಾಯಮಾನವಾಗಿತ್ತು. ಶಿವರುದ್ರಪ್ಪನವರ ಮನೆ ಸಮೀಪದಲ್ಲೇ ಬಾಡಿಗೆ ಮನೆ ಗೊತ್ತುಮಾಡಿ ನನ್ನ ಸಂಸಾರವನ್ನು ಬೆಂಗಳೂರಿಗೆ ವರ್ಗಾಯಿಸಿದೆ.

ನನ್ನ ಬದುಕಿನ ದೊಡ್ಡ ನಿರ್ಧಾರವನ್ನು ಕೈಗೊಂಡಿದ್ದೆ. ಆಗ ತರಗತಿಗಳು ನಡೆಯುತ್ತಿದ್ದುದು ಸೆಂಟ್ರಲ್ ಕಾಲೇಜಿನಲ್ಲಿ. ಡಾ. ಮುಗಳಿಯವರು ಪ್ರಾಧ್ಯಾಪಕರು ಮತ್ತು ವಿಭಾಗದ ಮುಖ್ಯಸ್ಥರು; ಡಾ. ಶಿವರುದ್ರಪ್ಪನವರು ಮತ್ತು ನಾನು ರೀಡರುಗಳು. ಅಧ್ಯಾಪಕರೆಲ್ಲರೂ ನಮಗೆ ಆತ್ಮೀಯರೇ. ಇಡೀ ಕನ್ನಡ ವಿಭಾಗದ ವಾತಾವರಣ ನಿಜವಾದ ಶೈಕ್ಷಣಿಕ ವಾತಾವರಣದಿಂದ ತುಂಬಿದ್ದಿತು. ಇದ್ದ ದೊಡ್ಡ ಕೊರತೆಯೆಂದರೆ ಗ್ರಂಥಾಲಯದ್ದು. ನನ್ನ ಅಧ್ಯಯನದ ಶಿಸ್ತಿಗೆ ಅಗತ್ಯವಾದ ಗ್ರಂಥಸಂಗ್ರಹ ವಿಶ್ವವಿದ್ಯಾಲಯದ ಗ್ರಂಥಾಲಯ ದಲ್ಲಿಲ್ಲದಿದ್ದರೂ ಮಿಥಿಕ್ ಸೊಸೈಟಿ, ಕನ್ನಡ ಸಾಹಿತ್ಯ ಪರಿಷತ್ತಿನ ಗ್ರಂಥ ಸಂಗ್ರಹಗಳು ಆ ಕೊರತೆಯನ್ನು ಸ್ವಲ್ಪ ಹೋಗಲಾಡಿಸಿದುವು. ಡಾ. ಮುಗಳಿಯವರ ನಿವೃತ್ತಿಯ ಬಳಿಕ ಡಾ. ಶಿವರುದ್ರಪ್ಪನವರು ಪ್ರಾಧ್ಯಾಪಕರೂ ವಿಭಾಗದ ಮುಖ್ಯಸ್ಥರೂ ಆದರು. ಡಾ. ಮುಗಳಿಯವರು ಕನ್ನಡ ವಿಭಾಗಕ್ಕೆ ಒಳ್ಳೆಯ ತಳಹದಿಯನ್ನು ಹಾಕಿ ನಿವೃತ್ತರಾದರು.

ಕನ್ನಡ ವಿಭಾಗವನ್ನು ಕಟ್ಟುವ ಗುರುತರ ಜವಾಬ್ದಾರಿಯನ್ನು ಶಿವರುದ್ರಪ್ಪನವರು ಹೊತ್ತು ಅತ್ಯಂತ ಸಮರ್ಥವಾಗಿ ನಿರ್ವಹಿಸಿದರು. ಅವರಿಗೂ ಅವರ ಸಹೋದ್ಯೋಗಿಗಳಿಗೂ ಭಿನ್ನಾಭಿಪ್ರಾಯಗಳು ಬಂದುದೇ ಕಡಿಮೆ. ಅವರ ಸಹೋದ್ಯೋಗಿಗಳೆಲ್ಲರೂ ಅವರ ವಿದ್ಯಾರ್ಥಿಗಳೇ ಆಗಿದ್ದವರು. ಮುಖ್ಯವಾಗಿ ಗ್ರಂಥಾಲಯದಲ್ಲಿ ಕನ್ನಡ ಆಕರ ಗ್ರಂಥಗಳ ಕೊರತೆ ಹೋಗಲಾಡಿಸಲು ಕ್ರಮ ಕೈಗೊಂಡರು. ಕನ್ನಡ ವಿಭಾಗಕ್ಕೆ 'ಕನ್ನಡ ಅಧ್ಯಯನ ಕೇಂದ್ರ'ವೆಂದು ನಾಮಕರಣ ಮಾಡಿಸಿದರು. ಮೈಸೂರು ವಿಶ್ವವಿದ್ಯಾಲಯದ 'ಪ್ರಬುದ್ಧ ಕರ್ಣಾಟಕ', ಕರ್ನಾಟಕ ವಿಶ್ವವಿದ್ಯಾಲಯದ 'ಕನ್ನಡ ಭಾರತಿ' ಮಾದರಿಯಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ್ದೇ 'ಸಾಧನೆ' ಎಂಬ ಪತ್ರಿಕೆಯನ್ನು (ಜರ್ನಲ್) ಆರಂಭಿಸಿದರು. ನಾವೆಲ್ಲ ಅದಕ್ಕೆ ಉತ್ಸಾಹದಿಂದ ಲೇಖನಗಳನ್ನು ಬರೆದೆವು. ಗುಣ ಪಕ್ಷಪಾತಿಯಾಗಿದ್ದ ಅವರು ಪ್ರಧಾನ ಸಂಪಾದಕರಾಗಿ ಆ ಸಂಪತ್ರಿಕೆಗೆ ಲೇಖನಗಳನ್ನು ಆರಿಸುವಾಗ ಸಾಕಷ್ಟು ಎಚ್ಚರ

ವಹಿಸುತ್ತಿದ್ದರು. ಯಾವುದೇ ರಚನಾತ್ಮಕ ಸಲಹೆಗಳನ್ನೂ ಅವರು ತೆರೆದ ಮನಸ್ಸಿನಿಂದ ಸ್ವೀಕರಿಸುತ್ತಿದ್ದರು. ಅವರ ಮತ್ತು ನನ್ನ ಕಾರ್ಯಕ್ಷೇತ್ರಗಳು ಭಿನ್ನವೆಂದೇ ಹೇಳಬೇಕು. ಅವರ ಕ್ಷೇತ್ರ ಮುಖ್ಯವಾಗಿ ಕಾವ್ಯ, ಕಾವ್ಯಮೀಮಾಂಸೆ, ವಿಮರ್ಶೆ. ನನ್ನದು ಮುಖ್ಯವಾಗಿ ಸಂಶೋಧನ ಕ್ಷೇತ್ರ—ಅದರಲ್ಲೂ ಶಾಸನ, ಭಾಷಾವಿಜ್ಞಾನ, ಜಾನಪದ. ಅವರ ಮುಂದೆ ಆಗಲೇ ಮೈಸೂರು ವಿಶ್ವವಿದ್ಯಾಲಯದ ಮಾದರಿಯಿದ್ದುದರಿಂದ, ಬೆಂಗಳೂರು ವಿಶ್ವವಿದ್ಯಾಲಯದಲ್ಲಿಯೂ ಅದೇ ಮಾದರಿಯಲ್ಲಿ ಬೆಳಗಬೇಕೆಂಬ ಹಂಬಲ ಅವರಿಗಿದ್ದಿತು.

ಅವರು ನಿಯೋಜಿಸಿ, ಕಾರ್ಯಗತಗೊಳಿಸಿದ ಯೋಜನೆಗಳಲ್ಲಿ ಈ ಮುಂದಿನವು ಕೆಲವು. 1. ಜನಪ್ರಿಯ ಸಾಹಿತ್ಯ ಚರಿತ್ರೆ (ಹಲವು ಸಂಪುಟಗಳಲ್ಲಿ); 2 ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ; 3. ಸಾಹಿತ್ಯ ವಾರ್ಷಿಕ. ಪ್ರತಿವರ್ಷ ಕನ್ನಡ ವಿಭಾಗವು ಏರ್ಪಡಿಸುತ್ತಿದ್ದ ವಿಚಾರ ಗೋಷ್ಠಿಗಳು ಇಂದಿಗೂ ಒಂದು ಶ್ರೇಷ್ಠ ಮಾದರಿಯನ್ನೊದಗಿಸುತ್ತವೆ. ಪಂಪ, ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳು, ಶ್ರವಣಬೆಳ್ಗೊಳ ಇವನ್ನು ಇಲ್ಲಿ ಹೆಸರಿಸಬಹುದು. ಆಯಾ ಕ್ಷೇತ್ರದಲ್ಲಿ ಕೆಲಸಮಾಡಿರುವ ವ್ಯಕ್ತಿಗಳನ್ನು ಬರಮಾಡಿಕೊಂಡು ಅವರಿಂದ ಪ್ರಬಂಧ ಮಂಡನೆ ಮಾಡಿಸಿ ಮುಕ್ತ ಚರ್ಚೆಗೆ ಅವಕಾಶ ಮಾಡಿಕೊಟ್ಟರು. ಆ ವಾರ್ಷಿಕ ವಿಚಾರಗೋಷ್ಠಿಗಳಿಗೆ ಬೆಂಗಳೂರು ನಗರದ ಎಲ್ಲ ಕನ್ನಡ ಅಧ್ಯಾಪಕರಲ್ಲದೆ ಸಾಹಿತ್ಯಾಸಕ್ತರೂ ವಿದ್ಯಾರ್ಥಿಗಳೂ ಕಿಕ್ಕಿರಿದು ಸೇರುತ್ತಿದ್ದರು. ಆ ಮೂರೂ ದಿನ ಸೆಂಟ್ರಲ್ ಕಾಲೇಜಿನ ಸೆನೆಟ್ ಭವನ ತುಂಬಿ ತುಳುಕಿಹೋಗುತ್ತಿದ್ದಿತು.

ಅವರು ಹೇಗೆ ಕವಿಗಳೋ ವಿಮರ್ಶಕರೋ, ಅಷ್ಟೇ ಒಳ್ಳೆಯ ಸಂಘಟಕರೂ ಆಗಿದ್ದರು. ಅತ್ಯುತ್ತಮ ಉಪಾಧ್ಯಾಯರಾಗಿದ್ದುದಲ್ಲದೆ ಅತ್ಯುತ್ತಮ ಮಾರ್ಗದರ್ಶಕರೂ ಆಗಿದ್ದರು. ಸೆಂಟ್ರಲ್ ಕಾಲೇಜ್ ಆವರಣದಿಂದ ಜ್ಞಾನಭಾರತಿಗೆ ಕನ್ನಡ ವಿಭಾಗವು ಸ್ಥಳಾಂತರಗೊಂಡ ಮೇಲೂ ಅದೇ ಚಟುವಟಿಕೆಗಳು ಮುಂದುವರಿದವು. ಎಲ್ಲ ವಿಷಯಗಳಲ್ಲೂ ಸಹೋದ್ಯೋಗಿಗಳ ಸಲಹೆಗಳನ್ನು ಪಡೆದು ಮುಂದುವರಿಯುತ್ತಿದ್ದುದರಿಂದ ಎಲ್ಲೂ ಅಸಮಾಧಾನಗಳಿಗೆ ಅವಕಾಶವಾಗುತ್ತಿರಲಿಲ್ಲ. ಪ್ರತಿಭಾಶಾಲಿ ಯುವಕರನ್ನು ಅವರು ಎಲ್ಲೆಡೆಗಳಿಂದ ಆಯ್ಕೆ ಮಾಡಿ ಇಡೀ ಕರ್ನಾಟಕದಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರವು ಅತ್ಯುತ್ತಮ ವಿಭಾಗಗಳಲ್ಲಿ ಒಂದು ಅಥವಾ ಅತ್ಯುತ್ತಮವಿಭಾಗ ಎಂದೇ ಕೀರ್ತಿಯನ್ನು ಪಡೆಯಿತು. ಶಿಸ್ತು, ಅಧ್ಯಯನಶೀಲತೆ, ಕ್ರಿಯಾಶೀಲತೆ, ಸಂಘಟನಾ ಚಾತುರ್ಯ, ಶ್ರಮ ಪ್ರಿಯತೆಗಳನ್ನು ಒಗ್ಗೂಡಿಸಿಕೊಂಡಿದ್ದ ಅವರ ಜೊತೆ ಸೇರಿ ನಾನು ಕೆಲಸಮಾಡಿ ಅಪಾರ ತೃಪ್ತಿಯನ್ನು ಅನುಭವಿಸಿದೆ. ತಮ್ಮದಲ್ಲದ ಕ್ಷೇತ್ರದ ಬಗ್ಗೆ ಅವರೆಂದೂ ಅನಾದರ ತೋರಿದವರಲ್ಲ. ಶ್ರೇಷ್ಠವೆಂದು ಕಂಡುದನ್ನು ಮುಕ್ತವಾಗಿ ಮೆಚ್ಚುವ ಹೃದಯವಂತಿಕೆ ಅವರಿಗೆ ಸ್ವಾಭಾವಿಕವಾಗಿತ್ತು.

ಅವರನ್ನು ಪಠ್ಯಪುಸ್ತಕ ಆಯ್ಕೆ ವಿಷಯದಲ್ಲಿ, ನಿರೀಕ್ಷಕ ಮಂಡಲಿಯಲ್ಲಿ ಹತ್ತಿರದಿಂದ ನೋಡಿದ್ದೇನೆ. ಸಣ್ಣತನ, ಪಕ್ಷಪಾತ ಅವರ ಬಳಿ ಎಂದೂ ಸುಳಿಯುತ್ತಿರಲಿಲ್ಲ. ಒಮ್ಮೊಮ್ಮೆ

ಅವರ ನೈಷ್ಠುರ್ಯ, ಸ್ವಲ್ಪ ಕಠಿಣ ಮಾತು ಇವುಗಳಿಗೆ ಕಾರಣ, ಅವರಿಗೆ ತಮ್ಮ ಪ್ರಾಮಾಣಿಕತೆಯ ಬಗ್ಗೆ ಇದ್ದ ಅಚಲ ವಿಶ್ವಾಸ. ಇವುಗಳಿಂದ ಅವರನ್ನು ತಪ್ಪು ತಿಳಿಯಲು ಸಾಧ್ಯವೇ ಇರಲಿಲ್ಲ. ಅವರ ಪ್ರೀತಿಯನ್ನು ಗಳಿಸುವ ಏಕೈಕ ಮಾರ್ಗ—ಪ್ರಾಮಾಣಿಕವಾಗಿ ಕೆಲಸಮಾಡುವುದು ಮಾತ್ರವಾಗಿತ್ತು.

ನಾಲ್ಕೈದು ವರ್ಷಗಳ ಹಿಂದೆ ಬೆಂಗಳೂರಿನ ಸಿಟಿ ಬಸ್ಸಿನಲ್ಲಿ ಒಬ್ಬ ವಿದ್ಯಾರ್ಥಿ ತಾನು ಕನ್ನಡ ಎಂ.ಎ. ವಿದ್ಯಾರ್ಥಿಯೆಂದು ಪರಿಚಯ ಮಾಡಿಕೊಂಡ. ಅವನು ಇದ್ದಕ್ಕಿದ್ದಂತೆ "ಸರ್, ಶಿವರುದ್ರಪ್ಪನವರು, ನೀವು ಇದ್ದಾಗ ನಮ್ಮ ಕನ್ನಡ ಡಿಪಾರ್ಟ್‌ಮೆಂಟ್ ಬಹಳ ಚೆನ್ನಾಗಿ ಇತ್ತಂತೆ ಈಗ....." ಎಂದು ಮುಂದಿನ ವಾಕ್ಯ ಹೇಳುತ್ತಿದ್ದಂತೆ ಅವನನ್ನು "ಸ್ವಲ್ಪ ನಿಲ್ಲಿ" ಎಂದು ಅವನ ಮಾತಿಗೆ ತಡೆಹಾಕಿದೆ. ಅವನ ಕೈಲಿದ್ದ ಪುಸ್ತಕವನ್ನು ಬಲಗೈಯಲ್ಲಿ ಹಿಡಿಮುಕೊಂಡು ನನ್ನ ಜೇಬಿನಲ್ಲಿದ್ದ ರೂಪಾಯಿ ನೋಟನ್ನು ಎಡಕೈಯಲ್ಲಿ ಹಿಡಿದೆ. "ನೋಡಿ ಇವೆರಡೂ ಕಾಗದಗಳೇ. ಆಗ ಇದು (=ಪುಸ್ತಕ) ಮುಖ್ಯವಾಗಿತ್ತು. ಈಗ ಇದು (=ನೋಟು) ಮುಖ್ಯವಾಗಿದೆ. ಅರ್ಥವಾಯಿತೇ?" ಎಂದೆ. ಅವನಿಗೆ ಅರ್ಥವಾಗದೇ ಇರುತ್ತದೆಯೇ. "ಹೌದು, ಅರ್ಥವಾಯಿತು" ಎಂದು ಹೇಳಿ ಮೌನವಾಗಿ ಕುಳಿತ.

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ತಮ್ಮದೇ ಪ್ರಭಾವವನ್ನು ಬೀರಿರುವಂತೆ, ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಚರಿತ್ರೆಯಲ್ಲಿ ಅಷ್ಟೇ ಪ್ರಮುಖ ಸ್ಥಾನವನ್ನು ಪಡೆದಿರುವ ಜಿಎಸ್‌ಎಸ್ ನನ್ನ ಹೆಮ್ಮೆಯ ಗುರುಗಳು, ನನ್ನ ಆತ್ಮೀಯ "ಮೇಷ್ಟು". ಇಂದಿಗೂ ಅವರ ಮತ್ತು ನನ್ನ ಕುಟುಂಬಗಳ ಸಂಬಂಧ ಅದೇ ಹಾರ್ದಿಕ ರೀತಿಯಲ್ಲಿ ಮುಂದುವರಿದಿದೆ. ಅಂತಹ ಆತ್ಮೀಯ ಗುರುವರ್ಯರು ದೊರಕುವುದು ಸಾಮಾನ್ಯ ಸಂಗತಿಯಲ್ಲ.

■

# ಮುಪ್ಪುರಿಗೊಂಡ ಪ್ರತಿಭೆ

ಡಾ|| ಟಿ. ವಿ. ವೆಂಕಟಾಚಲ ಶಾಸ್ತ್ರಿ

ನನ್ನ ಓರಗೆಯ ಆಚೀಚೆಯಲ್ಲಿರುವ ನಮ್ಮ ಕಾಲದ ಕನ್ನಡ ಸಾಹಿತಿಗಳಲ್ಲಿ ಡಾ. ಜಿ.ಎಸ್. ಶಿವರುದ್ರಪ್ಪನವರು ಒಬ್ಬ ವಿಸ್ಮಯದ ವ್ಯಕ್ತಿಯಾಗಿ ನನಗೆ ಕಾಣುತ್ತಾರೆ. ಅವರು ಎಂದೂ ವಾಮನನಾಗಿ ಇದ್ದವರಲ್ಲ, ತ್ರಿವಿಕ್ರಮನಾಗಿಯೇ ಎದ್ದವರು ಎಂದು ಇದರ ಅರ್ಥ. ಈ ತ್ರಿವಿಕ್ರಮನ ಮೂರು ಮುಖಗಳೇ ಕವಿತ್ವ, ವಿಮರ್ಶೆ ಮತ್ತು ವಾಗ್ಮಿತೆ. ನಮಗೆಲ್ಲ ಗುರುಗಳಾಗಿದ್ದ ಕವಿ ಕುವೆಂಪು ಅವರ ಶಿಷ್ಯತ್ವ, ಮಾರ್ಗದರ್ಶನ, ಹತ್ತಿರದ ಒಡನಾಟ ಇವೆಲ್ಲ ಇದ್ದವರ ಯೋಗ ಅದು. ಅಂಥವರಲ್ಲಿ ಜಿಎಸ್‌ಎಸ್ ಒಬ್ಬರು. ಹಾಗಾಗಿ ಜಾತಿ ಪಂಗಡಗಳ ಸೀಮೆ ಸಂಕೋಚಗಳನ್ನು ಮೀರಿ ಅವರ ವ್ಯಕ್ತಿತ್ವ, ವಿಚಾರಧಾರೆ, ಧ್ಯೇಯಾದರ್ಶಗಳು ಬೆಳೆದವು, ಬೆಳಗಿದುವು.

ಜಿಎಸ್‌ಎಸ್ ವ್ಯಾಸಂಗ ಎಂದೂ ಒಂದೇ ಮತಧರ್ಮದ ಕವಿಗಳಿಗೆ, ಗ್ರಂಥಗಳಿಗೆ ಸೀಮಿತವಾಗಲಿಲ್ಲ; ಅದು ಎಲ್ಲ ದೇಶಗಳ, ಎಲ್ಲ ಭಾಷೆಗಳ ಸಾಹಿತ್ಯವನ್ನೇ ಒಳಕೊಂಡು ಬೆಳೆದು ಫಲಕಾರಿಯಾಯಿತು, ಉದಾರವಾಯಿತು. ಸಾಹಿತ್ಯದಲ್ಲಿ ಮತಪ್ರವಣವಾದ ಅಂಶಗಳನ್ನು ಹುಡುಕಿಕೊಂಡು ಅವರು ಹೊರಡಲಿಲ್ಲ; ಅಲ್ಲಿ ಒಲವು ಚೆಲುವುಗಳ ತಾಣಗಳನ್ನಷ್ಟೇ ಹುಡುಕುತ್ತ, ಅಲ್ಲಿಯೇ ವಿಹಾರಮಾಡುತ್ತ, ಶುದ್ಧ ಸಾಹಿತ್ಯದ ನಿರ್ಮಲ ಸೌಂದರ್ಯಾರಾಧಕರಾದರು.

ಜಿಎಸ್‌ಎಸ್, ಸಾಹಿತ್ಯಕೃಷಿಯ ದೃಷ್ಟಿಯಿಂದ ಭಾಷೆ ವ್ಯಾಕರಣ ಛಂದಸ್ಸು ಮುಂತಾದ ಕ್ಷೇತ್ರಗಳತ್ತ ಹೊರಳದೆ ಹೋದರೂ ಅಲಂಕಾರಶಾಸ್ತ್ರ, ಕಾವ್ಯಮೀಮಾಂಸೆಯ ಸ್ವಯಂ ಪ್ರಭಾಗುಹೆಯ ರಮ್ಯ ದಿವ್ಯಸ್ಥಲಗಳಲ್ಲಿ ಧಾರಾಳವಾಗಿ ಸುಳಿದಾಡಿದ್ದಾರೆ. ಅವರ ಕವಿ ಮನೋಧರ್ಮಕ್ಕೆ ಇದು ಸ್ವಾಭಾವಿಕವಾದ ವಿದ್ಯಮಾನವೇ ಆಗಿದೆ. ಭಾಷಾಶಾಸ್ತ್ರ ಕ್ಷೇತ್ರದಲ್ಲಿ ತಮ್ಮ ತಿಳಿವಿಕೆಯ ಮಿತಿಯ ಬಗೆಗೆ ಹಲವು ದಶಕಗಳ ಹಿಂದೊಮ್ಮೆ ನನ್ನಲ್ಲಿ ಅವರು ಪ್ರಸ್ತಾಪಿಸಿದ್ದು ನಾನು ಮರೆತಿಲ್ಲ. "ಆ ತಿಳಿವಿಕೆಯ ಕೊರತೆಯಿಂದ ನಷ್ಟವೇನೂ ಇಲ್ಲ, ಅವರು ಒಲಿದಿರುವ ಕವಿಕಾವ್ಯಕರ್ಮದ ಸ್ವಕ್ಷೇತ್ರವೇ ಅವರಿಗೆ ವಿಹಾರಕ್ಕೆ ಸಾಕು" ಎಂಬುದಾಗಿ ನಾನು ಅವರಿಗೆ ಹೇಳಿದ್ದೂ ನನ್ನ ನೆನಪಿನಲ್ಲಿದೆ. ಅಲ್ಲದೆ ವಿಮರ್ಶೆಯ ನೆಲೆಯಲ್ಲಿ ಕನ್ನಡ ಸಾಹಿತ್ಯದ ಹಲವಾರು ಸಂಗತಿಗಳನ್ನು ಸಂದರ್ಭಗಳನ್ನು ಕುರಿತು ಅವರು

ರಚಿಸಿರುವ ಕೆಲವು ಗದ್ಯಪ್ರಬಂಧಗಳು ಅವರ ಸೃಜನಶೀಲ ವೈದುಷ್ಯದ ಸತ್ತ್ವಸಾಮರ್ಥ್ಯಗಳನ್ನು ಚೆನ್ನಾಗಿಯೇ ಎತ್ತಿ ಹಿಡಿದಿವೆ. ಅವುಗಳಲ್ಲಿ ಅವರು ಕಾಣಿಸಿರುವ ಒಳನೋಟಗಳೂ ಭಾಷೆ ಶೈಲಿಗಳ ಮನೋಹರತೆಯೂ ಅನನ್ಯವಾದವು. ಅಲ್ಲಿ ಜಿಜ್ಞಾಸೆ, ಅಂತರ್‌ದೃಷ್ಟಿ, ಅಭಿವ್ಯಕ್ತಿಕೌಶಲ ಮುಪ್ಪುರಿಗೊಂಡಿವೆ.

ನಮ್ಮ ಕಾಲದ ಕವಿಗಳಲ್ಲಿ, ನರಸಿಂಹಸ್ವಾಮಿಗಳು, ಅಡಿಗರು ಇವರ ಅನಂತರದಲ್ಲಿ ಹೆಸರಿಸಬಹುದಾದ ದೊಡ್ಡಕವಿಯೆಂದರೆ ಜಿಎಸ್‌ಎಸ್ ಎಂದೇ ನನ್ನ ತಿಳಿವಳಿಕೆ. ಅನೇಕ ಕವನ ಸಂಕಲನಗಳಿಂದ ಅವರ ಹೆಸರು ಬೆಳೆದಿದೆ, ಕಾವ್ಯಕ್ಷೇತ್ರ ಸಮೃದ್ಧವೂ ಆಗಿದೆ. ತಮ್ಮ ಕವಿತೆಗಳ ಮೂಲಕ ಹಾಡುವ ಹಕ್ಕಿಗಳಿಗೆ ನಿರಂತರವಾಗಿ ಕಾಳಿನ ಗುಟುಕು ಊಡುತ್ತಲೇ ಇದ್ದಾರೆ. ಆ ಪ್ರಸಿದ್ಧ ಕವಿಗಳಿಬ್ಬರ ಕವನಗಳ ಹಾಗೆಯೇ ಇವರ ಕವನಗಳು ಸಹ ಕನ್ನಡನಾಡಿನ ತುಂಬೆಲ್ಲ ನಿರಂತರವಾಗಿ ಅನುರಣಿಸುತ್ತಲೇ ಇವೆ.

ಡಾ. ಶಿವರುದ್ರಪ್ಪನವರ ಘನತೆಯನ್ನು ವಿಶೇಷವಾಗಿ ಹೆಚ್ಚಿಸಿರುವ, ನಾನು ವಿಶೇಷವಾಗಿ ಮೆಚ್ಚಿರುವ ಒಂದು ಸಂಗತಿಯೆಂದರೆ, ಅವರ ವಾಗ್ಮಿತೆ. ಈ ವಾಗ್ಮಿತೆ ಪ್ರವಾಹ ರೂಪದಲ್ಲಿ ಧುಮುಕುವ ವಾಚಾಲತೆಯ ವೈಖರಿಯಲ್ಲ, ವಾಗ್ವಿಜೃಂಭಣೆಯಲ್ಲ; ಸಂವಾದವಿರಲಿ, ಉಪನ್ಯಾಸವಿರಲಿ, ಸ್ಥಳ ಸನ್ನಿವೇಶಗಳು ಯಾವುವೇ ಇರಲಿ, ಎತ್ತಿಕೊಂಡ ವಿಷಯವನ್ನು ಒಂದು ಗೊತ್ತಾದ ಕಾಲಮಿತಿಯೊಳಗೆ, ಒಂದು ಒಳ್ಳೆಯ ಚೌಕಟ್ಟಿನ ಒಳಕ್ಕೆ ತಂದು, ನೆಮ್ಮದಿಯಾಗಿ, ತರ್ಕಬದ್ಧವಾಗಿ ವಿಶ್ಲೇಷಿಸುವ ಕೌಶಲ ಅವರಲ್ಲಿ ಉಂಟು. ಪೂರ್ವ ಪುಷ್ಕಳವಾದ ಸಿದ್ಧತೆಯಿಲ್ಲದೆ ಮಾತನಾಡುವುದು ತಮಗೆ ಸಾಧ್ಯವಾಗುವುದಿಲ್ಲ ಎಂದು ಅವರೊಮ್ಮೆ ನನಗೆ ಹೇಳಿದ್ದು ನನ್ನ ನೆನಪಿನಲ್ಲಿದೆ. ಆದರೆ ಮಾತನಾಡುವಾಗ ಅದು ಸಿದ್ಧಪಾಠವಾಗಿ ಇರುವುದಿಲ್ಲ, ವಿಕಾಸಗೊಂಡು ಸುತ್ತ ಪರಿಮಳ ಚೆಲ್ಲುವ ಪುಷ್ಪಗುಚ್ಛವಾಗಿರುತ್ತದೆ. ಅಲ್ಲಿ ವಾದವಿವಾದಗಳ ಗರ್ಜನೆ ಘರ್ಷಣೆಗಳಿಲ್ಲ, ಉದ್ರೇಕ ಉನ್ಮಾದಗಳಿಲ್ಲ; ಸೃಜನಶೀಲ ಪ್ರಕೃತಿಯ ಕವಿವ್ಯಕ್ತಿ ಸಹೃದಯತೆಯಿಂದ ನಿರ್ಮಿಸಿ ಸಜ್ಜುಗೊಳಿಸಿದ ಸುಂದರ ಶಾಬ್ದಿಕ ದೀಪಸ್ತಂಭ, ಅವರ ಒಂದೊಂದೂ ಉಪನ್ಯಾಸ. ಅದರಲ್ಲಿ ಕಾವ್ಯಾದರ್ಶಕಾರ ಹೇಳುವ ಅರ್ಥವ್ಯಕ್ತಿ ಗುಣವೂ ಅದಕ್ಕೆ ಸಂವಾದಿಯಾಗಿ ಕವಿರಾಜಮಾರ್ಗಕಾರ ಹೇಳುವ ಅಗ್ರಾಮ್ಯೋಕ್ತಿ ಗುಣ ಎರಡೂ ಏಕೀಭವಿಸಿರುತ್ತವೆ.

ಜಿಎಸ್‌ಎಸ್ ಮತ್ತು ನನ್ನ ಒಡನಾಟದ ಬಗ್ಗೆ ಈಗಾಗಲೇ ಒಮ್ಮೆ ನಾನು ಬರೆದಿದ್ದೇನೆ ('ಸ್ನೇಹಕಾರ್ತೀಕ' 1977, ಪು. 92-96). ಅಲ್ಲಿ ಅವರ ವ್ಯಕ್ತಿತ್ವದ ಕೆಲವು ಸೆಳಕುಗಳನ್ನು ಗುರುತಿಸಿದ್ದೇನೆ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಸಂಪಾದಕ ಸಮಿತಿಯ ಸದಸ್ಯರಾಗಿ ಒಟ್ಟಿಗೆ ಕೆಲಸ ಮಾಡುವಾಗ ಅವರ ಹೊಸಗನ್ನಡ ಕವಿ ಕಾವ್ಯ ಪ್ರಪಂಚದ ತಜ್ಞತೆಯನ್ನು ನಾನು ಮನಗಂಡಿದ್ದೇನೆ. ತಮ್ಮ ನೆನಪಿನಾಳದಿಂದ ಆಧುನಿಕ ಕನ್ನಡ ಕವಿಗಳ ಕವನಪಂಕ್ತಿಗಳನ್ನು ಅವರು ಹೆಕ್ಕಿತೆಗೆದು ಉದ್ಧರಿಸುತ್ತಿದ್ದ ಪರಿಗೆ ಅಚ್ಚರಿಗೊಂಡಿದ್ದೇನೆ. ಹಳೆಯ ಕವಿಗಳಲ್ಲಿ ಪಂಪ, ಬಸವಣ್ಣ ಅವರ ನೆಚ್ಚಿನ ಕವಿಗಳು.

ನನ್ನ ವಿಷಯದಲ್ಲಿ ಡಾ. ಶಿವರುದ್ರಪ್ಪನವರಿಗೆ ಒಳ್ಳೆಯ ಅಭಿಪ್ರಾಯ ಎಂದಿನಿಂದಲೂ ಇದೆ. ನನಗೆ ಏನಾದರೂ ಸಹಾಯ ಮಾಡುವುದು ಸಾಧ್ಯವೇ ಎಂದು ಅವರು ತವಕಿಸುತ್ತಾರೆ. ಇದು ನನ್ನ ಭಾಗ್ಯ. ಈಚೆಗೆ ತಮ್ಮ ಒಂದು ಕವನ ಸಂಕಲನದ ಛಂದಃಪ್ರಯೋಗದ ವಿಷಯದಲ್ಲಿ ನನ್ನ ಅಭಿಪ್ರಾಯಕ್ಕೆ ಅವರು ಪತ್ರ ಬರೆದಿದ್ದರು, ಅದಕ್ಕಾಗಿ ಒಂದೆರಡು ಬಾರಿ ದೂರವಾಣಿಕರೆ ಮಾಡಿಯೂ ಇದ್ದರು. ಪತ್ರದಲ್ಲಿ ನಾನು ಬರೆದಿದ್ದ ಕೆಲವು ಪಂಕ್ತಿಗಳನ್ನು ಪುಸ್ತಕದಲ್ಲಿ ಮುದ್ರಿಸಲು ಅನುಮತಿಗಾಗಿ ಮತ್ತೆ ನನ್ನನ್ನು ಸಂಪರ್ಕಿಸಿದಾಗ, ಅನುಮತಿಯ ಆವಶ್ಯಕತೆಯೇಕೆ ಎಂದು ಅವರಿಗೆ ನಾನು ತಿಳಿಸಿದೆ. ಆಗ ಅವರು ಹೇಳಿದ ಈ ಮಾತು ಅವರ ಸ್ವಭಾವದ ಇನ್ನೊಂದು ಮುಖವನ್ನು ಬೆಳಗಿ, ನನಗೆ ಅಚ್ಚರಿ ಹುಟ್ಟಿಸಿತು: "ಶಾಸ್ತ್ರಿಗಳೇ, ನೀವು ನನಗೆ ವೈಯಕ್ತಿಕವಾಗಿ ಬರೆದ ಪತ್ರದಲ್ಲಿ ನಿಮ್ಮ ಅಭಿಪ್ರಾಯ ತಿಳಿಸಿದ್ದಿರಿ, ಈಗ ಅದನ್ನು ನಾನು ಮುದ್ರಿತ ಪುಸ್ತಕದಲ್ಲಿ ಸಾರ್ವಜನಿಕ ಉದ್ದೇಶದಿಂದ ಬಳಸಿಕೊಳ್ಳುತ್ತಿದ್ದೇನೆ. ಹೀಗಿರುವಾಗ ನಿಮ್ಮ ಅನುಮತಿ ಕೇಳುವುದು ಸೂಕ್ತ" ಇದು ಅವರ ದೊಡ್ಡತನ.

ಅಖಿಲ ಭಾರತ ಸಾಹಿತ್ಯಸಮ್ಮೇಳನದ ಅಧ್ಯಕ್ಷತೆ, ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ, ಪಂಪ ಪ್ರಶಸ್ತಿ ಮುಂತಾದ ಗೌರವಗಳಿಗೆ ಭಾಜನರಾಗಿರುವ ಜಿಎಸ್‌ಎಸ್ ಅವರು ಯಾವುದೇ ಸಭೆ ಸಮಾರಂಭಗಳಲ್ಲಿ ಎದ್ದು ತೋರುವ ವ್ಯಕ್ತಿ. ದೇಶೀಯ ವೇಷ ಭೂಷಣಗಳಿಂದ ಶಿಸ್ತಾಗಿ ಕಾಣುವ ಅವರು ತಮ್ಮ ಲಾಘವವಿಲ್ಲದ, ಸರಸವೂ ಸರಳವೂ ಆದ ಮಾತುಕತೆಗಳಿಂದ ಎಲ್ಲರನ್ನೂ ಆಕರ್ಷಿಸಬಲ್ಲವರು; ಅಪಾರವಾಗಿ ಸ್ನೇಹಿತರ, ಅಭಿಮಾನಿಗಳ ಮತ್ತು ವಿದ್ಯಾರ್ಥಿಗಳ ಅಭಿಮಾನ ಆದರಗಳನ್ನು ಸಂಪಾದಿಸಿದ ಭಾಗ್ಯಶಾಲಿಗಳು. ಅವರಿಗೆ ಇನ್ನೂ ಇನ್ನೂ ಒಳ್ಳೆಯದನ್ನು ನಾನು ಹಾರೈಸುತ್ತೇನೆ.



# ಜೊತೆಗಾರ ಜಿಎಸ್‌ಎಸ್

**ಚೆನ್ನವೀರ ಕಣವಿ**

ಗೆಳೆಯ ಜಿ.ಎಸ್. ಶಿವರುದ್ರಪ್ಪನವರೂ ನಾನೂ ಸ್ನೇಹಭಾವದಲ್ಲಿ ಎಷ್ಟೊಂದು ಸಮರಸರಾಗಿದ್ದೇವೆಂದರೆ ನಮ್ಮಿಬ್ಬರ ಮೊದಲ ಪರಿಚಯ ಎಂದು ಮತ್ತು ಹೇಗೆ ಆಯಿತೆಂಬುದನ್ನು ಕೂಡ ಅದು ಮರೆಸಿಬಿಟ್ಟಿದೆ. ಆದರೆ ಇಷ್ಟು ಮಾತ್ರ ನಿಜ: ನಾವಿಬ್ಬರೂ ಇದ್ದ ಮೈಸೂರು, ಧಾರವಾಡಗಳ ಅಂತರವನ್ನು ಕಡಿಮೆ ಮಾಡಿ ಸ್ನೇಹ ಸೇತುವೆಯನ್ನು ನಿರ್ಮಿಸಿದ್ದು ಮಾತ್ರ ಕಾವ್ಯವೇ. ಇನ್ನೂ ವಿದ್ಯಾರ್ಥಿಗಳಾಗಿದ್ದಾಗ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ಕವಿತೆಗಳನ್ನು ಮೆಚ್ಚಿಕೊಂಡು ನಾವು ಪರಸ್ಪರ ಪತ್ರ ಬರೆಯಲು ಪ್ರಾರಂಭಿಸಿದೆವೆಂದು ತೋರುತ್ತದೆ. 'ಜಯಂತಿ'ಯಲ್ಲಿ ಪ್ರಕಟವಾದ ನನ್ನ 'ಮೇಘೋಪಾಸನೆ' ಕವಿತೆಯ ಬಗ್ಗೆ ಅವರು ಅಂಥ ಒಂದು ಪತ್ರ ಬರೆದದ್ದು (1948) ನನಗೆ ನೆನಪಿದೆ. ಆಮೇಲೆ ಅವರೊಮ್ಮೆ ಧಾರವಾಡಕ್ಕೆ ಬಂದು ಒಂದೆರಡು ದಿನ ನನ್ನ ಕೋಣೆಯಲ್ಲಿಯೇ ಇದ್ದರು. ನಾನು ಊಟಮಾಡುತ್ತಿದ್ದ ಖಾನಾವಳಿಯ ಜೋಳದ ರೊಟ್ಟಿ ಅವರಿಗೆ ರುಚಿಕೊಟ್ಟಿತು. ಈಗಲೂ ಧಾರವಾಡಕ್ಕೆ ಬಂದಾಗ ರೊಟ್ಟಿಯ ಊಟವನ್ನೇ ಅವರು ಹೆಚ್ಚು ಪ್ರೀತಿಸುತ್ತಾರೆ.

ಬಿ.ಎ. (ಪ್ರಥಮ ದರ್ಜೆಯಲ್ಲಿ) ಪಾಸಾಗಿ ದಾವಣಗೆರೆಯ ಇಂಟರ್‌ಮೀಡಿಯೇಟ್ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿ ಶಿವರುದ್ರಪ್ಪನವರು ಕೆಲಸ ಮಾಡುತ್ತಿರುವಾಗ (1949-51) ಕಾಲೇಜಿನ ಸುಪರಿಂಟೆಂಡೆಂಟರಾಗಿದ್ದ ದಿವಂಗತ ನಾ. ಕಸ್ತೂರಿಯವರೊಂದಿಗೆ ಅವರೊಮ್ಮೆ ಧಾರವಾಡಕ್ಕೆ ಬಂದರು. ಜೊತೆಗೆ ನಾಲ್ಕೈದು ಜನ ಅವರ ಸಹೋದ್ಯೋಗಿಗಳೂ ಇದ್ದರು. (ಅವರಲ್ಲಿ ಜಿ. ಬ್ರಹ್ಮಪ್ಪನವರೂ ಒಬ್ಬರು) ಕರ್ನಾಟಕ ಕಾಲೇಜಿನ ಹಾಸ್ಟೆಲೊಂದರಲ್ಲಿ ಪ್ರೊ. ಮಾಳವಾಡರು ಅವರಿಗೆಲ್ಲ ಏರ್ಪಾಡು ಮಾಡಿದ್ದರು. ಕರ್ನಾಟಕ ವಿಶ್ವವಿದ್ಯಾಲಯದ ಆಡಳಿತ ವಿಭಾಗದ ಕಟ್ಟಡಕ್ಕೆ ಅಡಿಗಲ್ಲನ್ನಿಡುವ ಸಮಾರಂಭ ಅದೇ ಸಂದರ್ಭದಲ್ಲಿ ಡಾ. ರಾಜೇಂದ್ರಪ್ರಸಾದರಿಂದ ನೆರವೇರಿತು (1950). ಆ ಸಂದರ್ಭಕ್ಕಾಗಿಯೇ ನಾ. ಕಸ್ತೂರಿಯವರು ತಮ್ಮ ಈ ಪ್ರವಾಸವನ್ನು ಯೋಜಿಸಿಕೊಂಡಿದ್ದರೆಂದು ತೋರುತ್ತದೆ. ಆಗ ಶಿವರುದ್ರಪ್ಪನವರು ತಮ್ಮ ಮಿತ್ರರೊಂದಿಗೆ ನನ್ನ ಕೋಣೆಗೂ ಬಂದರು. ನಾನು ಸ್ಟೋ ಹೊತ್ತಿಸಿ ಚಹ ಮಾಡಿಕೊಟ್ಟೆ. ಆ ಸಂದರ್ಭದಲ್ಲಿ ಜಿ. ಬ್ರಹ್ಮಪ್ಪನವರನ್ನು ನಿಮಿತ್ತಮಾಡಿಕೊಂಡು ಪರಸ್ಪರರು ಹಾಸ್ಯದ ಚಟಾಕಿಗಳನ್ನು ಹಾರಿಸುತ್ತ ವಿನೋದವಾಡಿದ್ದು ನನಗೆ ಚೆನ್ನಾಗಿ

ನೆನಪಿದೆ. ಹೋಗುವಾಗ ನನಗೂ ದಾವಣಗೆರೆಗೆ ಬರಲು ಶಿವರುದ್ರಪ್ಪನವರು ಆಮಂತ್ರಣ ನೀಡಲು ಮರೆಯಲಿಲ್ಲ.

ಮೈಸೂರು ವಿಶ್ವವಿದ್ಯಾಲಯದಲ್ಲಿ ಬಿ.ಎ. ಮಾಡಿದ ಎಚ್.ಎಸ್. ಯೋಗೀಶ ಕನ್ನಡ ಎಂ.ಎ. ಮಾಡಲು ಧಾರವಾಡಕ್ಕೆ ಬಂದು ನನ್ನ ಜೊತೆಗಿದ್ದರು. ಅವರೂ ದಾವಣಗೆರೆಯವರಾಗಿದ್ದು ಶಿವರುದ್ರಪ್ಪನವರ ಪರಿಚಯ ಮೊದಲೇ ಆಗಿತ್ತು. ಹೀಗಾಗಿ ನಾವು ದಾವಣಗೆರೆಯ ಪ್ರವಾಸ ಕೈಕೊಳ್ಳಲು (1951) ಅನುಕೂಲವಾಯಿತು. ಶಿವರುದ್ರಪ್ಪನವರೂ ಅದೇ ತಾನೆ ಅಲ್ಲಿ ಮನೆ ಮಾಡಿ ಸಂಸಾರ ಹೂಡಿದ್ದರು. ಒಂದು ದಿನ ಅವರ ಆ ಚಿಕ್ಕ, ಚೊಕ್ಕ ಮನೆಯಲ್ಲಿ ನಮಗೆಲ್ಲ ಸೊಗಸಾದ ಊಟವಾಯಿತು. ಅವರ ಕಾಲೇಜಿಗೆ ಕರೆದುಕೊಂಡು ಹೋದದ್ದಲ್ಲದೆ ತಮ್ಮ ವಿದ್ಯಾರ್ಥಿಗಳೆದುರು ನನ್ನಿಂದ ಒಂದು ಚಿಕ್ಕ ಭಾಷಣವನ್ನೂ ಮಾಡಿಸಿಬಿಟ್ಟರು. ಅಲ್ಲಿದ್ದ ಎರಡು ಮೂರು ದಿನ ತುಂಬ ಸಂತೋಷವಾಗಿ ಕಳೆದವು. ಊರಾಚೆಯ ಬಯಲಲ್ಲಿ ಸಂಜೆ ತಿರುಗಾಡಲು ನಾವು ಮೂವರೂ ಹೋಗಿ ಒಂದು ದಿಬ್ಬದ ಮೇಲೆ ಕುಳಿತಾಗ, ತಾವೂ ಪ್ರಭುಪ್ರಸಾದರೂ ದಿನವೂ ಇದೇ ದಿಬ್ಬದ ಮೇಲೆ ಬಂದು ಕೂಡುವದಾಗಿ ಶಿವರುದ್ರಪ್ಪನವರು ಹೇಳಿದರು. (ಅವರು ಬರೆದ ಹಾಸ್ಯಕವನಗಳಿಗಾಗಿ 'ದಿಬ್ಬಯ್ಯ' ಎಂಬ ಕಾವ್ಯನಾಮವನ್ನು ಕಸ್ತೂರಿಯವರು ಸೂಚಿಸಲು ಈ ದಿಬ್ಬವೇ ಕಾರಣವಂತೆ.)

ದಾವಣಗೆರೆಯಲ್ಲಿ ಶಿವರುದ್ರಪ್ಪನವರ ಆತ್ಮೀಯ ಗೆಳೆಯರಲ್ಲಿ ಜಯದೇವ ಸ್ಟುಡಿಯೋದ ಜಯದೇವ ಒಬ್ಬರಾಗಿದ್ದರು. ನಾವು ಅವರಲ್ಲಿ ಒಂದು ಫೋಟೊ ತೆಗೆಸಿದ ಹಾಗೆ ನೆನಪು. ಆದರೆ ಈ ಸ್ಟುಡಿಯೋದ ಅಟ್ಟದ ನೆನಪು ನನಗುಳಿದಿರುವುದು ಬೇರೆ ಕಾರಣದಿಂದ. ತಾವು ಬರೆದ ಕೆಲವು ಕವಿತೆಗಳನ್ನು ಶಿವರುದ್ರಪ್ಪನವರು ಆ ಅಟ್ಟದ ಮೇಲೆ ಕುಳಿತಾಗ ಹಾಡಿ ತೋರಿಸಿದರು:

ಅಂಧಕಾರ ಮುತ್ತುತಿದೆ
ಚಂದದ ಬೆಳಕಾರುತಿದೆ

* * *

ಜೀವ ಜಾತ್ರೆಯಲಿ
ಪ್ರಾಣ ಪಾತ್ರೆಯಲಿ ತುಂಬಿ ಬಾ
ರಸದುಂಬಿ ಬಾ, ಮೈದುಂಬಿ ಬಾ

* * *

ಎಲ್ಲಿ ಹೋಗುವಿರಿ, ನಿಲ್ಲಿ ಮೋಡಗಳೆ
ನಾಲ್ಕು ಹನಿಯ ಚೆಲ್ಲಿ

* * *

**ಇದಾವ ರಾಗ?**
**ಮತ್ತೆ-ಇದಾವ ರಾಗ?**
**ಎದೆಯಾಳದಿಂದೆದ್ದು ನಭನೀಲಿಗೇರುತಿದೆ—**

* * *

ತಮ್ಮದೇ ಆದ ರಾಗ-ಧಾಟಿಯಲ್ಲಿ ಅಂದು ಅವರು ಹಾಡಿ ತೋರಿಸಿದ ಪದ್ಯಗಳ ನೋವಿನ ಸಾಲುಗಳು ಇನ್ನೂ ನನ್ನ ಕಿವಿಯಲ್ಲಿ ಗುಣುಗುಣಿಸುತ್ತಿವೆ. (ಈ ಕವಿತೆಗಳು ಅವರ 'ಸಾಮಗಾನ' ಸಂಕಲನದಲ್ಲಿ ಆಮೇಲೆ ಪ್ರಕಟವಾದವು.) ಗೆಳೆಯ ಯೋಗೀಶ ಭಾವಗೀತ ಗಳನ್ನು ಹಾಡುವದರಲ್ಲಿ ಸ್ವಲ್ಪ ಉತ್ಸಾಹಿ. ಧಾರವಾಡಕ್ಕೆ ಬಂದ ಮೇಲೂ ಅವರು ಈ ಕವಿತೆಗಳನ್ನು ಆಗಾಗ ಹಾಡಿಕೊಳ್ಳುತ್ತಿದ್ದರು. ಜಯದೇವ ಸ್ಟುಡಿಯೋದ ಅಟ್ಟದ ಮೇಲೆ ಶಿವರುದ್ರಪ್ಪನವರು ಆಗಾಗ ಹೋಗಿ ಕುಳಿತುಕೊಳ್ಳುತ್ತಿದ್ದಾಗ ಸಮೀಪದ ಹೋಟೆಲಿನಿಂದ ಕೇಳಿಬರುತ್ತಿದ್ದ ಕೆಲವು ಒಳ್ಳೇ ಹಿಂದೀ ಸಿನೆಮಾ ಹಾಡುಗಳಿಗೆ ಕಿವಿಗೊಡುತ್ತಿದ್ದರಂತೆ. ಮುಂದೆ ತಾವು ಬರೆದ ಕವಿತೆಗಳಲ್ಲಿ ಆ ಧಾಟಿಯನ್ನೇ ಹಿಡಿದಿಡುತ್ತಿದ್ದರಂತೆ ಹೀಗೆಂದು ಸ್ಟುಡಿಯೋದ ಜಯದೇವ ಹಾಸ್ಯ ಮಾಡಿ ಹೇಳುತ್ತಿದ್ದರು.

1951ರ ವೇಳೆಗೆ ದಾವಣಗೆರೆಯಿಂದ ಮೈಸೂರಿನ ಯುವರಾಜಾ ಕಾಲೇಜಿಗೆ ವರ್ಗವಾಗಿ ಅವರು ಹೋದಮೇಲೆ ನಮ್ಮ ನಡುವೆ ಏಳೆಂಟು ವರುಷ ಪತ್ರವ್ಯವಹಾರ ನಿರಂತರವಾಗಿ ನಡೆಯಿತು. ಪತ್ರಗಳು ಆದಷ್ಟು ದೀರ್ಘವಾಗಿಯೇ ಇರುತ್ತಿದ್ದವು. ಹೊಸದಾಗಿ ಬರೆದ ಕವಿತೆಗಳನ್ನು ಪರಸ್ಪರರು ಕಳಿಸಿ ಅಭಿಪ್ರಾಯ ಪಡೆಯುತ್ತಿದ್ದೆವು. ಅವರ ಕೆಲವು ಕವಿತೆಗಳು ಧಾರವಾಡದ 'ಜಯಂತಿ', 'ಜಯಕರ್ನಾಟಕ'ದಲ್ಲಿ ಪ್ರಕಟಗೊಳ್ಳಲು ನಾನು ನೆರವಾಗಿದ್ದರೆ ನನ್ನ ಒಂದೆರಡು ಕವನಗಳು 'ಪ್ರಬುದ್ಧ ಕರ್ಣಾಟಕ'ದಲ್ಲಿ—ಅದೂ ಮುಖಪುಟದಲ್ಲಿ ಪ್ರಕಟಗೊಳ್ಳಲು ಅವರು ಕಾರಣರಾಗಿದ್ದರು.

1963ರಲ್ಲಿ ಶಿವರುದ್ರಪ್ಪನವರು ಉಸ್ಮಾನಿಯಾ ವಿಶ್ವವಿದ್ಯಾಲಯಕ್ಕೆ ಹೋದಮೇಲೆ ನಮ್ಮ ಪತ್ರಗಳ ನಡಿಗೆ ನಿಧಾನವಾಯಿತು. ಮೊನ್ನೆ ಹಿಂದಿನ ಫೈಲೊಂದನ್ನು ತಿರುವಿ ಹಾಕುತ್ತಿರುವಾಗ 1951ರಿಂದ 1956ರವರೆಗಿನ ಅವರ ಏಳೆಂಟು ಪತ್ರಗಳು ಸಿಕ್ಕಾಗ ಹಿಡಿಸಲಾರದಷ್ಟು ಸಂತೋಷವಾಯಿತು. ಮೂರು ದಶಕಗಳಿಗೂ ಹಿಂದಿನ ನೆನಪುಗಳು ಮತ್ತೆ ಮರುಕಳಿಸಿದವು. ಪತ್ರಗಳಲ್ಲಿಯೂ ತಮ್ಮ ವ್ಯಕ್ತಿತ್ವವನ್ನು ಪಡಿಮೂಡಿಸುವ ಬರವಣಿಗೆ ಅವರದು. ತಮ್ಮ ಅಂತರಂಗದ ಅನಿಸಿಕೆಗಳನ್ನು ಸಂಕೋಚವಿಲ್ಲದೆ ಪತ್ರಗಳಲ್ಲಿ ಅವರು ವ್ಯಕ್ತಪಡಿಸುವದುಂಟು. ನಿಸರ್ಗಪ್ರೇಮ, ಸೌಂದರ್ಯಾನುಭೂತಿ, ಕಾವ್ಯವಿಮರ್ಶೆ, ತತ್ತ್ವನಿಷ್ಠೆ, ಎರಡಿಲ್ಲದ ಸ್ನೇಹ, ಅಲ್ಲಲ್ಲಿ ವಿನೋದ—ಹೀಗೆ ಹಲವಾರು ಅಂಶಗಳು ಅವುಗಳಲ್ಲಿ ವ್ಯಕ್ತಗೊಂಡಿರುವುದನ್ನು ನೋಡಿದಾಗ ಇಂದಿಗೂ ಅದೇ ವ್ಯಕ್ತಿತ್ವ ಇನ್ನಷ್ಟು ದೃಢವಾಗಿ ಮೈದುಂಬಿಕೊಂಡು ಬೆಳೆದು ನಿಂತಿರುವುದು ಕಂಡುಬರುತ್ತದೆ.

ಪ್ರೇಕ್ಷಣೀಯ ಸ್ಥಳಗಳಿಗೆ ಪ್ರವಾಸ ಕೈಕೊಳ್ಳುವದು ಅವರ ಪ್ರಿಯವಾದ ಹವ್ಯಾಸಗಳಲ್ಲಿ

ಒಂದು. ('ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ', 'ಗಂಗೆಯ ಶಿಖರಗಳಲ್ಲಿ', 'ಅಮೇರಿಕದಲ್ಲಿ ಕನ್ನಡಿಗ'—ಈ ಪ್ರವಾಸ ಕಥನಗಳಲ್ಲಿ ಅವರ ಬರವಣಿಗೆಯ ಸೊಗಸನ್ನು ಸವಿಯಬಹುದು) ಒಂದು ದಸರಾ ರಜೆಯಲ್ಲಿ ಕೊಡಗಿನ ರಸವಿಹಾರವನ್ನು ಮುಗಿಸಿಕೊಂಡು ಬಂದದ್ದನ್ನು ಒಂದು ಪತ್ರದಲ್ಲಿ (16.10.1951) ಬಣ್ಣಿಸುತ್ತ ಮಡಿಕೇರಿಯ ಬಗ್ಗೆ ಬರೆದಿದ್ದರು.

"ಹೊಸದಾಗಿ ಕಂಡವರಿಗೆ ಅದು ಅಲಕಾವತಿಯೇ. ಏಕೆಂದರೆ ನಮ್ಮ ಕಾಲು ನೆಲದಲ್ಲಿದ್ದರೆ ನಮ್ಮ ತಲೆ ಆಕಾಶದಲ್ಲಿರುತ್ತದೆ—ಅಷ್ಟು ಹತ್ತಿರ ಅಲ್ಲಿ ಆಕಾಶ—ಅದು ಮೋಡವಾದಾಗ. ಮೋಡ ಚದುರಿ ಬಾನು ತಿಳಿಯಾದಾಗ ಬಲು ದೂರ." ತಮ್ಮ ಮುಂದಿನ ಪತ್ರದ ಜೊತೆಗೆ ಆಗ ಬರೆದ 'ಮಡಿಕೇರಿಯ ರಾಜಾಸೀಟ್ ಮೇಲಿನಿಂದ' ಎಂಬ ಕವಿತೆಯನ್ನು ಕಳಿಸಿಕೊಟ್ಟರು. ಇದು ಅವರ ಯಾವ ಕವನ ಸಂಗ್ರಹದಲ್ಲಿಯೂ ಬಂದಂತಿಲ್ಲ.

ಮಾನವ ಸಂಬಂಧಗಳಲ್ಲಿಯೂ ಗುಣಗೌರವದ ಆಯ್ಕೆ ಇದ್ದೇ ಇರುತ್ತದೆ. ಪು.ತಿ.ನ. ಅವರ ತಮ್ಮ ಪ್ರಥಮ ದರ್ಶನದ ಬಗ್ಗೆ ಅದೇ ಪತ್ರದಲ್ಲಿ (16.10.51) ಹೀಗೆ ಬರೆದಿದ್ದಾರೆ: "ಮಡಿಕೇರಿಯಿಂದ ಬಂದವನೇ ಬೆಂಗಳೂರಿಗೆ ಹೋದೆ ನನ್ನ ಗೆಳೆಯರೊಡನೆ. ಅಲ್ಲಿ ಕವಿಶ್ರೀ ಪು.ತಿ.ನರಸಿಂಹಾಚಾರ್ಯರ ದರ್ಶನವಾಯಿತು. ಅವರ ಮನೆಯಲ್ಲೇ ರಸದೂಟವೂ ಆಯಿತು ಒಂದು ದಿನ. ಎಂತೆಂತಹ ಹಿರಿಯ ವ್ಯಕ್ತಿಗಳು ಇದ್ದಾರೆ ಅಲ್ಲಲ್ಲಿ ಎನಿಸಿತು. ಅವರು ಒಳಗೂ ಮೃದು; ಹೊರಗೂ ಮೃದು. ತರುಣ ಲೇಖಕರ ಮೇಲೆ ಅಮಿತ ವಾತ್ಸಲ್ಯ. ಅವರಿಗೆ ನಮ್ಮನ್ನು ಕಂಡು ಏನೊ ಒಂದು ಭರವಸೆ: ನಿಮ್ಮ ಹೆಸರನ್ನು ಹೇಳಿದರು. ನಿಮ್ಮನ್ನು ಆಗಲೇ ಅಂದೊಮ್ಮೆ ನೋಡಿದ್ದರಂತೆ. ನನಗೆ ನನ್ನ ಕವನಗಳನ್ನು (ಇತ್ತೀಚಿನ) ಓದಿ ಅಮೂಲ್ಯವಾದ ಸಲಹೆಗಳನ್ನು ಕೊಟ್ಟರು." ಹೌದು, ಪು.ತಿ.ನ. ಅವರನ್ನು ಮೊದಲ ಸಲ ಕಂಡಾಗ (ಧಾರವಾಡದಲ್ಲಿ - 1950) ನನಗೂ ಇದೇ ಅನುಭವವಾಯಿತು.

ನಮ್ಮ ಕವನ ಸಂಗ್ರಹಗಳು ಪ್ರಕಟವಾದೊಡನೆಯೇ ಪರಸ್ಪರ ವಿನಿಮಯಗೊಳ್ಳುತ್ತಿದ್ದವು. ನಮ್ಮ ನಮ್ಮ ಅನಿಸಿಕೆ, ಅಭಿಪ್ರಾಯಗಳನ್ನು ಮುಕ್ತ ಮನಸ್ಸಿನಿಂದ ಪತ್ರಗಳಲ್ಲಿ ಬರೆಯುತ್ತಿದ್ದೆವು. ನನ್ನ 'ಆಕಾಶ ಬುಟ್ಟಿ', 'ಮಧುಚಂದ್ರ' ಹಾಗೂ 'ದಿ.ೀಪಧಾರಿ' ಸಂಗ್ರಹಗಳನ್ನು ಕುರಿತು ಅವರು ತಮ್ಮ ದಿ. 25.5.52, 22.11.54 ಹಾಗೂ 24.7.56ರ ಪತ್ರಗಳಲ್ಲಿ ಬರೆದ ವಿಮರ್ಶಾತ್ಮಕ ನುಡಿಗಳಿಂದ ನಾನು ಪ್ರಯೋಜನ ಪಡೆದದ್ದುಂಟು. ಅವರ 'ಸಾಮಗಾನ'ದ ಬಗ್ಗೆ ಬರೆಯುತ್ತ ಕುವೆಂಪು ಪ್ರಭಾವದಿಂದ ಬೇಗ ಪಾರಾಗಬೇಕೆಂಬ ನನ್ನ ವಿಚಾರವನ್ನು ಸೂಚಿಸಿದ್ದೆನೆಂದು ತೋರುತ್ತದೆ. ಅವರು ತಮ್ಮ ಉತ್ತರದಲ್ಲಿ (20.1.1952) ಹೀಗೆ ಬರೆದರು: "ಓದಿದೆ, ಸ್ನೇಹಪೂರ್ವವಾದ ನಿಮ್ಮ ನಿರ್ದೇಶವಾಣಿಗೆ ಮಣಿದೆ; ಒಪ್ಪಿದೆ. ನಿಜ. ನೀವು ಹೇಳುವುದೆಲ್ಲವೂ ನಿಜ. 'ಸಾಮಗಾನ' ಪ್ರಥಮಕೃತಿ ಎಂಬುದು ನಿಮಗೂ ಗೊತ್ತು. ಮುಂದೆ ಎಚ್ಚರಿಕೆಯಿಂದ ಅನ್ಯಪ್ರಭಾವದ 'ರಾಹು'ವಿನಿಂದ ವಿಮುಕ್ತನಾಗಲು ಪ್ರಯತ್ನಿಸುತ್ತೇನೆ. ಮನಸ್ಸಿಗೂ ಒಂದು ಬೆಳವಣಿಗೆ ಉಂಟು. ಮಿತ್ರರ ಎಚ್ಚರಿಕೆಯಿಂದ, ಹಿರಿಯರ ಹರಕೆಯಿಂದ, ಸೂಕ್ಷ್ಮವಾದ ಆತ್ಮ ನಿರೀಕ್ಷಣೆಯಿಂದ 'ತನ್ನ ವ್ಯಕ್ತತೆಯಲ್ಲಿ ತನ್ನ ಮುಕ್ತಿಯ

ಕಂಡು ಈ ಜೀವ ಸಫಲತೆಯ ಪಡೆಯಬಹುದು' ಎಂಬ ಆಶೆಯುಂಟು. ನಮ್ಮ ಪ್ರಯತ್ನಗಳ ಹಿಂದೆ ನಮ್ಮ ಏಳು ಬೀಳುಗಳ ಸೂತ್ರವನ್ನು ಹಿಡಿದ ಶಕ್ತಿಯೊಂದು ಉಂಟಲ್ಲ! ಯಾರು ಶಕ್ತಿಯೋ ಅದೇ ದಾರಿಯೂ ಆಗಿ ಬೆಳಕೂ ಆದೀತು". ಆಗಲೇ ಎಂಥ ಆಳವಾದ ವಿವೇಚನೆ! ಮುಂದುವರಿದು ಅದೇ ಪತ್ರದಲ್ಲಿ, "ಜೀವನದ ಕಹಿ ನನ್ನ ಅನುಭವಕ್ಕೆ ಧಾರಾಳವಾಗಿ ದಯಮಾಡಿಸಿದೆ. ಮೊದಲಿನಿಂದ ಇದುವರೆಗೂ ಸಿಹಿಗಿಂತ ಕಹಿಯನ್ನೇ ಹೆಚ್ಚಾಗಿ ಸವಿದರೂ ನನ್ನ ಕವನಗಳಲ್ಲಿ ಆ ತುಮುಲ ಅಷ್ಟು ಸ್ಪಷ್ಟವಾಗಿ ಮೂಡಿ ಬಂದಂತೆ ತೋರದಿರುವುದು ನನಗೇ ಆಶ್ಚರ್ಯ. ಬಹುಶಃ ಅದೆಲ್ಲವೂ 'ಮುಂದೆ ಕಟ್ಟಿಹುದು ಬುತ್ತಿ ಸರ್ವಜ್ಞ' ಎಂಬ ರೀತಿಯದೋ?" ಅಂದ ಹಾಗೆ ಅವರ ಮುಂದಿನ ಕವನ ಸಂಗ್ರಹಗಳಲ್ಲಿ ಆ 'ಕಟ್ಟಿದ ಬುತ್ತಿ'ಯನ್ನು ಅವರು ಧಾರಾಳವಾಗಿ, ಆದರೆ ಕಾವ್ಯದ ದೃಷ್ಟಿಯಿಂದ ರುಚಿಕರವಾಗಿ ಹಾಗೂ ಆರೋಗ್ಯಕರವಾಗಿ ಹಂಚಿಕೊಂಡಿದ್ದಾರೆಂಬುದನ್ನು ಕಾವ್ಯಪ್ರೇಮಿಗಳೆಲ್ಲರೂ ಬಲ್ಲರು.

ಕನ್ನಡ ಕಾವ್ಯದಲ್ಲಿ ನವ್ಯತೆ ಕಾಲಿಟ್ಟ ಕಾಲ ಅದು. ಪತ್ರಗಳಲ್ಲಿ ಆ ಬಗ್ಗೆ ನಮ್ಮ ವಿಚಾರಗಳನ್ನು ವಿನಿಮಯ ಮಾಡಿಕೊಂಡದ್ದುಂಟು. ನನ್ನ ಕಾವ್ಯದಲ್ಲಿಯ ನವ್ಯತೆಯನ್ನು ಅವರು ಗುರುತಿಸಿದ್ದು ಹೀಗೆ: (25.5.53) "ಪ್ರಕೃತಿಲೋಕ ಹೇಗೆ ನಿತ್ಯ ನವ್ಯವೋ ಅಂತೆಯೇ ನಿಮ್ಮ ಕವಿತೆ ಪ್ರಕೃತಿಯನ್ನು ಕುರಿತು ಬರೆದ ಇಂದಿನ ಹಲವು ಹಿರಿಯ ಕವಿಗಳ ಉಕ್ತಿಯಿಂದ ಅನ್ಯವಾಗಿ ವಿಶಿಷ್ಟತೆಯನ್ನು ಪಡೆದಿವೆ. ಆದುದರಿಂದ ವಿಶಿಷ್ಟತೆಯೇ ನವ್ಯತೆ ಎನಿಸಿದೆ ನನಗೆ." ನವ್ಯತೆಯ ಬಗ್ಗೆ ಅವರ ಧೋರಣೆ ಅಂದಿನಿಂದಲೂ ತನ್ನತನವನ್ನು ಕಾಪಾಡಿಕೊಂಡು ಗಟ್ಟಿಮುಟ್ಟಾಗಿ ನಿಂತದ್ದು ಮಹತ್ವದ ಸಂಗತಿಯಾಗಿದೆ. ಅದು ಅತ್ಯಂತ ಆರೋಗ್ಯಕರವಾದ ನಿಲುವು. 24.8.1953ರ ಪತ್ರದಲ್ಲಿ ಈ ಮಾತುಗಳಿವೆ: "ನವ್ಯತೆಯ ಬಗ್ಗೆ ನನಗೆ ರೋಮಾಂಚಕತೆ ಇಲ್ಲ. ಏಕೆಂದರೆ, ನಿಜವಾದ ನವ್ಯತೆ, ಒಂದು ರಚನೆ ಅಲ್ಲ, ವಿಕಾಸ—ಎಂಬುದನ್ನು ಕಂಡುಕೊಂಡವರಲ್ಲಿ ನಾನೊಬ್ಬ. ನನ್ನ ಒಳಗಿನ 'ನವ್ಯಕವಿ' ತಾನೊಬ್ಬ ಭಾರತೀಯನೆಂಬುದನ್ನು ಎಂತಹ ಹೊತ್ತಿನಲ್ಲೂ ಮರೆಯುವದಿಲ್ಲ. ಎಂತಹ ಕಷ್ಟ ಕಾರ್ಪಣ್ಯಗಳಲ್ಲೂ ಏನೊ ಒಂದು ಅದಕ್ಕೆ ಮೀರಿದ ಆನಂದ, ಆದರ್ಶಗಳನ್ನು ಕಾಣಬಲ್ಲನು."

ಕುವೆಂಪು ಬರಿಯ ಕವಿಯಾಗಿ ಅಲ್ಲ, ಮಹಾಲೇಖಕರಾಗಿಯೇ ಮೊದಲಿನಿಂದಲೂ ನನ್ನ ಮನಸ್ಸನ್ನು ತುಂಬಿಕೊಂಡಿದ್ದರು. ಅವರನ್ನು ಆಗ ನಾನು ಕಂಡಿರಲಿಲ್ಲವಾದರೂ ಶಿವರುದ್ರಪ್ಪನವರ ಪತ್ರಗಳ ಮೂಲಕ ಆಗಾಗ ಕೆಲವು ವಿಷಯಗಳನ್ನು ತಿಳಿದು ನನ್ನ ಜ್ಞಾನವನ್ನು ಹೆಚ್ಚಿಸಿಕೊಳ್ಳುತ್ತಿದ್ದೆ. 'ರಾಮಾಯಣ ದರ್ಶನ'ದ ಎರಡನೇ ಭಾಗ ನನ್ನ ಕೈಗಿನ್ನೂ ದೊರೆತಿರಲಿಲ್ಲ. ಆದರೆ ಅವರ ಪತ್ರದಿಂದ (5.11.51) ಆ ಬಗ್ಗೆ ಒಂದಿಷ್ಟು ವಿವರಗಳು ದೊರೆತು ಹರ್ಷಿತನಾದದ್ದುಂಟು. ಅದೊಂದು ಮಹತ್ತರ ದಾಖಲೆ ಎನಿಸಿದ್ದರಿಂದ ಪತ್ರದ ಆ ಭಾಗವನ್ನು ಇಲ್ಲಿ ಪೂರ್ತಿಮಾಡಿ ಕೊಡುತ್ತಿದ್ದೇನೆ. ಶಿವರುದ್ರಪ್ಪನವರ ವಿಮರ್ಶಕಶಕ್ತಿ ಆಗಲೇ ಎಷ್ಟೊಂದು ಸೂಕ್ಷ್ಮತೆ ಪಡೆದಿತ್ತೆಂಬುದಕ್ಕೂ ಇದು ನಿದರ್ಶನವಾಗಬಲ್ಲದು.

"ಮೊನ್ನೆ ಭಾನುವಾರ ಕುವೆಂಪು ಅವರ ಮನೆಗೆ ನಾವು ನಾಲ್ಕಾರು ವಿದ್ಯಾರ್ಥಿಗಳು ಹೋಗಿದ್ದೆವು. ಮೂರು ಗಂಟೆಗಳ ಕಾಲ 'ರಾಮಾಯಣ ದರ್ಶನ'ದ "ಅತ್ತಲಾದೈತ್ಯ ಸಭೆಯೋಳ್" ಎಂಬ ಅಧ್ಯಾಯವನ್ನು ಓದಿ ವಿವರಿಸಿದರು. ಆ ಭಾಗ ಅತ್ಯುತ್ತಮ ಭಾಗಗಳಲ್ಲಿ ಒಂದು. ಆ ಮಹಾಸಭೆಯಲ್ಲಿ ರಾಕ್ಷಸವೀರರ ಪರಿಚಯವಾಗುತ್ತದೆ. 'ಪ್ರಹಸ್ತ', 'ಮಹಾಪಾರ್ಶ್ವ', 'ಹಿರಣ್ಯಕೇಶಿ', 'ಇಂದ್ರಜಿತು', 'ವಿಭೀಷಣ' ಇವರ ಪಾತ್ರದ ಪರಿಚಯವಾಗುತ್ತದೆ. ಒಂದೊಂದು ಪಾತ್ರವೂ ವಿಶಿಷ್ಟ ಭವ್ಯವಾಗಿದೆ. ಆ ಸನ್ನಿವೇಶವನ್ನು ಅವರು ಬರೆದುದು ಎರಡನೆ ಮಹಾಯುದ್ಧ ನಡೆಯುವ ವೇಳೆಯಲ್ಲಿ—ಆಗ ಚರ್ಚಿಲ್ ಇತ್ಯಾದಿ ರಾಜಕಾರಣ ಪಟುಗಳು ತಮ್ಮ ದೇಶದ ಯುದ್ಧವೀರರ ಸ್ಫೂರ್ತಿಗಾಗಿ ಭಾಷಣ ಮಾಡುತ್ತಿದ್ದ ಕಾಲ. ಹೇಗೆ ರಾಜಕೀಯ ಪಟುಗಳು ಧರ್ಮವನ್ನು ನಿರ್ಲಕ್ಷಿಸಿ-ದೇಶಸೇವೆ ದೇಶಪ್ರೇಮ ಇತ್ಯಾದಿ ಮಾತುಗಳಿಂದ ಜನರೆದುರು ತಮ್ಮ ವಾಗ್ಝರಿಯನ್ನು ಹರಿಯಿಸುತ್ತಾರೆ ಎಂಬುದು ಆ ದೈತ್ಯಸಭೆಯಲ್ಲಿ ಮಾತನಾಡುವ ವೀರರಲ್ಲಿ ಪ್ರತಿಮಿತವಾಗಿದೆ.

ರಾವಣನ ಪಾತ್ರ ರಾಮನ ಪಾತ್ರಕ್ಕಿಂತಲೂ ಹೆಚ್ಚು ಭವ್ಯವಾಗಿದೆ ಎನ್ನುತ್ತಾರೆ. ರಾವಣ ಸೀತೆಯನ್ನು ತಂದುದು ಅವನ ಸಿದ್ಧಿಗಾಗಿಯೇ ಎಂಬುದು ಈಗ ತಿಳಿಯುತ್ತದೆ. ಬೆಂಕಿಯನ್ನಪ್ಪಿದ ವಸ್ತು ಬೆಂಕಿಯಿಂದಲೇ ಪರಿಶುದ್ಧವಾಗುವಂತೆ ರಾವಣ ಸೀತೆಯ ತಪಸ್ಸಿಗಿಂತ ಮಂಡೋದರಿಯ ತಪಸ್ಸಿನಿಂದ ಪರಿಶುದ್ಧನಾಗುತ್ತಾನೆ.

"ದಶಾನನ ಸ್ವಪ್ನಸಿದ್ಧಿ"—ಶ್ರೀ ಕುವೆಂಪು ಅವರು ಕನಸಿನಲ್ಲಿ ಕಂಡುದಂತೆ. ಅವರು ಹೇಳಿದರು—"ಆ ಕನಸು ಏಕೆ ಬಿತ್ತೋ". ಆ ಭವ್ಯದೃಶ್ಯವೆಲ್ಲವೂ ಸ್ಪಷ್ಟವಾಗಿ ಕಂಡಿತಂತೆ. ಆ ಕಾರೊಡಲಿನ ಕುದುರೆ, ಖಡ್ಗ ಹಸ್ತವೊಂದು ಇಳಿದು ಕತ್ತರಿಸಿದ ದೃಶ್ಯ; ರಾವಣ ಹೊಳೆಯಲ್ಲಿ ಮುಳುಗಿದುದು. ಕಡೆಗೆ ರಾವಣ ಕುಂಭಕರ್ಣರಿಬ್ಬರೂ ಶಿಶುಗಳಾಗಿ ವೈದೇಹಿಯ ತೊಡೆಯ ಮೇಲೆ ನಲಿದುದು (ಮುಂದೆ ಲವಕುಶ ವೃತ್ತಾಂತಕ್ಕೆ ಕನ್ನಡಿ ಹಿಡಿದಿದೆ) ಎಲ್ಲವನ್ನು ಅವರು ಇರುಳ ಕನಸಿನಲ್ಲಿ ಕಂಡರಂತೆ. "ಈ ರಾಮಾಯಣವನ್ನು ನಾನು ಬರೆಯಲಿಲ್ಲ, ನಾನು ಎಲ್ಲೆಲ್ಲಿ ನನ್ನ ಅಹಂಕಾರದಿಂದ ರಚಿಸಲು ತೊಡಗಿದೆನೋ ಅಂತಹ ಭಾಗಗಳನ್ನೂ, ನೂರಾರು ಪಂಕ್ತಿಗಳನ್ನೂ ಹರಿದು ಬಿಸುಟಿದ್ದೇನೆ. ಇದೀ ವಿಶ್ವಶಕ್ತಿಯೇ ಈ ಕೃತಿಸೃಷ್ಟಿಯಲ್ಲಿ ಭಾಗವಹಿಸಿದೆ. ಈ ಮಹಾಕಾವ್ಯದಲ್ಲಿ ಯಾವ ಒಂದು ಪಂಕ್ತಿಯೂ ರಸದೀಪ್ತವಾಗದಿಲ್ಲ. ಕಾವ್ಯ ಎಂಬುದು ಕವಿಯ ಜ್ಯೋತಿರ್ಮಯವಾದ ವ್ಯಕ್ತಿತ್ವದಿಂದ ದೀಪ್ತವಾದ ತೀರ್ಥ" ಎನ್ನುತ್ತಾರೆ. ಹಲವು ವರ್ಣನೆಗಳು, ಹಲವು ದೃಶ್ಯಗಳು—ಅವು ಸೃಜನೆಯಾಗುವ ವೇಳೆಗೆ ಜಗತ್ತು ತೆರೆದು ಅಂತಹ ಅನುಭವವನ್ನೆ ಆಯಾ ಕಾಲಕ್ಕೆ ಒದಗಿಸಿದೆಯಂತೆ. ಅದು ನಿಜವಾಗಿಯೂ "ಕಾವ್ಯಗೋಮಟ". "ಜಗತ್ತಿನ ಯಾವ ಮಹಾಕಾವ್ಯವೂ ಇದರ ಮಟ್ಟಕ್ಕೆ ಏರಲಾರದು 'ದರ್ಶನ'ದ ದೃಷ್ಟಿಯಿಂದ! ಇದು ಅರ್ಥವಾಗಬೇಕಾದರೆ ಸುಮಾರು ಒಂದೆರಡು ಶತಮಾನ ಕಾಯಬೇಕಾದೀತು."

ಕುವೆಂಪು ಕುರಿತು ಇನ್ನೊಂದು ಮಹತ್ವದ ಸಂಗತಿಯನ್ನು ದಿ. 3.4.52ರ ಪತ್ರದಲ್ಲಿ ಅವರು ಉಲ್ಲೇಖಿಸಿದ್ದಾರೆ: "ಈಗ ಕುವೆಂಪು ಅವರ ಮನಸ್ಸಿನಲ್ಲಿ 'ಆದಿಕವಿ ಸಂಭೂತಿ' ಎಂಬ ದೃಶ್ಯ ಚಂಪೂ ಕೃತಿಗೊಳ್ಳುತ್ತಿದೆಯಂತೆ. ದಿನದಿನವೂ ಬೆಳೆಯುತ್ತಿದೆಯಂತೆ. ಅದು ಇನ್ನೂ 'ಕೃತಿ'ಯಾಗಿ ಪ್ರಕಾಶಗೊಂಡಿಲ್ಲವಂತೆ. ಯಾವಾಗ ಬರೆಯುತ್ತೀರಿ? ಎಂದು ಕೇಳಿದ್ದಕ್ಕೆ 'ಬಹುಶಃ ಅದು ಈ ಜನ್ಮದಲ್ಲಿ ಆಗುವದೂ ಇಲ್ಲವೊ, ಮುಂದಿನ ಜನ್ಮಕ್ಕೆ ಮೀಸಲಾಗಿದೆಯೊ' ಎಂದು ನಿಡುಸುಯ್ದರು. ಇದರಿಂದ ಒಂದು ವಿಚಾರ ಸ್ಪಷ್ಟ. ಅವರು 'ರಾಮಾಯಣ ದರ್ಶನ' ಬರೆದರೂ, ಇನ್ನೂ ಪಡೆಯಬೇಕಾದ ಯಾವುದೊ ಒಂದನ್ನು ಪಡೆದಿಲ್ಲ ಎಂದು ತೋರುತ್ತದೆ 'ಆ' ಸಿದ್ಧಿ ಆದಿಕವಿ ಸಂಭೂತಿಯಲ್ಲಿ ಪರ್ಯವಸಾನವಾದೀತು. "ನಾನು ನನ್ನ ಈ ದೇಹ ಬಿಟ್ಟ ಮೇಲೆ ನನ್ನ ರಾಮಾಯಣದ ನಿತ್ಯ ಶರೀರವನ್ನು ಪ್ರವೇಶಿಸುತ್ತೇನೆ" ಎಂದರು. ಕವಿ ಕೃತಿಯಾಗಿ ಪರಿಣಮಿಸುವುದರಿಂದಲೇ ಕಾವ್ಯ ಎಷ್ಟು ಶತಮಾನಗಳಾದರೂ ನಿತ್ಯ ನೂತನವಾಗಿರುವದು."

ಕುವೆಂಪು ಅವರ ಅಂತರಂಗದ ಶಿಷ್ಯರಲ್ಲೊಬ್ಬರೂ, ಗಣ್ಯವಿಮರ್ಶಕರೂ ಆದ ಶಿವರುದ್ರಪ್ಪನವರ ಈ ಉಲ್ಲೇಖಗಳು ನಾಲ್ಕೈದು ದಶಕದಷ್ಟು ಹಿಂದಿನವಾದರೂ ಅವು ಇಂದಿಗೂ ಮಹತ್ವದ ದಾಖಲೆ ಎನಿಸುವುದರಲ್ಲಿ ಸಂದೇಹವಿಲ್ಲ.

"ಭಾಷೆ ಮತ್ತು ಭಾವಗಳ ಮೇಲೆ ಅವರಿಗೆ ಹತೋಟಿ ಇದೆ. ಚೆನ್ನಾಗಿ ಬರೆಯುತ್ತಾರೆ. ನವ್ಯತೆಯನ್ನು ಕೂಡಲೆ ತರಬೇಕೆಂಬ ಹಠವೇನೂ ಕಾಣುವುದಿಲ್ಲವಾದುದರಿಂದ ಅವರು ಮುಂದುವರಿದಂತೆ ಸಹಜವಾಗಿ ನವ್ಯತೆ ತಾನೇ ಬರುತ್ತದೆ" ಹೀಗೆ ನನ್ನ ಕಾವ್ಯದ ಬಗ್ಗೆ ಕುವೆಂಪು ಹೇಳಿದರೆಂದು ಶಿವರುದ್ರಪ್ಪನವರು ತಮ್ಮ 8.5.53ರ ಪತ್ರದಲ್ಲಿ ಕಾಣಿಸಿದ್ದರು. ಅಂದಿನ ಸಂದರ್ಭದಲ್ಲಿ ಈ ಮಾತುಗಳು ನನ್ನ ಕಾವ್ಯರಚನೆಯ ದೃಷ್ಟಿಯಿಂದ ನನಗೆ ತುಂಬ ಪ್ರೋತ್ಸಾಹದಾಯಕವಾಗಿ ಪರಿಣಮಿಸಿದವೆಂದು ಬೇರೆ ಹೇಳಬೇಕಿಲ್ಲ.

'ತೀರ್ಥವಾಣಿ'ಯಲ್ಲಿ ಸಂಗ್ರಹಗೊಂಡ ಪದ್ಯಗಳ ಅನುವಾದವನ್ನು ಶಿವರುದ್ರಪ್ಪನವರು ಎಷ್ಟೊಂದು ಶ್ರದ್ಧೆಯಿಂದ ನಿರ್ವಹಿಸಿದರು ಎಂಬುದಕ್ಕೆ 18.12.53ರ ಪತ್ರದಲ್ಲಿಯ ಈ ವಾಕ್ಯಗಳು ಸಾಕ್ಷಿಯಂತಿವೆ: "ಈ ವರ್ಷವೆಲ್ಲ ನಾನು ದೈವೀಕಾರ್ಯದಲ್ಲಿ ತೊಡಗಿದ್ದೇನೆ. ಅಥವ ಆ ದೈವೀ ಕೃಪೆ ನನ್ನನ್ನು ಅನುಗ್ರಹಿಸಿದೆ. ರಾಮಕೃಷ್ಣಾಶ್ರಮದವರು The Gospel of Ramakrishna ನನ್ನು ಕನ್ನಡಿಸುತ್ತಿದ್ದಾರೆ. ಅದರಲ್ಲಿ ಬರುವ ಕವನಗಳನ್ನು ಕನ್ನಡಕ್ಕೆ ಪರಿವರ್ತಿಸುವ ಕಾರ್ಯ ನನ್ನದಾಗಿದೆ. ಆಂಗ್ಲ ಭಾಷಾಂತರ ಮತ್ತು ಬಂಗಾಳಿ ಮೂಲ ಇಟ್ಟುಕೊಂಡು ಈ ಭಕ್ತಿಗೀತೆಗಳನ್ನು ಕನ್ನಡಕ್ಕೆ ಮಾಡುತ್ತಿದ್ದೇನೆ. ಸುಮಾರಾಗಿ ಕಾರ್ಯ ಮುಗಿಯುತ್ತ ಬಂದಿದೆ—ಮೂರು ತಿಂಗಳಿಂದಲೂ. ಹೀಗಾದರೂ ಆತ್ಮ ಉತ್ತಮ ಸಂಸ್ಕಾರ ಪಡೆಯಲೆಂಬುದು ಗುರುದೇವರ ಇಚ್ಛೆ. ನನ್ನ ಭಾಷಾಂತರಗಳನ್ನು ವಾರವಾರವೂ ಶ್ರೀ ಕುವೆಂಪು ನೋಡಿ ಸಲಹೆ ನೀಡುತ್ತಿದ್ದಾರೆ. ಕಾರ್ಯ ಸಾಗುತ್ತಿದೆ. ಇದರ ನಡುವೆ ನನ್ನ ಕವನಗಳನ್ನು-ಅಪರೂಪವಾಗಿ ಬರೆಯುತ್ತಿದ್ದೇನೆ."

ಶಿವರುದ್ರಪ್ಪನವರು ಗಂಭೀರ ಪ್ರವೃತ್ತಿಯವರಂತೆ ತೋರಿದರೂ ಹಾಸ್ಯಕ್ಕೆ, ವಿನೋದಕ್ಕೆ ಅವರ ಮನಸ್ಸು ಅಷ್ಟೇ ತೆರೆದುಕೊಂಡಿರುತ್ತದೆ. ಈ ವಿಷಯದಲ್ಲಿಯೂ ನಮ್ಮದು ಸಮಾನ ಮನೋಧರ್ಮ. ಅವರ ಜೊತೆಗೆ ಆತ್ಮೀಯವಾಗಿ ಸಂಭಾಷಣೆಗೆ ತೊಡಗಿದವರಿಗೆಲ್ಲ ಅದರ ಅನುಭವವಾಗದಿಲ್ಲ. ಅವರ ಪತ್ರಗಳಲ್ಲಿಯೂ ಅದು ಅಲ್ಲಲ್ಲಿ ಮಿನುಗಿರುವುದನ್ನು ಕಂಡು ನಾನು ಖುಷಿಪಟ್ಟಿದ್ದೇನೆ. ಕೆಲವನ್ನು ಇಲ್ಲಿ ಉದಾಹರಿಸಬಹುದು:

" 'ಕೊರವಂಜಿ'ಯಲ್ಲಿ 'ಮಂಜು', ಕವಿತೆ ಓದಿದಿರಾ? ಆ "ದಿಬ್ಬಯ್ಯ"ನಾನೇ. ಅದು ಹೇಗೆ ತಿಳಿಯಿತು ಸ್ವಾಮಿ ನಿಮಗೆ?" (5.11.51)

"ನಮ್ಮ 'ಮಗು' ಚೆನ್ನಾಗಿದೆ. ಆಗಲೇ ಮತ್ಸ್ಯಾವತಾರದಿಂದ ಕೂರ್ಮಾವತಾರಕ್ಕೆ ಕಾಲಿಟ್ಟಿದೆ" (20.1.52)

"ಹೌದು, ನನ್ನ ಕಾಗದ ನಿಮ್ಮ ಕಡೆಗೆ ಹೊರಟು ಬಹಳ ದಿನವಾಯಿತು. ಪರೀಕ್ಷೆಯ ಗಡಿಬಿಡಿ; ನನ್ನ ಎಂ.ಎ.ಯದು ಅಲ್ಲ. ಆ ಬೀಸುವ ದೊಣ್ಣೆ—ಮುಂದಿನ ವರುಷ, 1953ನೇ ಜೂನ್ ತಿಂಗಳಿಗೆ—ಇನ್ನೂ ದೂರವಿದೆ. ನಮ್ಮ ಕಾಲೇಜಿನ ಪರೀಕ್ಷೆಯಲ್ಲಿ ಹುಡುಗರನ್ನು ಕಾಯುವ ಕೆಲಸ. ಆ ನಿಶ್ಶಬ್ದವಾದ ಪರೀಕ್ಷಾ ಕೊಠಡಿಯಲ್ಲಿ, ಲೇಖನಿಗಳ ಕರಕರ ಕೊರೆತವೊಂದು, ಪೇಪರುಗಳ ಸರಸರ ಶಬ್ದವೊಂದು, ನಿರ್ಭಯವಾಗಿ, ಆ ಹುಡುಗರ ಬೆಳ್ಳೇರಿದ 'ಹಗಲೊಗೆದ ಚಂದ್ರಕಳೆಯಂತಿರುವ' ಮುಖಗಳನ್ನು ವೀಕ್ಷಿಸುತ್ತಾ ಓಡಾಡುವ ನಮ್ಮ ಕಾಲ ಸಪ್ಪಳವೊಂದು ಆ ಮೌನವನ್ನು ಭೇದಿಸುತ್ತವೆ" (3.4.52)

"ಗೆ. ಪ್ರಸಾದರು ಶಿವಮೊಗ್ಗೆಯಲ್ಲಿ ಸ್ವಸ್ಥವಾಗಿ 'ಗೃಹಸ್ಥ'ರಾಗಿದ್ದಾರೆ. ಪ್ರಭುಶಂಕರರು ಬೆಂಗಳೂರಿನ ರಾಮಕೃಷ್ಣಾಶ್ರಮದಲ್ಲಿ ಸಾಧನೆ ಮಾಡುತ್ತಿದ್ದಾರೆ. ನಾನು ಇಲ್ಲಿ ಏನನ್ನೂ ಮಾಡದೆ ಉಂಡಾಡಿಯಾಗಿದ್ದೇನೆ" (3.4.52)

"ಮೊನ್ನೆ ಶನಿವಾರ ಮಧ್ಯಾಹ್ನ-ಮಟಮಟ ಮಧ್ಯಾಹ್ನ-ಮಳೆಯ ಮೇಲೆ ಬಿರುಬಿಸಿಲು ಧಾಳಿ ಇಟ್ಟಾಗ, ನಾನು 'ಆನಂದವರ್ಧನನ ಕಾವ್ಯ ಮೀಮಾಂಸೆ'ಯ ರಸಚಕ್ರವ್ಯೂಹದಲ್ಲಿ ತೊಳಲುತ್ತಿದ್ದೆ. ಅದೋ ನೋಡಿ ಜುಲೈ ತಿಂಗಳ ಮೊದಲ ವಾರ ಬರುತ್ತಿದೆ—ಎಂ.ಎ. ಪರೀಕ್ಷೆ. ಅಧ್ಯಾಪಕನಾಗಿ ಇಷ್ಟು ದಿನ ವಿದ್ಯಾರ್ಥಿಗಳಿಗೆ ಪರೀಕ್ಷೆ ಮಾಡೀ ಮಾಡೀ ಪರೀಕ್ಷೆಯನ್ನು 'ಸಾಕ್ಷಿಪ್ರಜ್ಞೆ'ಯಲ್ಲಿ ನಿಂತು ರಸಾನುಭವ ಮಾಡುತ್ತಿದ್ದ ನನಗೇ ಈಗ ಪರೀಕ್ಷೆಗೆ ಕೊಡುವ ಪ್ರಸಂಗ ಬಂದು 'ಭಾವಾನುಭವ' ಆರಂಭವಾಗಿದೆ." (25.5.53)

"ಶ್ರೀ ರಾಜಗೋಪಾಲ್ ಸಿಗುತ್ತಾರೆ ತಾನೆ? ಕೊಂಚ ತಾಳ್ಮೆಯಿಂದ ಆಲಿಸುವುದಾದರೆ ಅವರು ತುಂಬ ಒಳ್ಳೆಯವರೆ. ಅವರು ತಮ್ಮ ನವ್ಯ ಕವಿತೆಗಳನ್ನೇ ಇಲ್ಲಿ ನನ್ನ ಕಿವಿಗೆ ತುಂಬೀ ತುಂಬೀ ಸುಸ್ತಾದರು. ಕವಿತೆಗಿಂತ ಕಥೆ ಬಹಳ ಸೊಗಸಾಗಿ ಸಿದ್ಧಿಸಿದೆ ಅವರಿಗೆ." (24.8.53)

"ಜಯಕುಮಾರ ಈಗ ಸ್ಕೂಲಿಗೆ ಹೋಗಿ ಬರುವ ಅಭಿನಯದಲ್ಲಿದ್ದಾನೆ. 'ಅಣ್ಣಾ ನಾನು ದೊಡ್ಡನಾಗಿದೀನಿ, ಅಲ್ವೇನಣ್ಣ' ಎಂದು ಘೋಷಿಸುತ್ತಾನೆ. ಆದರೂ 'ಗಿಡ್ದಲ್ಲಿ ಯಾಕೆ ಬಿಸ್ಕತ್ತು ಬಿಡಲ್ಲ?' ಎಂದು ಪ್ರಶ್ನಿಸಿ ದಿಗ್ಭ್ರಮೆಗೊಳಿಸುತ್ತಾನೆ" (22.11.54)

"ನನ್ನ ಥೀಸಿಸ್-ಬಹುದೊಡ್ಡ ತಲೆನೋವು. ವಿಷಯ, ಸೌಂದರ್ಯವನ್ನು ಕುರಿತದ್ದಾದರೂ, ಇಷ್ಟೊಂದು ಭಯಂಕರವಾಗಿರುತ್ತದೆಂದು ನಾನು ಭಾವಿಸಿರಲಿಲ್ಲ. ಈಗಂತೂ ಮುಗಿಲುದ್ದ ನಿಂತಿದೆ. ಚಂಡಿ ಚಾಮುಂಡಿಯನ್ನು ಒಲಿಸಿ, ಸೌಂದರ್ಯಲಕ್ಷ್ಮಿಯ ಸಂದರ್ಶನ ಮಾಡಬೇಕಾಗಿದೆ" (24.7.56)

ಈ ಪತ್ರ-ಚಿತ್ರಗಳನ್ನು ಬಿಡಿಸುತ್ತಾ ನನ್ನ ನೆನಪುಗಳನ್ನು ಇಲ್ಲಿ ಮೆಲುಕು ಹಾಕಿದ್ದೇನೆ. ಅವರ ಅನುಮತಿಯನ್ನು ಕೇಳದೆ ಧಾರಾಳವಾಗಿ ಪತ್ರಗಳನ್ನು ಈ ಲೇಖನದಲ್ಲಿ ಬಳಸಿಕೊಂಡದ್ದಕ್ಕೆ ಶಿವರುದ್ರಪ್ಪನವರು ಕ್ಷಮಿಸುತ್ತಾರೆಂಬ ಭರವಸೆಯೂ ನನಗಿದೆ.

*(ಮೂಲ: ದಾವಣಗೆರೆ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ)*



# ಸಫಲ ಕವಿ-ವಿಮರ್ಶಕ: ಜಿಎಸ್ಎಸ್

ಡಾ|| ಸಿ. ಎನ್. ರಾಮಚಂದ್ರನ್

ಸಾಧಾರಣವಾಗಿ, ನಾವು ಸೃಜನಶೀಲ ಮತ್ತು ಸೃಜನೇತರ ಎಂದು ವಾಂಙ್ಮಯವನ್ನು ವರ್ಗೀಕರಣಮಾಡಿ, ವಿಮರ್ಶೆಯನ್ನು ಸೃಜನೇತರ ವರ್ಗದಲ್ಲಿ ಸೇರಿಸಿ, ಉತ್ತಮ ಕವಿ ಉತ್ತಮ ವಿಮರ್ಶಕನಲ್ಲ (ಅಥವಾ ಉತ್ತಮ ವಿಮರ್ಶಕ ಉತ್ತಮ ಕವಿಯಲ್ಲ) ಎಂದು ಭಾವಿಸುತ್ತೇವೆ. ಆದರೆ, ಸಂಸ್ಕೃತ-ಕನ್ನಡ ಸಾಹಿತ್ಯ ಚರಿತ್ರೆಗಳನ್ನು ಸ್ಥೂಲವಾಗಿ ನೋಡಿದರೂ ಇಂತಹ ಭಾವನೆಗೆ ಕಾರಣವೇನೂ ಇಲ್ಲವೆಂದು ಸ್ಪಷ್ಟವಾಗುತ್ತದೆ. ಸಂಸ್ಕೃತ ಸಾಹಿತ್ಯದಲ್ಲಿ ದಂಡಿ, ಅಭಿನವ ಗುಪ್ತ, ರಾಜಶೇಖರ ಇತ್ಯಾದಿ ಮಹಾನ್ ಪ್ರತಿಭೆಗಳ ಒಂದು ಪರಂಪರೆಯೇ ಇದೆ. ಹಾಗೆಯೇ, ಕನ್ನಡದಲ್ಲಿ ನಾಗವರ್ಮನಿಂದ ಪ್ರಾರಂಭವಾದ ಈ ಪರಂಪರೆ ಆಧುನಿಕ ಕಾಲದಲ್ಲಿ ಕುವೆಂಪು, ಬೇಂದ್ರೆ, ಅನಂತಮೂರ್ತಿ ಮುಂತಾದವರನ್ನು ಒಳಗೊಳ್ಳುತ್ತದೆ. ಇಂತಹ ಕವಿ-ವಿಮರ್ಶಕರ ಪರಂಪರೆಯಲ್ಲಿ ಒಂದು ಎತ್ತರದ ಶಿಖರವೆಂದರೆ ಜಿಎಸ್ಎಸ್.

ಜಿಎಸ್ಎಸ್ ಎಂದೇ ಪ್ರೀತ್ಯಾದರಗಳಿಂದ ಕನ್ನಡಿಗರಿಗೆ ಚಿರಪರಿಚಿತವಾಗಿರುವ ಡಾ. ಜಿ.ಎಸ್. ಶಿವರುದ್ರಪ್ಪನವರು ಶ್ರೇಷ್ಠ ಕವಿಯೂ ಅಹುದು, ಶ್ರೇಷ್ಠ ವಿಮರ್ಶಕರೂ ಅಹುದು. ಇದುವರೆಗೆ ಅವರು (ವ್ಯಕ್ತಮಧ್ಯವೂ ಸೇರಿದಂತೆ) ಹದಿಮೂರು ಕವನಸಂಕಲನಗಳನ್ನು ಪ್ರಕಟಿಸಿದ್ದಾರೆ; ಹಾಗೆಯೇ, ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕೃತ ಕಾವ್ಯಾರ್ಥಚಿಂತನವೂ ಸೇರಿದಂತೆ ಹದಿನಾಲ್ಕು ವಿಮರ್ಶಾ ಗ್ರಂಥಗಳನ್ನು ಹೊರತಂದಿದ್ದಾರೆ. (ವಿಮರ್ಶಾತ್ಮಕ ಮುನ್ನುಡಿಗಳನ್ನು ಬರೆದು ಇವರು ಸಂಪಾದಿಸಿರುವ ಬೇರೆ ಸಂಕಲನಗಳೂ ಸಾಕಷ್ಟಿವೆ.) ಇಂತಹವರ ವಿಮರ್ಶೆಯ ಬಗ್ಗೆ ಒಂದು ಚಿಕ್ಕ ಲೇಖನವನ್ನು ಬರೆಯುವುದು ಅಸಾಧ್ಯ. (ಪ್ರತ್ಯೇಕವಾಗಿ ಇವರ ವಿಮರ್ಶೆಯನ್ನು ಕುರಿತೇ ಪಿಎಚ್.ಡಿ. ಸಂಪ್ರಬಂಧಗಳನ್ನು ಬರೆಯಬಹುದು. ಅಂತಹ ಸಾಹಸವನ್ನು ಯಾರಾದರೂ ಮಾಡಿದ್ದಾರೆಯೇ ಇಲ್ಲವೋ ಗೊತ್ತಿಲ್ಲ.)

ಆದ್ದರಿಂದ ನಾನು ಈ ಲೇಖನದಲ್ಲಿ ಒಂದು ಸೀಮಿತ ಗುರಿಯನ್ನಿಟ್ಟುಕೊಂಡಿದ್ದೇನೆ: ಜಿಎಸ್ಎಸ್ ವಿಮರ್ಶೆಯಲ್ಲಿ ನನಗೆ ವೈಯಕ್ತಿಕವಾಗಿ ಮುಖ್ಯವೆಂದು ಕಂಡ ಮತ್ತು ನಾನು ಅವರ ಮಾದರಿಯಿಂದ ಕಲಿತ ಕೆಲವು ಅಂಶಗಳನ್ನು ಮಾತ್ರ ಈ ಲೇಖನದಲ್ಲಿ

ಪ್ರಸ್ತಾಪಿಸುತ್ತೇನೆ. ಖಂಡಿತಾ ಈ ಲೇಖನದ ಉದ್ದೇಶ ಜಿಎಸ್‌ಎಸ್ ಸಮಗ್ರ ವಿಮರ್ಶೆಯ ವ್ಯಾಖ್ಯಾನವಲ್ಲ; ಮೌಲ್ಯಮಾಪನವಂತೂ ಅಲ್ಲವೇ ಅಲ್ಲ.

(1) ಮೊದಲನೆಯದಾಗಿ ನಾನು ಜಿಎಸ್‌ಎಸ್ ಅವರಲ್ಲಿ ಮೆಚ್ಚುವುದು ಅವರು ಅರ್ಜಿಸಿರುವ 'ವ್ಯುತ್ಪತ್ತಿ'—ಅವರಲ್ಲಿರುವ ಅಸಾಧಾರಣ ಬಹುಜ್ಞತೆ. ಇದು ಕಾವ್ಯವಿಮರ್ಶೆಗೆ ಹೇಗೋ ಹಾಗೆ ವಿಮರ್ಶೆಗೂ ಅತ್ಯವಶ್ಯಕವಾದ ಒಂದು ಮುಖ್ಯಗುಣ. ಈ ಗುಣವನ್ನು ನಾವು ಜಿಎಸ್‌ಎಸ್ ಅವರ ಪ್ರತಿಯೊಂದು ಕೃತಿಯಲ್ಲಿಯೂ, ಮುಖ್ಯವಾಗಿ **ಕಾವ್ಯಾರ್ಥ ಚಿಂತನ**ದಲ್ಲಿ ಕಾಣುತ್ತೇವೆ. ಜಿಎಸ್‌ಎಸ್ ಅವರಿಗೆ ಪ್ರಾಚೀನ ಹಾಗೂ ಅರ್ವಾಚೀನ ಕನ್ನಡ ಸಾಹಿತ್ಯ ಮತ್ತು ಕಾವ್ಯಮೀಮಾಂಸೆಯ ಆಳವಾದ ಪಾಂಡಿತ್ಯವಿದೆ; ಅಷ್ಟೇ ಆಳವಾದ ಪಾಂಡಿತ್ಯ ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳ ಸಾಹಿತ್ಯ ಹಾಗೂ ಕಾವ್ಯಮೀಮಾಂಸೆ/ ವಿಮರ್ಶೆಗಳಲ್ಲಿದೆ. ಈ ಕಾರಣದಿಂದಲೇ ಇವರು ಪಂಪ-ರನ್ನ-ಕುವೆಂಪು ಇವರುಗಳ ಬಗ್ಗೆ ಎಷ್ಟು ಅಧಿಕಾರಯುತವಾಗಿ ಚರ್ಚೆ ಮಾಡಬಲ್ಲರೋ ಅಷ್ಟೇ ಅಧಿಕಾರಯುತವಾಗಿ ಆನಂದವರ್ಧನ-ರಾಜಶೇಖರ-ಮಿಲ್ಟನ್-ಎಲಿಯಟ್ ಇವರುಗಳ ಬಗ್ಗೆಯೂ ಚರ್ಚಿಸಬಲ್ಲರು.

ಆಧುನಿಕ ಕನ್ನಡ ವಿಮರ್ಶೆಯ ಸಂದರ್ಭದಲ್ಲಿ ಈ ಅಂಶವನ್ನು ಒತ್ತಿ ಹೇಳಬೇಕು. ಏಕೆಂದರೆ, 20ನೆಯ ಶತಮಾನದ ಉತ್ತರಾರ್ಧದಲ್ಲಿ ಕನ್ನಡ ವಿಮರ್ಶೆಯನ್ನು ಗಂಭೀರವಾಗಿ ಕೈಗೆತ್ತಿಕೊಂಡ ಇಂಗ್ಲೀಷ್ ಪ್ರಾಧ್ಯಾಪಕರಿಗೆ, ಸಾಧಾರಣವಾಗಿ, ಪ್ರಾಚೀನ ಕನ್ನಡ-ಸಂಸ್ಕೃತ ಕಾವ್ಯ-ಕಾವ್ಯಮೀಮಾಂಸೆಯ ಆಳವಾದ ಜ್ಞಾನ ಇರಲಿಲ್ಲ. ಹಾಗೆಯೇ ಕನ್ನಡ ಪ್ರಾಧ್ಯಾಪಕರಿಗೆ ಇಂಗ್ಲಿಷ್ ಹಾಗೂ ಪಾಶ್ಚಿಮಾತ್ಯ ಕಾವ್ಯ-ಕಾವ್ಯ ಮೀಮಾಂಸೆಯ ಬಗ್ಗೆ ಪ್ರಭುತ್ವವೇನೂ ಇರಲಿಲ್ಲ. ಈ ಹೇಳಿಕೆಗೆ ಅಪವಾದವೆಂದು ಕೂಡಲೇ ಕಂಡುಬರುವ ಮಹನೀಯರೆಂದರೆ ಕನ್ನಡ ಪ್ರಾಧ್ಯಾಪಕರಾದ ತೀನಂಶ್ರೀ ಮತ್ತು ಇಂಗ್ಲಿಷ್ ಪ್ರಾಧ್ಯಾಪಕರಾದ ಕುರ್ತಕೋಟಿ. ಜಿಎಸ್‌ಎಸ್ ಇಂತಹ ವಿಶಿಷ್ಟ ವರ್ಗಕ್ಕೆ ಸೇರುತ್ತಾರೆ.

(2) ಪ್ರಾಯಃ, ಈ ಕಾರಣದಿಂದಲೇ ಎಂದು ತೋರುತ್ತದೆ, ಜಿಎಸ್‌ಎಸ್ ಅವರಲ್ಲಿ ನಾನು ಕಾಣುವ ಎರಡನೆಯ ಮುಖ್ಯ ಗುಣ ಅವರ ವಿಮರ್ಶೆಯಲ್ಲಿರುವ 'ಸಮತೋಲನ ದೃಷ್ಟಿ'. ಒಂದು ಕಡೆ, ಕನ್ನಡ ಪ್ರಾಧ್ಯಾಪಕರಾಗಿದ್ದೂ, ಕನ್ನಡ ಭಾಷೆ-ಸಾಹಿತ್ಯಗಳ ಬಗ್ಗೆ ಅಪಾರ ಪ್ರೀತಿಯಿದ್ದೂ, ಇವರು ಅನೇಕ 'ಉಗ್ರ ದೇಶೀವಾದಿ'ಗಳಂತೆ 'ಕನ್ನಡದ ಮುಗ್ಧ ಭಜನೆ' ಮಾಡುವುದಿಲ್ಲ. ಆಧುನಿಕ ನೆಲೆಯಿಂದ ಆಧುನಿಕ ಹಾಗೂ ಪ್ರಾಚೀನ ಕನ್ನಡ ಸಾಹಿತ್ಯವನ್ನು ವಸ್ತುನಿಷ್ಠವಾಗಿ ಅಧ್ಯಯನ ಮಾಡುವ 'ದೂರ'ವನ್ನು ಇವರು ಉಳಿಸಿ ಕೊಂಡಿದ್ದಾರೆ. ಹಾಗೆಂದೇ, "ಹಿಂದಿನ ಕನ್ನಡ ಕಾವ್ಯ ಪರಂಪರೆಯನ್ನು ನೋಡಿದರೆ, ವಸ್ತುವಿನಲ್ಲಿ ಹೇಗೆ ಅಂಥ ವೈವಿಧ್ಯತೆ ಇಲ್ಲವೋ ಹಾಗೆಯೇ ವಸ್ತು ವಿನ್ಯಾಸವಲ್ಲಿ ಅಥವಾ ತಂತ್ರ (technique)ದಲ್ಲಿಯೂ ಅಷ್ಟಾಗಿ ವೈವಿಧ್ಯತೆ ಕಾಣಿಸುವುದಿಲ್ಲ" (**ಸಮಗ್ರ ಗದ್ಯ** 3.63), "ಆದರೆ ಧರ್ಮದ ಅತಿಯಾದ ಅನುಸರಣದಿಂದಾಗಿ ಕನ್ನಡ ಸಾಹಿತ್ಯ ಎಷ್ಟರಮಟ್ಟಿಗೆ

ಕಳಪೆಯಾಗಿದೆ ಎನ್ನುವುದನ್ನು ನಾವು ಮರೆಯುವಂತಿಲ್ಲ" (ಸ.ಗ.:3:33)—ಎಂಬಂತಹ ಸಮರ್ಥ ತೀರ್ಮಾನಗಳನ್ನು ಜಿಎಸ್ಎಸ್ ಮಾತ್ರ ಕೊಡಬಲ್ಲರು.

ಹಾಗೆಯೇ, ಪಶ್ಚಿಮದ ಅತಿ ವ್ಯಾಮೋಹವೂ ಜಿಎಸ್ಎಸ್ ಅವರಲ್ಲಿಲ್ಲ; ಕನ್ನಡ ಆಧುನಿಕ ಸಾಹಿತ್ಯದಲ್ಲಿ ಎಲ್ಲವೂ ಇಂಗ್ಲಿಷ್‌ನಿಂದ ಬಂದುದು ಎಂಬ ನಿಲುವನ್ನು ಆಧಾರಸಹಿತವಾಗಿ ಇವರು ಖಂಡಿಸಬಲ್ಲರು. ನವೋದಯ ಕಾವ್ಯದ ಮೇಲೆ ಆಗಿರುವ ಇಂಗ್ಲಿಷ್ ಕಾವ್ಯದ ಪ್ರಭಾವವನ್ನು ಉತ್ಪ್ರೇಕ್ಷಿಸುವ ವಿಮರ್ಶಕರನ್ನು ಲಕ್ಷಿಸಿ ಜಿಎಸ್ಎಸ್ ಹೀಗೆ ಹೇಳುತ್ತಾರೆ: "ಎಷ್ಟೋ ವೇಳೆ ಪಾಶ್ಚಾತ್ಯ ರೊಮ್ಯಾಂಟಿಕ್ ಕಾವ್ಯದ ಪ್ರಚೋದನೆಯಿಂದ ನವೋದಯ ಕನ್ನಡ ಕಾವ್ಯ ಮೊದಲಾಯಿತೆಂಬ ಮಾತನ್ನು ಇಟ್ಟುಕೊಂಡು ಹೊಸಗನ್ನಡ ಕವಿತೆ ಸಾಧಿಸಿರುವುದೆಲ್ಲ ಒಂದಲ್ಲ ಒಂದು ರೀತಿಯಲ್ಲಿ ಇಂಗ್ಲಿಷ್ ಕವಿಗಳ ನೆರಳು ಎನ್ನುವಂಥ ಪ್ರಮಾದ ವಿಮರ್ಶೆಯ ಮಾತುಗಳನ್ನೂ ಕೆಲವರು ಆಡಿರುವುದುಂಟು.... ಸಾಮ್ಯದಿಂದ ಸ್ವಾಮ್ಯವನ್ನೇ ಶಂಕಿಸುವುದು ಸರಿಯಲ್ಲ" (ಸ.ಗ. 3:359). ಇಂತಹ ಸಮತೋಲನ ಚಿತ್ತವೃತ್ತಿ ಆಧುನಿಕ ಕನ್ನಡ ವಿಮರ್ಶೆಯಲ್ಲಿ ಅಪರೂಪ.

(3) ಜಿಎಸ್ಎಸ್ ವಿಮರ್ಶೆಯ ವ್ಯಾಪ್ತಿ ಅಪಾರ. ಅವರ ವಿಮರ್ಶಾ ಕೃತಿಗಳು ಕೇವಲ ಸಾಂದರ್ಭಿಕ ಲೇಖನಗಳ ಸಂಕಲನಗಳಲ್ಲ. ಕನ್ನಡ ಕಾವ್ಯಪರಂಪರೆ, ಕನ್ನಡ ಸಾಹಿತ್ಯ ಚಳುವಳಿಗಳು, ವಿಮರ್ಶೆಯ ಸ್ವರೂಪ, ಭಾರತೀಯ-ಪಾಶ್ಚಾತ್ಯ ಮಹಾಕಾವ್ಯಗಳು—ಇತ್ಯಾದಿಗಳ ಬಗ್ಗೆ ಆಳವಾಗಿ ಚಿಂತಿಸಿ, ಅವುಗಳ ಕೂಲಂಕುಷ ಚರ್ಚೆಯನ್ನು ಇವರ ವಿಮರ್ಶಾಕೃತಿಗಳಲ್ಲಿ ನಾವು ಕಾಣುತ್ತೇವೆ.

ಈ ಹೇಳಿಕೆಯನ್ನು ವಿವರಿಸಬೇಕಾದರೆ: ಇವರ ಮೊದಲನೆಯ ಕೃತಿ **ವಿಮರ್ಶೆಯ ಪೂರ್ವ-ಪಶ್ಚಿಮ** (1961) ವಿಮರ್ಶೆಯ ಸ್ವರೂಪ, ವಿಮರ್ಶಕನಲ್ಲಿರಬೇಕಾದ ಗುಣಗಳು, ವಿಮರ್ಶಾಕ್ರಮಗಳು ಇತ್ಯಾದಿಗಳನ್ನು ಚರ್ಚಿಸುತ್ತದೆ. **ಮಹಾಕಾವ್ಯ ಸ್ವರೂಪ** (1976) ಭಾರತೀಯ ಹಾಗೂ ಪಾಶ್ಚಾತ್ಯ ಮಹಾಕಾವ್ಯಗಳ ತೌಲನಿಕ ವಿಮರ್ಶೆಯನ್ನು ಸಮರ್ಥವಾಗಿ ಮಾಡುತ್ತದೆ. ಹಾಗೆಯೇ, ಇವರ ಪ್ರಸಿದ್ಧ **ಕಾವ್ಯಾರ್ಥ ಚಿಂತನ** (1983) ಭಾರತೀಯ-ಪಾಶ್ಚಾತ್ಯ ವಿಮರ್ಶಾ ತತ್ವಗಳ ಪ್ರಬುದ್ಧ ತೌಲನಿಕ ವ್ಯಾಖ್ಯಾನ. **ಕನ್ನಡ ಸಾಹಿತ್ಯ ಸಮೀಕ್ಷೆ** (1975), **ಕನ್ನಡ ಕವಿಗಳ ಕಾವ್ಯ ಕಲ್ಪನೆ** (1989) ಇತ್ಯಾದಿ ಕೃತಿಗಳು ವಿಶಿಷ್ಟ ಕನ್ನಡ ಸಾಹಿತ್ಯ ಚರಿತ್ರೆಗಳೇ ಆಗಿವೆ. ಎಂದರೆ, ಜಿಎಸ್ಎಸ್ ವಿಮರ್ಶೆ ಕಾವ್ಯಮೀಮಾಂಸೆ, ಸಾಹಿತ್ಯ ಚರಿತ್ರೆ, ತೌಲನಿಕ ಅಧ್ಯಯನ—ಇವೆಲ್ಲವುಗಳನ್ನೂ ಒಳಗೊಳ್ಳುತ್ತದೆ. ಆಧುನಿಕ ಕನ್ನಡ ವಿಮರ್ಶೆಯಲ್ಲಿ ಇಷ್ಟು ವ್ಯಾಪಕ ಹಾಗೂ ವೈವಿಧ್ಯಪೂರ್ಣ ವಿಮರ್ಶೆ ಮತ್ತೊಬ್ಬರಿಂದ ಬಂದಿಲ್ಲ ಎಂದು ಯಾವ ಸಂಕೋಚವೂ ಇಲ್ಲದೆ ಹೇಳಬಹುದು.

ಈ ಸಂದರ್ಭದಲ್ಲಿ ದಾಖಲಿಸಬೇಕಾದ ಮತ್ತೊಂದು ಅಂಶವೆಂದರೆ ತೌಲನಿಕ ಅಧ್ಯಯನವನ್ನು ವ್ಯಾಪಕವಾಗಿ ಹಾಗೂ ಸಮರ್ಥವಾಗಿ ಕನ್ನಡದಲ್ಲಿ ಬಳಕೆಗೆ ತಂದವರಲ್ಲಿ ಜಿಎಸ್ಎಸ್ ಮೊದಲಿಗರು. ನಿಜ, ಭಾರತೀಯ ಸಂದರ್ಭದಲ್ಲಿ ಟಾಗೋರ್ ಮತ್ತು

ಕನ್ನಡದ ಸಂದರ್ಭದಲ್ಲಿ ಕುವೆಂಪು ತೌಲನಿಕ ವಿಮರ್ಶೆಯನ್ನು ಮೊದಲಬಾರಿಗೆ ಪರಿಚಯಿಸುತ್ತಾರೆ. ಆದರೆ, ತೌಲನಿಕ ಅಧ್ಯಯನವನ್ನು ಒಂದು ಶಿಸ್ತಾಗಿ ಬೆಳೆಸಿದವರು ಜಿಎಸ್‌ಎಸ್. ಅಂತಹ ವಿಮರ್ಶೆಯ ಪ್ರಪ್ರಥಮ ವ್ಯಾಖ್ಯಾನವನ್ನು (ನನಗೆ ತಿಳಿದಿರುವಂತೆ) ಕೊಡುವವರೂ ಅವರೇ. 1961ರಷ್ಟು ಹಿಂದೆಯೇ ತೌಲನಿಕ ಅಧ್ಯಯನವನ್ನು ಅವರು ಹೀಗೆ ಗುರುತಿಸುತ್ತಾರೆ: "ತೌಲನ ವಿಮರ್ಶೆಗೆ ತೊಡಗುವ ವಿಮರ್ಶಕ ಈ ವಿಮರ್ಶನ ಕ್ರಮವನ್ನು ನಾಲ್ಕು ಘಟ್ಟಗಳಾಗಿ ಮಾಡಿಕೊಳ್ಳಬಹುದು". ಸಮಾನ ವಸ್ತು, ಸನ್ನಿವೇಶ, ವರ್ಣನೆ, ಪಾತ್ರ ಚಿತ್ರಣ ಮತ್ತು ಸಮಕಾಲೀನತೆ—ಈ ನೆಲೆಗಳಲ್ಲಿ ತೌಲನಿಕ ವಿಮರ್ಶೆ ನಡೆಯಬಹುದೆಂದು ಅವರು ಸೂಚಿಸುತ್ತಾರೆ; ಮತ್ತು ಪ್ರತಿಯೊಂದು ಬಗೆಯ ವಿಮರ್ಶೆಯನ್ನೂ ನಿದರ್ಶನಗಳ ಆಧಾರದ ಮೇಲೆ ವಿವರಿಸುತ್ತಾರೆ. (ಇಂದು 'ತೌಲನಿಕ ಅಧ್ಯಯನ' ಒಂದು ವ್ಯಾಪಕ ಶಿಸ್ತಾಗಿ ಬೆಳೆದಿದೆ: ಮತ್ತು ಇದರ ಮುಖ್ಯ ಗುರಿ ಸಾಂಸ್ಕೃತಿಕ ಚಿಂತನೆ ಎಂಬುದು ಬೇರೆಯೇ ಆದ ವಿಷಯ.)

(4) ವಿಮರ್ಶೆಯನ್ನು/ತಾತ್ವಿಕ ಚಿಂತನೆಯನ್ನು ನಾವೊಂದು 'ರಿಲೇ ರೇಸ್'ಗೆ ಹೋಲಿಸಬಹುದು. ಪ್ರತಿಯೊಬ್ಬ ಪ್ರಮುಖ ವಿಮರ್ಶಕನೂ ತನ್ನದೇ ಆದ ಹೊಸ ಮಾರ್ಗವನ್ನು ಸಾಧ್ಯವಿದ್ದಷ್ಟು ಕ್ರಮಿಸಬೇಕೆಂದು ನಾವು ಅಪೇಕ್ಷಿಸುತ್ತೇವೆ. ಈ ನೆಲೆಯಲ್ಲಿ ಜಿಎಸ್‌ಎಸ್ ಅವರ ಪ್ರತಿಯೊಂದು ಕೃತಿಯೂ/ಲೇಖನವೂ ನಮಗೆ ಕವಿ-ಕಾವ್ಯ-ಸಮಾಜವನ್ನು ಕುರಿತು ಹೊಸ ಅರಿವನ್ನು ಮೂಡಿಸುತ್ತದೆ, ನೂತನ ಪರಿಪ್ರೇಕ್ಷ್ಯವನ್ನು ಕಟ್ಟಿಕೊಡುತ್ತದೆ.

ಈ ಹೇಳಿಕೆಯನ್ನು ಸಮರ್ಥಿಸಲು ಅನೇಕ ನಿದರ್ಶನಗಳಲ್ಲಿ ಒಂದೆರಡನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಬಹುದು.

ಅ) **ಕನ್ನಡ ಸಾಹಿತ್ಯ ಸಮೀಕ್ಷೆ** ಒಂದು ಹೊಸ ಬಗೆಯ ಸಾಹಿತ್ಯ ಚರಿತ್ರೆ: ಕನ್ನಡ ಕವಿಗಳ ವಿಶ್ವದೃಷ್ಟಿ ಮತ್ತು ಕಾವ್ಯಮಾಧ್ಯಮ ಇವುಗಳ ನೆಲೆಯಲ್ಲಿ ಕನ್ನಡ ಸಾಹಿತ್ಯ ತನ್ನ ದೀರ್ಘ ಇತಿಹಾಸದಲ್ಲಿ ಆಗಾಗ್ಗೆ ಪಡೆದುಕೊಂಡ 'ತಿರುವು'ಗಳಿಗೆ ಒತ್ತುಕೊಟ್ಟು ಅವುಗಳನ್ನು 'ಕ್ರಾಂತಿಘಟ್ಟ'ಗಳೆಂದು ಪರಿಗಣಿಸಿ, ಸುಮಾರು ಸಾವಿರ ವರ್ಷಗಳ ಇತಿಹಾಸವನ್ನು ಈ ಕೃತಿಯಲ್ಲಿ ಜಿಎಸ್‌ಎಸ್ ದಾಖಲಿಸುತ್ತಾರೆ. ಇಂತಹ ಐತಿಹಾಸಿಕ ಸಮೀಕ್ಷೆಯ ನಂತರ ಜಿಎಸ್‌ಎಸ್ ಕೊಡುವ ಮೌಲಿಕ ತೀರ್ಮಾನವೆಂದರೆ ಇದು: "ಕನ್ನಡ ಸಾಹಿತ್ಯ ನಿಜವಾಗಿಯೂ ಬದಲಾದದ್ದು, ಪಂಪನ ನಂತರ ಎರಡೇ ಸಲ—ಮೊದಲನೆಯ ತಿರುವು, ವಚನಕಾರರ ಕಾಲದಲ್ಲಿ; ಎರಡನೆಯ ತಿರುವು ಆಧುನಿಕ ಸಾಹಿತ್ಯದಲ್ಲಿ" (ಸ.ಗ. 3:25).

ಆ) ಇದೇ ಕೃತಿಯಲ್ಲಿ ಮತ್ತೊಂದು ಗಂಭೀರ ಪ್ರಶ್ನೆಯನ್ನು ಜಿಎಸ್‌ಎಸ್ ಎತ್ತುತ್ತಾರೆ. (ಈ ಪ್ರಶ್ನೆಯನ್ನು ಇಲ್ಲಿಯವರೆಗೆ ಬೇರೆ ಯಾರೂ ಏಕೆ ಎತ್ತಲಿಲ್ಲ ಎಂಬುದು ವಿಮರ್ಶೆಯ ದೃಷ್ಟಿಯಿಂದ ತುಂಬಾ ಕುತೂಹಲದ್ದು.) ಪಂಪ, ರನ್ನಾದಿ ಕವಿಗಳು ಜೈನರು; ಮತ್ತು ಜೈನಧರ್ಮದ ಅಸ್ತಿಭಾರವೇ ಅಹಿಂಸೆ. ಹಾಗಿದ್ದೂ ಪಂಪ-ರನ್ನರು "ಅಂತರಂಗದಲ್ಲಿ ಅತ್ಯಂತ ಶ್ರದ್ಧೆಯಿಂದ ಒಪ್ಪಿಕೊಂಡ ಜೈನ ಧಾರ್ಮಿಕ ತತ್ವಗಳಿಗೆ ಬದ್ಧರಾಗಿಯೂ

'ವೀರಕಾವ್ಯ'ಗಳನ್ನು ಬರೆದದ್ದು ಯಾಕೆ? ಹಾಗೆ ಬರೆಯುವಾಗ ಯುದ್ಧ ಮೊದಲಾದವುಗಳನ್ನು ವೈಭವಿಸುವ ಅವರ ಬರವಣಿಗೆಯ ಮನಃಸ್ಥಿತಿಗೂ, ಅದಕ್ಕೆ ಸಂಪೂರ್ಣ ವಿರುದ್ಧವಾದ, ಅದೇ ಮನಸ್ಸಿನ ಧಾರ್ಮಿಕ ತತ್ತ್ವ ಪ್ರಣಾಲಿಗೂ ಘರ್ಷಣೆಯಾಗಿದ್ದಿರಲಾರದೆ?" (ಸ.ಗ. 3:101)

ಈ ಪ್ರಶ್ನೆಗೆ ಜಿಎಸ್ಎಸ್ ಕೊಡುವ ಉತ್ತರ ಪಂಪ-ರನ್ನರು ರೂಢಿಸಿಕೊಂಡ 'ಸಮನ್ವಯ ದೃಷ್ಟಿ'- ಆಗಮ ಮತ್ತು ಲೌಕಿಕ ಕಾವ್ಯಗಳ, ಲೌಕಿಕ ಭೋಗ ಮತ್ತು ಧಾರ್ಮಿಕ ಸಾಧನೆಗಳ, ಇಹ-ಪರಗಳ 'ಸಮನ್ವಯ'. ಈ ಉತ್ತರವನ್ನು ನಾವು ಒಪ್ಪಬಹುದು ಅಥವಾ ಬಿಡಬಹುದು; ಆದರೆ ಧರ್ಮ ಮತ್ತು ಕಾವ್ಯಗಳ ಘರ್ಷಣೆಯನ್ನು ಕುರಿತ ಈ ಪ್ರಶ್ನೆ ಅತ್ಯಂತ ರೋಚಕವಾದದ್ದು.

ಪಾಶ್ಚಾತ್ಯ ಮಹಾಕಾವ್ಯಗಳ ಚರಿತ್ರೆಯನ್ನು ನಾವು ಗಮನಿಸಿದರೆ, ಅಲ್ಲಿಯೂ ವರ್ಜಿಲ್ ನಂತರ ಯುರೋಪಿನ ಎಲ್ಲಾ ಕವಿಗಳು ಇಂತಹುದೇ ಘರ್ಷಣೆಯನ್ನು ಎದುರಿಸಿದುದನ್ನು ನಾವು ಕಾಣಬಹುದು. ಅವರ ಮುಂದಿದ್ದ ಸಮಸ್ಯೆ ಏನೆಂದರೆ ವೀರ ಯುಗದ, ವ್ಯಕ್ತಿ ಕೇಂದ್ರಿತ ಶೌರ್ಯ-ಧೈರ್ಯ-ಸಾಹಸ ಇತ್ಯಾದಿ ಗುಣಗಳು, ಮಾನವರಷ್ಟೇ ರಾಗದ್ವೇಷಗಳಿಂದ ತುಂಬಿದ ದೇವದೇವತೆಗಳು, ಮಾಟ-ಮಂತ್ರ-ಇವುಗಳನ್ನು ಒಳಗೊಂಡ ಅಭಿಜಾತ ಮಹಾಕಾವ್ಯಗಳನ್ನು ತ್ಯಾಗ, ಬಲಿದಾನ, ಅಹಿಂಸೆ, ಏಕದೇವೋಪಾಸನೆ ಮುಂತಾದ ಮೌಲ್ಯಗಳನ್ನು ಪುರಸ್ಕರಿಸುವ ಕ್ರಿಶ್ಚಿಯನ್ ಸಮಾಜದಲ್ಲಿ ಹೇಗೆ ಅಳವಡಿಸಿ ಕೊಳ್ಳಬೇಕು ಮತ್ತು ವ್ಯಾಖ್ಯಾನಿಸಬೇಕು? ಪ್ರತಿಯೊಬ್ಬ ಮಹತ್ವಾಕಾಂಕ್ಷೆಯ ಕವಿಯೂ ಒಂದಲ್ಲಾ ಒಂದು ಬಗೆಯ ತನ್ನದೇ ಆದ ರಾಜಿಸೂತ್ರವನ್ನು ಕಂಡುಕೊಳ್ಳಬೇಕಾಯಿತು. ಒಂದು ರಾಜಿಸೂತ್ರವೆಂದರೆ ತಮ್ಮ ಮಹಾಕಾವ್ಯದ ನಾಯಕನನ್ನು ಕ್ರಿಶ್ಚಿಯನ್ ಧರ್ಮ ರಕ್ಷಣೆಗಾಗಿ ಅನ್ಯಧರ್ಮೀಯರೊಡನೆ (ಮುಖ್ಯವಾಗಿ ಮುಸ್ಲಿಮರೊಡನೆ) ಹೋರಾಡುವ 'ವೀರಯೋಧ'ನಂತೆ ಚಿತ್ರಿಸುವುದು. (ಧರ್ಮರಕ್ಷಣೆಗಾಗಿ ಏನು ಮಾಡಿದರೂ ಅದು ಪುಣ್ಯಕಾರ್ಯ ತಾನೆ?) ಟ್ಯಾಸೋ, ಕಾಮೋಯನ್, ಇತ್ಯಾದಿ ಕವಿಗಳು ಈ ಮಾರ್ಗವನ್ನು ತಮ್ಮದಾಗಿಸಿಕೊಂಡರು. ಎರಡನೆಯ ರಾಜಿಸೂತ್ರವೆಂದರೆ ಇಡೀ ಕಾವ್ಯವನ್ನು ಒಂದು 'ಅನ್ಯೋಕ್ತಿ'ಯಂತೆ (allegory) ರಚಿಸುವುದು-ಡಾಂಟೆಯ ಮಾರ್ಗ. ಮತ್ತೊಂದು ಮಾರ್ಗವೆಂದರೆ, ಇಡೀ ಅಭಿಜಾತ ಕಾವ್ಯ ಪರಂಪರೆಯನ್ನು ತಿರಸ್ಕರಿಸಿ, ಧರ್ಮಗ್ರಂಥವಾದ ಬೈಬಲ್ ಅನ್ನು ಆಧರಿಸಿ 'ಕ್ರಿಶ್ಚಿಯನ್ ಮಹಾಕಾವ್ಯ'ವನ್ನು ರಚಿಸುವುದು, ಇದು ಮಿಲ್ಟನ್ ಆಯ್ಕೆ ಮಾಡಿದ ಮಾರ್ಗ. ಆದರೆ (ಪಂಪ-ರನ್ನರ 'ಸಮನ್ವಯ'ದಂತೆ) ಪ್ರತಿಯೊಂದು ಆಯ್ಕೆಯೂ ಸಂಪೂರ್ಣವಾಗಿ ಸಮಾಧಾನಕರವಲ್ಲದ 'ರಾಜಿಸೂತ್ರ'ವೆ.

ಇ) ಪ್ರತಿಯೊಂದು ಕನ್ನಡ ಮಹಾಕಾವ್ಯದ ಪ್ರಾರಂಭದಲ್ಲಿ ದೇವತಾ ಸ್ತುತಿ, ಕುಕವಿನಿಂದೆ, ಸತ್ಕವಿ ಪ್ರಶಂಸೆ, ಕಾವ್ಯ ಪ್ರಯೋಜನ ಇತ್ಯಾದಿಗಳನ್ನೊಳಗೊಂಡ 'ಪೀಠಿಕಾ ಪ್ರಕರಣ'ವು ಇರುತ್ತದೆ. ಸಾಮಾನ್ಯವಾಗಿ, ಆಧುನಿಕ ಓದುಗರು ಈ ಭಾಗವನ್ನು ಒಂದು

ಕಾವ್ಯ ಸಂಪ್ರದಾಯವೆಂದು ಕಂಡು ಅದನ್ನು ನಿರ್ಲಕ್ಷಿಸುತ್ತಾರೆ. ಆದರೆ, ಅಂತಹ ಪೀಠಿಕಾ ಪ್ರಕರಣಗಳ ಬಗ್ಗೆ ಮತ್ತು ಅವುಗಳು ನೀಡುವ ಒಳನೋಟಗಳ ಬಗ್ಗೆ ಮೊದಲು ನಮ್ಮೆಲ್ಲರ ಗಮನವನ್ನು ಸೆಳೆದವರು ಜಿಎಸ್‌ಎಸ್.

ಜಿಎಸ್‌ಎಸ್ ಅವರ ವಾದವೇನೆಂದರೆ ಕನ್ನಡ ಮಹಾಕಾವ್ಯಗಳ ಪೀಠಿಕಾ ಪ್ರಕರಣಗಳು "ಕೇವಲ ಲಾಕ್ಷಣಿಕರ ಕೃತಿಗಳಲ್ಲಿನದಕ್ಕಿಂತ ಭಿನ್ನವಾದ ಹಾಗೂ ತೀರಾ ಲವಲವಿಕೆಯ ಕಾವ್ಯ ಚರ್ಚೆಯೊಂದನ್ನು ಮಂಡಿಸುತ್ತವೆ" (ಸ.ಗ. 3:229). ಅರ್ಥಾತ್, ಜಿಎಸ್‌ಎಸ್ ಅವರ ದೃಷ್ಟಿಯಲ್ಲಿ ಇಂತಹ ಪೀಠಿಕಾ ಪ್ರಕರಣಗಳು ಕನ್ನಡ ಕಾವ್ಯದ 'ಸ್ವಾಭಿಮುಖತೆ'ಯ ನಿದರ್ಶನಗಳು. ಈ ಭಾಗದಲ್ಲಿ ಇವರು ಕಾವ್ಯ ಸ್ವರೂಪವನ್ನು ಕುರಿತಂತೆ ಪಂಪನ "ಇದು ನಿಚ್ಚಂ ಪೊಸತು ಅರ್ಣವಂಬೊಲತಿ ಗಂಭೀರಂ ಕವಿತ್ವಂ" ಎಂಬ ಹೇಳಿಕೆಯನ್ನು "ಪ್ರಜ್ಞಾ ನವನವೋನ್ಮೇಷಶಾಲಿನಿ" ಎಂಬ ಸಂಸ್ಕೃತ ಅಲಂಕಾರಿಕರ ಉಕ್ತಿಯೊಡನೆ ಹೋಲಿಸುತ್ತ ಪಂಪನದು "ವಿಶೇಷಾರ್ಥವನ್ನು ಧ್ವನಿಸುವ ಕಾವ್ಯಸೂತ್ರವಾಗಿದೆ. ನಿಜವಾದ ಕಾವ್ಯದ ಲಕ್ಷಣ ಎಂದರೆ ಅದು ಸದಾ ಹೊಸತಾಗಿರುವುದು" (ಸ.ಗ. 3:242) ಎಂದು ವ್ಯಾಖ್ಯಾನಿಸುತ್ತಾರೆ. ಹೀಗೆಯೇ, ನಾಗಚಂದ್ರ ಮತ್ತು ನೇಮಿಚಂದ್ರರ ಉಕ್ತಿಗಳೂ ಕಾವ್ಯಚಿಂತನೆಯನ್ನು ಕುರಿತು ಎಷ್ಟು ಅರ್ಥಪೂರ್ಣವಾಗಿವೆ ಎಂಬುದನ್ನು ಇವರು ವಿವರಿಸುತ್ತಾರೆ. ನೇಮಿಚಂದ್ರನ **ಲೀಲಾವತಿ**ಯಲ್ಲಿ ಬರುವ 'ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ' ಎಂಬ ಪದ್ಯ ಹೇಗೆ ಕಾವ್ಯಮೀಮಾಂಸೆಯಲ್ಲಿ ಅತಿ ಮುಖ್ಯವಾಗುವ 'ಕಾವ್ಯ ಸತ್ಯ ಚಾರಿತ್ರಿಕ ಸತ್ಯಕ್ಕಿಂತ ಬೇರೆಯಾದುದು' ಎಂಬ ಸಂಗತಿಯನ್ನು ದಾಖಲಿಸುತ್ತದೆ ಎಂದು ಜಿಎಸ್‌ಎಸ್ ಚರ್ಚಿಸುತ್ತಾರೆ. ಸ್ವಲ್ಪದರಲ್ಲಿಯೇ ಹೇಳಬೇಕಾದರೆ ಕನ್ನಡ ಕವಿಗಳ ಕಾವ್ಯ ಕಲ್ಪನೆ ಎಂಬ 75 ಪುಟಗಳ ಪ್ರೌಢ ಪ್ರಬಂಧ ಜಿಎಸ್‌ಎಸ್ ಅವರ ಸ್ವೋಪಜ್ಞ ಚಿಂತನೆಗೂ ಮತ್ತು ವಿಶ್ಲೇಷಣಾ ಸಾಮರ್ಥ್ಯಕ್ಕೂ ಶ್ರೇಷ್ಠ ನಿದರ್ಶನ.

(5) ಜಿಎಸ್‌ಎಸ್ ಅವರ ವಿಮರ್ಶೆಯಲ್ಲಿ ನನಗೆ ಕಂಡುಬರುವ ಮತ್ತೊಂದು ಅನುಕರಣೀಯ ಗುಣವೆಂದರೆ ಅವರು ಬಳಸುವ ಭಾಷೆ. ವಿಮರ್ಶೆಯಲ್ಲಿಯೂ ಕುವೆಂಪು, ಪುತಿನ ಮುಂತಾದವರು ಬಳಸುವ ಭಾಷೆ ಸಂಸ್ಕೃತ ಭೂಯಿಷ್ಠ 'ಕಾವ್ಯಭಾಷೆ'; ರಂಗಣ್ಣನವರದು 'ನಾಟಕೀಯ'; ನವ್ಯ ವಿಮರ್ಶಕರದು, ಸ್ಥೂಲವಾಗಿ, 'ವಾದಶೀಲ'. ಆದರೆ ಜಿಎಸ್‌ಎಸ್ ಅವರ ವಿಮರ್ಶೆಯ ಭಾಷೆ ಇವೆರೆಲ್ಲದಕ್ಕಿಂತಲೂ ಭಿನ್ನ. ಇವರು ಸಾಧ್ಯವಿದ್ದಷ್ಟೂ ನಿರ್ಭಾವುಕವಾದ ಆದರೆ ಲವಲವಿಕೆಯಿಂದ ಕೂಡಿದ ಭಾಷೆಯನ್ನು ಉಪಯೋಗಿಸುತ್ತಾರೆ. ಆದ್ದರಿಂದ, ಇವರ ಬರಹಗಳಲ್ಲಿ ಸ್ಪಷ್ಟತೆ, ಸತಾರ್ಕಿಕತೆ ಮತ್ತು ಸಹೃದಯತೆ ಎದ್ದು ಕಾಣುತ್ತವೆ.

ಹಾಗೆಯೇ ಹಿರಿಯ ವಿಮರ್ಶಕನಲ್ಲಿರಬೇಕೆಂದು ನಾವು ಕಲ್ಪಿಸಿಕೊಳ್ಳುವ ಶ್ರೀಮದ್ಗಾಂಭೀರ್ಯದಿಂದ ಆಗಾಗ್ಗೆ ಹೊರಬರಲು ಜಿಎಸ್‌ಎಸ್ ಅವರಿಗೆ ಗೊತ್ತಿದೆ. ಗಂಭೀರವಾಗಿ ಒಂದು ವಾದವನ್ನು ಮಂಡಿಸುತ್ತಿರುವಂತೆಯೇ ಆಗಾಗ್ಗೆ ತಿಳಿಹಾಸ್ಯವನ್ನು

ತರಲೂ ಇವರು ಹಿಂಜರಿಯುವುದಿಲ್ಲ; "ನಿದರ್ಶನಕ್ಕೆ ಚಂದ್ರೋದಯ ವರ್ಣನೆ ಅಷ್ಟಾದಶ ವರ್ಣನೆಗಳಲ್ಲಿ ಒಂದು. ಚಂದ್ರೋದಯವೆಂದರೆ ಸೂಳೆಗೇರಿಯ ವರ್ಣನೆಗೆ ಸುವರ್ಣಾವಕಾಶ" (ಸ.ಗ. 3:191). ಇಂತಹ ಚೇಷ್ಟೆಯ ಲಘುಧಾಟಿಯೂ ವಿಮರ್ಶಕನಿಗೆ ಅಗತ್ಯ.

ಈ ಲೇಖನವನ್ನು ಮುಗಿಸುವ ಮೊದಲು ಜಿಎಸ್‌ಎಸ್ ಅವರ ವಿಮರ್ಶೆಯ ಮಿತಿಗಳ ಬಗ್ಗೆ ಕೆಲವರು ಎತ್ತಿರುವ/ಎತ್ತಬಹುದಾದ ಕೆಲವು ಅಂಶಗಳನ್ನು ಈ ಸಂದರ್ಭದಲ್ಲಿ ಗಮನಿಸಬಹುದು. (ಈ ಸಂದರ್ಭದಲ್ಲಿ ನಾನು ಚರ್ಚಿಸುವ ಅನೇಕ ಅಂಶಗಳು ಜಿಎಸ್‌ಎಸ್ ಅವರ ವಿಮರ್ಶೆಯ ಬಗ್ಗೆ ಶಿವಮೊಗ್ಗಾದಲ್ಲಿ 7.2.99ರಂದು ನಡೆದ ವಿಚಾರ ಸಂಕಿರಣದಲ್ಲಿ ಮಂಡಿಸಲ್ಪಟ್ಟವುಗಳು.) ಒಂದು ಆಪಾದನೆಯೆಂದರೆ, 'ಜಿಎಸ್‌ಎಸ್ ಅವರ ವಿವಿಧ ಘಟ್ಟಗಳ ವಿಮರ್ಶೆಯಲ್ಲಿ ಸ್ವವಿರೋಧಗಳು ಕಂಡುಬರುತ್ತವೆ' ಎಂಬುದು. (ಇದನ್ನು ಪ್ರಸ್ತಾಪಿಸಿದವರು ಪ್ರೊ. ಕೆ. ಜಿ. ನಾಗರಾಜಪ್ಪ) ಜಿಎಸ್‌ಎಸ್ ಅವರ ವಿಮರ್ಶೆ ನಾಲ್ಕು ದಶಕಗಳ ಅವಧಿಯಲ್ಲಿ ರಚಿಸಲ್ಪಟ್ಟಿದೆ. ಇಷ್ಟು ದೀರ್ಘಕಾಲದಲ್ಲಿ ಯಾವ ವಿಮರ್ಶಕನಿಗೂ ತನ್ನ ನಿಲುವಿನಲ್ಲಿ, ಗ್ರಹಿಕೆಯ ಸ್ವರೂಪದಲ್ಲಿ, ಬದಲಾಗದೇ ಇರಲು ಸಾಧ್ಯವೇ ಇಲ್ಲ; ಮತ್ತು ಈ ರೀತಿ ಕಾಲಕಾಲಕ್ಕೆ ಸಮಕಾಲೀನ ಸಮಾಜಕ್ಕೆ, ಸಾಹಿತ್ಯಕ್ಕೆ ಸ್ಪಂದಿಸುತ್ತ ಬದಲಾಗುವುದು ಆರೋಗ್ಯಕರ ವಿಮರ್ಶೆಯ ಲಕ್ಷಣ. ಒಟ್ಟಾರೆಯಾಗಿ ನೋಡಿದಾಗ ಟಿ.ಎಸ್. ಎಲಿಯಟ್‌ನ ಸಮಗ್ರ ವಿಮರ್ಶೆಯಲ್ಲಿಯೂ ಅಪಾರ ಸ್ವವಿರೋಧಗಳು ಕಂಡು ಬರುತ್ತವೆ. (ಮೊಟ್ಟ ಮೊದಲು ಇಂತಹ ಸ್ವವಿರೋಧಗಳನ್ನು ಗಂಭೀರವಾಗಿ ಅಧ್ಯಯನ ಮಾಡಿದವರು ಡಾ. ಹೊಸಕೋಟ್, T.S. Eliot: His Mind and Art.)

ಇನ್ನೂ ಮುಖ್ಯವಾಗಿರುವ ಒಂದು ಟೀಕೆ ಜಿಎಸ್‌ಎಸ್ ಅವರ ವಿಮರ್ಶೆಯ ತಾತ್ವಿಕ ನಿಲುವನ್ನು ಕುರಿತದ್ದು: 'ಜಿಎಸ್‌ಎಸ್ ಅವರಿಗೆ ಒಂದು ಮಹಾನ್ ಕನ್ನಡ ಪರಂಪರೆಯ ಸಾತತ್ಯದ ಬಗ್ಗೆ ದೃಢ ವಿಶ್ವಾಸವಿದೆ. ಆದರೆ ಯಾವ ಕೃತಿಗಳ, ಯಾವ ಯಾವ ಲೇಖಕರ ಕೃತಿಗಳ ಆಧಾರದ ಮೇಲೆ ಆ ಸಾತತ್ಯವನ್ನು ಅವರು ಕಟ್ಟಿಕೊಡುತ್ತಾರೆ ಎಂಬುದನ್ನು ಗಮನಿಸಿದಾಗ ಗೊಂದಲವುಂಟಾಗುತ್ತದೆ ಅಥವಾ ವಿಷಾದವುಂಟಾಗುತ್ತದೆ.' (ಈ ವಾದವನ್ನು ವಿಚಾರಸಂಕಿರಣದಲ್ಲಿ ಮಂಡಿಸಿದವರು ಡಾ. ಓ.ಎಲ್. ನಾಗಭೂಷಣ ಸ್ವಾಮಿ.) ಈ ಮಾತನ್ನು ಒಪ್ಪಬೇಕು. ಕಳೆದೆರಡು ದಶಕಗಳಿಂದ 'ಪರಂಪರೆ', 'ಸಾತತ್ಯ' ಮುಂತಾದ ಪರಿಕಲ್ಪನೆಗಳನ್ನು ವಿಮರ್ಶಕರು ಪ್ರಶ್ನಿಸುತ್ತಿದ್ದಾರೆ; ಮತ್ತು ಇವುಗಳನ್ನು 'ಮಹಾನ್ ಕಥನ'ಗಳೆಂದು ತಿರಸ್ಕರಿಸುತ್ತಿದ್ದಾರೆ. ಇಂದು ಹೆಚ್ಚು ಜನರು ಒಪ್ಪುವ ನಿಲುವೆಂದರೆ 'ಪರಂಪರೆ'ಯೆಂಬುದು ಒಂದು ರಚನೆ, ಸಾಪೇಕ್ಷ ರಚನೆ; ಮತ್ತು ಇದು ಆ ಪರಂಪರೆಯನ್ನು ಕಟ್ಟುವವರ ಅಪೇಕ್ಷೆ-ಅಗತ್ಯಗಳನ್ನು ಅನುಸರಿಸುತ್ತದೆ; ಮತ್ತು ಎರಡನೆಯದಾಗಿ, ಯಾವುದೇ ಕಾಲಖಂಡದಲ್ಲಿಯೂ ಒಂದು ಸಮಾಜದಲ್ಲಿ ಅನೇಕ ಸಾಹಿತ್ಯಕ-ಸಾಂಸ್ಕೃತಿಕ ಪರಂಪರೆಗಳಿರುತ್ತವೆ.

ಆದರೆ, ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಯಾವ ವಿಮರ್ಶಕನೂ / ಲೇಖಕನೂ

ಮುಂಬರುವ ಓದುಗರನ್ನು ಲಕ್ಷ್ಯದಲ್ಲಿಟ್ಟುಕೊಂಡು ಬರೆಯಲಾಗುವುದಿಲ್ಲ. ಪ್ರತಿಯೊಬ್ಬನ ಕಣ್ಣಮುಂದೆಯೂ ಸಮಕಾಲೀನ ಮಾದರಿಗಳಿರುತ್ತವೆ; ಯಾರಿಗೂ ಅಂತಹ ಮಾದರಿಗಳಿಂದ ಸಂಪೂರ್ಣ ಭಿನ್ನವಾಗಿ ಚಿಂತಿಸಲು/ಬರೆಯಲು ಸಾಧ್ಯವಿಲ್ಲ; ಆ ಮಾದರಿಗಳ ವೈಚಾರಿಕ ಪ್ರಪಂಚದಲ್ಲಿಯೇ ಸ್ವಲ್ಪ ಹಿಂದೆ, ಸ್ವಲ್ಪ ಮುಂದೆ ಹೋಗಬಹುದು, ಅಷ್ಟೇ. ಜಿಎಸ್‌ಎಸ್ ಅವರ ವಿಮರ್ಶೆಯ ವೈಚಾರಿಕ ನೆಲೆಗಟ್ಟು ಒಂದು ಕಡೆ ರಿಚರ್ಡ್ಸ್ ಮತ್ತು ಎಲಿಯಟ್, ಇನ್ನೊಂದುಕಡೆ ಭಾರತೀಯ ಕಾವ್ಯಮೀಮಾಂಸೆ ಮತ್ತು ಕುವೆಂಪು—ಇವರುಗಳ ವಿಚಾರಗಳಿಂದ / ವಿಮರ್ಶಾಕಾರ್ಯದಿಂದ ಕಟ್ಟಲ್ಪಟ್ಟಿತು. ಆದ್ದರಿಂದ, ಅವರಲ್ಲಿ ಇತ್ತೀಚೆಗಿನ ಆಧುನಿಕೋತ್ತರ / ವಸಾಹತೋತ್ತರ ಚಿಂತನಾಕ್ರಮವನ್ನು ನಿರೀಕ್ಷಿಸುವುದು ಅಷ್ಟೇನೂ ಉಚಿತವಲ್ಲವೆಂದು ತೋರುತ್ತದೆ.

ಹಾಗೆಯೇ, ತಮ್ಮ ಮೊದಮೊದಲ ಕೃತಿಗಳಲ್ಲಿ ಕುವೆಂಪು ಅವರ ಪ್ರಭಾವದಿಂದ 'ದರ್ಶನ ವಿಮರ್ಶೆ' ಎಂಬ ಪ್ರತ್ಯೇಕ ವಿಮರ್ಶಾಪ್ರಸ್ಥಾನವನ್ನು ಜಿಎಸ್‌ಎಸ್ ಗಂಭೀರವಾಗಿ ಚರ್ಚಿಸುತ್ತಾರೆ. ಆದರೆ, 'ದರ್ಶನ ವಿಮರ್ಶೆ' ಎಂಬ ಸ್ವತಂತ್ರ ವಿಮರ್ಶಾ ಪ್ರಸ್ಥಾನವನ್ನು ಸ್ಥಾಪಿಸುವುದು ಅಸಾಧ್ಯವೆಂದು ತೋರುತ್ತದೆ. ಏಕೆಂದರೆ, ಎಲ್ಲಾ ವಿಮರ್ಶಾ ಪ್ರಸ್ಥಾನಗಳೂ ಅಂತಿಮವಾಗಿ ಕೃತಿ ಕಟ್ಟಿಕೊಡುವ 'ಕಾಣ್ಕೆ' ಅಥವಾ 'ದರ್ಶನ'ವನ್ನೇ ಅನಾವರಣಗೊಳಿಸಲು ಪ್ರಯತ್ನಿಸುತ್ತವೆ. ಇಂತಹ ಮಿತಿಗಳ ಪಟ್ಟಿಯನ್ನು, ಬೇಕಿದ್ದರೆ, ಇನ್ನೂ ಬೆಳೆಸಬಹುದು.

ಒಟ್ಟಾರೆಯಾಗಿ ಹೇಳಬೇಕಾದರೆ, ಅಸಾಧಾರಣ ವ್ಯುತ್ಪತ್ತಿ, ಸೂಕ್ಷ್ಮ ಸಂವೇದನೆ, ಮತ್ತು ಸಮತೋಲನ ಚಿಂತನೆ—ಇವುಗಳು ಜಿಎಸ್‌ಎಸ್ ಅವರ ವಿಮರ್ಶೆಯಲ್ಲಿ ಮೇಳೈಸಿವೆ. "ಸಮಸ್ತ ಲಕ್ಷಣ ಸಂಪನ್ನವಾದ ಅತ್ಯುತ್ತಮ ವಿಮರ್ಶಕ ಇದಾನೆಯೆ? ಅದಕ್ಕೆ ಉತ್ತರ: 'ಇಲ್ಲ'; ಎಂದಾದರೂ ಅಂಥವನು ಇರಲೂ ಇಲ್ಲ" ಎಂದು ಜಿಎಸ್‌ಎಸ್ ಹೇಳುತ್ತಾರೆ (ಸ.ಗ. 3:33). ನಿಜ; ಆದರೆ ಜಿಎಸ್‌ಎಸ್ ಅಂತಹ 'ಅತ್ಯುತ್ತಮ ವಿಮರ್ಶಕ'ನಿಗೆ ಸಾಕಷ್ಟು ಹತ್ತಿರ ಬರುತ್ತಾರೆ.

■

# ಸಾರಸ್ವತ ತಪಸ್ವಿ

ದೇಜಗೌ

೧

ಸಂಶಯ ಭಯ ಉದ್ವಿಗ್ನತೆ ನಿರಾಶೆಗಳ ನಡುವೆ ಆಶಾಕಿರಣವಾಗಿ, ಅನ್ಯಾಯಕ್ಕೆ ಅಧರ್ಮಕ್ಕೆ ಮಣಿಯದೆ, ಜೀ ಹುಜೂರ್ ಎಂದು ಬೆನ್ನು ಬಗ್ಗಿಸಿ ಅಂಗಲಾಚದೆ, ಬಿರುದು ಬಹುಮಾನ ಪ್ರಶಸ್ತಿಗಳಿಗಾಗಿ ಅಲ್ಪರ ಕಚೇರಿಯ ಕಂಬ ಸುತ್ತದೆ, ಮೂವತ್ತು ವರ್ಷಗಳ ಹಿಂದೆ ತಲಕಾವೇರಿಯಾಗಿ ಜನ್ಮ ತಳೆದು ಮಹಾವಾಹಿನಿಯಾಗಿ ಬೆಳೆದಿರುವ ಕಾವ್ಯ ಸತ್ವವನ್ನುಳ್ಳ, ಇಟ್ಟ ಹೆಸರನ್ನು ಅನ್ವರ್ಥಗೊಳಿಸಿಕೊಂಡಿರುವ ಕವಿ ಎಂದರೆ ಡಾ. ಜಿ. ಎಸ್. ಶಿವರುದ್ರಪ್ಪನವರು. ಅವರು ಇದ್ದಕ್ಕಿದ್ದಂತೆ ದೊಡ್ಡವರಾದವರಲ್ಲ. ಅವರು ಗುರುಗಳ ಆಶೀರ್ವಾದದಿಂದ, ಭುವನದ ಭಾಗ್ಯದಿಂದ, ಸತತ ಸಾಧನೆಯಿಂದ ದೊಡ್ಡ ಚೇತನವಾಗಿದ್ದಾರೆ; ಮಹತ್ವದ ಶಕ್ತಿಶಾಲಿ ಕವಿಯಾಗಿದ್ದಾರೆ; ಸಮತೂಕದ ಶ್ರೇಷ್ಠ ವಿಮರ್ಶಕರಾಗಿದ್ದಾರೆ; ಮಹಾ ವಿದ್ವಾಂಸರಾಗಿದ್ದಾರೆ; 1970ರಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಗೋಷ್ಠಿಯೊಂದರಲ್ಲಿ ಮಾತಾಡುತ್ತ ಡಿವಿಜಿಯವರು ಕನ್ನಡ ವಿದ್ವತ್ತು ಕೊನೆಗೊಳ್ಳುವ ಕಾಲ ಸನ್ನಿಹಿತವಾಗುತ್ತದೆಂದು ಭವಿಷ್ಯ ನುಡಿದಿದ್ದರು. ವಿಶ್ವವಿದ್ಯಾನಿಲಯಗಳಲ್ಲಿ ಕುಡಿಯೊಡೆಯುತ್ತಿದ್ದ ವಿದ್ವತ್ತಿನ ಪರಿಚಯ ಅವರಿಗಿರಲಿಲ್ಲ. ಅವರೀಗ ಬದುಕಿದ್ದು, ಶಿವರುದ್ರಪ್ಪನವರಂಥ ವಿದ್ವಾಂಸರನ್ನು ಕಂಡಿದ್ದರೆ ತಮ್ಮ ನಿರ್ಣಯವನ್ನು ಬದಲಾಯಿಸಿಕೊಂಡು, ಹರ್ಷಪಡುತ್ತಿದ್ದರೆಂದು ತೋರುತ್ತದೆ.

ಅನಾದಿ ಕವಿಸತ್ವ ಆಧುನಿಕ ಕವಿ ಚೇತನದ ಮೂಲಕ ಹೇಗೆ ಕ್ರಮ ಕ್ರಮವಾಗಿ ಚಿಗುರೊಡೆದು, ಕುಡಿಯಾಗಿ ಹರಿದು, ದಾಂಗುಡಿಯಾಗಿ ಹಬ್ಬಿ, ಫಲ ಪುಷ್ಪಗಳ ಮಾಧುರ್ಯ ಸುರಭಿಗಳಿಂದ ಸಹೃದಯ ಹೃದಯಾಹ್ಲಾದಕಾರಿಯಾಗಿ, ಸಮಾಜ ಚೇತನಕ್ಕೆ ತುಷ್ಟಿ ಪುಷ್ಟಿಗಳನ್ನು ನೀಡುತ್ತಿದೆಯೆಂಬ ಸಂಗತಿ 'ಸಾಮಗಾನ' (1951) ದಿಂದ ಹಿಡಿದು 'ಕಾಡಿನ ಕತ್ತಲಲ್ಲಿ'ಯ ಕವನಗಳವರೆಗೆ ಸುವ್ಯಕ್ತವಾಗುತ್ತದೆ. 'ಶಾರದೆ', 'ಕ್ರಾಂತಿಕಾರ', 'ಜಡೆ', 'ಮಲ್ಲಿಗೆ', 'ಚೈತ್ರ', 'ತೆಂಗು', 'ಒಡೆದ ಕನ್ನಡಿ', 'ಹಳೇ ಪೇಪರ್ ಖಾಲಿಶೀಷೆ', 'ಗೋಡೆ'—ಇವೇ ಮೊದಲಾದ ಸುಂದರ ಕವಿತೆಗಳನ್ನು ರಚಿಸಿರುವ, ಅನೇಕ ನೂತನ ರೂಪಕ ಪ್ರತಿಮೆಗಳನ್ನು ಸೃಷ್ಟಿಸಿರುವ, ಕಾವ್ಯ ಹಿಮಾಚಲದಲ್ಲಿ ಬಹು ಎತ್ತರಕ್ಕೇರಿ ತಮ್ಮ ತಲೆಮಾರಿನ ಕವಿಗಳಲ್ಲಿ ಅಗ್ರಸ್ಥಾನವನ್ನು ಪಡೆದಿರುವ ಶಿವರುದ್ರಪ್ಪನವರು ಯಾರೊಬ್ಬರ

ವಕೀಲಿ ವಶೀಲಿ ಹಂಗುಗಳಿಲ್ಲದೆಯೇ, ಯಾವ ಬಿರುದು ಬಾವಲಿ ಬಹುಮಾಸಗಳ ಊರೆಯಿಲ್ಲದೆಯೆ, ಸ್ವಸಾಮರ್ಥ್ಯ ದಿಂದಲೇ ಕಾವ್ಯ ಕ್ಷೇತ್ರದಲ್ಲಿ ಭದ್ರವಾಗಿ ನಿಂತು, ಕೀರ್ತಿಯ ಶಿಖರವನ್ನೇರಿದ್ದಾರೆ. ಚೆನ್ನವೀರ ಕಣವಿಯವರೊಂದಿಗೆ ಇವರ ಹೆಸರನ್ನೂ ಬೆಸೆದು, ಈ ಯುಗದ ಸಮನ್ವಯ ಕವಿಗಳೆಂದು, ಅಂದರೆ ನವೋದಯ ನವ್ಯ ಪಂಥಗಳ ಸೇತುವೆಗಳೆಂದು ಕೆಲವು ವಿಮರ್ಶಕರು ಕರೆದಿರುವುದುಂಟು. ಒಂದರ್ಥದಲ್ಲಿ ಈ ಮಾತು ಸರಿಯೆನ್ನಬಹುದಾದರೂ ಗುಂಪುಗುಳಿತನ ದಿಂದ ದೂರ ನಿಂತಿರುವ, ಪಂಥ ಪಕ್ಷ ಸಿದ್ಧಾಂತಗಳ ರಾದ್ಧಾಂತ ಬೇಡವಾದ ಶಿವರುದ್ರಪ್ಪನವರನ್ನು ಮತ್ತೊಂದು ಪಂಥದ ಅಧ್ವರ್ಯುವೆಂದು ಕರೆಯುವುದು ತಪ್ಪಾಗುತ್ತದೆ. ಉತ್ತಮ ಕಾವ್ಯದಲ್ಲಿ ಎಲ್ಲ ಪಂಥಗಳೂ ಅಡಗಿರುತ್ತವೆ. ವ್ಯಕ್ತಿ ವ್ಯಕ್ತಿಗಳ ನಡುವೆ ಹಲವು ಬಗೆಯ ಗೋಡೆ ಎಬ್ಬಿಸಿಕೊಂಡಾಗ ಇದ್ದ ಬೆಲೆ ಉದುರಿ, ಹೊಸ ಬೆಲೆ ಹುಟ್ಟದೆ, ಸೂಕ್ಷ್ಮ ಸಂವೇದನೆಯುಳ್ಳ ಯೋಗ್ಯ ವ್ಯಕ್ತಿ ದಿಗ್ಭ್ರಮೆಗೊಳ್ಳುವಂತಾಗುತ್ತದೆ; ಪರಸ್ಪರ ಅರಿವು ವಿಶಾಲತೆಗಳಿಗೆ ಆತಂಕವುಂಟಾಗಿ, ಸಂಪರ್ಕರಹಿತವಾದ ಆವರಣಗಳ ನಡುವೆ ಸಿಕ್ಕಿ ನರಳುವಂತಾಗುತ್ತವೆಂದು ಅವರೇ ಹೇಳಿರುವ ಮಾತು ನೂರಕ್ಕೆ ನೂರು ಪಾಲು ಸತ್ಯ.

ಸೃಜನಶೀಲನಾದ ಕವಿ ವಿಶ್ಲೇಷಣ ಪ್ರವೃತ್ತಿಯ ವಿಮರ್ಶಕನಾಗುವುದು ಕಷ್ಟ. ಅವೆರಡೂ ಪರಸ್ಪರ ವಿರೋಧಿಯಾದ ಕ್ಷೇತ್ರಗಳಲ್ಲ, ನಿಜ. ಕವಿ ಹೃದಯವಿಲ್ಲದವನು ಉತ್ತಮ ವಿಮರ್ಶಕನಾಗಲಾರನೆಂಬುದೂ ಸರಿಯೆ. ಉತ್ತಮ ವಿಮರ್ಶಕ ಕಾವ್ಯರಚನೆ ಮಾಡಿದರೂ ಅವನು ಆ ಕ್ಷೇತ್ರದಲ್ಲಿ ಶಿಖರ ಸ್ಥಾನವನ್ನು ಮುಟ್ಟಿದ ನಿದರ್ಶನಗಳು ಇಲ್ಲವೆಂದೇ ಹೇಳಬಹುದು. ವಿಮರ್ಶೆಯೂ ಪುನರ್‌ಸೃಷ್ಟಿಯೆಂಬುದನ್ನು ಮರೆಯುವಂತಿಲ್ಲ. ಆದರೂ ಯಾವುದೋ ಒಂದು ಜಾಡಿನಲ್ಲಿ ಹೋಗುವ ಕವಿ ಮತ್ತೊಂದು ಜಾಡಿಗೆ ಬದಲಾಯಿಸಿಕೊಳ್ಳುವುದು ದುಸ್ತರವಾಗುತ್ತದೆ. ಹಲವು ಬಗೆಯ ಒಲವು ನಿಲುವುಗಳುಳ್ಳ, ದಾರಿಗಳುಳ್ಳ, ದೃಷ್ಟಿ ಭೇದವುಳ್ಳ, ರುಚಿ ಅಭಿರುಚಿಗಳುಳ್ಳ ಕವಿಗಳ ಹೃದಯಗಳನ್ನು ಪ್ರವೇಶಿಸಿ, ಅಲ್ಲಿಯ ವ್ಯಾಪಾರಗಳನ್ನು ಗುರುತಿಸಿ, ಅಲ್ಲಿ ಕೊಳಗೊಂಡಿರುವ ಅನುಭವ ಗಳನ್ನು ಗ್ರಹಿಸಿ, ಅವುಗಳನ್ನು ಒರೆಹಚ್ಚಿ, ಅವುಗಳ ಗುಣ ಸ್ವರೂಪಗಳನ್ನು ನಿರ್ಣಯಿಸುವುದು ಸಾಮಾನ್ಯ ಕಾರ್ಯವಲ್ಲ. ವಿಮರ್ಶಕ ತನ್ನತನವನ್ನು ಬಿಟ್ಟುಕೊಟ್ಟು, ಮೊದಮೊದಲು ಕವಿಗೆ ಅಧೀನನಾಗಿ, ಅನಂತರ ವಸ್ತುನಿಷ್ಠೆಯಿಂದ ಪ್ರಾಮಾಣಿಕತೆಯಿಂದ ತನ್ನ ಕರ್ತವ್ಯಗಳನ್ನು ಸಾಧಿಸಬೇಕಾಗುತ್ತದೆ. ತನಗೆ ಸರಿಯೆಂದು ತೋರಿದ ತತ್ತ್ವವೊಂದಕ್ಕಂಟಿಕೊಂಡು ಬದುಕು ಸಾಗಿಸಿರುವ, ಅದರ ಹಿನ್ನೆಲೆಯಲ್ಲಿ ಕಾವ್ಯಕರ್ಮ ನಡೆಸಿರುವ ಕವಿ ಅದರಿಂದ ಕೆಲವು ಕಾಲವಾದರೂ ಮುಕ್ತನಾಗಿ ಪರ ಹೃದಯ ಪ್ರವೇಶ ಮಾಡುವುದು—ಅದರಲ್ಲಿಯೂ ಸಮಕಾಲೀನ ಕವಿಗಳ ಹೃದಯವನ್ನು—ಖಂಡಿತ ಅಸಾಧ್ಯವೆಂದೇ ತೋರುತ್ತದೆ. 'ಕವಿ ಕವಿಗೆ ಮುನಿವಂ' ಎಂಬ ಅನುಭವೋಕ್ತಿಯೂ ಒಂದಿದೆ.

ಈ ಉಕ್ತಿಯನ್ನು ಸುಳ್ಳಾಗಿಸಿ, ಸೃಜನ ವಿಮರ್ಶನ ಕಾರ್ಯಗಳೆರಡನ್ನೂ ಜತೆಜತೆಯಾಗಿ

ಅತ್ಯಂತ ಯಶಸ್ವಿಯಾಗಿ, ಪ್ರಾಮಾಣಿಕವಾಗಿ ನಿರ್ವಹಿಸುತ್ತಿರುವ ಶಿವರುದ್ರಪ್ಪನವರ ಮೇಲ್ಮೆ ಸ್ಫಟಿಕಸ್ಪಷ್ಟವಾಗಿ ಮೆರೆಯುತ್ತಿದೆ. ಅವರು ಪ್ರಾಚೀನ ಸಾಹಿತ್ಯವನ್ನೆಂತೋ ಅಂತೆಯೇ ಸಮಕಾಲೀನ ಸಾಹಿತ್ಯವನ್ನು ಸಹ ಕುರಿತು ಪ್ರಬುದ್ಧವಾದ ಹಾಗೂ ಸಾರ್ಥಕವಾದ ವಿಮರ್ಶಾತ್ಮಕ ಪ್ರಬಂಧಗಳನ್ನು ರಚಿಸಿ, ವಿಮರ್ಶೆಯ ದಾರಿಯನ್ನು ತೆರೆದಿದ್ದಾರೆ, ಹಸನುಗೊಳಿಸಿದ್ದಾರೆ. ಅವರ ಎಲ್ಲ ವಿಮರ್ಶೆಗಳಲ್ಲಿ ಸಂಶೋಧನೆಯ ಮಹತ್ವವಿದೆ, ವಿದ್ವತ್ತಿನ ಸತ್ವವಿದೆ, ಕಾವ್ಯದ ತೇಜಸ್ಸಿದೆ, ತಾರ್ಕಿಕತೆಯ ಸೊಬಗಿದೆ, ವೈಜ್ಞಾನಿಕಮನೋಧರ್ಮದ ಸಾಂಗತ್ಯವಿದೆ. ಈ ಎಲ್ಲ ಶಕ್ತಿಗಳ ಹೊಂದಾಣಿಕೆಯಿಂದಾಗಿ ಅವರ ವಿಮರ್ಶೆಯಲ್ಲಿ ಹಾಳತವಿದೆ, ಸಮತೂಕವಿದೆ, ಆತ್ಮೀಯತೆಯಿದೆ. ಎಲ್ಲಿಯೂ ಪೂರ್ವಾಗ್ರಹದಿಂದಾಗಲೀ, ಅಹಂಕಾರದಿಂದಾಗಲೀ, ಅಜ್ಞಾನದಿಂದಾಗಲೀ ಉಂಟಾದ ಪ್ರಮಾದಗಳಿಗೆ ಹಾಗೂ ಏರುಪೇರುಗಳಿಗೆ ಅವಕಾಶವಿಲ್ಲ. 'ರತ್ನಾಕರನ ಭೋಗ-ಯೋಗದ ತೊಡಕು'ಗಳನ್ನು ಪ್ರಪ್ರಥಮವಾಗಿ ಗಮನಿಸಿದ ಕವಿ-ವಿಮರ್ಶಕರೆಂದರೆ ಇವರೇ. ಆ ತೊಡಕುಗಳನ್ನು ಗುರುತಿಸುವಲ್ಲಿ, ಬಿಡಿಸುವಲ್ಲಿ ಅವರ ಕಾವ್ಯ ಪ್ರಜ್ಞೆಯ ಜತೆಗೆ, ಅವರ ಸಂಶೋಧನ ಸಾಮರ್ಥ್ಯವೂ ಭಾಗವಹಿಸಿದೆ. ಪಂಪ ಬಸವೇಶ್ವರ ಹರಿಹರ ರಾಘವಾಂಕ ಸಿದ್ಧಲಿಂಗಯತಿ, ಕನಕದಾಸ ಲಕ್ಷ್ಮೀಶ ಸರ್ವಜ್ಞರ ಕೃತಿಗಳನ್ನು ಆಧುನಿಕ ದೃಷ್ಟಿಯಿಂದ ಪರೀಕ್ಷಿಸುವಾಗ, ಅವುಗಳ ಮೇಲೆ ಹೊಸಬೆಳಕು ಚೆಲ್ಲುವಾಗ ಅವರ ಸಂಯಮ ಸಮದೃಷ್ಟಿ ಮತ್ತು ಸೌಂದರ್ಯ ಪ್ರಜ್ಞೆಗಳು ಪ್ರಕಾಶಿಸುತ್ತವೆ. ಅವರ ವಿಮರ್ಶೆ ತೌಲನಿಕವೋ, ಸಂಶೋಧನಾತ್ಮಕವೋ, ದಾರ್ಶನಿಕವೋ, ವರ್ಣನಾತ್ಮಕವೋ, ಯಾವುದಾದರೂ ಸರಿಯೇ ಅವುಗಳಲ್ಲೆಲ್ಲ ಒಂದು ಎತ್ತರದ ಮಟ್ಟವಿದೆ, ಮೌಲ್ಯನಿರ್ಣಯದ ತೂಕವಿದೆ; ಎಲ್ಲಿಯೂ ಮಾತ್ಸರ್ಯ ವೈರ ಸಂಕುಚಿತತೆಗಳಿಂದ ಪ್ರೇರಿತವಾದ ಕೀಳುತನಕ್ಕವಕಾಶವಿಲ್ಲ.

ಸಮಕಾಲೀನ ವಿಮರ್ಶೆಯನ್ನು ಪರಾಮರ್ಶಿಸುವಾಗ ಶಿವರುದ್ರಪ್ಪನವರ ಪ್ರಬಂಧಗಳಲ್ಲಿ ಕ್ರೋಧರಹಿತವಾದ ನಿರ್ಭಯತೆಯೂ, ಸತ್ಯಕ್ಕೆ ಅಪಚಾರವುಂಟಾಗುತ್ತಿದೆಯೆಂಬ ಕನಿಕರವೂ ಎದ್ದು ಕಾಣುತ್ತವೆ. 'ಹೀಗಾಗಿ ಒಂದು ಕಾವ್ಯ ಪರಂಪರೆಯ ಬಗ್ಗೆ ತಿರಸ್ಕಾರವನ್ನು ಹುಟ್ಟಿಸದೆ, ತಮ್ಮ ಕಾವ್ಯಪರಂಪರೆಗೆ ಪುರಸ್ಕಾರವನ್ನು ದೊರಕಿಸಿಕೊಳ್ಳುವುದು ಅಸಂಭವವೆಂಬ ವ್ಯಾಪಾರೀ ಮನೋಧರ್ಮವೂ, ಸ್ವಕಾವ್ಯ ಸಮರ್ಥನೆಗಾಗಿ ಗುಂಪುಗಾರಿಕೆಯೂ ರೋಚಕವಾದ ರೀತಿಯಲ್ಲಿ ಬೆಳೆದುವು. ಒಟ್ಟಿನಲ್ಲಿ ಪ್ರಚಲಿತವಾದ ಒಂದು ಒಳ್ಳೆಯ ಕಾವ್ಯಪರಂಪರೆಯ ಬಗ್ಗೆ ಒಂದು ಜನಾಂಗದ ಕಣ್ಣನ್ನು ಮುಚ್ಚಿಸುವುದರಲ್ಲಿ, ನವೋದಯ ಕಾವ್ಯದ ಬಗ್ಗೆ ರುಚಿಯನ್ನು ಕೆಡಿಸಿ, ಅದನ್ನು ಯಾರೂ ಓದದಂತೆಯೂ, ಓದಿದರೂ ಹುರುಳಿಲ್ಲವೆಂದು ಹೇಳುವ ಅರೆ ರುಚಿಗಳನ್ನು ನಿರ್ಮಿಸುವುದರಲ್ಲಿ, ನವ್ಯಕಾವ್ಯದ ಧೋರಣೆಗಳು ತಕ್ಕಷ್ಟು ಯಶಸ್ವಿಯಾದುವು ಎನ್ನುವಲ್ಲಿ, ಕೋಪದ ಕಿಚ್ಚಿಲ್ಲ, ಕನಿಕರದ ತಂಪಿದೆ; ಸರ್ವಜ್ಞತೆಯ ಅಟ್ಟಹಾಸವಿಲ್ಲ, ಸತ್ಯನಿಷ್ಠೆಯ ವಿನಯವಿದೆ. ಇಂದು ವಿಮರ್ಶೆಯ ಹೆಸರಿನಲ್ಲಿ ಧೂಳೆಬ್ಬಿಸುತ್ತಿರುವ ವಕ್ರದೃಷ್ಟಿಯ ಅಪಕ್ವಾನುಭವದ ಕಿರುಕುಳಗಳಿಗೆ ಇವರಿಗಿಂತ

ಪರಿಣಾಮಕಾರಿಯಾಗಿ ಹಾಗೂ ಅಧಿಕಾರಯುತವಾಗಿ ಉತ್ತರ ಹೇಳಬಲ್ಲವರು ಕನ್ನಡನಾಡಿನಲ್ಲಿ ವಿರಳ. ಈ ಕಿರುಕುಳಗಳ ಅಪಕ್ವತೆಗೆ ಪ್ರಾಚೀನ ಸಾಹಿತ್ಯದ ಸಂಪರ್ಕವಿಲ್ಲದಿರುವುದೂ ಒಂದು ಕಾರಣವೆಂದು ಅವರು ಸರಿಯಾಗಿಯೇ ಊಹಿಸಿದ್ದಾರೆ.

'ತಮ್ಮ ಹಿಂದಿನ ಸಾಹಿತ್ಯ ಪರಂಪರೆಯ ಅರಿವಿಲ್ಲದಿರುವುದು ಅಷ್ಟೇನೂ ಮಹತ್ವದ ಸಂಗತಿಯಲ್ಲವೆಂದು ಕಡೆಗಣಿಸುವ ಮತ್ತು ಕನ್ನಡದ ಸಾಹಿತ್ಯಿಕ ಪರಂಪರೆಯಿಂದ ತಾವು ಕಲಿಯಬೇಕಾದುದೇನೂ ಇಲ್ಲವೆಂದು ಘೋಷಿಸುವ ಧೋರಣೆಯೊಂದು ಬೆಳೆದಿದೆ' ಎಂಬ ಅವರ ನಿಷ್ಕಪಟ ನಿರ್ದುಷ್ಟ ಧೀರವಾಣಿಯಲ್ಲಿ ಯಥಾರ್ಥತೆಯಿದೆ. ಕಾವ್ಯವನ್ನು ಕುರಿತ 'ಚರ್ಚೆಯಲ್ಲಿ ಸಭ್ಯತೆಯ, ಪರಸ್ಪರ ಗೌರವದ ಅಭಾವ ಎದ್ದು ಕಾಣುತ್ತಿದೆ. ಕಾವ್ಯ, ಕಾವ್ಯವಿಷಯಕವಾದ ಚರ್ಚೆ, ನಮಗೆ ಮೂಲಭೂತವಾದ ಸಭ್ಯತೆ, ಸಂಸ್ಕೃತಿಗಳನ್ನು ತಂದುಕೊಡದೆ ಹೋದರೆ, ಈ ಕಾವ್ಯ, ಈ ಚರ್ಚೆಗಳಿಂದ ಯಾರಿಗೆ ತಾನೆ ಪ್ರಯೋಜನ ವಾಗುತ್ತದೆ?'—ಈ ಮಾತು ಪ್ರಚಲಿತ ವಿಮರ್ಶೆಯ ಸ್ವರೂಪವನ್ನು ಪ್ರತಿಬಿಂಬಿಸುತ್ತದೆ. ಮುಖ ನೋಡಿ ಮಣೆ ಹಾಕುವ, ಕುನ್ನಿಗಳಂತೆ ಬಾಲವಲ್ಲಾಡಿಸುವ, ಯಾಚಕರಿಗೆ ಬಹುಮಾನ ನೀಡುವ, ತಮ್ಮನ್ನು ಚಂದ್ರರೆಂದು ಸರಸ್ವತಿಯ ಮುರುಕುಗಳೆಂದು ಹೊಗಳು ವವರನ್ನು ಗದ್ದುಗೆಗೇರಿಸುವ ಸತ್ತ್ವಹೀನರಿಗೆ ಈ ಮಾತುಗಳು ಪಥ್ಯ ವಾಗಲಾರವೇನೊ? 'ನಿಜವಾದ ವಿಮರ್ಶೆಗೆ ಒಂದು 'ಕಾಲಾತೀತ ನೆಲೆ'ಯಲ್ಲಿ ನಿಲ್ಲುವ ಮನೋಧರ್ಮ ಬೇಕು. ಅದು ತತ್ಕಾಲೀನ ಪಂಥ ಪ್ರವೃತ್ತಿಗಳಿಂದ ಆದಷ್ಟು ಪಾರಾಗುವುದರಿಂದ ಮಾತ್ರ ಸಾಧ್ಯ.' ವಿಮರ್ಶಕರಿಗೆ ಈ ತತ್ತ್ವ ದಾರಿದೀಪವಾದಾಗ ವಿಮರ್ಶೆಯ ಕ್ಷೇತ್ರ ಹಸನಾಗುತ್ತದೆ, ಹುಲುಸಾಗುತ್ತದೆ; ಅಷ್ಟೇ ಅಲ್ಲ, ನಿರ್ದುಷ್ಟವಾದ ಮೌಲ್ಯ ನಿರ್ಣಯ ಸಾಧ್ಯವಾಗುತ್ತದೆ.

ತಾವು ಪ್ರತಿಪಾದಿಸಿರುವ ವಿಮರ್ಶಾಸೂತ್ರಗಳಿಗೆ ಲಕ್ಷ್ಯಗಳಂತಿವೆ, ಅವರ ಈ ಮೇಲಿನ ಉಲ್ಲೇಖನಗಳನ್ನೊಳಗೊಂಡ 'ನವೋದಯ' ಹಾಗೂ 'ಗತಿಬಿಂಬ'ಗಳಲ್ಲಿ ಪ್ರಕಟವಾಗಿರುವ ಪ್ರಬಂಧಗಳು. ವಿಮರ್ಶೆ ಯಲ್ಲಿ ಬಳಸುವ ಪಾರಿಭಾಷಿಕ ಪದಗಳಿಗೆ ಒಂದು ಖಚಿತವಾದ ಅರ್ಥವಿರಬೇಕೆಂದು ನುಡಿದು, ಸಾಹಿತ್ಯ ಜೀವನದ ಪ್ರತಿಬಿಂಬವಲ್ಲ, ಗತಿಬಿಂಬವೆಂಬುದನ್ನು ಸ್ಪಷ್ಟಪಡಿಸಿದ್ದಾರೆ. ರೊಮ್ಯಾಂಟಿಕ್ ಸಾಹಿತ್ಯಕ್ಕೆ ಬದಲಾಗಿ ನವೋದಯ ಸಾಹಿತ್ಯವೆಂದು ಕರೆಯುವುದೇ ಸರಿಯೆಂಬ ಅವರ ಅಭಿಪ್ರಾಯ ಸೂಕ್ತವಾಗಿದೆ. ಅಂತೆಯೇ ಪ್ರಾಂತೀಯತೆಯ ಸ್ಥಳದಲ್ಲಿ ಉಪರಾಷ್ಟ್ರೀಯತೆಯೆಂಬ ಪದವನ್ನು ಬಳಸುವುದರ ಔಚಿತ್ಯವನ್ನು ಸರಿಯಾಗಿಯೇ ಎತ್ತಿಹಿಡಿದಿದ್ದಾರೆ. ಅವರ 'ಸೌಂದರ್ಯ ಸಮೀಕ್ಷೆ'ಯಾಗಲೀ, 'ವಿಮರ್ಶೆಯ ಪೂರ್ವ ಪಶ್ಚಿಮ'ವಾಗಲೀ ಕನ್ನಡ ಕಾವ್ಯಮೀಮಾಂಸೆಗೆ ಅವರು ಸಲ್ಲಿಸಿದ ವಿಶಿಷ್ಟ ಕೊಡುಗೆಗಳೆಂದೇ ಹೇಳಬಹುದು. ಶಿವರುದ್ರಪ್ಪನವರ ಕಾವ್ಯಜೀವನದ ವಿಕಾಸವನ್ನು ಎಳೆ ಎಳೆಯಾಗಿ ಬಿಡಿಸಿ ನೋಡುವಾಗ, ಸಾಹಿತ್ಯವೇ ಅವರ ಬದುಕು, ಅವರ ಬದುಕೇ ಸಾಹಿತ್ಯ. ಅವರ ಗುರಿ ಅಧಿಕಾರ ಸಂಪಾದನೆಯಲ್ಲ, ಪತ್ರಿಕಾಪ್ರಿಯತೆಯಲ್ಲ. ಆ ಈ ಸಂಘ ಸಂಸ್ಥೆಗಳ ಅಧ್ಯಕ್ಷ ಪದವಿಯಲ್ಲ, ಸಾಹಿತ್ಯವೊಂದೇ ಎಂಬ ಸಂಗತಿ ವೇದ್ಯವಾಗುತ್ತದೆ.

ಆದ್ದರಿಂದಲೇ ಅವರು ಶ್ರೇಷ್ಠ ಕವಿಗಳಾಗಿದ್ದಾರೆ, ಆಧುನಿಕ ವಿಮರ್ಶಕರ ಸಾಲಿನಲ್ಲಿ ಅಗ್ರಸ್ಥಾನಕ್ಕೆ ಅರ್ಹರಾಗಿದ್ದಾರೆ.

ಜೀವನದಲ್ಲೆಂತೋ, ಸಾಹಿತ್ಯ ನಿರ್ಮಾಣದಲ್ಲೆಂತೋ ಅಂತೆಯೇ ಭಾಷಾ ಪ್ರಯೋಗದಲ್ಲಿಯೂ ಅವರು ಸುವರ್ಣಮಾಧ್ಯಮದ ಮಾರ್ಗವನ್ನನುಸರಿಸುತ್ತಾರೆ; ಅನುಸರಿಸುತ್ತಾರೆನ್ನುವುದಕ್ಕಿಂತ ಅದು ಅವರ ಸ್ವಭಾವವಾಗಿದೆ. ಗದ್ಯವೇ ಆಗಲಿ, ಪದ್ಯವೇ ಆಗಲಿ ಅವರದು ಬಂಡುಂಡ ದುಂಬಿಯ ಝೇಂಕಾರದಂತೆ, ಹಿತಮಿತವಾದ ಬಯಲ ತೊರೆಯ ಕಲಕಲರವದಂತೆ, ಸುಭಗ ಸುಂದರವಾದ ಅಬ್ಬರ ಆಡಂಬರಗಳಿಲ್ಲದ ಗಡಸುಪೆಡಸುಗಳಿಲ್ಲದ, ಸಿಕ್ಕುಸಿವುರುಗಳಿಲ್ಲದ ಲಲಿತ ಗತಿಯ ದ್ರಾಕ್ಷಾಪಾಕದ ಮಧುರ ಶೈಲಿ. ಅವರಲ್ಲಿ ಸಂಸ್ಕೃತ ಸಮಾಸಗಳ ಹೊರೆಯಿಲ್ಲ; ಕಿವಿ ಗಡಚಿಕ್ಕುವ ಶಬ್ದಗಳ ಮೊಳಗಿಲ್ಲ; ಕಣ್ಣುಕುಕ್ಕುವ ಅಲಂಕಾರಗಳ ಹೇರಿಲ್ಲ. ನಡುನಡುವೆ ನುಸುಳಿಕೊಂಡು ಬರುವ ಸಂಸ್ಕೃತ ಪದಗಳು ಸಂಸರ್ಗವಶದಿಂದ ಕನ್ನಡದ ಕಂಪನ್ನು ಸೂಸುತ್ತವೆ. ಎಲ್ಲಿಯೂ ಪದಗಳ ದುಂದಿಲ್ಲ. ಕೇವಲ ಪ್ರಾಸಕ್ಕಾಗಿ ಕ್ವಣಿತದ ಮೋಹಕ್ಕಾಗಿ ಪದಗಳನ್ನು ಬಳಸುವ ಚಟ ಅವರಿಗಿಲ್ಲ. 'ನುಡಿದರೆ ಮುತ್ತಿನ ಹಾರದಂತಿರಬೇಕು' ಎಂಬ ಹಿರಿಯರ ವಚನವನ್ನು ನೆನಪಿಗೆ ತರುವ ಸ್ಫಟಿಕ ಶೈಲಿ ಅವರದು. ಇತ್ತೀಚಿನ ಕೆಲವು ಕವಿತೆಗಳ ಭಾಷೆ ಗದ್ಯಕ್ಕೆ ತೀರ ಹತ್ತಿರವಾಗುತ್ತಿದೆ. ಕವಿಯ ಶೀಲವೇ ಶೈಲಿ ಎನ್ನುವ ಮಾತು ಶಿವರುದ್ರಪ್ಪನವರಿಗೆ ಪೂರ್ಣವಾಗಿ ಒಪ್ಪುತ್ತದೆ.

೨

ಕುವೆಂಪು ಅವರ ಗರಡಿಯಲ್ಲಿ ತಯಾರಾದ ಶಿಷ್ಯರು ಹಲವರು. ಆದರೆ ಗುರುವಿನ ಕೀರ್ತಿಯನ್ನು ಬಹುಮಟ್ಟಿಗೆ ಉಳಿಸಿದವರು ಶಿವರುದ್ರಪ್ಪನವರು ಮಾತ್ರ. ಅವರಿಂದ ಪಡೆದ ಹೊಸ ಹುಟ್ಟು-ಗುಟ್ಟುಗಳನ್ನು ಶಿಷ್ಯ ಮೇಲಿಂದ ಮೇಲೆ ನೆನೆಯುತ್ತಾರಲ್ಲದೆ, ಬದುಕಿನಲ್ಲಿ ಹಾಗೂ ಸಾಹಿತ್ಯದಲ್ಲಿ ಅವುಗಳನ್ನು ಯಶಸ್ವಿಯಾಗಿ ಪ್ರಯೋಗಿಸಿದ್ದಾರೆ. ಎಲ್ಲಕ್ಕಿಂತ ಕುವೆಂಪು ಅವರಿಂದ ಅವರು ಕಲಿತ ಮತ್ತೊಂದು ಹಿರಿಯ ಗುಣವೆಂದರೆ ಸ್ವಾಭಿಮಾನ ಹಾಗೂ ಯಾರಿಗೂ ಮಣಿಯದ ಧೈರ್ಯ.

> ನೀವು ಕಲಿಸಿದಿರಿ ನನಗೆ ತಲೆಯೆತ್ತಿ ನಿಲ್ಲುವುದನ್ನು,
> ಕಿರುಕುಳಗಳಿಗೆ ಜಗ್ಗದೆ ನಿರ್ಭಯವಾಗಿ ನಡೆವುದನ್ನು,
> ಸದ್ದಿರದೆ ಬದುಕುವುದನ್ನು.

*(ಕಾಡಿನ ಕತ್ತಲಲ್ಲಿ, ಪುಟ 39)*

ನಮ್ಮ ಅನೇಕ ಸಾಹಿತಿಗಳಂತೆ ಅವರು ಕೋಲೆಬಸವಗಳು ಅಲ್ಲ, ನಟಸಾರ್ವಭೌಮರೂ ಅಲ್ಲ, ಗುರುದ್ರೋಹಿಗಳೂ ಅಲ್ಲ. ಗುರು ಕಲಿಸಿದ್ದರಲ್ಲಿ ಒಂದು ಭಾಗವನ್ನಾದರೂ ಬದುಕಿನಲ್ಲಿ ಆಚರಣೆಗೆ ತರದ ವ್ಯಕ್ತಿ ದುಶ್ಶಕ್ತಿಯೇ ಸರಿ. ಶಿವರುದ್ರಪ್ಪನವರು ಎಂಥ

ಸಂದರ್ಭದಲ್ಲಿಯೂ ಎತ್ತಿದ ತಲೆಯನ್ನು ಬಗ್ಗಿಸಿಲ್ಲ; ಸ್ಪರ್ಧಾಮೂಲವಾದ ಅಗ್ಗದ ಪ್ರಚಾರದ ಕರ್ಣ ಕಠೋರವಾದ ಬೊಬ್ಬೆಯ ನಡುವೆಯೂ ನಿಶ್ಯಬ್ದವಾಗಿ ಕರ್ತವ್ಯ ನಿಷ್ಠೆಯಿಂದ ಕ್ರಿಯಾಶೀಲರಾಗಿ ಮುಂದುವರಿಯುತ್ತಿದ್ದಾರೆ. ಶಿಷ್ಯ ಗುರುವಿಗೆ ತೋರಿಸುವ ಎಲ್ಲ ಗೌರವಗಳಿಗಿಂತ ಅವರು ಕಲಿಸಿದ್ದನ್ನು ನಡೆಸುವುದೇ ಅವರಿಗೆ ತೋರಿಸಬಹುದಾದ ಮಹಾಗೌರವ, ಸಮರ್ಪಿಸಬಹುದಾದ ಅಮೂಲ್ಯ ಕಾಣಿಕೆ.

ಅವರನ್ನು ಮೊಟ್ಟ ಮೊದಲಿಗೆ ನೋಡುವವರು ತಪ್ಪು ತಿಳಿದುಕೊಳ್ಳುವ ಸಂಭವವುಂಟು. ಅಂತರ್ಮುಖಿಯಾದ ಅವರ ಮುಖದ ಮೇಲೆ ದಿವ್ಯ ನಿರ್ಲಕ್ಷ್ಯತೆಯ ವರ್ಚಸ್ಸೂ ಬಿಗುವೂ ತೋರುವಂತಿದ್ದು ಅಪರಿಚಯಸ್ತರು ಅವರನ್ನು ಮಾತಾಡಿಸಲು ಹಿಂಜರಿದರೆ ಸೋಜಿಗ ಪಡಬೇಕಾಗಿಲ್ಲ. ಮೊದಲ ಪಟ್ಟಿಗೆ ಅವರು ಆಪ್ತತೆಯಿಂದ ಮಾತಾಡದಿರಬಹುದು. ಒಂದೆರಡು ಸಾರಿ ಅವರ ಬಳಿ ಓಡಾಡಿ, ಮಾತಾಡಿಸಿ, ಅವರನ್ನು ಅರ್ಥಮಾಡಿಕೊಂಡದ್ದಾದರೆ, ಅವರ ಬಿಗಿತಕ್ಕೆ ಅಹಂಕಾರ ಕಾರಣವಲ್ಲವೆಂಬುದು ತಿಳಿಯುತ್ತದೆ. ಜ್ಞಾನ ದಾರಿದ್ರ್ಯವನ್ನು, ಸತ್ವಹೀನತೆಯನ್ನು, ಅಂತರಂಗದ ತಿಪ್ಪೆಯನ್ನು ಮರೆಮಾಡುವ ಬಣ್ಣದ ತೆರೆ ಅಹಂಕಾರ. ಆದ್ದರಿಂದ ಶಿವರುದ್ರಪ್ಪನವರು ಅಹಂಕಾರದ ಮೂಲಕ ದೊಡ್ಡತನವನ್ನು ಮೆರೆಸಬೇಕಾಗಿಲ್ಲ. ನಿರಂಕುಶಮತಿಗಳೂ ಆತ್ಮ ಶ್ರೀಸಂಪನ್ನರೂ ಆದ ಕಲಾಚಾರ್ಯರಲ್ಲಿ ಅಹಂಕಾರಕ್ಕೆ ಜಾಗವೇ ಇರುವುದಿಲ್ಲ.

**ಕ್ಷಣ ಕ್ಷಣಕೂ ನನ್ನ ಹಮ್ಮನರೆಯುವ**
**ಲೋಕತಂತ್ರಗಳೆ ನಮೋ ನಮೋ**
**ನನ್ನಲ್ಪತೆಯನ್ನು ತೋರುತ ಮೆರೆಯುವ**
**ಬೆಳೆವ ತೇಜಗಳೆ ನಮೋ ನಮೋ** *(ನನ್ನ-ನಿನ್ನ ನಡುವೆ, ಪುಟ 206)*

ಇದು ಅನುದಿನದ, ಏಕೆ ಅನುಕ್ಷಣದ ಪ್ರಾರ್ಥನೆಯಾದ ಕವಿಯಲ್ಲಿ ಅಹಂಕಾರದ ಮೂಲೋತ್ಪಾಟನೆಯಾಗುವುದು ಸಹಜ. ತನ್ನ ಹಣತೆಯಿಂದಲೇ ಕತ್ತಲನ್ನು ತವಿಸುವ ಗರ್ವವೂ ಅವರಿಗಿಲ್ಲ. ಅವರೇನಾದರೂ ಅದನ್ನು ತುಸು ಅಂಟಿಸಿಕೊಂಡಿದ್ದರೆ ಅವರ ಲೌಕಿಕ ಜೀವನ ಇನ್ನೂ ರಂಗುರಂಗಾಗಿರುತ್ತಿತ್ತು. ಆದರೆ ರಂಗುರಂಗಿನ ಬದುಕು ಅವರಿಗಿಷ್ಟವಿಲ್ಲ.

**ಶಕ್ತಿಯ ಕೊಡು, ಶಕ್ತಿಯ ಕೊಡು**
**ಶಕ್ತಿಯ ಕೊಡು ಹೇ ಪ್ರಭೂ**
**ಸತ್ಯಕಾಗಿ ನಿಲುವ ಛಲವ**
**ದೀಪ್ತಗೊಳಿಸು ನನ್ನೊಳು** *(ನನ್ನ-ನಿನ್ನ ನಡುವೆ, ಪುಟ 202)*

ಎಂಬ ಅವರ ಹಾರೈಕೆಯೇ ಅವರ ಜೀವನ ಧ್ಯೇಯವಾಗಿದೆ. ಸತ್ಯಕ್ಕಾಗಿ ಹೋರಾಟ ನಡೆಸುವಾತ ಅನೇಕ ತ್ಯಾಗ ಕಷ್ಟ ನಿಷ್ಠುರಗಳಿಗೆ ಸಿದ್ಧನಾಗಿರಬೇಕಾಗುತ್ತದೆ. 'ನ್ಯಾಯ ನಿಷ್ಠುರಿ.

ದಾಕ್ಷಿಣ್ಯಪರನು ನಾನಲ್ಲ' ಎಂಬ ಪಂಥಕ್ಕೆ ಸೇರಿದ ಕವಿ ಇವರು. ಆದ್ದರಿಂದಲೇ ಅವರು ಸುತ್ತಮುತ್ತ ತಮ್ಮ ಕಣ್ಣಿಗೆ ಬಿದ್ದ ಸಾಮಾಜಿಕ ಲೋಪದೋಷಗಳ ಮೇಲೆ ಆಗಾಗ್ಗೆ ವಿವೇಕದ ಕ್ಷ-ಕಿರಣ ಹಾಯಿಸಿ, ಅವುಗಳನ್ನು ಬಯಲು ಮಾಡುತ್ತಾರೆ.

ಶಿವರುದ್ರಪ್ಪನವರು ಸಮಕಾಲೀನ ಪ್ರಜ್ಞೆ, ಅರ್ಥಾತ್ ಸಾಮಾಜಿಕ ಪ್ರಜ್ಞೆಯುಳ್ಳ ಕವಿ. ಸಮಾಜದೊಳಗಿದ್ದರೂ, ಅದನ್ನು ಸಾಕ್ಷೀಪ್ರಜ್ಞೆಯಿಂದ ನೋಡುವ, ದೇಶ ಕಾಲಾತೀತವಾದ ದೃಷ್ಟಿಯಿಂದ ಅದರ ಗುಣದೋಷಗಳನ್ನು ಪರಿಕಿಸುವ, ಭವಲೋಕದಲ್ಲಿ ಕಂಡದ್ದನ್ನು ಭಾವಲೋಕದಲ್ಲಿ ಪುನರನುಭವಿಸಿ ಕಾವ್ಯ ಮಾಧ್ಯಮದಲ್ಲಿ ಅಭಿವ್ಯಕ್ತಗೊಳಿಸುವ ಗರುಡ ದೃಷ್ಟಿಯ ಕವಿ. ತನ್ನೆದುರಿಗೆ ನಡೆಯುತ್ತಿರುವ ಅಧರ್ಮದ ಪೈಶಾಚಿಕ ನೃತ್ಯವನ್ನು, ಭ್ರಷ್ಟಾಚಾರದ ಭೂತಗುಣಿತವನ್ನು ಕಂಡೂ ಕಾಣದಂತೆ ನಟಿಸುವ ಸಾಹಿತಿ ಗೌರವಾರ್ಹನಲ್ಲ; ಅದೇ ಸರಿಯೆಂದು ವಾದಿಸುವ ಸಾಹಿತಿ ನೀತಿಭ್ರಷ್ಟ ಮಾತ್ರವಲ್ಲ, ದೇಶದ್ರೋಹಿಯೂ ಅಹುದು. ಲಾಂಗೂಲಚಾಲನ ಪ್ರವೃತ್ತಿಯ, ಪರರ ತಂಬುಲಕ್ಕಾಗಿ ಹಾತೊರೆಯುವ ಯಾಚಕ ಮನೋಧರ್ಮದ, ದೌಷ್ಟ್ಯಕ್ಕಂಜಿ ತಲೆ ಮರೆಸಿಕೊಳ್ಳುವ ನಪುಂಸಕತ್ವದ ಸಾಹಿತಿಗಳಿಂದ ಸಾಹಿತ್ಯಕ್ಕೂ ಅಪಚಾರ, ನಾಡಿಗೂ ಗ್ರಹಚಾರ.

'ಎದ್ದರೆ ಕಾಲಿಗೆ ಬೀಳುತ್ತದೆ, ಬಿದ್ದರೆ ಕಚಪಿಚ ತುಳಿಯುತ್ತದೆ ಈ ಲೋಕ; ಹೇಗೋ ಏನೋ ಮೇಲೆದ್ದವನದೆ ಗದ್ದುಗೆ, ಅವನದೆ ಎಲ್ಲ ಪ್ರತಾಪ'. ಜೀವನದ ಸಕಲ ಕ್ಷೇತ್ರಗಳಲ್ಲಿಯೂ ಇಂಥದೇ ಪರಿಸ್ಥಿತಿಯನ್ನು ದಿನದಿನವೂ ಎದುರುಗೊಳ್ಳುತ್ತೇವೆ. ಮುಂದೆ ಹೋಗುವವರನ್ನು, ಮೊದಲೆ ಬಂದವರನ್ನು ಜಗ್ಗಿ ಹಿಂದಕ್ಕೆಳೆದು ಕೆಡವಿ, ಅವರ ಮೇಲೆ ಕುಳಿತು ಹೋಗುವುದೆ ಇಂದಿನ ಲೋಕರೂಢಿ. ಅಂಥವರಿಗೆ ಕವಿ ಬೋಧಿಸುತ್ತಾರೆ—

**ಅಲ್ಲಲ್ಲಿ ಕ್ಯೂ ನಿಂತು ಬಸ್ಸನು ಹತ್ತು; ಒತ್ತದಿರು**
**ನಿನಗಿಂತ ಮೊದಲೆ ಬಂದವರ**
**ಬಸ್ಸಿನೊಳಗೂ ನೀನು ನಿಂತರೂ ಏನಂತೆ**
**ಎಷ್ಟು ಹೊತ್ತಿನ ಪಯಣ ಏನಾತುರ?** *(ನನ್ನ-ನಿನ್ನ ನಡುವೆ, ಪುಟ 81)*

ಎಂದು. ಕೆಲವು ಸಾಬಾ ಮನುಷ್ಯರಂತು 'ಕೊಂಕುನಗೆ, ನರಿಮಾತು, ಕಪಿಮುಷ್ಟಿ, ವೃಕೋದರಗಳ ಮಧ್ಯೆ' ಸಿಕ್ಕಿಕೊಂಡು ಬಜ್ಜಿಯಾಗುತ್ತಾರೆ. ಮತ್ತೆ ಕೆಲವರಿದ್ದಾರೆ; ಪಾದಚಾರಿಯನ್ನು ಕರೆದು ಕಾರೊಳಗೆ ಕೂರಿಸುತ್ತಾರೆ; ಕತ್ತಲೆಯ ಗಲ್ಲಿಯಲ್ಲಿ ಜೇಬನ್ನು ಜಫ್ತಿ ಮಾಡಿ, ಇಳಿಸುತ್ತಾರೆ; ಆ ಪಾದಚಾರಿ ಒಬ್ಬನೇ ತೊಳಲಿ ಬಳಲಬೇಕಾಗುತ್ತದೆ. ಇಂತೆಯೇ ನೂರಾರು ಲೋಕಾನುಭವಗಳು ಕವಿಭಾಷೆಯಲ್ಲಿ ಮೂರ್ತತ್ವ ಪಡೆಯುತ್ತವೆ; ಲೋಕದ ಜನರನ್ನು ಜಾಗೃತಗೊಳಿಸುತ್ತವೆ. ಕೆಲವೆಡೆಗಳಲ್ಲಿ ಇಣುಕಿ ಮರೆಯಾಗುವ ನಿರಾಶೆಯ ನುಡಿಗಳ ಹಿಂದೆ ಈ ಕವಿಗೆ ಸಲವಲ್ಲದ ಒಗರಿದೆ, ಕಹಿ ಇದೆ, ಖಾರವಿದೆ.

**ಖಳನಾಯಕರು ಸೋಲುವುದು**
**ಕಾವ್ಯ ಅಥವಾ ನಾಟಕಗಳಲ್ಲಿ ಮಾತ್ರ;**
**ವಾಸ್ತವದಲ್ಲಿ ಅವರದೇ ವಿಜೃಂಭಣೆ**
**ಮತ್ತೆ ಪ್ರಧಾನ ಪಾತ್ರ** *(ಕಾಡಿನ ಕತ್ತಲಲ್ಲಿ, ಪುಟ 31)*

ಭರತಖಂಡದ ಇಂದಿನ ವಾಸ್ತವ ಚಿತ್ರವನ್ನಿಲ್ಲಿ ಕಾಣಬಹುದು. ಮೌಲ್ಯನಿರ್ಣಯಕಾರರು, ತತ್ವ ಪ್ರತಿಪಾದಕರು, ಸರ್ವ ಸೂತ್ರಧಾರರು ಅವರೆ ಆಗಿರುವಾಗ ಸತ್ಯವಂತರ ಮಾತಿಗೆಲ್ಲಿ ಬೆಲೆ? ಹತ್ತು ಸುಳ್ಳು ಒಂದು ನಿಜಕ್ಕೆ ಸಮ ಎಂಬ ಸೂತ್ರ ಚಲಾವಣೆಯಲ್ಲಿರುವ ಕಾಲದಲ್ಲಿ ಒಳ್ಳೆಯದು ಮೂಲೆ ಸೇರಬೇಕಾಗಿದೆ. ನಿಮಿಷಕ್ಕೊಮ್ಮೆ ಬಣ್ಣ ಬದಲಾಯಿಸುವ, ಪಕ್ಷಾಂತರವಾಗುವ ಗೋಸುಂಬೆಗಳಿಗೆ ಚುಚ್ಚುಮದ್ದು ಕಂಡುಹಿಡಿಯಬೇಕೆನ್ನುವ ಕವಿಯ ಮಾತು ಸಪ್ಪೆಯಾಯಿತೆಂದೇ ತೋರುತ್ತದೆ. ಬದುಕಿದ್ದಾಗಲೇ ನಾಲ್ಕು ಜನದ ಹೆಗಲಿನ ಮೇಲೆ ಹೊರಿಸಿಕೊಂಡು ಹೋಗುವ ಮಹಾ ಸ್ವಾಮಿಗಳಿಗೆ ಮಾತಿನ ಬರೆ ಲೆಕ್ಕವೆ?

ಕನ್ನಡ ನಾಡುನುಡಿಗಳಿಗೆ ಆಗಿರುವ ಅನ್ಯಾಯದ ವಿರುದ್ಧವಾಗಿ ಶಿವರುದ್ರಪ್ಪನವರ ನಾಲಗೆ ಗುಡುಗಿದೆ, ಲೇಖನಿ ಕುಡುಹಾಗಿದೆ. 'ಕನ್ನಡ ಕುಲಬಾಂಧವರ ಸ್ವಾಗತ ಗೀತೆ' ಯಂತು ವ್ಯಂಗ್ಯ ವಿಡಂಬನೆಗಳ ಮೂಲಕ ಕನ್ನಡಿಗರ ಮಾನವನ್ನು ಹರಾಜು ಮಾಡಿರುವುದಲ್ಲದೆ, ಪರೋಕ್ಷವಾಗಿ ಸರ್ಕಾರವನ್ನು ತರಾಟೆಗೆ ತೆಗೆದುಕೊಂಡಿದೆ. ಕನ್ನಡದ ಅತ್ಯುತ್ತಮ ವಿಡಂಬನ ಕವಿತೆಗಳಲ್ಲಿ ಇದೂ ಒಂದು. ಹೊರಗಿಂದ ಬಂದವರಿಗೆ ಮಾನವನ್ನು ಮಾರಿಯಾದರೂ ಉಪಚಾರ ಮಾಡುವ ಕನ್ನಡಿಗರ ಔದಾರ್ಯವನ್ನು ಛೀಮಾರಿ ಮಾಡಿದ್ದಾರೆ. ರೇಷ್ಮೆಯ ವಸ್ತ್ರವನ್ನು ಸುತ್ತಿ ಹೊಡೆಯುತ್ತಾರೆ; ಒಳಗೇನಿದೆಯೋ ಹೊಡೆಸಿಕೊಂಡವರಿಗೇ ಗೊತ್ತು. ಪ್ರತಿವರ್ಷವೂ ಕನ್ನಡ ರಾಜ್ಯೋತ್ಸವ ನಡೆಯುತ್ತಿದೆ; ವಿಶ್ವಕನ್ನಡ ಸಮ್ಮೇಳನವೂ ನಡೆಯಲಿದೆ; ಆದರೆ ನಿಜಕ್ಕೂ ರಾಜ್ಯೋದಯವಾಗಿದೆಯೆ?

**ನಿಜ; ರಾಜ್ಯೋದಯವಾಗಿದೆ ಹೊರಗೆ**
**ಇನ್ನೂ ಕನ್ನಡ ರಾಜ್ಯೋದಯವಾಗುವುದಿದೆ**
**ನಮಗೂ ನಿಮಗೂ ಒಳಗೆ** *(ಗೋಡೆ, ಪುಟ 12)*

ಆ ಪ್ರಶ್ನೆಗೆ ಈ ಉತ್ತರವೇ ಸರಿ. ಎಲ್ಲ ಕನ್ನಡಿಗರ, ಅದರಲ್ಲಿಯೂ ಸಾಹಿತಿಗಳ ಸರ್ಕಾರದ ಸೂತ್ರಗಳನ್ನು ಹಿಡಿದಿರುವವರ ಮನಸ್ಸಿನೊಳಗೆ ರಾಜ್ಯೋದಯವಾದಾಗಲೇ ನಿಜವಾದ ರಾಜ್ಯೋತ್ಸವವನ್ನು ಆಚರಿಸಿದಂತಾಗುತ್ತದೆ.

೩

ಕವಿ ವಿಮರ್ಶಕ ಮತ್ತು ವಾಗ್ಮಿ—ಇವು ಪ್ರಾಧ್ಯಾಪಕ ಶಿವರುದ್ರಪ್ಪನವರ ಮೂರು ಮುಖಗಳು. ತೀನಂಶ್ರೀಯವರಂತೆ ಅವರು ಪ್ರಾಧ್ಯಾಪಕ ವೃತ್ತಿಗೆಂದೇ ಹುಟ್ಟಿದವರು.

ಆದರ್ಶ ಪ್ರಾಧ್ಯಾಪಕನಲ್ಲಿರಬೇಕಾದ ಎಲ್ಲ ಗುಣಗಳಿಗೂ ಅವರು ಆಕರವಾಗಿದ್ದಾರೆ. ವಿದ್ವತ್ತು, ವಚೋವಿಲಾಸಗಳ ಜತೆಗೆ ಸಚ್ಛೀಲ ಅವರ ಆಸ್ತಿಗಳಾಗಿವೆ. ಚರಿತ್ರಹೀನತೆಯಾಗಲೀ, ತತ್ತ್ವಚ್ಯುತಿಯಾಗಲೀ, ಸತ್ಯಭ್ರಷ್ಟತೆಯಾಗಲೀ ಅವರ ಬಳಿ ಸುಳಿಯುವುದಿಲ್ಲ. ಸ್ವಾರ್ಥಕ್ಕಾಗಲೀ, ಕ್ಷಣಿಕ ಜನಪ್ರಿಯತೆಗಾಗಲೀ ಒಣ ಹೆಮ್ಮೆ ಹೆಬ್ಬುಬ್ಬುಗಳಿಗಾಗಲೀ ಸತ್ಯದೊಡನೆ ಅವರು ರಾಜಿ ಮಾಡಿಕೊಂಡವರಲ್ಲ. ತೊಂಡು ಗೂಳಿಗಳು ತುಳಿದು ಮುಂದೆ ಹರಿದಾಗಲೂ ಅವರು ಅಧೀರರಾಗಲಿಲ್ಲ, ನಿರಾಶರಾಗಲಿಲ್ಲ. ಸಾರಸ್ವತ ತಪಸ್ಸಿನ ಫಲವಾಗಿ, ಈರ್ಷ್ಯಾದಿ ಆಸುರೀ ಗುಣಗಳ ಮೂಲವಾದ ಆತ್ಮಘಾತಕ ಸ್ಪರ್ಧೆಯಿಂದ ತಲೆ ಕೆಡಿಸಿಕೊಳ್ಳದೆ, ಜಗತ್ತಿನ ಜಂಝಾಟದಿಂದ ದೂರ ನಿಂತು, ಭಾವ ಲೋಕದಲ್ಲಿಯೆ ವಿಹರಿಸುತ್ತ ಸಮಚಿತ್ತತೆಯನ್ನು ಸಾಧಿಸಿಕೊಂಡಿರುವ ಸಾಧಕರು. ಪರಂಪರೆ ಪ್ರಗತಿಗಳ ಸಂಗಮವಾಗಿ, ಬಾಳಿನಲ್ಲಿ ಸಮನ್ವಯ ದೃಷ್ಟಿಯನ್ನು ರೂಢಿಸಿಕೊಂಡರೂ—

**ಮಣಿಯದಿಹ ಮನವೊಂದು ಸಾಧಿಸುವ ಹಟವೊಂದು**
**ನಿಜದ ನೇರಕೆ ನಡೆವ ನಿಶ್ಚಲತೆಯೊಂದು-**
**ಅನ್ಯಾಯಕೆಂದೆಂದು ಬಾಗದೆಚ್ಚರವೊಂದು**
**ಮರುಕಕ್ಕೆ ಪ್ರೇಮಕ್ಕೆ ಚಿರತೆರೆದ ಎದೆಯೊಂದು**

ಎಂಬ ತಾರಕ ವಾಕ್ಯ ಅವರ ಬದುಕನ್ನು ಸದಾ ರೂಪಿಸುತ್ತಿದೆ. ಆಧುನಿಕ ಕನ್ನಡ ಸಾಹಿತ್ಯ ಕ್ಷೇತ್ರದ ಹಿರಿಯ ತಲೆಮಾರಿನ ಸಾಹಿತ್ಯ ಸಾರ್ವಭೌಮರ ನಂತರದ ಅಗ್ರಪಟ್ಟಕ್ಕೆ ಅರ್ಹರಾದ ಶ್ರೇಷ್ಠ ಕವಿ ವಿಮರ್ಶಕರು, ಅಪೂರ್ವ ಪ್ರಾಧ್ಯಾಪಕರು ಡಾಕ್ಟರ್ ಶಿವರುದ್ರಪ್ಪನವರು. ಭುವನದ ಭಾಗ್ಯದಿಂದ, ಕನ್ನಡ ಸುದೈವದಿಂದ ನಾಡಿಗೆ ದೊರೆತಿರುವ 'ತಿಳಿದವಗೆ ಜಗವೆಲ್ಲ ರಸದ ಊಟ'ವೆಂದು ತಿಳಿದ ಸಾರಸ್ವತ ತಪಸ್ವಿಯಿವರು.

*(ಮೂಲ: 'ಸಾಹಿತಿಗಳ ಸಂಗದಲ್ಲಿ')*



# ಜಿಎಸ್‌ಎಸ್: ಪರಿವರ್ತನೆಗಳ ಸಂಧಿಭೂಮಿ

ಡಾ|| ರಾಜೇಂದ್ರ ಚೆನ್ನಿ

ಜಿಎಸ್‌ಎಸ್ ವ್ಯಕ್ತಿತ್ವದ ಒಂದು ಆಕರ್ಷಕ ಗುಣವೆಂದರೆ ಯಾವುದೇ ಕ್ರಿಯೆಯಾಗಲೀ ಅದೊಂದು ರಿಚುವಲ್, ಕರ್ಮಠ ಸಂಪ್ರದಾಯವಾಗಬಾರದು ಎನ್ನುವುದು; ಏನನ್ನು ಮಾಡಿದರೂ ತುಂಬ ಅರ್ಥಪೂರ್ಣವಾಗಿರಬೇಕೆಂಬ ಆಶಯದಿಂದಲೇ ಎಲ್ಲ ಕೆಲಸಗಳನ್ನು ಮಾಡಿಕೊಂಡು ಬಂದವರು ಅವರು. ಈ ಹಿನ್ನೆಲೆಯಲ್ಲಿ ಈ ತಲೆಮಾರಿನವರಿಗೆ ಜಿಎಸ್‌ಎಸ್ ವ್ಯಕ್ತಿತ್ವದ ಪ್ರಸ್ತುತತೆ ಮತ್ತು ಇಡೀ ಕನ್ನಡದ ಮನಸ್ಸಿನ ಮೇಲೆ, ಕನ್ನಡದ ಸಂಸ್ಕೃತಿ ಮೇಲೆ ಜಿಎಸ್‌ಎಸ್ ಯಾವ ರೀತಿಯ ಪ್ರಭಾವವನ್ನು ಮಾಡಿದ್ದಾರೆ ಎನ್ನುವುದನ್ನು ಸಂಕ್ಷಿಪ್ತವಾಗಿ ಪಟ್ಟಿಮಾಡಿ ಹೇಳುವುದು ಅವಶ್ಯಕ ಎಂದುಕೊಂಡಿದ್ದೇನೆ.

ನನ್ನ ದೃಷ್ಟಿಯಲ್ಲಿ ಕನ್ನಡ ಸಂಸ್ಕೃತಿ ಕಂಡಿರುವ ಅಪೂರ್ವ ಸಾಂಸ್ಕೃತಿಕ ವ್ಯಕ್ತಿತ್ವಗಳಲ್ಲಿ ಜಿಎಸ್‌ಎಸ್ ಒಬ್ಬರು. ಒಬ್ಬ ಕವಿ ಕಾವ್ಯವನ್ನು ಬರೆಯುವುದರ ಮೂಲಕ, ಒಬ್ಬ ಶಿಕ್ಷಕ 'ಮೇಷ್ಟ್ರು' ಆಗಿರುವುದರ ಮೂಲಕ, ಶಿಕ್ಷಣವನ್ನು ಕೊಡುವುದರ ಮೂಲಕ, ಒಂದು ಸಂಸ್ಥೆಯ ಹಿರಿಯ ಆಗಿದ್ದು ಸಂಸ್ಥೆಯನ್ನು ಕಟ್ಟುವುದರ ಮೂಲಕ, ಆ ಸಂಸ್ಥೆ ಆರೋಗ್ಯಕರವಾಗಿ ಕೆಲಸ ಮಾಡುವ ಹಾಗೆ ನೋಡಿಕೊಳ್ಳುವುದರ ಮೂಲಕ ಏನನ್ನು ಮಾಡಬಹುದೋ ಅದೆಲ್ಲವನ್ನೂ ಶಿವರುದ್ರಪ್ಪನವರು ಮಾಡಿ ತೋರಿಸಿದ್ದಾರೆ. ಆದರೆ, ಅದೆಲ್ಲಕ್ಕಿಂತ ಮುಖ್ಯ ವಾಗಿರೋದು ಏನೆಂದರೆ ಅವರ ಕಾವ್ಯ, ಬರಹ ಮತ್ತು ಅವರ ನಡವಳಿಕೆಯ ಹಿಂದಿರುವಂತಹ ದಟ್ಟವಾದ ಒಂದು ಆದರ್ಶದ ನಂಬುಗೆ ಇದೆಯಲ್ಲ ಅದು, ಯಾವುದನ್ನು ನಾವು ಕಾಲಮಾನದ ದೃಷ್ಟಿಯಿಂದ ನವೋದಯ ಎಂದು ಕರೆಯುತ್ತೇವೆಯೋ ಆ ಕಾಲದಲ್ಲಿಯೇ ಸೃಷ್ಟಿಯಾದದ್ದೆಂದು ನಾನು ತಿಳಿದುಕೊಂಡಿದ್ದೇನೆ. ಬಹುಶಃ ಅವರ ಇತ್ತೀಚಿನ ಕಾವ್ಯದಲ್ಲಿ ಕಾಣುವ ದಟ್ಟ ವಿಷಾದವೂ ಕೂಡಾ ಈ ಆದರ್ಶದಲ್ಲಿಯೇ ಹುಟ್ಟಿಕೊಂಡಿದ್ದು. ಆ ಆದರ್ಶ ಕನ್ನಡದ ನವೋದಯದಲ್ಲಿಯೇ ಸೃಷ್ಟಿಯಾದದ್ದು. ಎರಡನೆಯದಾಗಿ ಕನ್ನಡಕ್ಕೆ ಮಾಧ್ಯಮವಾಗಬೇಕು ಎನ್ನುವ ಶ್ರದ್ಧೆ ಕೂಡಾ ನವೋದಯದ ಪ್ರಮುಖ ಲಕ್ಷಣವೆಂದು ಕೊಂಡಿದ್ದೇನೆ. ಆ ಕಾಲದಲ್ಲಿ ಬರೆದ ಕನ್ನಡದ ಬರಹಗಾರರು ಆತ್ಮ ಪ್ರತ್ಯಯವನ್ನು ಪೂರ್ತಿಯಾಗಿ ಬದಿಗಿಟ್ಟು ನಾನು ಕೇವಲ ಮಾಧ್ಯಮ ಮಾತ್ರ, ನಾವು ಕೇವಲ ವಾಹಕರು ಮಾತ್ರ, ನಮ್ಮ ಮೂಲಕ ಕನ್ನಡ ಬೆಳೆಯಬೇಕು ಎನ್ನುವ ಶ್ರದ್ಧೆ ಅವರಿಗಿತ್ತಲ್ಲ, ಅದು

ಜಿಎಸ್‌ಎಸ್ ವ್ಯಕ್ತಿತ್ವದ ಹೊರ ಅಂಚನ್ನು ಸೃಷ್ಟಿಮಾಡಿತೆಂದುಕೊಂಡಿದ್ದೇನೆ. ಮೂರನೆಯ ಲಕ್ಷಣ ಕೂಡಾ ಆ ಯುಗದಲ್ಲೇ ಅವರು ಪಡೆದುಕೊಂಡಿದ್ದು ಎಂದುಕೊಂಡಿದ್ದೇನೆ. ಅದೇನೆಂದರೆ: ಸಂಸ್ಕೃತಿ ಎನ್ನುವುದು ಪಾಂಡಿತ್ಯದ ಮೂಲಕವಾಗಲೀ ಅಥವಾ ಸ್ವಯಾರ್ಜಿತ ಎಂದು ಯಾವುದನ್ನು ಕರೆಯಬಹುದೋ ಅದರ ಮೂಲಕವಾಗಲೀ ನಡೆಯುವ ವ್ಯವಹಾರವಲ್ಲ. ನಮ್ಮೊಳಗೇ ಹುಡುಕುವುದಕ್ಕಿಂತ ಹೆಚ್ಚಾಗಿ ಯಾವಾಗಲೂ ಎಲ್ಲ ಜನರ ಸಮಕ್ಷಮದಲ್ಲಿ ನಡೆಯಬೇಕಾದ ಪ್ರಮುಖ ವ್ಯವಹಾರ. ಸಂಸ್ಕೃತಿ ಮತ್ತು ಸಂಸ್ಕೃತಿಯ ರೂಪ ಆಗಿರುವ ಕಾವ್ಯ, ಸಾಹಿತ್ಯವಿಮರ್ಶೆ, ಇವೆಲ್ಲ ಕೇವಲ ವ್ಯಕ್ತಿನಿಷ್ಠ ನೆಲೆಯಲ್ಲಿ ಮಾತ್ರ ನಡೆದಿರುವ ಕಾಲಗಳು ಬಂದಿವೆ. ಆದರೆ ನವೋದಯದ ಪ್ರಮುಖ ಗುಣ ಏನೆಂದರೆ ಆತ್ಮಪ್ರತ್ಯಯವನ್ನು ಬದಿಗಿಟ್ಟು ಸಂಸ್ಕೃತಿ ಎನ್ನುವುದು ಸಮಕ್ಷಮದೊಡನೆ ಜೀವಂತ ಸಂಬಂಧದೊಡನೆ ಸೃಷ್ಟಿಯಾಗುವಂಥದ್ದು ಎನ್ನುವ ಶ್ರದ್ಧೆ. ಇಂತಹ ನವೋದಯದ ಲಕ್ಷಣಗಳು ಜಿಎಸ್‌ಎಸ್ ವ್ಯಕ್ತಿತ್ವದ ಹೊರ ಅಂಚನ್ನು, ಆಕೃತಿಯನ್ನೂ ಸೃಷ್ಟಿಸಿದವು. ಅದರ ಒಳಗೆ ಅವರು ನಮ್ಮ ತಲೆಮಾರಿಗೆ ತಂದದ್ದೇನೆಂದರೆ ಕನ್ನಡದ ಬಹಳ ದೊಡ್ಡ ವಾಗ್ವಾದಗಳು, ಬಹಳ ದೊಡ್ಡ ಬದಲಾವಣೆಗಳು; ಹೊಸಗನ್ನಡ ಸಾಹಿತ್ಯದ ಬೇರೆ ಬೇರೆ ರೀತಿಯ ಶಕ್ತಿಗಳು ಅವರ ವ್ಯಕ್ತಿತ್ವದ ಮೂಲಕ ಹಾದು ಹೋಗುವ ಹಾಗೆ ಒಂದು 'ಸಂಧಿಭೂಮಿ'ಯಾದರು ಎನ್ನುವುದು ಕನ್ನಡಕ್ಕೆ ಬಹಳ ಮುಖ್ಯವಾದುದು. ಆ ಕಾಲದಲ್ಲಿ ಬರೆದವರು, ನಂತರ ಬರೆಯುತ್ತಿರುವವರು ಬಹಳ ಜನರಿದ್ದಾರೆ. ಆದರೆ ಜಿಎಸ್‌ಎಸ್ ವ್ಯಕ್ತಿತ್ವವೆನ್ನುವುದು ಒಂದು ಸಂಧಿಭೂಮಿ ಎಂದು ನನಗನ್ನಿಸುತ್ತದೆ. ಇಂದು ನಮ್ಮ ತಲೆಮಾರಿನವರು ಹಿಂದಿನ ದಶಕಗಳನ್ನು ನೋಡಿದರೆ ಬೇರೆ ಬೇರೆ ಬಗೆಯ ಅನೇಕ ಪಲ್ಲಟಗಳು ಕಾಣುತ್ತವೆ. ಕನ್ನಡದ ಮನಸ್ಸಿನೊಳಗೆ, ಅರುಣೋದಯದಿಂದ ಇಲ್ಲಿವರೆಗೆ ಅನೇಕ ಪಲ್ಲಟಗಳು ನಡೆದಿವೆ. ಈ ಸಂಸ್ಕೃತಿಯ ಹೊರ ರಚನೆಯಲ್ಲಷ್ಟೇ ಅಲ್ಲ, ಅದರೊಳಗೆ ಬದುಕುತ್ತಿರುವ ಜೀವಂತ ಮನುಷ್ಯನೊಳಗೆ ಅವನು ಜೀವನದ ಬಗೆಗೆ ಏನಂದುಕೊಂಡಿದ್ದಾನೆ, ಇಡೀ ವಿಶ್ವದ ಬಗೆಗೆ ಏನಂದುಕೊಂಡಿದ್ದಾನೆ, ಇವೆಲ್ಲದರಲ್ಲೂ ಆಳವಾದ ಪಲ್ಲಟಗಳು ಜರುಗಿ ಹೋಗಿವೆ. ಈ ಎಲ್ಲ ಪಲ್ಲಟಗಳೂ ಜಿಎಸ್‌ಎಸ್ ಮೂಲಕ ಹಾದು ಹೋಗಿರೋದ್ರಿಂದ, ಜಿಎಸ್‌ಎಸ್ ಒಂದು ಸಂಧಿಭೂಮಿಯಾದರು ಎನ್ನುವುದು ಕನ್ನಡ ಸಾಹಿತ್ಯ ಸಂಸ್ಕೃತಿಯ ಒಂದು ಮುಖ್ಯ ಸಂಗತಿ ಎಂದುಕೊಂಡಿದ್ದೇನೆ.

ಜಿಎಸ್‌ಎಸ್ ಅವರನ್ನು ಅಭಿನಂದಿಸುವಾಗ, ಚರಿತ್ರೆಯ ಒಂದು ಘಟ್ಟದಲ್ಲಿ ಎಲ್ಲ ಶಕ್ತಿಗಳೂ ಮೇಳೈಸಿಕೊಂಡು ಎಲ್ಲರಿಗೂ ಮಾದರಿಯಾಗುವ ವ್ಯಕ್ತಿತ್ವವನ್ನು ಅವರು ಹೊಂದಿದ್ದಾರೆ ಎನ್ನುವುದರ ಜೊತೆಗೇನೆ, ಪ್ರಮುಖವಾಗಿ ಅವರು ಕವಿ ಎನ್ನುವುದನ್ನು ನೆನಪಿನಲ್ಲಿಟ್ಟುಕೊಂಡು ಇದು ಜರುಗಬೇಕು ಎನ್ನುವುದು ಕೂಡಾ ಮುಖ್ಯವಾಗ್ತದೆ. ಹಲವಾರು ಬಾರಿ ಚರ್ಚೆಗಳಲ್ಲಿ, ಅವರು ಕನ್ನಡ ವಿಭಾಗವನ್ನೂ ಕಟ್ಟಿರೋದರಿಂದ ಮುಖ್ಯರಾದರು ಅನ್ನೋದು; ಇಷ್ಟೊಂದು ಹೊಸ ಬಗೆಯ ವಿಚಾರಗಳನ್ನು ಸಂಗಮ

ಮಾಡುವ ಪುಸ್ತಕಗಳನ್ನು ತಂದಿರೋದರಿಂದ ಮುಖ್ಯವಾಗಿರೋದು ಅಂತಾ ಅಂದರೂ, ನಾನು ಅಂದುಕೊಂಡಿರೋದು ಕವಿಯಾಗಿಯೇ ಅವರು ಪ್ರಮುಖರು ಅಂತಾ. ಅನೇಕ ವಿಷಯಗಳನ್ನು ಕುರಿತು ಪದೇ ಪದೇ ಉತ್ತಮವಾದ ಪದ್ಯಗಳನ್ನು ಬರೆದಿದ್ದಾರೆ. ಉದಾಹರಣೆಗೆ 'ಕಾಲ'ದ ಬಗ್ಗೆ ಸುಂದರವಾದ, ಸೂಕ್ಷ್ಮವಾದ ಅನೇಕ ಪದ್ಯಗಳನ್ನು ಬರೆದಿದ್ದಾರೆ. ಆ ಕಾಲ ಮನುಷ್ಯನ ದೊಡ್ಡತನ, ದಡ್ಡತನ ಇನ್ನೆಲ್ಲವನ್ನೂ ಮರೆಯುವ ಹಾಗೆ ಮಾಡುತ್ತದೆ. ಆದರೆ ಕಾಲವೆನ್ನುವುದನ್ನು, ಮಾತಿನ ಮೂಲಕ ಕವಿಯಾಗಿ ಏನನ್ನು ಹೇಳುತ್ತಾನೋ ಅಥವಾ ಜಿಎಸ್ಎಸ್ ಅವರೇ ಹೇಳುವ ಹಾಗೆ ಕಾಲದ ಅಂಗಿಯನ್ನು ತೊಡಿಸುವ ಕ್ರಿಯೆಯನ್ನು ಕಾಲವಾಗಲೀ ಸಂಸ್ಕೃತಿಯಾಗಲೀ ಮರೆಯುವುದಿಲ್ಲ. ಆ ಕಾರಣದಿಂದ ಜಿಎಸ್ಎಸ್‌ರವರು ಬೇರೆ ಏನೆಲ್ಲ ಆಗಿದ್ದರೂ ಮುಖ್ಯವಾಗಿ ಕವಿಯೆಂದೇ ನಾನು ಭಾವಿಸುತ್ತೇನೆ. ನವೋದಯದ ಗುಣವೆ ಅದು. ಅದರ ವಿಸ್ತಾರವಾದ ಶೈಲಿ, ವಿಸ್ತಾರವಾದ ವಸ್ತು, ಜೊತೆಗೆ ಓದುಗನೊಂದಿಗೆ ತೆರೆದುಕೊಂಡು ಹೋಗುವಂತಹ ಕಾವ್ಯ, ಅದು.

ನನ್ನ ತಲೆಮಾರಿನವರಿಗೆ ಜಿಎಸ್ಎಸ್ ಬಗೆಗೆ ಮಾತನಾಡುವಾಗ ಒಂದು ರೀತಿಯ ಹಳಹಳಿಕೆ ಇದೆ. ಇಂತಹ ಸಂಸ್ಕೃತಿಯ ವ್ಯಕ್ತಿತ್ವಗಳು ಇಂದು ರೂಪುಗೊಳ್ಳುತ್ತಿಲ್ಲವೆಂಬ ವಿಷಾದ ಕೂಡಾ ಇದೆ. ಇದು ಆಗಿ ಹೋಗಿರುವ ಹಿಂದಿನ ತಲೆಮಾರನ್ನು ಕೇವಲ ವೈಭವೀಕರಿಸುವ ಮಾತಲ್ಲ. ನನಗೆ ಅನ್ನಿಸಿರುವಂತೆ ಮನುಷ್ಯನ ಹಸಿವನ್ನೇ ಮುಖ್ಯವೆಂದು ಎಲ್ಲಿ ನೋಡುತ್ತೇವೆಯೊ ಅಲ್ಲಿ ಸಾಂಸ್ಕೃತಿಕವಾಗಿ ಅಸಹನೆಯನ್ನೂ ನೋಡುತ್ತೇವೆ, ನಮ್ಮ ಮನುಷ್ಯತ್ವವನ್ನೂ ಕಳೆದುಕೊಳ್ಳುತ್ತೇವೆ. ಅತ್ಯಂತ ದರಿದ್ರನಾದ ಅತ್ಯಂತ ಹಸಿವಿನಲ್ಲಿರೋ ವ್ಯಕ್ತಿಗೂ ಕೂಡಾ ಕಾವ್ಯ ಮುಖ್ಯ. ಜಿಎಸ್ಎಸ್ ಕಾವ್ಯ ಉದ್ದಕ್ಕೂ ಮನುಷ್ಯನ ಮನಸ್ಸನ್ನು ತಿದ್ದಿತೀಡಿ ರೂಪಗೊಳಿಸುವಂತಹ ಕಾವ್ಯ. ಯಾಕೆಂದರೆ ಈ ಕಾವ್ಯದ ವಸ್ತುವೇ ಇಡೀ ಬದುಕನ್ನೇ ಕಾವ್ಯವನ್ನಾಗಿಸಿಕೊಂಡಿರುವ ವಸ್ತು. ಮುಂದೆ ಒಂದು ಘಟ್ಟದಲ್ಲಿ ಎಂತಹ ಕಾವ್ಯ ಹುಟ್ಟಿತೆಂದರೆ, ಯಾವುದೋ ತಾತ್ವಿಕ ಹುಡುಕಾಟಕ್ಕೇ ನಾವು ಬರೆಯಬೇಕು, ಇತಿಹಾಸವನ್ನು ಒಂದು ರೀತಿ ನೋಡಲಿಕ್ಕೆ ಕಾವ್ಯವನ್ನೂ ಸೃಷ್ಟಿಮಾಡಬೇಕು, ಸಮಾಜವನ್ನು ಹೀಗೇ ನೋಡಬೇಕೆನ್ನುವುದಕ್ಕೆ ಕಾವ್ಯವನ್ನು ಸೃಷ್ಟಿಮಾಡಬೇಕೆನ್ನುವ ಹಠಗಳು ಪ್ರಾರಂಭವಾಗುತ್ತಾ ಹೋದ ಕಾಲಘಟ್ಟವನ್ನೂ ನಾವು ಕಾಣುತ್ತೇವೆ. ಆದರೆ ಶಿವರುದ್ರಪ್ಪನವರ ಕಾವ್ಯ ಎಂಥದ್ದು ಎಂದರೆ, ಇಡೀ ಬದುಕನ್ನು ಆ ಕ್ಷಣದಲ್ಲಿ ಏನನ್ನಿಸುತ್ತದೆಯೋ ಅದು ಸಾಮಾನ್ಯವಾಗಿರುವ ವಿಷಯವಾಗಿರಬಹುದು, ಏನೇ ಆಗಿರಬಹುದು ಅದನ್ನು ಕಾವ್ಯವಾಗಿಸಬೇಕು, ಅದೇ ಕಾವ್ಯ ಅನ್ನೋದನ್ನು ಭಾವಿಸಿ ರಚಿಸಿದ ಕಾವ್ಯ ಎನ್ನುವುದು ಬಹಳ ಮುಖ್ಯ. ಒಂದು ಉದಾಹರಣೆ ಕೊಡುವುದಾದರೆ, ಜಿಎಸ್ಎಸ್ ಕಾವ್ಯ ಎಂತಹ ಕೆಲಸ ಮಾಡಿದೆಯೆಂದರೆ, ಒಬ್ಬ ಮನುಷ್ಯನಿಗೆ ಹತಾಶೆ ಆದಾಗ, ಬೇಸರ ಆದಾಗ, ನೋವು-ಸಂಕಟ ಬಂದಾಗ, ದೇವರ ಬಗ್ಗೆ ಸಿಟ್ಟು ಬಂದಾಗ, ಎದುರಿಗಿರೋ ಹೂವನ್ನು ನೋಡಿದಾಗ ಆ ಕ್ಷಣಕ್ಕೆ ಏನು

ಅನ್ನಬೇಕೋ ಅದನ್ನು ಸುಂದರವಾಗಿ ಹೇಳಬೇಕೆನ್ನುವ ಎಂದೂ ಸಾಯದಿರುವ ಆಸೆಯೊಂದು ಮನುಷ್ಯನಲ್ಲಿದೆಯಲ್ಲ—ಮನುಷ್ಯನಲ್ಲಿ ಕೊನೆಯವರೆಗೆ ಉಳಿಯುವ ಆಸೆಯೆಂದರೆ ತಾನು ಕಂಡದ್ದನ್ನು ಮಾತಿನ ಮೂಲಕ ಹೇಳಬೇಕೆನ್ನುವ ಅಭೀಪ್ಸೆ–ಆ ಆಸೆಗೆ ಮಾಧ್ಯಮ ಆಗಿರೋದು ಕಾವ್ಯ. ಕಾವ್ಯವೆಂದರೆ ಕೇವಲ ಸಾಹಿತ್ಯಾಭ್ಯಾಸಿಗಳು, ಪಂಡಿತರು ಮಾತ್ರ ಚರ್ಚಿಸುವುದಲ್ಲ. ಅದು ಪ್ರತಿಯೊಬ್ಬರಿಗೂ ಬೇಕಾದದ್ದು. ಬಹುಶಃ ಮನುಷ್ಯ ಹಸಿವನ್ನೂ ತಡೆದುಕೊಳ್ಳಬಲ್ಲ. ಆದರೆ ಕಾವ್ಯವಿಲ್ಲದಿದ್ದರೆ ಆ ಸಂಸ್ಕೃತಿ ಸತ್ತು ಹೋಗುತ್ತದೆ. ಜಿಎಸ್ಎಸ್ ಕಾವ್ಯ ಎದುರಿಗಿರುವ ತೆಂಗಿನಮರ ಕಂಡಾಗ ಅದು ಕೇವಲ ಮರ ಅಲ್ಲ, ಈಗತಾನೆ ಗರಿಗೆದರಿ ಹಾರಲು ಸಿದ್ಧವಾಗಿರುವ ಹಕ್ಕಿ ಎನ್ನುತ್ತದೆ. ನೀರಿನ ಬಗ್ಗೆ ಬರೆದಾಗ, ಅಲ್ಲಿ ಬಚ್ಚಲುಮನೆಯಲ್ಲಿ ಕುದೀತಾ ಇರೋದು ಬಿಸಿಯಾದ ನಿಟ್ಟುಸಿರಿನೋಪಾದಿಯಲ್ಲಿ ಇರುವಂಥದ್ದು, ಪಕ್ಕದಲ್ಲಿ ಊಟಕ್ಕಿಟ್ಟುಕೊಂಡಿರೋ ನೀರು ಒಂದು ರೀತಿಯಲ್ಲಿ ದುಮ್ಮಾನದಿಂದ ಕೂತಿರುವಂಥದ್ದು, ಇದೆಲ್ಲವೂ ಕಾವ್ಯವಾಗಿದೆ. ಕಾವ್ಯ ಇಡೀ ಜಗತ್ತಿನ ಸಮಸ್ತವನ್ನೂ, ಇದು ಶ್ರೇಷ್ಠ, ಇದು ಕನಿಷ್ಠ, ಇದು ಪವಿತ್ರ, ಇದು ಸಾಮಾನ್ಯವೆಂದು ವರ್ಗೀಕರಣ ಮಾಡುವಂಥದ್ದಲ್ಲ. ಇದರ ಶ್ರದ್ಧೆ ಏನು ಅಂದರೆ ಇಡೀ ಬದುಕೇ ಮೂಲತಃ ಒಂದು ಕಾವ್ಯ ಅನ್ನೋದು. ಕವಿ ಅದನ್ನು ಕಾವ್ಯದ ಭಾಷೆಯ ಮೂಲಕ ಹೇಳುತ್ತಾನೆ. ಈ ಶ್ರದ್ಧೆ ಇರುವುದರಿಂದಲೇ ಅವರ ಕಾವ್ಯ ಎಲ್ಲವನ್ನೂ ಗಮನಿಸುತ್ತದೆ. ಇಲ್ಲಿ ಕುಳಿತಿರುವ ಹದಿನೈದು-ಹದಿನಾರು ವಯಸ್ಸಿನ ಹುಡುಗ-ಹುಡುಗಿಯರನ್ನು ಹೇಗೆ ನೋಡ್ತಿದ್ದೀವಿ ಅಂದರೆ, ಇವು ಬರೀ ಮೆದುಳುಗಳೆಂಬ ಬೌದ್ಧಿಕ ತಪ್ಪೊಂದನ್ನೂ ನಾವು ಮಾಡುತ್ತಿದ್ದೇವೆ. ಈ ಮೆದುಳುಗಳೊಳಗೆ ಇಂತಹದ್ದೇ ನಿಷ್ಠೆಯನ್ನು ತುಂಬಬೇಕು, ಈ ಥರದ ರಾಜಕೀಯ ಪ್ರಜ್ಞೆಯನ್ನೇ ತುಂಬಬೇಕು ಎಂದು programme ಮಾಡಬೇಕೆಂದು ನೋಡುತ್ತೇವೆಯೇ ಹೊರತು, ಆ ಹದಿವಯಸ್ಸು ಪ್ರತಿಕ್ಷಣಕ್ಕೂ ನೋಯುತ್ತಿರುತ್ತದೆ, ಪ್ರತಿ ಕ್ಷಣಕ್ಕೂ ಸಂತೋಷಪಡುತ್ತದೆ, ಪ್ರತಿಕ್ಷಣವೂ ಏನನ್ನೋ ಹೇಳಲು ತವಕಿಸುತ್ತಿರುತ್ತದೆ—ಆ ತವಕವನ್ನು ಹೇಳಲು ಪದಗಳು ಎಲ್ಲಿವೆ? ಆ ತವಕವನ್ನೂ ಅಭಿವ್ಯಕ್ತಿಸುವ ಕಾವ್ಯ ಎಲ್ಲಿದೆ? ಎಂಬ ಪ್ರಶ್ನೆಗೆ ಜಿಎಸ್ಎಸ್ ಕಾವ್ಯ ಉತ್ತರ ಕೊಡುತ್ತದೆ. ಆದ್ದರಿಂದಲೇ ಈ ಬಗೆಯ ಕಾವ್ಯ ಬಹಳ ಮುಖ್ಯವೆನಿಸುತ್ತದೆ. ಇತ್ತೀಚೆಗೆ ಅವರು ಬರೆದಿರುವ ಕಾವ್ಯವನ್ನು ನೋಡಿದರೆ—ಅನಂತಮೂರ್ತಿಯವರು ಪ್ರಸನ್ನತೆ ಎಂಬ ಪದ ಬಳಸಿದ್ದಾರೆ—ನನಗನ್ನಿಸೋದು ಏನೆಂದರೆ ಆ ಪ್ರಸನ್ನತೆ ಒಂದು ಬಗೆಯ ವಿಷಾದಯೋಗದ ಮೇಲೆ ಬಂದಿರುವ ಪ್ರಸನ್ನತೆ. ಈ ತಲೆಮಾರಿಗೆ ಅನೇಕ ತಲ್ಲಣಗಳಿವೆ. ನಮ್ಮೆದುರಿಗೇ ಸಮಾಜ ಇನ್ನು ನಾಶವಾಗಿ ಬಿಡುತ್ತದೆ ಎನ್ನುವಂತಹ ಮನುಷ್ಯದ್ವೇಷಿಗಳು ನಮ್ಮೆದುರಿಗಿರುವ ಸಂದರ್ಭದಲ್ಲಿ, ಅವರ ಕಾವ್ಯ ನಮ್ಮ ಆತಂಕ, ತವಕ ತಲ್ಲಣಗಳಿಗೆ ಮಾತು ಕೊಟ್ಟಂತಹ ಕಾವ್ಯ. ಆದ್ದರಿಂದ ಅದು ನಮಗೆ ಮುಖ್ಯವಾಗ್ತದೆ. ಉದಾಹರಣೆಗೆ ಒಂದು ಕಡೆ ಹೇಳ್ತಾರೆ: ಮರಗಳು ಚಿಗುರುತ್ತವೆ, ಅದರ ಬಗ್ಗೆ ನನಗೇನೂ ಅನುಮಾನವಿಲ್ಲ; ಅನುಮಾನ ಯಾರ ಬಗ್ಗೆ ಇದೆ ಅಂದರೆ ಇವುಗಳ ನಡುವೆ ಇರುವ ಮನುಷ್ಯರ ಬಗ್ಗೆ

ಮತ್ತು ಆ ಮನುಷ್ಯರ ಒಳಗಿರುವ ದಂಡಕಾರಣ್ಯಗಳ ಬಗ್ಗೆ. ಈ ಕಾವ್ಯ ಕೇವಲ ಜಗತ್ತೆಲ್ಲ ಶಿವಸುಂದರವಾಗಿದೆ ಎಂದು ಹೇಳುವ ಕಾವ್ಯವಲ್ಲ. ಅದು ಎಲ್ಲವನ್ನೂ ನೋಡಿದೆ. ಕೃಷ್ಣನ ಅವಮಾನವನ್ನೂ ನೋಡಿದೆ, ಏಕಲವ್ಯನ ದುಃಖವನ್ನು ಅವನ ತಾಯಿಯ ದೃಷ್ಟಿಯಿಂದ ನೋಡಿದೆ. ಎಲ್ಲ ದುಃಖದುಮ್ಮಾನಗಳನ್ನೂ ನೋಡಿಯೂ ಒಂದು ಶ್ರದ್ಧೆಯನ್ನು ಉಳಿಸಿಕೊಂಡಿದೆ. ಅದಕ್ಕೇ ಈ ತಲೆಮಾರು ಒಂದನ್ನು ಕಳೆದುಕೊಂಡಿದ್ದರೆ ಒಂದನ್ನು ಉಳಿಸಿಕೊಂಡಿದೆ. ವಿಷಾದ ದಿನದಿನವೂ ಕ್ಷಣ ಕ್ಷಣವೂ ನಮಗೆ ಸಿಗುತ್ತಿದ್ದರೆ, ಆ ಪ್ರಸನ್ನತೆ ಮಾತ್ರ ಕಳೆದುಹೋಗಿದೆ. ಈ ಹಳಹಳಿಕೆ ಜಾಸ್ತಿಯಾದಾಗೆಲ್ಲ ಜಿಎಸ್‌ಎಸ್ ಕಾವ್ಯಕ್ಕೆ ನಾವು ಮರುಳುತ್ತಿರುತ್ತೇವೆ. ಆ ಕಾವ್ಯವೇ ಅಷ್ಟು ಮಾನವಪರವಾದುದು. ಇದು ಕೇವಲ ಅಭಿನಂದನೆಯ ಸಂದರ್ಭದಲ್ಲಿ ಅಷ್ಟೇ ಹೇಳುವ ಮಾತಲ್ಲ. ಒಬ್ಬ ವಿಮರ್ಶಕನಾಗಿ ಕೂಡಾ ಬಹಳ ಗೌರವವೆನ್ನಿಸುವುದು ಇಂತಹ ತೆರೆದುಕೊಂಡಂತಹ ಕಾವ್ಯವನ್ನು ಕಂಡಾಗ. ಎಲ್ಲವನ್ನು ಒಪ್ಪಿಕೊಂಡು ಮಾಗಿದ ಕಾವ್ಯವನ್ನು ಜಿಎಸ್‌ಎಸ್ ಬರೆದರಲ್ಲ, ಅದು ನಿಜವಾಗಿಯೂ ಮುಖ್ಯವಾದುದು. ನಾನು ಹೇಳುವ ಅರ್ಥದಲ್ಲಿ ಇದು ನಿಜವಾಗಿಯೂ ಡೆಮಾಕ್ರಟಿಕ್ ಆದ ಕಾವ್ಯ. ಇದು ಪಂಡಿತರಿಗೆ, ಮುಂಚೂಣಿಯಲ್ಲಿರುವವರಿಗೆ ಅಂತಹವರಿಗೆ ಅಷ್ಟೇ ಅಲ್ಲ, ಅತಿಸಾಮಾನ್ಯ ಮನುಷ್ಯನ ಜೀವನವೇ ಕಾವ್ಯ ಎಂಬ ನೆಲೆಯಿಂದ ಹೊರಡುವಂತಹದು.

ಅವರು ಕನ್ನಡ ವಿಭಾಗವನ್ನು ಕಟ್ಟಿದ ಬಗ್ಗೆ ಸಾಕಷ್ಟು ಪ್ರಸ್ತಾಪಗಳನ್ನು ಕೇಳಿದ್ದೇವೆ. ಅದು ನಿಜ, ಒಬ್ಬ ವಿಶ್ವವಿದ್ಯಾಲಯದ ಪ್ರಾಧ್ಯಾಪಕನಾಗಿ, ಪ್ರಾಮಾಣಿಕವಾಗಿ ಹೇಳೋದಾದ್ರೆ, ವಿಶ್ವವಿದ್ಯಾಲಯದ ವಿಭಾಗಗಳು ಸಾಮಾನ್ಯವಾಗಿ ವೈಚಾರಿಕ ಆಲಸ್ಯಕ್ಕೆ, ಬೌದ್ಧಿಕ ದಾರಿದ್ರ್ಯತನಕ್ಕೆ ಜೀವಂತ ಸಂಕೇತಗಳಾಗಿರುತ್ತವೆ. ಇದಕ್ಕಿಂತ ಹೆಚ್ಚು ಮುಂದೆ ಹೋಗಿರುವುದಿಲ್ಲ. ಯಾಕೆಂದರೆ ನಮಗೆ ಏನನ್ನು ಕಟ್ಟಿದರೂ ಮಠವನ್ನೇ ಕಟ್ಟಬೇಕೆಂಬ ಉಗ್ರನಿಷ್ಠೆ ಇರುವುದರಿಂದ, ಜೀವಂತವಾಗಿರುವುದನ್ನು ಅಲ್ಲಲ್ಲೇ ಹೊಸಕಿಹಾಕಿಬಿಟ್ಟು, ಶುಷ್ಕವಾದದ್ದೇನನ್ನೋ ನಿರ್ಮಿಸುತ್ತಾ ಹೋಗುತ್ತೇವೆ. ಅಂತಹ ಕಡೆ ಜೀವಂತ ವಿಭಾಗವೊಂದನ್ನು ಕಟ್ಟಿದ್ದು, ನಿಜವಾಗಿಯೂ ದೊಡ್ಡ ಕೆಲಸ. ಆದರೆ ಅದೊಂದು ಕೇವಲ ವಿಭಾಗವಲ್ಲ. ಕನ್ನಡಸಾಹಿತ್ಯವೆಂಬುದು ಒಂದು ಜ್ಞಾನದ ಶಿಸ್ತು. ಅಂಥದ್ದೊಂದು ಇಲ್ಲಿ ಬೆಳೆದಿದ್ದರೆ ಅದಕ್ಕೆ ಜಿಎಸ್‌ಎಸ್ ಕಾರಣರು. ಇದರಲ್ಲಿ ಅತಿಶಯೋಕ್ತಿ ಇಲ್ಲ. ಏಕೆಂದರೆ ಕನ್ನಡದ ಕೆಲಸಗಳು, ಅಭ್ಯಾಸಗಳು ವೈಯಕ್ತಿಕ ನೆಲೆಯಲ್ಲಿ ಬಹಳ ನಡೆಯಬಹುದು, ಕಾವ್ಯಸೃಷ್ಟಿಯಲ್ಲಿ ನಡೆಯಬಹುದು. ಆದರೆ ಇವೆಲ್ಲಕ್ಕೂ ಬೇಕಾಗುವಂತಹ ಒಂದು ವೈಚಾರಿಕ ಶಿಸ್ತು ಇದೆ, ಜ್ಞಾನದ ಸಂಗ್ರಹ ಇದೆ. ಜೊತೆಗೆ ಜ್ಞಾನದ ಉತ್ಪಾದನೆ ಕೂಡ ಆಗಬೇಕು. ಅದಕ್ಕೆ ತಕ್ಕ ಮಾದರಿ ಗ್ರಂಥಗಳು ಬೇಕಾಗ್ತವೆ. ಏನನ್ನು ಓದಬೇಕು ಎಂದು ಹೇಳಿಕೊಡುವವರು ಬೇಕಾಗುತ್ತಾರೆ. ಆ ದೃಷ್ಟಿಯಿಂದ ನೋಡುವುದಾದರೆ, ಜಿಎಸ್‌ಎಸ್ ಕಟ್ಟಿರೋದು ಕೇವಲ ಕನ್ನಡ ವಿಭಾಗವಲ್ಲ. ಅದು ಕನ್ನಡ ಸಾಹಿತ್ಯದ ಶಿಸ್ತು. ಇಂದು ಇಂತಹ ಮಟ್ಟದ ಕನ್ನಡ ವಿಮರ್ಶೆ ನಡೆಯುತ್ತಿರುವುದಕ್ಕೆ ಅವರು ಕಲ್ಪಿಸಿಕೊಟ್ಟಂತಹ

ಜ್ಞಾನದ ಶಿಸ್ತಿನ ಒಳಗಡೆ ಆಗಿರುವ ಪಲ್ಲಟಗಳು ಕಾರಣ. ಅದರ ಜೊತೆಗೆ ಅಕಾಡೆಮಿಯಲ್ಲಿ ಅವರು ಮಾಡಿಕೊಟ್ಟ ಗ್ರಂಥಗಳು ಎಲ್ಲರಿಗೂ ಪರಿಚಿತ ಇವೆ. ಈ ಇಪ್ಪತ್ತು ವರ್ಷಗಳ ಕನ್ನಡ ಸಾಹಿತ್ಯದ ಅಜೆಂಡಾ ಏನಿದೆ, ಅದೆಲ್ಲವನ್ನು ಅವರು ಸಂಪಾದಿಸಿರುವ ಪುಸ್ತಕಗಳ ತಲೆಬರಹಗಳಲ್ಲೇ ನೋಡಬಹುದು. ಕನ್ನಡ ವಿಮರ್ಶೆಯ ಅಜೆಂಡಾ ಎಂದರೆ, ನಮ್ಮ ಸಂಪ್ರದಾಯದ ಜೊತೆಗೆ ಅನುಸಂಧಾನವನ್ನು, ಪುನರ್ ಸೃಷ್ಟಿ ಮಾಡಿಕೊಳ್ಳುವುದು. ಸೂಕ್ಷ್ಮವಾಗಿ ಗಮನಿಸಿದರೆ, ಜಿಎಸ್‌ಎಸ್ ಇವತ್ತು ಇದು, ನಾಳೆ ಅದು ಅನ್ನೋ ಹಾಗೆ ಸಂಕಿರಣಗಳನ್ನು ಮಾಡಲಿಲ್ಲ. ಇನ್ನು ಒಂದು ಸಂಗತಿ ಹೇಳೋದಾದ್ರೆ, ಹೊಸ ವಿಮರ್ಶೆ ಬಂದು ಒಂದು ಕವಲು ದಾರಿಯಲ್ಲಿ ನಿಂತಿರುವಾಗ, ಒಬ್ಬ ಸಾಮಾನ್ಯ ವಿದ್ಯಾರ್ಥಿಗೆ ನಾವು ಬಳಸುವ ಪದಗಳೇ ಅರ್ಥವಾಗದಿದ್ದಾಗ, ವೈಚಾರಿಕ ಪರಿಭಾಷೆ ಅರ್ಥವಾಗುವ ಉದ್ದೇಶದಿಂದ ವೈಚಾರಿಕ ಪರಿಭಾಷೆಯ ಮಾಲೆಯನ್ನು ಅವರು ಶುರು ಮಾಡಿದರು. ಅವರು ಇದನ್ನೆಲ್ಲ ಆಕ್ಸಿಡೆಂಟಲ್ ಆಗಿ ಇವತ್ತು ಇದು, ನಾಳೆ ಅದು ಎನ್ನುವಂತೆ ಪುಸ್ತಕಗಳನ್ನು ಬರೆಸುವುದಾಗಲೀ ಸಂಕಿರಣಗಳನ್ನು ನಡೆಸುವುದಾಗಲೀ ಮಾಡದೆ, ಪ್ರತಿಕ್ಷಣಕ್ಕೂ ಸದ್ಯದ ತುರ್ತುಗಳೇನಿವೆಯೋ ಅವುಗಳನ್ನು ಗುರುತಿಸಿ, ಅವಕ್ಕನುಗುಣವಾಗಿ ಸಂಕಿರಣಗಳನ್ನು ಮಾಡಿ, ಅದರ ಮೂಲಕ ಜ್ಞಾನವನ್ನು ಸೃಷ್ಟಿಮಾಡುವ ಕೆಲಸ ಮಾಡಿದರು. ಒಂದು ಶಿಸ್ತು ಬೆಳೆಯಬೇಕಾದರೆ, ಸಾಹಿತ್ಯ ಬೆಳೆಯಬೇಕಾದರೆ, ಕೇವಲ ಸಾಹಿತ್ಯ ಕೃತಿಗಳಷ್ಟೇ ಇದ್ದರೆ ಸಾಲದು. ಅದು ಬಹಳ ದಡ್ಡನಂಬಿಕೆ. ನೀವು ಐನೂರು ಕಾದಂಬರಿಗಳನ್ನು ಎದುರಿಗಿಟ್ಟರೂ ಸಾಹಿತ್ಯ ವಿಮರ್ಶೆ ಅನ್ನೋದು ಬೆಳೆಯೋಲ್ಲ. ಅದು ಬೆಳೆಯಬೇಕಾದರೆ ಅದರ ವೈಚಾರಿಕ ಚೌಕಟ್ಟು, ಶಿಸ್ತು ಒಂದು ಧ್ಯಾನಮಾರ್ಗ ಆಗಬೇಕು. ಅದನ್ನು ಜಿಎಸ್‌ಎಸ್ ಸಾಧಿಸಿ ತೋರಿಸಿದ್ದಾರೆ. ಇಷ್ಟನ್ನೂ ಹೇಳಿದ ನಂತರ, ನಮ್ಮ ತಲೆಮಾರಿನ ದೃಷ್ಟಿಯಿಂದ ಇನ್ನೊಂದು ವಾಕ್ಯವನ್ನಿಲ್ಲಿ ಹೇಳಬಯಸುತ್ತೇನೆ. ಇವತ್ತು ಜಾತಿ, ಕೋಮುವಾದ ಮುಂತಾದ ಹೆಸರಿನಲ್ಲಿ ನರಭಕ್ಷಕರೇ ಓಡಾಡುತ್ತಿರುವ ಸಮಾಜದಲ್ಲಿ, ಒಂದು ಚಿಕ್ಕ ಹಣತೆಯನ್ನಿಟ್ಟುಕೊಂಡು 'ನಾನು ಹುಡುಕುತ್ತಾ ಇದ್ದೇನೆ' ಎನ್ನುವ ಹುಡುಗರಿದ್ದಾರೆ. ಇಲ್ಲಿ ಅವರೆಲ್ಲರಿಗೆ ಕಷ್ಟವೆನಿಸಿದಾಗ ಹೇಳಿಕೊಳ್ಳುವಂತಹ ಪದ್ಯಗಳನ್ನು ಜಿಎಸ್‌ಎಸ್ ಬರೆದಿದ್ದಾರೆ. ಇದಕ್ಕಿಂತ ದೊಡ್ಡದನ್ನು ಯಾವ ಮನುಷ್ಯನೂ ಸಾಧಿಸಬೇಕಾದ ಅವಶ್ಯಕತೆ ಇಲ್ಲವೆಂದು ಭಾವಿಸುತ್ತೇನೆ.



# ಶಿವರುದ್ರಪ್ಪನವರ ಸಂಸ್ಕೃತಿ ಸಾಧನೆ: ಒಂದು ಪರಿಶೀಲನೆ

ಡಾ॥ ಎಚ್. ಎಸ್. ರಾಘವೇಂದ್ರರಾವ್

**ಒಂ**ದು ಭಾಷೆಯ ಸಾಹಿತ್ಯಸಂಸ್ಕೃತಿಯ ಚರಿತ್ರೆಯಲ್ಲಿ ನಿರ್ದಿಷ್ಟ ಪಾತ್ರವನ್ನು ವಹಿಸುವ ಅವಕಾಶವು ಕೆಲವೇ ಕೆಲವರಿಗೆ ಸಿಗುತ್ತದೆ. ಹಾಗೆ ಮಾಡುವವರು ರಾಜಕೀಯ ನಾಯಕರೋ ಸಾಮಾಜಿಕ ಹೋರಾಟಗಳ ಮುಂಚೂಣಿಯಲ್ಲಿ ಇರುವವರೋ ಆಗಬೇಕಾಗಿಲ್ಲ. ಬದಲಾಗಿ ಅಂಥ ಚಲನವಲನಗಳನ್ನು ಪ್ರೀತಿ ಮತ್ತು ತಿಳಿವಳಿಕೆಗಳಿಂದ ಗ್ರಹಿಸುವ ಶಕ್ತಿ ಹಾಗೂ ತನ್ನಲ್ಲಿ ಅಗತ್ಯವಾದ ಬದಲಾವಣೆಗಳನ್ನು ತಂದುಕೊಳ್ಳುವ ಮುಕ್ತಮನಸ್ಸು ಅವರಿಗಿರಬೇಕು. ಈ ಕೆಲಸವು ಅಗ್ನಿಭಕ್ಷಕವಾದ ಮಾತುಗಾರಿಕೆಯಿಂದಲಾಗಲೀ ಯಾವುದೇ ಸುವರ್ಣಮಾಧ್ಯಮವನ್ನು ಒಪ್ಪಿಕೊಳ್ಳಲು ತಯಾರಿಲ್ಲದ ಶಠತನದಿಂದಲಾಗಲೀ ಸಾಧ್ಯವಾಗುವುದಿಲ್ಲ. ಸಾಂಸ್ಥಿಕವಾದ ಯಾವುದೇ ಪ್ರಯತ್ನವನ್ನು ಅನುಮಾನಿಸುವ ಇಂಡಿವಿಜುಯಲಿಸ್ಟ್ ನಿಲುವುಗಳಿಂದಲೂ ಅದು ಸಾಧ್ಯವಾಗಲಾರದು. ಅವನು ಮನುಷ್ಯರು ಮುಟ್ಟದ, ಮನುಷ್ಯರನ್ನು ಮುಟ್ಟದ ಗುಬ್ಬಿ ಆಗಬಾರದು. ಅವನಿಗೆ ಒಂದು ಬಾಯಿರಬೇಕು, ಹಾಗೆಯೇ ಹತ್ತಾರು ಕಿವಿಕಣ್ಣುಗಳಿರಬೇಕು. ಕಿರಿಯರೊಂದಿಗೆ ಕಲೆಯುವ ಮನಸ್ಸು, ಅವರಿಗೆ ಕಲಿಸಿ ಅವರಿಂದ ಕಲಿಯುವ ಉದಾರತೆ ಇರಬೇಕು. ಅಷ್ಟೇ ಮುಖ್ಯವಾಗಿ ತನಗೆ ಅನ್ನಿಸಿದ್ದನ್ನು ಧೈರ್ಯವಾಗಿ ಆದರೆ ವಿನಯದಿಂದ ಹೇಳಲು ಅವನಿಗೆ ಸಾಧ್ಯವಾಗಬೇಕು. ಸಾಂಸ್ಕೃತಿಕ ಸನ್ನಿವೇಶದಲ್ಲಿ ನಿರ್ಣಾಯಕ ಪಾತ್ರ ವಹಿಸುವ ಅವಕಾಶ ಅವನಿಗೆ ಸಿಗುವುದರಲ್ಲಿ ಅದೃಷ್ಟದ ಪಾತ್ರವೂ ಕೊಂಚ ಇದೆ. ಅವನು ತನ್ನದೇ ಆದ "ಕಲ್ಟ್" ಅನ್ನು ಬೆಳೆಸದೆಯೂ ಆರೋಗ್ಯಕರವಾದ ಕಲ್ಚರ್ ಅನ್ನು ಬೆಳೆಸಬಹುದು. ಹೌದು, ಇದೆಲ್ಲವನ್ನೂ ಮಾಡಲು ಕೊಂಚ ರಾಜಸ, ಕೊಂಚ ಸಾತ್ವಿಕ ಕೋಪ, ಕೊಂಚ ಸಂಘಟನಾ ಚಾತುರ್ಯಗಳೂ ಬೇಕು.

ಕಳೆದ ಮೂವತ್ತೈದು ವರ್ಷಗಳಿಂದ, ಈ ನಮ್ಮ ಸಮುದಾಯಗಳು ಅರಳಿದ, ಕೆರಳಿದ, ಹೊರಳಿಕೊಂಡ, ತಮಗೆ ತಾವೇ ಹಿಡಿದುಕೊಂಡ ಕನ್ನಡಿಗಳನ್ನು ತಾವೇ ಒಡೆದುಕೊಂಡು ಮುಖವಾಡಗಳನ್ನು ಕಟ್ಟಿಕೊಂಡ ಪರಿಯನ್ನು ನಾನು ತುಸು ದೂರದಿಂದ ನಸು ಸನಿಹದಿಂದ ನೋಡುತ್ತಾ ಬಂದಿದ್ದೇನೆ. ನನ್ನ ತಲೆಮಾರಿನವರಿಗೆ ಆದರ್ಶವೆನಿಸಿದ ಕೆಲವು ವಿಗ್ರಹಗಳನ್ನು ಬೇರೆಯವರು ಭಂಗಿಸುವ ಅಗತ್ಯವೇ ಬೀಳಲಿಲ್ಲ. ಮಸಿ ಹಚ್ಚಿಕೊಳ್ಳುವುದಕ್ಕೆ ಸ್ವಂತ ಕೈಗಳೂ ಸಾಕಲ್ಲವೇ? ನನ್ನ ತಲೆಮಾರಿನ ನಾವುಗಳೂ ದಿವ್ಯ ಸಿನಿಕತನದಲ್ಲಿ ಅಥವಾ

ಅವಕಾಶವಾದದ ಹುದುಲಿನಲ್ಲಿ ಕಳೆದುಹೋಗಿದ್ದಕ್ಕೂ ನಾವು ಜೀವಂತ ಸಾಕ್ಷಿಗಳು. ಈಗ, ಸಾಮಾಜಿಕ ಅರ್ಥಪೂರ್ಣತೆ ಇಲ್ಲದೆ ನಿರ್ಜೀವ ಹೆಣತನಗಳಲ್ಲಿ ಚಲಿಸುತ್ತಿದ್ದೇವೆ. ಇಂಥ ತಾರೆಗಳಿಲ್ಲದ ಬಾನಿನಲ್ಲಿ ವಿಶ್ವಸನೀಯತೆಯ ದ್ವೀಪಗಳಂತೆ ಇರುವ ಕೆಲವೇ ಕೆಲವರಲ್ಲಿ ಜಿ.ಎಸ್. ಶಿವರುದ್ರಪ್ಪನವರೂ ಒಬ್ಬರು. ಅವರೇ ಬಹುಹಿಂದೆ ಬರೆದ ಕವಿತೆಯ ಸಾಲುಗಳಂತೆ, "ನೂರುಲ್ಕೆಯ ರಭಸಮತಿಯ ಅಬ್ಬರಗಳ ನಡುವೆಯೂ ನಿಯತಗತಿಯ ತಾರಗೆಯೊಲು" ನೇರವಿರುವ ಪ್ರಯತ್ನ ಮಾಡಿದವರು.

ನನಗೆ ತೋರುವಂತೆ ಅವರ ವ್ಯಕ್ತಿತ್ವವು ಆದರ್ಶವಾದದ ಆವಿಗೆಯಲ್ಲಿ ಬೆಂದ ಮಡಕೆ. ಆವಿಗೆಗೆ ಶಾಖನೀಡಿದ್ದು ಕುವೆಂಪುರವರ ಸಾಮಾಜಿಕ ಸರಿತನ ಮತ್ತು ಸಾಹಿತ್ಯಕ ಬಹುತನಗಳ ಜೋಡಿ ಒಲೆಗಳು. ತನ್ನ ಗುರುಗಳ ಹಾಗೆ ಪರಮಹಂಸ-ವಿವೇಕಾನಂದರ ಬೆಳಕಿನಲ್ಲಿ ಬೆಳೆದರೂ, ಅವರ ವ್ಯಕ್ತಿತ್ವದಲ್ಲಿ ಪರಮಹಂಸರಿಗಿಂತ ವಿವೇಕಾನಂದರದೇ ಒಂದುಕೈಮೇಲೆ. ನನ್ನಂಥ ನಾಸ್ತಿಕರಿಗಂತೂ ಕಲ್ಲುಮಣ್ಣುಗಳ ಗುಡಿಯೊಳಗೆ, ಕಾಣದ ದೇವರನ್ನು ಹುಡುಕಿ ದಣಿದು, ಇಲ್ಲೇ ಇರುತಿಹ ಪ್ರೀತಿ ಪ್ರೇಮಗಳನ್ನು ಗುರುತಿಸಿದ ಧೋರಣೆ ಹತ್ತಿರವೆನ್ನಿಸುತ್ತದೆ. ಧರ್ಮವಾಗಲಿ, ಭಾಷೆಯಾಗಲಿ, ಬಡತನವೇ ಆಗಲಿ, ಅವರಿಗೆ ಭಾವನಾತ್ಮಕವಾದ ಸೆಳೆತಗಳಾಗಿವೆಯೇ ವಿನಾ ಭಾವುಕ ಅಂಟು ಆಗಿಲ್ಲ; ತನ್ನ ಬೇಳೆ ಬೇಯಿಸಿಕೊಳ್ಳುವ "ಫೆಟಿಶ್" ಆಗಿಲ್ಲ. "ಚೆನ್ನಬಸವ ನಾಯಕ", "ಮಹಾಚೈತ್ರ", "ಧರ್ಮಕಾರಣ" ಮುಂತಾದ ವಿವಾದಗಳಲ್ಲಿ ಅವರು ತಳೆದ ಆತ್ಮವಿಮರ್ಶಕ ನಿಲುವುಗಳ ಕನ್‌ಸಿಸ್ಟೆನ್ಸಿ ಗಮನೀಯವಾದುದು. ಸಮುದಾಯದ ಅಥವಾ ಸಹಚರರ ವಿರೋಧವನ್ನು ಕಟ್ಟಿಕೊಳ್ಳುವ ಭಯ ಅವರ ನಿಲುವುಗಳನ್ನು ಯಾವಾಗಲೂ ನಿಯಂತ್ರಿಸಿಲ್ಲ. ಹಾಗೆಯೇ, ಜನಪರವಾದುದನ್ನು ಅತಿರೇಕಕ್ಕೆ ಹೋಗದಂತೆ ಸಮರ್ಥಿಸುವುದು ಅವರ ಬದುಕು ಬರೆಹಗಳ ಲಕ್ಷಣವೇ ಆಗಿಬಿಟ್ಟಿದೆ. ಅಲ್ಲದೆ, ಬದುಕನ್ನು ನಿರ್ಲಕ್ಷಿಸುವ ಹಾಗೆ, ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವುದು ಅವರಿಗೆ ಯಾವಾಗಲೂ ಸಾಧ್ಯವಾಗಿಲ್ಲ. ಒಳ್ಳೆಯ ಪುಸ್ತಕ, ಒಳ್ಳೆಯ ಸಿನಿಮಾ, ನೋಡಲೇ ಬೇಕಾದ ನಾಟಕ, ಸಂಗೀತ ಇಂಥ ಕಡೆ ತಪ್ಪದೆ ಕಾಣುವ ಕೆಲವರಲ್ಲಿ ಅವರೂ ಒಬ್ಬರು.

ಇಂಥ ಗುಣ, ಲಕ್ಷಣ ಮತ್ತು ವಿಧಾನಗಳಿರುವ ವ್ಯಕ್ತಿಯು ಸಂಸ್ಕೃತಿರೂಪಣ ಮಾಡಬಹುದಾದ ಬಗೆಯಲ್ಲಿ ನನಗೆ ಆಸಕ್ತಿಯಿದೆ. ನಮ್ಮ ಕಾಲದಲ್ಲಿ ಸಾಹಿತ್ಯಸಂಸ್ಕೃತಿಯ ನಿರ್ಮಾಪಕರಾದ ಕುವೆಂಪು, ಕಾರಂತ, ಕೆ.ವಿ. ಸುಬ್ಬಣ್ಣ, ಲಂಕೇಶ್, ಅನಂತಮೂರ್ತಿ, ಕೆ.ವಿ. ನಾರಾಯಣ, ಜಿ. ರಾಜಶೇಖರ, ದೇವನೂರ ಮಹಾದೇವ, ಬರಗೂರು ರಾಮಚಂದ್ರಪ್ಪ, ಡಿ.ಆರ್. ನಾಗರಾಜ್, ಸಿದ್ದಲಿಂಗಯ್ಯ ಮುಂತಾದವರು ಈ ಕೆಲಸವನ್ನು ತಮತಮಗೆ ಅನನ್ಯವಾದ ರೀತಿಯಲ್ಲಿ ನಿರ್ವಹಿಸಿರುವುದನ್ನು ನಾವೆಲ್ಲರೂ ಬಲ್ಲೆವು. ಹಾಗೂ ಅವು ಹಿಡಿದ ಋಜು-ವಕ್ರ ಪಥಗಳನ್ನು ಕೂಡ. ಹಾಗೆಂದು, ಯಾವುದೇ ವ್ಯಕ್ತಿಗೆ ಸಂಸ್ಕೃತಿಯನ್ನು ತಾನೊಬ್ಬನೇ ರೂಪಿಸುವ ಸಾಮರ್ಥ್ಯವಿರುವುದೆಂದು ನಾನು ನಂಬುವುದಿಲ್ಲ.

ಹೆಚ್ಚೆಂದರೆ ಅವನು "ಸರಿಯಾದ ಸ್ಥಳ ಕಾಲಗಳಲ್ಲಿ ಇರುವ ಸರಿಯಾದ ಮನುಷ್ಯ" ಆಗಿರುತ್ತಾನೆ. ಮೇಲೆ ಹೇಳಿದವರ ಪಟ್ಟಿಗೆ, ಜಿ.ಎಸ್. ಶಿವರುದ್ರಪ್ಪನವರು ನಿಸ್ಸಂಶಯವಾಗಿ ಸೇರುತ್ತಾರೆ. ತಮ್ಮ ಪಾಲಿಗೆ ಬಂದ ಕೆಲಸಗಳನ್ನು ಅವರು ನಿರ್ವಹಿಸಿದ ರೀತಿಯು ಅವರನ್ನು ಕರ್ನಾಟಕದ ಸಂಸ್ಕೃತಿಕ್ಷೇತ್ರದಲ್ಲಿ ಬಹು ಗೌರವಪಾತ್ರರಾದ ವ್ಯಕ್ತಿಗಳಲ್ಲಿ ಒಬ್ಬರನ್ನಾಗಿ ಮಾಡಿದೆ. ಅವರ ಕವಿತೆ, ಸಾಹಿತ್ಯತತ್ತ್ವ ಅಥವಾ ವಿಮರ್ಶೆಗಳು ಅತ್ಯುತ್ತಮ ಮಟ್ಟದವಲ್ಲವೆನ್ನುವ ಹಲವರು ಸಿಗಬಹುದು. ಆದರೆ ಅವರ ಸಾಂಘಿಕ, ಸಾಂಸ್ಥಿಕ ಕೆಲಸಗಳ ಮಹತ್ವವನ್ನು ಕಡಿಮೆಮಾಡಿ ಮಾತನಾಡುವವರು ಅತಿ ವಿರಳ.

ಆದರೆ, ನಾನು ನನ್ನ ಪರಿಶೀಲನೆಯನ್ನು ಅವರ ಬರವಣಿಗೆಯ ಮೂಲಕವೇ ಮೊದಲು ಮಾಡಬಯಸುತ್ತೇನೆ. ಅವರ ಬಹುಪಾಲು ಕವಿತೆಗಳ ಮುಖ್ಯಗುಣ ಜನಸಮ್ಮುಖತೆ ಹಾಗೂ ಸಂವಹನಶೀಲತೆ. ಈ ಗುಣವನ್ನು ಕೆ.ವಿ. ನಾರಾಯಣ ಅವರು ಪಾರದರ್ಶಕತೆ, ಪ್ರಸಾದಗುಣ ಎಂಬ ಮಾತುಗಳಿಂದ ನಿರ್ದೇಶಿಸಿದ್ದಾರೆ. ಇವರದು "ಹೇಳುವ" ಕವಿತೆಯೇ ವಿನಾ "ಹುಡುಕುವ" ಕವಿತೆಯಲ್ಲ. ಸ್ವಲ್ಪಮಟ್ಟಿಗೆ ಇದು ಕುವೆಂಪುರವರ ಗುಣವೂ ಹೌದು. ಆದರೆ ಕುವೆಂಪು ಹೇಳುವ ಅನೇಕ ಸಂಗತಿಗಳು ತುಂಬಾ "ಮಿಸ್ಟಿ" ಆಗಿ, ಓದುಗನ ಅನುಭವದ ತೆಕ್ಕೆಗೆ ನಿಲುಕುವುದಿಲ್ಲ. "ಸಯ್ತೆ ನಾಂ ಸಮಾಧಿಗೆ. ತಟಿಚ್ಚರಣದಗ್ನಿಹಂಸ ಕೃಪಾಂಬೋಧಿಗೆ" ಎನ್ನುವಂತಹ ಸಾಲುಗಳ್ನು ಜಿಎಸ್ಎಸ್ ಅವರ ಕವಿತೆಗಳಲ್ಲಿ ಕಾಣುವುದು ಸಾಧ್ಯವೇ ಇಲ್ಲ. ಬದಲಾಗಿ ನಿಗೂಢತೆಗೆ ವಿದಾಯ ಹೇಳುವುದರ ಮೂಲಕವೇ, ಎಲ್ಲರೂ ಕಾಣಬಹುದಾದ ಆದರೆ ಕಾಣದಿರುವ ಸಂಗತಿಗಳ ಕಡೆಗೆ ಗಮನ ಸೆಳೆಯುವುದು ಅವರ ಕವಿತೆಗೆ ಸಾಧ್ಯವಾಗುತ್ತದೆ. ಅದು "ನನ್ನ ಮುಖ ನೀನು, ನಿನ್ನ ಮುಖ ನಾನು" ಕಾಣಲು ನೆರವಾಗುವ ಹಣತೆಯ ಕೆಲಸ. ಇದಕ್ಕೆ ಅವರ ಅನೇಕ ಕವಿತೆಗಳ ನಿಯತಲಯ ಹಾಗೂ ತತ್ಪರಿಣಾಮವಾದ ಗೇಯತೆಗಳೂ ಕಾರಣವಾಗಬಹುದು. ಅವರ ಸಂಕಲನವೊಂದಕ್ಕೆ ಮುನ್ನುಡಿ ಬರೆಯುವಾಗ ಡಿ.ಆರ್. ನಾಗರಾಜ್, ಜಿಎಸ್ಎಸ್ ಕವಿತೆಗಳಿಗೂ ಅದನ್ನು ಹಾಡಿದ ಹುಡುಗಿಯರ ದನಿಗಳಿಗೂ ಸಾಹಚರ್ಯ ಕಲ್ಪಿಸಿ ಬರೆದಿದ್ದು ನನಗೆ ನೆನಪಾಗುತ್ತಿದೆ. ಇದೇ ಕವಿತೆಯ ಅತ್ಯುತ್ತಮ ಮಾದರಿಯೆಂದು, ನಾನು ಹೇಳುತ್ತಿಲ್ಲ. ಆದರೆ ಜನಮಾನಸದಲ್ಲಿ ಇಂತಹ ಕವಿತೆಗೂ ಅನನ್ಯವಾದ ಸ್ಥಾನವು ಮೀಸಲಾಗಿರುವುದರಲ್ಲಿ ಅನುಮಾನವಿಲ್ಲ. ಅವರ ಕವಿತೆಯ ವೀಣೆಗೆ ಆದರ್ಶ ಹಾಗೂ ವಿಷಾದಗಳು ಜೋಡಿ ತಂತಿಗಳು. ಹಾಗೆ ನೋಡಿದರೆ, ಸುಖೋನ್ಮಾದದಲ್ಲಿ ಮೈಮರೆತ, ಮೈಮರೆಸುವ ಕವಿತೆಯನ್ನು ಜಿಎಸ್ಎಸ್ ಬರೆದಿಲ್ಲವೆಂದೇ ಹೇಳಬೇಕು. ಬದಲಾಗಿ ಅದು ಭಾವ-ವಿಚಾರಗಳ ಸಹಜೀವನದ ಕಾವ್ಯ. ಹಾಗೆಯೇ ಆ ಕವಿತೆ ದಾರ ಕಿತ್ತ ಗಾಳಿಪಟವಲ್ಲ. ಅತ್ಯಂತ ಲಯಬದ್ಧವಾದ ಗೇಯವಾದ ಸಾಲುಗಳಲ್ಲಿಯೂ ಅದು ತರ್ಕದ ಸಾಹಚರ್ಯವನ್ನು, ನಿಯಂತ್ರಣವನ್ನು ಕಳೆದುಕೊಳ್ಳುವುದಿಲ್ಲ. ಇದರ ಫಲವಾಗಿಯೇ ಸಂವಹನವು ಸುಲಭವಾಗುತ್ತದೆ. ಅದಕ್ಕೇ ಇರಬೇಕು, ಅವರ ಕವಿತೆಯನ್ನು ಕುರಿತ ಜಿಜ್ಞಾಸೆಗಿಂತ ಹೆಚ್ಚಾಗಿ ಅವು ನೀಡುವ ಅನುಭವಕ್ಕೆ ಒಡ್ಡಿಕೊಳ್ಳುವುದೇ

ಜಾಸ್ತಿ. ಅಂಶಲಯದ ಕಡೆಗೆ ಹೋಗುವುದು ಬಹಳ ಬಹಳ ಅಪರೂಪವಾಗಿರುವುದು, ಆ ಪದದ ನಿಜವಾದ ಅರ್ಥದಲ್ಲಿ ಜನಪದ ಸಂಗೀತಕ್ಕ ನಿಕಟವಾಗದಿರುವುದು, ಪ್ರವೃತ್ತಿಜನ್ಯ ಒತ್ತಾಯಗಳ ವಿಶೃಂಖಲ ಅಭಿವ್ಯಕ್ತಿಗೆ ಎಡೆಕೊಡದಿರುವುದು, ಇವೆಲ್ಲ ಅವರ ಕವಿತೆಯನ್ನು ನಾಗರಿಕವಾಗಿಸಿವೆ. ಅರ್ಬನ್ ಎನ್ನುವ ಅರ್ಥದಲ್ಲಿ ಅಲ್ಲ, ಸಿವಿಲೈಸ್ಡ್ ಎನ್ನುವ ಅರ್ಥದಲ್ಲಿ. ಇಂಥ ಕಡೆ ಸಹಜವಾಗಿಯೇ ಕಾವ್ಯವು ಸಂಖ್ಯೆಯಲ್ಲಿ ಪ್ರಾಲಿಫಿಕ್ ಆಗುತ್ತದೆ. ಏಕೆಂದರೆ ಅದರ ಗುರಿ ದರ್ಶನವೂ ಅಲ್ಲ, ಆಶಯ, ಆಕೃತಿಗಳ ವೈಯಕ್ತಿಕ ಹುಡುಕಾಟವೂ ಅಲ್ಲ. ಬದಲಾಗಿ ಅದರಲ್ಲಿ ಒಂದು ಬಗೆಯ ಪ್ರತಿಕ್ರಿಯಾತ್ಮಕತೆ ಇರುತ್ತದೆ. ಬದುಕಿನ ಸನ್ನಿವೇಶಗಳು ಕವಿತೆಯ ಸೃಷ್ಟಿಯನ್ನು ಡಿಮಾಂಡ್ ಮಾಡುತ್ತವೆ.

ತಮ್ಮ ಸುದೀರ್ಘ ಲೇಖನವೊಂದರಲ್ಲಿ ಕೆ.ವಿ. ತಿರುಮಲೇಶ್ ಅವರು ಶಿವರುದ್ರಪ್ಪನವರ ಕಾವ್ಯದ ಸ್ವರೂಪವನ್ನು ಕುರಿತು ಹಲವು ಸಂಗತಿಗಳನ್ನು ಹೇಳುತ್ತಾರೆ. ಅವರ ಪ್ರಕಾರ ಹೊಸಗನ್ನಡ ಕವಿತೆಯ ಮುಖ್ಯಧಾರೆ ರೆಟರಿಕಲ್ ಆದುದು. ಬೇಂದ್ರೆ, ಕುವೆಂಪು, ಅಡಿಗ ಮುಂತಾದವರು ಈ ಗುಂಪಿಗೆ ಸೇರುತ್ತಾರೆ. ಪದವಿಜೃಂಭಣೆ ಮತ್ತು ಓದುಗರನ್ನು ಒತ್ತಾಯಿಸುವ ಗುಣಗಳು ಇಂಥ ಕಾವ್ಯದ ಮುಖ್ಯ ಗುಣಗಳು. ಜಿಎಸ್ಎಸ್ ಅವರ ಕಾವ್ಯದಲ್ಲಿ ರೆಟರಿಕ್ ಇಲ್ಲದಿರುವುದರಿಂದ ಅದು ವಿಭಿನ್ನ ಧಾರೆಯೆಂದು ತಿರುಮಲೇಶ್ ಹೇಳುತ್ತಾರೆ. ಆದರೆ ತಮ್ಮ ಲೇಖನದ ಮುಂದಿನ ಹಂತದಲ್ಲಿ, ಅತ್ಯುತ್ತಮ ಕವಿಯು ರೆಟರಿಕ್ ಮತ್ತು ನಾನ್ ರೆಟರಿಕ್ ಎರಡನ್ನೂ ಅಗತ್ಯಕ್ಕೆ ತಕ್ಕಂತೆ ಬಳಸುವ ಸಾಮರ್ಥ್ಯವನ್ನು ಹೊಂದಿರುವನೆಂದೂ, ಅಡಿಗರ ಕಾವ್ಯದಲ್ಲಿ ಆ ಗುಣವಿದೆಯೆಂದೂ ಹೇಳುತ್ತಾರೆ. ಅಡಿಗ, ಬೇಂದ್ರೆ, ಕುವೆಂಪು, ಜಿಎಸ್ಎಸ್ ಅವರ ತೌಲನಿಕ ಮೌಲ್ಯಮಾಪನದ ಮಾತು ಬೇರೆ. ಆದರೆ ರೆಟರಿಕ್ ಎಂಬ ಪರಿಕಲ್ಪನೆಯನ್ನು ಇಷ್ಟು ಸರಳವಾಗಿ ವಿವರಿಸುವುದು ಸಾಧ್ಯವಿಲ್ಲ. ಓದುಗನ ಮನಸ್ಸನ್ನು ಆಕ್ರಮಣಶೀಲತೆಯಿಲ್ಲದೆ ಒಪ್ಪಿಸುವ ಮಿತ್ರಸಮ್ಮಿತವೂ ಇದೆ, ಓದುಗನ ಮನಸ್ಸಿನಲ್ಲಿರುವುದನ್ನೇ ಅವನಿಗೆ ಮನದಟ್ಟು ಮಾಡುವ ಇನ್ನೊಂದು ಮಾರ್ಗವೂ ಇದೆ. ಆಕೃತಿಯ ಸಂಕೀರ್ಣತೆಗಳನ್ನು ಕನಿಷ್ಠಮಟ್ಟಕ್ಕಿಳಿಸಿದಾಗಲೂ ಆಶಯಗಳ ಸಂಕೀರ್ಣತೆಗೆ ಧಕ್ಕೆಬರದಂತೆ ಹೇಳುವ ಕ್ರಮವೂ ಇದೆ. ಹಾಗೆ ನೋಡಿದರೆ ಕನ್ನಡಕಾವ್ಯದ ಮುಖ್ಯಧಾರೆಯು ಒಳ್ಳೆಯ ಅರ್ಥದ ರೆಟರಿಕ್, ಅಂಡರ್‌ಸ್ಟೇಟ್‌ಮೆಂಟ್, ಸ್ವಗತ ಮುಂತಾದ ಹತ್ತು ಹಲವು ಹತಾರಗಳನ್ನು ತಮ್ಮ ಪ್ರತಿಭೆಗನುಗುಣವಾಗಿ ಬಳಸಿಕೊಂಡ ಕವಿಗಳದೇ ಆಗಿದೆ. ಇದನ್ನು ಪಂಪ ಬಸವರಿಂದ ಹಿಡಿದು ಇಂದಿನ ದಲಿತ ಕವಿಗಳವರೆಗೆ ಹಲವರಲ್ಲಿ ಕಾಣಬಹುದು. ಜಿಎಸ್ಎಸ್ ಕೂಡ ಇದೇ ನೆಲೆಯಲ್ಲಿ ಬರೆದು ಸಮುದಾಯದೊಂದಿಗೆ ಸಂವಾದ ನಡೆಸಿದ್ದಾರೆ. ನನ್ನ ಸದ್ಯದ ಆಸಕ್ತಿಯಿರುವುದು ಸಮುದಾಯಕ್ಕೆ ಮಹತ್ವವಾದುದನ್ನು, ಅದಕ್ಕೆ ತಲುಪುವಂತೆ ಕವಿ ಹೇಗೆ ಹೇಳುತ್ತಾನೆ ಎನ್ನುವುದರಲ್ಲಿ. ಹಾಗೆ ನೋಡಿದಾಗ ಜಿಎಸ್ಎಸ್ ಕಾವ್ಯಸಂವಹನದ ಅನೇಕ ವೇದಿಕೆಗಳನ್ನು ಬೆಳೆಸಿದ್ದಾರೆ, ಬಳಸಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ. ಗೇಯತೆ, ತಿಳಿಹಾಸ್ಯ, ಭಾವನಾತ್ಮಕತೆ ಮುಂತಾದ ಲಕ್ಷಣಗಳನ್ನು ಅವರು

ಮೈಗೂಡಿಸಿಕೊಂಡಿದ್ದಾರೆ. ಅವರು ನಡೆಸುತ್ತಿದ್ದ ವಿಚಾರಸಂಕಿರಣಗಳಲ್ಲಿ, ಉಪನ್ಯಾಸಗಳ ಜೊತೆಜೊತೆಗೆ ನಾಟಕಪ್ರದರ್ಶನ ಹಾಗೂ ಕವಿಗೋಷ್ಠಿಗಳನ್ನು ಅನಿವಾರ್ಯವೆಂಬಂತೆ ಏರ್ಪಡಿಸಲು ಅವರು ಪಡುತ್ತಿದ್ದ ಶ್ರಮ ನನಗೆ ತಿಳಿದಿದೆ.

ಅವರ ಕವಿತೆಯಂತೆ ವಿಮರ್ಶೆ ಸಮುದಾಯಮುಖಿಯೂ, ವಿದ್ಯಾರ್ಥಿಮುಖಿಯೂ ಆಗಿದೆ. ಜೊತೆಯ ವಿಮರ್ಶಕರಿಗೆ ಮಾತ್ರ ತಲುಪುವಂಥ ಅತಿ ಗಂಭೀರ ಅತಿ ಪಾರಿಭಾಷಿಕ ಚರ್ಚೆಯಲ್ಲಿ ಅವರು ಆಸಕ್ತಿತೋರಿಸಿರುವುದು ಕಡಿಮೆ. ಬದಲಾಗಿ ಸಾಹಿತ್ಯ ಹಾಗೂ ವಿಮರ್ಶೆಯ ಹಿಂದಣ ಹಾಗೂ ಇಂದಿನ ಹೆಜ್ಜೆಗಳೆಲ್ಲವೂ ಅವರಿಗೆ ಸುಪರಿಚಿತ. ಆ ಮೂಲಕವೇ ವಿಮರ್ಶೆಯ ಸಾತತ್ಯವನ್ನು ಕಾಣುವುದು ಹಾಗೂ ಕಟ್ಟಿಕೊಡುವುದು ಅವರಿಗೆ ಸಾಧ್ಯವಾಗಿದೆ. ಬೇರೆ ಬೇರೆ ಕಾಲದಲ್ಲಿ ಅವರು ಬರೆದಿರುವ ಲೇಖನಗಳನ್ನು ಗಮನಿಸಿದಾಗ, ಅವರು ನಿರ್ವಹಿಸಿರುವ ಜವಾಬ್ದಾರಿಗಳ ಸ್ವರೂಪವು ಮನದಟ್ಟಾಗುತ್ತದೆ. ಆಧುನಿಕ ವಿಮರ್ಶಕರಲ್ಲಿ ಅವರಷ್ಟು ವಿಪುಲವಾಗಿ ಹಳಗನ್ನಡ ಹಾಗೂ ನಡುಗನ್ನಡ ಕಾವ್ಯವನ್ನು ಕುರಿತು ಬರೆದವರು ಇನ್ನೊಬ್ಬರಿಲ್ಲ. ಅದು ನವೋದಯದ ಕಾಲದಲ್ಲಿ ಪ್ರಚುರವಾಗಿದ್ದ ಪರಿಚಯ-ಪ್ರಶಂಸೆಗಳಿಗೆ ಸೀಮಿತವಾದ ಬರವಣಿಗೆ ಅಲ್ಲ. ಆಧುನಿಕ ವಿಮರ್ಶೆಯ ಪರಿಕಲ್ಪನೆ-ವಿಧಾನಗಳನ್ನು ಹಳೆಯದರ ಅನುಸಂಧಾನದಲ್ಲಿ ಬಳಸಲು ಅವರಿಗೆ ಸಾಧ್ಯವಾಯಿತು. ಈ ಮಾತಿಗೆ, ನಿದರ್ಶನಗಳನ್ನು "ಪರಂಪರೆ ಮತ್ತು ರಾಘವಾಂಕ ಪ್ರತಿಭೆ", "ರತ್ನಾಕರನ ಭೋಗ-ಯೋಗದ ತೊಡಕು", "ಪಂಪ ಮತ್ತು ಹೋಮರ್" ಮುಂತಾದ ಹಲವು ಬರಹಗಳಲ್ಲಿ ನೋಡಬಹುದು. ಅವರು ತೌಲನಿಕ ವಿಮರ್ಶೆ, ಸಾಂಸ್ಕೃತಿಕ ವಿಮರ್ಶೆ, ಅಂತರ್ಶಿಸ್ತೀಯ ವಿಮರ್ಶೆ, ಪ್ರಾಯೋಗಿಕ ವಿಮರ್ಶೆ ಮುಂತಾದವುಗಳಲ್ಲಿ ಯಾವುದೋ ಒಂದನ್ನು ತಮ್ಮ ಮಾಧ್ಯಮವಾಗಿಸಿಕೊಂಡು ಅದರಲ್ಲೇ ಸತತವಾಗಿ ಕೃಷಿ ಮಾಡಿಲ್ಲ. ಬದಲಾಗಿ ಈ ಹಲವು ಬಗೆಯ ವಿಮರ್ಶೆಗಳಲ್ಲಿ ಕೆಲವಾದರೂ ಮೂಲಮಾದರಿಗಳನ್ನು ತಮ್ಮ ಬರಹದಲ್ಲಿ ಒದಗಿಸಿದ್ದಾರೆ. ಇದು ಖಂಡಿತವಾಗಿಯೂ ಕೆಟ್ಟ ಅರ್ಥದ ಸಮನ್ವಯವಲ್ಲ. ಬದಲಾಗಿ ಪ್ರಯೋಗಶೀಲತೆ ಹಾಗೂ ವೈವಿಧ್ಯಪ್ರಿಯತೆ. ಕುವೆಂಪು ಮತ್ತು ತೀನಂಶ್ರೀ ಇಬ್ಬರಿಗೂ ಶಿಷ್ಯರಾಗಿದ್ದ, ಮೈಸೂರು ವಿಶ್ವವಿದ್ಯಾಲಯದ ಅಂದಿನ ವಿದ್ಯಾರ್ಥಿಗಳು ಎದುರಿಸಬೇಕಾಗಿದ್ದ ಬಿಕ್ಕಟ್ಟುಗಳು ಮತ್ತು ಮಾಡಿಕೊಳ್ಳಬೇಕಾಗಿದ್ದ ಆಯ್ಕೆಗಳು ವಿಶಿಷ್ಟವಾದವು. ಜಿಎಸ್ಎಸ್, ಕೃತಿಯ ಪಠ್ಯ ಹಾಗೂ ಸಾಹಿತ್ಯತ್ವದ ಸಂಗಡವೇ ಅವರ ಸಾಮಾಜಿಕತೆ-ಐತಿಹಾಸಿಕತೆಗಳನ್ನೂ ಪರಿಶೀಲಿಸುವ ದಾರಿಯನ್ನು ಆರಿಸಿಕೊಂಡರು. ಶೈಲಿ, ಛಂದಸ್ಸು ಮತ್ತು ಮೀಮಾಂಸೆಯ ಇತರ ಪರಿಕಲ್ಪನೆಗಳ ಮೂಲಕ ಕೃತಿಯನ್ನು ಪ್ರವೇಶಿಸುವ ಮಾರ್ಗಕ್ಕೆ ಅವರು ಅಷ್ಟಾಗಿ ಒಲಿಯಲಿಲ್ಲ. ಭಾರತೀಯ ಮತ್ತು ಪಾಶ್ಚಾತ್ಯ ಕಾವ್ಯಮೀಮಾಂಸೆಗೆ ಸಂಬಂಧಿಸಿದ ಅಥಾರಿಟಿಗಳಲ್ಲಿ ಒಬ್ಬರಾದರೂ, ಅವರ ವಿಮರ್ಶೆಯು ಅದನ್ನು ಬಳಸಿರುವುದೂ ಕ್ವಚಿತ್ತಾಗಿಯೇ.

ಅವರ ವಿಮರ್ಶೆಯು ಮೊದಲನೆಯದಾಗಿ ದಕ್ಷಿಣಕರ್ನಾಟಕದ ನವೋದಯ ವಿಮರ್ಶೆಯ ಸೀಮಿತತಗಳನ್ನು ದಾಟುವ ಪ್ರಯತ್ನಮಾಡಿತು. ನಾನು ಬೇಕೆಂದೇ ಉತ್ತರ ಕರ್ನಾಟಕ ಹಾಗೂ ಕರಾವಳಿಗಳನ್ನು ಹೆಸರಿಸುತ್ತಿಲ್ಲ. ಏಕೆಂದರೆ ಬೇಂದ್ರೆ, ಶಂ.ಬಾ.ಜೋಷಿ, ಮಧುರಚೆನ್ನ, ಗೋಕಾಕ್, ಬಸವನಾಳ, ಕುರ್ತಕೋಟಿ, ಮುಂತಾದವರು ಅಲ್ಲಿ ಸಾಕಷ್ಟು ಕೆಲಸಮಾಡಿದ್ದರು. ಆದರೆ ಅದು ಇನ್ನೂ ಹಳೆಯ ಮೈಸೂರಿನ ವಿದ್ವತ್ ವಾತಾವರಣದಲ್ಲಿ ಬೇರೂರಿರಲಿಲ್ಲ. ಅದೂ ಅಲ್ಲದೆ ಕುವೆಂಪು-ತೀನಂಶ್ರೀ-ಡಿಎಲ್ಎನ್ ಅವರುಗಳ ನಂತರದ ಪೀಳಿಗೆಯ ವಿದ್ವಾಂಸರು ಹೊಸದಾರಿಗಳನ್ನು ಕಂಡುಕೊಳ್ಳಬೇಕಾಗಿತ್ತು. ಇವರ ಮುಂಚೂಣಿ ಯಲ್ಲಿರುವ ಅವಕಾಶ ದೊರೆತಾಗ ಜಿಎಸ್ಎಸ್ ಅದನ್ನು ಸರಿಯಾಗಿ ಬಳಸಿಕೊಂಡರು. ತಮ್ಮ ಹಲವು ಸಂಗಡಿಗರಂತೆ ನವ್ಯಸಾಹಿತ್ಯ ಮತ್ತು ವಿಮರ್ಶೆಗಳನ್ನು ಕುರಿತಂತೆ ಸಂಪೂರ್ಣ ನಿರಾಕರಣೆಯ ಧೋರಣೆಯನ್ನು ಅವರು ಮನಸ್ಸಿನಲ್ಲಿಯೂ ತಳೆಯಲಿಲ್ಲ. "ದಾರಿ ನೂರಾರಿವೆ ಬೆಳಕಿನರಮನೆಗೆ" ಎಂಬುದು ಅವರ ವಿಮರ್ಶೆಯನ್ನು ಕುರಿತ ನಿಲುವೂ ಆಗಿತ್ತು. ಪರಿಣಾಮವಾಗಿ ಹಳಗನ್ನಡ ಸಾಹಿತ್ಯದ ನಿಕಟ ಪರಿಚಯ ಹಾಗೂ ಹೊಸ ಸಾಹಿತ್ಯತತ್ವಗಳ ಅರಿವು ಅವರನ್ನು ನಿರ್ಣಾಯಕವಾದ ನೆಲೆಗೆ ತಲುಪಿಸಿತು. ನವ್ಯವಿಮರ್ಶಕರ ಸಂಗಡ ಅವರದೇ ಹತಾರುಗಳನ್ನು ನಡೆಸಿ ವಾಗ್ವಾದ ಮಾಡುವುದು ಅವರಿಗೆ ಸಾಧ್ಯವಾಯಿತು. ಹೆಚ್ಚುಕಡಿಮೆ ಇವರ ಸಮಕಾಲೀನರಾದ ಎಚ್. ತಿಪ್ಪೇರುದ್ರಸ್ವಾಮಿಯವರ ಬರಹಗಳೊಂದಿಗೆ ಜಿಎಸ್ಎಸ್ ಅವರು ಮಾಡಿರುವ ಕೆಲಸವನ್ನು ಹೋಲಿಸಿದಾಗ ನನ್ನ ಮಾತು ಸ್ಪಷ್ಟವಾಗುತ್ತದೆ. ಇದು ಕೇವಲ ಪ್ರತಿಭೆಯ ಪ್ರಶ್ನೆಯಲ್ಲ, ಸೂಕ್ಷ್ಮವಾದ ಸಾಂಸ್ಕೃತಿಕ ಆಯ್ಕೆಗಳ ಪ್ರಶ್ನೆ. ಸ್ವತಃ ಕವಿಯಾದುದರಿಂದ ಅವರ ವಿಮರ್ಶೆಯು ಅವರದೇ ಕಾವ್ಯಮಾರ್ಗದ ಸಮರ್ಥನೆಯಾಗಿ ಬೆಳೆಯಬಹುದಿತ್ತು. ಹಾಗೆ ಆಗಲಿಲ್ಲ, ಅಷ್ಟೇಕೆ, ಕುವೆಂಪು-ಬೇಂದ್ರೆ-ಅಡಿಗರ ಕವಿತೆಯ ಪ್ರಖರ ಬೆಳಕಿನಲ್ಲಿ ಇರುವಾಗಲೂ ಪುತಿನರವರ ಕವಿತೆಯ ವಿಶಿಷ್ಟಾಂಶಗಳನ್ನು ಕುರಿತು ಬರೆಯಲು ಅವರಿಗೆ ಸಾಧ್ಯವಾಗಿದ್ದು ಶಿಕ್ಷಕ ಸಹಜವಾಗಿರಬೇಕಾದ ಈ ಕ್ಯಾಥೊಲಿಕ್ ಧೋರಣೆಯಿಂದಲೇ. ಇದೇ ಸಮಯದಲ್ಲಿ ಮೈಸೂರು ವಿಶ್ವವಿದ್ಯಾಲಯದ ಪ್ರಭಾವಲಯದಿಂದ ದೂರವಾಗಿ ಬೆಂಗಳೂರಿಗೆ ಬಂದಿದ್ದು ಕೂಡ ಮುಖ್ಯವಾದ ಪರಿಣಾಮಗಳಿಗೆ ಎಡೆಮಾಡಿತು. ಕರ್ನಾಟಕದಲ್ಲಿ ನಡೆದ ಹತ್ತು ಹಲವು ಸಾಮಾಜಿಕ-ಸಾಹಿತ್ಯಕ ಚಳುವಳಿಗಳಲ್ಲಿ ಪ್ರೇಕ್ಷಕರಾಗಿ, ಪಾತ್ರಧಾರಿಗಳಾಗಿ ಪಡೆದ ಅನುಭವಗಳು ಅವರ ವಿಮರ್ಶೆಯನ್ನು ಮರುರೂಪಿಸಿದವು. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರವು ದಲಿತ ಬಂಡಾಯ ಸಾಹಿತ್ಯದ ತೊಟ್ಟಿಲು ಎಂದರೂ ಅತಿಶಯೋಕ್ತಿಯಲ್ಲ. ಅವರ ಸಮಗ್ರ ಗದ್ಯದ ಎರಡನೆಯ ಸಂಪುಟದಲ್ಲಿ ಈ ಬಗೆಯ ಎಲ್ಲ ಲೇಖನಗಳನ್ನೂ ನೋಡಬಹುದು. ಇಂಥ ಚಿಂತನೆಗಳು ಪ್ರಾಚುರ್ಯಕ್ಕೆ ಬರುವ ಮೊದಲು 1975 ರಲ್ಲಿ ಪ್ರಕಟಿಸಿದ, "ಸಾಮಾನ್ಯನಿಗೆ ಸಾಹಿತ್ಯಚರಿತ್ರೆ" ಮಾಲೆಯ ಮೊದಲ ಸಂಪುಟವಾದ "ಕನ್ನಡ ಸಾಹಿತ್ಯ ಸಮೀಕ್ಷೆ"ಯು ಸಾಹಿತ್ಯಚರಿತ್ರೆ ಎನ್ನುವ ಪರಿಕಲ್ಪನೆಗೆ ಕನ್ನಡದ ಸಂದರ್ಭದಲ್ಲಿ ಹೊಸ ಆಯಾಮವನ್ನು ನೀಡಿತು.

ಚಳುವಳಿಗಳು ಮತ್ತು ಆಕೃತಿಗಳನ್ನು ಅವುಗಳ ಪ್ರತ್ಯೇಕತೆಯಲ್ಲಿ ಅಲ್ಲ, ಪಾರಸ್ಪರಿಕತೆಯಲ್ಲಿ ನೋಡುವ ಆ ಪ್ರಯತ್ನವು ಪಯೋನೀರಿಂಗ್ ಆದುದು. ಅದು ಆ ಅರ್ಥದಲ್ಲಿ ಸಾಂಸ್ಕೃತಿಕ ಸಾಹಿತ್ಯಚರಿತ್ರೆಯಾಗಿದೆಯೇ ವಿನಾ ಮಾಹಿತಿ ಮತ್ತು ಅಭಿಪ್ರಾಯಗಳ ಭಂಡಾರವಾಗಿಲ್ಲ. ಅವರ ವಿಮರ್ಶೆಯ ಮಹತ್ವವನ್ನು ದಾಖಲೆಮಾಡುವ ಕೆ.ವಿ. ನಾರಾಯಣ ಅವರ ಮಾತುಗಳು ಉಲ್ಲೇಖನಾರ್ಹವಾಗಿವೆ:

"ಕೃತಿಗಳ ವರ್ಣನೆ, ವಿವರಣೆ, ರಸಗ್ರಹಣಗಳಿಗೆ ವಿಮರ್ಶೆಯನ್ನು ಮೀಸಲಿಡದೆ ಸಮರ್ಥ ಒಳನೋಟಗಳನ್ನು ನೀಡುತ್ತ ಆ ಕೃತಿಗಳ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಎತ್ತಿಹೇಳುವ ಕಡೆಗೆ ಅವರ ವಿಮರ್ಶೆ ಸಾಗುತ್ತ ಬಂದಿದೆ. ಕೃತಿಯ ಶ್ರೇಷ್ಠತೆ ಹಾಗೂ ಪರಂಪರೆಯ ಹೆಚ್ಚಳ, ಅನನ್ಯತೆ ಹಾಗೂ ಅವ್ಯಾಹತವಾಗಿ ಹರಿದುಬಂದ ತಿರುಳು ಇವೆಲ್ಲವನ್ನೂ ಇವರ ವಿಮರ್ಶೆ ಶೋಧಿಸುತ್ತದೆ. ನಮ್ಮ ವಿಮರ್ಶಕರಲ್ಲಿ ಇಡಿಯಾಗಿ ಕನ್ನಡ ಸಾಹಿತ್ಯದ ಪರಂಪರೆಯನ್ನು ಅದರ ಚಲನಶೀಲತೆಯನ್ನು ಗ್ರಹಿಸಿ ಮಂಡಿಸಿದವರಲ್ಲಿ ಜಿಎಸ್ಎಸ್ ಮೊದಲಿಗರು. ಭಿನ್ನಬಗೆಯಲ್ಲಿ ಅಂಥ ಶೋಧವನ್ನು ನಡೆಸಬಹುದೇ ಹೊರತು ಅವರ ಗ್ರಹಿಕೆಗಳನ್ನು ಪೂರ್ಣಪ್ರಮಾಣದಲ್ಲಿ ಅಲ್ಲಗಳೆಯಲು ಸಾಧ್ಯವಿಲ್ಲ ವೆನ್ನುವಷ್ಟರಮಟ್ಟಿಗೆ ಅವರ ಗ್ರಹಿಕೆಗಳು ಅಧಿಕೃತವಾಗಿವೆ."

ಈ ಮಾತುಗಳು ಜಿಎಸ್ಎಸ್ ವಿಮರ್ಶೆಯ ಸಾಂಸ್ಕೃತಿಕ ಲಕ್ಷಣಗಳನ್ನೂ ಹೇಳುತ್ತವೆ. ಖಚಿತವಾದರೂ ಅತಿರೇಕಕ್ಕೆ ಹೋಗದ, ಶೈಲಿಯಲ್ಲಿ ಎಂದಿಗೂ ಆಕ್ರಮಣಶೀಲವಲ್ಲದ ಅವರ ಬರವಣಿಗೆಯು ತನ್ನ ವ್ಯಾಪ್ತಿವೈವಿಧ್ಯ ಹಾಗೂ ಪ್ರಸ್ತುತತೆಗಳ ಮೂಲಕ ತಾಳಿಕೆಯ ಗುಣವನ್ನು ಪಡೆದಿದೆ.

* * *

ಶಿವರುದ್ರಪ್ಪನವರು ಸಾಂಸ್ಕೃತಿಕ ಕ್ಷೇತ್ರದಲ್ಲಿ ಸಾಂಸ್ಥಿಕವಾಗಿ ಮಾಡಿರುವ ಕೆಲಸದ ಪರಿಶೀಲನೆಗಿಂತ ಮೊದಲು ಅವರ ವ್ಯಕ್ತಿತ್ವದ ಅಂತಹ ಕೆಲವು ಲಕ್ಷಣಗಳನ್ನು ಹೇಳುವ ಅಗತ್ಯವಿದೆ. ಅವು ಗುಣಗಳೂ ಹೌದು ಪರಿಮಿತಿಗಳೂ ಹೌದು.

ನಾಡಿನ ರಾಜಕೀಯ ವಿದ್ಯಮಾನಗಳಲ್ಲಿ ಜೀವಂತವಾದ ಆಸಕ್ತಿಯನ್ನು ತೋರಿಸಿದರೂ ಅವರದು ರಾಜಕೀಯ ವ್ಯಕ್ತಿತ್ವವಲ್ಲ. ಲೋಹಿಯಾ, ಗಾಂಧಿ, ಮಾರ್ಕ್ಸ್, ಅಂಬೇಡ್ಕರ್ ಮುಂತಾದ ಮಹನೀಯರ ಬಗ್ಗೆ ಅವರು ಗೌರವ ಹೊಂದಿರಬಹುದು, ಕವಿತೆಗಳನ್ನೂ ಬರೆದಿರಬಹುದು. ಆದರೆ ಅವರ ನಿಲುವು ಯಾವುದು ಎನ್ನುವುದರ ಬಗ್ಗೆ ಪುರಾವೆಗಳು ದೊರೆಯುವುದೇ ಇಲ್ಲ. ವ್ಯಕ್ತಿಸ್ವಾತಂತ್ರ್ಯ, ಮಾನವತಾವಾದ, ಜಾತ್ಯತೀತತೆ ಮುಂತಾದ ಆದರ್ಶಗಳು ಬೇರೆ ಬೇರೆ ಸಂದರ್ಭಗಳಲ್ಲಿ ಅವರು ತೆಗೆದುಕೊಂಡ ತೀರ್ಮಾನಗಳನ್ನು ನಿರ್ಣಯಿಸಿವೆ. ಅಡಿಗ, ಅನಂತಮೂರ್ತಿ, ಲಂಕೇಶ್ ಮುಂತಾದ ಲೋಹಿಯಾವಾದಿ ಲೇಖಕರು ಎಡಪಂಥೀಯ ಚಿಂತನಗಳ ಬಗ್ಗೆ ತೋರಿಸಿದ ಶಾಶ್ವತ ವಿರೋಧವು ಇವರಲ್ಲಿ

ಕಂಡುಬಂದಿಲ್ಲ. ಆ ನೆಲೆಯಲ್ಲಿ ಇವರ ರಷ್ಯಾ ಪ್ರವಾಸಕಥನವು ಬಹಳ ಕುತೂಹಲಕಾರಿಯಾಗಿದೆ. ಕನ್ನಡಕ್ಕೆ ಸಂಬಂಧಿಸಿದ ಹಲವು ಹೋರಾಟಗಳಲ್ಲಿ ಅವರು ಭಾಗವಹಿಸಿರುವುದು ನಿಜವಾದರೂ ಅವರ ನಿಲುವುಗಳು ಸೆಂಟಿಮೆಂಟಲ್ ಆಗುವುದಿಲ್ಲ. ಇತರ ಭಾಷೆಗಳ ಬಗೆಗಿನ ಅಸಹನೆಯಾಗುವುದಿಲ್ಲ. ಕೆಲವು ಬಾರಿ ಸಾರ್ವಜನಿಕ ಆಸಕ್ತಿಯ ಕೆಲಸವೆನಿಸಿದಾಗ, ಅದರಲ್ಲಿ ತೊಡಗಿಸಿಕೊಂಡಿರುವ ಇತರರ ಒಳ ಉದ್ದೇಶಗಳ ಬಗ್ಗೆ ಯೋಚಿಸದ ಭೋಳೆತನವನ್ನು ಅವರು ತೋರಿಸುತ್ತಾರೆ. ರಾಜಕೀಯಬದ್ಧತೆಯಿಲ್ಲದ ನಿಲುವುಗಳಿಗೆ ಒಂದು "ಇಶ್ಯೂ ಬೇಸ್ಡ್" ಎನ್ನಬಹುದಾದ ಗುಣಬರುವುದು ನಿಜವಾದರೂ ಅದು ಶಾಶ್ವತವಾದ ರಾಜಕೀಯ ಪರಿಹಾರಗಳ ಬಗ್ಗೆ ತಲೆಕೆಡಿಸಿಕೊಳ್ಳುವುದಿಲ್ಲ. ಮೊದಲ ನೋಟಕ್ಕೆ ಕಾಸ್ಮೆಟಿಕ್ ಎಂದೇ ತೋರಬಹುದಾದ, ನಿಧಾನಗತಿಯ ವಿಕಸನಶೀಲಪರಿಹಾರಗಳಲ್ಲಿ ಮಾತ್ರ ತೊಡಗಿಕೊಳ್ಳುತ್ತದೆ. ಒಂದರ್ಥದಲ್ಲಿ ಇದು ಅರಾಜಕತೆಗಿಂತ, ಮುಕ್ತ ವ್ಯವಸ್ಥೆಯನ್ನು ಇಷ್ಟಪಡುವ ಮನಸ್ಸು, ಒಪ್ಪಂದಗಳನ್ನು ಮಾಡಿಕೊಳ್ಳದೆಯೂ ಸಾಂಸ್ಥಿಕ ಚೌಕಟ್ಟಿನಲ್ಲಿ ಕೆಲಸಮಾಡುವುದು ಇವರಿಗೆ ಸಾಧ್ಯವಾಗುತ್ತದೆ. ಪಕ್ಷರಾಜಕೀಯದಿಂದ ಹೇಗೋ ಹಾಗೆಯೇ ರಾಜಕೀಯಸ್ಥರಿಂದಲೂ ಅವರು ದೂರವೇ. ಪೊಲಿಟಿಕಲ್ ಕ್ಲೌಟ್ ಎನ್ನುವುದು ಸಂಪಾದನೆ ಮಾಡಬೇಕಾದ ಸಂಗತಿಯೆಂದು ಅವರು ತಿಳಿದೇ ಇಲ್ಲ. ಆದ್ದರಿಂದಲೇ ಅಧ್ಯಯನ ಕೇಂದ್ರವಿರಲಿ, ಅಕಾಡೆಮಿಯಿರಲಿ, ಲಕ್ಷ ಲಕ್ಷ ರೂಪಾಯಿಗಳ, ನೂರಾರು ಸಂಶೋಧಕರನ್ನು ನೇಮಿಸಿಕೊಳ್ಳಬಲ್ಲ ಯೋಜನೆಗಳನ್ನು ಎಳೆದುತರಬಲ್ಲ ಪವಾಡ ಅವರಿಗೆ ಸಾಧ್ಯವಾಗಲೇ ಇಲ್ಲ. ಅವರು ನಡೆಸಿದ ನೂರಾರು ಸಭೆ ಸಮಾರಂಭಗಳಲ್ಲಿ ಮಂತ್ರಿಮಾನ್ಯರು ಹಾಗೆಯೇ ಮಠಾಧಿಪತಿಗಳು ಭಾಗವಹಿಸಿದ್ದು ನನಗಂತೂ ನೆನಪಿಲ್ಲ. ಈ ದಿವ್ಯನಿರ್ಲಕ್ಷ್ಯದಲ್ಲಿ ಅವರು ತಮ್ಮ ಗುರುಗಳಾದ ಕುವೆಂಪುರವರಿಂದ ಪಾಠ ಕಲಿತವರು. ದಲಿತರೇ ಇರಲಿ, ಪ್ರಾದೇಶಿಕವಾಗಿ ಹಿಂದುಳಿದವರೇ ಇರಲಿ, ಯಾವುದೇ ಸ್ಥಾನಮಾನಗಳ ಸಂಪಾದನೆಗೆ ರಾಜಕಾರಣಿಗಳ ರೆಕಮೆಂಡೇಶನ್ ಅನಿವಾರ್ಯವಾದ ಈ ದಿನಗಳಲ್ಲಿ ಇದು ಅಪರೂಪದ ಗುಣ.

ಮಠಾಧಿಪತಿಗಳ ಮಾತು ಬಂತು. ಹಾಗೆಯೇ ಧಾರ್ಮಿಕತೆ, ಜಾತಿಗಳ ವಲಯ ಕೂಡ. ಅನೇಕ ಬುದ್ಧಿಜೀವಿಗಳು ತಾರುಣ್ಯದಲ್ಲಿ ನಾಸ್ತಿಕತೆಯ ಅಬ್ಬರಮಾಡಿ ವಯಸ್ಸು ಕಳೆದಂತೆ ಎಲ್ಲ ಧರ್ಮಗಳ, ಜಾತಿಗಳ ವಶೀಲಿಗಾಗಿ ತಿರುಗುವುದನ್ನು ನಾವು ನೋಡಿದ್ದೇವೆ. ಆದರೆ ತಾರುಣ್ಯದ ಹೊಸ್ತಿಲಲ್ಲಿ ರಾಮಕೃಷ್ಣಾಶ್ರಮದ ಆದರ್ಶವಲಯದಲ್ಲಿದ್ದಾಗಲೂ ಜಿಎಸ್‌ಎಸ್ ಅವರು ಧಾರ್ಮಿಕವಾದುದಿಲ್ಲ. ಆಮೇಲಿನ ದಶಕಗಳಲ್ಲಂತೂ ಅವರದು ಖಚಿತವಾದ ನಿಲುವು. ಆತ್ಮ ಪುನರ್ಜನ್ಮ ಕರ್ಮ, ಪಾಪ-ಪುಣ್ಯ ಮುಂತಾದ ಪದಗಳಿಗೆ ಅವರ ಶಬ್ದಕೋಶದಲ್ಲಿ ಜಾಗವಿಲ್ಲ. ಕುವೆಂಪುರವರ ಹಾಗೆಯೇ "ವೈದಿಕತನದ" ವಿರೋಧಕ್ಕೂ ವ್ಯಕ್ತಿದ್ವೇಷಕ್ಕೂ ಇರುವ ವ್ಯತ್ಯಾಸವನ್ನು ಅವರು ಸದಾ ತಿಳಿದು ನಡೆದಿದ್ದಾರೆ. ಈ ನಿಲುವು ಬೇರೆ ಬೇರೆ ಧರ್ಮಕ್ಕೆ ಸೇರಿದ ಅನೂಹ್ಯ ಎತ್ತರಗಳನ್ನು ತಲುಪಿದ ಮನುಷ್ಯರ ಬಗ್ಗೆ ಗೌರವ ತೋರಿಸಲು ಯಾವಾಗಲೂ ಅಡ್ಡಿಯಾಗಿಲ್ಲ. ಅವರು ಜೀವನಚರಿತ್ರೆಯನ್ನು ಬರೆದಾಗಲೂ

ಅದು ಕರ್ಮಯೋಗಿ ಸಿದ್ಧರಾಮನ ಜೀವನಚಿತ್ರವಾಗಿತ್ತು. ನನಗೇ ತಿಳಿದಿರುವಂತೆ ಏಸುಕ್ರಿಸ್ತನ ಬಗ್ಗೆ ಒಂದು ಪುಸ್ತಕ ಬರೆಯಬೇಕೆನ್ನುವುದು ಅವರ ಬಹುದಿನಗಳ ಕನಸು. ವೀರಶೈವ ಧರ್ಮಕ್ಕೆ ಸೇರಿದ ಧುರೀಣರನ್ನು ಹಲವು ಸಂದರ್ಭಗಳಲ್ಲಿ ಅವರು ನಿರ್ಭೀತವಾಗಿ ಎದುರು ಹಾಕಿಕೊಂಡಿರುವುದು ಈಗಾಗಲೇ ದಾಖಲೆಯಾಗಿದೆ. ಅಷ್ಟೇಕೆ, ತೀರ ಈಚೆಗೆ ಕೂಡ ಅವರನ್ನು ಧರ್ಮದಿಂದ ಹೊರಗೆ ಹಾಕುವ ಪ್ರಸ್ತಾಪ ಬಂದಿತ್ತಲ್ಲ. ಆದರೆ ಧರ್ಮ-ಜಾತಿಗಳ ಬಗೆಗಿನ ಈ ನಿಲುವು ಧಾರ್ಮಿಕಮೂಲದ ಸಾಹಿತ್ಯವನ್ನು ಕಡೆಗಣ್ಣಿನಿಂದ ನೋಡುವ ಹಾಗೆ ಮಾಡಿಲ್ಲ. ಪಂಪನಿಂದ ನಿಜಗುಣರವರೆಗೆ ಎಲ್ಲರ ಬರಹವೂ ಅವರ ಅನುಸಂಧಾನಕ್ಕೆ ವಸ್ತುವಾಗಿದೆ. ಈಚಿನ ವರ್ಷಗಳಲ್ಲಿ ಜಾನಪದ ಧರ್ಮಗಳ ಆಕಾರವಾದ ಜನಪದ ಮಹಾಕಾವ್ಯಗಳನ್ನು ತುಂಬು ಆಸಕ್ತಿಯಿಂದ ಅವರು ಓದುತ್ತಿರುವುದನ್ನು ನಾನು ಬಲ್ಲೆ. ಈ ಬಹುಮುಖಿಯಾದ ಮುಕ್ತಸಂವೇದನೆಯು ಅನುಕರಣೀಯವಾದುದು.

* * *

ಶಿವರುದ್ರಪ್ಪನವರು ಒಂದು ವಿಧದಲ್ಲಿ ಅದೃಷ್ಟವಂತರು. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ ಸುಮಾರು ಎರಡು ದಶಕಗಳ ಕಾಲ ಕೆಲಸಮಾಡುವ ಅವಕಾಶ ಅವರಿಗೆ ದೊರಕಿತು. ಅದು "ರೊಟೇಶನ್"ಗಳ ಖೋ-ಖೋ ಆಟದ ಕಾಲವಲ್ಲ. ಚಿದಾನಂದಮೂರ್ತಿಯವರೂ ಸೇರಿದಂತೆ ಶೇಕಡಾ ತೊಂಬತ್ತಕ್ಕೂ ಹೆಚ್ಚು ಅಧ್ಯಾಪಕರು, ಅವರಿಗಿಂತ ಕಿರಿಯರು, ಅವರ ಶಿಷ್ಯರು. ಸಹೋದ್ಯೋಗಿಗಳನ್ನು ಬೆಳೆಸುವ, ಆದರೆ ಅವರೆಲ್ಲರೂ ತಮ್ಮ ಬಿಗಿಮುಷ್ಟಿಯಲ್ಲೇ ಇರಬೇಕೆಂದು ಹಟ ಹಿಡಿಯದ ಅವರ ಧೋರಣೆ ಬಹುಬೇಗ ಫಲ ನೀಡಿತು. ಆ ಕಾಲದಲ್ಲಿ ಆ ವಿಭಾಗದಲ್ಲಿ ಕಂಡ ಬಹುಮುಖತೆ, ಸಾಮಾಜಿಕ ತಿಳಿವಳಿಕೆ ಮತ್ತು ಅಕಡೆಮಿಕ್ ಸಾಧನೆಗಳು ಅಪರೂಪದವು. ಅವರು ಕಿರಿಯರಿಂದ ಕಲಿಯುವುದನ್ನು, ಆ ಮೂಲಕ ಸದಾ "ಅಪ್ ಟು ಡೇಟ್" ಆಗಿರುವುದನ್ನು ಅವಮಾನವೆಂದು ಯಾವಾಗಲೂ ತಿಳಿದಿಲ್ಲ. ಪಠ್ಯಕ್ರಮದ ರೂಪಣವೇ ಇರಲಿ, ವಿಚಾರ ಸಂಕಿರಣವೊಂದರ ರೂಪುರೇಷೆಗಳೇ ಇರಲಿ ಅಲ್ಲಿನ ಬಹುಪಾಲು ನಿರ್ಧಾರಗಳು ಪ್ರಜಾಪ್ರಭುತ್ವದ ನೆಲೆಯಲ್ಲಿರುತ್ತಿದ್ದವು, ಮತ್ತು ತರುಣರ ಪರವಾಗಿರುತ್ತಿದ್ದವು. ಸೀಮಿತ ಸಂಪನ್ಮೂಲಗಳ ಇಕ್ಕಟ್ಟಿನಲ್ಲೂ ಆಗುಮಾಡಲು ಸಾಧ್ಯವಾದ "ಸಮಗ್ರ ಸಾಹಿತ್ಯಚರಿತ್ರೆ", "ಸಾಮಾನ್ಯನಿಗೆ ಸಾಹಿತ್ಯಚರಿತ್ರೆ", "ಸಾಹಿತ್ಯವಾರ್ಷಿಕ", "ಸಾಧನೆ" ಮುಂತಾದ ಯೋಜನೆಗಳ ಸಂಕ್ಷಿಪ್ತ ಪರಿಚಯ ಮಾಡಿಕೊಡುವುದೂ ಇಲ್ಲಿ ಸಾಧ್ಯವಿಲ್ಲ. ಇವುಗಳಲ್ಲಿ ಕೆಲವಾದರೂ ಅಪೂರ್ವ ಮಾತ್ರವಲ್ಲ, "ಅನುತ್ತರಾ" ಕೂಡ ಆಗಿರುವುದು ಗಮನೀಯವಾದ ಸಂಗತಿ. ಸಾಂಸ್ಕೃತಿಕವಾಗಿ ಮುಖ್ಯವೆನಿಸಿದ ಕೆಲವು ಅಂಶಗಳನ್ನು ಇಲ್ಲಿ ಪ್ರಸ್ತಾಪಿಸುತ್ತೇನೆ.

1. ಸ್ನಾತಕೋತ್ತರ ಹಾಗೂ ಪದವಿ ತರಗತಿಗಳೆಂಬ ಎರಡೂ ಹಂತಗಳಲ್ಲಿ ಪಠ್ಯಕ್ರಮದ ನವೀಕರಣ ಮತ್ತು ಪಠ್ಯಪುಸ್ತಕಗಳ ನಿರ್ಮಾಣದಲ್ಲಿ ಅನುಸರಿಸಿದ ವಿಧಾನಗಳು

ದೂರಗಾಮಿಯಾದ ಪರಿಣಾಮಗಳನ್ನು ಬೀರಿದವು. ಇಂದಿಗೂ ನಮ್ಮ ಬಿ.ಎ. / ಬಿ.ಎಸ್ಸಿಗಳ ವಿದ್ಯಾರ್ಥಿಗಳು "ವಿಚಾರ ಸಾಹಿತ್ಯ"ವೆನ್ನುವ ಪಠ್ಯದಲ್ಲಿ ಲೋಹಿಯಾ, ಗಾಂಧಿ, ಅಂಬೇಡ್ಕರ್, ರಸೆಲ್, ಕುವೆಂಪು, ಕಾರಂತ ಮುಂತಾದವರ ಲೇಖನಗಳನ್ನು ಕಲಿಯುತ್ತಾರೆ. ಪರಿಸರ, ಧರ್ಮ, ದೇಶದ ಆರ್ಥಿಕ ಸ್ಥಿತಿಗತಿ, ಜಾಗತೀಕರಣ ಮುಂತಾದ ವಿಷಯಗಳನ್ನು ಕುರಿತು ಓದುತ್ತಾರೆ. ಹಾಗೆಯೇ ದ್ವಿತೀಯ ಭಾಷೆಯ ವಿದ್ಯಾರ್ಥಿಗಳು ಒಬ್ಬ ಕೆಟ್ಟ ಕವಿಯ ಕೆಟ್ಟ ಕಾವ್ಯವನ್ನು ವರ್ಷವಿಡೀ ಕಲಿಯಬೇಕಾಗಿದ್ದ ಅಪಾಯಸಂಭವವನ್ನು ತಪ್ಪಿಸಿ "ಸಮಕಾಲೀನ ಕನ್ನಡ ಕವಿತೆ", "ಪ್ರಾಚೀನ ಕಾವ್ಯಮಾರ್ಗ", "ವಿಮರ್ಶೆಯ ದಾರಿ" ಮುಂತಾದ ಬಹುಲೇಖಕ ಆಂಥಾಲಜಿಗಳನ್ನು ಓದುವ ಅವಕಾಶ ಪಡೆದರು. ಲೇಖಕರ ಮಕ್ಕಳ ಮೊಮ್ಮಕ್ಕಳ ಮದುವೆ, ಮುಂಜಿ, ಗೃಹನಿರ್ಮಾಣ ಮುಂತಾದ ಐಹಿಕ ಅಗತ್ಯಗಳಿಗಾಗಿ ಪಠ್ಯಪುಸ್ತಕಗಳನ್ನು ಆಯ್ಕೆಮಾಡುವ ಪ್ರವೃತ್ತಿಗೆ ಇಂಥ ಕ್ರಮಗಳು ಕಡಿವಾಣ ಹಾಕಿದವು.

ಸ್ನಾತಕೋತ್ತರ ಹಂತದಲ್ಲಿ ತಮಗಿದ್ದ ಅಧ್ಯಾಪಕ ಸಂಪನ್ಮೂಲಗಳಿಗೂ ನಿರೂಪಿಸ ಬಹುದಾದ ಪಠ್ಯಕ್ರಮಕ್ಕೂ ಇರುವ ಅನಿವಾರ್ಯ ಸಂಬಂಧವನ್ನು ಅವರು ಬಹುಬೇಗ ಮನಗಂಡರು. ಎಂ.ಎ. ವಿದ್ಯಾರ್ಥಿಗಳಿಗೆ ಐಚ್ಛಿಕವಾಗಿ ವೆಸ್ಟರ್ನ್ ಲಿಟರೇಚರ್, ಶೈಲಿಶಾಸ್ತ್ರ, ಸಾಮಾಜಿಕ ಭಾಷಾಶಾಸ್ತ್ರ, ಸಂಸ್ಕೃತಿಯ ಅಧ್ಯಯನ, ಮಾನವಶಾಸ್ತ್ರ ಮುಂತಾದ ಹೊಸ ಹೊಸ ಅಧ್ಯಯನಶಿಸ್ತುಗಳನ್ನು ನೀಡಲಾಯಿತು. ನಮ್ಮ ಪಕ್ಕದ ಕೊಠಡಿಗಳಲ್ಲೇ ಕಲಿಯುತ್ತಿದ್ದ ಇಂಗ್ಲಿಷ್ ಎಂ.ಎ. ವಿದ್ಯಾರ್ಥಿಗಳಿಗಿಂತ ಹೆಚ್ಚು ಪಾಶ್ಚಾತ್ಯ ಸಾಹಿತ್ಯವನ್ನು, ಲಿಂಗ್ವಿಸ್ಟಿಕ್ಸ್ ಅನ್ನು ನಾವು ಕಲಿಯುತ್ತಿದ್ದೆವು ಎನ್ನುವುದು ನಮಗೆ ಹೆಮ್ಮೆಯ ವಿಷಯವಾಗಿತ್ತು. ನಂತರದ ದಿನಗಳಲ್ಲಿ ಎಂ.ಎ. ಪಠ್ಯಕ್ರಮವೇ ಕವಲೊಡೆದು ತೌಲನಿಕ ಸಾಹಿತ್ಯದಲ್ಲಿ ಪದವಿ ಪಡೆಯಲು ಸಾಧ್ಯವಾಯಿತು. ಆ ವಿದ್ಯಾರ್ಥಿಗಳು ಕನ್ನಡ ಸಾಹಿತ್ಯದ ಜೊತೆಜೊತೆಗೆ ಸಂಸ್ಕೃತದಿಂದ ಸ್ಪಾನಿಶ್‌ವರೆಗೆ ಹತ್ತು ಹಲವು ಭಾಷೆಗಳ ಕೃತಿಗಳನ್ನು ಕಲಿಯಲು ಸಾಧ್ಯ ವಾಯಿತು. ಇದೆಲ್ಲವನ್ನೂ ಕಲಿಸಬೇಕಾದ ಅಧ್ಯಾಪಕಮಿತ್ರರು ತಾವೂ ಬೆಳೆಯುವುದು ಸಾಧ್ಯವಾಯಿತು. ಇಂಥದೊಂದು ಮೌನಕ್ರಾಂತಿಯು ಆಗುವುದರಲ್ಲಿ ಜಿಎಸ್‌ಎಸ್ ಅವರ ಪ್ರತಿಭಾವಂತ ಸಹೋದ್ಯೋಗಿಗಳ ಪಾತ್ರವನ್ನು ಉತ್ಪ್ರೇಕ್ಷಿಸುವುದು ಸಾಧ್ಯವೇ ಇಲ್ಲ. ಹಾಗೆಯೇ ಅವರಿಗೆಲ್ಲ ಅವಕಾಶ ನೀಡಿದ ಜಿಎಸ್‌ಎಸ್ ಅವರ ಮುಕ್ತತೆಯನ್ನು ಕೂಡ. ಈ ಮುಕ್ತ ಪರಿಸರವೇ ವಿಭಾಗದ ಸದಸ್ಯರು ತಾವೇ ಆರಿಸಿಕೊಂಡ ಬೇರೆ ಬೇರೆ ದಿಕ್ಕುಗಳಲ್ಲಿ ಬೆಳೆಯಲು ಅವಕಾಶವಾಯಿತು. ಇಂದು ಚಿದಾನಂದಮೂರ್ತಿ, ಹಂಪನಾ, ಎನ್‌ಎಸ್‌ಎಲ್, ಕೆಎಂಎಸ್, ಸುಮತೀಂದ್ರ ನಾಡಿಗ, ವಿದ್ಯಾಶಂಕರ್, ವೀರಣ್ಣ ಮುಂತಾದ ಹಿರಿಯರಿಂದ ಮೊದಲು ಮಾಡಿಕೊಂಡು ಕಿ.ರಂ.ನಾಗರಾಜ, ಶಿವಣ್ಣ, ವೀರಣ್ಣ, ಕಾಳೇಗೌಡ ನಾಗವಾರ, ಕೆ.ವಿ. ನಾರಾಯಣ, ಬರಗೂರು ರಾಮಚಂದ್ರಪ್ಪ, ಕೆ.ಪಿ.ಭಟ್, ಡಿ.ಆರ್. ನಾಗರಾಜ್, ಬಸವರಾಜ ಕಲ್ಗುಡಿ, ಸಿದ್ದಲಿಂಗಯ್ಯ ಮುಂತಾದ ನನ್ನ ಸಮಕಾಲೀನರವರೆಗೆ ಎಲ್ಲರೂ ಕೇವಲ ಹೆಸರುಗಳಲ್ಲ, ಸಮಕಾಲೀನ ಸಾಂಸ್ಕೃತಿಕ ಸನ್ನಿವೇಶವನ್ನು ರೂಪಿಸುತ್ತಿರುವ

ಶಕ್ತಿಗಳು. ಈ ಪಟ್ಟಿಯ ಕೊನೆಯ ಹೆಸರು ಮುಗಿಯುವುದಕ್ಕೂ ಜಿಎಸ್ಎಸ್ ಅವರ ಅಧಿಕಾರಾವಧಿ ಮುಗಿಯುವುದಕ್ಕೂ ಇರುವ ಸಂಬಂಧ ಕಾಕತಾಳೀಯವಲ್ಲ. ಆದರೆ ಆಜ್ಞಾಪಾಲಕರಾದ ಹೌದಪ್ಪಗಳನ್ನು ಇಟ್ಟುಕೊಂಡು ಕೆಲಸಮಾಡುವುದು ಸುಲಭ; ತಮ್ಮದೇ ಆದ ಬದ್ಧತೆಗಳುಳ್ಳ ಲೀಡರ್‌ಶಿಪ್ ಮೆಟೀರಿಯಲ್‌ಗಳನ್ನಲ್ಲ. ಅದು ಬಹುಬೇಗ ಕಪ್ಪೆತೂಗುವ ಕೆಲಸವಾಗಬಹುದು, ಆಯಿತು. "ಸೆಂಟರ್ ಕೆನಾಟ್ ಹೋಲ್ಡ್" ಎಂಬ ಸ್ಥಿತಿ ನಿಧಾನವಾಗಿ ನಿರ್ಮಾಣವಾಯಿತು. ಆದರೆ ಅದು ಅನಾರೋಗ್ಯದ, ಅನಾಸಕ್ತಿಯ ಪರಿಣಾಮವಾಗಿರಲಿಲ್ಲ. ಕೆಲವು ಸಂದರ್ಭಗಳಲ್ಲಿ ಪ್ರಾಮಾಣಿಕವಾದ ತಾತ್ವಿಕವಾದ ಭಿನ್ನಮತವಾಗಿರುತ್ತಿತ್ತು. ಅದೇನೇ ಇರಲಿ, ಆ ಅವಧಿಯಲ್ಲಿ ಬೆಂಗಳೂರು ವಿಶ್ವವಿದ್ಯಾಲಯವು ಕನ್ನಡ ಸಾಹಿತ್ಯದ ವಿದ್ಯಾರ್ಥಿಗಳಿಗೆ ಅತ್ಯುತ್ತಮ ನೆಲೆಯಾಗಿತ್ತು.

2. ಕನ್ನಡ ವಿಭಾಗದ ಆಶ್ರಯದಲ್ಲಿ ಜಿಎಸ್ಎಸ್ ನಡೆಸಿದ ವಿಚಾರಸಂಕಿರಣಗಳನ್ನು ಪ್ರತ್ಯೇಕವಾಗಿಯೇ ಪ್ರಸ್ತಾಪಿಸಬೇಕು. 1969ರಲ್ಲಿ ನಡೆಸಿದ "ಸೆಂಟ್ರಲ್ ಕಾಲೇಜ್ ಕರ್ನಾಟಕ ಸಂಘ"ದ ಸುವರ್ಣ ಮಹೋತ್ಸವದ ವಿಚಾರಸಂಕಿರಣದಿಂದ ಮೊದಲಾಗಿ ಸುಮಾರು ಇಪ್ಪತ್ತು ವರ್ಷಗಳ ಕಾಲ ಈ ಸಂಕಿರಣಗಳು ಕರ್ನಾಟಕದ ಸಾಹಿತ್ಯ ಕ್ಯಾಲೆಂಡರ್‌ನ ಅತಿಮುಖ್ಯ ಈವೆಂಟ್‌ಗಳಾಗಿದ್ದವು. ಇವುಗಳಿಗೆ ಹೋಲಿಸಿದರೆ ಸಾಹಿತ್ಯ ಸಮ್ಮೇಳನಗಳೇ ಮಂಕಾಗಿ ಕಾಣುತ್ತಿದ್ದವು. ಎಲ್ಲ ಸಾಹಿತ್ಯಕ ಚಳುವಳಿಗಳ, ಪ್ರಾದೇಶಿಕ ವಲಯಗಳ, ಹಿರಿಯರ-ಕಿರಿಯರ, ಕನ್ನಡ-ಇಂಗ್ಲಿಷ್ ಅಧ್ಯಾಪಕರ, ಹಾಗಲ್ಲದೆ ಬೇರೆ ಉದ್ಯೋಗಗಳಲ್ಲಿ ತೊಡಗಿಕೊಂಡವರ ಒಟ್ಟುಗೂಡುವಿಕೆಯು ಹುಟ್ಟಿಸಿದ ಕಾವಿಗಿಂತ ಹರಡಿದ ಬೆಳಕೇ ಹೆಚ್ಚಾಗಿತ್ತು. ಪ್ರಬಂಧಮಂಡನೆಯಷ್ಟೇ, ಅನಂತರದ ಪ್ರಶ್ನೋತ್ತರಗಳು ಮೌಲಿಕವಾಗಿರುತ್ತಿದ್ದವು. ಸಾಹಿತಿಗಳಿಗೆ, ಅದರಲ್ಲೂ ವಿಮರ್ಶಕರಿಗೆ ಈ ಸಂಕಿರಣಗಳು ಕೊಟ್ಟ ವಿಸಿಬಿಲಿಟಿ ಅಪಾರವಾದುದು. ಇಂದಿನ ಅನೇಕ ಸ್ಟಾರ್‌ಗಳು ಅಂದಿನ ಆಕಾಶದಲ್ಲಿ ಮೊದಲು ಮೂಡಿದವರೇ! ಈ ಎಲ್ಲ ವೈಚಾರಿಕ ಪ್ರಕ್ರಿಯೆಗಳ ನಡುವೆ, ಸ್ವಾಗತಭಾಷಣ ವೊಂದನ್ನು ಹೊರತುಪಡಿಸಿದರೆ, ಉಳಿದಂತೆ ಮೂರು ದಿನಗಳ ಕಾಲ ಮೌನವ್ರತ ವಹಿಸುತ್ತಿದ್ದ ಜಿ.ಎಸ್.ಎಸ್ ಅವರ ಮೌನ ನಿಜವಾಗಿಯೂ ಬಂಗಾರವೇ. ಅವರ ತೇಲಿ ಹೋದ ಉಪನ್ಯಾಸಗಳನ್ನು ಬರೆಸಿ, ತರಿಸಿ, ಮುದ್ರಿಸಿ ಮುಂದಿನ ವರ್ಷದ ಸೆಮಿನಾರ್‌ನಲ್ಲಿ ಬಿಡುಗಡೆ ಮಾಡದಿದ್ದರೆ....! ಆ ಪ್ರಶ್ನೆಯೇ ಇಲ್ಲ, ಎಲ್ಲ ಪುಸ್ತಕಗಳೂ ಬಂದೇ ಬಂದವು. ಒಂದೊಂದೂ ಆಯಾ ಕ್ಷೇತ್ರದಲ್ಲಿ ಇಂದಿಗೂ "ಮಸ್ಟ್ ರೀಡ್"ಗಳು. "ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳು", "ಪಂಪ-ಒಂದು ಅಧ್ಯಯನ", "ಕವಿ ಬೇಂದ್ರೆ", "ಶ್ರೀ ಕುವೆಂಪು", "ಕರ್ನಾಟಕ ಜಾನಪದ", "ಕಾದಂಬರಿಕಾರ ಕಾರಂತ", "ದಶವಾರ್ಷಿಕ ಸಾಹಿತ್ಯ" ಯಾವುದನ್ನು ಹೇಳುವುದು ಯಾವುದನ್ನು ಬಿಡುವುದು? ಬೇಂದ್ರೆಯವರೊಂದಿಗೆ ನಾವೂ ಹೇಳಬೇಕು: "ಎಲ್ಲೆ ಹೋದವೋ ಗೆಳೆಯ ಆ ಕಾಲಾ".

ಹೋಗುವುದಾದರೂ ಎಲ್ಲಿಗೆ? ಚಿಕ್ಕ ಕೆರೆಯಲ್ಲಿ ಬಿದ್ದವನು ದೊಡ್ಡ ಕೊರೆಯಲ್ಲಿ ಎದ್ದ ಹಾಗೆ ಕನ್ನಡ ಅಧ್ಯಯನ ಕೇಂದ್ರದಲ್ಲಿ ಮುಗಿದ ಶಕೆಯು ಕರ್ನಾಟಕ ಸಾಹಿತ್ಯ ಅಕಾಡೆಮಿಯಲ್ಲಿ ಮೊದಲಾಯಿತು. ಮೂರು ವರ್ಷಗಳ ಮಿನಿ ಸ್ವರ್ಣಯುಗ. ಹಾಗೆ ನೋಡಿದರೆ ಬರಗೂರು ರಾಮಚಂದ್ರಪ್ಪನವರ ಅಧಿಕಾರಾವಧಿಯ ದಿನಗಳನ್ನೂ ಸೇರಿಸಿ ಆರುವರ್ಷಗಳ ಸ್ವರ್ಣಯುಗ ವೆಂದರೂ ತಪ್ಪಿಲ್ಲ. ಇಲ್ಲಿ ಕರ್ನಾಟಕವೇ ರಂಗಭೂಮಿ, ಸದಸ್ಯರೇ ಸಹೋದ್ಯೋಗಿಗಳು. ಇಲ್ಲಿನ ಸೆಮಿನಾರ್‌ಗಳಲ್ಲೂ ಅದೇ ರೀತಿಯ ವಾತಾವರಣ-ಬೇರೆ ಬೇರೆ ಊರುಗಳಲ್ಲಿ ನಿರ್ಮಾಣವಾಗುತ್ತಿತ್ತು. ವಿಷಯಗಳ ವ್ಯಾಪ್ತಿ ಹೆಚ್ಚಿತು. ಕಾಳಿದಾಸ, ಶೇಕ್ಸ್‌ಪಿಯರ್, ಎಲಿಯಟ್, ರಾಷ್ಟ್ರೀಯತೆ, ಸಾಹಿತ್ಯ ಮತ್ತು ಪ್ರತಿಭಟನೆ, ಮಹಿಳಾಸಾಹಿತ್ಯ ಒಂದೇ ಎರಡೇ. ಎಲ್ಲವೂ ಪುಸ್ತಕಗಳ ಆಕಾರ ಪಡೆದವು, ಎಂದಿನಂತೆ.

ಮೇಷ್ಟ್ರಿಗೆ, ಭಾಷಣಗಳು ಜಂಗಮವಾದರೆ, ಪುಸ್ತಕಗಳು ಅಳಿವಿಲ್ಲದ ಸ್ಥಾವರಗಳು. "ಭಾರತೀಯ ಸಾಹಿತ್ಯ ಸಮೀಕ್ಷೆ"ಯ ಎರಡು ಅನುವಾದಿತ ಸಂಪುಟಗಳು ಇಂದಿಗೂ ಭಾರತದ ಎಲ್ಲ ಭಾಷೆಗಳ ಎಲ್ಲ ಪ್ರಕಾರಗಳ ಸಾಹಿತ್ಯವನ್ನು ಕನ್ನಡದಲ್ಲಿ ಪರಿಚಯ ಮಾಡಿಕೊಡುವ ಏಕೈಕ ಆಕರಗಳು. ಹಾಗೆಯೇ "ವಿಮರ್ಶೆಯ ಪಾರಿಭಾಷಿಕಗಳು" ಮಾಲೆಯಲ್ಲಿ ಪ್ರಕಟವಾಗಿರುವ ಹದಿನೈದಕ್ಕೂ ಹೆಚ್ಚು ಪುಸ್ತಕಗಳು ಆಯಾ ವಿಷಯಗಳ ಬಹಳ ಉಪಯುಕ್ತವಾದ ಮೈಕ್ರೋ ಅಧ್ಯಯನಗಳು. "ಸಾಹಿತ್ಯ ವಿಮರ್ಶೆ", "ಶೈಲಿಶಾಸ್ತ್ರ", "ಪುರಾಣ", "ಕಥನ ಕವನ", "ದಲಿತ-ಬಂಡಾಯ", "ಅಸ್ತಿತ್ವವಾದ" ಹೀಗೆಯೇ ಒಂದೊಂದೂ ಉಪಯುಕ್ತವೇ. ಹಿರಿಯ ಸಾಹಿತಿಗಳ ಜೀವನ-ಕೃತಿಗಳ ಪರಿಚಯ ಮಾಡಿಕೊಡುವ "ಸಾಲುದೀಪಗಳು" ಕೃತಿಯ ಉಪಯುಕ್ತತೆಯ ಸ್ವರೂಪವೇ ಬೇರೆ. ಅಕಾಡೆಮಿ ಆಗ ಮೊದಲಬಾರಿಗೆ ಯುವಕವಿಗೋಷ್ಠಿಗಳನ್ನು ನಡೆಸಿತು. 'ಅನಿಕೇತನ'ದ ಇಂಗ್ಲಿಷ್ ಮತ್ತು ಕನ್ನಡ ಆವೃತ್ತಿಗಳಿಗೆ ಹೊಸ ರೂಪ ನೀಡಿತು. ವಾರ್ತಾಪತ್ರವನ್ನು ಹೊರಡಿಸಿತು. ಪ್ರಶಸ್ತಿವಿನಿಯೋಗ ಸಮಾರಂಭಗಳನ್ನು ಬೇರೆಬೇರೆ ಊರುಗಳಲ್ಲಿ ನಡೆಸಿತು. ಇವೆಲ್ಲ ಸಂಸ್ಕೃತಿ ಸೃಷ್ಟಿ ಮತ್ತು ಪ್ರಸಾರದ ಮಾದರಿಗಳಲ್ಲವಾದರೆ, ಬೇರೆ ಯಾವುದನ್ನು ಹಾಗೆ ಕರೆಯಬಹುದು? ಇದು ನಿಜವಾಗಿಯೂ ಅಧ್ಯಾಪಕ ಸಮ್ಮಿತ.

ಇದೆಲ್ಲವನ್ನೂ ಸಾಧಿಸುವಾಗ ಜಿಎಸ್ಎಸ್ ತೊಡಗಿಸಿಕೊಳ್ಳುವ ವಿಧಾನದ ಬಗ್ಗೆ. ಅವರ ವ್ಯಕ್ತಿತ್ವದ ಬಗ್ಗೆ ನಾನು ಹೆಚ್ಚಾಗಿ ಹೇಳಿಲ್ಲ. ಅದು ಇನ್ನೊಂದೇ ಲೇಖನದ ವಸ್ತು. ಆದರೂ ವಿವರಗಳ ಕಡೆಗೆ ನೀಡುವ ಅತೀವ ಗಮನ, ಒಂದು ಕೆಲಸವು ಸರಿಯಾಗಿಯೇ ಆಗಬೇಕೆಂಬ ನಚ್ಚು, ಆಗುವುದೋ ಇಲ್ಲವೋ ಎಂಬ ಆತಂಕ, ಅವರ ಆತ್ಮೀಯರಿಗೆ ಮಾತ್ರ ಪರಿಚಯವಿರುವ ಹಾಸ್ಯಪ್ರಜ್ಞೆ, ಹೊಸ ಪದಪುಂಜಗಳನ್ನು ಚಕ್ ಎಂದು ಕಟ್ಟಿಕೊಡುವ ವಿಟ್, ಅತ್ಯಂತ ಸಣ್ಣ ವಿಷಯಕ್ಕೂ ಪೂರ್ವಸಿದ್ಧತೆ ಮಾಡಿಕೊಳ್ಳುವ ಮುತುವರ್ಜಿ ಇವೆಲ್ಲವೂ ಅವರ ಸಾಂಸ್ಕೃತಿಕ ಸಾಧನೆಯ ಹಿಂದೆ ಇರುವ ವೈಯಕ್ತಿಕ ಗುಣಗಳು.

ಇದುವರೆಗಿನ ಸುದೀರ್ಘ ಪರಿಶೀಲನೆಯ ಉದ್ದೇಶ ಸ್ಪಷ್ಟವಾಗಿದೆ. ಒಬ್ಬ ವ್ಯಕ್ತಿಯು, ಸಾಂಸ್ಕೃತಿಕವಾಗಿ ಮಹತ್ವದ ಸಾಧನೆಯನ್ನು ಮಾಡಬೇಕಾದರೆ ಜೀನಿಯಸ್ ಆಗಿರಬೇಕಿಲ್ಲ. ತನ್ನದೇ ಆದ ಸಂಸ್ಕೃತಿ-ಸಿದ್ಧಾಂತಗಳನ್ನು ರೂಪಿಸಿಕೊಡಬೇಕಾಗಿಲ್ಲ. ಬದಲಾಗಿ ತೆರೆದ ಮನ, ಆದರ್ಶಪರವಾದ ಮನಸ್ಸು, ಪ್ರಲೋಭನೆಗಳಿಗೆ ಸೋಲದ ದೃಢತೆ ಮತ್ತು ಪರಿಶ್ರಮಗಳು ಅವನ ಅರ್ಹತೆಗಳು. ಎಲ್ಲಕ್ಕಿಂತ ಹೆಚ್ಚಾಗಿ ಒಟ್ಟು ಸಮುದಾಯ ಹಾಗೂ ಅದರ ಸದಸ್ಯರ ಬಗ್ಗೆ ಅಪಾರ ಪ್ರೀತಿ ಬೇಕು. ಪ್ರೀತಿ ಇಲ್ಲದ ಮೇಲೆ ಇಷ್ಟೆಲ್ಲ ಆದೀತು ಹೇಗೆ? ಇಂಥ ಸಾಧನೆಯನ್ನು ನನ್ನ ಗುರುಗಳಾದ ಜಿಎಸ್‌ಎಸ್ ಅವರು ಮಾಡಿದ್ದಾರೆ. ಸಮಾಜವನ್ನು ಬದಲಾಯಿಸಲು ಆಗದಿರಬಹುದು. ಆದರೆ ನಾವು ಬಾಳುವ ಪರಿಸರದ ಆರೋಗ್ಯವನ್ನು ಕಾಪಾಡುವ ಕೆಲಸದಲ್ಲಿ ಪ್ರತಿಯೊಬ್ಬರೂ ಮಾಡಬಹುದಾದ ಅಳಿಲುಸೇವೆಗೆ ಮಾದರಿಯಾಗಿ ಅವರ ಕೆಲಸವು ಬಹುಕಾಲ ಉಳಿಯುತ್ತದೆ.



# ಜಿಎಸ್‌ಎಸ್ ಸಾಹಿತ್ಯದ ವೈಚಾರಿಕ ನೆಲೆಗಳು

ಪ್ರೊ|| ಕೆ. ಜಿ. ನಾಗರಾಜಪ್ಪ

ಜಿಎಸ್‌ಎಸ್ ಅವರ ಸಾಹಿತ್ಯ ವ್ಯವಸಾಯ ನಿರಂತರವಾಗಿ ಅರ್ಧ ಶತಮಾನಕ್ಕೂ ಮೀರಿ ಮುಂದುವರಿದಿದೆ. ಇಷ್ಟೊಂದು ದೀರ್ಘ ಅವಧಿಯ ಅವರ ಸಾಹಿತ್ಯ, ವೈವಿಧ್ಯ ಮತ್ತು ವಿಸ್ತಾರದಿಂದ ಕೂಡಿದೆ. ಸಾಹಿತ್ಯ ನಿರ್ಮಿತಿ, ವಿಮರ್ಶೆ ಮತ್ತು ಕಾವ್ಯ ಮೀಮಾಂಸೆ ಅವರ ಸಾಹಿತ್ಯಾಸಕ್ತಿಯ ವಲಯಗಳು. ಅವರಿಗೆ ತಮ್ಮ ಸಾಹಿತ್ಯ ವ್ಯಕ್ತಿತ್ವದ ಇತಿಮಿತಿಗಳ ಸ್ಪಷ್ಟ ಅರಿವಿದೆ. ಅವರ ಸಾಹಿತ್ಯ ಬದುಕು ಪ್ರಜ್ಞಾಪೂರ್ವಕವಾಗಿ ಸಂವೇದನಾತ್ಮಕವಾದುದು ಮತ್ತು ಪ್ರತಿಕ್ರಿಯಾತ್ಮಕವಾದುದು. ಹೀಗಾಗಿ ಸಂದರ್ಭೋಚಿತ ಸ್ಫೋಟಕ ಕ್ರಿಯೆಯಿಂದ ಅವರ ಪರಸ್ಪರ ವಿರುದ್ಧಾಭಿಪ್ರಾಯಗಳು ಮತ್ತು ಭಿನ್ನಾಭಿಪ್ರಾಯಗಳು ಸಾಹಿತ್ಯಾನುಭವದಲ್ಲಿ ಕರಗಿಹೋಗಿ, ದ್ವಂದ್ವ ಮೀರಿ ನಿಲ್ಲುತ್ತವೆ. ಅವರ ಜೀವನಾನುಭವವೇ ಕಾವ್ಯಾನುಭವ, ಕಾವ್ಯಾನುಭವವೇ ಜೀವನಾನುಭವವಾದಂತೆ ತೋರುತ್ತದೆ. ಅವರು ಸಾಂಸ್ಕೃತಿಕ ಮತ್ತು ಸಾಹಿತ್ಯ ಸವಾಲುಗಳನ್ನು ತಮ್ಮ ಸೃಜನಶೀಲ ಕ್ರಿಯೆಯ ಗದ್ಯಪದ್ಯಗಳೆರಡರಲ್ಲಿಯೂ ಸ್ವೀಕರಿಸಿದ್ದಾರೆ. ಅಂಥ ಸವಾಲುಗಳ ಸಂವಾದಗಳನ್ನು ಸಂವಹನಗೊಳಿಸಲು ಸ್ಪಷ್ಟ, ಸರಳ, ನೇರ ಮತ್ತು ಜಾನಪದ ಧಾಟಿ ಬಳಸಿದ್ದಾರೆ. ಜಾನಪದ ಧಾಟಿ ಎಂದರೆ ತಾವು ಕಂಡದ್ದನ್ನು, ತಮಗೆ ಅನ್ನಿಸಿದ್ದನ್ನು ಮತ್ತೆ ಮತ್ತೆ ಹೇಳಿ, ಸಹೃದಯರಿಗೆ ಯಾವ ಮಧ್ಯವರ್ತಿಯ ಹಂಗಿಲ್ಲದೆ ಮನದಟ್ಟು ಮಾಡಿಸಿ, ಅವರ ವೈಚಾರಿಕ ಪ್ರಜ್ಞೆಯನ್ನು ಜಾಗ್ರತಗೊಳಿಸುವುದು. ಜಿ.ಎಸ್.ಎಸ್ ವೈಚಾರಿಕ ಪ್ರಜ್ಞೆಯನ್ನೇ ವಿಮರ್ಶಕ ಚಿಕಿತ್ಸೆಗೆ ಒಳಗಾಗಿಸುವ ಸ್ವತಂತ್ರವಾದ ಕಾವ್ಯಚಿಂತನಾನುಭವ ಎನ್ನುತ್ತಾರೆ. ವೈಚಾರಿಕತೆ ಎಂದರೆ ವಿಮರ್ಶೆಯೂ ಆಗಬಹುದು.

ಮೂಲತಃ ಭಾವ ಜೀವಿಯಾದ ಅವರು ಶಾಸ್ತ್ರ ಸಿದ್ಧಾಂತಗಳ ರಾದ್ಧಾಂತಗಳಿಂದ ದೂರ ಸರಿಯುತ್ತಾರೆ. 'ಕಾವ್ಯಕ್ಕೆ ಶಾಸ್ತ್ರವೇಕೆ?' ಎಂಬ ಪ್ರಶ್ನೆ ಅವರದ್ದು. ಸೃಜನಶೀಲ ಪ್ರವೃತ್ತಿಯ ಅವರಿಗೆ ಕಾವ್ಯ ಸತ್ಯ, ಕಾವ್ಯ ಪ್ರಾಮಾಣಿಕತೆಗಳು, ಸಾಹಿತ್ಯ ವಾಸ್ತವಕ್ಕೆ ಬದ್ಧವಾಗಿ ಸಾಹಿತ್ಯ ಬದುಕು ಬಿಚ್ಚಿಕೊಳ್ಳುತ್ತದೆ. ಅವರಿಗೆ ವೈಚಾರಿಕತೆಯೂ ಸೃಜನಶೀಲಕ್ರಿಯೆಯ ಒಂದು ಅಂಶವಾಗುತ್ತದೆ. ಅವರ ಬರವಣಿಗೆಯ ಬದುಕು ಪ್ರಾರಂಭದಲ್ಲಿ ದಿವ್ಯಶಕ್ತಿಯ ಸಂಚಯನಕ್ಕೆ, ಕ್ರತುಶಕ್ತಿಯ ಪಕ್ವತೆಗೆ ಅಂತರ್ಮುಖಿಯಾದದ್ದು. ತಟಕ್ಕನೆ ತಾಯ ವಾತ್ಸಲ್ಯ

ವಂಚಿತ ಬಾಲ್ಯದ ಬದುಕಿನ ನೆನಪು ಒತ್ತರಿಸಿಕೊಂಡು ಬಂದು ಬಹಿರ್ಮುಖಿಯಾಗಿ, ಅದರ ಅಸಲಿರೂಪದ ಹುಡುಕಾಟದಲ್ಲಿ ವಿಫಲವಾಗಿ, ವಾತ್ಸಲ್ಯವೇ ಬಹುಮುಖಿಯಾಗಿ ಧರ್ಮ, ಸಮಾಜ ಮತ್ತು ಸಾಹಿತ್ಯ ಸ್ವರೂಪ ಪಡೆದು, ವೈಚಾರಿಕ ಚಟುವಟಿಕೆಯಿಂದ, ಸಾಮಾಜಿಕ ಪ್ರಜ್ಞೆಯಾಗಿ, ಮಾನವೀಯತೆಯ ಕಳಕಳಿಯಿಂದ ಕೊನೆಗೆ ಪ್ರೀತಿ-ಸ್ನೇಹಗಳಲ್ಲಿ ಗುರುತಿಸಿ ಕೊಳ್ಳುತ್ತದೆ: 'ಜೀವರೆಲ್ಲರೂ ಪ್ರೇಮದೊಂದು ಪಾತ್ರೆ.' ಅದೂ ಅಲ್ಲದೆ ಅಂಬಲಿತಂದು, ಕೇಳಿದವನೇ ಕಂಡು ಕಣ್ಮರೆಯಾದ ಜಂಗಮನನ್ನು ಅರಸುವ ಮುಗ್ಧ ಸಿದ್ಧರಾಮನ ಜೀವನದರ್ಶನ ಜಿಎಸ್‌ಎಸ್ ಬದುಕಿಗೆ ಮಾರ್ಗದರ್ಶಕವೂ ಮತ್ತು ಸಂಕೇತವೂ ಆಗುತ್ತದೆ. ಇಂಥ ಹುಡುಕಾಟದಲ್ಲಿ ಪ್ರಪಂಚವೇ ಹುಡುಕಾಟದ ಚಿಂತೆಯಲ್ಲಿ ಮುಳುಗಿರುವಂತೆ ಅವರಿಗೆ ಕಂಡುಬರುತ್ತದೆ. ಹುಡುಕಾಟದಲ್ಲಿ ತಾಯ ವಾತ್ಸಲ್ಯ ಭೂತಾಯ ಮಕ್ಕಳ ವಾತ್ಯಲ್ಯವಾಗಿ, ನೆಲ ಮೂಲ ಚಿಂತನೆಗೆ ಕಟ್ಟು ಬಿದ್ದು ಮಾನವೀಯತೆಯ ಕಾಳಜಿಗಳೇ (Antropo Centric) ಅವರ ಸಾಹಿತ್ಯ ಸಂವೇದನೆಗಳ ವೈಚಾರಿಕ ಕೇಂದ್ರ ಬಿಂದುವಾಗುತ್ತದೆ: 'ಮಾನವತೆ ತೊಳಲುತಿದೆ ತಮದೊಳಗೆ.' ಹೃದಯ ದಾರಿದ್ರ್ಯ, ಅವೈಚಾರಿಕತೆ, ಅನಕ್ಷರತೆ, ಅಪ್ರಮಾಣಿಕತೆ ಹಾಗೂ ಭ್ರಷ್ಟಾಚಾರಗಳು ಬದುಕನ್ನು ಗುತ್ತಿಗೆ ಹಿಡಿದುಕೊಂಡಿವೆ. 'ದೇಶದ ಸೃಜನಶೀಲತೆ, ವೈಚಾರಿಕತೆ ಹಾಗೂ ಮಾನವತಾವಾದವು ಎದುರಿಸುತ್ತಿರುವ ಈ ಬಿಕ್ಕಟ್ಟುಗಳ ನಡುವೆಯೂ ನಮ್ಮ ಪ್ರಸ್ತುತ ಕನ್ನಡ ಸಾಹಿತ್ಯದ ಪರಿಸ್ಥಿತಿ ನಿಜವಾಗಿಯೂ ನಿರಾಶಾದಾಯಕ ವಾಗಿಲ್ಲ' ಎನ್ನುತ್ತ ಈ ನೆಲದ ಮೇಲೆ ಮೂಡಿರುವ ಸಾಮಾಜಿಕ ಪ್ರಜ್ಞೆಯ ದೀಪದ ಹೆಜ್ಜೆಗಳನ್ನು ಸಾಹಿತ್ಯದಲ್ಲಿ ಗುರುತಿಸುತ್ತಾರೆ. ಆದರೂ ಅವರನ್ನು ಸದಾ ಕಾಡುವುದು ನೋವಿನ ದನಿಗಳ ಹುಯ್ಯಲು, ಹೊಟ್ಟೆಗಿಲ್ಲದೆ ತತ್ತರಿಸುವ, ಬಾಯಿಲ್ಲದೆ ಬತ್ತಲಾಗಿ ಬಿದ್ದ ದೇವಾಲಯಗಳು, ಯುಗ ಯುಗಗಳ ಯಾತನೆಯೇ ಮೂರ್ತೀಭವಿಸಿದ ಹಸಿದ ಮಗು. ಶತಮಾನಗಳಿಂದ ಹತಭಾಗ್ಯರಾಗಿ ಕೆಳಕ್ಕೆ ಉರುಳಿ ಬಿದ್ದ ಈ ಜನ, 'ಬಲವಿದ್ದು ಬಾಗಿದವರು', 'ತೆನೆತುಂಬಿ ನಿಂತ ಹೊಲಗದ್ದೆ ಬದಿಗೆ ಹಸಿವಿನಿಂದ ಸತ್ತ ಜನರು', 'ಮಹಲು-ಕಾರುಗಳ ಕೆಂಪು ಟೇಪುಗಳ ಉರುಳಲ್ಲಿ ನರಳಿದವರು'.

ಸಾಧು-ಸಂತ-ಮಠ-ದೇಗುಲ ವರ್ಗದ
ಅಜಗರ ಪೀಡಿತ ಜನವೇ
ಮುಗ್ಧ ಶ್ರದ್ಧೆಯಲಿ ಮಂಡೆಯನೊಪ್ಪಿಸಿ
ಬತ್ತಲಾದ ಜನವೇ

ವರ್ಷ ವರ್ಷವೂ ಬಂದು ಹೋಗುವ ಯುಗಾದಿಗಳಾಗಲಿ, ದೀಪಾವಳಿಗಾಗಲಿ ಬೆಲ್ಲಕ್ಕಿಂತ ಬೇವು ಹೆಚ್ಚಾಗಿ ಯಾವ ಹೊಸ ಬೆಳಕನ್ನೂ ಅವರಿಗೆ ತಂದುಕೊಟ್ಟಿಲ್ಲ. 'ದೇಶಾದ್ಯಂತ ಅಣೆಕಟ್ಟುಗಳ ಕಟ್ಟಿ ಬೆಳೆದದ್ದೇನು ಬರಿ ಹಸಿವೆ?' 'ಹೊಲಗದ್ದೆಗಳ ತುಂಬ ತೆನೆಯೆತ್ತಿ ತೂಗುವುದೇನು?' 'ಹಸಿರೆ ಅಥವಾ ನಿಟ್ಟುಸಿರೆ?' ಶ್ರೀ ಸಾಮಾನ್ಯರಿಗೆ—

**ಬಂತೆ ದೀಪಾವಳಿ? ಇಷ್ಟೊಂದು ಹಣತೆಗಳಲ್ಲಿ**
**ಎಣ್ಣೆ ಇಲ್ಲ**
**ಬರೀ ಮಾತುಗಳ ಕಡ್ಡಿಗೀಚುವೆಯಲ್ಲ**
**ನಿನಗೆ ನಾಚಿಕೆಯಿಲ್ಲ?**

ಅವರಿವರಿಗಾಗಿ ಮನೆ ಕಟ್ಟುತ್ತಾ, ಸವೆದು ಹೋದ ಈ ಜನಕ್ಕೆ, ತಮಗೂ ಒಂದು ಚಿಕ್ಕಮನೆ ಇಲ್ಲ ಎಂದು ಅನ್ನಿಸುವುದಿಲ್ಲ. ಅವರು ಕೇವಲ ಮನೆ ಕಟ್ಟಡದ ನಿರ್ಮಾಣ ಸಾಮಗ್ರಿಗಳು:

**ಮನೆ ಕಟ್ಟುವಾಗ ಇವರೂ ಇಟ್ಟಿಗೆ**
**ಗಾರೆ ಸಿಮೆಂಟು ಕಬ್ಬಿಣ ಜತೆಗೆ**
**ಬರೀ ನಿರ್ಮಾಣ ಸಾಮಗ್ರಿಗಳೆ?**
**ಬೆರೆಯುವುದಿಲ್ಲವೆ ಕಟ್ಟಡದೊಳಗೆ**
**ಇವರ ಮೈ ಬೆವರು, ಕಣ್ಣೀರು, ನಿಟ್ಟುಸಿರು**
**ಮತ್ತೆ ತಮಗೆಂದೆಂದಿಗೂ**
**ಮನೆಯಿರಲಾರದೆಂಬಥ ಕೊರಗೂ?**

ಹಳ್ಳಿಯ ರೈತರಾಗಲಿ, ನಗರ ಕಾರ್ಮಿಕರಾಗಲಿ ಶ್ರಮಕ್ಕೆ ತಕ್ಕ ಫಲ ಪಡೆಯದೆ ಶೋಷಣೆಗೆ ಒಳಗಾದ ಮುಗ್ಧರು. ಈ ನೆಲದಲ್ಲಿ, ಶ್ರೀಸಾಮಾನ್ಯರ ನೋವಿಗೆ ನೆಲೆಯಿಲ್ಲದೆ, ಅಲಕ್ಷಿತವಾದ ಜನರ ಅಭಿವ್ಯಕ್ತಿಗೆ ಅವಕಾಶವಿಲ್ಲದೆ ವೈಭವೀಕೃತವಾಗಿರುವ ಸಂಸ್ಕೃತಿ ಅಸಮಗ್ರ ಮತ್ತು ಏಕಮುಖವಾದುದು. ಅಂಥ ಕೃತಿಗಳ ಕಲೆಯೂ ಅಸಮಗ್ರವಾದದು. ಇಷ್ಟಾದರೂ ಜನರನ್ನು ಎತ್ತಿಕಟ್ಟುವ, ಹಿಂಸೆಗೆ ಪ್ರಚೋದಿಸುವ, ಕ್ರಾಂತಿಗೆ ಸಂಘಟಿಸುವ, ಹೋರಾಟದ ಮನೋಭಾವ ಲೇಖಕರದ್ದಲ್ಲ.

**ಕಣ್ಣೆದುರು ಕಾಣುವುದನ್ನು**
**ಕಂಡೂ ಕಂಡೂ ಸುಮ್ಮನಿರಲಾರೆ**
**ಹಾಗಂತ ಹೋರಾಟಕ್ಕೆ ಇಳಿದರೆ**
**ಸಮಸ್ತ ಶಸ್ತ್ರಾಸ್ತ್ರಗಳೂ ಬರಿದಾಗಿ**
**ಅಭಿಮನ್ಯುವಿನ ನೆನಪಾಗುತ್ತದೆ**
**ಈಗ ಮಾಡುವುದೇನು?**

ಒಣ ವೇದಾಂತಕ್ಕೆ ಶರಣಾಗುವುದಾಗಲಿ, ಶೋಷಕರ ಬೆಂಬಲಿಗರಾಗುವುದಾಗಲಿ ಅಥವಾ ಅಡ್ಡಗೋಡೆಯ ಮೇಲಿನ ದೀಪವಾಗುವುದಕ್ಕಾಗಲಿ ಇಷ್ಟಪಡದೆ, ಸ್ಥಾಯಿಯಾಗಿರುವ ರಾಕ್ಷಸ ಶಕ್ತಿಯೊಂದಿಗೆ ಹೋರಾಡುವುದು ವ್ಯರ್ಥ ಎಂದು ತೀರ್ಮಾನಿಸಿ, ಶೋಷಿತರ ಯಾತನೆಗೆ ತಾನೂ ಕಾರಣ ಎಂದು ಪಶ್ಚಾತ್ತಾಪ ಪಡುವ ಲೇಖಕರು, ಶ್ರೀ ಸಾಮಾನ್ಯರ ಬದುಕಿನೊಂದಿಗೆ ತಮ್ಮನ್ನು ಗುರುತಿಸಿಕೊಂಡು, ವಿಚಾರಕ್ರಾಂತಿಗೆ ಕಂಕಣಬದ್ಧರಾಗುತ್ತಾರೆ.

ಒಂದು ಸಲವಾದರೂ ಅನುಭವಿಸು, ಈ ಮಣ್ಣು
ನನ್ನದು, ನನಗೆ ಜೀವ ಕೊಟ್ಟದ್ದು, ಎಂದು
ಈ ಭಾವವಿಲ್ಲದ ಬದುಕೊಂದು ಬದುಕಲ್ಲ
ಇದರಲ್ಲೆ ಸಾಯುವುದು ಪುಣ್ಯವೆಂದು.
ಏಳು, ಹೊಸ್ತಿಲ ಬಳಿಗೇ ಬಂತು ಯುದ್ಧ
ಆಗು ಸನ್ನದ್ಧ

ಪುರಾಣದ ವಸ್ತುವಾಗಲಿ, ಐತಿಹಾಸಿಕ ವಸ್ತುವಾಗಲಿ, ಸಮಕಾಲೀನ ವಸ್ತುವಾಗಲಿ—ಕಾವ್ಯ ಸಂವೇದನೆಯಿಂದ ಪ್ರಸ್ತುತಗೊಳಿಸಿ ವ್ಯಾಖ್ಯಾನಿಸುವಲ್ಲಿ ಸಾಮಾಜಿಕ ಪ್ರಜ್ಞೆ ಮತ್ತು ಸಾಮಾಜಿಕನ್ಯಾಯಕೇಂದ್ರಿತ ಚಿಂತನೆಗಳೇ ಪ್ರಧಾನವಾಗಿರುತ್ತವೆ.

ಈ ನೆಲದಲ್ಲಿ ಎಷ್ಟು ಕಿತ್ತರೂ ಮುಗಿಯದ ಹೊಲಸು ಬೆಳೆಯುತ್ತಲೇ ಇದೆ. ಪುರಾಣ ಪ್ರತೀಕಗಳು ಮತ್ತೆ ಮತ್ತೆ ಮುಂದುವರಿದಿವೆ—

ನಾ ತೋರಿಸಲೆ? ಬೇಕಾಗಿಲ್ಲ ನಿನಗಿದನು ಕಾಣಿಸಲು
ದಿವ್ಯ ಚಕ್ಷುಸ್ಸು;
ನೂರಾರು ಹಾಲುಬಳಿ ಕೊರಳಿನ ಸುತ್ತ ಕಂಸನ ಬೆರಳಿ-
ನೊತ್ತುಗಳ ತೋರಿಸಲೆ?
ನಕಲಿ ಪಾರ್ಥರಿಗಾಗಿ ಏಸೊ ಜನ ಏಕಲವ್ಯರ ಬೆರಳ
ಕತ್ತರಿಸುವಾಚಾರ್ಯತಂತ್ರಗಳ ಗರುಡಿಗಳ ತೋರಿಸಲೆ?
ಕೆಂಪು ಟೇಪಿನ ಕೋಟೆಯಲಿ ಸೆರೆಯಾಗಿ ಬದ್ದಿರುವ
ನೂರಾರು ಮುಗ್ಧರದೃಷ್ಟಗಳ ತೋರಿಸಲೆ?
ಕ್ಷಣಮಾತ್ರದಲ್ಲಿ ಸ್ಮಾರಕನಿಧಿಗೆ ಗೋರಿ ಕಟ್ಟುವ
ಕುಶಲ ರೂವಾರಿಗಳ ತೋರಿಸಲೆ?
..............................
ಹುಲ್ಲು ತುರುಕಿದ ಕರುವಿನಾಕಾರಗಳ ತೋರಿ ಕೆಚ್ಚಲ ಕರೆವ
ನಿಪುಣರನು ತೋರಿಸಲೆ?

ಜಿಎಸ್ಎಸ್ ಅವರ ಪ್ರಶ್ನೆಗಳೂ ವೈಚಾರಿಕತೆಯ ಅಂಶಗಳೇ ಸರಿ. 'ಮುಂದಕ್ಕೆ ಚಲಿಸುತ್ತಿದ್ದರೆ ಚರಿತ್ರೆ। ನಿಂತು ಮಡುಗಟ್ಟಿದರೆ ಪುರಾಣ'. ಚರಿತ್ರೆಯನ್ನು ಪುರಾಣವಾಗುವುದಕ್ಕೆ, ಅದು 'ನಿನ್ನೆಲ್ಲವನ್ನೂ ಅರೆವ ಗಾಣವಾಗುವುದಕ್ಕೆ' ಬಿಡಬಾರದು. ಒಳ್ಳೆಯದಕ್ಕಾಗಿ ನಡೆಯುವುದೆಲ್ಲವನ್ನೂ ಪ್ರಶ್ನಿಸಬೇಕು. ಪ್ರಶ್ನೆ ಮಾಡುತ್ತಲೇ ಚರಿತ್ರೆಗೆ ಚಲನೆ ಬರುತ್ತದೆ.

ಯಥಾಸ್ಥಿತಿಯ ಕದಲಿಸದೆ
ಸ್ವಸ್ಥವಾಗಿದ್ದೆಯೋ
ಆವರಿಸುತ್ತದೆ ನಿನ್ನನ್ನೂ

ಪುರಾಣದ ಪಾಟ
ಕೊಳಕು ನಾಲಗೆ ಚಾಟ!

ಪುರಾಣವಸ್ತುವನ್ನು ಪ್ರಸ್ತುತಗೊಳಿಸಿ ಸಮಕಾಲೀನಗೊಳಿಸುವ ಎಷ್ಟೋ ಪ್ರಸಂಗಗಳಲ್ಲಿ 'ಹೊಸಹುಟ್ಟು' ಕವನ ಬಹು ಮುಖ್ಯವಾದುದು. ಯುಗದ ಅಂತ್ಯ ಹತ್ತಿರವಾಗಿ, ಪ್ರಳಯ ಸಮೀಪಿಸಿದ ಸೂಚನೆಯಾಗುತ್ತದೆ ಮೀನಿಗೆ. ಅದು ದಡದಲ್ಲಿ ನಿಂತ ಮನುವಿಗೆ ಹೇಳುತ್ತದೆ:

ಕೇಳು, ನಾನು ಹೇಳುವುದನ್ನು
ಸರಿಯಾಗಿ ಕೇಳು,
ನೀನು ಈ ಯುಗದ ಮನು; ನಾಳಿನ ಜಗದ
ಭಾರವನು ಹೆಗಲಲ್ಲಿ ಹೊತ್ತವನು;
ಈ ಕಾಲ ಮುಗಿತಾಯಕ್ಕೆ ಬಂದಿದೆ
ಬದಲಾಗುವುದು ಅಗತ್ಯ
ಚಕ್ರ ತಿರುಗುವುದಕ್ಕೆ.

ಈಗ ಮೂಲಜಲ ಬಗ್ಗಡವಾಗಿ ಕೆಸರು
ಒಳಗೂ ಹೊರಗು; ಕೊಳೆತು ನಾರಿದೆ ತೀರ್ಥ.
ದೇವಾಲಯದ ಮೂರ್ತಿಗಳು ಭಗ್ನ; ತಕ್ಕಡಿ
ಯೆಲ್ಲ ತಲೆಕೆಳಗು. ತಿನ್ನುವನ್ನದ ತುಂಬ
ಕಲ್ಲು. ಎಲ್ಲೆಂದರಲ್ಲಿ ಬೆಳೆದು ದಂಡಕಾರಣ್ಯ
ಹದ್ದು-ನರಿ-ತೋಳ ರಾಕ್ಷಸ ರಾಜ್ಯ.

ಆದ್ದರಿಂದ ಈಗ ಉಳಿದಿರುವ ದಾರಿ ಎಂದರೆ ಇರುವುದೆಲ್ಲವನ್ನೂ ಕೊಚ್ಚಿ ಹೊಸ ಜಗತ್ತನ್ನು ಕಟ್ಟಬೇಕಿದೆ. ಮನು ಅದಕ್ಕೆ ನಿಮಿತ್ತ ಮಾತ್ರ. 'ಹಡಗನ್ನು ಕಟ್ಟಿ, ತಕ್ಕ ಬೀಜಗಳನ್ನು ಆಯ್ದು, ಉತ್ತಮ ತಳಿ ಶೇಖರಿಸಿ ರಕ್ಷಣೆಗೆ ಸಿದ್ಧನಾಗು', 'ಮನುಕುಲದ ಬೀಜವನ್ನು ಹೊತ್ತ ಹಡಗನ್ನು ರಕ್ಷಿಸುತ್ತೇನೆ' ಎಂದು ಹೇಳಿದ ಮೀನಿಗೆ ಮನು ಕೊಡುವ ಉತ್ತರ ಅಚ್ಚರಿಯನ್ನುಂಟುಮಾಡುತ್ತದೆ.

ನಾನೊಲ್ಲೆ
ಕೈ ಮುಗಿದು ಹೇಳಿದನು ಮನು. ನಾನೊಲ್ಲೆ
ಇರುವ ಈ ಎಲ್ಲವನ್ನೂ ನಿರ್ನಾಮಗೊಳಿಸಿ
ನಾಳಿನ ದಿವಸ ನಾನು ನನ್ನ ಪರಿವಾರ
ಉಳಿದು ಬದುಕುವ ಭಾಗ್ಯ ನನಗೆ ಬೇಡ
ನೀ ವರ್ಣಿಸಿದ ವಾಸ್ತವದ ಒಂದಂಶ
ನಾನೂ ಕೂಡ

**ಕೊಚ್ಚಲಿ ಬಿಡು ನನ್ನನ್ನೂ ಸೇರಿಸಿಕೊಂಡು**
**ಈ ಮಹಾ ಪ್ರವಾಹ**
**ನನಗಿಲ್ಲ ನಾನೊಬ್ಬನೇ ಬದುಕುವ ದಾಹ**
**ನಾಳೆ ಬೆಳೆದೀತು ಹೊಸ ಮಣ್ಣಿನಲ್ಲಿ ಬೇರೂರಿ**
**ನನ್ನಲ್ಲಿರುವ ಒಳ್ಳಿತೇನಾದರೂ**
**ಕೊಂಬೆ ರೆಂಬೆಗೆ ಪುಟಿದು ಹೊಸ ಹೂವು-ಚಿಗುರು**

ಪುರಾಣದ ಮನುವಿನ ಮನೋಭಾವ ಇಲ್ಲಿ ಬದಲಾಗಿದೆ. ಯುಗ ಯುಗಗಳ ಉತ್ತಮ ತಳಿ ರಕ್ಷಣೆಯ ಫಲ ಏನಾಯಿತು ಎಂದು ಅವನಿಗೆ ಗೊತ್ತಿದೆ. ಸಮಾಜದ ಭ್ರಷ್ಟಮುಖಗಳಿಗೆ ಇದುವರೆವಿಗೂ ರಕ್ಷಿಸಿದ ಉತ್ತಮ ತಳಿಗಳೇ ಕಾರಣವಾಗಿವೆ. ಮನುವಿಗೆ, ಮೀನು ವರ್ಣಿಸಿದ ವಾಸ್ತವದ ಒಂದು ಅಂಶ ತಾನೂ ಎಂಬುದು ಅರಿವಾಗಿದೆ. ಮನುಕುಲದಲ್ಲಿ ಅಂತರ್ಗತವಾಗಿರುವ ಒಳ್ಳೆಯತನದಿಂದಲೆ ಹೊಸಚಿಗುರು ಹೊಮ್ಮಬೇಕಾಗಿದೆಯೇ ಹೊರತು, ಮನುಕುಲದ ಉತ್ತಮ ತಳಿಯ ರಕ್ಷಣೆಯಿಂದಲ್ಲ ಎಂಬ ಅರಿವು ಮಾನವೀಯತೆಯ ಅತ್ಯುತ್ತಮ ವೈಚಾರಿಕತೆಯ ವ್ಯಾಖ್ಯಾನವಾಗಿದೆ. 'ದಾಟಿ ಬಾ ನಿರ್ಭಯದ ನಿಲುವಿಗೆ' ಕವನವೂ ವೈಚಾರಿಕತೆಗೆ ಸಾಕ್ಷಿಯಾಗಿದೆ. ಅದರಲ್ಲಿ ಸೀತೆ, ದ್ರೌಪದಿ ಮುಂತಾದ ಸಂಪ್ರದಾಯಸ್ಥ ಸ್ತ್ರೀಯರಿಗಿಂತ ಭಿನ್ನವಾದ ದಾರಿ ತುಳಿದ ಅಕ್ಕಮಹಾದೇವಿಯ ನಿರ್ಭಯದ ನಿಲುವಿಗೆ ಮೆಚ್ಚುಗೆ ಇದೆ. ಒಟ್ಟಿನಲ್ಲಿ ಸಾಮಾಜಿಕ ಎಚ್ಚರ, ಸಾಮಾಜಿಕ ನ್ಯಾಯ ಮತ್ತು ಸಾಮಾಜಿಕ ಪ್ರಜ್ಞೆಯನ್ನೇ ವೈಚಾರಿಕ ಪ್ರಜ್ಞೆ ಎನ್ನುತ್ತಾರೆ ಜಿಎಸ್‌ಎಸ್.

## II

ದೇವರು-ಧರ್ಮ ಕುರಿತಾದ ಜಿಎಸ್‌ಎಸ್ ಅವರ ಕಾವ್ಯಸಂವೇದನೆ ಬದಲಾಗುತ್ತ ಹೋಗುತ್ತದೆ. ಅವರು ಯಾವ ಒಂದು ನಿಶ್ಚಿತ ಧರ್ಮಕ್ಕೂ ಬದ್ಧರಾಗುವುದಿಲ್ಲ. ಅವರು ಧರ್ಮನಿರಪೇಕ್ಷಿತ, ಮಾನವತಾವಾದಿಗಳು. ಅವರಿಂದ ದೇವರಿಗಾಗಿ ಅನ್ವೇಷಣೆ ನಡೆದಿದೆ. 'ಹೈಮಕೂಟಾಚಲದಿ ತಪಗೈದ ಶಿವ', 'ಉದಯಗಿರಿ ಶಿವಕರುಣೆ', 'ಯಾವ ಶಿವದ ಸೃಷ್ಟಿಗಾಗಿ ಇಂಥ ವಿಲಯ ವೈಭವ?', 'ಅಶಿವ ಸಾಯಲಿ ಶಿವವು ಬೆಳಗಲಿ', 'ಭಕ್ತನೆಡೆಗೆ ತಾನಾಗಿ ಬರುವ ಮಾದೇವ ಕರುಣೆಯಂತೆ', 'ಶ್ರೀಶೈಲ ಶಿವಜೂಟದಿಂದ ಬಂದಿತು ಬೀಸಿ ದಿವ್ಯ ಮಂದಾನಿಲದ ಕಂಪಿನೋಲೆ', 'ಇದು ಜೀವನದ ಸಂಗಮ', 'ಯಾವ ಪರ್ವತಲಿಂಗದಿಟ್ಟಿ ಈ ತೆರದಿ, ಜಂಗಮವಾಗಿ ಬಂದಿಲ್ಲಿ ಸಂಗಮವಾಯ್ತೊ'— ಇತ್ಯಾದಿ ಉಕ್ತಿಗಳಲ್ಲಿ ಶಿವ ಸಂಪ್ರದಾಯದ ವೀರಶೈವ ಧರ್ಮದ ಸೂಚನೆಗಳಿವೆ. ಆದರೂ 'ನೂರು ಬಗೆಯ ಆರಾಧನೆಯಿದ್ದರು, ದೇವರು ಎಲ್ಲರಿಗೊಂದೇ' ಎಂಬ ಸಮನ್ವಯ ಧರ್ಮತತ್ತ್ವದ ಅರಿವಾಗುತ್ತದೆ. ಅನಂತರ—

**ಎಲ್ಲೋ ಹುಡುಕಿದೆ ಇಲ್ಲದ ದೇವರ**
**ಕಲ್ಲು ಮಣ್ಣುಗಳ ಗುಡಿಯೊಳಗೆ**
**ಇಲ್ಲೇ ಇರುವ ಪ್ರೀತಿ ಸ್ನೇಹಗಳ**
**ಗುರುತಿಸದಾದೆನು ನಮ್ಮೊಳಗೆ**

'ಪ್ರೀತಿ-ಕರುಣೆ-ಸ್ನೇಹ ಮರುಕ ಇವೇ ನಮ್ಮ ದೇವರು.' ದೇವಲೋಕಕ್ಕೆ, ದೇವಲೋಕದ ಬೆಳಕಿಗೆ, ಸ್ವರ್ಗದ ಸೊಗಸಿಗೆ ಮೋಹಗೊಂಡು ಭ್ರಮನಿರಸನವಾದ ಜೀವಕ್ಕೆ 'ನೀನು ಹುಡುಕುವ ರತ್ನ ನಿನ್ನಲ್ಲೆ ಹುದುಗಿಹುದು' ಎಂಬ ಅರಿವಾಗುತ್ತದೆ. ದೇವರ ಸಾಕಾರ ಕಲ್ಪನೆ, ನಿರಾಕಾರವಾಗಿ ವಿಶ್ವಶಕ್ತಿಯಾಗುತ್ತದೆ. ಧರ್ಮ ವೀರಶೈವ ಧರ್ಮವಾಗಿದ್ದದ್ದು ಮಾನವ ಧರ್ಮವಾಗುತ್ತದೆ. ವೇದ ಉಪನಿಷತ್ತಿನ ಆ ಸನಾತನ ಧರ್ಮಕ್ಕೆ ಸಾಮಾಜಿಕ ಹೊಣೆಗಾರಿಕೆ ಇಲ್ಲ. ಧರ್ಮ ತಪ್ಪು ದಾರಿ ತುಳಿದಿದೆ. ಮಾನವ ಭ್ರಷ್ಟನಾಗಿದ್ದಾನೆ. ಮಾನವ-ಮಾನವ ಸಂಬಂಧಕ್ಕೆ ಧರ್ಮ ಅಡ್ಡಿಯಾಗಿ ನಿಂತಿದೆ, ಮತ ಮೌಢ್ಯವೇ ಇದಕ್ಕೆ ಕಾರಣ. ಧರ್ಮ ಶೋಷಣೆಗೆ ದಾರಿಯಾಗಿದೆ. ವರ್ಣ ಮತ್ತು ವರ್ಗ ಸಮಸ್ಯೆಗಳನ್ನು ಧರ್ಮ ಹುಟ್ಟುಹಾಕಿದೆ. ಯುಗಯುಗದಲ್ಲಿಯೂ ಶ್ರೀ ಸಾಮಾನ್ಯನ ನೋವಿಗೆ, ಸಂಕಟಕ್ಕೆ ಧರ್ಮ ಕಾರಣವಾಗಿದೆ. ಸ್ವರ್ಗವನ್ನು, ದೇವಸ್ಥಾನಗಳನ್ನು ನಿರಾಕರಿಸಿದರೂ, 'ಹೊಟ್ಟೆಗಿಲ್ಲದೆ ತತ್ತರಿಸುವ ದೇವಸ್ಥಾನಗಳನ್ನು', 'ಕಣ್ಣಲ್ಲೇ ಬೆಳಕಿಲ್ಲದ ದೇವಸ್ಥಾನಗಳನ್ನೇನು ಮಾಡೋಣ?' 'ಅಲ್ಲದೆ ಬದುಕು ಒಡೆದ ಕನ್ನಡಿ', 'ಜಾತಿಯಗಡಿ, ನೀತಿಯಗಡಿ, ದೇಶದ ಗಡಿ, ಭಾಷೆಯ ಗಡಿ, ವರ್ಣದ ಗಡಿ, ಪಂಥದ ಗಡಿ' ಇದಕ್ಕೆ ಕಾವಲು ನಿಂತಿದ್ದಾರೆ ಸೈನಿಕರೂ ಪಂಡಿತರೂ ಮತ್ತು ಶಾಸ್ತ್ರಿಗಳು.

**ಒಡೆದಿರುವೀ ಕನ್ನಡಿ ಬದುಕಿನ ಗೆರೆಗೆರೆಯೇ**
**ಗಡಿರೇಖೆಯ ಗುರುತು**
**ಕಾಣುವುದೆಂತೀ ಸಮಗ್ರ ಮಾನವ್ಯದ ಮುಖವಿದರೊಳು**
**ಬರೀ ವಿಕೃತಿಯ ಹೊರತು?**

ಇಂಥ ವಿಷಮ ಪರಿಸ್ಥಿತಿಯಲ್ಲಿ ಧರ್ಮ ಮಾನವ-ಮಾನವ ಸಂಬಂಧ ಮುರಿದು ವಿಜೃಂಭಿಸುತ್ತಿರುವಾಗ, ಜಿಎಸ್ಎಸ್, ಧರ್ಮದ ಸಾಮಾಜಿಕ ಹೊಣೆಗಾರಿಕೆಗೆ, ಧರ್ಮದ ಸಾಮಾಜಿಕ ನ್ಯಾಯಕ್ಕೆ ಮತ್ತು ಧರ್ಮದ ವೈಚಾರಿಕತೆಗೆ ಕಳಕಳಿ ವ್ಯಕ್ತಪಡಿಸುತ್ತಾರೆ. ದೇವರು, ಧರ್ಮ, ಸ್ವರ್ಗ, ಅವತಾರಗಳನ್ನು ವಿಡಂಬಿಸುತ್ತಾರೆ. ಆದರೆ 'ಅಲ್ಲಿ-ಇಲ್ಲಿ' ಎಂಬ ಕವನದಲ್ಲಿ ಶಿವನ ಪುರಾಣ ಮತ್ತು ವಾಸ್ತವದ ಎರಡು ಮುಖಗಳನ್ನು ಚೆನ್ನಾಗಿ ಚಿತ್ರಿಸಿದ್ದಾರೆ. ನಕ್ಷತ್ರಗಳ ಮತ್ತು ಚಂದ್ರ ಸುಶೋಭಿತನಾಗಿ, ದಿವ್ಯಾಂಬರ ಸಂಚಾರಿಯಾದ ಶಿವನೇ, 'ಕಣ್ಣ ನೀರಿನಲಿ, ಮಣ್ಣ ಧೂಳಿನಲಿ, ಹೊರಳುತ್ತಿರುವ ಸಹಚಾರಿ'ಯಾಗುತ್ತಾನೆ. 'ಕೋಟಿಸೂರ್ಯಕರ ತೇಜಃಪುಂಜತರ, ವಿದ್ಯುದ್ರಾಜಿತ ರಥಗಾಮಿ'ಯಾದ ಶಿವನೇ, 'ಉಳುತಿಹ ರೈತನ, ನೇಗಿಲ ಸಾಲಿನ, ಮಣ್ಣಿನ ರೇಖಾಪಥಗಾಮಿ'ಯಾಗುತ್ತಾನೆ.

ಬಾಂದಳ ಚುಂಬಿತ
ಶುಭ್ರ ಹಿಮಾವೃತ
ತುಂಗಶೃಂಗದಲಿ ಗೃಹವಾಸಿ
ದೀನ ಅನಾಥರ
ದುಃಖಿ ದರಿದ್ರರ
ಮುರುಕು ಗುಡಿಸಲಲಿ ಉಪವಾಸಿ!

ಅರ್ಧ ಸಂಸ್ಕೃತ ಮತ್ತು ಅರ್ಧ ಕನ್ನಡ ಪ್ರತಿಯೊಂದು ಪದ್ಯದಲ್ಲಿ ಬಳಕೆಯಾಗಿರುವ ಕ್ರಮ ಶಿವನ ವೈಭವವಕ್ಕೂ, ಸಾಮಾನ್ಯರ ದೀನ ದರಿದ್ರರ ಸ್ಥಿತಿಗೂ ಸಂಕೇತವಾಗಿದೆ. ಶಿವ ದರಿದ್ರರ, ಶ್ರಮಜೀವಿಗಳ ದೇವರಾಗುತ್ತಾನೆ. ದಿವ್ಯಾಂಬರ ಸಂಚಾರಿಯೂ, ವಿದ್ಯುದ್ರಾಜಿತ ರಥಗಾಮಿಯೂ, ತುಂಗಶೃಂಗದ ಗೃಹವಾಸಿಯೂ ಆದ ಆ ಶಕ್ತಿ ದುಃಖಿತರ, ರೈತರ ಮತ್ತು ಅನಾಥರ ಬಂಧುವಾಗುತ್ತದೆ. ಅವರ ಸುಖದುಃಖದಲ್ಲಿ ಸಹಭಾಗಿಯಾಗುತ್ತದೆ. ಇಲ್ಲಿ ಶಿವನ ಪುರಾಣ ಕಲ್ಪನೆಯ ಬದಲಾವಣೆಯನ್ನು ಗುರುತಿಸಬಹುದು. ಇಂಥ ಬದಲಾವಣೆಯೆ ವೈಚಾರಿಕತೆ. ಇದು ಅವತಾರ ಕಲ್ಪನೆಯಲ್ಲ. ಮಾನವ ದೇವತ್ವ ಸಾಧಿಸಿದರೆ, ದೇವರು ಮಾನವತ್ವ ಸಾಧಿಸುವ ತತ್ತ್ವ ಇದರಲ್ಲಿ ಅಡಕವಾಗಿದೆ. ಅಂದರೆ ಶಿವ ಮಾನವೀಯತೆಯನ್ನು ಮೆರೆಯುವುದೇ ಆಗಿದೆ. ಶಿವ ಸಂಸ್ಕೃತ ಶಾಸ್ತ್ರಗಳ ಗೊಡ್ಡು ಸಂಪ್ರದಾಯಗಳನ್ನು ಮುರಿದು ಶ್ರೀಸಾಮಾನ್ಯರೊಂದಿಗೆ ಬೆರೆಯುತ್ತಾನೆ, ಮೇಲುಸ್ತರದಿಂದ ಕೆಳಸ್ತರಕ್ಕೆ ಇಳಿಯುತ್ತಾನೆ. ಇದು ಕವಿಯ ಸಾಮಾಜಿಕ ಪ್ರಜ್ಞೆ ಮತ್ತು ಭಾಷಾ ಪ್ರಜ್ಞೆಗೂ ಸಾಕ್ಷಿಯಾಗಿದೆ. 'ರಥಯಾತ್ರೆ' ಕವನದಲ್ಲಿ ಕವಿಯ ಬಯಕೆಯೂ ಇದೇ ಆಗಿದೆ—

ಮರ್ತ್ಯದ ಮಣ್ಣಿನ ಧೂಳಿನಲಿ
ಹಗಲು ಇರುಳುಗಳ ಬೆಳಕಿನಲಿ
ನಡೆಯುತ್ತಿದೆ ಈ ಜೀವರಥ
ವಿಶಾಲವಾಗಿದೆ ನನ್ನ ಪಥ

ಜಿಎಸ್ಎಸ್ ಅವರಿಗೆ ಗತವೈಭವದ ಪುರಾಣ ಮತ್ತು ಚರಿತ್ರೆಯಲ್ಲಿ ಬದುಕುವುದಕ್ಕಿಂತ ವಾಸ್ತವದಲ್ಲಿ ಬದುಕುವುದು ಬಹುಮುಖ್ಯ. ಇಷ್ಟಾದರೂ ಅವರು 'ವಿಶ್ವರಹಸ್ಯವನ್ನು ಭೇದಿಸುವ', 'ಸುಪ್ತಸತ್ಯಗಳ ಶೋಧಿಸುವ', 'ಬಾಳಿಗೆ ಶ್ರೇಯವ ಸಾಧಿಸುವ', 'ಗ್ರಹಮಂಡಲಗಳ ದಾರಿಯ ತುಳಿವ', 'ಸದಾ ಪ್ರಶ್ನೆಗಳ ಬಾಗಿಲ ಬಡಿವ', 'ಹೊಸ ವಿಸ್ಮಯಗಳ ಕಿರಣವ ತೆರೆವ' ವಿಜ್ಞಾನಿಯನ್ನು ಸ್ತುತಿಸುತ್ತಾರೆ—

ಪಾಚಿಗಟ್ಟಿರುವ ಮೌಢ್ಯವ ತೊಡೆವ
ವಿಚಾರ ಶಕ್ತಿಯ ಹೊನಲನು ತರುವ
ಅರಿವಿನ ಪರಿಧಿಯ ವಿಸ್ತಾರಿಸುವ
ಶ್ರೀ ವಿಜ್ಞಾನಿಗೆ ನಮೋ ನಮೋ

ಮಾನವನ ಲೋಕ ಜೀವನವನ್ನು ಉತ್ತಮಪಡಿಸುವ ಧಾರ್ಮಿಕ ವೈಚಾರಿಕತೆ ಸ್ಥಗಿತಗೊಂಡು ಪರಂಪರೆಯಾಗಿ ಮತ ಮೌಢ್ಯವನ್ನು ಬಿತ್ತುತ್ತ ಶ್ರೀ ಸಾಮಾನ್ಯನನ್ನು ಅಲಕ್ಷ್ಯ ಮಾಡಿದೆ. ಅದಕ್ಕೆ ಪ್ರತಿಕ್ರಿಯೆ ಮತ್ತು ಪ್ರತಿಭಟನೆಯಾಗಿ ವಿಜ್ಞಾನವು ಜಗತ್ತಿನ ಬದುಕನ್ನೇ ಸಂಪೂರ್ಣ ಬದಲಾಯಿಸಿದೆ. ವಿಜ್ಞಾನದ ವೈಚಾರಿಕತೆ ಮಾನವನ ಸಮೃದ್ಧಿಗೆ ಸಹಕಾರಿಯಾಗಿದೆ. ಜಿಎಸ್‌ಎಸ್ ವಿಜ್ಞಾನವನ್ನು ಸ್ವಾಗತಿಸುತ್ತಾರೆ. ವಿಜ್ಞಾನದ ವೈಚಾರಿಕತೆಯೇ ಒಂದು ಅರ್ಥದಲ್ಲಿ ನಿಜವಾದ ವೈಚಾರಿಕತೆ.

## III

ಸಾಮಗಾನ, ಚೆಲುವು-ಒಲವು ಮತ್ತು ದೇವಶಿಲ್ಪ ಕವನ ಸಂಗ್ರಹಗಳಲ್ಲಿ ಕವಿಯ ಆದರ್ಶ ಬದುಕಿನ ಆಧ್ಯಾತ್ಮಿಕ ಹಸಿವಿನ ಕಾಳರಾತ್ರಿಯ ಯಾತ್ರೆಯನ್ನು ಗುರುತಿಸಬಹುದು. ಸದಾ ಕಾಲದೇಶಗಳನ್ನು ಮೀರುವ ತಾಕಲಾಟಗಳು ಮತ್ತು ಬೆಳಕಿಗಾಗಿ ಹಂಬಲ ಇಲ್ಲಿ ಕಾಣಿಸಿಕೊಂಡಿವೆ.

**ಬೆಳಕು ಒಳಬರಲೆಂದು ತೆರೆದ ಕಿಟಕಿಗಳಿಂದ**
**ಧೂಳನು ತೂರುವುದು ಯಾರ ಆನಂದ?**
**ಬೆಳಕನಿತ್ತವನೇ ಮತ್ತೆ ಧೂಳನೂ ತೂರುವುದೆ?**
**ಗುದಿಸಿಕೊಳ್ಳಲಿ ಎಂದೆ? ಇರಬೇಕು, ಅರ್ಥವಿದೆ.**

ಅನಂತರದ ಕವನ ಸಂಗ್ರಹಗಳಲ್ಲಿ ಕಾಲದೇಶ ಬದ್ಧವಾದ ಬದುಕಿನ ಯಾತನೆಗಳು ಮೊದಲಾಗುತ್ತವೆ. ಅವು ವೈಯಕ್ತಿಕದ್ದಾಗಿರಲಿ, ಕುಟುಂಬದ್ದಾಗಿರಲಿ ಅಥವಾ ಸಮಾಜ ಸಂಬಂಧದ್ದಾಗಿರಲಿ ಸಂತೋಷದ ಸಂದರ್ಭದಲ್ಲಿ ವಿಷಾದ ಸ್ಥಾಯಿಯಾಗಿದೆ. 'ಅರಳಿ ನಗುವ ಹೂ ಹೂಗಳ ಹಿಂದೆಯೆ, ಕುಡುಗೋಲಿನ ನೆರಳು'; 'ಹೃದಯದೊಳಗುಟ್ಟುಗಳ ಮದ್ದಿನುಗ್ರಾಣಕ್ಕೆ ಕಿಡಿಯಿಡುವ ಸನ್ನಾಹ'; ಅಲ್ಲದೆ 'ಹಳೆಯ ನೆನಪಿನ ಕಲ್ಲನೊಂದನೇ ಎತ್ತಿ ಎಸೆವ ಕವಣೆಯ ತೋಳು'— ಸದಾ ಕೆದಕಿ ಕುಕ್ಕುವ ಈ ಚಿಂತೆಗಳು, ಮರೆತಷ್ಟು ಮತ್ತೆ ಬಂದು ಕಾಡುತ್ತವೆ. ಮುಚ್ಚಿರುವ ರಣರಂಗದೊಡನೆ ಹೋರಾಟ ಸಾಕಾಗಿದೆ. ಇಷ್ಟು ದಿನ ಒಂದೇ ಮುಖ ತೋರಿಸುತ್ತ, ಹಾಡಿ ಹೊಗಳಿಸಿಕೊಂಡು, ತಮ್ಮ ಮತ್ತೊಂದು ಮುಖ ಕಂಡಾರೆಂಬ ಭಯದಲ್ಲಿ. 'ಮುಖವಾಡದೊಳಗೆ ನಿಜದ ಮುಖವನು ಕಂಡು ಕಣ್ಣೀರು ಸುರಿಸುತ್ತ', ಎಲ್ಲವನ್ನೂ ಬಿಚ್ಚಿಟ್ಟು ಹಗುರಾಗುವ ಬಯಕೆ. ಆದರೆ ಎಲ್ಲವನ್ನೂ ಬಿಚ್ಚಿಟ್ಟು ಹರಾಜಿಗಿಡುವುದು ಸಾಧ್ಯವಿಲ್ಲ ಎನ್ನಿಸುತ್ತದೆ ಕವಿಗೆ. ಇದರಿಂದ ಪಾರಾಗುವ ಸುರಂಗಮಾರ್ಗವೂ ಕಾಣುತ್ತಿಲ್ಲ.

**ಸುತ್ತ ಬೆಳೆದಿದೆ ಹುತ್ತ; ನಾನಿರುವೆ**
**ತಳಾತಳದಲ್ಲಿ ನಿದುಸುಯ್ಯುತ್ತ.**
**ಕತ್ತಲೋ ಕತ್ತಲು; ಎತ್ತರದಲ್ಲಿ**

ಎಲ್ಲೋ ಜಿನುಗುತಿದೆ ಒಂದಿಷ್ಟು
ಬೆಳಕು ಬಲದ ಬೆಳಕಿಂಡಿಯಿಂದ

ಸುತ್ತಲ ಕತ್ತಲ ಬಂದಿಯಾದ, ಇಬ್ಬಂದಿಯಾದ ಬದುಕಿಗೆ, ಮೇಲಿನ ಬೆಳಕಿಂಡಿಯಿಂದ ಜಿನುಗುವ ಒಂದಿಷ್ಟು ಬೆಳಕೇ ಆಶಾಕಿರಣ. 'ಯಾರು ಯಾರೋ ಸೇರಿ ಇರಿದ ಚೂರಿಯ ತುಣುಕು' ಕವಿಯ ಬದುಕು. ಹಲವು ಬಾಗಿಲ ಅಲೆದು ತಿರಿದು ತುಂಬಿದ ಪಾತ್ರೆ ಒಡೆದು, ಚೂರುಗಳ ರಾಶಿಯಾಗಿದೆ, ಅನಾಥಪ್ರಜ್ಞೆ ಕಾಡುತ್ತಿದೆ.

ದುಃಖ-ಅವಮಾನ ಸಂಕಟಗಳಲ್ಲಿ ನಾನು
ಒಬ್ಬಂಟಿಯಾಗುತ್ತೇನೆ. ಆದುವರೆಗು ಜತೆಗೆ
ನಿಂತವರೊಬ್ಬರೂ ಇರದ ದ್ವೀಪವಾಗುತ್ತೇನೆ.
ಹಬ್ಬರುವ ಮಬ್ಬಿನ ಮಧ್ಯೆ ಒಬ್ಬನೇ ಕೂತು
ಯೋಚಿಸುತ್ತೇನೆಃ ಯಾಕಿಷ್ಟು ದುಷ್ಟರಾಗು
ತ್ತಾರೆ ಜನ, ಕೊಂಬೆಗಳ ಕಡಿದು, ಹೂವುಗಳ
ಹೊಸಕಿ, ಹಕ್ಕಿಗಳ ಕೊರಳ ಹಿಸುಕುತ್ತಾರೆ
ನಿಷ್ಕಾರಣ? ಈ ಹೊತ್ತಿನಲಿ ಮತ್ತೆ ಕಾಡುವುದು
ಪ್ರಶ್ನೆ: ಈ ಇವರಿಗೂ ನನಗೂ ಏನು ಸಂಬಂಧ?

ತಮ್ಮ ಮತ್ತು ಮನುಷ್ಯ ಸಂಬಂಧವನ್ನು-ಅದರ ವಿಕೃತಿಯನ್ನು, ತಮ್ಮ ಮತ್ತು ಪ್ರಕೃತಿ ಸಂಬಂಧದಿಂದ ಸಮರ್ಥಿಸಿಕೊಳ್ಳುವ ಕವಿಗೆ, ಪ್ರಕೃತಿಯ ಸಹಜ ಜೀವನಕ್ಕೂ, ಮನುಷ್ಯನ ನಾಗರಿಕ ವಿಕೃತಿ ಜೀವನಕ್ಕೂ ಇರುವ ಸಂಬಂಧದ ಸಂಘರ್ಷದಲ್ಲಿ, ಪ್ರಕೃತಿಯ ಸಹಜ ಜೀವನ ಇಷ್ಟವಾಗುತ್ತದೆ. ಪ್ರಕೃತಿ ಮನುಷ್ಯನ ಜೀವನವನ್ನು ಪ್ರಶ್ನಿಸುವುದಿಲ್ಲ. ಅಲ್ಲದೆ ಅದು ವರ್ಷವರ್ಷವೂ ಹೊಚ್ಚ ಹೊಸದಾಗಿ ಪುನರುಜ್ಜೀವನಗೊಳ್ಳುತ್ತದೆ. ಆದರೆ ಮನುಷ್ಯನ ಸಂಬಂಧ ಭಿನ್ನವಾದುದು. ಅದು ಮತ್ತೊಬ್ಬ ಮನುಷ್ಯನ ವ್ಯವಹಾರವನ್ನು ಮತ್ತು ಸಂಬಂಧವನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತದೆ, ಪ್ರಶ್ನಿಸುತ್ತದೆ ಮತ್ತು ಉತ್ತರ ಬಯಸುತ್ತದೆ. ಕವಿಗೆ ಪ್ರಕೃತಿಯ ರುದ್ರಮುಖ ಪರಿಚಯವಾಗುವುದಿಲ್ಲ. ಸದಾ ಅದರ ರಮಣೀಯ ಮುಖ ಗೋಚರಿಸುತ್ತದೆ. ಪ್ರಕೃತಿಯ ಚೆಲುವು, ಮಾನವನ ವಿಕೃತಿಯ ನೋವು ಸ್ಥಾಯಿಯಾಗಿ ಕವಿಯನ್ನು ಕಾಡುತ್ತವೆ. ಜೊತೆಗೆ ಮರೆಯಲಾಗದ ಹಳೆಯ ನೆನಪುಗಳು ಮತ್ತು ಮುಚ್ಚಿಟ್ಟು ವ್ಯಥೆಪಡುವ ಒಳಗುಟ್ಟುಗಳ ಸಾಮ್ಯವಿಲ್ಲದೆ ಸಂಕಟವನ್ನು ಅನುಭವಸಿದ್ದು ಸಾಕಾಗಿ—

ಆವರಿವರು ಬಯಲಿಗೆಳೆದಾರೆಂದು ಹೊದ್ದು ಮಲಗಿದ್ದು
ಕಣಿವೆ ಕಗ್ಗಾಡಿನಲಿ ಗುಹೆಗುಹೆಯ ಕತ್ತಲಲಿ ತಲೆಮರೆಸಿಕೊಂಡದ್ದು
ಸಾಕೋ ಸಾಕು. ಆ ಎಲ್ಲ ವೇದನೆಗಳಿಗೆ ಈಗಿಲ್ಲಿ ಬಿಡುಗಡೆ
ಹೇಳಿಬಿಡು, ಇನ್ನೂ ಏನೇನಿದೆಯೊ ಹೇಳಿಬಿಡು ಸುಮ್ಮನೆ
ಹಗುರ ಮಾಡಿಕೊ ಎದೆಯ. ಹೊಸ ಹುಟ್ಟು ಇನ್ನು ಮೇಲೆ.

ಮುಚ್ಚಿಟ್ಟದ್ದನ್ನು ಬಿಚ್ಚಿಟ್ಟ ಮೇಲೆ ಸಮಸ್ಯೆ ಬಗೆಹರಿಯಲಿಲ್ಲ. ಮತ್ತಷ್ಟು ಬಿಗಡಾಯಿಸಿತು.

**ಸಿಕ್ಕಿಕೊಂಡಿದ್ದೇನೆ ನಾನೂ**
**ಕೊಳಕು ಮಂಡಲಗಳ ನಡುವೆ**
**ಕೊಂಕು ನಗೆ, ನರಿ ಮಾತು, ಕಪಿ ಮುಷ್ಟಿ**
**ವೃಕೋದರಗಳ ಮಧ್ಯೆ....**

ಯಾವಾಗ ಕಡ್ಡಿಗೀಚಿ ಬೆಂಕಿ ಹಚ್ಚುತ್ತಾರೊ ಎಂಬ ಭಯ, ಸಂದಿಗೊಂದಿಯ ನಡುವೆ-ಒಂಟಿಯಾಗಿ ತೊಳಲಾಟ. ಹೀಗೆ ಪಾಚಿಗಟ್ಟಿದ ಕುರುಡು ದಾರಿಯಲ್ಲಿ ಉದ್ದಕ್ಕೂ ಸೋಲಿನ ಹಾಡು. ನಡೆದೂ ನಡೆದೂ ಸುಣ್ಣವಾದ ಎದೆಗೆ ಸಿಡಿಗುಂಡೊಂದನ್ನು ತತ್ತರಿಸುವೆದೆಗೆ ತೂರಿಸಿ ಬಿಡುವಂತೆ ಭಗವಂತನಲ್ಲಿ ಪ್ರಾರ್ಥನೆ. ಸುತ್ತಮುತ್ತಲ ಮಾನವ ಸಂಬಂಧ ಕ್ರೂರವಾಯಿತು, ಕಹಿಯಾಯಿತು

**ನಾ ಬುದ್ಧನಲ್ಲ, ಸಿದ್ಧನೂ ಅಲ್ಲ ಕಾದಿ ಗೆಲಲು,**
**ನನ್ನ ಮೇಲೆ ಏಕೆ ನಿಮ್ಮ ದಾಳಿ?**

ಎಂದರೂ ಸುತ್ತಮುತ್ತ ಸಮಾಜ ಬಿಡಲಿಲ್ಲ. ಸುತ್ತಮುತ್ತಲ ಸಮಾಜ ಶಿಷ್ಟಸಮಾಜ ಮತ್ತು ವಿದ್ಯಾವಂತ ಸಮಾಜ ಎಂಬುದಂತೂ ಸ್ಪಷ್ಟ. ಅದು ತಮ್ಮ ಪಾಲಿಗೆ ಕೊಳಕು ಮಂಡಲ ಮತ್ತು ಚರಂಡಿಗಳ ಬಾಯಿ. ಈ ಸಮಾಜ ಕವಿಯ ಬದುಕಿನಲ್ಲಿ ಸಿಹಿಗಿಂತ ಕಹಿಯನ್ನೇ ಹೆಚ್ಚು ಮಾಡಿತು. ಬದುಕನ್ನೆಲ್ಲ ಬರಬಡಿದ ಎಲುಬಿನ ಗೂಡಿನ ಪಾಲಾಗಿಸಿತು. ಎತ್ತ ಹೋದರೂ ಈ ಕತ್ತಲ ಹೆಬ್ಬಾವು ಬಂಗಾರದ ಜಿಂಕೆಯ ಮೈಯನ್ನು ನುಂಗುತ್ತ ಸುತ್ತಿಕೊಳ್ಳುತ್ತದೆ. ಆದ್ದರಿಂದಲೇ ಕವಿ ಕುಹಕ ಕುತಂತ್ರ ಅರಿಯದ, ಮುಗ್ಧರಾದ, ಶ್ರಮಜೀವಿಗಳಾದ, ಅಲಕ್ಷ್ಯಕ್ಕೆ ಒಳಗಾದ, ತಮ್ಮ ಮೂಕ ವೇದನೆಗಳನ್ನು ತೋಡಿಕೊಳ್ಳದ ಶ್ರೀಸಾಮಾನ್ಯ ವರ್ಗದಲ್ಲಿ ತಮ್ಮನ್ನು ಕಂಡುಕೊಳ್ಳುತ್ತಾರೆ.

**ಬಹುದೊಡ್ಡ ಮಾತನಾಡುತ್ತ**
**ದಿನದಿನದ ಸರಳ ಸಾಧಾರಣ ಬದುಕಿ**
**ಗವಮಾನ ಮಾಡುವವರನ್ನು ಕಂಡರೆ**
**ನನಗೆ ಆಗುವುದಿಲ್ಲ**

ಒಳಗುಟ್ಟು ಸಿಡಿಮದ್ದಾಗಲು ಕಾರಣವೇನು? ಅದಕ್ಕೆ ಕಡ್ಡಿ ಗೀಚಿ ಬೆಂಕಿ ಇಡಲು ಕಾರಣವೇನು? ಮುಚ್ಚಿಟ್ಟ ಗುಟ್ಟನ್ನು ಬಿಚ್ಚಿಟ್ಟಾಗಲೂ ಕಾಡುವುದೇಕೆ ಎಂಬುದು ಕಾವ್ಯದಲ್ಲಿ ಸ್ಪಷ್ಟವಾಗುವುದಿಲ್ಲ. ಆದರೂ ಕವಿಯ ಒಳತೋಟಿ, ಒದ್ದಾಟ ತೀವ್ರವಾಗಿ ವ್ಯಕ್ತವಾಗಿದೆ. ಇಂಥ ಒಂದು ವೈಚಾರಿಕತೆಗೆ ವೈಯಕ್ತಿಕ ನೋವು ಒಂದು ಮುಖ್ಯ ಅಂಶವಾಗುತ್ತದೆ. ಪ್ರಕೃತಿ ಸಹಜ ಸಂಬಂಧವನ್ನೇ ಮಾನವ ಸಂಬಂಧದಲ್ಲಿಯೂ ನಿರೀಕ್ಷಿಸುವುದೇ ವೈಯಕ್ತಿಕವಾದ

ಇಂಥ ತೀವ್ರ ಒಳತೋಟಿಗೆ ಕಾರಣವೆ? ತಾಕಲಾಟ ವ್ಯಕ್ತಿಯದ್ದೋ ಅಥವಾ ಸಮೂಹದ್ದೋ— ಸಾಹಿತ್ಯದಲ್ಲಿ ವ್ಯಕ್ತವಾದಾಗ ಅದು ವೈಚಾರಿಕತೆಯ ಒಂದು ಅಂಶವಾಗುತ್ತವೆ.

ಹಿಂದು ಮುಂದಿಲ್ಲದೆ ತಿರುಗುತ್ತಿದ್ದಾಗ ಯಾವ ಭಯವೂ ಇರುತ್ತಿರಲಿಲ್ಲ. ಆದರೆ

**ಈಗ ಭಯ ನನಗೆ ನಾನು ನನ್ನವರ ಮಧ್ಯೆ**
**ಸಂಸಾರಿಯಾಗಿ ಬದುಕಿರುವಾಗ**

**..............................................**

**ಈಗಲೋ ಆಕಾರಕ್ಕೆ ವಿಕಾರದ ಭಯ**
**ವಿಗ್ರಹಕ್ಕೆ ಭಗ್ನತೆಯ ಭಯ, ಚರಿತ್ರೆಯೊಳಗೆ**

ನಂಬಿದವರೇ ಅಂತರ್ಯದಲ್ಲಿ ವಿಷಕಾರುತ್ತಾರೆ. ಹೂವೆಂದು ಅಪ್ಪಿದರೆ ಹೆಡೆಯೆತ್ತಿ ಬುಸುಗುಡುವ ಹಾವು; ಅಲ್ಲದೆ ಬೆನ್ನತ್ತಿ ಕಾಡುವ ಕತ್ತಲು, ಹೇಗೋ ಯಥಾಪ್ರಕಾರ ಸಂಸಾರ ತೂಗಿಸಿಕೊಂಡು ಹೋಗುತ್ತಿರಬೇಕಾದರೆ 'ಝುಗ್ಗನೆ ಚಿಗುರಿ ನುಗ್ಗಿತ್ತಕಾಲ ವಸಂತಸೇನೆ'

**ನಾನು ಹೇಗೋ ಇದ್ದೆ**
**ಈ ಇದರೊಳಕ್ಕೆ ನೀನೇಕೆ ನುಗ್ಗಿದೆ?**
**ನನ್ನೊಳಗಿನರಕೆಗಳಿಗೆಲ್ಲ ಸರ್ಚ್‌ಲೈಟ್ ಬಿಟ್ಟು ತೋರಿಸಿದೆ**
**ಮಲಗಿದಾಸೆಯ ಕಿವಿಗೆ ಪುಂಗಿಯನ್ನೂದಿ ಹೆಡೆ ಬಿಡಿಸಿದೆ.**

**..............................................**

**ದೇವರ ಕೋಣೆಗೂ ನೀರು ನುಗ್ಗಿಸಿ ನಾನಿದುವರೆಗೂ ಪೂಜಿಸಿದ**
**ಪಟವನ್ನೇ ಕೊಚ್ಚಿದೆ**
**ಈ ಮುಂಗಾರು ಸಂಜೆಯ ಕೆಳಗೆ ಗಾಯಗೊಂಡುರುಳಿ**
**ದಿರುಳಿನ ಮೇಲೆ ಸದ್ದಿರದೆ ಬೆಳದಿಂಗಳನ್ನೇ ಹೊಚ್ಚಿದೆ.**

ಇಲ್ಲಿಂದ ಮುಂದಕ್ಕೆ ಕೌಟುಂಬಿಕ ಬದುಕಿನಲ್ಲಿ ತಾಕಲಾಟಗಳು ಮತ್ತಷ್ಟು ತೀವ್ರಗೊಂಡಿತು. ಸಂಗಮದಲ್ಲಿ ವಿರಹ, ಮನೆಯ ಮೂರ್ತಿ ಉಲ್ಕೆಯಾಯಿತು, ಪ್ರಳಯ ಸ್ವರೂಪಿಯಾಯಿತು. ಮತ್ತೊಂದು ಚೈತನ್ಯವಾಯಿತು ಕವಿಯ ಬಾಳಿಗೆ ನುಗ್ಗಿ. ಒಂದರಿಂದ ದೂರಸರಿದು, ಮತ್ತೊಂದಕ್ಕೆ ಹತ್ತಿರವಾಗುವ ಒಳತೋಟಿಯಲ್ಲಿ ಒಂದರ ನೆನಪು 'ಸರ್ವಸ್ವವನು ಸುಲಿದು, ನಿರ್ನಾಮ ಮಾಡಿದರೂ' ತೃಪ್ತಿಯಿಲ್ಲ. ಮತ್ತೊಂದರ ನೆನಪು 'ಒಂದು ಥರಾ ಸಿಹಿಯಾದ ಸಾವು, ಗಾಯವಿಲ್ಲದ ನೋವು' ಎರಡು ನೀನುಗಳ ನಡುವೆ ಬದುಕು ಗಡಿಯಾರದ ಪೆಂಡುಲಮ್ಮಾಯಿತು, ಕುತಂತ್ರಿಗಳ ಕಾಟದ ಭಯ ಬೇರೆ.

**ಎರಡು ಶಿಖರದ ನಡುವೆ ಹಗ್ಗದ ದಾರಿ**
**ಕೆಳಗೆ ಕಪ್ಪು ಕಾಡಿನ ಕಣಿವೆ: ಒಂಟಿ ಹಗ್ಗದ ಮೇಲೆ**
**ದೊಂಬರಾಟದ ನಡಿಗೆ. ಕಾಲು ಜಾರುವ ತನಕ**
**ಚಿಂತೆಯಿಲ್ಲ, ಆಮೇಲೆ? ದೇವರೆ ಬಲ್ಲ!**

ಬದುಕಿನ ಸಂಜೆದಾರಿಯಲ್ಲಿ 'ಬದುಕೆಲ್ಲ ಬರ ಬಡಿದ ಎಲುಬುಗೂಡಿನ ಪಾಳು', 'ಬಂಗಾರದಂಥ ಸಂಜೆಯ ಕೆಳಗೆ ಈ ಬದುಕೆಲ್ಲ ಬರಿ ಬೂದಿ', 'ಬೆಳ್ಳಗೆ ಹೊಳೆವ ಎಲುಬಿನ ರಾಶಿಯ ಮೇಲೆ ಕಂಬನಿಯ ದೀಪ', 'ದಾರಿಯ ತುಂಬ ಕುಲುಮೆ ಬೆಂಕಿ', 'ತುಟಿಯ ಬಾಗಿಲ ಹಿಂದೆ ಅಗಳಿ ಜಡಿದು ಕಾದಿರುವ ನೋವು'

**ತಮಸ್ಸಿನಿಂದ ಜ್ಯೋತಿಗೆ**
**ನಡೆಸೆನ್ನನು ಎಂದರೂ ಕತ್ತಲಿಂದ ಕತ್ತಲಿಗೇ**
**ನಡೆದು ಬಂದೆ ಇಲ್ಲಿಗೆ**
**ಹಣತೆ ಹಿಡಿದು ಕಾದು ಕುಳಿತೆ ದೀವಳಿಯ ದಾರಿಗೆ,**
**ಬೆಳಕು ಮುಟ್ಟ ಹೋದರೂನೂ ಕೊನೆಗುಳಿಯಿತು ಕತ್ತಲೆ**
**ಒಡಕು ಹಣತೆಗೆಣ್ಣೆಬತ್ತಿ ತುಂಬಿ ನಂಬಿ ಕಾಯಲೆ?**

ಈ ಕತ್ತಲು-ಬೆಳಕಿನ ತಾತ್ತ್ವಿಕ ಸಂಘರ್ಷ ಅವರ ಕುಟುಂಬ ಜೀವನವನ್ನೂ ಬಿಡಲಿಲ್ಲ— 'ಕತ್ತಲಿಂದ ಕತ್ತಲಿಗೇ ತಡಕಾಡಿಕೊಂಡು ಬಂದಿವೆ ಹೆಜ್ಜೆ ಶತಮಾನದಿಂದಲೂ'. ಕತ್ತಲು ಎಂದರೆ ಯಾತನೆ. ಯುಗ ಯುಗದ, ಜನಾಂಗ ಜನಾಂಗದ, ವ್ಯಕ್ತಿ-ವ್ಯಕ್ತಿಯ ಯಾತನೆಯನ್ನು ಅನಾವರಣಗೊಳಿಸುವುದೇ ವೈಚಾರಿಕತೆ. ಅದನ್ನೇ ಅವರು ಪ್ರೇಮಜಿಜ್ಞಾಸೆ, ಪ್ರೇಮ ಯಜ್ಞ ಎನ್ನುವುದು. ಪ್ರಕೃತಿತತ್ತ್ವ, ಕಾವ್ಯತತ್ತ್ವ ಮತ್ತು ಜೀವತತ್ತ್ವಕ್ಕೆ ಪ್ರೀತಿಯೇ ಸಾಮಾನ್ಯ ಸೂತ್ರ—

**ಬೇಸರವೇ ಇಲ್ಲ ಈ ನಿಸರ್ಗಕ್ಕೆ**
**ಸದಾ ಹೊಚ್ಚಹೊಸದಾಗಿ ಹೊಮ್ಮುವುದಕ್ಕೆ**

ಪ್ರತಿಭೆ ಈ ಮೂರನ್ನೂ ಸಾಮರಸ್ಯಗೊಳಿಸಿ ಹೊಸದನ್ನು ಕಾಣಿಸುತ್ತದೆ. ಹೊಸದನ್ನು ಕಟ್ಟುತ್ತದೆ. ಅದು ಕೆಡವಿ ಕಟ್ಟುತ್ತದೆ. ಕಟ್ಟಿ ಕೆಡುವುವ ನಿರಂತರ ಕ್ರಿಯೆ. ಇದು ಪರಂಪರೆಗೆ ಗೌರವ ಸಲ್ಲಿಸಿ, ಪರಂಪರೆಯನ್ನು ನಿರಾಕರಿಸುವ ವಿಧಾನ. ಜಿಎಸ್‌ಎಸ್ ಅದನ್ನೇ ವೈಚಾರಿಕತೆ ಎನ್ನುವುದು.

## IV

ಜಿಎಸ್‌ಎಸ್ ಅವರಿಗೆ ವೈಚಾರಿಕ ಪ್ರಜ್ಞೆ ಎಂದರೆ "ಕಾಲದಿಂದ ಕಾಲಕ್ಕೆ ಜನಜೀವನದಲ್ಲಾದ ಧಾರ್ಮಿಕ, ರಾಜಕೀಯ, ಸಾಮಾಜಿಕ ಬದಲಾವಣೆಗಳಿಂದ ಆಯಾ ಕಾಲದಲ್ಲಿ ವೈಚಾರಿಕ ಕ್ರಾಂತಿಯುಂಟಾಗುತ್ತದೆ. ಅದರ ಪರಿಣಾಮವಾಗಿ ಹೊಸ ಮೌಲ್ಯಗಳು, ಹೊಸ ಜೀವನ ದೃಷ್ಟಿಗಳೂ ಕಾಣಿಸಿಕೊಳ್ಳುತ್ತವೆ.... ಅಭಿವ್ಯಕ್ತಿ ಕ್ರಮವೂ ಕಾಲದಿಂದ ಕಾಲಕ್ಕೆ ಬೇರೆಯಾಗುತ್ತದೆ. ಹೀಗಾಗಿ ವಸ್ತುವಿನಲ್ಲಿ, ರೀತಿಯಲ್ಲಿ, ದೃಷ್ಟಿಯಲ್ಲಿ ಪ್ರಮುಖ ಬದಲಾವಣೆಗಳು ಅಂದಂದಿನ ಕವಿಗಳಲ್ಲಿ ಕಂಡುಬಂದು ಸಾಹಿತ್ಯ ಪ್ರಗತಿಯನ್ನೂ ಅಂದಂದಿನ ಸಾಹಿತಿಗಳಿಗೆ ಇರುವ ಸಮಕಾಲೀನ ಪ್ರಜ್ಞೆಯನ್ನೂ ಪ್ರಕಟಿಸುತ್ತದೆ." (ಸಮಗ್ರ ಗದ್ಯ 2, ಪುಟ-26).

ಜಿಎಸ್ಎಸ್ ಅವರಿಗೆ ಭಾರತೀಯ ಹಿನ್ನೆಲೆಯ ವೈಚಾರಿಕ ತಾತ್ತ್ವಿಕ ಚಿಂತನೆಗಳಾಗಲಿ ಅಥವಾ ಪಾಶ್ಚಾತ್ಯ ಹಿನ್ನೆಲೆಯ ವೈಚಾರಿಕ ತಾತ್ತ್ವಿಕ ಚಿಂತನೆಗಳಾಗಲಿ ಮುಖ್ಯವಾಗುವುದಿಲ್ಲ. ಅವರು ವೈಚಾರಿಕತೆಯನ್ನು ಸಾಹಿತ್ಯ ಪರಿಕಲ್ಪನೆಯ ಪರಿಧಿಯಲ್ಲಿಯೇ ವ್ಯಾಖ್ಯಾನಿಸುತ್ತಾರೆ. ಅವರು ಬಳಸಿರುವ ವೈಚಾರಿಕ ಪ್ರಜ್ಞೆ, ವೈಚಾರಿಕ ಪರಂಪರೆ, ವೈಚಾರಿಕ ಸಂಪ್ರದಾಯ, ವೈಚಾರಿಕ ಸ್ಥಗಿತತೆ, ವೈಚಾರಿಕ ಕ್ರಾಂತಿ, ವೈಚಾರಿಕ ಪೂರ್ವಸಿದ್ಧ ವಿಚಾರಗಳು, ವೈಚಾರಿಕ ಹಿನ್ನೆಲೆಯ ವೇದ ಶಾಸ್ತ್ರ ಆಗಮಗಳು, ವೈಚಾರಿಕ ಚಟುವಟಿಕೆಗಳು ಮುಂತಾದ ಪದಪ್ರಯೋಗಗಳೇ ಸಾಕ್ಷಿ. ಅಂದಂದಿನ ಕಾಲದಲ್ಲಿ ಕಂಡು ಬರುವ ಬದುಕಿನ ವೈಚಾರಿಕ ನಿಲುವುಗಳಿಗೆ ಅನುಸಾರವಾಗಿ ಸಾಹಿತ್ಯದಲ್ಲಿ ಎಲ್ಲಾ ಬದಲಾವಣೆಗಳೂ ಕಾಣುತ್ತವೆ. ಜನದ ಬದುಕಿನ ರೀತಿ-ನೀತಿಗಳು, ದೃಷ್ಟಿಧೋರಣೆಗಳು, ಕಟ್ಟಿಕೊಂಡ ಕನಸುಗಳು, ಇಟ್ಟುಕೊಂಡ ಮೌಲ್ಯಗಳು, ಆದರ್ಶಗಳು, ದೇಶದಿಂದ ದೇಶಕ್ಕೆ, ಕಾಲದಿಂದ ಕಾಲಕ್ಕೆ, ಕವಿಯಿಂದ ಕವಿಗೆ ಬದಲಾಗುತ್ತವೆ. ಇಂಥ ಬದಲಾವಣೆಯೇ ವೈಚಾರಿಕತೆ. ವೈಚಾರಿಕತೆಯಿಂದ ಒಂದು ಕಾಲಧರ್ಮ ಮತ್ತೊಂದು ಕಾಲ ಧರ್ಮದಿಂದ ಭಿನ್ನವಾಗಿರುತ್ತದೆ. ಆದ್ದರಿಂದ ಬೇರೆ ಬೇರೆ ಕಾಲದ ಸಾಹಿತ್ಯ ಬೇರೆ ಬೇರೆಯಾಗಿರುತ್ತದೆ.

ಜಿಎಸ್ಎಸ್ ವಿಮರ್ಶೆಯ ಪರಿಕಲ್ಪನೆಗಳಿಂದಲೇ ಪ್ರಾಚೀನ ಮತ್ತು ಆಧುನಿಕ ಸಾಹಿತ್ಯಕ್ಕೆ ವೈಚಾರಿಕತೆಯ ವ್ಯಾಖ್ಯಾನ ಮಾಡುತ್ತಾರೆ. ಪರಂಪರೆ, ಸಂಪ್ರದಾಯ, ಪ್ರಗತಿ, ಪುನರುಜ್ಜೀವನ, ಚಳುವಳಿ, ಸಮಕಾಲೀನ ಪ್ರಜ್ಞೆ, ಯುಗಧರ್ಮ, ಕಾಲಧರ್ಮ, ಮನೋಧರ್ಮ ಮುಂತಾದ ಪದಗಳನ್ನೇ ಪರಿಶೀಲಿಸಿದರೆ ಸ್ಪಷ್ಟವಾಗುತ್ತದೆ. ವೈಚಾರಿಕತೆ ಈ ಎಲ್ಲಾ ಪರಿಕಲ್ಪನೆಗಳ ಅರ್ಥವನ್ನೂ ಒಳಗೊಂಡು, ವಿಮರ್ಶೆಯೇ ವೈಚಾರಿಕತೆ ಎಂಬ ಅರ್ಥ ಧ್ವನಿಸುತ್ತದೆ. ಮುಖ್ಯವಾಗಿ ಜಿಎಸ್ಎಸ್ ವೈಚಾರಿಕತೆಯನ್ನು ಸಾಮಾಜಿಕ ಪ್ರಜ್ಞೆ ಎನ್ನುತ್ತಾರೆ. "ಪ್ರಜ್ಞೆ ಎಂದರೆ ಯಾವುದೇ ವಸ್ತು-ಸತ್ಯವನ್ನು ತನ್ನ ಪ್ರತಿಭಾನದಿಂದ ಗ್ರಹಿಸಿ ಪರಿಭಾವಿಸುವ ಒಂದು ವಿಶೇಷ ಸಂವೇದನೆ ಎಂದು ಅರ್ಥ. ಕವಿಯಾದವನು ಈ ಪ್ರಜ್ಞೆಯಿಂದ ತನ್ನ ಸುತ್ತಣ ಸಮಾಜದ ಆಶೋತ್ತರಗಳನ್ನು ತುಡಿತ ಮಿಡಿತಗಳನ್ನು, ಮೌಲ್ಯಗಳನ್ನು ಒಳಹೊಕ್ಕು ಕಂಡು ತನ್ನ ಕೃತಿಯಲ್ಲಿ ಕಲಾತ್ಮಕವಾಗಿ ಅಭಿವ್ಯಕ್ತಪಡಿಸುತ್ತಾನೆ; ಆದರೂ ಅಂದಂದಿನ ಸಾಮಾಜಿಕ ಪರಿಸ್ಥಿತಿಯನ್ನು ಅಧ್ಯಯನ ಮಾಡುವವರಿಗೆ, ಸಾಹಿತ್ಯವು ವಿಶ್ವಸನೀಯವಾದ ಸಂಗತಿಗಳನ್ನು ಸೂಚಿಸುವ ಹಲವು ಆಕರಗಳಲ್ಲಿ ಒಂದು ಎಂಬುದನ್ನು ಮರೆಯಬಾರದು" *(ಸಮಗ್ರ ಗದ್ಯ ೨, ಪುಟ 32)*. ಸಾಮಾಜಿಕ ಪ್ರಜ್ಞೆ, ಎಂದರೆ ಮಾನವ ಕೇಂದ್ರಿತ ಕಾಳಜಿಗಳು. ಅದರಲ್ಲಿ ಮನುಷ್ಯ-ಮನುಷ್ಯ ಸಂಬಂಧವಿದೆ. ಸಾಮಾಜಿಕ ಪ್ರಜ್ಞೆಯಿಂದ ಪರಿಸರವನ್ನು ಬದಲಿಸಬಹುದು. ಪರಂಪರೆಯನ್ನು ಪ್ರಶ್ನಿಸಬಹುದು ಮತ್ತು ಅದು ವಾಸ್ತವವನ್ನು ಬದಲಿಸುವ ಪ್ರತಿಭಟನೆಯ ಸ್ವರೂಪದ್ದು. ಕನ್ನಡ ಸಾಹಿತ್ಯ ಚರಿತ್ರೆಯೇ ಇಂಥ ಸಾಮಾಜಿಕ ಎಚ್ಚರ ಮತ್ತು ಅಭಿವ್ಯಕ್ತಿಯ ಸಾಮರ್ಥ್ಯ ಹೇಗೆ ಮೇಲ್ಪದರದಿಂದ ಕ್ರಮೇಣ ಕೆಳಗಿನ ಪದರಗಳ ಮೂಲಕ ಇಳಿಯುತ್ತಾ, ವ್ಯಕ್ತವಾಗುತ್ತಾ ಬಂದಿತೆಂಬುದರ

ಚರಿತ್ರೆಯೇ ಆಗಿದೆ. *(ಸಮಗ್ರ ಗದ್ಯ ೨, ಪುಟ 32-34)* ಧರ್ಮಪ್ರಜ್ಞೆಯೂ ಸಾಮಾಜಿಕರಣಕ್ಕೆ ಒಳಗಾಗಿರುವುದನ್ನು ಕಾಣಬಹುದು. ಸಾಮಾಜಿಕ ನ್ಯಾಯ ಒಳಗೊಂಡಿರುವ ಸಾಮಾಜಿಕ ಪ್ರಜ್ಞೆಗೆ ಒಂದು ಇತಿಹಾಸವಿದೆ. ಕನ್ನಡ ಸಾಹಿತ್ಯ ಚರಿತ್ರೆಯೇ ಸಾಮಾಜಿಕ ಪ್ರಜ್ಞೆ ಜಾಗೃತವಾಗುತ್ತ ಬಂದ ಚರಿತ್ರೆಯಾಗಿದೆ. ಆಧುನಿಕ ಸಾಹಿತ್ಯದಲ್ಲಿ ಕಂಡು ಬರುವಷ್ಟು ಸಾಮಾಜಿಕ ಪ್ರಜ್ಞೆ ಪ್ರಾಚೀನ ಸಾಹಿತ್ಯದಲ್ಲಿಲ್ಲ. ಸಾಹಿತ್ಯದಲ್ಲಿ ಸಾಮಾಜಿಕ ಮನುಷ್ಯ ಕಲ್ಪನೆ ಆಧುನಿಕ ಕಾಲದ್ದು. ಪ್ರಭುನಿಷ್ಠೆ ಮತ್ತು ಧರ್ಮನಿಷ್ಠೆಯನ್ನು ಮೀರಿ ಹುಟ್ಟುವ ಸಾಮಾಜಿಕ ಪ್ರಜ್ಞೆ ಸಾಹಿತ್ಯ ಚರಿತ್ರೆಯಲ್ಲಿ ಒಂದು ಮಹತ್ತರ ಘಟ್ಟ ಎನ್ನುತ್ತಾರೆ ಜಿಎಸ್‌ಎಸ್.

## V

ಈ ಹಿನ್ನೆಲೆಯಲ್ಲಿ ಅವರ ಗದ್ಯವನ್ನು ಪರಿಶೀಲಿಸಬಹುದು. ಜಿಎಸ್‌ಎಸ್ ಪಂಪನನ್ನು ಬಹಳ ಮೆಚ್ಚುತ್ತಾರೆ. ವಿಕ್ರಮಾರ್ಜುನ ಕೃತಿಯನ್ನು ಮೀರಿಸುವ ಕೃತಿ ಯಾವ ಪ್ರಾದೇಶಿಕ ಭಾಷೆಯಲ್ಲಿಯೂ ಬಂದಿಲ್ಲ, ಮೂಲದ ವಸ್ತುನಿಷ್ಠಕೃತಿಯಲ್ಲಿ ವ್ಯಕ್ತಿನಿಷ್ಠ ಅಂಶಗಳನ್ನು ಬೆರೆಸಿದ್ದಾನೆ ಎನ್ನುತ್ತಾ "ಪಂಪನ ಗಮನ ಕೇವಲ ಉನ್ನತಶ್ರೇಣಿಯ ವ್ಯಕ್ತಿಗಳ ಚಿತ್ರಣದ ಕಡೆಗಷ್ಟೇ ಕೇಂದ್ರೀಕೃತವಾಗಿಲ್ಲ. ಅಂದಿನ ಸರಳ ಸಾಮಾನ್ಯ ಜನರ-ಆಗು-ಹೋಗುಗಳನ್ನು ಆತ ಮರೆತಿಲ್ಲ. ಅವನು ಕೊಡುವ ಶಿಬಿರ ಜೀವನದ ಚಿತ್ರಣಗಳು. ರಣರಂಗಕ್ಕೆ ಹಿಂದಿನ ಇರುಳು ನಲ್ಲ-ನಲ್ಲೆಯರು ಮಾತನಾಡಿಕೊಳ್ಳುವ, ವೀರರಾದವರು ಯುದ್ಧವನ್ನು ಕುರಿತು ಮಾತನಾಡಿಕೊಳ್ಳುವ, ಬಿಡಿ ಬಿಡಿ ಚಿತ್ರಗಳಲ್ಲಿ ಎಂಥ ಮಾನವೀಯ ಸಂಬಂಧಗಳ ಸಂಗತಿ ಬಂದಿದೆಯೆನ್ನುವುದನ್ನು ಗುರುತಿಸಬಹುದು." ಹಾಗೆಯೇ ಪಂಪ ಮೂಲ ಭಾರತದ ಭಗವದ್ಗೀತೆಯ ಪ್ರಸಂಗವನ್ನು, ಸ್ವಲ್ಪವೂ ಕೆಡದಂತೆ, ಒಂದೇ ಒಂದು ಪದ್ಯದಲ್ಲಿ ಸಾರವನ್ನು ಸಂಗ್ರಹಿಸಿ ತ್ರಿವಿಕ್ರಮ ಪ್ರತಿಭೆಯನ್ನು ಮೆರೆದಿದ್ದಾನೆ ಎಂಬುದನ್ನು ಗುರುತಿಸುತ್ತಾರೆ. ಆದಿಪುರಾಣದಲ್ಲಿ ಬರುವ ಪುಷ್ಪೋದ್ಯಾನದ ಸಂದರ್ಭವನ್ನು ಪ್ರಸ್ತಾಪಿಸುತ್ತಾರೆ. ಭರತನ ಅಂತಃಪುರದ ಲಲನಾಮಣಿಯರು ಹೂವುಗಳನ್ನು ಕಿತ್ತು, ಮುಡಿದು, ನೋಡಿ, ಹಾಡಿ, ಸುಖಿಸಿ ಸೌಂದರ್ಯವನ್ನು ಆಸ್ವಾದಿಸುತ್ತಾರೆ. ಈ ಪ್ರಸಂಗವನ್ನು ಹರಿಹರನ ಪುಷ್ಪರಗಳೆಗೆ ಹೋಲಿಸುತ್ತಾರೆ. ಹರಿಹರನ ತೋಟದ ಹೂವುಗಳೆಲ್ಲಾ ಶಿವನಿಗೆ ಮೀಸಲು. ಪಂಪನಲ್ಲಿ ಹೂವುಗಳ ಚೆಲುವನ್ನು ಸವಿಯುವುದರಲ್ಲಿ ಯಾರ ಅಡ್ಡಿಯೂ ಇಲ್ಲ. ಹರಿಹರನಿಗಿಂತ ಪಂಪನ ಸೌಂದರ್ಯ ಪ್ರಜ್ಞೆ, ಅವರಿಗೆ ಮೆಚ್ಚಿಗೆಯಾಗುತ್ತದೆ. ಪಂಪನ ಇಂದ್ರಿಯ ಸೌಂದರ್ಯಾನುಭವದಲ್ಲಿ ಅವನ ಕಾವ್ಯಧರ್ಮ ಪ್ರಕಟವಾಗಿದೆ.

ವಿಕ್ರಮಾರ್ಜುನ ವಿಜಯದಲ್ಲಿ ವೀರರಾಗಲಿ, ಅವರ ಹೆಂಡತಿಯರಾಗಲಿ ಸಂಧಿಸಿ ಮಾತನಾಡುವುದು, ತಮಗೆ ಒದಗಬಹುದಾದ ನಷ್ಟ ಅಥವಾ ದುರಂತವನ್ನಲ್ಲ, ದೇವಲೋಕದಲ್ಲಿ ಇಬ್ಬರೂ ಪರಸ್ಪರ ಭೆಟ್ಟಿಯಾಗುವ ವಿಷಯವನ್ನು. ಪಂಪನಲ್ಲಿ ವೀರಯುಗದ ಮೌಲ್ಯ ಪ್ರಜ್ಞೆ, ವ್ಯಕ್ತವಾಗುತ್ತದೆ. ಆದರೆ ಇಂಥದೇ ಪ್ರಸಂಗದಲ್ಲಿ ಹೋಮರ್ ಚಿತ್ರಣದಲ್ಲಿ

ವೀರನ ಪತ್ನಿ ತಮಗೆ ಒದಗಬಹುದಾದ ದುರಂತವನ್ನು ನೆನೆಯುತ್ತಾಳೆ. ಅನಾಥವಾಗುವ ಮಗು ಮತ್ತು ವಿಧವೆಯಾಗುವ ತನ್ನ ಸ್ಥಿತಿಗತಿ ಹೇಳಿ ಯುದ್ಧಕ್ಕೆ ಹೋಗದಂತೆ ಗಂಡನನ್ನು ಕೇಳಿಕೊಳ್ಳುತ್ತಾಳೆ. ಈ ಪ್ರಸಂಗಗಳಲ್ಲಿ ಪಂಪನಲ್ಲಿ ವೀರಯುಗದ ಮೌಲ್ಯ ಪ್ರಜ್ಞೆ ಇದೆ, ಮಾನವೀಯತೆ ಇಲ್ಲ. ಹೋಮರ್‌ನಲ್ಲಿ 'ವೀರ'ವನ್ನು ವೈಭವಿಸದೆ, ವಾಸ್ತವತೆಯ ಅರಿವಿದ್ದು ಮಾನವೀಯತೆ ಇದೆ. ಆದ್ದರಿಂದ ಪಂಪನಿಗಿಂತ ಹೋಮರ್ ದೊಡ್ಡ ಕವಿ ಎನ್ನುತ್ತಾರೆ ಜಿಎಸ್ಎಸ್. ಮೌಲ್ಯಪ್ರಜ್ಞೆಯ ಜೊತೆಗೆ ಮಾನವೀಯತೆ ಮುಖ್ಯ. "ಇದರಿಂದ ನಿಷ್ಪನ್ನವಾಗುವ ಇನ್ನೊಂದು ಸಂಗತಿಯೇನೆಂದರೆ, ಬಹುಶಃ ನಮ್ಮ ಸಂಸ್ಕೃತಿಯ ಇತಿಹಾಸವೆಲ್ಲವೂ, ಮಾನವನ ನೋವುಗಳನ್ನು, ತಾಕಲಾಟಗಳನ್ನೂ ಗಣನೆಗೆ ತೆಗೆದುಕೊಳ್ಳದೆ, ತತ್ಪರಿಣಾಮವಾದ ಸಾಧನೆಗಳನ್ನೂ achievements ಮತ್ತು ಮೌಲ್ಯಗಳನ್ನೂ ಮಾತ್ರವೇ ವ್ಯಾಖ್ಯಾನಿಸುವ ಸ್ವರೂಪದ್ದಾಗಿರುವುದರಿಂದ, ಅದು ಕೇವಲ ಸಂಸ್ಕೃತಿಯ ವೈಭವೀಕರಣವಾಗಿದೆಯೇನೋ ಎಂದು ಅನುಮಾನ ನನಗೆ. ಚರಿತ್ರೆಯ ಹಿನ್ನೆಲೆಗಿರುವ ಶೋಷಣೆ, ನೋವು, ಸಂಕಟಗಳು ಮತ್ತು ಮೌಲ್ಯದ ಹೆಸರಿನಲ್ಲಿ ಜನಸಾಮಾನ್ಯರು ಸದ್ದಿಲ್ಲದೆ ಅನುಭವಿಸಿದ ಯಾತನೆಗಳು ಯಾವುದೇ ಸಾಂಸ್ಕೃತಿಕ ಸಾಧನೆಯನ್ನು ಅಧ್ಯಯನ ಮಾಡುವವರ ಪಾಲಿಗೆ ನಿರ್ಲಕ್ಷ್ಯದ ಸಂಗತಿಗಳಾಗಿ ಉಳಿದಿರುವ ತನಕ, ನಮ್ಮ ಸಾಂಸ್ಕೃತಿಕ ಚರಿತ್ರೆ ಒಂದು ರೀತಿಯಲ್ಲಿ ಏಕ ಮುಖವೂ ಅಸಮಗ್ರವೂ ಆಗಿಯೇ ಉಳಿದಿರುತ್ತದೆ." *(ಸಮಗ್ರ ಗದ್ಯ ಸಂ.೧, ಪುಟ-41).* ಸಾಮಾಜಿಕ ಪ್ರಜ್ಞೆಯಲ್ಲಿ ಹರಿಹರನಗಿಂತ ಪಂಪ ದೊಡ್ಡವನು, ಪಂಪನಿಗಿಂತ ಹೋಮರ್ ದೊಡ್ಡವನು. ಸಾಮಾನ್ಯರ ನೋವಿಗೆ ಪ್ರತಿಕ್ರಿಯಿಸುವ ಹೋಮರ್‌ನ ಮಾನವೀಯತೆ ಹೆಚ್ಚು ವೈಚಾರಿಕತೆಯಿಂದ ಕೂಡಿದೆ. ಹೀಗೆ ಜಿಎಸ್ಎಸ್ ಪಂಪನ ಗುಣದೋಷಗಳನ್ನು, ಇತಿಮಿತಿಗಳನ್ನು ವಿಮರ್ಶಿಸುವಲ್ಲಿ. ಅವರ ವೈಚಾರಿಕತೆ ಎದ್ದು ಕಾಣುತ್ತದೆ. ಆದರೆ ಪುಷ್ಪೋದ್ಯಾನದಲ್ಲಿ ಹೂಕಿತ್ತು ಗಿಡಗಳಿಗೆ ಹಿಂಸೆ ಕೊಟ್ಟೆವೆಲ್ಲಾ ಎಂದು ಮರುಗುವ ಸ್ತ್ರೀಯರ ಪಶ್ಚಾತ್ತಾಪದಲ್ಲಿ ಮತ್ತು ಭರತ-ಬಾಹುಬಲಿ ನಡುವೆ ಧರ್ಮಯುದ್ಧ ತೀರ್ಮಾನವಾಗಿ ಅಪಾರ ಸೈನಿಕರ ಸಾವು ತಪ್ಪಿದ ಅಹಿಂಸಾ ತತ್ವ ಜೈನಧರ್ಮದದ್ದಾದರೂ, ಅಲ್ಲಿಯೂ ಒಂದಿಷ್ಟು ಮಾನವೀಯತೆ ಜಿನುಗಿರುವುದನ್ನು ಗಮನಿಸಬೇಕಾಗುತ್ತದೆ.

ಹನ್ನೆರಡನೆಯ ಶತಮಾನ ಕನ್ನಡನಾಡಿನ ಸಾಂಸ್ಕೃತಿಕ ಚರಿತ್ರೆಯಲ್ಲಿ ಒಂದು ವೈಚಾರಿಕತೆ ಮೆರೆದ ಯುಗ. ಶರಣಧರ್ಮ ಮಾನವೀಯತೆಯ ನೆಲೆಗಟ್ಟಿನ ಮೇಲೆ ನಡೆದ ಸಾಂಘಿಕವಾದ ಧಾರ್ಮಿಕ-ಸಾಮಾಜಿಕ ಆಂದೋಲನ; ಅದು ಭಾರತದಲ್ಲಿಯೇ ಮೊಟ್ಟಮೊದಲ ಜನಪರ ಚಳುವಳಿ; ಶ್ರೀ ಸಾಮಾನ್ಯರು ಈ ಆಂದೋಲನದಲ್ಲಿ ತೊಡಗಿ ಮಾನವ-ಮಾನವರ ನಡುವಣ ತರತಮಗಳನ್ನೆಲ್ಲಾ ವೈಚಾರಿಕ ಚಿಕಿತ್ಸೆಗೆ ಒಳಪಡಿಸಿದ ಕಾಲ: "ವಚನಕಾರರು ಕೂತು ವಿಚಾರ ಮಾಡಿದ ಪಂಡಿತರಲ್ಲ—ಉತ್ತಮ ಜಾತಿಯಲ್ಲಿ ಹುಟ್ಟಿದರೆ ಮಾತ್ರ ವಿಚಾರ ಮಾಡುವ ಸಾಮರ್ಥ್ಯವಿರುತ್ತದೆ ಎಂಬ ಭ್ರಮೆಗೆ ಒಳಗಾದವರಲ್ಲ, ತಮ್ಮ ವೈಚಾರಿಕತೆಯಿಂದ ತಾವೆಂತಹ ಕ್ರಾಂತಿಯನ್ನು ಮಾಡುತ್ತಿದ್ದೇವೆ ಎನ್ನುವುದನ್ನು ಬಲ್ಲವರಲ್ಲ.

ಅಂತಹ ಸಾಮಾನ್ಯ ಜನ, ಗಂಡೆನ್ನದೆ, ಹೆಣ್ಣೆನ್ನದೆ, ಆ ಜಾತಿ ಈ ಜಾತಿ ಎನ್ನದೆ ಬಸವಣ್ಣನವರ ವ್ಯಕ್ತಿಕೇಂದ್ರದಲ್ಲಿ ಸಂಘಟಿತರಾಗಿ 'ತಮಂಧ ಘನ'ವಾದ ಅಂದಿನ ಆವರಣದಲ್ಲಿ ಒಂದು ವಿಚಾರದ ದೀಪಾವಳಿಯನ್ನೇ ತೆರೆದರು" (ಸಮಗ್ರ ಗದ್ಯ ಸಂ.೧, ಪುಟ 42). ವಚನಕಾರರಿಂದ ನಡೆದದ್ದು ಮೂಲಭೂತ ಕ್ರಾಂತಿ. ವಚನಕಾರರು ಸ್ವತಂತ್ರವಾದ ವಿಚಾರ ಶಕ್ತಿಯನ್ನು ಬೆಳಸಿಕೊಂಡು, ಅದುವರೆವಿಗೂ ರೂಢಿಯಲ್ಲಿದ್ದ ವೈಚಾರಿಕತೆಯ ಸಿದ್ಧ ಸಂಪ್ರದಾಯದ ಪ್ರಭಾವದಿಂದ ಮುಕ್ತಗೊಂಡವರು. ಹಿಂದಿನ ವಿಚಾರ ಪರಂಪರೆಯ ಇತಿಮಿತಿಗಳನ್ನು, ಗುಣದೋಷಗಳನ್ನು, ಏರುಪೇರುಗಳನ್ನು ಅರಿತು ನಿರಾಕರಿಸಿದವರು. ಅಂಥ ವೇದ ಶಾಸ್ತ್ರ ಆಗಮಗಳ ಸಿದ್ಧ ವೈಚಾರಿಕತೆಯನ್ನು ವಿಚಾರ ಪೂರ್ವಕವಾಗಿ ತಿರಸ್ಕರಿಸಿ, ಸ್ವಾನುಭಾವಕ್ಕೆ ಬೆಲೆಕೊಟ್ಟವರು ವಚನಕಾರರು. ವೇದೋಪನಿಷತ್ತನ್ನೇ ಮತ್ತೆ ಮತ್ತೆ ಆಧರಿಸಿದ ಆಚಾರ್ಯರ ಭಾಷ್ಯದ ವಿಚಾರವನ್ನು ತಿರಸ್ಕರಿಸಿದವರು. ವೈದಿಕ ಧರ್ಮ ಕೆಲವೇ ಸ್ತರಗಳನ್ನು ಹಿತಾಸಕ್ತಿಗಳನ್ನು ರಕ್ಷಿಸುತ್ತ, ಇನ್ನುಳಿದ ಸ್ತರಗಳನ್ನು ಅಲಕ್ಷಿಸುತ್ತ, ರಾಜರಿಗೆ ಬೆಂಬಲಿಗರಾಗಿ, ಧರ್ಮವನ್ನು ಶೋಷಣೆಗೆ ಬಳಸಿ ಜಡಧರ್ಮವಾಗಿತ್ತು. ಸಾಮಾಜಿಕ ಪ್ರಜ್ಞೆ ಇಲ್ಲದ ಸಾಮಾಜಿಕ ನ್ಯಾಯ ದೊರಕದ, ಮಾನವೀಯತೆಯ ಕಾಳಜಿ ಇಲ್ಲದ ವೈದಿಕಧರ್ಮದ ಸ್ಥಗಿತೆಯನ್ನು ಪ್ರತಿಭಟಿಸಿದರು.

ವಚನಕಾರರ ವಿಚಾರ ಕ್ರಾಂತಿಯ ಪ್ರಮುಖ ಅಂಶಗಳು. ಸಂಸಾರ-ಸನ್ಯಾಸ ಸಮನ್ವಯಗೊಳಿಸಿದುದು, ಸ್ತ್ರೀಯರಿಗೆ ಆಧ್ಯಾತ್ಮ ಸಾಧನೆಯಲ್ಲಿ ಗಂಡಸರಿಗಿರುವಷ್ಟೇ ಸ್ವಾತಂತ್ರ್ಯ, ದೇವಸ್ಥಾನಗಳ ನಿರಾಕರಣೆ, ದೇಹವೇ ದೇಗುಲ ಎಂದು ಸಾರಿದುದು. ದೇವಾಲಯಕ್ಕೆ ದತ್ತಿಬಿಡುವ ವಿರುದ್ಧ ಪ್ರತಿಭಟನೆ, ಇಹ-ಪರ ಕುರಿತ ಪರಂಪರವಾದ ಭಾವನೆಯನ್ನು ಚಿಕಿತ್ಸೆಗೆ ಒಳಪಡಿಸಿದ್ದು. ಇಹದ ಬದುಕು ಪರಕ್ಕೆ ಮಾಡಿಕೊಳ್ಳುವ ಸಿದ್ಧತೆ ಎಂಬುದನ್ನು ಅಲ್ಲಗಳೆದು, ಇಹಲೋಕದ ಬದುಕಿನ ಬಗ್ಗೆ ವೀರಭಾವ ತಾಳಿದುದು, ಸ್ವರ್ಗ-ನರಕ ಕುರಿತು ಜನರಲ್ಲಿ ಪ್ರಚಲಿತ ನಂಬಿಕೆಗಳನ್ನು ತಲೆಕೆಳಗು ಮಾಡಿದ್ದು ಕೆಲವು ಮುಖ್ಯವಾದ ನಿಲುವುಗಳು. ಸ್ವರ್ಗ ನರಕಗಳು ವಾಸ್ತವ ಬದುಕಿನಲ್ಲಿವೆ ಎಂದರು, 'ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದರೆ ನರಕ'—ಬಸವಣ್ಣನವರ ಇಂಥ ವ್ಯಾಖ್ಯಾನ ಯಾರಿಂದಲೂ ಸಾಧ್ಯವಿಲ್ಲ. ಹೊಲೆಯ ಎನ್ನುವುದು ಒಂದು ಮನಃಸ್ಥಿತಿಯೇ ಹೊರತು, ಅದೊಂದು ಜಾತಿಯಲ್ಲ; 'ಹೊಲಸು ತಿಂಬುವನೇ ಹೊಲೆಯ', ಎನ್ನುತ್ತ ಮೇಲು ಕೀಳನ್ನು ವಿರೋಧಿಸಿದರು. ವೃತ್ತಿ ಆಧಾರಿತ ಜಾತಿ ವಿಂಗಡಣೆಯನ್ನು ವಿರೋಧಿಸಿದರು. ಶ್ರಮಜೀವಿಗಳ ಕಾಯಕ ಮಹತ್ವವನ್ನು ಎತ್ತಿ ಹಿಡಿದರು.

ಹಿಂದೂ ಧರ್ಮದ ವರ್ಣವ್ಯವಸ್ಥೆಯ ಯಮಭಾರದ ಕೆಳಕ್ಕೆ ಸಿಕ್ಕಿ ನಿರ್ಲಕ್ಷ್ಯತೆಗೆ ಒಳಗಾದ ದಲಿತರು ಮತ್ತು ಕೆಳವರ್ಗದ ಬದುಕಿಗೆ ಹೊಸ ಎಚ್ಚರವನ್ನೂ, ಆತ್ಮಪ್ರತ್ಯಯವನ್ನೂ, ಪ್ರತಿಭಟನೆಯನ್ನು ವಚನಕಾರರು ತಂದುಕೊಟ್ಟದ್ದು ಸಾಮಾನ್ಯ ವಿಷಯವಲ್ಲ. "ವಚನಕಾರರ ಸಾಮಾಜಿಕ ಹೊಣೆಗಾರಿಕೆಯ ಮುಖ್ಯ ಲಕ್ಷಣವೆಂದರೆ, ತಮ್ಮ ಸಾಮಾಜಿಕ ಮಾಧ್ಯಮವಾದ

ಕನ್ನಡವನ್ನು, ತಮ್ಮ ವಿಚಾರ ಸಂವಹಕ್ಕೆ ಹಾಗೂ ಸಂವಾದಕ್ಕೆ ಬಳಸುವ ಒಂದು ಪರಿಸರವನ್ನು ನಿರ್ಮಾಣ ಮಾಡಿದ್ದು. ವೈದಿಕ ಧರ್ಮ ತನ್ನ ಸಮಸ್ತ ವಿಚಾರಗಳನ್ನು ಬಹು ಸಂಖ್ಯಾತರ ಭಾಷೆಯಲ್ಲದ ಸಂಸ್ಕೃತದಲ್ಲೇ ಯಾಕೆ ಅಭಿವ್ಯಕ್ತ ಪಡಿಸುವಂತಹ ಒಂದು ವ್ಯವಸ್ಥೆಯನ್ನು ಸಂರಕ್ಷಿಸಿಕೊಂಡು ಬಂತೆಂಬುದರ ಹಿಂದಿರುವ ಸಾಮಾಜಿಕ ನಿಲುವುಗಳು ಹಾಗೂ ಕುತಂತ್ರಗಳು ಸ್ಪಷ್ಟವಾಗಿವೆ. ಸಾಮಾಜಿಕ ಹೊಣೆಗಾರಿಕೆಯಿರುವ ಯಾವ ಧರ್ಮವೂ, ತನ್ನ ನಿಲುವುಗಳನ್ನು ಹಾಗೂ ವಿಚಾರಗಳನ್ನು ಜನ ಸಾಮಾನ್ಯರ ಭಾಷೆ ಯಾವುದೋ ಆದರ ಮೂಲಕವೇ ಬಹು ಸಂಖ್ಯಾತರಿಗೆ ತಿಳಿಯಪಡಿಸುತ್ತದೆ. ಹೀಗೆ ಮಾಡಿದ್ದು ಮೊದಲು ಬೌದ್ಧಧರ್ಮ, ಅನಂತರ ಬಸವ ಧರ್ಮ" *(ಸಮಗ್ರ ಗದ್ಯ ಸಂ.೧ ಪುಟ 101).*

ಜಿಎಸ್‌ಎಸ್, ಧರ್ಮವನ್ನು ಒಂದು ಸಾಮಾಜಿಕ ಅಗತ್ಯ ಎನ್ನುತ್ತಾರೆ. ಯಾವ ಧರ್ಮಕ್ಕೆ ಸಾಮಾಜಿಕ ಹೊಣೆಗಾರಿಕೆ ಇಲ್ಲವೋ ಅದು ಧರ್ಮವೇ ಅಲ್ಲ. ಶಿವಶರಣರು ನಿರೂಪಿಸಿದ ಧರ್ಮ ಇಷ್ಟಲಿಂಗ ನಿಷ್ಠೆಯ ಸಾಮಾನ್ಯ ಸೂತ್ರದಲ್ಲಿ, ಆ ಧರ್ಮವನ್ನು ಒಪ್ಪಿಕೊಂಡ ಸಮಗ್ರ ಸಮಾಜವನ್ನೇ ಪೋಣಿಸುವ ಸ್ವರೂಪದ್ದು: "ಬಹುದೇವತಾರಾಧನೆಯ ಸಾಮಾಜಿಕ ವಿಘಟನೆಯಿಂದ, ಏಕ ದೇವತಾರಾಧನೆಯ ಸಂಘಟನೆಯೊಳಕ್ಕೆ ಅಂದಿನ ಬದುಕನ್ನು ಅಳವಡಿಸಿ ಸಾಮಾಜಿಕ ಹೊಣೆಗಾರಿಕೆಯನ್ನು ಪ್ರಕಟಿಸುವಂಥದಾಗಿದೆ" *(ಸಮಗ್ರ ಗದ್ಯ, ಸಂ. ೧, ಪುಟ 105).* "ರಾಜನನ್ನು ಹಾಗೂ ಅವನ ಬೆಂಬಲಕ್ಕೆ ನಿಂತ ವರ್ಗಗಳನ್ನೂ ನಿಯಂತ್ರಿಸುವ ಧರ್ಮವನ್ನು ತೀವ್ರವಾದ ಚಿಕಿತ್ಸೆಗೆ ಒಳಪಡಿಸುವ ವೈಚಾರಿಕತೆಯ ಮೂಲಕ ವಚನಕಾರರು, ತಾವು ಒಂದು ಹೊಸ ಸಮಾಜವನ್ನು, ತತ್ಪರಿಣಾಮವಾದ ಧರ್ಮವನ್ನೂ ನೆಲೆಗೊಳಿಸಿದ್ದು ಮಹತ್ವದ ಸಂಗತಿಯಾಗಿದೆ" *(ಸಮಗ್ರ ಗದ್ಯ ಸಂ. ೧, ಪುಟ 100).* ವಚನಕಾರರು ಸಾಮಾಜಿಕ ಹೊಣೆಗಾರಿಕೆಯನ್ನು ಕೇವಲ ಲೌಕಿಕ ಎಂದು ಭಾವಿಸಲಿಲ್ಲ. ಅದು ಆಧ್ಯಾತ್ಮಿಕ ಸಾಧನೆಯಿಂದ ವ್ಯಕ್ತಿಗೆ ಸಂಸ್ಕಾರವನ್ನು ಉಂಟು ಮಾಡಿ ಅವನ ಲೌಕಿಕ ಜೀವನವನ್ನು ಉತ್ತಮ ಪಡಿಸುತ್ತದೆ. ಕಟ್ಟಿಕೊಂಡ ಹೆಂಡತಿಯನ್ನು ಬಿಟ್ಟು ಆಧ್ಯಾತ್ಮ ಸಾಧನೆಗೆ ಹೋಗುವ ಗಂಡನದ್ದು ವೈರಾಗ್ಯವಾದರೆ, ಕಟ್ಟಿಕೊಂಡ ಗಂಡನನ್ನು ಬಿಟ್ಟು ಆಧ್ಯಾತ್ಮ ಸಾಧನೆಗೆ ಹೋಗುವ ಹೆಣ್ಣಿನದೂ ವೈರಾಗ್ಯ ಏಕಾಗಬಾರದು ಎಂದು ಅಕ್ಕಮಹಾದೇವಿಯ ವಿಷಯವಾಗಿ ಜಿಎಸ್‌ಎಸ್ ಪ್ರಶ್ನಿಸುತ್ತಾರೆ. ಅಲ್ಲದೆ ಅಕ್ಕಮಹಾದೇವಿ ಮದುವೆಯನ್ನು ನಿರಾಕರಿಸಿದವಳಲ್ಲ. ಮದುವೆಯ ವ್ಯವಸ್ಥೆಯನ್ನು ಪ್ರಶ್ನಿಸಿದವಳು. ಅಕ್ಕಮಹಾದೇವಿ ವೈಚಾರಿಕತೆ ಮತ್ತು ಆತ್ಮಪ್ರತ್ಯಯದ ಮೂಲಕ ಹೆಣ್ಣಿನ ವ್ಯಕ್ತಿತ್ವಕ್ಕೆ ಘನತೆ ತಂದುಕೊಟ್ಟವಳು. ತನ್ನ ವೈರಾಗ್ಯ ಮತ್ತು ವೈಚಾರಿಕತೆಯ ಪರಿಣತಿಯಿಂದ ಅಕ್ಕ ಎಂದು ಕರೆಸಿಕೊಳ್ಳುವ ಗೌರವಕ್ಕೆ ಪಾತ್ರಳಾದವಳು ಎನ್ನುತ್ತಾರೆ. ಅವರು ಅಕ್ಕಮಹಾದೇವಿ ದಿಗಂಬರೆಯಾಗಿದ್ದಳು ಎಂಬುದನ್ನು ಒಪ್ಪುವುದಿಲ್ಲ "ಅಕ್ಕ ಮಹಾದೇವಿ ಕೇಶಾಂಬರೆಯಾಗಿದ್ದಳೆಂದರೆ ತನ್ನ ತಲೆಕೂದಲನ್ನು ಮರೆಮಾಡಿಕೊಂಡು ಬೆತ್ತಲೆಯ ಸ್ಥಿತಿಯಲ್ಲಿದ್ದಳೆಂದು ಅರ್ಥ ಮಾಡುವುದು ತೀರಾ ಅಸಂಗತವಾದ ಕಲ್ಪನೆ

ಎನ್ನುವುದರಲ್ಲಿ ಸಂದೇಹವಿಲ್ಲ ಮತ್ತು ಬೆತ್ತಲೆ ಎಂದರೆ ಕೇವಲ ಶಾರೀರಿಕವಾದ ಒಂದು ವಸ್ತ್ರಹೀನಸ್ಥಿತಿ ಎಂದು ವಾಚ್ಯವಾಗಿ ಭಾವಿಸುವುದಕ್ಕಿಂತ, ಎಲ್ಲ ಬಗೆಯ ಆವರಣಗಳನ್ನೂ ಕಳಚಿಕೊಂಡ ಒಂದು ಮುಕ್ತಸ್ಥಿತಿ ಎಂದು ಸಾಂಕೇತಿಕವಾಗಿ ಗ್ರಹಿಸುವುದೂ ಅಗತ್ಯವಾಗಿದೆ." *(ಸಮಗ್ರ ಗದ್ಯ ೧, ಪುಟ-154).*

ಮೇಲಿನ ಸ್ತರದಿಂದ ಬಂದ ವಚನಕಾರರಲ್ಲಿ ಮುಖ್ಯವಾಗಿ ಅನುಭಾವಿಕ, ತಾತ್ತ್ವಿಕ, ಅನ್ವೇಷಣೆಗಳೂ ಮತ್ತು ಹೊಸಧರ್ಮವನ್ನು ನೆಲೆಗೊಳಿಸಲು ಅಗತ್ಯವಾದ ಚಿಂತನೆಗಳು ಪ್ರಧಾನವಾಗಿ ಕಾಣಿಸಿಕೊಂಡಿವೆ; ಕೆಳಸ್ತರದಲ್ಲಿ ಬಂದ ವಚನಕಾರರಲ್ಲಿ, ಸಮಾಜ ವಿಮರ್ಶೆಯ ಹಾಗೂ ಪ್ರತಿಭಟನೆಯ ಅಂಶಗಳು ಹೆಚ್ಚು ತೀವ್ರವಾಗಿದ್ದು, ಅನುಭಾವಿಕಹಾಗೂ ಧಾರ್ಮಿಕ ಅಂಶಗಳು ಬಹುಮಟ್ಟಿಗೆ ಹಿರಿಯ ವಚನಕಾರರ ಅನುಕರಣ ಹಾಗೂ ಅನುಸರಣನದಂತೆ ಭಾಸವಾಗುತ್ತದೆ *(ಸಮಗ್ರ ಗದ್ಯ ೧, ಪುಟ:74-75)* ಎಂಬ ಜಿಎಸ್‌ಎಸ್ ಅವರ ಮಾತನ್ನು ಒಪ್ಪುವುದು ಕಷ್ಟ. ಇದಕ್ಕೆ ವಿರುದ್ಧವಾದ ಅಂಶಗಳು ವಚನಗಳಲ್ಲಿ ಕಂಡುಬರುತ್ತವೆ. ಅಲ್ಲದೆ ಕೆಳಸ್ತರದ ವಚನಕಾರರಲ್ಲಿ, ಮೇಲಿನ ಸ್ತರದ ವಚನಕಾರರಲ್ಲಿ ಕಂಡು ಬರುವ ಪಾಪಪ್ರಜ್ಞೆ ಮತ್ತು ಪಶ್ಚಾತ್ತಾಪ ಅಷ್ಟಾಗಿ ಕಂಡು ಬರುವುದಿಲ್ಲ. ಅಲ್ಲದೆ ಮೇಲುಸ್ತರದ ವಚನಕಾರರ ವಚನಗಳಲ್ಲಿ ಕಂಡು ಬರುವ ಭಾವಗೀತಾತ್ಮಕ ಅಂಶಗಳಿಗಿಂತ, ಕೆಳಗಿನ ಸ್ತರದ ವಚನಕಾರರ ವಚನಗಳಲ್ಲಿ ಸಾಧನಾತ್ಮಕ ಪಾರಿಭಾಷಿಕ ಅಂಶಗಳು ಹೆಚ್ಚಾಗಿ ಕಂಡು ಬರುತ್ತವೆ ಎಂಬುದನ್ನು ಗಮನಿಸಬಹುದು.

ಬಸವಣ್ಣನವರು ಸ್ವಲ್ಪ ಮಟ್ಟಿಗಾದರೂ ಬಿಜ್ಜಳನ ಭಂಡಾರದ ಹಣವನ್ನು ಬಳಸಿ ಕೊಂಡಿರಬಹುದು ಎಂದು ಭಾವಿಸುವುದು ಆ ವ್ಯಕ್ತಿತ್ವಕ್ಕೆ ಮಾಡುವ ಅಪಚಾರ ಎನ್ನುವ ಜಿಎಸ್‌ಎಸ್ ಅವರೆ, ಮತ್ತೊಂದು ಕಡೆ ಸಂಘಟನೆಗೆ ಸಾಕಷ್ಟು ಜನಬಲ ಮತ್ತು ಧನಬಲ ಬೇಕು, ಬಸವಣ್ಣನವರು ತಮ್ಮ ಅಧಿಕಾರದಿಂದ ಈ ಬಗೆಯ ನೆರವು ಪಡೆದಿರಬೇಕು. ಸರ್ವಸಂಗ ಪರಿತ್ಯಾಗಿಯೊಬ್ಬ ಸಂಘಟನೆ ಮಾಡುವುದು ಸಾಧ್ಯವಿಲ್ಲ. ಬಸವಣ್ಣನವರು ಸರ್ವಸಂಗ ಪರಿತ್ಯಾಗಿ ಅಲ್ಲ—ಎಂದು ಹೇಳುವ ಮಾತಿನಲ್ಲಿ ವಿರುದ್ಧ ಅಭಿಪ್ರಾಯ ವ್ಯಕ್ತವಾಗಿರುವುದು ಕಂಡು ಬರುತ್ತದೆ. ವಿರುದ್ಧ ಅಭಿಪ್ರಾಯವನ್ನು ಸಮರ್ಥಿಸಿಕೊಳ್ಳುವುದಕ್ಕಾಗಿ ಅಂದಿನ ಸಮಾಜದ ವಿವಿಧ ಸ್ತರಗಳಿಂದ ಬಂದು ಕೂಡಿಕೊಂಡಿದ್ದ ರಾಜ್ಯದ ಶ್ರೀಮಂತ ವರ್ಗದವರು, ವರ್ತಕರು ಮತ್ತು ತಕ್ಕಷ್ಟು ಅನುಕೂಲವಂತರೂ ಇದ್ದಿರಬಹುದು ಎಂಬ ಉತ್ತರ ಜಾಣತನದ್ದಾಗುತ್ತದೆಯೇ ಹೊರತು ಈ ಸಮಸ್ಯೆ ಬಗೆಹರಿದಂತಾಗುವುದಿಲ್ಲ. ಆದರೆ ಜಿಎಸ್‌ಎಸ್ ಅವರ ವೈಚಾರಿಕತೆಗೆ, ಬಸವಣ್ಣನವರ ಮತ್ತೊಂದು ಗಾದೆಯ ಮಾತಿನ ಪ್ರಸ್ತಾಪವನ್ನು ಮಾಡಬಹುದು 'ಹುಲ್ಲ ಕಿಚ್ಚು ಹೊಲೆಯ ಮೇಳಾಪ; ಅಲ್ಲಿ ಹುರುಳಿಲ್ಲ' ಎಂಬ ಬಸವಣ್ಣನವರ ಮಾತು 'ಪುಲ್ಲಕಿರ್ಚುಂ ಪೊಲೆಯನ ಕೆಳೆಯುಂ ಮಾಡದಾವಂಗೆ ಕೇಡಂ' ಎಂದು ನೇಮಿಚಂದ್ರನಲ್ಲಿ ಕಾಣಿಸಿಕೊಂಡಿದೆ. ಈ ಎರಡು ಉಕ್ತಿಗಳೂ ಗಾದೆ ಮಾತುಗಳು.. ಬಸವಣ್ಣನವರಲ್ಲಿ ಹೊಲೆಯರ ಸಹವಾಸ ಹುಲ್ಲಕಿಚ್ಚಿನಂತೆ

ಕೇವಲ ತಾತ್ಕಾಲಿಕವೂ, ನಿರರ್ಥಕವೂ ಆದದ್ದು ಎಂದು ಅರ್ಥವಾಗುತ್ತದೆ. ನೇಮಿಚಂದ್ರ ಉಚ್ಚವರ್ಗದವರು ಹೊಲೆಯರ ಬಗೆಗೆ ತಾಳುವ ಧೋರಣೆಯನ್ನೆ, ಬಸವಣ್ಣನವರ ವಚನ ಗಾದೆ ಮಾತಿನ ಬಳಕೆಯಲ್ಲಿ ಧ್ವನಿಸುವುದಾದರೆ "ಈ ಮಾತು 'ಹೊಲೆಯ' ಹೊಲೆತನಗಳ ಬಗ್ಗೆ ವಚನಕಾರರು ಮತ್ತು ವೈಯಕ್ತಿಕವಾಗಿ ಬಸವಣ್ಣನವರು ತಾಳಿದ ನಿಲುವಿಗೆ ತೀರಾ ಆಘಾತಕಾರಿಯಾಗಿದೆ ಎಂಬುದನ್ನು ಹೇಳಬೇಕಾಗಿದೆ" *(ಸಮಗ್ರ ಗದ್ಯ ೧, ಪುಟ 158)* ಎನ್ನುವ ಜಿಎಸ್ಎಸ್, ಹರಿಹರನ ಬಸವರಾಜ ದೇವರ ರಗಳೆಯನ್ನು ಕುರಿತು ಅತ್ಯಂತ ಬಿಚ್ಚು ಮನಸ್ಸಿನ ದಿಟ್ಟತನದ ಮಾತುಗಳನ್ನೂ ಹೇಳಿದ್ದಾರೆಂಬುದನ್ನು ಗಮನಿಸಬಹುದು.

ಸಿದ್ಧನಂಜೇಶನ ರಾಘವಾಂಕ ಚರಿತೆಯಿಂದ, ಬಸವರಾಜದೇವರ ರಗಳೆ ಇಪ್ಪತ್ತೈದು ಸ್ಥಲದ ರಗಳೆ ಎಂದೂ, ಅದನ್ನು ವಿರೂಪಾಕ್ಷನೆಡೆಗೆ ಒಯ್ಯಲು 'ಉಱಿನುಂಗಿ'ದ ಪಂಪಾವಿರೂಪಾಕ್ಷನ ಉಚ್ಛಿಷ್ಟ ಪ್ರಸಾದ ಹನ್ನೆರಡೂವರೆ ಸ್ಥಲ ಮಾತ್ರ ಉಳಿದಿದೆ ಎಂದು ತಿಳಿದು ಬರುತ್ತದೆ. ಡಾ. ಎಲ್ ಬಸವರಾಜು 'ಉಱಿನುಂಗಿದ' ಮಾತನ್ನು 'ಅರೆನುಂಗಿದ' ಎಂದು ಹೇಳಿದನ್ನು ಜಿಎಸ್ಎಸ್ ಒಪ್ಪುತ್ತಾರೆ. ಅಲ್ಲದೆ "ಹರಿಹರನು ಬರೆದು ನಷ್ಟವಾಗಿರುವ ಈ ಭಾಗದಲ್ಲಿ ಬಸವಣ್ಣನವರ ವಿಚಾರದಲ್ಲಿ ತೀರ ಭಾವುಕತೆ ಉಳ್ಳವರಿಗೆ ಅಪ್ರಿಯವಾಗಬಹುದಾದ ಸಂಗತಿಗಳೆಷ್ಟೋ ಇದ್ದುದರಿಂದಲೂ ಅಥವಾ ಬಸವಣ್ಣನವರ ಕಡೆಗಾಲದ ಬಗೆಗೆ, ಅವರೇ ಕೊಲೆಯಾದರೆಂದೋ, ಅವರು ತಾವು ಕಟ್ಟಿದ ಸೌಧ ಕಣ್ಣೆದುರಿಗೇ ಕುಸಿದು ಬೀಳುತ್ತಿರುವುದನ್ನು ಕಂಡು ನಿರಾಶರಾಗಿ ಆತ್ಮಹತ್ಯೆ ಮಾಡಿಕೊಂಡ ರೆಂದೋ, ಅಪ್ರಿಯವಾಗಬಹುದಾದ, ಇಂಥದೇ ಕೆಲವು ವಾಸ್ತವ ಸಂಗತಿಗಳಿಗೆ ಹರಿಹರನು ಆ ಭಾಗದಲ್ಲಿ ಅಭಿವ್ಯಕ್ತಿಯನ್ನು ನೀಡಿದನೆಂಬ ಕಾರಣದಿಂದಲೂ ಏನೊ, ಹರಿಹರನ ಕಾಲದಲ್ಲೊ ಅಥವಾ ಅನಂತರದ ಕಾಲದಲ್ಲೊ, ಒಟ್ಟಿನಲ್ಲಿ ಹರಿಹರನಿಂದ ಹಿಡಿದು ಸಿದ್ಧನಂಜೇಶನ 'ರಾಘವಾಂಕ ಚರಿತೆ'ಯನ್ನು ಬರೆಯುವುದರೊಳಗಿನ ಅವಧಿಯಲ್ಲಿ ಈ ಮುಂದಿನ ಭಾಗವನ್ನು ವೀರಶೈವ ಮತಧರ್ಮವೆ ನಿರ್ಮೂಲನ ಮಾಡಿರುವುದು ಸಾಧ್ಯವೆಂದು ನಮಗೆ ತೋರುತ್ತದೆ" *(ಸಮಗ್ರ ಗದ್ಯ ಸಂ. ೧, ಪುಟ 206)*. ಇಂಥ ಸೂಕ್ಷ್ಮ ವಿಷಯಗಳಲ್ಲಿ ಜಿಎಸ್ಎಸ್ ಅವರ ಮುಕ್ತ ಅಭಿಪ್ರಾಯಗಳು ಅವರ ವೈಚಾರಿಕತೆಗೆ ಸಾಕ್ಷಿಯಾಗಿದೆ.

ವಚನ ಚಳುವಳಿಯ ದಲಿತ ಪ್ರಜ್ಞೆ, ಇವತ್ತಿನ ದಲಿತ ಪ್ರಜ್ಞೆಗೆ ಹೋಲಿಸಿದರೆ ಅನ್ಯಾಯಗಳ ಹಾಗೂ ಶೋಷಣೆಗಳ ವಿರುದ್ಧ ಹೋರಾಡುವ ಆರ್ಥಿಕ-ರಾಜಕೀಯ ಸ್ವರೂಪದ್ದಾಗಿರದೆ, ಬಹುಮಟ್ಟಿಗೆ ಧಾರ್ಮಿಕ-ಆಧ್ಯಾತ್ಮಿಕ ಸ್ವರೂಪದ್ದಾಗಿದೆ ಎಂದು ಜಿಎಸ್ಎಸ್ ಅಭಿಪ್ರಾಯ ಪಡುತ್ತಾರೆ. ಅದೂ ಅಲ್ಲದೆ ಮೂಲತಃ ಸಾಮಾಜಿಕ-ಧಾರ್ಮಿಕ ಆಂದೋಲನದಲ್ಲಿ ಪಾಲುಗೊಂಡ "ಆ ಜನದ ಸಾಧನೆ ಇಪ್ಪತ್ತನೆಯ ಶತಮಾನದಷ್ಟು ಮುಂದುವರಿದದ್ದಾಗಿರಲು ಸಾಧ್ಯವಿಲ್ಲದಿದ್ದರೂ ಅದು ಹನ್ನೆರಡನೆಯ ಶತಮಾನಕ್ಕಿಂತ ಎಷ್ಟೋ ಮುಂದುವರಿದದ್ದಾಗಿತ್ತೆಂಬುದನ್ನು ನಮ್ಮ ಇಂದಿನ ವಿಚಾರವಂತರು ಮೊದಲು ಗುರುತಿಸಿಕೊಳ್ಳಬೇಕಾಗಿದೆ" *(ಸಮಗ್ರ ಗದ್ಯ ಸಂ. ೧, ಪುಟ 77)* ಎನ್ನುತ್ತಾರೆ.

"ವಚನಕಾರರು ತಾವು ಬರೆದ್ದದು ಸಾಹಿತ್ಯ ಹೌದೋ ಅಲ್ಲವೋ ಎಂಬುದರ ಬಗ್ಗೆ ತಟಸ್ಥರಾಗಿದ್ದರೂ, ಅವುಗಳನ್ನು ನಾವು ಸಾಹಿತ್ಯವೆಂದೇ ಪರಿಗಣಿಸುವುದರಿಂದ 'ಆನು ಒಲಿದಂತೆ ಹಾಡುವೆ' ಎಂದ ಬಸವಣ್ಣನವರ ಮಾತನ್ನು ನಾವು ವಚನಕಾರರ ಕಾವ್ಯತತ್ತ್ವ ಎಂದೇ ಭಾವಿಸುತ್ತೇವೆ" *(ಸಮಗ್ರ ಗದ್ಯ, ಸಂ. ೧, ಪುಟ 57)*. ಇದರಿಂದ ಬಸವಣ್ಣನವರು ಸಿದ್ಧಪರಂಪರೆಯ ವಾಗ್ ರಚನೆಯನ್ನು ನಿರಾಕರಿಸಿದಂತಾಯಿತು. ಇದೇ ಮುಂದೆ ಹರಿಹರನಲ್ಲಿ ಮೂಲಭೂತ ಸಾಹಿತ್ಯಧೋರಣೆಯಾಗಿ ಹೊಸ ಹಾದಿಯನ್ನೇ ತೆರೆಯಿತು. ಬಸವಣ್ಣನವರ ವಚನಗಳಿಗೆ ಶಾಸ್ತ್ರ, ಪುರಾಣ ಆಗಮ ಪರಂಪರೆ ಇದ್ದರೂ, ಅವರು ತಮಗಿಂತ ಹಿಂದೆ ಹರಹಿರುವ ಕನ್ನಡ ಸಾಹಿತ್ಯ ಪರಂಪರೆಯ ಅರಿವೇ ಇಲ್ಲದಂತೆ ವರ್ತಿಸಿರುವುದು ಆಶ್ಚರ್ಯಕರ ವಿಚಾರವಾಗಿದೆ. ವಚನ ನಿರ್ಮಿತಿ ಕಾವ್ಯೇತರ ಮನೋಭಾವದಿಂದ ಬಂದದ್ದು. ಇದು ಯಾವ ಕಾವ್ಯಪರಂಪರೆಯ ಪೂರ್ವ ಸಿದ್ಧತೆಯಿಂದ ಬಂದದ್ದಲ್ಲ. ಜೀವನವೇ ಕಾವ್ಯವಾದಾಗ ಸಂಭವಿಸುವ ಸೌಂದರ್ಯದಿಂದ ಉಜ್ವಲವಾಗಿದೆ ಎನ್ನುತ್ತಾರೆ ಜಿಎಸ್‌ಎಸ್.

ಜಿಎಸ್‌ಎಸ್ ಅಲ್ಲಮನ ವಚನವನ್ನು, ಕಾವ್ಯತತ್ತ್ವವನ್ನು ವ್ಯಾಖ್ಯಾನಿಸುವುದಕ್ಕೆ ಬಳಸಿರುವುದನ್ನು ಗಮನಿಸಬಹುದಾಗಿದೆ:

**ಹಿಂದಣ ಹೆಜ್ಜೆಯ ನೋಡಿ ಕಂಡಲ್ಲದೆ**
**ನಿಂದ ಹೆಜ್ಜೆಯನಱಿಯಬಾರದು**

'ಹಿಂದಣ ಹೆಜ್ಜೆ' ಹಾಗೂ 'ನಿಂದ ಹೆಜ್ಜೆಗಳು' ಪರಂಪರೆ ಹಾಗೂ ಸಮಕಾಲೀನತೆಯನ್ನು ಸಂಕೇತಿಸುತ್ತವೆ ಎನ್ನುತ್ತಾರೆ. ಯಾಕೆಂದರೆ ಕವಿಗೆ ಸಮಕಾಲೀನತೆ ಎಂಬುದು ಪ್ರಾಚೀನತೆಯ ಬಗೆಗೆ ಇರಿಸಿಕೊಂಡ ಅರಿವು ಹಾಗೂ ಪ್ರತಿಕ್ರಿಯೆಯಾಗಿರುತ್ತದೆ. ಕವಿಗೆ ಪರಂಪರೆಯ ಅರಿವು ಬೇಕು, ಆದರೆ ಅದರ ಹಿಡಿತದಿಂದ ಪಾರಾಗಬೇಕು ಎಂದು ಪರಂಪರೆ (ಹಿಂದಣ ಹೆಜ್ಜೆ) ಸಮಕಾಲೀನತೆ (ನಿಂದ ಹೆಜ್ಜೆ) ಯನ್ನು ವ್ಯಾಖ್ಯಾನಿಸುತ್ತಾರೆ.

**ಬಯಲ ರೂಪವ ಮಾಡಬಲ್ಲಾತನೆ ಶರಣನು**
**ಆ ರೂಪ ಬಯಲು ಮಾಡ ಬಲ್ಲಾತನೇ ಲಿಂಗಾನುಭವಿ**

ಎಂಬ ಬಸವಣ್ಣನವರ ಈ ವಚನವನ್ನು ಕಾವ್ಯನಿರ್ಮಿತಿಯ ಜೊತೆಗೆ ಕವಿಗೂ ಮತ್ತು ಓದುಗನಿಗೂ ಇರುವ ಸಂಬಂಧವನ್ನು ಸೂಚಿಸುತ್ತದೆ. ಇದರಿಂದ ಅನುಭವದಿಂದ ಆಕಾರಕ್ಕೆ, ಆಕಾರದಿಂದ ಅನುಭವಕ್ಕೆ ಕಾವ್ಯ ಅನುಸಂಧಾನವಾಗುವ ಕ್ರಿಯೆ ಬಸವಣ್ಣನವರ ವಚನದಿಂದ ಧ್ವನಿಸುತ್ತದೆ ಎನ್ನುತ್ತಾರೆ. ಅನುಭಾವದ ವಚನವನ್ನು ಕಾವ್ಯಾನುಭವಕ್ಕೆ ಅನ್ವಯಿಸುವುದನ್ನು ಇಲ್ಲಿ ಕಾಣಬಹುದಾಗಿದೆ. ಕನ್ನಡ ಸಾಹಿತ್ಯ ಪರಂಪರೆಯ ಮೂಲ ಧೋರಣೆಯಲ್ಲಿ ಕೂಡಾ "ಕಾವ್ಯ ಎನ್ನುವುದು ಮೂಲತಃ ಸಾಹಿತ್ಯ ನಿರ್ಮಿತಿ ಎಂಬುದಕ್ಕಿಂತ ಅದೊಂದು ಧಾರ್ಮಿಕ ಕ್ರಿಯೆ, ಧರ್ಮ ಪ್ರಸಾರದ, ಆತ್ಮೋದ್ಧಾರದ ಮಾರ್ಗ ಎಂಬಂಥ

ಭಾವನೆಗಳೇ ರೂಢಮೂಲವಾಗಿತ್ತು" *(ಸಮಗ್ರ ಗದ್ಯ ಸಂ.೧, ಪು-53)* ಎನ್ನುವ ಜಿಎಸ್ಎಸ್, ಕನ್ನಡ ಕವಿಗಳ ಪೀಠಿಕಾ ಪ್ರಕಾರಣದಲ್ಲಿ ಒಂದು ರೀತಿಯ ಕಾವ್ಯ ಮೀಮಾಂಸೆಯ ಚರ್ಚೆಯನ್ನು ಗಮನಿಸಬಹುದು ಎನ್ನುತ್ತಾರೆ. ವಚನಗಳು ಮತ್ತು ಕನ್ನಡ ಕಾವ್ಯಗಳನ್ನು ಕುರಿತಾದ ಈ ಚರ್ಚೆ ಆಧುನಿಕ ಕಾಲದ್ದು.

## VI

ಹೊಸ ಪ್ರಯೋಗ ಪ್ರವೃತ್ತಿ ಹಳೆಗನ್ನಡದಲ್ಲಿ ಬಹಳ ಕಡಿಮೆ. ಆದರೆ ಹರಿಹರ-ರಾಘವಾಂಕರು ಹೊಸ ಪರಂಪರೆಗೆ ಕಾರಣರಾದದ್ದು ಒಂದು ವೈಶಿಷ್ಟ್ಯ. "ಹರಿಹರ-ರಾಘವಾಂಕ ಇವರಿಂದ ಏಕಕಾಲದಲ್ಲಿ ಎರಡು ಪರಂಪರೆಗಳು, ರಗಳೆ ಹಾಗೂ ಷಟ್ಪದಿಗಳು ಹುಟ್ಟಿಕೊಂಡದ್ದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಿಶೇಷ ಘಟನೆಯಾಗಿ ತೋರುತ್ತದೆ. ಅಷ್ಟೇ ಅಲ್ಲ, ಮುಂದೆಲ್ಲಾ ಹರಿಹರನ ನೂತನ ಕಾವ್ಯಧರ್ಮ ರಾಘವಾಂಕನಿಂದ ನಿರ್ಮಿತವಾದ ರೀತಿ ಪರಂಪರೆಯಲ್ಲಿ ಪ್ರವಹಿಸಿ ಎರಡು ಪರಂಪರೆಗಳ ಸಂಗಮವಾದದ್ದು ಅಪೂರ್ವವಾಗಿದೆ. ಆದುದರಿಂದ ಈ ಪರಂಪರೆ ರೀತಿಯ ದೃಷ್ಟಿಯಿಂದ ರಾಘವಾಂಕನದೂ, ರಸದ ದೃಷ್ಟಿಯಿಂದ (ಮನೋಧರ್ಮದ ದೃಷ್ಟಿಯಿಂದ) ಹರಿಹರನೂ ಆಗಿರುವುದರಿಂದ ಇದನ್ನು ಹರಿಹರ-ರಾಘವಾಂಕ ಪರಂಪರೆ ಎಂದು ಕರೆಯುವುದು ಉಚಿತವಾಗಿದೆ" *(ಸಮಗ್ರ ಗದ್ಯ ೧, ಪುಟ 226).*

ಹರಿಹರ ವಚನಕ್ರಾಂತಿಯ ಅನಂತರ ಬಂದವನು, ರಗಳೆಗಳಲ್ಲಿ ಸಿದ್ಧಮಾದರಿಯನ್ನು ಅನುಸರಿಸಿದವನು. ಅವನ ಕಥಾನಾಯಕರು ಶ್ರೀಸಾಮಾನ್ಯ ಶಿವಭಕ್ತರು. ಕೈಲಾಸದಲ್ಲಿ ತಪ್ಪು ಮಾಡಿ ಮರ್ತ್ಯಕ್ಕೆ ಬಂದು ಸಾಧನೆಯಿಂದ ಸಂಸ್ಕಾರ ಪಡೆದು ಮರ್ತ್ಯದ ಮಹತ್ವವನ್ನು ಹೆಚ್ಚಿಸಿದರು. ಅದರಲ್ಲಿಯೂ ಬಸವಣ್ಣ ಕಿತ್ತೊಗೆದ ಜನಿವಾರದ ಪ್ರಸಂಗ ಕ್ರಾಂತಿಕಾರಿಯಾದುದು "... ಅವರು ತಮಗೆ ವಿಪ್ರಕುಲದಿಂದ ಬಂದ ಜನಿವಾರ ಮತ್ತು ಮೌಂಜಿಗಳನ್ನು ಹರಿದು ಬಿಸುಟ ಸಂದರ್ಭದಲ್ಲಿ ಕಂಡು ಬರುವ ಕ್ರಾಂತಿಕಾರಕ ಮನೋಧರ್ಮ, ತನ್ನ ಪೂರ್ವ ಪರಂಪರೆಯಿಂದ ಭಿನ್ನವಾದ ಒಂದು ಹಾದಿಯನ್ನು ತುಳಿವ ಸಂಕಲ್ಪ ರೂಪದ ಈ ಕ್ರಿಯೆಯ ಹಿಂದೆ ಇರುವ ಆ ದಿಟ್ಟತನ, ತನಗೆ ಸರಿತೋರದ್ದನ್ನು ಕಣ್ಣು ಮುಚ್ಚಿಕೊಂಡು ಅನುಸರಿಸುವುದರಲ್ಲಿ ಅರ್ಥವಿಲ್ಲ ಎಂಬ ವೈಚಾರಿಕಪ್ರಜ್ಞೆ ಇಲ್ಲಿ ಸ್ಫುಟವಾಗಿ ಪ್ರಕಟಗೊಂಡಿದೆ" *(ಸಮಗ್ರ ಗದ್ಯ ೧, ಪುಟ 196).* ಹರಿಹರ ಜನಸಾಮಾನ್ಯರನ್ನು, ದಲಿತವರ್ಗವನ್ನು ಕಥಾನಾಯಕರನ್ನಾಗಿಸಿ ಕೊಂಡನಾದರೂ, ಅವನಲ್ಲಿ ಸಾಮಾಜಿಕ ಪ್ರಜ್ಞೆ ಇಲ್ಲ. ಹರಿಹರನಲ್ಲಿ ಕಂಡು ಬರುವುದು ಭಕ್ತಿಯ ವೈಭವೀಕರಣ. ಒಬ್ಬ ಅಗಸ, ಒಬ್ಬ ಕುಂಬಾರ, ಒಬ್ಬ ಬೆಸ್ತ, ಒಬ್ಬ ಒಕ್ಕಲಿಗ, ಒಬ್ಬ ಕೂಲಿಯವ ಆತನ ಕಾವ್ಯದ ಮುಖ್ಯ ಪಾತ್ರಗಳಾಗುವ ಒಂದು ಅದ್ಭುತ ವಸ್ತು ಬದಲಾವಣೆ ಕಾಣಿಸಿಕೊಂಡರೂ, ಅವರು ಯಾರೂ ಅವರವರ ಸಾಮಾಜಿಕ ಸ್ತರದ ವಾಸ್ತವಗಳನ್ನು ಪ್ರತಿನಿಧಿಸದೆ ಅವರು ಮೂಲತಃ ಹರಿಹರನಿಗೆ ಪ್ರಿಯರಾದ ಶಿವಭಕ್ತರೇ

ಆಗಿ, ಈ ಲೋಕದ ವಾಸ್ತವದಿಂದ ಮೇಲೇರಿ ಆ ಲೋಕದ ಕಡೆಗೆ ನಡೆಯುವ ಪ್ರಯಾಣಿಕರಂತೆ ತೋರುತ್ತಾರೆ ಎನ್ನುತ್ತಾರೆ ಜಿಎಸ್‌ಎಸ್. ಅವರ ಪ್ರಕಾರ 'ಹರಿಹರನ ರಗಳೆಗಳು ಮುಖ್ಯವಾಗಿ ಭಕ್ತಿಜೀವನದ ಅಂತರಂಗದ ಕೈಪಿಡಿಗಳು.'

ರಾಘವಾಂಕ ನಿರ್ಮಿತವಾದ ಷಟ್ಪದಿ ಪರಂಪರೆ ವೀರಶೈವ ಕವಿಗಳಿಗೆ ಮಾರ್ಗದರ್ಶನವಾಯಿತು. ಕಾವ್ಯಧರ್ಮ ಹರಿಹರನದೇ ಆಗಿ ಮುಂದುವರಿಯಿತು. ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಉನ್ನತದರ್ಶನವೂ, ಸಿದ್ಧರಾಮಕಥೆಯಲ್ಲಿ, ಸಿದ್ಧರಾಮನ ಉನ್ನತ ಚಾರಿತ್ರ್ಯವೂ ವ್ಯಕ್ತವಾಗಿದೆ. ಆದರೆ ರಾಘವಾಂಕನ ಸೋಮನಾಥ ಚರಿತೆಯಲ್ಲಿ ಬರುವ ನಾರದ, ಶಿವ, ಆದಯ್ಯ—ಎಲ್ಲರೂ ಮತಭ್ರಾಂತೀಯ ತಾಮಸ ಮೂರ್ತಿಗಳು. ಸೋಮನಾಥ ಚರಿತೆಯನ್ನು ಉದಾತ್ತಕೃತಿ ಎಂದು ಹೊಗಳುವ ಆರ್.ಸಿ. ಹಿರೇಮಠರ ಮಾತನ್ನು ಜಿಎಸ್‌ಎಸ್ ತೀವ್ರವಾಗಿ ಟೀಕಿಸುವಲ್ಲಿ ಅವರ ವೈಚಾರಿಕತೆಯನ್ನು ಕಾಣಬಹುದು... "ಆದರೆ ಸ್ವಮತನಿಷ್ಠೆಯ ಅಹಮ್ಮಿನಲ್ಲಿ ಅನ್ಯಧರ್ಮವನ್ನು ಹಳಿದದ್ದು ಮಾತ್ರವಲ್ಲದೆ, ಅನ್ಯಮತದ ದೇವತಾ ವಿಗ್ರಹಗಳನ್ನು ಪುಡಿಪುಡಿ ಮಾಡಿ ತನ್ನ ದೈವವನ್ನು ಸ್ಥಾಪಿಸುವುದು ತಾಮಸಿಕ ಪ್ರವೃತ್ತಿಯಲ್ಲದೆ ಬೇರೆ ಅಲ್ಲ. ಇಂತಹ ಪ್ರವೃತ್ತಿ ಯಾವ ಮತದಲ್ಲಿದ್ದರೂ ಅದು ಖಂಡನಾರ್ಹವೆ" *(ಸಮಗ್ರ ಗದ್ಯ ೧, ಪುಟ 233).* ಅದೂ ಅಲ್ಲದೆ ರಾಘವಾಂಕನ ವಿರೇಶ ಚರಿತೆ ಮತ್ತು ಶರಭಚಾರಿತ್ರ—ಈ ಎರಡೂ ಕೃತಿಗಳನ್ನು ಅವರು 'ದೇವತೆಗಳ ಕುಸ್ತಿಕಾಳಗ' ಎನ್ನುತ್ತಾರೆ. ಧರಣಿ ಪಂಡಿತನ ಬಿಜ್ಜಳರಾಯನ ಚರಿತೆಯನ್ನು ಧರ್ಮ ಘರ್ಷಣೆಯ ಮನಸ್ಸಿನ ವಿಕಾರ ಎನ್ನುತ್ತಾರೆ. ರತ್ನಾಕರವರ್ಣಿಯ ಭರತೇಶ ವೈಭವದಲ್ಲಿ ಬರುವ ಭೋಗ-ಯೋಗ ಸಮನ್ವಯ ತತ್ತ್ವ ಅಸಹಜವಾದುದು, ಹರಿಹರನ ನಂಬಿಯಣ್ಣ ರಗಳೆ ಮತ್ತು ಮಲುಹಣ ರಗಳೆಗಳಲ್ಲಿ ಬರುವ ಭೋಗ-ಯೋಗ ಸಮನ್ವಯ ತತ್ತ್ವ ಸಹಜವಾದುದು ಎನ್ನುತ್ತಾರೆ ಜಿಎಸ್‌ಎಸ್.

ಸಿದ್ಧಲಿಂಗರ ನಿಜ ಜೀವನ, ಕಾವ್ಯಪುರಾಣಗಳು ಬೆಳೆಯಿಸಿದ್ದ ಸಾಮರ್ಥ್ಯ ಪವಾಡಾದಿ ಲೌಕಿಕ ಪ್ರತೀಕಗಳ ಹೊದರಿನಲ್ಲಿ ಮರೆಯಾಗಿದೆ ಎಂದ ಜಿಎಸ್‌ಎಸ್ "ಒಂದು ವ್ಯಕ್ತಿತ್ವದ ಪರಂಪರೆಯನ್ನು ಪ್ರಾಚೀನತೆಗೆ ಒಯ್ಯುವುದರಿಂದಾಗಲಿ, ಪವಾಡಗಳ ಸಂಖ್ಯೆಯನ್ನು ಗುಣಿಸಿ ತೋರಿಸುವುದರಿಂದಾಗಲಿ, ವ್ಯಕ್ತಿಯ ಶ್ರೇಷ್ಠತೆಯನ್ನ ಸ್ಥಾಪಿಸುವುದು ಸಾಧ್ಯವಿಲ್ಲ ಎಂಬ ಕಹಿ ಸತ್ಯವನ್ನು ಹೇಳಬೇಕಾಗುತ್ತದೆ" *(ಸಮಗ್ರ ಗದ್ಯ ಸಂ. ೧, ಪುಟ 349)* ಎಂದು ಸಿದ್ಧಲಿಂಗರು ಬಸವಣ್ಣನವರಿಗಿಂತ ಪ್ರಾಚೀನ ಮತ್ತು ಎರಡನೆಯ ಪ್ರಭುದೇವ ಎಂದು ಪ್ರಶಂಸಿಸುವ ವಿದ್ವಾಂಸರ ಅಭಿಪ್ರಾಯವನ್ನು ಒಪ್ಪುವುದಿಲ್ಲ. ಜಿಎಸ್‌ಎಸ್ ಎಂದೂ ಪವಾಡಗಳನ್ನು ಒಪ್ಪುವುದಿಲ್ಲ ಅವರು ಕಾರಣಿಕತನ ಮತ್ತು ಪವಾಡಗಳು ಸೇರಿದರೆ ಮೂಡುವುದು ಜೀವನ ಚರಿತ್ರೆಯಲ್ಲ, ಪುರಾಣ ಎನ್ನುತ್ತಾರೆ.

"ಬಡತನವನ್ನು ಒಂದು ವರ ಎಂದು ಪರಿಗಣಿಸುವ ಸಾಮಾಜಿಕ ನಿಲುವು, ಅದೆಷ್ಟೇ ಧರ್ಮಶ್ರದ್ಧೆಯಿಂದ ಬಂದಿರಲಿ, ಮೂಲತಃ ಪ್ರತಿಗಾಮಿಯಾದದ್ದು ಮತ್ತು ನಿಜವಾದ

ಅರ್ಥದಲ್ಲಿ ಅಧಾರ್ಮಿಕವಾದದ್ದು. ಯಾಕೆಂದರೆ ಈ ನಿಲುವು ಯಾವುದೇ ಪ್ರಶ್ನೆಗೆ ಅಥವಾ ಪ್ರತಿಭಟನೆಗೆ ವಿರೋಧಿಯಾಗುತ್ತ, ಯಥಾಸ್ಥಿತಿ ವಾದವನ್ನೇ ಬೆಂಬಲಿಸುತ್ತ, ಸಮಾಜದ ಶೋಷಕ ಶಕ್ತಿಗಳಿಗೆ ಪಟ್ಟಭದ್ರ ನೆಲೆಯೊಂದನ್ನು ಕಟ್ಟಿಕೊಡುತ್ತದೆ" *(ಸಮಗ್ರ ಗದ್ಯ ಸಂ. ೨, ಪುಟ 40)* ಎನ್ನುವ ಜಿಎಸ್ಎಸ್ "ಧರ್ಮನಿಷ್ಠ ನಿಲುವಿನಲ್ಲಿ ಸಾಹಿತ್ಯ ನಡೆಸಿರುವ ಮನುಷ್ಯತ್ವ ಶೋಧನೆ ಮತ್ತು ಅದರಿಂದ ಸಾಹಿತ್ಯಕ್ಕೆ ಒದಗಿರುವ ಆಯಾಮಗಳನ್ನು ನಿರ್ಲಕ್ಷಿಸಬಾರದು" ಎನ್ನುವುದನ್ನು ಗಮನಿಸುತ್ತಾರೆ. *(ಸಮಗ್ರ ಗದ್ಯ ಸಂ. ೨, ಪುಟ 40).* ಮತ್ತೊಂದು ಕಡೆ, ಪ್ರಭುನಿಷ್ಠ ಮತ್ತು ಧರ್ಮನಿಷ್ಠಗಳ ನಿಲುವುಗಳ ವ್ಯತ್ಯಾಸ ತೆಳುವಾಗಿರುತ್ತದೆ. ರಾಜ ದೇವರ ಪ್ರತಿನಿಧಿ ಆದ್ದರಿಂದ ಧರ್ಮನಿಷ್ಠೆಯೂ ಪ್ರಭುನಿಷ್ಠೆಯ ಬೇರೊಂದು ಸ್ವರೂಪ. ಪ್ರಭುನಿಷ್ಠ ಮತ್ತು ಧರ್ಮನಿಷ್ಠ ಎರಡನ್ನೂ ನಿರಾಕರಿಸಿದಾಗ ಹುಟ್ಟುವ ಸಾಮಾಜಿಕ ಪ್ರಜ್ಞೆ ಮಹತ್ವದ್ದು. ಅದರಲ್ಲಿ ಮನುಷ್ಯ-ಮನುಷ್ಯರ ನಡುವೆ ಮಾನವೀಯ ಕಾಳಜಿಗಳು ಹೆಚ್ಚುತ್ತವೆ ಎನ್ನುತ್ತಾರೆ. ಕನ್ನಡದ ದೇಸಿ ಕವಿಗಳು ಮತ್ತು ಶರಣರು ಧರ್ಮನಿಷ್ಠೆಯನ್ನು ನಿರಾಕರಿಸಲಿಲ್ಲ. ಹರಿಹರ ಪ್ರಭುನಿಷ್ಠೆಯನ್ನು ನಿರಾಕರಿಸಿದರೂ, ಅವನ ಧರ್ಮನಿಷ್ಠೆ ಪ್ರಭುನಿಷ್ಠೆಯ ಬೇರೊಂದು ಸ್ವರೂಪ. ಅದು ಭಕ್ತ-ಭಗವಂತರ ಸಂಬಂಧ. ಭಗವಂತನೇ ಪ್ರಭುವಾಗುತ್ತಾನೆ, ದೊರೆಗಳ ದೊರೆಯಾಗುತ್ತಾನೆ. ಜಿಎಸ್ಎಸ್ ಸಾಮಾಜಿಕ ಪ್ರಜ್ಞೆಯೊಂದೇ ಒಂದು ಕೃತಿಯ ಸಾಹಿತ್ಯ ಮೌಲ್ಯವನ್ನು ಅಳೆಯುವ ಮಾನದಂಡವಲ್ಲ ಎನ್ನುತ್ತಾರೆ. ಹರಿಹರನಲ್ಲಿ ಎದ್ದು ಕಾಣುವ ಸಾಮಾಜಿಕ ಕೊರತೆಯಿಂದ ಅವನ ಕೃತಿಗಳ ಸಾಹಿತ್ಯ ಮೌಲ್ಯಗಳಿಗೆ ಯಾವ ಕುಂದೂ ಬಂದಿಲ್ಲ ಎನ್ನುತ್ತಾರೆ. "ಕವಿಗೆ ಅಂದಿನ ಸಮಾಜವನ್ನೂ ಒಳಗೊಳ್ಳುವ ಮತ್ತು ಅದನ್ನೂ ಮೀರಿದ ಸಮಗ್ರ ಬದುಕು ಮುಖ್ಯ" *(ಸಮಗ್ರ ಗದ್ಯ ೨, ಪುಟ 34).* ಕವಿ ಸಮಾಜವನ್ನು ನೋಡುವುದು ಸಮಾಜಶಾಸ್ತ್ರಜ್ಞನಿಗಿಂತ ಭಿನ್ನವಾಗಿರುತ್ತದೆ.

ಭಕ್ತಿಪಂಥ—ಅದು ಶೈವವೊ, ವೈಷ್ಣವವೊ—ಸ್ವರೂಪ ಒಂದೇ. ವ್ಯಾಸ ಭಾರತದ ಕತೆಯನ್ನು ಕುಮಾರವ್ಯಾಸ ಕೃಷ್ಣಕೇಂದ್ರಿತ ಕಥೆಯನ್ನಾಗಿಸಿದ. ಕೃಷ್ಣನ ರಾಯಭಾರದ ಸಂದರ್ಭದ ಚಿತ್ರಣದಲ್ಲಿ ಪಂಪನದು ಒಂದು ಸಂಸ್ಕೃತಿಯ ಸಂದರ್ಭದ ಗಂಭೀರವಾದ ರಾಜತಾಂತ್ರಿಕ ವ್ಯವಹಾರದಂತೆ ತೋರಿದರೆ, ಕುಮಾರವ್ಯಾಸನದು ಅಗ್ಗದ ಜನಪ್ರಿಯತೆಯ ದೊಂಬರಾಟದಂತೆ ತೋರುತ್ತದೆ ಎನ್ನುತ್ತಾರೆ ಜಿಎಸ್ಎಸ್. ಅಲ್ಲದೆ "ಪಂಪನಿಗಿರುವ ವೈಚಾರಿಕತೆಗೆ ಹೋಲಿಸಿದರೆ, ಕುಮಾರವ್ಯಾಸ ಎಷ್ಟೋ ವೇಳೆ ಪರಂಪರಾಗತವಾದ ಅವಿಚಾರಿತ ಸಂಗತಿಗಳನ್ನು—ಉದಾಹರಣೆ ವರ್ಣಾಶ್ರಮ ಜಾತಿ ಪದ್ಧತಿ ಇತ್ಯಾದಿಗಳನ್ನು—ಯಾವ ಚರ್ಚೆ ಅಥವಾ ಚಿಕಿತ್ಸೆಗೂ ಒಳಪಡಿಸದೆ ಮಂಡಿಸುವ ಕ್ರಮವು ದಂಗುಬಡಿಸು ವಂಥದಾಗಿದೆ. ಕುಮಾರವ್ಯಾಸನ ಕೃಷ್ಣಭಕ್ತಿಯ ಆವೇಶ ಕತೆಯೊಳಗಿನ ಎಷ್ಟೋ ಸನ್ನಿವೇಶಗಳನ್ನೂ, ಹಾಗೂ ಪಾತ್ರಗಳನ್ನೂ, ಕೃಷ್ಣನ ಮಹಿಮಾತಿಶಯದ ಪ್ರದರ್ಶನಕ್ಕೆ,

ಹಲವು ವೇಳೆ ಕೇವಲ ಮಾಧ್ಯಮವನ್ನಾಗಿ ಮಾಡಿಬಿಡುತ್ತದೆ. ಆದರೆ ಕಿರಾತಾರ್ಜುನೀಯ, ಅರ್ಜುನ-ಊರ್ವಶೀ ಪ್ರಸಂಗದಂಥ ಸಂದರ್ಭಗಳಲ್ಲಿ ಕುಮಾರವ್ಯಾಸನ ಪ್ರತಿಭೆ ಏರುವ ಎತ್ತರಕ್ಕೆ ಹೋಲಿಸಿದರೆ, ಇದೇ ಸಂದರ್ಭಗಳ ನಿರ್ವಹಣೆ ಪಂಪನಲ್ಲಿ ತೀರಾ ಕುಬ್ಜವೂ ಸಪ್ಪೆಯಾಗಿಯೂ ತೋರುತ್ತದೆ" *(ಸಮಗ್ರ ಗದ್ಯ ೧, ಪುಟ 279)*. ಹೀಗೆ ಈ ಇಬ್ಬರು ಮಹತ್ವದ ಕವಿಗಳ ಪ್ರತಿಭೆಯ ಏರಿಳಿತಗಳನ್ನು ಜಿಎಸ್‌ಎಸ್ ಗುರುತಿಸುತ್ತಾರೆ.

ರಾಮಾಯಣದಲ್ಲಿ ಬರುವ ರಜಕನ ಪಾತ್ರ ಪ್ರಕ್ಷಿಪ್ತವಾದುದು. ಪುರಾಣಕರ್ತರು ಅಗಸನೊಬ್ಬನನ್ನು ನಿರ್ಮಿಸಿ ಜನಾಪವಾದದ ಮೈಲಿಗೆಯನ್ನು ಅವನ ಬೆನ್ನಿನ ಮೇಲೆ ಹೇರಿ ಅವನನ್ನು ಪ್ರಖ್ಯಾತನನ್ನಾಗಿ ಮಾಡಿದರು. ಮುಂದಿನ ಕವಿಗಳು ಅದನ್ನೇ ಹಿಂಬಾಲಿಸಿದರು "....ಅಗಸನ ಮಾತನ್ನು ವೇದವಾಕ್ಯವೆಂದು ಭಾವಿಸಿ, ತಮ್ಮಂದಿರ ಸಲಹೆಗಳನ್ನು ಕಡೆಗಣಿಸಿ, ಅಗ್ನಿಶುದ್ಧಳಾದ ತನ್ನ ಮಡದಿಯನ್ನು ತ್ಯಜಿಸಲು ನಿಶ್ಚಯಿಸಿದ ಪುರಾಣಗಳ ಹಾಗೂ ಲಕ್ಷ್ಮೀಶ ಮುದ್ದಣ ಇವರ ಶ್ರೀರಾಮ ದಿಢೀರನೆ ಉರುಳಿ ಬಿದ್ದಿದ್ದಾನೆ. ಒಟ್ಟಿನಲ್ಲಿ ಜನ ಸಮಷ್ಟಿಯ ಮರ್ಯಾದೆಯನ್ನುಳಿಸಲು ಪುರಾಣಕರ್ತರು ತಂದ ಈ ರಜಕ, ಶ್ರೀರಾಮನ ಮರ್ಯಾದೆಯನ್ನು ತೆಗೆದಂತಾಯಿತು. ಈ ರಜಕನ ಪಾತ್ರವನ್ನು ತಂದದ್ದರಿಂದ ಅಯೋಧ್ಯೆಯ ಜನಸಮಷ್ಟಿಯ ಗೌರವನ್ನುಳಿಸಿದೆವೆಂದು ಭಾವಿಸಿದವರಿಗೆ ತಿಳಿಯದಾಯಿತು, ಈ ಬದಲಾವಣೆಯಿಂದ ಆ ಜನ ಸಮಷ್ಟಿಯ ಮರ್ಯಾದೆಯೂ ಹೋಗಬಹುದೆಂದು" *(ಸಮಗ್ರ ಗದ್ಯ ಸಂ. ೧, ಪುಟ 374)*. ಇಂಥ ಪ್ರಸಂಗಗಳನ್ನು ವ್ಯಾಖ್ಯಾನಿಸುವಲ್ಲಿ ಜಿಎಸ್‌ಎಸ್ ಅವರ ವೈಚಾರಿಕತೆಯ ಒಳನೋಟಗಳು ಮಿಂಚುತ್ತವೆ ಮತ್ತು ಮಾತು ಸೂತ್ರ ಬದ್ಧವಾಗುತ್ತವೆ. "ರಾಮನಕಾಲದ ಜನದ ಮರ್ಯಾದೆಯನ್ನುಳಿಸಲು ಹೋಗಿ ನಮ್ಮ ಪುರಾಣಕರ್ತರು ರಜಕನನ್ನು ತಂದರು, ಆದರೆ ರಾಮನನ್ನು ಕೊಂದರು" *(ಸಮಗ್ರ ಗದ್ಯ ಸಂ.೨, ಪುಟ 373)*.

'ಅಕ್ಷಯ ವಸ್ತ್ರ' ಜಿಎಸ್‌ಎಸ್ ಅವರ ಒಂದು ಸಂಶೋಧನೆಯ ಲೇಖನ. ಅದು ಅವರ ವ್ಯುತ್ಪತ್ತಿಗೆ ಸಾಕ್ಷಿಯಾಗಿದೆ. ಈ ಪ್ರಸಂಗ ಮಹಾಭಾರತದ ಎಲ್ಲಾ ಪಾಠಗಳಲ್ಲಿಯೂ ದೊರೆಯುವುದಿಲ್ಲ. ಅಕ್ಷಯ ಪ್ರಸಂಗವೂ ಪ್ರಕ್ಷಿಪ್ತವೇ. "ಈ ಅವಮಾನಕರವಾದ ಘಟನೆ (ಅಕ್ಷಯ ವಸ್ತ್ರ) ನಡೆದಿದ್ದ ಪಕ್ಷದಲ್ಲಿ, ಅದು ಅಂದಿನ ಮಹಾಭಾರತ ಯುಗದ ಸಭ್ಯತೆಗೆ, ಸಂಸ್ಕೃತಿಗೆ ಕಳಂಕಪ್ರಾಯವಾದುದಲ್ಲವೆ?" ಎಂದು ಪ್ರಶ್ನಿಸುವಲ್ಲಿ ಅವರ ವೈಚಾರಿಕತೆಯನ್ನು ಗುರುತಿಸಬಹುದು.

ಪ್ರಾಚೀನ ಸಾಹಿತ್ಯಕ್ಕೆ ಧರ್ಮ ಪ್ರೇರಣೆಯಾದರೆ, ಆಧುನಿಕ ಸಾಹಿತ್ಯದಲ್ಲಿ ಧರ್ಮದ ನಿರಾಕರಣೆಯನ್ನು ಗುರುತಿಸಬಹುದು. "ಆಧುನಿಕ ಕನ್ನಡ ಸಾಹಿತ್ಯ ಚಳುವಳಿಗಳ ಒಂದು ಮುಖ್ಯ ಲಕ್ಷಣವೆಂದರೆ ಅವೆಲ್ಲವೂ ಮೂಲತಃ ಸಾಂಸ್ಥಿಕ ಧರ್ಮಗಳ ನಿರಾಕರಣೆ ಮಾಡುವ ಸ್ವರೂಪದವೂ ವ್ಯವಸ್ಥೆಯ ವಿರೋಧಿಸುವಂಥವೂ ಆಗಿವೆ ಎನ್ನುವುದು. ಇದರಿಂದಾಗಿ ಇಡೀ ಕನ್ನಡ ಸಾಹಿತ್ಯವನ್ನು ಉದ್ದಕ್ಕೂ ನಿಯಂತ್ರಿಸುತ್ತ ಬಂದ ಮತಧರ್ಮ ಹಾಗೂ ಪ್ರಭುತ್ವಗಳನ್ನು ಮೊದಲಿಗೆ ತಿರಸ್ಕರಿಸುವ ದಿಟ್ಟತನದ ನಿಲುವೊಂದು ಆಧುನಿಕ ಕನ್ನಡ

ಸಾಹಿತ್ಯದಲ್ಲಿ ರೂಪುಗೊಂಡು ವಾಸ್ತವತೆ, ವೈಚಾರಿಕತೆ, ಪ್ರತಿಭಟನೆ, ಮತಧರ್ಮ ನಿರಪೇಕ್ಷತೆ, ಮಾನವೀಯತೆ ಇತ್ಯಾದಿ ಲಕ್ಷಣಗಳಿಂದ ಆಧುನಿಕ ಸಾಹಿತ್ಯವು ನಿಜವಾದ ಅರ್ಥದಲ್ಲಿ ಜನಪರವಾಯಿತೆಂಬುದು ಗಮನಿಸಬೇಕಾದ ಸಂಗತಿಯಾಗಿದೆ" *(ಸಮಗ್ರ ಗದ್ಯ ಸಂ.೨, ಪುಟ 429).*

ಸಾಹಿತ್ಯ ಸೌಂದರ್ಯವನ್ನೇ ಕುರಿತಿರಲಿ, ಆದರ್ಶವನ್ನೇ ಕುರಿತಿರಲಿ, ಆಧ್ಯಾತ್ಮವನ್ನೇ ಕುರಿತಿರಲಿ ಅದು ಮೊದಲು ಕವಿತೆಯಾಗಿ ಅನುಭೂತಿಯಾಗಿದೆಯೇ ಎಂಬುದು ಮುಖ್ಯ ಎನ್ನುತ್ತಾರೆ ಜಿ.ಎಸ್.ಎಸ್. ಅವರಿಗೆ ನಿಜವಾಗಿ ವಿಮರ್ಶೆ ಬೆಳೆಯಬೇಕಾದುದು ಓದುಗರಿಗಾಗಿ, ಅವರಲ್ಲಿ ಸಾಹಿತ್ಯಾಭಿರುಚಿಯನ್ನೂ, ತರತಮ ವಿವೇಕವನ್ನೂ ಮತ್ತು ಅವರ ವೈಚಾರಿಕ ಎಚ್ಚರವನ್ನು ಮತ್ತು ಜೀವನ ದೃಷ್ಟಿಯನ್ನೂ ವೃದ್ಧಿಗೊಳಿಸುವುದಕ್ಕಾಗಿ ಎನ್ನುತ್ತಾರೆ. ಕಾವ್ಯ ವಿಮರ್ಶೆಯ ಲೇಖನಗಳಾಗಲಿ, ಕಾವ್ಯಮೀಮಾಂಸೆಯನ್ನು ಕುರಿತು ಬರೆದ ಲೇಖನಗಳಾಗಲಿ ಅಥವಾ ಇತರ ಗದ್ಯ ಬರವಣಿಗೆಯಾಗಲಿ ಜಿಎಸ್‌ಎಸ್ ಸಾಹಿತ್ಯದೃಷ್ಟಿ ಎದ್ದು ಕಾಣುತ್ತದೆ. ಅವರದ್ದು ಪ್ರಧಾನವಾಗಿ ಕಾವ್ಯ ಸಂವೇದನಾದೃಷ್ಟಿಯೇ ಹೊರತು, ಶಾಸ್ತ್ರದೃಷ್ಟಿಯಲ್ಲ. "ಯಾವುದೇ ಮೌಲಿಕವಾದ ಸಿದ್ಧಾಂತಗಳಿಗೆ ಹಾಗೂ ಬದಲಾವಣೆಗೆ, ಸ್ಪಂದಿಸದೆ ಇರುವ ಬರಹಗಾರ ಎಂದೂ ಬೆಳೆಯಲಾರ. ಮತ್ತು ಯಾವುದೇ ಒಂದು ಚಳುವಳಿಯ ಧೋರಣೆ ಗಳಿಗೆ ಸಂಪೂರ್ಣವಾಗಿ ತನ್ನನ್ನು ಬದ್ಧವಾಗಿರಿಸಿಕೊಂಡ ಬರಹಗಾರನೂ ಬೆಳೆಯಲಾರ. ನಿಜವಾದ ಸಾಹಿತ್ಯ ನಿರ್ಮಿತಿ ಯಾವುದೇ ಚಳುವಳಿ ಅಥವಾ ಸಿದ್ಧಾಂತಗಳನ್ನು ಮೀರಿದಾಗಲೇ ಹೆಚ್ಚು ಅರ್ಥಪೂರ್ಣವಾಗುವುದೆಂಬುದು ನನ್ನ ತಿಳಿವಳಿಕೆ" *(ಸಮಗ್ರ ಗದ್ಯ ಸಂ.೨, ಪುಟ 420).* ಜಿಎಸ್‌ಎಸ್ ಅವರ ಸಾಹಿತ್ಯ ವಿಮರ್ಶೆಯ ಹಿಂದಿರುವ ವೈಚಾರಿಕ ನಿಲುವು ಇಂಥ ಮುಕ್ತಪ್ರಜ್ಞೆಯಿಂದ ರೂಪುಗೊಂಡದ್ದು.

■

# ಕುವೆಂಪು ಪರಂಪರೆ ಮತ್ತು ಜಿಎಸ್ಎಸ್

ಎ. ಚಂದ್ರಶೇಖರ ನಂಗಲಿ

ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಜಿ.ಎಸ್.ಎಸ್ ಶಿಷ್ಯರೆಲ್ಲರ ಹೃದಯಗಳಲ್ಲಿ ಅನುರಣಗೊಳ್ಳುವ ನುಡಿಗಳಿವು:

.......... ಸದ್ದುಗದ್ದಲದ ತುತ್ತೂರಿ ದನಿಗಳಾಚೆಗೆ ನಿಂತು
ನಿಶ್ಯಬ್ದದಲ್ಲಿ ನೆನೆಯುತ್ತೇನೆ
ಗೌರವದಿಂದ.

ನಕ್ಷತ್ರ ಖಚಿತ ನಭವಾಗಿ ಹಬ್ಬಿಕೊಂಡಿದ್ದೀರಿ
ನನ್ನ ಸುತ್ತ.
ಪಟ ಬಿಚ್ಚಿ ದೋಣಿಯನ್ನೇರಿ ಕುಳಿತಿದ್ದೇನೆ
ನೀವಿತ್ತ ಹೊಸಹುಟ್ಟುಗಳ ಹಾಕುತ್ತ

*('ಕುವೆಂಪು ಅವರಿಗೆ' ಕವನದಿಂದ)*

ಕುವೆಂಪು ಜೀವಂತವಿದ್ದಾಗಲೆ, ಅವರು ಬೀರಿದ ಪ್ರಭಾವಗಳ ಪ್ರಮುಖ ವೈರುಧ್ಯಗಳನ್ನು ಮೇಲಿನ ನುಡಿಗಳಲ್ಲಿ ಜಿಎಸ್ಎಸ್ ಬಹು ಸಮರ್ಥವಾಗಿ ಬಿಂಬಿಸಿದ್ದಾರೆ. (i) ಶಬ್ದ ಸಂಭ್ರಮದಲ್ಲಿ ಮುಂದುಗಾಣದವರು (ii) ನಿಶ್ಯಬ್ದ ಧ್ಯಾನದಲ್ಲಿ ಹೊಸಹುಟ್ಟು ಹಾಕುತ್ತಿರುವವರು. ಹೀಗೆ ಖಚಿತವಾಗಿ ಗುರುತಿಸಿಕೊಂಡಿದ್ದರಿಂದಲೇ ಜಿಎಸ್ಎಸ್, ಕುವೆಂಪು ಪರಂಪರೆಯ ಚಲನಶೀಲ ಪ್ರವರ್ತಕರಾಗಿ, ಜೊತೆಗೆ ಕನ್ನಡ ಸಂಸ್ಕೃತಿಯ ಗತಿಶೀಲ ಚಿಂತಕರಾಗಿ ಕಂಡುಬರುತ್ತಾರೆ. ಜಿ.ಎಸ್.ಎಸ್ ಅವರದು 'ಗಂಡಭೇರುಂಡ ಪ್ರತಿಭೆ' (ಈ ಮಾತನ್ನು ತರಗತಿಯಲ್ಲಿ ಜಿ.ಎಸ್.ಎಸ್ ಪಂಪನ ಬಗ್ಗೆ ಬಳಸಿದ್ದರು. ನಾನೀಗ ಈ ರೂಪಕವನ್ನು ಜಿ.ಎಸ್.ಎಸ್ ಅವರಿಗೇ ಅನ್ವಯಿಸುತ್ತಿದ್ದೇನೆ.) ಏಕಕಾಲಕ್ಕೆ ಸಂಸ್ಕೃತಿ ಚಿಂತಕರೂ ಸೃಜನಶೀಲ ಕವಿಗಳೂ ಆಗಿರುವ ಜಿ.ಎಸ್.ಎಸ್ ಅವರದು ಬಹುಮುಖಿ ವ್ಯಕ್ತಿತ್ವ.

## ಭಾಗ - ೧

"ಸಾಹಿತ್ಯ ಸೃಷ್ಟಿ ಮೊದಲು; ಸಾಹಿತ್ಯ ಮೀಮಾಂಸೆ ನಂತರ"—ಎಂಬ ಮಾತಿದೆ. ಆಧುನಿಕ ಕನ್ನಡ ಸಾಹಿತ್ಯವು ನವೋದಯ, ಪ್ರಗತಿಶೀಲ, ನವ್ಯ ಮತ್ತು ದಲಿತ-ಬಂಡಾಯವೆಂಬ ಚತುರ್ಭುಜಗಳಿಂದ ವಿರಾಜಮಾನವಾಗುವ ಹೊತ್ತಿಗೆ, ಸಾಹಿತ್ಯ ಮೀಮಾಂಸೆಗೆ ಸಂಬಂಧಪಟ್ಟಂತೆ ಬಹುದೊಡ್ಡ ಗೊಂದಲ ನೆಲೆಯೂರಿತ್ತು. ಭಾರತೀಯ ಕಾವ್ಯಮೀಮಾಂಸೆ ಮತ್ತು ಪಾಶ್ಚಾತ್ಯ ಕಾವ್ಯಮೀಮಾಂಸೆಗಳು ಪ್ರತ್ಯೇಕವಾದ ಎರಡು ದಡಗಳಂತಿದ್ದು ಅವುಗಳ ನಡುವೆ "ಚಂದಿರನ ಹೊತ್ತು ಓಡಾಡುವ" ತುಂಗಭದ್ರೆಯ ಮನಸ್ಸೊಂದು ಅವಶ್ಯವಾಗಿತ್ತು. ಈ ಕಾರ್ಯವನ್ನು ಜಿ.ಎಸ್.ಎಸ್ ಯಶಸ್ವಿಯಾಗಿ ನಿರ್ವಹಿಸಿದ್ದಾರೆಂಬುದು ಇದೀಗ ಇತಿಹಾಸವಾಗಿದೆ.

ಈ ದೃಷ್ಟಿಯಿಂದ ನೋಡಿದರೆ ಕಳೆದ ಶತಮಾನದ 'ಅರವತ್ತರ ದಶಕ' ಜಿಎಸ್‌ಎಸ್ ಬಾಳಿನಲ್ಲಿ ಮಾತ್ರವಲ್ಲ, ಕನ್ನಡ ಸಂಸ್ಕೃತಿಯ ಗತಿಶೀಲತೆಯಿಂದಲೂ ಗಮನಾರ್ಹವಾಗಿದೆ: *ವಿಮರ್ಶೆಯ ಪೂರ್ವ ಪಶ್ಚಿಮ* (1961), *ಸೌಂದರ್ಯ ಸಮೀಕ್ಷೆ* (1965), *ಪರಿಶೀಲನ* (1967), *ಗತಿಬಿಂಬ* (1969)—ಕೃತಿಗಳ ಮೂಲಕ ಜಿಎಸ್‌ಎಸ್ ಸಾಹಿತ್ಯ ಸಿದ್ಧಾಂತ, ಸಾಹಿತ್ಯ ವಿಮರ್ಶೆ ಮತ್ತು ಸಂಸ್ಕೃತಿ ಚಿಂತನೆಗಳಿಗೆ 'ಕೈಮರ' (Hand post) ಆಗಿದ್ದಾರೆ. ಈ ಕೃತಿಗಳಲ್ಲಿ 1. ತೌಲನಿಕ ಅಧ್ಯಯನ ಕ್ರಮ, 2. ಸೌಂದರ್ಯ ಮತ್ತು ಸಂಸ್ಕೃತಿಗಳ ಸಹಸಂಬಂಧಗಳು, 3. ಪರಂಪರೆ ಮತ್ತು ವ್ಯಕ್ತಿ ಪ್ರತಿಭೆ, 4. ಚಲನಶೀಲವಾದ ವಸ್ತುಗತಿ ತತ್ತ್ವಗಳನ್ನು ಜಿಎಸ್‌ಎಸ್ ಲಕ್ಷ್ಯ-ಲಕ್ಷಣ ಸಹಿತವಾಗಿ ಸ್ಪಷ್ಟೀಕರಿಸಿದ್ದಾರೆ. ಹೀಗೆ, ಸ್ಪಷ್ಟೀಕರಿಸುವಾಗ ಇಡೀ ಸಾಹಿತ್ಯ ಪರಂಪರೆಯ ಸಂದರ್ಭದಲ್ಲಿಟ್ಟು ನೋಡುವುದರಿಂದ ಪ್ರತಿಪಾದಿಸುವ ವಿಚಾರಗಳು 'ಅಧಿಕೃತ'ವಾಗಿಬಿಡುತ್ತವೆ.

'ಸಾಹಿತ್ಯ ಕಲೆ'ಯನ್ನು ಕುರಿತು ಶಾಸ್ತ್ರೀಯ ವಿವೇಚನೆ ಮಾಡುವುದಕ್ಕೂ ಒಂದು ಇತಿಹಾಸವಿದೆ. ಪ್ರಾಚೀನವಾದ 64 ಕಲೆಗಳಲ್ಲೊಂದಾದ 'ಕ್ರಿಯಾಕಲ್ಪ'ವನ್ನು ಕಾವ್ಯಲಕ್ಷಣಶಾಸ್ತ್ರವೆಂದೇ ವಿ. ರಾಘವನ್ ಅಭಿಪ್ರಾಯಪಟ್ಟಿದ್ದಾರೆ. ಆದರೆ, ಇದು ತನ್ನ ಸ್ವರೂಪ ಮತ್ತು ವ್ಯಾಪ್ತಿಗಳನ್ನು ಸಮರ್ಪಕವಾಗಿ ಕಂಡುಕೊಳ್ಳುವ ಕಾಲಕ್ಕೆ 'ಅಲಂಕಾರ ಶಾಸ್ತ್ರ'ವೆಂಬ ಹೆಸರು ಪಡೆದುಕೊಂಡಿತು. ಕಾಲಕ್ರಮೇಣ, 'ಅಲಂಕಾರ'ವೆಂಬ ಪರಿಭಾಷೆ ಅರ್ಥಸಂಕೋಚಕ್ಕೆ ಒಳಗಾದಾಗ ನವೀನಲಾಕ್ಷಣಿಕರ ಕಾಲಕ್ಕೆ 'ಕಾವ್ಯ ಮೀಮಾಂಸೆ' ಎಂದು ಕರೆಸಿಕೊಂಡಿತು. ಆಧುನಿಕ ಸಂದರ್ಭದಲ್ಲಿ 'ಕಾವ್ಯ'ವೆಂಬ ಪರಿಭಾಷೆಯು ತನ್ನ ಅರ್ಥವಿಸ್ತಾರವನ್ನು ಕಳೆದುಕೊಂಡು 'ಪೊಯೆಟ್ರಿ'ಗಷ್ಟೆ ಪರಿಮಿತಗೊಂಡಾಗ, ಇಡೀ 'ಸಾಹಿತ್ಯಕಲೆ'ಯ ಸಾರಸರ್ವಸ್ವವನ್ನು ನಿರ್ದೇಶಿಸಲು ಮತ್ತೊಂದು ಪದದ ಅಗತ್ಯ ಎದುರಾಯಿತು. ಆಗ ಪಾಶ್ಚಾತ್ಯರ 'ಎಸ್ತೆಟಿಕ್ಸ್'ಗೆ ಸಂವಾದಿಯಾಗಿ 'ಸೌಂದರ್ಯಶಾಸ್ತ್ರ'ವೆಂಬ ಪದವನ್ನಿಟ್ಟುಕೊಂಡು ಜಿಎಸ್‌ಎಸ್ ಅವರು 'ಸೌಂದರ್ಯ ಸಮೀಕ್ಷೆ'ಯನ್ನು ನಡೆಸಿಕೊಟ್ಟರು.

"ಸೌಂದರ್ಯವನ್ನು ಕುರಿತು ಆಲೋಚಿಸುವಾಗ ಅದನ್ನು ನಿರ್ವಾತದಲ್ಲಿಟ್ಟು

ನೋಡುವುದು ಸರಿಯಾಗಲಾರದು"—ಎಂಬ ಡಾ. ಕೆ.ವಿ. ನಾರಾಯಣ ಅವರ ನಿರ್ಣಯ *(ಸ್ನೇಹ ಕಾರ್ತೀಕ, ಪು.295)* ಒಪ್ಪತಕ್ಕ ಮಾತಾಗಿದೆ. ಭಾರತೀಯ ಕಾವ್ಯಮೀಮಾಂಸೆಯ ಸಂದರ್ಭದಲ್ಲಿ ಸಾಹಿತ್ಯಕಲೆಯ ವಿಚಾರಗಳನ್ನು ಅನಗತ್ಯವಾಗಿ ತಾತ್ವೀಕರಿಸುತ್ತಾ, ದೈವೀಕರಿಸುತ್ತಾ ಅದಕ್ಕೊಂದು ಪವಿತ್ರತಮ ಪರಿವೇಷವನ್ನು ತೊಡಿಸಿಬಿಟ್ಟಿದ್ದರು. 'ರಸಾನುಭವ'ವನ್ನು ಬ್ರಹ್ಮಾನಂದ ಸಹೋದರನೆಂದೂ, ರಸೋವೈಸಃ ಎಂದೂ ಕರೆದಿದ್ದರು. 'ಸೌಂದರ್ಯಶಾಸ್ತ್ರ'ವನ್ನು ಇಂತಹ ಮಡಿವಂತಿಕೆಯಿಂದ, ದೇವತಾ ವ್ಯಾಖ್ಯಾನಗಳಿಂದ, ಅಲೌಕಿಕ ನೆಲೆಗಳಿಂದ ಬಿಡಿಸಿ, ಲೌಕಿಕದಲ್ಲಿ ಬೆಳಗುವ ಕಾರ್ಯವನ್ನು ಜಿಎಸ್ಎಸ್ ಬಹು ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ಇದಕ್ಕೆ ಕುವೆಂಪು ಅವರ ಸಮರ್ಥ ಮಾರ್ಗದರ್ಶನವಿತ್ತೆಂಬುದನ್ನು ಮರೆಯಲಾಗದು.

'ಸೌಂದರ್ಯಾನುಭವ'ವನ್ನು ಕುವೆಂಪು ಎಷ್ಟೊಂದು ವಿಶಾಲವಾಗಿ ನೋಡುತ್ತಾರೆಂಬುದಕ್ಕೆ ಈ ಮಾತುಗಳನ್ನೊಮ್ಮೆ ಪರಿಶೀಲಿಸಿ: "ಸೌಂದರ್ಯಾನುಭವ ಕಲಾ ಕಾವ್ಯಾದಿಗಳಿಗೆ ಮಾತ್ರ ಸೀಮಾಬದ್ಧವಾಗಿಲ್ಲ ಎಂಬುದೂ ಅನುಭವ ವೇದ್ಯ. ಚೇತೋಹಾರಿಯಾದ ಪರ್ವತಾರಣ್ಯ ನಿಸರ್ಗದೃಶ್ಯವನ್ನೊ ಸೂರ್ಯಾಸ್ತವನ್ನೊ ಚಂದ್ರೋದಯವನ್ನೊ ಸಮುದ್ರವನ್ನೊ ಆಕಾಶದ ಮೇಘ ಪಂಕ್ತಿಗಳನ್ನೊ ಯಾವ ಲೌಕಿಕ ಪ್ರಯೋಜನದ ಆಶೆ ಭಯ ಆತಂಕಗಳ ಗೊಂದಲವೂ ಇಲ್ಲದೆ, ಸಂಗದೂರವೆಂಬಂತಿರುವ ಧ್ಯಾನಮಯ ಪ್ರಜ್ಞೆಯಿಂದ ಕವಿ ಹೃದಯವುಳ್ಳವರು ಯಾರೆ ಆಗಲಿ ವೀಕ್ಷಿಸುತ್ತಿರುವಾಗ ದೊರೆಕೊಳ್ಳುವ ಸೌಂದರ್ಯಾನುಭವದ ಆನಂದವು ರಸಾನುಭವಕ್ಕಿಂತ ಯಾವ ವಿಧದಲ್ಲಿಯೂ ಭಿನ್ನವಾದುದಲ್ಲ."

*—ದಾರ್ಶನಿಕ ಕಾವ್ಯಮೀಮಾಂಸೆ, ಪು.227.*

'ಸೌಂದರ್ಯಾನುಭವ'ವನ್ನು ಸಾಹಿತ್ಯಕಲೆಯ ಖಾಸಗಿ ಆಸ್ತಿಯಂತೆ ಪರಿಗಣಿಸದೆ, ಜನಸಮಷ್ಟಿಯ ನೆಲೆಯಲ್ಲಿ ಕುವೆಂಪು ನೋಡಿರುವುದರಿಂದಲೇ ಅವರು ಬರೆದಿರುವ ಕಾದಂಬರಿಗಳಲ್ಲಿ ಸೆಗಣಿ ಹುಳುವಿನ ಹೋರಾಟದಿಂದ ಸ್ಫೂರ್ತಿ ಪಡೆಯುವ ಗುತ್ತಿ, ಸೂರ್ಯೋದಯ ದರ್ಶನದಿಂದ ಸಂಭ್ರಮಿತಳಾಗುವ ತಿಮ್ಮಿ ಕಂಡುಬರುತ್ತಾರೆ... ಇದೇ ದಾರಿಯಲ್ಲಿ ಮುಂದುವರೆಯುವ ಜಿಎಸ್ಎಸ್, ಸಾಹಿತ್ಯ ಮತ್ತು ಸಂಸ್ಕೃತಿಯ ಸಹ ಸಂಬಂಧಗಳನ್ನು 'ಸೌಂದರ್ಯ ಸಮೀಕ್ಷೆ'ಯಲ್ಲಿ ಆದ್ಯಂತವಾಗಿ ಚರ್ಚಿಸಿದ್ದಾರೆ: ಸೌಂದರ್ಯ ದೃಷ್ಟಿಯನ್ನು ದೈವಿಕ ನೆಲೆಯಲ್ಲಿ ವೈಭವೀಕರಿಸದೆ, ಅದನ್ನು ವ್ಯಕ್ತಿಯ ಕಣ್ಣು, ಜನಾಂಗದ ಕಣ್ಣು, ಸಂಸ್ಕೃತಿ-ನಾಗರಿಕತೆಯ ಕಣ್ಣು ಎಂದು ನಿಚ್ಚಳವಾಗಿ ನಿರೂಪಿಸಿರುವುದೊಂದು ಸಾಧನೆಯೇ ಸರಿ! ಆದ್ದರಿಂದಲೇ ಜಿಎಸ್ಎಸ್ ಅವರ ವಿಮರ್ಶೆಯಲ್ಲಿ ಕಾವ್ಯಧರ್ಮ-ಕವಿಧರ್ಮ-ಯುಗಧರ್ಮಗಳ ಮುಪ್ಪುರಿ ಬಂಧವಿದೆ. 'ಕಾವ್ಯಧರ್ಮ'ವು ಕಾವ್ಯ ಮೀಮಾಂಸೆಯಿಂದ ಸೌಂದರ್ಯಶಾಸ್ತ್ರದವರೆಗೂ, 'ಕವಿ ಮನೋಧರ್ಮ'ವು ವ್ಯಕ್ತಿಪ್ರತಿಭೆಯಿಂದ ವಿಚಾರವಾದದವರೆವಿಗೂ, 'ಯುಗಧರ್ಮ'ವು ಚರಿತ್ರೆಯಿಂದ ಸಂಸ್ಕೃತಿ ದರ್ಶನದವರೆಗೂ ಚಾಚಿಕೊಳ್ಳುವ ಪರಿಭಾಷೆಗಳೆಂಬುದನ್ನು ಮರೆಯಬಾರದು.

'ಸೌಂದರ್ಯ ಸಮೀಕ್ಷೆ'ಯಲ್ಲಿ ಉತ್ತರೋತ್ತರ ಅಭಿವೃದ್ಧಿಯೆನ್ನಬಹುದಾದ 'ಚತುರ್ಮುಖ ಸೌಂದರ್ಯ' ತತ್ವವನ್ನು ನಿರೂಪಿಸಿರುವ ಜಿ.ಎಸ್.ಎಸ್, 'ಪರಿಶೀಲನ'ದ ಲೇಖನವೊಂದರಲ್ಲಿ 'ಸೌಂದರ್ಯ' ಮತ್ತು 'ಸಂಸ್ಕೃತಿ'ಗಳನ್ನು ಅಖಂಡವಾಗಿ ಗ್ರಹಿಸುತ್ತಾ 1. ನಡೆಯ ಸೌಂದರ್ಯ, 2. ನುಡಿಯ ಸೌಂದರ್ಯಗಳ ಬಗ್ಗೆ ಚಿಂತಿಸಿದ್ದಾರೆ. (ನೋಡಿ: *ವಚನಕಾರರ ದೃಷ್ಟಿಯಲ್ಲಿ ಸಂಸ್ಕೃತಿ*):

> "…. ನುಡಿಯ ಸೌಂದರ್ಯ ವ್ಯಕ್ತಿಯ ಹಿತ ಮಿತ ಮೃದುವಚನಗಳಲ್ಲಿ, ಮಾತನಾಡುವ ರೀತಿಯಲ್ಲಿ ವ್ಯಕ್ತವಾದರೆ, ನಡೆಯ ಸೌಂದರ್ಯ ಆತನ ಆಚಾರ ವ್ಯವಹಾರಗಳಲ್ಲಿ ವೇಷಭೂಷಣಗಳಲ್ಲಿ ಮೈದೋರುತ್ತದೆ. ಹಿರಿಯ ಅರ್ಥದಲ್ಲಿ ನೋಡಿದಾಗ ಈ ನುಡಿಯ ಸೌಂದರ್ಯ ಸಾಹಿತ್ಯವಾಗಿಯೂ, ನಡೆಯ ಸೌಂದರ್ಯ ಚಾರಿತ್ರ್ಯವಾಗಿಯೂ ಮೂಡುತ್ತದೆ. ಮತ್ತೊಂದು ಅರ್ಥದಲ್ಲಿ ನಡೆಯ ಸೌಂದರ್ಯದ ಸಮಷ್ಟಿ ನಾಗರಿಕತೆಯಾಗಿ ತೋರುತ್ತದೆ. ಆದುದರಿಂದಲೇ ಸಾಹಿತ್ಯ ಸಂಸ್ಕೃತಿಯ ಕಣ್ಣು ಎಂದೂ, ಒಂದು ದೇಶದ ನಾಗರಿಕತೆ ಆ ದೇಶದ ಸಂಸ್ಕೃತಿಯನ್ನು ಸೂಚಿಸುತ್ತದೆ ಎಂದೂ ಹೇಳುವುದು."

ಸೌಂದರ್ಯ ತತ್ವ ವಿಚಾರವನ್ನು 'ಸೂಕ್ಷ್ಮ' (Micro) ಮತ್ತು 'ಸಮಗ್ರ' (Macro) ನೆಲೆಗಳೆರಡರಲ್ಲೂ ಪರಿಭಾವಿಸುವ ಚಿಂತನಾಕ್ರಮವನ್ನಿಲ್ಲಿ ಮನಗಾಣಬಹುದು. ಇದಿಷ್ಟು ಜಿಎಸ್‌ಎಸ್ 'ಅರವತ್ತರ ದಶಕ'ದಲ್ಲಿ ಪ್ರತಿಪಾದಿಸಿರುವ ವಿಚಾರಗಳೆಂಬುದನ್ನು ಸ್ಮರಿಸಬೇಕು. ನಂತರವೂ ಜಿಎಸ್‌ಎಸ್ ಅವರ 'ಕೈಮರ ಕಾಯಕ' ವೈವಿಧ್ಯಮಯವಾಗಿ ಮುಂದುವರಿದು ಬಂದಿದೆ. ಪೌರಾಣಿಕ ಪರಿವೇಷಗಳು ಮತ್ತು ದೈವಿಕ ಆವರಣಗಳಿಂದ 'ಸೌಂದರ್ಯ ಶಾಸ್ತ್ರ'ವನ್ನು ಪ್ರತ್ಯೇಕಿಸಬೇಕೆಂಬ ವಿಚಾರದಲ್ಲಿ ಬದಲಾಗದ ತತ್ವನಿಷ್ಠೆ ಜಿಎಸ್‌ಎಸ್ ಅವರಲ್ಲಿದೆ. ಇದನ್ನು ಸ್ವತಃ ಜಿಎಸ್‌ಎಸ್ ಸ್ಪಷ್ಟವಾದ ಮಾತುಗಳಲ್ಲಿ ಪ್ರತಿಪಾದಿಸಿದ್ದಾರೆ:

> …"ಕವಿಯ ಕಾವ್ಯ ನಿರ್ಮಾಣ ಕೌಶಲ್ಯಕ್ಕೆ ಇರುವ ಅತಿಶಯತೆಯನ್ನು ಕುರಿತು ಅದೊಂದು ವರ, ಅದೊಂದು ಕೃಪೆ, ಜನ್ಮಾಂತರ ಸಂಸ್ಕಾರ ಇತ್ಯಾದಿಯಾಗಿ ವರ್ಣಿಸಿದ್ದಾರೆ. ಹೀಗೆ ಈ ವಿಚಾರವನ್ನು ಒಂದು ಅಲೌಕಿಕ ನೆಲೆಗೆ ಕೂರಿಸಿದ ಕೂಡಲೆ ಇದಕ್ಕೆ ಇನ್ನೂ ಕೆಲವು ಅಂಶಗಳು ಸಲೀಸಾಗಿ ಬಂದು ಸುತ್ತಿಕೊಳ್ಳುತ್ತವೆ: ಕವಿ ದೇವಾಂಶ ಸಂಭೂತ; ಅವನೊಬ್ಬ ಸಾಧಕ, ಋಷಿ ಅಲ್ಲದವನು ಕವಿಯಾಗಲಾರ, ಅಂಥವನ ಧ್ಯಾನಸ್ಥಿತಿಯಲ್ಲಿ ಕಾವ್ಯ ಆವತರಿಸುತ್ತದೆ, ಸರಸ್ವತಿಯ ಕೃಪೆಗೆ ಪಾತ್ರರಾಗುವ ಇಂಥ ಶುಚಿಶೀಲರಿಗೆ ಅವಳೇ ಬೇಕಾದ ಅರ್ಥಗಳನ್ನು ಕಾಣಿಸುತ್ತಾಳೆ, Poetry is something Divine—ಹೀಗೆ ಕಾವ್ಯ ಮೀಮಾಂಸೆ ಮಡಿ ಉಟ್ಟುಕೊಂಡು, ವೇದಾಂತವೋ ತಾತ್ವಿಕವೋ ಆದ ಪರಿಭಾಷೆಯಲ್ಲಿ ದಾರಿತಪ್ಪುತ್ತದೆ"… —*ಕಾವ್ಯಾರ್ಥಚಿಂತನ, ಪು. 2-3.*

ಕುವೆಂಪು ಅವರು ಕೊಟ್ಟ 'ವಿಚಾರಕ್ರಾಂತಿಯ ಆಹ್ವಾನ'ವನ್ನು ಶ್ರದ್ಧೆಯಿಂದ ಸ್ವೀಕರಿಸಿ, 'ಸೌಂದರ್ಯಶಾಸ್ತ್ರ'ಕ್ಕೆ ಚ್ಯುತಿಯಾಗದಂತೆ ಅಳವಡಿಸಿ ತೋರಿಸಿರುವ ಜಿಎಸ್‌ಎಸ್, ಚಿಂತನೆಯಲ್ಲಿ 'ನಿರ್ನಾಮ' ಮತ್ತು 'ನಿರ್ಮಾಣ'ಗಳೆರಡೂ ಒಟ್ಟೊಟ್ಟಿಗೆ ಕಂಡು ಬರುತ್ತವೆ: ಬದಲಾಗಬೇಕಾದ ಅಥವಾ ಸಕ್ರಮಗೊಳ್ಳಬೇಕಾದ ಸಾಮಾಜಿಕ ಪರಿಸ್ಥಿತಿಗಳ ಬಗ್ಗೆ ಸಾಹಿತ್ಯ ಕೃತಿಗಳು ನೀಡುವ ಮುನ್ನೋಟ, ಮುಂಗಾಣ್ಕೆಗಳು ಎಷ್ಟು ಮುಖ್ಯವೋ ವಿಮರ್ಶೆ ಮತ್ತು ಮೀಮಾಂಸೆಗಳು ನೀಡುವ ಮುನ್ನೋಟ, ಮುಂಗಾಣ್ಕೆಗಳು ಕೂಡ ಅಷ್ಟೇ ಮುಖ್ಯವೆಂಬ ಮಾತು ಜಿಎಸ್‌ಎಸ್ ಚಿಂತನೆಗೆ ಬಹು ಚೆನ್ನಾಗಿ ಒಪ್ಪುತ್ತದೆ. ಪರಿಸರ ವಿನಾಶದ ಇಂದಿನ ದಿನಗಳಲ್ಲಿ ಹಸಿರು ಪರವಾದ ಚಿಂತನೆ ಮತ್ತು ಕಾಳಜಿಗಳು ಎರವಲು ಜ್ಞಾನವಾಗದೆ ಸಹಜಜ್ಞಾನವಾಗಿ ಕನ್ನಡದಲ್ಲಿಂದು ಕಾಣಿಸಿಕೊಳ್ಳುತ್ತಿದೆ. ಈ ದೃಷ್ಟಿಯಿಂದ ನೋಡಿದರೆ 'ಪರಿಶೀಲನ'ದಲ್ಲಿರುವ 'ಪಂಪನ ಪುಷ್ಪೋದ್ಯಾನ'ವೆಂಬ ಲೇಖನ ಹೊಸ ಪವಿತ್ರತೆಯ ಹುಡುಕಾಟದಂತೆ ತೋರುತ್ತದೆ... "ಭರತನ ಅಂತಃಪುರದ ಈ ಲಲನೆಯರ ಸೌಂದರ್ಯಾನುಭವದಲ್ಲಿ ಒಂದು ರೀತಿಯ ಪ್ರಮತ್ತತೆ ಮೊದಮೊದಲಿಗೆ ಕಂಡುಬಂದರೂ, ಸೌಂದರ್ಯಾನುಭವದ ನಂತರ, ತಮ್ಮ ಉಪಭೋಗಕ್ಕೆ ಈ ಪ್ರಕೃತಿಯ ಸೌಂದರ್ಯವನ್ನು ನೋಯಿಸಿ ಕಾಡಿದೆವಲ್ಲಾ ಎಂಬ ಈ ಪಶ್ಚಾತ್ತಾಪದ ಮಾರ್ದವತೆ ಅಪೂರ್ವವಾಗಿದೆ"... ಜಿಎಸ್‌ಎಸ್ ಅವರ ವಿಮರ್ಶೆಯಲ್ಲಿರುವ ಹಸಿರು ಪರವಾದ ಚಿಂತನೆ ಮತ್ತು ಕಾಳಜಿಗಳು ಇಂದಿನ 'ಬಳಸಿ ಬಿಸಾಡು'ವ ಸಂಸ್ಕೃತಿಗೆ ಒದಗಿಸಿದ ಮುನ್ನೋಟವಾಗಿದೆ.

ಸಾಹಿತ್ಯ ಸೃಷ್ಟಿಗೆ ಹೋಲಿಸಿದರೆ ವಿಮರ್ಶೆ ಮತ್ತು ಮೀಮಾಂಸೆಗಳು ಕ್ಷಣ ಭಂಗುರವಾದವುಗಳಾಗಿರುತ್ತವೆ. ಅಂದರೆ ವಿಮರ್ಶೆ ಮತ್ತು ಮೀಮಾಂಸೆಗಳನ್ನು ಹೊಡೆದುರುಳಿಸುವ 'ಸಾಹಿತ್ಯ ಕೃತಿಗಳು' ಬರುವುದುಂಟು. ಆದರೆ ಜಿಎಸ್‌ಎಸ್ ಅವರ ಚಿಂತನಾಕ್ರಮ 'ಹರಿವ ನದಿ'ಗುಂಟ ಸಾಗುವುದರಿಂದ ತನ್ನ ಗತಿಶೀಲತೆಯಿಂದಾಗಿಯೇ ಚಿರಾಯುವಾಗಿಬಿಡುತ್ತದೆ.

## ಭಾಗ - ೨

## ಎದೆ ತುಂಬಿ ಹಾಡಿದೆನು: ಯಾವ ಹಾಡ ಹಾಡಲಿ?

ಒಬ್ಬನೇ ಕವಿಯ ವಿಭಿನ್ನ ಹೇಳಿಕೆಗಳಂತೆ ಕಂಡುಬರುವ ಮೇಲಿನ ನುಡಿಗಳು ಜಿ.ಎಸ್.ಎಸ್ ಕಾವ್ಯದ ಪ್ರಧಾನ ವೈರುಧ್ಯವಾಗಿ ತೋರುತ್ತದೆ. 'ನಿಸರ್ಗ ಸಹಜ ನೆಲೆ'ಗಳನ್ನು ಕಂಡಾಗ ಎದೆ ತುಂಬಿ ಹಾಡುವ ಜಿಎಸ್‌ಎಸ್, 'ನಿಸರ್ಗ ವಿದೂರ ನೆಲೆ'ಗಳನ್ನು ಕಂಡಾಗ ಯಾವ ಹಾಡ ಹಾಡಲಿ? ಎಂದು ವಿಷಾದಿಸುತ್ತಾರೆ. ನಿಸರ್ಗ ಸಹಜನೆಲೆಗಳು —ಎಂದರೆ ಅದು ಪ್ರಕೃತಿಯ ವಿವರಗಳೂ ಆಗಬಹುದು; ಅಥವಾ ಸಂಸ್ಕೃತಿಯ ವಿವರಗಳೂ ಆಗಬಹುದು. ಇದನ್ನೆ ಡಾ. ಕೆ.ವಿ. ನಾರಾಯಣ ಅವರು 'ಜೀವ ಸಮೃದ್ಧ ಪ್ರಕೃತಿ' ಮತ್ತು 'ಮಾನವಕೇಂದ್ರಿತ ಸಮಾಜ' (*ಸಾಲುದೀಪಗಳು, ಪು. 304*) ಎಂದು

ಕರೆದಿದ್ದಾರೆ. ಮಾನವ ಸಮಾಜವು ನಿಸರ್ಗ ಸಹಜವಾಗಿದ್ದುಬಿಟ್ಟರೆ ಯಾವ ತಂಟೆ-ತಕರಾರುಗಳೂ ಇರುವುದಿಲ್ಲ. ಮಾನವ ಸಮಾಜವು ನಿಸರ್ಗ ಸಹಜವಾಗಿರುವುದಿಲ್ಲವೆಂಬುದೇ ಎಲ್ಲ ಸಂಸ್ಕೃತಿಗಳ ಇತಿಹಾಸವಾಗಿದೆ. ಇದನ್ನೇ ಜಿಎಸ್‌ಎಸ್ ... "ನಾಗರೀಕತೆಯ ಹೃದಯದ ಮೇಲೆ ಎಷ್ಟೊಂದು ಗಾಯಗಳ ಗುರುತು"—ಎಂದಿದ್ದಾರೆ.

ಮಾನವ ಸಮಾಜವು ನಿಸರ್ಗ ಸಹಜ ನೆಲೆಗಳಿಂದ ದೂರ ಸಿಡಿದಾಗ 'ನಿಸರ್ಗ ವಿದೂರ ನೆಲೆಗಳು' ತಂತಾನೆ ವಿಜೃಂಭಿಸುತ್ತವೆ. ಆಗ ಕೃತಕತೆ, ಕಪಟತನ, ಕುತಂತ್ರ, ಮುಖವಾಡ, ಗೋಡೆಗಳದ್ದೇ ರಾಜ್ಯಭಾರ! ಇದರಿಂದ ಪಾರಾಗಲು ನಿಸರ್ಗಕ್ಕೆ ಮೊರೆ ಹೋಗುವುದೇ ಏಕೈಕ ಮಾರ್ಗವೆಂಬ ಧೋರಣೆ ಜಿಎಸ್‌ಎಸ್ ಕಾವ್ಯದಲ್ಲಿದೆ:

**"ಹೇಗಾದರೂ ಮಾಡಿ ಕುಂಡವನ್ನೊಡೆದು**
**ನೆಲದಲ್ಲಿದರ ಬೇರನ್ನಿಡು**
**ತಾಯ ಮೊಲೆ ಹಾಲಿಗಿದರ ತುಟಿಯನ್ನಿಡು"** *(ಪ್ರಜ್ಞೆ)*

ಜಿಎಸ್‌ಎಸ್ ಕಾವ್ಯದ ಪ್ರಧಾನ ವೈರುಧ್ಯವಾಗಿರುವ ನಿಸರ್ಗ ಸಹಜ ನೆಲೆ ಮತ್ತು ನಿಸರ್ಗ ವಿದೂರ ನೆಲೆಗಳಿಗೆ ಪ್ರಾತಿನಿಧಿಕ ಉದಾಹರಣೆಗಳನ್ನಾಗಿ 'ಜಡೆ' ಮತ್ತು 'ಮುಂಬೈ ಜಾತಕ' ಕವನಗಳನ್ನು ಪರಿಶೀಲಿಸಬಹುದು. ನಿಸರ್ಗ ಸಹಜ ನೆಲೆಯ ಅನಾವರಣದಂತೆ 'ಜಡೆ' ಕವನವಿದ್ದರೆ, ನಿಸರ್ಗವಿದೂರ ನೆಲೆಯ ದುಷ್ಪರಿಣಾಮಗಳ ಚಿತ್ರಣದಂತೆ 'ಮುಂಬೈ ಜಾತಕ' ಕವನವಿದೆ.

'ಜೀವಸಮೃದ್ಧ ಪ್ರಕೃತಿ'ಗೂ 'ಮಾನವ ಕೇಂದ್ರಿತ ಸಮಾಜ'ಕ್ಕೂ ನಡುವೆ ಜಡೆ ಹೆಣೆಯುವ ಬಗೆ ಜಿಎಸ್‌ಎಸ್ ಕಾವ್ಯದಲ್ಲಿದೆ: ಆದ್ದರಿಂದಲೇ ಮಲ್ಲಿಗೆ ಹೂವೊಂದು ಮಹಾತ್ಮರ ಮನವಾಗುತ್ತದೆ. ತೆಂಗಿನಮರವು ಕ್ರಿಸ್ತ ಬುದ್ಧನಂತೆ ತೋರುತ್ತದೆ. ಬಿರುಗಾಳಿಯು ಮನೆಯ ಮಗುವಾಗುತ್ತದೆ. ಪ್ರಕೃತಿ ಮತ್ತು ಸಂಸ್ಕೃತಿಗಳ ಸ್ವರಮೇಳದಂತೆ ಕಂಡುಬರುವ *ಶಾರದೆ,* ಮಬ್ಬಿನಿಂದ ಮಬ್ಬಿಗೆ ಮುಂತಾದ ಕವನಗಳನ್ನು ಈ ದೃಷ್ಟಿಯಿಂದಲೇ ಪರಿಭಾವಿಸಬೇಕು... ಇಂಥ ಮನಃಸ್ಥಿತಿಯಲ್ಲೆ ಕವಿಯು "ಎದೆ ತುಂಬಿ ಹಾಡಿದೆನು" ಎನ್ನುವುದು.

ಚರಿತ್ರೆಯ ಚಲನೆಯಲ್ಲಿ ಮಾನವ ಸಮಾಜದ ಸ್ವಯಂಕೃತಾಪರಾಧಗಳಂತಿರುವ 'ನಿಸರ್ಗವಿದೂರ ನೆಲೆಗಳು' ಜಿಎಸ್‌ಎಸ್ ಕಾವ್ಯದ 'ಭೀಮಾಲಾಪ'ಕ್ಕೆ ಕಾರಣವಾಗಿದೆ. 'ಹಗೆಗಳನು ಹಿಂಡಿದೆನು ಮನದೊಳಗೆ'—ಎಂಬಂಥ ರೋಷ ಮತ್ತು ಕುದಿತಗಳಿಂದಲೇ *ಬೆಂಗಾಡು, ದುಃಸ್ವಪ್ನ, ಗೋಡೆ* ಮುಂತಾದ ಕವನಗಳು ಮೂಡಿಬಂದಿವೆ. ಇಂಥ ಮನಃಸ್ಥಿತಿಯಲ್ಲಿ ಕವಿಯ ಮನಸ್ಸು "ಯಾವ ಹಾಡ ಹಾಡಲಿ?" ಎಂದು ವಿಷಾದಿಸುತ್ತದೆ.

'ನಿಸರ್ಗ ಸಹಜ ನೆಲೆ' ಮತ್ತು 'ನಿಸರ್ಗ ವಿದೂರ ನೆಲೆ'ಗಳೆಂಬ ಪ್ರಧಾನ ವೈರುಧ್ಯಕ್ಕೆ ಸಿಕ್ಕು ಕವಿಯ ಪ್ರಜ್ಞೆ ಹರಿದು ಹಂಚಿಹೋಗುವುದಿಲ್ಲ. ಈ ಕುರಿತು ಜಿಎಸ್‌ಎಸ್ ಕಾವ್ಯಕ್ಕೆ 'ನಿರ್ಣಯಶಕ್ತಿ' ಮತ್ತು 'ವಿವೇಚನಾಧಿಕಾರ'ವಿದೆ. ರಣರಂಗಕ್ಕೆ ಬೆನ್ನುಕೊಟ್ಟು ಓಡುವ

ಉತ್ತರಕುಮಾರನ ಪಲಾಯನವಾದ ಅಥವಾ ರಣರಂಗದ ಮಧ್ಯೆ ಶಸ್ತ್ರಚೆಲ್ಲುವ ಅರ್ಜುನನ ವಿಷಾದಯೋಗ ಜಿಎಸ್‌ಎಸ್ ಕಾವ್ಯದಲ್ಲಿಲ್ಲ. ಭಗೀರಥನ ದೃಢಸಂಕಲ್ಪದಿಂದ ಮುಂದುವರೆಯುವ ಜಿಎಸ್‌ಎಸ್ *ಬೆತ್ತಲೆ, ಕೃಷ್ಣಶಕ್ತಿ, ನನ್ನ ಹಣತೆ, ಹಾರೈಕೆ, ಹೊಸಹುಟ್ಟು ಬೀಜದಿಂದ ಬೀಜಕ್ಕೆ* ಮುಂತಾದ ಕವನಗಳನ್ನು ಕೊಟ್ಟಿದ್ದಾರೆ. ಜಿಎಸ್‌ಎಸ್ ಕಾವ್ಯದ ಈ 'ನಂಬುಗೆಯ ಹಾದಿ'ಯನ್ನು ಶ್ರೀ ಡಿ.ಎಸ್. ನಾಗಭೂಷಣ ಅವರು ಕೊಂಚ ತೀವ್ರವಾಗಿಯೇ ಪ್ರಶ್ನಿಸಿದ್ದಾರೆ:

1. ..."ಕವಿ ಇಲ್ಲಿ ತಾನು ಪ್ರವೇಶಿಸಿರುವ ಅನುಭವಲೋಕದ ಎಲ್ಲ ತಲ್ಲಣ-ತರಂಗಾಂತರಗಳನ್ನೂ ನಿಭಾಯಿಸಲು ಬೇಕಾದ ತಕ್ಕ ಕಾವ್ಯದ ಪರಿಕರಗಳಿಲ್ಲದೆ ತನ್ನ ಕಾವ್ಯವನ್ನೂ ವರ್ತಮಾನದ (ಸಾಮಾಜಿಕ) ಒತ್ತಡಗಳಿಗೆ ಒಪ್ಪಿಸಿಬಿಟ್ಟು ದಿಙ್ಮೂಢರಾಗಿ ಕೂತಂತೆ ತೋರುತ್ತದೆ. ಇದು ಆಧುನಿಕ ಮಧ್ಯಮದ ವರ್ಗದ ಮಿತಿಗಳನ್ನು ಮೀರಲಾಗದ ಅಸಹಾಯಕ ಸ್ಥಿತಿಯೂ ಇರಬಹುದು..." *(ಸಾಹಿತ್ಯ ವಿಮರ್ಶೆ-1997, ಪು.55)*

2. ..."ಕವಿ ಸಾಮಾಜಿಕವಾಗಿ ಎಷ್ಟು ಅಶಾಂತಿಗೀಡಾಗಿದ್ದಾರೆ, ಅಸಹಾಯಕರಾಗಿದ್ದಾರೆ ಎಂಬುದನ್ನು ಈ ಸಾಲುಗಳಲ್ಲಿ ಕಾಣಬಹುದು. ಆದರೆ ಏಕೆ ಎಂಬ ಪ್ರಶ್ನೆಗಳನ್ನು ಉತ್ತರಿಸುವಷ್ಟು ಶಕ್ತಿ ಈ ಸಾಲುಗಳಲ್ಲಿ ಇಲ್ಲ"... *(ಅದೇ. ಪು.56)*

ಇಲ್ಲಿ ಶ್ರೀ ನಾಗಭೂಷಣ ಅವರು ಗುರುತಿಸುತ್ತಿರುವ ಜಿಎಸ್‌ಎಸ್ ಕಾವ್ಯದ ಬಿರುಕು, ವಾಸ್ತವವಾಗಿ ನಿಸರ್ಗ ವಿದೂರ ನೆಲೆಗಳ ಬಿರುಕೇ ಹೊರತು ಕಾವ್ಯವಸ್ತುವಿನ ಬಿರುಕೆನಿಸುವುದಿಲ್ಲ. ಜಿಎಸ್‌ಎಸ್ ಅವರ ಸಮಗ್ರಕಾವ್ಯವನ್ನು ಲಕ್ಷಿಸಿದಾಗ ನಿಸರ್ಗಸಹಜ ನೆಲೆಗಳು ಒಂದು 'ಬೀಜ ತತ್ವ'ದಂತೆಯೂ, ನಿಸರ್ಗ ವಿದೂರ ನೆಲೆಗಳು 'ನಿರ್‌ಬೀಜೀಕರಣ' ವಾಗಿಯೂ ಕಂಡುಬರುತ್ತವೆ. 'ಬೀಜದಿಂದ ಬೀಜಕ್ಕೆ' ಎಂಬ ಕವನದ ಸಾಲುಗಳಿವು:

**ಬೀಜದಿಂದ ಬೀಜಕ್ಕೆ-**
**ನಡುವೆ ಎಷ್ಟೊಂದು ದೇಹ,**
**ಎಷ್ಟೊಂದು ಕುಡಿ-ಮಿಡಿ-ಕೊಂಬೆ-ರೆಂಬೆಗಳ ಉದ್ದಕ್ಕು,**
**ಜೋಗುಳದ ತೊಟ್ಟಿಲು ನೂರಾರು ಮಟ್ಟಲು**

'ಜೀವ ಸಮೃದ್ಧ ಪ್ರಕೃತಿ'ಯ ಹಸಿರು ಪಿರಮಿಡ್ಡು 'ಬೀಜ ತತ್ವ'ವಾಗಿ ಇಲ್ಲಿ ಮೂಡಿ ಬಂದಿದೆ. ಸಸ್ಯಸಂಕುಲ-ಪ್ರಾಣಿಸಂಕುಲ ಮತ್ತು ಮನುಷ್ಯಸಂಕುಲವನ್ನೆಲ್ಲ ಜಿಎಸ್‌ಎಸ್ 'ಬೀಜ'ವೆಂಬ ಒಂದೇ ಮಾತಿನಿಂದ ನಿರ್ದೇಶಿಸುತ್ತಾರೆಂಬುದಕ್ಕೆ ಮತ್ತೊಂದು ನಿದರ್ಶನ:

**ಕಟ್ಟು ಹಡಗೊಂದನು, ಶೇಖರಿಸು ಒಂದುಕಡೆ**
**ನಾಳೆ ಬಿತ್ತಲು ತಕ್ಕ ಬೀಜಗಳನ್ನು,**
**ನೀನು, ನಿನ್ನ ಪರಿವಾರ, ಮತ್ತು ಒಂದಷ್ಟು**
**ಉತ್ತಮದ ತಳಿಯನ್ನು** *(ಹೊಸಹುಟ್ಟು)*

ನಿಸರ್ಗ ಸಹಜ ನೆಲೆಯ ಈ ಬೀಜತತ್ವಕ್ಕೆ ಬದಲಾಗಿ ಮಾನವ ಸಮಾಜವು ನಿಸರ್ಗ ವಿದೂರ ನೆಲೆಯ ನಿರ್‌ಬೀಜೀಕರಣಕ್ಕೆ ಒಳಗಾಗುತ್ತಿರುವುದೇ ನವೀನ ಕಾಲದ ದುರಂತವಾಗಿದೆ ಎಂಬುದನ್ನು ಜಿಎಸ್‌ಎಸ್ ಬಗೆ-ಬಗೆಯಾಗಿ ನಿರೂಪಿಸಿದ್ದಾರೆ. ಇದರಲ್ಲಿ 'ನಗರೀಯ' ವೆನ್ನಬಹುದಾದ ಆಕರ್ಷಣೆಗಳು, ಧನದಾಹ, ವ್ಯಾವಹಾರಿಕ ಬುದ್ಧಿ, ಅಧಿಕಾರ ಲಾಲಸೆಯ ಜೊತೆಗೆ ನಗರೀಕರಣದಿಂದ ತಲೆದೋರುವ ನಾನಾ ಸಮಸ್ಯೆಗಳದೇ ಸಿಂಹಪಾಲೆನ್ನಬಹುದು. ಇದರ ಅತ್ಯುತ್ತಮ ಪ್ರತಿನಿಧಿ ಎನ್ನಬಹುದಾದ 'ಮುಂಬೈಜಾತಕ' ಕವನವು ನಿಸರ್ಗವಿದೂರ ನೆಲೆಯ ದುಷ್ಪರಿಣಾಮಗಳ ಚಿತ್ರಣವಾಗಿರುವಂತೆಯೇ ಇವುಗಳನ್ನು ಪ್ರತಿಭಟಿಸಲಾರದ ಅಸಹಾಯಕತೆಯಲ್ಲಿ ಮೂಗುರ್ಜಿಗಳಾಗಿ 'ನಿರ್‌ಬೀಜೀಕರಣ'ಕ್ಕೆ ಒಳಗಾಗಿರುವ 'ಮಾನವ ಕೇಂದ್ರಿತ ಸಮಾಜ'ವೊಂದರ ಅಭಿವ್ಯಕ್ತಿಯೂ ಆಗಿದೆ.

ವಿಶ್ವ ವಾಣಿಜ್ಯ ಒಪ್ಪಂದಗಳು ಮತ್ತು ಜಾಗತೀಕರಣದ ಈ ದಿನಗಳಲ್ಲು ಜಿಎಸ್‌ಎಸ್ ಕಾವ್ಯ ಪ್ರತಿಪಾದಿಸುವ 'ನಿಸರ್ಗ ಸಹಜ ನೆಲೆ'ಗಳ ಮೌಲ್ಯ ತುಂಬಾ ಪ್ರಸ್ತುತವಾಗಿದೆ. ಈ ದೃಷ್ಟಿಯಿಂದ ಜಿಎಸ್‌ಎಸ್ ಅವರ 'ತಕ್ಕಡಿಯಿಂದ ತಂಬೂರಿ ತನಕ'—ಎಂಬ ಕವನವನ್ನು ಪುನರ್ ಪರಿಶೀಲಿಸಬೇಕು:

**............ ತಕ್ಕಡಿಯಲ್ಲಿ ತೂಗಿದನು ಇಹದ ಸರುಕೆಲ್ಲವನು**
**ಈ ವ್ಯಾಪಾರಿ**
**ಗೊತ್ತಾಗಲಿಲ್ಲ ವೈಕುಂಠಕ್ಕೆ ದಾರಿ.**
**"ದಾರಿ ಯಾವುದಯ್ಯಾ ವೈಕುಂಠಕೆ?"**
**ಪ್ರಶ್ನೆಗುತ್ತರವಾಗಿ ಮೊಳಗಿತ್ತು ಒಳಗಿಂದಲೇ**
**ಮರುಪ್ರಶ್ನೆ: "ಯಾರು ಹಿತವರು ನಿನಗೆ**
**ಈ ಮೂವರೊಳಗೆ**
**ನಾರಿಯೋ ಧಾರುಣಿಯೋ ಬಲುಧನದ ಸಿರಿಯೋ?"**
**ಉತ್ತರದ ಬೆಳಕನು ಕಂಡ; ಹೆಗಲಿಗೇರಿತ್ತು ತಂಬೂರಿ**
**ಉದ್ದಕೂ ತೆರೆದ ಹಾಡಿನ ದಾರಿ...**

ಈ ನವೀನ ಜಗತ್ತು ಅಥವಾ ಸರ್ಕಾರಗಳು ತಕ್ಕಡಿಯ ಕಡೆಗೋ ತಂಬೂರಿಯ ಕಡೆಗೋ... ಎಂಬ ಬೀಜರೂಪಿಯಾದ ಪ್ರಶ್ನೆ ಇಲ್ಲಿದೆ. ಪಂಪ ಪ್ರಶಸ್ತಿಯ ಹಿನ್ನೆಲೆಯಲ್ಲಿ ಜಿ.ಎಸ್.ಎಸ್ ಹೇಳಿರುವ ಮಾತುಗಳಿವು *(ಸಾಪ್ತಾಹಿಕ ಪುರವಣಿ: ಪ್ರಜಾವಾಣಿ-20.12.98)*: "ಕುವೆಂಪು ಅಧ್ಯಾತ್ಮದ ಮೂಲಕ, ಕಾರಂತರು ವೈಚಾರಿಕತೆಯ ಮೂಲಕ, ಬೇಂದ್ರೆ ಅನುಭಾವದ ಮೂಲಕ-ಚರಿತ್ರೆಯಿಂದ, ತನ್ನ ಭೂತಕಾಲದ ಉಪಾಧಿಗಳಿಂದ, ವರ್ತಮಾನದ ಮಿತಿಗಳಿಂದ ಮುಕ್ತವಾಗಲು ಹೊರದಾರಿ ಯನ್ನು ಕಂಡುಕೊಡವರು. ಚರಿತ್ರೆಯಿಂದ ಆದ ಗಾಯಗಳ ಗುರುತು ನನ್ನ ಎದೆಯ ತುಂಬ ಇದೆ. ಈ ಗಾಯಗಳನ್ನು ಮಾಯಿಸುವ ಮದ್ದನ್ನು ನನ್ನ ಕಾವ್ಯ ಈಗ ಹುಡುಕುತ್ತಿದೆ. ಸದ್ಯಕ್ಕಂತೂ ಅಧ್ಯಾತ್ಮ ವೈಚಾರಿಕತೆ, ಅನುಭಾವದ ಸಿದ್ಧ ಮಾರ್ಗಗಳು ಎಷ್ಟು ಹೆಚ್ಚಿದ್ದರೆ ಅಷ್ಟು ಒಳ್ಳೆಯದು. ಆದುದರಿಂದಲೇ ಪ್ರತಿಯೊಬ್ಬ ಕವಿ ಕೂಡ ತನ್ನದೇ ದಾರಿ ಹುಡುಕುವ ಪ್ರಯತ್ನ ಮಾಡುತ್ತಲೇ ಇರಬೇಕು" ■

# ಕನ್ನಡಿಗರ ಭಾವೈಕ್ಯದ ಸೇತುಬಂಧು

ಪ್ರೊ|| ಎಂ. ರಾಮಚಂದ್ರ

**ಜಿ.** ಎಸ್. ಶಿವರುದ್ರಪ್ಪ—1950ರಿಂದ ಈಚೆಗೆ ಕನ್ನಡದ ಕವಿಲೋಕದಲ್ಲಿ ಕಾಣಿಸಿಕೊಂಡು ಈಗ ದೊಡ್ಡದಾಗಿ ಕೇಳಿಬರುವ ಹೆಸರುಗಳಲ್ಲಿ ಒಂದಾಗಿದೆ. ಜಿಎಸ್‌ಎಸ್ ಎಂಬ ಮೂರಕ್ಷರಗಳಿಂದ ಪರಿಚಿತರಾಗಿರುವ ಶಿವರುದ್ರಪ್ಪನವರದು ಹೊಸಕಾಲದ ಕವಿಗಳಲ್ಲಿ ಗಟ್ಟಿಯಾದ ನೆಲೆ; ಅವರ ಅನೇಕ ಕೃತಿಗಳಿಗೆ ಕಾಲಾತೀತವಾದ ಬೆಲೆ. ಪದ್ಯ-ಗದ್ಯ ಎರಡರಲ್ಲೂ ಅವರು ಸವ್ಯಸಾಚಿ. ಹನ್ನೊಂದು ಕವನ ಸಂಕಲನ, ಹದಿನಾರು ಗದ್ಯಗ್ರಂಥಗಳ ಸಮೃದ್ಧ ಕೃಷಿ ಅವರದು. ಶಿವರುದ್ರಪ್ಪನವರ ಪ್ರಥಮ ಕವನ ಸಂಗ್ರಹ 'ಸಾಮಗಾನ' (1951). ಶಿಷ್ಯನ ಆ ಪುಸ್ತಕ ಶೀರ್ಷಕ್ಕೆ ಮುನ್ನುಡಿಯ ಅಕ್ಷತೆಯನ್ನು ಆರೋಹಿಸಿದ ಗುರು ಕುವೆಂಪು "…..ಶಿವರುದ್ರಪ್ಪನವರ ಹೃದಯದ ಭಕ್ತಿ, ಎಚ್ಚರಿಕೆ, ಹಾರೈಕೆಗಳು ಅವರ ಚೇತನವನ್ನು ಋಜುಪಥದಲ್ಲಿ ನಡೆಸಿ ಅವರನ್ನು ರಸಸೇತುವೆಯಿಂದ ಸತ್ಯಸೌಂದರ್ಯದ ಶಿರಸೀಮೆಗೆ ಕರೆದೊಯ್ಯಲಿ…." ಎಂದು ಆಶಿಸಿ, ಆಶೀರ್ವದಿಸಿದ್ದರು. ಕಾಲಾಂತರದಲ್ಲಿ ಗುರುವಾಣಿ ಅಕ್ಷರಕ್ಷರವೂ ನಿಜವಾಯಿತು. ಗುರು ನಿರ್ದೇಶಿಸಿದ ರಸ ಸೇತುವೆಯಲ್ಲೇ ಮುನ್ನಡೆದ ಶಿವರುದ್ರಪ್ಪ ನವೋದಯ-ನವ್ಯಗಳ ಸಮನ್ವಯ ಕವಿ ಎಂದು ವಿಶಿಷ್ಟರೆನಿಸಿದರು, ವಿಖ್ಯಾತರಾದರು. ಈಗ ದಾವಣಗೆರೆಯ ಸಾಹಿತ್ಯ ಸಮ್ಮಿಲನಕ್ಕೂ ನಗರ ಸಮೀಪದಲ್ಲೇ ಹರಿಯುತ್ತ ಕರ್ನಾಟಕವನ್ನು ದಕ್ಷಿಣೋತ್ತರವೆಂದು ವಿಭಜಿಸುತ್ತಿರುವ ತುಂಗಭದ್ರೆಗೂ ತನ್ಮೂಲಕ ಕೋಟಿ ಕನ್ನಡಿಗರ ಭಾವೈಕ್ಯಕ್ಕೂ ಒಂದು ಸೇತುಬಂಧವಾಗುತ್ತಿದ್ದಾರೆ.

ಮಲೆನಾಡಿನ ಮಡಿಲ ಹಸಿರಲ್ಲಿ ಹುಟ್ಟಿ ಬೆಳೆದ ಶಿವರುದ್ರಪ್ಪ ಶ್ರೀಗಂಧದ ಮೈಸೂರಲ್ಲಿ ಓದಿ ನಲಿದು, ತ.ಸು. ಶಾಮರಾಯರ ವಾತ್ಸಲ್ಯ, ಕವಿ ಕುವೆಂಪು ಅವರ ಅನುಗ್ರಹಗಳ ಪರಿವೇಷದಲ್ಲಿ ಜೀವನವನ್ನೂ ಕಾವ್ಯಜೀವನವನ್ನೂ ರೂಪಿಸಿಕೊಂಡವರು. ಮೈಸೂರು ಮಹಾರಾಜ ಕಾಲೇಜಿನಲ್ಲೇ ಅಧ್ಯಾಪನವನ್ನು ಆರಂಭಿಸಿ, ಹೈದರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗ ಪ್ರಮುಖರಾಗಿ, ಅಲ್ಲಿಂದ ಕನ್ನಡದ ರಾಜಧಾನಿಗೆ ಬಂದು, ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಪೀಠವನ್ನು ಏರಿದರು. ತಮ್ಮ ಅಧಿಕಾರಾವಧಿಯಲ್ಲಿ ಆ ಪೀಠ ಸುಭದ್ರವಾಗುವಂತೆಯೂ ಕನ್ನಡದ ಕಾಯಕ ಅನೇಕ

ಮುಖನಾಗುವಂತೆಯೂ ಕರ್ತವ್ಯವನ್ನು ನಿರ್ವಹಿಸಿ, ನಿವೃತ್ತರಾದರು. ರಾಜ್ಯ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿಯೂ ಉಲ್ಲೇಖನೀಯವಾಗಿ ಕಾರ್ಯಕ್ರಮಗಳನ್ನು ಆಯೋಜಿಸಿದ ಶಿವರುದ್ರಪ್ಪ ಅನೇಕ ಕವಿಗೋಷ್ಠಿ, ವಿಚಾರಸಂಕಿರಣಗಳ ಅಧ್ಯಕ್ಷರಾಗಿದ್ದರಲ್ಲದೆ, ರಷ್ಯ, ಅಮೆರಿಕ ಪರ್ಯಟನ ಮಾಡಿದ ಅನುಭವ ಸಂಪನ್ನರೂ ಆಗಿದ್ದಾರೆ.

ಜಿ.ಎಸ್. ಶಿವರುದ್ರಪ್ಪನವರು ಬರೆಯತೊಡಗಿದ ಕಾಲಕ್ಕೆ ಹೊಸಕಾವ್ಯ ಕನ್ನಡದ ನೆಲದಲ್ಲಿ ಗಟ್ಟಿಯಾಗಿ ಬೇರೂರಿತ್ತು. ಕುವೆಂಪು-ಬೇಂದ್ರೆಯವರ ಛಾಪು ಜನಮಾನಸದ ಮೇಲೆ ದಟ್ಟವಾಗಿ ಮೂಡಿತ್ತು. ತರುಣ ಕವಿಗಳ ಉಳುಮೆಗೆ ಆಗ ಕನ್ನಡದ ನೆಲೆ ಹಸನಾಗಿ ಇತ್ತಾದರೂ ಬೆಳೆಯಲ್ಲಿ ಹೊಸತನ ತಮ್ಮತನಗಳನ್ನು ತರುವುದೂ ಕುವೆಂಪು ಬೇಂದ್ರೆಯವರ ಪ್ರಭಾವವಲಯದಿಂದ ದೂರ ಬಂದು ಸ್ವೋಪಜ್ಞತೆಯನ್ನು ತೋರುವುದೂ ಶ್ರಮಸಾಧ್ಯವಾಗಿತ್ತು. ಶಿವರುದ್ರಪ್ಪನವರು ಆರಂಭದಲ್ಲಿ 'ಉಡುಗಣವೇಷ್ಟಿತ ಚಂದ್ರ ಸುಶೋಭಿತ ದಿವ್ಯಾಂಬರ ಸಂಚಾರಿ' ಎಂದು ಕುವೆಂಪು ಸಹಜವಾದ ಮಾರ್ಗಾನುಸರಣ ಮಾಡಿದರೂ ಬಹುಬೇಗ ತಮ್ಮದೇ ಗುರಿಯನ್ನು ಕಂಡರು, ದಾರಿಯನ್ನು ಹಿಡಿದರು, 'ಹಾರದಿರು, ಹಾರದಿರು, ಈಗಲೇ ಹಾರದಿರು ಅನಂತ ವಿಸ್ತರದ ನೀಲನಭಕೆ' ಎಂದು ಉತ್ಸಾಹದ ಕುದುರೆಗೆ ಸಂಯಮದ ಕಡಿವಾಣವನ್ನು ಹಾಕಿದರು. ಅನುಸರಣೆಯಿಂದಲ್ಲ, ಆತ್ಮನಿರೀಕ್ಷಣೆಯಿಂದಲೇ ಕವಿಯ ಬೆಳವಣಿಗೆ ಸಾಧ್ಯ ಎಂಬುದನ್ನು ಕಂಡುಕೊಂಡರು. ಶಿವರುದ್ರಪ್ಪ ಮೊತ್ತಕ್ಕೆ ಮನಸೋಲಲಿಲ್ಲ, ಅವರಿಗೆ ಸತ್ವವೇ ಪ್ರಮುಖವಾಯಿತು. ಕಾವ್ಯಪಥದಲ್ಲಿ ಅವರು ನಿಧಾನವಾಗಿ, ಎಣಿಸಿ ಎಣಿಸಿ ಹೆಜ್ಜೆ ಇರಿಸಿದರು. ಆದರೆ ಹೆಜ್ಜೆಯಿರಿಸಿದಲ್ಲೆಲ್ಲ ಅದರ ಗುರುತನ್ನೂ ಮೂಡಿಸಿದರು. ಸಾಮಗಾನದಿಂದ ಭರವಸೆಯನ್ನು ಹುಟ್ಟಿಸಿದ ಶಿವರುದ್ರಪ್ಪ, *ಚೆಲುವು-ಒಲವು, ದೇವಶಿಲ್ಪ, ದೀಪದಹೆಜ್ಜೆ, ಕಾರ್ತೀಕ, ಅನಾವರಣ* ಮೊದಲಾದ ಸಂಗ್ರಹಗಳಿಂದ ಒಬ್ಬ ಪ್ರಾಸಾದಿಕ ಕವಿಯೆಂಬ ಸಂಮಾನಿತ ಸ್ಥಾನವನ್ನು ಪಡೆದರು.

ಸಹಜ ಪ್ರತಿಭೆಯೊಂದಿಗೆ ಸ್ವತಂತ್ರ ವಿಚಾರ ಶಕ್ತಿ, ವಿಶಿಷ್ಟ ನಿರೂಪಣ ಕ್ರಮ, ಸುಂದರ ಭಾಷಾಶೈಲಿಗಳನ್ನೂ ಮೈಗೂಡಿಸಿಕೊಂಡಿರುವ ಶಿವರುದ್ರಪ್ಪನವರ ಲೇಖನಿ ಎಲ್ಲ ಬಗೆಯ ಭಾವನೆಗಳನ್ನೂ ಖಚಿತವಾಗಿ ಕಡೆಯಬಲ್ಲದು, ಹೃದ್ಯವಾಗಿ ಮಿಡಿಯಬಲ್ಲುದು. ನವೋದಯ ಕಾಲದ ಉದ್ವೇಗ, ಉತ್ಸಾಹ, ಕಲ್ಪನಾಲಹರಿಗಳಾಗಲೀ ನವ್ಯಪಂಥದ ವ್ಯಂಗ್ಯ-ವಿಡಂಬನೆ ವಸ್ತುನಿಷ್ಠತೆಗಳಾಗಲೀ ವಿಷಯಾನುಗಣ ಭಾಷಾಶೈಲಿಯಲ್ಲಿ, ಛಂದೋಬಂಧ ಅಥವಾ ಮುಕ್ತಛಂದಗಳಲ್ಲಿ ಸಹಜವಾಗಿ, ಸಶಕ್ತವಾಗಿ ವರ್ಣಿತವಾಗುತ್ತವೆ. ಎಲ್ಲಿ *ಹೋಗುವಿರಿ ನಿಲ್ಲಿ ಮೋಡಗಳೆ; ಎದೆತುಂಬಿ ಹಾಡಿದೆನು ಅಂದು ನಾನು; ನೋಡು ಇದೊ ಇಲ್ಲರಳಿ ನಗುತಿದೆ; ಸುಗ್ಗಿ ಬಂದಿತು ಹಿಗ್ಗು ಹೊಮ್ಮಿತು; ಯಾವ ಹಾಡ ಹಾಡಲಿ*— ಇಂತಹ ಅನೇಕ ಕವಿತೆಗಳು ಶ್ರವಣ ಸಭೆಗೆ ಮಾತ್ರವಲ್ಲ ಹೃದಯರಂಜಕವೂ ಆಗಿವೆ. ಅದೇ ರೀತಿ 'ಶ್ರೀ ವಿವೇಕಾನಂದರಿಗೆ', 'ತಂಬೂರಿಯಿಂದ ತಕ್ಕಡಿಯ ತನಕ', 'ಕವಿ ರವೀಂದ್ರರನ್ನು ಕುರಿತು' ಮೊದಲಾದ ಕವಿತೆಗಳ ಉಕ್ತಿವಿಲಾಸ, ರೂಪಕಸೌಂದರ್ಯ ಅಸಾಮಾನ್ಯವಾದದ್ದು.

ವ್ಯಕ್ತಿ ಜೀವನದ ಋಜು ಕುಟಿಲತೆಗಳನ್ನೂ ಸಮಾಜ ಜೀವನದ ಸಂಕೀರ್ಣ ಸಮಸ್ಯೆಗಳನ್ನೂ ಶಿವರುದ್ರಪ್ಪನವರು ಸಮರ್ಥವಾಗಿ ನಿರೂಪಿಸಬಲ್ಲರು, ಮನೋಜ್ಞವಾಗಿ ವಿಶ್ಲೇಷಿಸಬಲ್ಲರು. ಒಮ್ಮೊಮ್ಮೆ ಅವರ ಲೇಖನಿ ಓದುಗನನ್ನು ಚುಚ್ಚಿ, ಕೆಣಕಿ, ಮೂದಲಿಸಿದರೆ ಮತ್ತೊಮ್ಮೆ ಬೆನ್ನುತಟ್ಟಿ, ತಲೆಮುಟ್ಟಿ ನೇವರಿಸಿ ಮುದ್ದು ಮಾಡುತ್ತದೆ. ಜೀವನದ ಡಾಂಭಿಕತೆ, ಸ್ವಾರ್ಥಪರತೆ, ಬರ್ಬರತೆ, ರೂಕ್ಷತೆಗಳನ್ನು ಕಂಡು, ಕೆರಳಿ ಶಿವರುದ್ರಪ್ಪ ಹೇಗೆ ವ್ಯಂಗ್ಯ-ವಿಡಂಬನೆಗಳ ಮಚ್ಚಿನಿಂದ ಕೊಚ್ಚಬಲ್ಲರೋ ಹಾಗೆಯೇ ಪ್ರೀತಿ-ವಿಶ್ವಾಸ, ಸತ್ಯ-ಸೌಂದರ್ಯಗಳಿಗೆ ಕರಗಿ ಒಲಿದು ಸುಕುಮಾರ ಶೈಲಿಯ ಕುಚ್ಚನ್ನು ಬಗೆಬಗೆಯ ಬಣ್ಣಗಳಲ್ಲಿ ಅದ್ದಿ ಮನಸ್ಸಿನ ಹಾಳೆಗೆ ಹಚ್ಚಬಲ್ಲರು. 'ಅನಾವರಣವಾಯಿತಂತೆ', 'ನಾಯಿಗಳಿವೆ ಎಚ್ಚರಿಕೆ', 'ಕನ್ನಡ ಕುಲಬಾಂಧವರ ಸ್ವಾಗತಗೀತೆ', 'ಗಾಂಧೀಶತಮಾನೋತ್ಸವ', 'ಜನಗಣಮನ ಅಧಿನಾಯಕ'—ಇಂತಹ ಕವಿತೆಗಳ ವ್ಯಂಗ್ಯ ವೈವಿಧ್ಯ ಎಷ್ಟು ಮರ್ಮಸ್ಪರ್ಶಿಯೋ, *ಓಹೋ ಬಂದರು ಕಡೆಗೂ ಬಂದರು; ಲಲನೆಯರ ಬೆನ್ನಿನಡೆ-ಹಾವಿನೊಲು ಜೋಲ್ವಜಡೆ; ಇವಳು ಹಿಗ್ಗಿನ ಬುಗ್ಗೆ-ಋತುವಸಂತನ ಲಗ್ಗೆ; ಕೈಹಿಡಿದ ಸರಪಳಿಯ ಜಗ್ಗುತಿದೆ ಕರಿನಾಯಿ; ಆರು ಗಂಟೆಯ ಮೊಳಗು; ಮೂಡಣದ ಹೆರಿಗೆ ಮನೆಯಲ್ಲಿ ಸಡಗರವೊ ಸಡಗರ*—ಇಂತಹ ಕವನ-ಪಂಕ್ತಿಗಳಲ್ಲಿ ವ್ಯಕ್ತವಾಗುವ ಉಲ್ಲಾಸ, ಕುತೂಹಲ, ವಾತ್ಸಲ್ಯ, ವಿಷಾದ, ಗಂಭೀರ ಭಾವಗಳೂ ಅಷ್ಟೇ ಮನೋಜ್ಞವಾಗಿವೆ. *ಒಂದೇ ಸಮನೆ ತಿನ್ನುವುದೇ ಕೆಲಸ* (ಹೊಟೇಲಿನಲ್ಲಿ). *ಕಾಯುತಿವೆ ಹಲವಾರು ಹರಕುಗಡ್ಡದ ಹೊದರು* (ಷೇವಿಂಗ್ ಸೆಲೂನಿನಲ್ಲಿ), *ಇರುಳ ಮೌನದ ಕೊರಡ ಕೊರೆಯುವ ಇವರ ಗೊರಕೆಯ ಗರಗಸ* (ಗೊರಕೆ)—ಈ ಬಗೆಯ ಕವಿತೆಗಳಿಂದ ಶಿವರುದ್ರಪ್ಪ ಓದುಗರಿಗೆ ಕಚಗುಳಿ ಇಟ್ಟು ಹೊಟ್ಟೆತುಂಬ ನಗಿಸಬಲ್ಲರು. ಹತ್ತು ಸ್ವತಂತ್ರ ಸಂಕಲನಗಳ ನಾನ್ನೂರೈವತ್ತಾರು ಕವನಗಳಿಂದ ಉದಾಹರಣೆಗಳನ್ನು ಎತ್ತಿ ಹೇಳುವುದು ಬಹುಕಷ್ಟ. ಕಣ್ಣು ಆಡಿಸಿದಲ್ಲೆಲ್ಲ, ಕೈಚಾಚಿದಲ್ಲೆಲ್ಲ ಒಂದೊಂದು ನುಡಿಮುತ್ತು ಹೊಳೆಹೊಳೆಯುತ್ತ, ಎತ್ತಿಕೋ ಎತ್ತಿಕೋ ಎನ್ನುತ್ತದೆ. ಅಷ್ಟು ಸಾಂದ್ರ ಸುಂದರ, ವರ್ಣಮಯವಾದದ್ದು ಶಿವರುದ್ರಪ್ಪನವರ ಕವನ ಭಂಡಾರ.

ಶಿವರುದ್ರಪ್ಪನವರ ಪದಗುಂಫನ, ಅಲಂಕಾರ ವರ್ಣನೆಗಳೂ ಸುದೀರ್ಘ ವಿವರಣೆಗೆ ಅರ್ಹವಾಗಿವೆ: *ಯಾರು ಕೊಟ್ಟರೋ ಬಾನಿಗೊಂದು ಬಂಗಾರದ ಮೆಡಲು; ಸಂಜೆ ಬಾನಿನ ತುಂಬ ಹಗಲ ನೆನಪಿನ ಚಿತ್ರ; ಹಗಲ ಬೆಳಕಿನ ಗಡಿಗೆಯೊಡೆದು ಚೂರಾಯಿತೋ; ದೇವಮಿಂಚಿನದೊಂಬ, ನೆಲ ನಿಮಿತ್ತಕ್ಕೆ ಮಾತ್ರ; ನೂರು ತರುವಿನ ತಳಿರ ಕೈಯಲ್ಲಿ ನೂರು ಹೂವಿನ ದೀಪವು, ಸಂಶಯದ ಕಡಲಲ್ಲಿ ಗೋಪುರದ ದೀಪ, ಎಲ್ಲೋ ಯಾರೋ ಒತ್ತಿದರು ಸ್ವಿಚ್ಚು*—ಹೀಗೆ ಅವರು ಅನಾಯಾಸವಾಗಿ ನಿರರ್ಗಳವಾಗಿ, ಮನನ ಮನೋಹರವಾಗಿ, ಶಬ್ದಚಿತ್ರಗಳನ್ನು ರೇಖಿಸಬಲ್ಲರು, ಪ್ರತಿಮೆಗಳನ್ನು ಕಡೆಯಬಲ್ಲರು. 'Poetry speaks in images' ಎಂಬುದಕ್ಕೆ ಶಿವರುದ್ರಪ್ಪನವರ ಕಾವ್ಯ ಉತ್ತಮ ಉದಾಹರಣೆಯಾಗುತ್ತದೆ

ಶಿವರುದ್ರಪ್ಪನವರು ಕವಿ—ಪದ್ಯಕವಿ ಎಂದು ಹೆಚ್ಚು ಪರಿಚಿತರು; ಅವರು ಒಳ್ಳೆಯ ಗದ್ಯ ಲೇಖಕರೆಂಬುದೂ ಅಷ್ಟೇ ನಿಜ. ಅವರು ಶಿವಶರಣ 'ಸಿದ್ಧರಾಮ'ನನ್ನು ಕುರಿತು 'ಕರ್ಮಯೋಗಿ'ಯೆಂಬ ಕಾದಂಬರಿಯನ್ನು ಬರೆದಿದ್ದಾರೆ; ರಷ್ಯಾ ಪ್ರವಾಸ ಮತ್ತು ಹಿಮಾಲಯದ ಚತುರ್ಧಾಮ ದರ್ಶನಗಳನ್ನು ವರ್ಣಿಸುವ ಎರಡು ಪ್ರವಾಸ ಪ್ರಬಂಧಗಳನ್ನು ರಚಿಸಿದ್ದಾರೆ; ಕಾವ್ಯ ತತ್ತ್ವ-ಸತ್ತ್ವಗಳನ್ನೂ ವಿಮರ್ಶೆಯ ಶಾಸ್ತ್ರ-ಸಾಗರಗಳನ್ನೂ ಕುರಿತು ಆರೇಳು ಗ್ರಂಥಗಳನ್ನು ನಿರ್ಮಿಸಿದ್ದಾರೆ; ಕನ್ನಡ ಸಾಹಿತ್ಯವನ್ನೂ ಸಮೀಕ್ಷಿಸಿದ್ದಾರೆ. ಶಿವರುದ್ರಪ್ಪನವರು ಹೇಗೆ ಸೂಕ್ಷ್ಮಗ್ರಾಹಿ ಸಂವೇದನಶೀಲ ಕವಿಯೋ ಹಾಗೆಯೇ ರಸಗ್ರಾಹಿ-ಚಿಂತನಶೀಲ ವಿಮರ್ಶಕರೂ ಹೌದು. ಪಿಎಚ್.ಡಿ. ಪದವಿಗಾಗಿ ಕುವೆಂಪು ಮಾರ್ಗದರ್ಶನದಲ್ಲಿ 1965ರಲ್ಲಿ ಅವರು ಸಿದ್ಧಪಡಿಸಿದ ಮಹಾಪ್ರಬಂಧ 'ಸೌಂದರ್ಯಸಮೀಕ್ಷೆ' ಮತ್ತು 1983ರಲ್ಲಿ ಪ್ರಕಟಿಸಿದ 'ಕಾವ್ಯಾರ್ಥ ಚಿಂತನ'—ಈ ಎರಡೂ ಸಾರ್ವಕಾಲಿಕ ಮೌಲ್ಯದ ಉದ್ಗ್ರಂಥಗಳು. ಶಿವರುದ್ರಪ್ಪನವರಿಗಿರುವ ಪೌರಸ್ತ್ಯ-ಪಾಶ್ಚಾತ್ಯ, ಪ್ರಾಚೀನ-ಅರ್ವಾಚೀನ, ಶಾಸ್ತ್ರ-ಸಾಹಿತ್ಯ ಪರಿಜ್ಞಾನವೂ ಅವರ ತುಲನಾತ್ಮಕ ದೃಷ್ಟಿಯೂ ಈ ಗ್ರಂಥಗಳಲ್ಲಿ ಪರಿಸ್ಫುಟವಾಗಿ ಪ್ರಕಟವಾಗಿವೆ. ಅವರ ವಿಮರ್ಶನ ವಿಧಾನವೂ ಶ್ಲಾಘನೀಯವಾದದ್ದು. ಕಣ್ಣಿಗೆ ಕಾಣುವ ಕಾವ್ಯವೃಕ್ಷದ ಫಲ-ಪುಷ್ಪಗಳ ಸ್ವಾದುತ್ವ, ಸೌರಭಗಳನ್ನು ಮಾತ್ರ ವಿವರಿಸುವುದರಲ್ಲಿ ಅವರು ತೃಪ್ತರಾಗುವುದಿಲ್ಲ; ಕಣ್ಣಿಗೆ ಕಾಣದ ಕಾವ್ಯದ್ರುಮದ ನಾರು-ಬೇರುಗಳನ್ನೂ ಅಗೆದು ಹಿಂಡಿ ನೋಡುವುದರಲ್ಲೂ ಅವರ ನಿಶಿತಮತಿ ಮಗ್ನವಾಗುತ್ತದೆ. ಅದಕ್ಕೆ ವಿಪುಲ ಉದಾಹರಣೆಗಳು ಬೇಕಿಲ್ಲ: 'ಪರಿಶೀಲನ'ವೆಂಬ ಸಂಗ್ರಹದಲ್ಲಿರುವ 'ರತ್ನಾಕರನ ಯೋಗಭೋಗದ ತೊಡಕು' ಎಂಬ ಒಂದು ಗದ್ಯಲೇಖನವೇ ಸಾಕು. ರತ್ನಾಕರವರ್ಣಿಯ ರಸಘಟ್ಟಿಯೆಂದು ಮಾನ್ಯವಾಗಿರುವ 'ಭರತೇಶ ವೈಭವ'ದಲ್ಲಿ ಅವನು ಮಾಡಿರುವ ಯೋಗ-ಭೋಗಸಮನ್ವಯ ಜೈನಮತ ತತ್ತ್ವದ ಮೂಲ ಕಲ್ಪನೆಗೇ ಹೇಗೆ ವಿರುದ್ಧವಾಗಿದೆ ಎಂಬುದನ್ನು ಅವರು ವಿವೇಚಿಸಿರುವ ರೀತಿ ಅತ್ಯಂತ ತರ್ಕಶುದ್ಧವೂ ವಿಚಾರ ಪ್ರಚೋದಕವೋ ಆಗಿದೆ.

ಡಾ. ಶಿವರುದ್ರಪ್ಪನವರು ಸಮನ್ವಯ ಕವಿಯೆಂದು ವರ್ಣಿತರಾದವರು. ಚೆನ್ನವೀರ ಕಣವಿ, ನಿಸಾರ್ ಅಹಮ್ಮದರಂತಹ ಕೆಲವರದೂ ಮಧ್ಯಮಾರ್ಗವೇ ಆದರೂ ಶಿವರುದ್ರಪ್ಪ ನವರ ಹೆಸರಿನೊಂದಿಗೆ ಆ ವಿಶೇಷಣಕ್ಕೆ ಅತಿಶಯ ವ್ಯಾಪ್ತಿ, ಪ್ರಸಿದ್ಧಿಗಳು ಪ್ರಾಪ್ತವಾಗಿವೆ. ನವೋದಯ ಕಾವ್ಯದಿಂದ ಪ್ರಭಾವಿತರಾಗಿ ಬರೆಯತೊಡಗಿದ ಶಿವರುದ್ರಪ್ಪ ನವ್ಯತೆಯ ಹೊಸಗಾಳಿಯನ್ನೂ ತಮ್ಮ ಎದೆಯಂಗಳಕ್ಕೆ ಬರಮಾಡಿಕೊಂಡವರು; ಮುಕ್ತಛಂದದಲ್ಲಿ ಅನೇಕ ಕವಿತೆಗಳನ್ನು ಬರೆದವರು. ಆದರೆ ನವ್ಯದ ಲಕ್ಷಣವೆನ್ನಲಾಗುವ ಭಾಷಾ ಸಂಕೀರ್ಣತೆ, ಅರ್ಥದುರೂಹ್ಯತೆಗಳ ಸೋಂಕು ಅವರ ಕವಿತೆಗಳಿಗೆ ಎಲ್ಲೂ ತಟ್ಟುವುದಿಲ್ಲ. ಶಿವರುದ್ರಪ್ಪನವರ ರಚನೆಗಳನ್ನು ಓದುತ್ತಿರುವಂತೆಯೇ "ಅರ್ಥಮುಕ್ತ, ಭಾವದೀಪ್ತ, ಧ್ವನಿಪ್ರಚುರ"ವಾದ ಸುಂದರ ಕಾವ್ಯ ಪ್ರಪಂಚವೊಂದು ಕಣ್ಣಮುಂದೆ ತೆರೆದುಕೊಳ್ಳುತ್ತದೆ.

'ನಾನೇಕೆ ಬರೆಯುತ್ತೇನೆ' ಎಂಬ ತಮ್ಮದೊಂದು ಕವಿತೆಯಲ್ಲಿ ಶಿವರುದ್ರಪ್ಪ ಹೇಳುತ್ತಾರೆ:

**ನಾನು ಬರೆಯುತ್ತೇನೆ**
**ಖುಶಿಗೆ, ನೋವಿಗೆ**
**ರೊಚ್ಚಿಗೆ ಮತ್ತು ಹುಚ್ಚಿಗೆ**
**ಅಥವಾ ನಂದಿಸಲಾರದ ಕಿಚ್ಚಿಗೆ**

ಕವನದ ತತ್ತಿಯೊಡೆಯಬೇಕಾದರೆ ಯಾವುದಾದರೊಂದು ಕಾವು ಬೇಕೇಬೇಕು. ಅದು ಶಿವರುದ್ರಪ್ಪ ಹೇಳಿದಂತೆ ಖುಶಿಯೋ ನೋವೋ ಹುಚ್ಚೋ ಕಿಚ್ಚೋ ಯಾವುದೂ ಆಗಬಹುದು. ಯಾವುದೇ ಇರಲಿ, ಕವಿ ಪ್ರತಿಭಾಶಾಲಿಯಾದರೆ ಪರಿಣಾಮ ರಮಣೀಯವೆನ್ನಿಸುತ್ತದೆ. ಶಿವರುದ್ರಪ್ಪನವರಲ್ಲಿ ಹಾಗೇ ಆಗಿರುವುದನ್ನು ಕಾಣುತ್ತೇವೆ. ಜೀವನ ನಿಷ್ಠೆ, ರಸೈಕದೃಷ್ಟಿ—ಇದು ಸಾಹಿತ್ಯಲೋಕದಲ್ಲಿ ಒಬ್ಬ ಲೇಖಕ ಅನುಸರಿಸಬಹುದಾದ ಮಾರ್ಗ. ಶಿವರುದ್ರಪ್ಪನವರದು ಅಂತಹ ಮಾರ್ಗಾನುಸರಣ. ಅವರು ಕವಿ-ವಾಚಕರ ನಡುವೆ ಗೋಡೆಗಳನ್ನು ಕಟ್ಟುವುದಿಲ್ಲ. ಬದಲು ಪರಸ್ಪರ ಹೃದಯ ಸಂವಾದವನ್ನು ಅಪೇಕ್ಷಿಸುತ್ತಾರೆ. ಅವರ ಬೇಡಿಕೆ ಇದು:

**ಒಂದಿಷ್ಟು ಜಾಗಕೊಡಿ ನನಗೆ ಈ ಮನೆಯಲ್ಲಿ**
**ನಾನು ಒಬ್ಬ ಕವಿ**
**ನನಗೆ ಬೇಕಾದದ್ದು ಹೃದಯವಿರುವಂಥ**
**ಐದೊ ಆರೊ ಕಿವಿ!**

ಅಂತಹ ಸಾವಿರಾರು ಕಿವಿಗಳನ್ನು ಪಡೆದಿರುವ ಈ ಕವಿಗೆ ನನ್ನ ನಮಸ್ಕಾರ!

*(ಮೂಲ: ಜಿಎಸ್‌ಎಸ್ ಅಧ್ಯಕ್ಷತೆ ವಹಿಸಿದ್ದ, ದಾವಣಗೆರೆಯಲ್ಲಿ ನಡೆದ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ 'ಉದಯವಾಣಿ' ಮ್ಯಾಗಸಿನ್ ವಿಭಾಗಕ್ಕೆ ಬರೆದ ಲೇಖನ: 22.12.1991)*



# ಬಡವರಾತ್ಮದ ಹಣತೆ

ಎಸ್. ನಟರಾಜ ಬೂದಾಳು

ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಸಂಸ್ಕೃತಿ ನಿರ್ಮಾಣ ಕೇಂದ್ರಗಳು ಗುರುತರವಾದ ಜವಾಬ್ದಾರಿಯೊಂದನ್ನು ನಿರ್ವಹಿಸಬೇಕಾಯಿತು. ಪ್ರಜಾತಂತ್ರೀಯ ವ್ಯವಸ್ಥೆಯಲ್ಲಿ ಸಾಮಾಜಿಕ ಮನುಷ್ಯನನ್ನು ಕೇಂದ್ರವಾಗಿಸಿಕೊಳ್ಳಬೇಕಾದ ಅನಿವಾರ್ಯತೆಯನ್ನು ಭಾರತೀಯ ಸಂವಿಧಾನ, ಗಾಂಧೀವಾದ, ಅಂಬೇಡ್ಕರ್ ವಿಚಾರಗಳು ಹಾಗೂ ಇತರೆ ಸಮಾಜವಾದಿ ಚಿಂತನೆಗಳು ಸೃಷ್ಟಿಸಿದವು. ಹೊಸ 'ಭಾರತೀಯ ಸಮಾಜ'ವೊಂದನ್ನು ಕಟ್ಟಿ ಕೊಡುವ ಅಥವಾ ರಾಷ್ಟ್ರವನ್ನು ಸಮಾಜವನ್ನಾಗಿಯೂ ನೋಡಬೇಕಾದ ಅಗತ್ಯ ಒದಗಿಬಂದಿತು.

ಇಂತಹ ಸಂಕ್ರಮಣ ಕಾಲದಲ್ಲಿ ಪ್ರಾಂತೀಯವಾಗಿ ಕೂಡ ಇದೇ ತೆರನಾದ ಒತ್ತಡಗಳ ಜೊತೆಗೆ ಲೋಕಭಾಷೆ, ಸಾಹಿತ್ಯ-ಸಂಸ್ಕೃತಿಯನ್ನು ವಿಸ್ತರಿಸಿಕೊಳ್ಳುವತ್ತ ಯೋಚಿಸ ಬೇಕಾಯಿತು. ಕನ್ನಡದ 'ಬದುಕನ್ನು' ಕಟ್ಟಿಕೊಡುವ ಇಂತಹ ಸಂಕಲ್ಪವನ್ನು ಒಂದು ತೀವ್ರ ಶ್ರದ್ಧೆಯನ್ನಾಗಿಸಿಕೊಂಡವರು ಕುವೆಂಪು. ಕುವೆಂಪುರವರ ನಾಟಕಗಳು, ವಿಚಾರಲೇಖನಗಳು, ಕಾವ್ಯ, ಮಹಾಕಾದಂಬರಿಗಳು ಆ ಕಡೆಗೆ ಗುರಿಯಿಟ್ಟು ಚಲಿಸಿರುವುದನ್ನು ಕಾಣಬಹುದು. ಕುವೆಂಪು ಕೈಮಾಡಿ ತೋರಿಸಿದ ಈ ಎಚ್ಚರದ ದಾರಿಯಲ್ಲಿ ಅವರ ವಿಚಾರಗಳ ಹಣತೆ ಹಿಡಿದು ಸಾಗಿದವರು ಜಿಎಸ್ಎಸ್. ನಮ್ಮ ನಡುವಿನ ಹಿರಿಯ ಚಿಂತಕರಾದ ಕೆ. ಎಂ. ಶಂಕರಪ್ಪನವರು ಆಗಾಗ್ಗೆ 'ಕುವೆಂಪು ಕಂದೀಲು ಹಿಡಿದು ಮುಂದೆ ನಡೆಯುವ ಅರ್ಹತೆ ಇರುವುದು ಜಿಎಸ್ಎಸ್‌ರವರಿಗೆ ಮಾತ್ರ' ಎನ್ನುತ್ತಿರುತ್ತಾರೆ. ಇದೊಂದು ಪ್ರಶಸ್ತಿಯೂ ಹೌದು, ಜವಾಬ್ದಾರಿಯೂ ಹೌದು.

ಅಲ್ಲಿ ಸೌಧಗಳಲ್ಲಿ
ಬೀದಿ ಸಾಲುಗಳಲ್ಲಿ
ಮಿಂಚು ಸೊಡರುಗಳೆನಿತೊ ಶೋಭಿಸಿರೆ ಕೋಟಿ
ಧ್ಯಾನ ಗಾಂಭೀರ್ಯದಲಿ
ಮತ್ತೆ ಸರಳತೆಯಲ್ಲಿ
ಯಾವುದೀ ಬಡಗುಡಿಸಲ ಸೊಡರುರಿಗೆ ಸಾಟಿ?

*(ಹಣತೆ-ಸಾಮಗಾನ)*

ಕುವೆಂಪು ಈ ಪ್ರಿಯಶಿಷ್ಯನಿಗೆ ಹಚ್ಚಿಕೊಟ್ಟದ್ದು 'ಬಡವರಾತ್ಮದ ಹಣತೆ'. ಜಿಎಸ್ಎಸ್ ಇಂದು ಹಿಡಿದು ಸಾಗುತ್ತಿರುವುದೂ ಅದನ್ನೇ.

ಕುವೆಂಪು ಪ್ರಾರಂಭಿಸಿಕೊಟ್ಟ ಸಾಮಾಜಿಕ ಮನುಷ್ಯನ ಶೋಧನೆಯ ಎಳೆಗಳನ್ನು ಹಿಡಿದು ಹೊರಟ ಜಿಎಸ್ಎಸ್ ಕನ್ನಡದ ಬದುಕನ್ನು ಕಟ್ಟುವ ಕೆಲಸಕ್ಕೆ ಆಯ್ಕೆ ಮಾಡಿಕೊಂಡ ಕ್ಷೇತ್ರಗಳು ಕಾವ್ಯ, ಮೀಮಾಂಸೆ, ವಿಮರ್ಶೆ, ಚಿಂತನಾಗೋಷ್ಠಿಗಳು ಮತ್ತು ಕನ್ನಡ ಪರ ವೈಚಾರಿಕ ಸಂಪನ್ಮೂಲದ ಕ್ರೋಢೀಕರಣ ಇತ್ಯಾದಿ. ಇವುಗಳ ಮೂಲಕ ಕನ್ನಡ ಪರಂಪರೆಯ ಸಾತತ್ಯಶೋಧನೆ, ಹಾಗೂ ಕನ್ನಡ ಸಾಹಿತ್ಯಕ್ಕೆ ತನ್ನ ಕಾಲಮಾನದ ಸವಾಲುಗಳಿಗೆ ಉತ್ತರ ಕಂಡುಕೊಳ್ಳುವ ಸಾಮರ್ಥ್ಯವನ್ನು ಗಳಿಸಿಕೊಡುವಲ್ಲಿ ಜಿಎಸ್ಎಸ್ 'ದುಡಿಮೆ' ತುಂಬಾ ಮಹತ್ವದ್ದೆಂದು ನನ್ನ ನಂಬಿಕೆ.

ಕನ್ನಡ ಕಟ್ಟುವ ಈ ಸಂದರ್ಭದಲ್ಲಿ ಜಿಎಸ್ಎಸ್ ಕನ್ನಡ ಸಾಹಿತ್ಯಕ್ಕೆ ಒದಗಿಸಿಕೊಟ್ಟ infrastructure ಅವರ ದೂರದರ್ಶಿ ಗುಣದ ಫಲ. ಕನ್ನಡ ಅಧ್ಯಯನ ಕೇಂದ್ರದಲ್ಲಿ ನಡೆದ ಗೋಷ್ಠಿಗಳು, ಪ್ರಕಟಗೊಂಡ ಪುಸ್ತಕಗಳು, ಅಲ್ಲಿ ರೂಪುಗೊಂಡ ಪ್ರತಿಭೆಗಳು, ಅವರು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದಾಗ ಪ್ರಕಟಗೊಂಡ ಭಾರತೀಯ ಸಾಹಿತ್ಯ ಸಮೀಕ್ಷೆಯ ಸಂಪುಟಗಳು ಇವೆಲ್ಲ ಕನ್ನಡಕ್ಕೊಂದು ನೆಲೆಗಟ್ಟನ್ನು ಒದಗಿಸಿಕೊಡುವಲ್ಲಿ ಅವರು ಪಟ್ಟ ಶ್ರಮವನ್ನು ಹೇಳುತ್ತವೆ.

ಜಿಎಸ್ಎಸ್ ಕನ್ನಡ 'ಕಾವ್ಯಚಿಂತನೆ'ಗೆ ತೌಲನಿಕ ಕ್ರಮವೊಂದನ್ನು ಒದಗಿಸಿಕೊಡುವುದರ ಮೂಲಕ 'ವಿಶ್ವದೃಷ್ಟಿ'ಯನ್ನು ತಂದುಕೊಟ್ಟಿದ್ದಾರೆ.

೨

ಸ್ವಾತಂತ್ರ್ಯೋತ್ತರ ಸಂದರ್ಭ ಅನೇಕ ದೃಷ್ಟಿಗಳಿಂದ ಸಂಕ್ರಮಣ ಕಾಲ. ವಸಾಹತುಶಾಹಿಯ ಹಿಡಿತದಿಂದ ಬಿಡುಗಡೆಗೊಂಡ ಮನುಷ್ಯ ಅದರ ರುಚಿಯನ್ನೊಂದಿಷ್ಟು ಸವಿಯುವ ಮೊದಲೇ ಅವನನ್ನು ಕವುಚಿಕೊಂಡ ಆಧುನಿಕತೆ, ನಗರೀಕರಣಗಳ ಪರಿಣಾಮದ ವಿಘಟನೆ ಮತ್ತು ಏಕಾಕಿತನ, ಸ್ವತಂತ್ರಭಾರತದಲ್ಲೂ ಮುಂದುವರಿದ ಭ್ರಷ್ಟಾಚಾರ ಮತ್ತು ಇತರೆ ಸಣ್ಣತನಗಳಿಂದಾದ ವಿಷಾದ ಸಾಮಾನ್ಯ ಮನುಷ್ಯನನ್ನು ಕಂಗೆಡಿಸಿದವು. ನವೋದಯದಲ್ಲಿಯೇ ಹಣಿಕಿಕ್ಕಲು ಪ್ರಾರಂಭಿಸಿದ ಈ ಪ್ರಜ್ಞೆಯನ್ನು 'ಇನ್ನೊಂದು ದಡ'ವಿದೆಯೆಂಬ ವಿಶ್ವಾಸದೊಂದಿಗೆ ನಿಭಾಯಿಸಿದ ಆ ಕಾಲಮಾನ ತನ್ನ ಬೆಂಬಲಕ್ಕೆ ಪ್ರಕೃತಿಯನ್ನೂ, ಕೌಟುಂಬಿಕ ವಾತ್ಸಲ್ಯವನ್ನೂ, ರಾಷ್ಟ್ರವೆಂಬ ಸಮೂಹ ಸ್ಪಂದನವನ್ನೂ ಬಳಸಿಕೊಂಡು ದಾಟಿಬಿಟ್ಟಿತು.

ಜಿಎಸ್ಎಸ್‌ರವರ ಅನೇಕ ಕವನಗಳಲ್ಲಿ ಈ ಅಂಶ ಕಾಣುತ್ತದೆ.

**ಮಗುವಿನ ಮೇಗಡೆ ತಾಯಿಯ ಸೆರಗಿದೆ**
**ಶ್ಯಾಮಲ ಪೃಥುವಿಗೆ ಶರ್ವರಿಯೋಲ್**

**ಅಲ್ಲಲ್ಲಿಯೆ ಶಿಶುದೇಹವು ಇಣುಕಿದೆ**
**ಸುಂದರ ಶಾರದ ನೀರದದೋಲ್**

*(ತಾಯಿಮಗು, ಸಾಮಗಾನ)*

ನಂತರ ಬಂದದ್ದು ಇಕ್ಕಟ್ಟಿನ ಕಾಲ. ಗೋಕಲದಿಂದ ನಿರ್ಗಮಿಸಿದ ಕೃಷ್ಣ ಮತ್ತೆ ಬರುವನೆಂಬ; ತನ್ನ ಮನೆ ಬಾಗಿಲಿಗೆ ರಾಮ ಬಂದೇ ಬರುವನೆಂಬ; ಭರವಸೆಗಳು ಕ್ರಮೇಣ ಸಡಿಲವಾಗ ತೊಡಗಿದವು. ನಂಬುಗೆಯ ಹಾದಿ ಬರಬರುತ್ತಾ ಕಿರಿದಾಗತೊಡಗಿತು.

**ಅಂಧಕಾರ ಮುತ್ತುತಿದೆ**
**ಚಂದದ ಬೆಳಕಾರುತಿದೆ**

**ಹಕ್ಕಿಯುಲಿಗಳಾಗಿ ಹೋಗಿ**
**ಮರಗಳಲ್ಲಿ ಮಲಗಿವೆ**
**ತರಗೆಲೆಗಳು ಸರಸರವೆನೆ**
**ವಿಕಟನಾದ ಗೈದಿವೆ**

**ಮೊರೆವ ಕಡಲ ತೆರೆಗಳಲ್ಲಿ**
**ಕಿರಿಯದೋಣಿ ನರಳಿವೆ**
**ಅಭಯವೀವ ತಾರೆಯೊಂದು**
**ಕಣ್ಗೆ ಕಾಣದಾಗಿದೆ**

*(ಅಂಧಕಾರ, ಸಾಮಗಾನ)*

—ಹೀಗೆ ಕವಿಯತ್ತ ಬಂದ ಕತ್ತಲೆಗೆ, ವರ್ತಮಾನದ ರೋಗಗಳಿಗೆ ಈ ಕವಿ ಕಂಡುಕೊಂಡ ಪರಿಹಾರ ತುಂಬಾ positive ಆದದ್ದು.

**ಕಿರಿಹಣತೆ ಕಿರಿದಾದರೇನು**
**ಬೆಳಕ ಬೀರುವ ಶಕ್ತಿ ಹಿರಿದಲ್ಲವೇನು?**

—ಹೀಗೊಂದು 'ನಂಬಿಕೆ'ಯ ಹಣತೆ ಹಚ್ಚಿಕೊಂಡ ಕವಿ ತನ್ನ ದಾರಿಗೊಂದಿಷ್ಟು ಬೆಳಕು ಮಾಡಿಕೊಂಡು ಮುನ್ನಡೆದರು. ಕಾಡುದಾರಿಯ ಕಲ್ಲುಮುಳ್ಳಿನ ಹಾದಿಗೆ ಸುಲಭ ಪರಿಹಾರ ಚಪ್ಪಲಿಗಳೆಂಬಂತೆ!

ಜಿಎಸ್ಎಸ್ ಕಾವ್ಯದುದ್ದಕ್ಕೂ ಅಳುವಿನ ಏಕಾಕಿ ದನಿಯೊಂದು ಕೇಳುತ್ತಲೇ ಇರುತ್ತದೆ. ಕವಿಯ ಬದುಕಿನ ಪ್ರಾರಂಭದಲ್ಲೇ ಹುಟ್ಟಿದ ಈ ತಾಯಹಂಬಲದ ಅಳು ಸಮಷ್ಟಿಯಲ್ಲಿಯೂ ತಾನಿರುವುದನ್ನು, ವಿಶ್ವದೆಲ್ಲೆಡೆ ವ್ಯಾಪಿಸಿರುವುದನ್ನು ಕಂಡು ದಿಗ್ಭ್ರಾಂತವಾಗಿದೆ.

**ಕಣ್ಣೀರ ಹೊಳೆಯಲ್ಲಿ ರಾಜ್ಯಗಳು ಉದಿಸಿದವು**
**ಕಣ್ಣೀರ ಹೊಳೆಯಲ್ಲಿ ಮುಕುಟಗಳು ತೇಲಿದುವು**
**ಕಣ್ಣೀರಿನಲಿ ಕಾಲ ದೇಶಗಳು ಕರಗುವುವು**

**ವಿಶ್ವದಲಿ ತೇಲುವೀ ಬ್ರಹ್ಮಾಂಡಗಳು ಎಲ್ಲ**
**ಕಣ್ಣೀರಿನುಂಡೆಗಳೋ, ಬಲ್ಲವನೆ ಬಲ್ಲ!**

ದುಃಖ ವಿಶ್ವವ್ಯಾಪಿಯಾಗಿರುವುದನ್ನು ಕಂಡ ಕವಿಗೆ ಪರಿಹಾರವಾಗಿ ದೊರಕಿದ ಮಾರ್ಗವೆಂದರೆ ಮತ್ತೆ ಅದೇ-ಕರುಣಾಮೈತ್ರಿ ಮಾರ್ಗ.

**ಆ ಬಗೆಯ ನೋವಿನಲಿ ಏನೊ ಚೆಲುವುಂಟು**
**ಪರರ ನೋವಿನ ಬಗೆಗೆ ಅನುಕಂಪವುಂಟು**

ಕವಿ ಹಿಡಿದ ಈ 'ಪ್ರೀತಿ'ಯ ದಾರಿ ಅವರನ್ನು ಅನೇಕ ಸಂದಿಗ್ಧಗಳಿಂದ ಪಾರುಮಾಡಿ ಯಶಸ್ಸಿನ ದಾರಿಯನ್ನು ಹಿಡಿಸಿದೆ, ಸಹಜವಾಗಿಯೇ ಬಡವರಾತ್ಮಕ್ಕೆ ಹತ್ತಿರವಾಗಿದೆ.

'ಸಾಮಾನ್ಯ ಮನುಷ್ಯ' ಎಂಬ ಸಮಷ್ಟಿಯ ಜೀವನಕ್ರಮವನ್ನು ಜಿಎಸ್‌ಎಸ್ ಗ್ರಹಿಸಿ ಪ್ರತಿಕ್ರಿಯಿಸಿದ ರೀತಿ ವಿಶಿಷ್ಟವಾದುದು. ಇಂದ್ರಿಯ ಸಮೇತ ಬದುಕುವ ಮನುಷ್ಯನ ಕಷ್ಟ-ಕೋಟಲೆಗಳು, ಇಕ್ಕಟ್ಟುಗಳು ಇವೆಲ್ಲದರ ನಡುವೆ ಜೀವನ ಪ್ರೀತಿಯ ಸೆಲೆ ಬತ್ತದ ಹಾಗೆ ನೋಡಿಕೊಳ್ಳುತ್ತ, ಜೀವನವನ್ನೆಂದೂ ವಿಕೃತಗೊಳಿಸದೆ ಬದುಕುವುದು ಶ್ರೇಷ್ಠವೆಂಬ ನಿಲುವು ಅವರದ್ದು. ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಮತ್ತು ಸಾಮಾಜಿಕ ಬದಲಾವಣೆಯ ಘಟ್ಟಗಳಲ್ಲಿ ಜಿಎಸ್‌ಎಸ್ ಉದ್ದಕ್ಕೂ ಪ್ರತಿಕ್ರಿಯಿಸುತ್ತ ತಮ್ಮ ನಿಲುವನ್ನು ಪ್ರಕಟಿಸುತ್ತ ಬಂದಿದ್ದಾರೆ. ಸಾಹಿತ್ಯಿಕ-ಸಾಂಸ್ಕೃತಿಕ ಸಂಗತಿಗಳು ತಿರುವಿಗೆ ಬಂದು ನಿಂತಾಗ ಒಬ್ಬ ಕವಿ-ವಿಮರ್ಶಕನ ಜವಾಬ್ದಾರಿಯಿಂದ ನುಣುಚಿಕೊಳ್ಳದೆ ಗಟ್ಟಿದನಿಯಲ್ಲಿ ತಮ್ಮ ಅಭಿಪ್ರಾಯವನ್ನು ದಾಖಲಿಸಿದ್ದಾರೆ.

ಕನ್ನಡ ನವೋದಯದ ಪ್ರಮುಖ ಸತ್ವಾಂಶಗಳಾದ ನಿಸರ್ಗದ ಚೇತೋಹಾರಿ ಅನುಭವ, ಆಶಾವಾದಿ ನೆಲೆಗಳಿಂದ ಹೊರಡುವ ಮಾರ್ದವತೆ, ನಗರೀಕರಣದಿಂದುಂಟಾದ ವಿಘಟನೆಯ ತಲ್ಲಣ, ಉದಾರ ಮಾನವತಾವಾದ, ಕುವೆಂಪುರವರು ಪರಿಭಾವಿಸಿದ ಪ್ರಕೃತಿಯಲ್ಲಿನ ಅದ್ವೈತ ಮುಂತಾದ ಅಂಶಗಳನ್ನು ತಮ್ಮ ಕಾವ್ಯದ ಪ್ರಧಾನ ನೆಲೆಗಳನ್ನಾಗಿ ಮಾಡಿಕೊಂಡ ಉದಾರವಾದೀ ನಿಲುವಿನ ಕವಿ ಜಿಎಸ್‌ಎಸ್. ಅವರ ಕಾವ್ಯ ಸ್ವಲ್ಪ ಕಾಲ ಕುವೆಂಪು ಕಾವ್ಯದ ಮುಂದುವರಿಕೆಯಂತಿದ್ದು, ಮಾನವತಾವಾದವನ್ನೇ ತನ್ನ ಪ್ರಮುಖ ನೆಲೆಯನ್ನಾಗಿ ಮಾಡಿಕೊಂಡು; ಸಾಮಾನ್ಯರನ್ನೇ ತನ್ನ ಓದುಗರನ್ನಾಗಿಸಿಕೊಳ್ಳುವ ಬಯಕೆಯಿಂದ ಹೊರಟು, ಬದುಕಿಗೊಂದು ತಾತ್ವಿಕ ನೆಲೆಗಟ್ಟನ್ನು ರೂಪಿಸಿಕೊಡುವ ಜವಾಬ್ದಾರಿಯನ್ನು ಆವಾಹಿಸಿಕೊಂಡದ್ದು. ಆದ್ದರಿಂದ ಆದರ್ಶ ಮಾನವತಾವಾದ ಇವರಿಗೊಂದು ಅನಿವಾರ್ಯ. ಈ ನೆಲೆಯ ಕಾವ್ಯ ತಣ್ಣನೆಯ ಮನಸ್ಸಿನ ಓದುಗಸ್ಥಿತಿಯನ್ನು ಬೇಡುವ ಕಾರಣದಿಂದಾಗಿ, ತೀವ್ರ ಏಕಾಗ್ರತೆಯ ಖಚಿತ ತೀಕ್ಷ್ಣತೆಯ ಕಾವ್ಯ ಸಮಾಜಕ್ಕೆ ಅಷ್ಟೊಂದು ಆಕರ್ಷಕವಾಗಲಾರದೆನ್ನುವ ಮಾತೂ ಇದೆ.

ನವೋದಯದ ಉಬ್ಬರದಲ್ಲಿ ಪ್ರಾರಂಭವಾದ ಜಿಎಸ್‌ಎಸ್ ಕಾವ್ಯ ಈ ಶತಮಾನದ ಎಲ್ಲ ಕಾವ್ಯ ಘಟ್ಟಗಳಿಗೂ ತನ್ನದೇ ಆದ ರೀತಿಯಲ್ಲಿ ಪ್ರತಿಕ್ರಿಯಿಸಿದೆ. ಅವರ ಈ ತೆರನಾದ ಪ್ರತಿಕ್ರಿಯೆ ಆಧುನಿಕ ಕನ್ನಡ ಕಾವ್ಯದ ಬೆಳವಣಿಗೆಯನ್ನು ಒಂದು ದೃಷ್ಟಿಕೋನದಿಂದ

ದಾಖಲಿಸುತ್ತದೆ. ಜೊತೆಗೆ ಬದಲಾದ ಘಟ್ಟಗಳಲ್ಲಿ ಕರಗಿಹೋಗದೆ ಉಳಿದ ಗಟ್ಟಿತನವೊಂದನ್ನು ಗುರುತಿಸಲು ಸಾಧ್ಯವಾಗುತ್ತದೆ.

ಜಿಎಸ್ಎಸ್‌ರವರಲ್ಲಿ ರೂಪುಗೊಂಡ ಆಧ್ಯಾತ್ಮದ ಮೇಲೆ ಅನೇಕ ಪ್ರಭಾವಗಳಿವೆ. ಕುವೆಂಪುರವರ ವಿಚಾರಗಳು, ರಾಮಕೃಷ್ಣಾಶ್ರಮ, ಅರವಿಂದರು ಇತ್ಯಾದಿ ಪ್ರಭಾವಗಳಿಂದ ರೂಪಿತವಾಗಿರುವ ಇವರ ಆಧ್ಯಾತ್ಮ ಬಹುಮುಖೀ ನೆಲೆಯ ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಸತ್ವವನ್ನು ಹೀರಿಕೊಂಡಿರುವುದರ ಬಗೆಗೆ ಅನುಮಾನ ಸಾಧ್ಯ. ಇಂತಹ ಸಂಗತಿಗಳು ಅವರ ವಿಮರ್ಶೆ ಮತ್ತು ಕಾವ್ಯಮೀಮಾಂಸೆಯ, ತೌಲನಿಕ ಅಧ್ಯಯನಗಳ ವ್ಯಾಪ್ತಿಯನ್ನು ಕುಗ್ಗಿಸಿರಲೂ ಸಾಕು.

ಆಧುನಿಕ ಕನ್ನಡ ಕಾವ್ಯ ತೀರಾ ಮಿತವಾದ ಸಂವಹನ ಸಾಧ್ಯತೆಗಳನ್ನು ಹೊಂದಿರುವುದು ನಿಚ್ಚಳವಾದ ಸಂಗತಿ. ಅನಕ್ಷರತೆಯಂತಹ ಬಹಳ ಮುಖ್ಯ ಕಾರಣಗಳಿಂದ ಹಿಡಿದು ಕೇವಲ ಅಕೆಡೆಮಿಕ್ ವಲಯಕ್ಕೆ ಮಾತ್ರ ಮಿತಗೊಂಡ ಕಾವ್ಯ ಚಟುವಟಿಕೆಯ ಕಾರಣಗಳು ಗೋಚರಿಸುತ್ತವೆಯಾದರೂ, ಈ ನೆಲದ ತೀರಾ ಸಾಮಾನ್ಯನಿಂದ ಕಟ್ಟಲ್ಪಟ್ಟಿರುವ ಮತ್ತು ಇಂದೂ ಜೀವಂತವಾಗಿರುವ 'ದೇಸಿ ಕಾವ್ಯ ಸಮಾಜ' ಅಕ್ಷರದ ಹಂಗನ್ನು ಕಾಲಾತೀತವಾಗಿ ತೊರೆದಿರುವುದನ್ನು ನೋಡಬಹುದು. ಇನ್ನು ವಚನಗಳಿಂದ ಹಿಡಿದು ದೇಸಿ ಮಹಾಕಾವ್ಯಗಳು ಹಾಗೂ ತತ್ವಪದ ಪರಂಪರೆಯನ್ನು ಗಮನಿಸಿ ಹೇಳುವುದಾದರೆ ಕಾವ್ಯಕ್ರಿಯೆಯ ಹಿಂದಿರುವ ಬೌದ್ಧಿಕ ತರಬೇತಿಯ ಅಗತ್ಯವನ್ನು ದೇಸಿ ಕಾವ್ಯ ಸಮಾಜ ನಿರ್ವಿವಾದವಾಗಿ ಒಪ್ಪಿಕೊಂಡಿದೆ. ಪ್ರಗತಿಪರ ದೃಷ್ಟಿಕೋನ, ತರತಮ ನಿವಾರಣೆಯಂತಹ ವಿಷಯಗಳಿಗೆ ಕೂಡಾ ದೇಸೀಕಾವ್ಯ ಸಮಾಜ ಕುರುಡಲ್ಲ. ತತ್ವಪದ ಪರಂಪರೆಯಿಂದ ಹದಗೊಂಡ ನೆಲದಲ್ಲಿ ಆಧುನಿಕ ಕನ್ನಡಕಾವ್ಯ ಹುಲುಸಾದ ಸಂವಹನ ಸಾಧ್ಯತೆಗಳನ್ನೇಕೆ ಕಂಡುಕೊಳ್ಳಲಿಲ್ಲ ಎನ್ನುವುದಕ್ಕೆ ಉತ್ತರವನ್ನು ಹುಡುಕಿಕೊಳ್ಳಬೇಕಿದೆ. ದೇಸಿಕಾವ್ಯದೊಡನೆ ಸಂವಾದಿಸುವ ಕನ್ನಡದ ಅಕೆಡೆಮಿಕ್ ವಲಯ ಪ್ರಯತ್ನಗಳನ್ನು ತೀರಾ ತಡವಾಗಿ ಈಗಲಾದರೂ ಪ್ರಾರಂಭಿಸಿದೆ ಎನ್ನುವುದು ಸಮಾಧಾನದ ಸಂಗತಿ ಮತ್ತು ಇಂತಹ ಪ್ರಯತ್ನಗಳ ಹಿಂದೆ ಜಿಎಸ್ಎಸ್ ಕೊಡುಗೆಯ ಪರೋಕ್ಷ ಪ್ರಭಾವ ಇರುವುದನ್ನು ಗಮನಿಸಬಹುದು.

ಜಿಎಸ್ಎಸ್ ಸಾಮಾನ್ಯರನ್ನು ಹೆಚ್ಚು ತಲುಪಬಯಸಿದ ಕವಿ. ಸಾಂಸ್ಕೃತಿಕವಾಗಿ ಉದಾರವಾದೀ ನಿಲುವಿನ ಜಿಎಸ್ಎಸ್ ಧಾರ್ಮಿಕ ಮೂಲಭೂತವಾದ, ಮೌಢ್ಯ, ಜಾತೀಯತೆ, ನೆಲದ ಭಾಷೆಯ ಬಗೆಗಿನ ಅನಾಸಕ್ತಿ ಮುಂತಾದುವುಗಳ ಬಗೆಗೆ ಸಾಕಷ್ಟು ಗಡುಸಾಗಿ ಪ್ರತಿಕ್ರಿಯಿಸುವವರು. ಆದರೆ ಎಲ್ಲವನ್ನೂ ಗುಡಿಸಿ ಹಾಕಿಬಿಡುವ ಕಸಬರಿಕೆ ನಿಲುವಿನವರಲ್ಲ. ವಿರೋಧಿಗಳೊಡನೆಯೂ ಸಂವಾದಿಸುವ ಸಹನೆ-ಸಹಿಷ್ಣುತೆ ಉಳ್ಳವರು. ಸಾಮಾಜಿಕ ವ್ಯಕ್ತಿತ್ವ ಮತ್ತು ಸಾಹಿತ್ಯಿಕ ನಿಲುವುಗಳನ್ನು ಬೇರೆ ಬೇರೆಯಾಗಿ ಎಂದೂ ಗ್ರಹಿಸದ ಜಿಎಸ್ಎಸ್ ಮಾನವೀಯತೆ ಮತ್ತು ಪ್ರೀತಿಯ ಅನ್ವೇಷಣೆಯನ್ನೇ ತಮ್ಮ ಕಾವ್ಯದ ಮುಖ್ಯ ಕಾಳಜಿಯನ್ನಾಗಿ ಮಾಡಿಕೊಂಡವರು. ಈ ಕರುಣಾ-ಮೈತ್ರಿಯ ಕವಿಗೆ ಅಭಿನಂದನೆಗಳು. ■

# ಜಿಎಸ್‌ಎಸ್ ಅವರ, ಮೂರು ದಶಕದ ಕವಿತೆ

ಡಾ|| ಡಿ. ಆರ್. ನಾಗರಾಜ

(1)

ಕಾವ್ಯ ಚರಿತ್ರೆಯಲ್ಲಿ ಸಂಪ್ರದಾಯವಾದಿಗಳು ಮತ್ತು ವಾಮಪಂಥೀಯರು ತಮ್ಮೆಲ್ಲ ಶಕ್ತಿಗಳೊಂದಿಗೆ ರಂಗಕ್ಕೆ ಬಂದು ನಿಂತಾಗ ವಿಮರ್ಶಾ ಪರಂಪರೆಯೊಂದರ ಮೂಲಭೂತ ಗುಣವಾದ ಬಹುಮುಖೀ ಪ್ರಜ್ಞೆ ಅಲುಗಾಡತೊಡಗುತ್ತದೆ. ಮೇಲಿನೆರಡು ಮಾರ್ಗಗಳ ಕವಿಗಳು ತಮ್ಮ ಒಳದ್ರವ್ಯವನ್ನು ಕಾಪಾಡಿಕೊಳ್ಳುವುದು ತಮ್ಮ ಆಕ್ರಮಣಶೀಲತೆಯ ಮೂಲಕ. ಅವರ ಈ ತೀವ್ರ ಏಕಾಗ್ರತೆಯ ಸೃಷ್ಟಿಯನ್ನು ನಿಟ್ಟಿಸಿ ನೋಡ ನೋಡುತ್ತಿದ್ದ ಹಾಗೆ ವಿಮರ್ಶೆ ಕೂಡಾ ಅದೇ ಬಗೆಯ ಏಕಾಗ್ರತೆಗೆ ತಲುಪುತ್ತದೆ; ತಾನು ಧ್ಯಾನಿಸುತ್ತಿದ್ದ ವಸ್ತುವಿನ ಜೊತೆಗೇ ಬೆರೆತುಹೋಗುತ್ತದೆ.

1950ರ ದಶಕದಿಂದಾಚೆಗೆ ಕನ್ನಡ ಕಾವ್ಯ ಮತ್ತು ವಿಮರ್ಶೆಯ ಕ್ಷೇತ್ರದಲ್ಲಿ ಇದೇ ಬಗೆಯ ವಿದ್ಯಮಾನ ಸಂಭವಿಸುತ್ತಿದೆ ಎಂದು ಈ ಲೇಖಕನ ಅನಿಸಿಕೆ. ಮೊದಲು ಗೋಪಾಲಕೃಷ್ಣ ಅಡಿಗರ ಆಯಸ್ಕಾಂತ ಪ್ರತಿಭೆ, ನಂತರ 70ರ ದಶಕದಲ್ಲಿ ವಾಮಪಂಥೀಯ ಮೌಲ್ಯಗಳ ಸಾಹಿತ್ಯದ ವಿಜೃಂಭಣೆ—ಹೀಗಾಗಿ, ಒಟ್ಟಾರೆಯಾಗಿ ಕನ್ನಡ ವಿಮರ್ಶೆ ಸೃಜನಶೀಲತೆಯ ಬಗೆಗೆ ಬಹುಮುಖೀ ಪ್ರಜ್ಞೆಯನ್ನು ಮಸುಕಾಗಿಸಿಕೊಂಡಿತು.

ಈ ಕಾರಣದಿಂದಾಗಿ ಮೇಲಿನೆರಡೂ ಕಾವ್ಯ ಮಾರ್ಗಗಳಿಗಿಂತ ಭಿನ್ನವಾಗಿ ಸೃಷ್ಟಿಸುವ ಕವಿಗಳ ಬಗೆಗೆ ಅವಶ್ಯಕವಿದ್ದಷ್ಟು ಗಮನ ಬೀಳದೆಹೋಯಿತು. ಅದರಲ್ಲೂ, ಉದಾರವಾದಿ ಕಾವ್ಯ ಮಾರ್ಗದ ಪ್ರಮುಖ ಕವಿಗಳಾದ ಗಂಗಾಧರ ಚಿತ್ತಾಲ, ಕೆ.ಎಸ್. ನರಸಿಂಹಸ್ವಾಮಿ, ಜಿ.ಎಸ್. ಶಿವರುದ್ರಪ್ಪ, ಚೆನ್ನವೀರ ಕಣವಿಯವರ ಕಾವ್ಯದ ವೈಶಿಷ್ಟ್ಯತೆಯ ಬಗೆಗೆ ಗಾಢ ಚರ್ಚೆ ಆಗಲೇ ಇಲ್ಲ. ಈ ಕವಿಗಳ ಕಾವ್ಯದ ಬಗ್ಗೆ ಚರ್ಚಿಸುವಾಗಲೂ ತೀವ್ರ ಏಕಾಗ್ರತೆಯ ಕಾವ್ಯದ ಪ್ರಭಾವಲಯದಲ್ಲಿ ನಿಂತೇ ಅರ್ಥೈಸುವ ಪ್ರಯತ್ನ ಮಾಡಲಾಯಿತು. ಆಧುನಿಕ ಕನ್ನಡ ಕಾವ್ಯದ ಮೊದಲ ನಟ ಗೋಪಾಲಕೃಷ್ಣ ಅಡಿಗರು (ನೀಷೆ ತನ್ನ ಮೇಲಿನ ಪ್ರಭಾವಗಳಲ್ಲೊಂದಾದ ಸಂಗೀತಗಾರ ವ್ಯಾಗ್ನರನನ್ನು ಕುರಿತು ಬಳಸಿದ ಮಾತು ಇದು) ಎಂಬ ಅಂಶವನ್ನು ಗಮನಿಸಿದಾಗ ಕಳೆದೆರಡು ದಶಕಗಳಲ್ಲಿ ವಿಮರ್ಶೆಯನ್ನು ಬರೆದವರ ಸಮಸ್ಯೆಗಳು ಸ್ಪಷ್ಟವಾಗುತ್ತವೆ. ಅದು ಕಣ್ಣು ಕೀಳಲಾರದಷ್ಟು ಬೆರಗಿನ ನೋಟ.

ಆದರೆ ಅಡಿಗರ ಕಾವ್ಯದಲ್ಲಿ ಕಾಣದಿರುವ, ಈಗಿನ ವಾಮಪಂಥೀಯ ಕಾವ್ಯ ಇನ್ನೂ ಒಳಗೊಳ್ಳದಿರುವ ಅನೇಕ ಮಹತ್ವದ ಅನುಭವ ವಲಯಗಳು ಮೇಲೆ ಹೆಸರಿಸಿದ ಕವಿಗಳಲ್ಲಿ ಸಾಕಷ್ಟು ಶಕ್ತಿಯುತವಾಗಿಯೇ ಪ್ರಕಟವಾಗಿವೆ. ಕನ್ನಡ ನವೋದಯದ ಪ್ರಮುಖ ಸತ್ವಾಂಶಗಳ ಮುಂದುವರಿಕೆ ಇದು ಎಂದರೂ ಸಲ್ಲುತ್ತದೆ. ನಿಸರ್ಗದ ಚೇತೋಹಾರಿ ಅನುಭವ, ಅನುಭಾವೀ ಕಂಪನಗಳು, ಆಶಾವಾದೀ ನೆಲೆಗಳಿಂದ ಹೊರಡುವ ಮಾರ್ದವತೆ, ಮಾನವತಾವಾದ—ಈ ಎಲ್ಲ ಅಂಶಗಳನ್ನು ಕನ್ನಡದ ಉದಾರವಾದಿ ಕಾವ್ಯಮಾರ್ಗದಲ್ಲಿ ಕಾಣುತ್ತೇವೆ. ಅಡಿಗರ, ವಾಮಪಂಥೀಯರ, ಆಕರ್ಷಕ ತೀವ್ರತೆಯಿಂದಾಚೆಗೆ ಹೋಗಿ ಕಾವ್ಯಜೀವನದ ಈ ಉಲ್ಲಾಸಕರ ಅನುಭವಗಳನ್ನು ಪಡೆಯಬೇಕು ಎಂಬ ಅನುಭವ ಎಲ್ಲ ಕಾವ್ಯಾಭಿಮಾನಿಗಳಲ್ಲೂ ಸಹಜವಾಗಿಯೇ ಹರಿಯುತ್ತಿರುತ್ತದೆ ಎಂಬುದಕ್ಕೆ ಈ ಕವಿಗಳಿಗೆ ಸಾಮಾನ್ಯ ಕಾವ್ಯಾಭಿಮಾನಿಗಳಿಂದ ಸಿಕ್ಕಿರುವ ಮೌನ ಬೆಂಬಲವೇ ಸಾಕ್ಷಿ.

ಕನ್ನಡ ನವೋದಯದ ತುಂಬುಸಮೃದ್ಧತೆಯಿಂದ ಬಹಳಷ್ಟನ್ನು ಪಡೆದು ಮನದುಂಬಿಸಿ ಕೊಂಡು ತಮ್ಮ ದಾರಿ ಹುಡುಕುತ್ತ ಹೊರಟ ಪಥಿಕರು ಇವರು. ಕಹಿತನದ, ಒಂಟಿತನದ, ಬಿಕ್ಕಟ್ಟಿನ ತೀವ್ರ ಅನುಭವವನ್ನೂ ತಮ್ಮ ಕಾವ್ಯದಲ್ಲಿ ಹೇಳಿಯೂ ನವೋದಯದ ಉಲ್ಲಾಸವನ್ನು ಮತ್ತೆ ಮತ್ತೆ ಬದುಕಬಯಸಿದ ಕವಿಗಳು ಈ ನಾಲ್ಕು ಜನ. ನವೋದಯದ ಪ್ರಮುಖ ಗುಣವಾದ ಉದಾರವಾದವನ್ನು ಎಲ್ಲ ಹೊಡೆತಗಳಿಂದ ಸಾಧ್ಯವಿದ್ದಷ್ಟು ರಕ್ಷಿಸಿ ಮುನ್ನಡೆಸಿದ ಈ ಕವಿಗಳ ವಿಶೇಷ ಅಧ್ಯಯನ ನಡೆದರೆ, ಅದು ಕನ್ನಡ ವಿಮರ್ಶೆಯ ಮತ್ತೊಂದು ಬಗೆಯ ಜೀವನ ದರ್ಶನದ ವೈಶಿಷ್ಟ್ಯವನ್ನು ಮನಗಾಣಿಸಲಿದೆ.

ಜಿ.ಎಸ್. ಶಿವರುದ್ರಪ್ಪನವರ ಕಾವ್ಯದ ಸ್ಥೂಲ ಸಮೀಕ್ಷೆಯನ್ನು ಮಾಡುವ ಆಶಯವನ್ನು ಹೊಂದಿರುವ ಈ ಪುಟ್ಟ ಬರಹದ ಹಿನ್ನೆಲೆಯಲ್ಲಿ ಕೆಲಸ ಮಾಡಿರುವ ತಾತ್ವಿಕ ನೆಲೆ ಮೇಲಿನದು.

**(2)**

ಜಿಎಸ್‌ಎಸ್‌ರ ಕಾವ್ಯದ ಮೊದಲ ಘಟ್ಟವನ್ನು ಸೌಂದರ್ಯಾತ್ಮಕ ಘಟ್ಟ ಎಂದು ಕರೆಯಬಹುದು; ಆ ಕಾವ್ಯ ಮಿರಾಂಡಳ ರೀತಿಯದು. ಮೇಲೆ ಕಣ್ಣಿಟ್ಟ ಕಡೆಗೆಲ್ಲ ಜ್ಯೋತಿ ರ್ಮಾಲೆ ಕಾಣುವಂಥ ಆ ಕಾವ್ಯ ಲೋಕ ಅತ್ಯಂತ ಬಿಕ್ಕಟ್ಟಿನ ಗಳಿಗೆಗಳಲ್ಲಿ, ಮೆಲ್ಲನೆ ಮನಸ್ಸನ್ನು ತೇಲಿಸುವಂಥದು. ಕಾವ್ಯದ ಬಗೆಗೆ ನಾವೆಷ್ಟೋ ಕ್ರಿಯಾಶೀಲ ಸಿದ್ಧಾಂತಗಳನ್ನು ಹೇಳಿದರೂ, ಒಳಗೆಲ್ಲೋ ಮನಸ್ಸು ತುಡಿಯುವುದು ಈ ಬಗೆಯ ಕಾವ್ಯಾನುಭಾವಕ್ಕೇ. ಬಹುಶಃ ಕಾವ್ಯದ ಉತ್ಕಟ ಕ್ರಿಯಾಶೀಲತೆ ಇರುವುದು ಈ ಪ್ರತಿಲೋಕ ಸೃಷ್ಟಿಯಲ್ಲೆ. ಹೀಗಾಗಿ, ಜಿಎಸ್‌ಎಸ್‌ರ ಮೊದಲ ಘಟ್ಟದ ಭಾವಗೀತೆಗಳು ಈಗಲೂ ನನಗೆ ಪ್ರಿಯ ವಾದವುಗಳೇ. ಶಬ್ದಗಳ ಗುಂಗಿಗೆ ಪ್ರತಿಸ್ಪಂದಿಸಲು ಆಗ ತಾನೆ ಕಿವಿ ತೆರೆಯುತ್ತಿದ್ದ ದಿನಗಳಲ್ಲಿ ಕೇಳಿದ ಒಂದಷ್ಟು ಹಾಡುಗಳು ಈಗಲೂ ಕಿವಿಯಲ್ಲಿ ತೇಲುತ್ತವೆ. (ಅವನ್ನು ಹಾಡಿದ

ಹುಡುಗಿಯರ ನೆನಪು ನನ್ನ ಮಟ್ಟಿಗೆ ಈ ಗೀತೆಗಳಿಗೆ ಮತ್ತಷ್ಟು ಶೋಭೆ ತಂದಿದೆ). "ಅಲ್ಲಿ-ಇಲ್ಲಿ", "ನೆಲದ ಕರೆ", "ಹಳೆಯಹಾಡು", "ತೃಪ್ತಿ", "ಶಾಕುಂತಲ ಸಂಧ್ಯೆ" ಮುಂತಾದ ಕವನಗಳು ಅವುಗಳ ಭಾವನಾ ವಾತಾವರಣದ ಮಾರ್ದವತೆಯ ಕಾರಣಕ್ಕಾಗಿಯೇ ಹೆಚ್ಚು ಪ್ರಿಯವಾಗುವಂಥವು. ಜಿಎಸ್‌ಎಸ್‌ರ ಮೊದಲ ಮೂರು ಕವನ ಸಂಕಲನಗಳು ಈ ಘಟ್ಟಕ್ಕೆ ಸೇರುತ್ತವೆ.

ಒಂದು ಬಗೆಯ ಸಾತ್ವಿಕ ಹುಚ್ಚುತನ ಈ ಘಟ್ಟದ ಮುಖ್ಯ ಗುಣ. ಚೆಲುವಿನ ಆರಾಧನೆ ಇಲ್ಲಿಯ ಪ್ರಮುಖ ಅನುಭವವಾದರೂ ಅದು ಎಲ್ಲಿಯೂ ಬೊಹೀಮಿಯನ್ ಆಗುವುದಿಲ್ಲ. ನೀತಿ-ಅನೀತಿಗಳ ಲೋಕಗಳ ವ್ಯತ್ಯಾಸವನ್ನೂ ಕತ್ತರಿಸಿ ಹಾಕುವ ಇಂದ್ರಿಯ ಗಮ್ಯ ಅನುಭವಗಳ ಉತ್ಕಟ ಶೋಧನೆ ಇಲ್ಲಿಲ್ಲ. ಬದಲಾಗಿ, ಚೆಲುವೆಂಬುದು ಮನಸ್ಸನ್ನು ಉನ್ನತೀಕರಿಸುವ ಒಂದು ಅನುಭವವಾಗಿ ಪ್ರಕಟವಾಗುತ್ತದೆ. ಹುಚ್ಚುತನ ಬೋದಿಲೇರ್‌ನ ಅನುಭವದ ಹಾಗೆ ಗಾಜಿನಂಗಡಿಯೊಳಗೆ ನುಗ್ಗಿದ ಜೋಡಿಗೂಳಿಯಾಗುವುದಿಲ್ಲ. ಬದಲಾಗಿ, ಒಂದು ದಿವ್ಯ ವಿಸ್ಮಯದ ಎತ್ತರಕ್ಕೆ ಓದುಗನನ್ನು ಅದು ಕರೆದೊಯ್ಯುತ್ತದೆ. "ಜಡೆ" ಕವನ ಇದಕ್ಕೆ ಸಾಕ್ಷಿ. ಚೆಲುವಿನ Pantheist ಆರಾಧನೆಯಂತೆ ಬೆಳೆದುನಿಲ್ಲುವ ಈ ಕವನ ಕೊನೆಗೆ ಸಾಧಿಸುವ ವಿಸ್ಮಯ ಇಡೀ ಕವನದ ಅನುಭವವನ್ನೆ ಪರಿವರ್ತಿಸಿಬಿಡುತ್ತದೆ.

ಜಿಎಸ್‌ಎಸ್ ಅವರ ಸೌಂದರ್ಯಾರಾಧನೆಗೂ, ಹತ್ತೊಂಬತ್ತನೆ ಶತಮಾನದ ಯೂರೋಪಿಯನ್ ಸೌಂದರ್ಯಾರಾಧಕರ ನಿಲುವುಗಳಿಗೂ ಇರುವ ವ್ಯತ್ಯಾಸ ಅಪಾರವಾದದ್ದು. ಭಗ್ನಗೊಂಡ ಬದುಕಿನ ನೆಲೆಗಳಿಂದ, ತೀವ್ರ ಬಿಕ್ಕಟ್ಟಿನ ಅರಿವಿನಿಂದ ಹುಟ್ಟಿದ ಸೌಂದರ್ಯಾರಾಧನೆ ಅದು. ಜೀವನ ಮತ್ತು ಸೌಂದರ್ಯಾನ್ವೇಷಣೆ ಪರಸ್ಪರ ವಿರೋಧಿಗಳು ಎಂಬ ನೆಲೆಗಳಿಂದ ಹೊರಟು ಎರಡನೆಯದನ್ನು ಒಂದು ಬಗೆಯ ಹತಾಶೆಯಿಂದ ತಬ್ಬಿಕೊಂಡವರು ಅವರು. ಆದರೆ ಇಲ್ಲಿ ಅದು ಜೀವನದ ಸುಸಂಗತತೆಯ, ಅರ್ಥವಂತಿಕೆಯ ಸಂಕೇತ.

ಈ ಘಟ್ಟದ ಇನ್ನೊಂದು ಮುಖ್ಯ ಗುಣವೆಂದರೆ ಅದು ಒಂದು ಕ್ಷಣದ ಅನುಭವವನ್ನು ಹೇಳುವಂಥದು. ಅದು ಒಂದು ನಿರ್ದಿಷ್ಟ ಕಾಲಾವಧಿಯ, ಮನಃಸ್ಥಿತಿಯ ಅಭಿವ್ಯಕ್ತಿ. ಕುವೆಂಪು ಅವರ ಪ್ರಭಾವದಲ್ಲಿದ್ದೂ ಒಂದು ಮನಃಸ್ಥಿತಿಯ ಪುನರ್ ನಿರ್ಮಾಣದ ದೃಷ್ಟಿಯಿಂದ ಇದು ಪು.ತಿ.ನ. ಕಾವ್ಯಕ್ಕೆ ಹೆಚ್ಚು ಸಮೀಪ. ಈ ಘಟ್ಟದ ಕವನಗಳನ್ನು ನಾನು ಈಗ ಮತ್ತೊಮ್ಮೆ ಓದುತ್ತಿದ್ದ ಹಾಗೆ ನನಗೆ ದಕ್ಕಿದ ಮುಖ್ಯ ಅನುಭವವೆಂದರೆ ನಿರಂತರವಾಗಿ ಹರಿಯುತ್ತಿರುವ ಕಾಲ ಪ್ರವಾಹದೊಳಗೆ ಕೆಲವು ನಿರ್ದಿಷ್ಟ ಅವಧಿಯ ಅನುಭವಗಳನ್ನು, ಭಾವನಾ ವಿಶೇಷಗಳನ್ನೂ ಕಡೆದು ನಿಲ್ಲಿಸುವ ಕ್ರಿಯೆ; ಅನುಭವದ ಪೂರ್ಣತೆಗಿಂತ ಆ ಅವಧಿಯ ಅನುಭೂತಿಗಳ ಉನ್ನತೀಕರಣ.

ಇಲ್ಲಿಯ ಭಾವಗೀತಾತ್ಮಕತೆ ಜಿಎಸ್‌ಎಸ್ ಅವರ ಕಾವ್ಯಜೀವನದುದ್ದಕ್ಕೂ ಹರಿದು ಬಂದಿರುವುದನ್ನು ಕಾಣಬಹುದು. ಆದರೆ ಇಲ್ಲಿಯಷ್ಟೇ ತುಂಬಿ ಹರಿಯುತ್ತದೆ ಎಂದೇನೂ

ಹೇಳಲಾಗುವುದಿಲ್ಲ. ಜೀವನದ ವೈಷಮ್ಯಗಳ ಮರಳಿಗೆ ಅದು ನುಗ್ಗಿದಾಗ ತನ್ನ ಮೊದಲಿನ ಸಮೃದ್ಧತೆಯನ್ನು ಕಳೆದುಕೊಂಡರೂ ಮೇಲೆ ಹಾಗೇ ಜಿನುಗುತ್ತಾ ಮುಂದುವರಿಯಿತು.

ಈ ಲೋಕದ ಸ್ವಯಂಪೂರ್ಣತೆ, ಮಾಧುರ್ಯ ಆಶ್ಚರ್ಯಕರವಾದದ್ದು. ಈ ಅಂಶ ಈ ಬಗೆಯ ಕಾವ್ಯದ ಮೇಲೆ ಮಾಡಬಹುದಾದ ಪರಿಣಾಮಕಾರೀ ಟೀಕೆ ಕೂಡಾ ಹೌದು. ಈ ಕಾರಣಕ್ಕಾಗಿಯೇ ಕಾವ್ಯದಲ್ಲಿ ಘರ್ಷಣೆಗಳ ಮಂಥನವನ್ನು, ಆಕ್ರಮಣಕಾರೀ ಏಕಾಗ್ರತೆಯನ್ನು ನಿರೀಕ್ಷಿಸುವ ನನ್ನಂಥವರಿಗೆ ಇದು ಅನೇಕ ಕುತೂಹಲಗಳ ಲೋಕವೂ ಹೌದು. ಏಕೆಂದರೆ, ಬಾಳಿನಾಸೆಗೆ ಹಾಲನ್ನೆರೆಯುವ ಭಾವಗೀತೆಗಳು ಎಂದರೆ ಒಂದು ಹಂತದಲ್ಲಿ ಇಂಥವೇ.

ಈ ಘಟ್ಟದ ಕಾವ್ಯಾನುಭವಕ್ಕೆ ಒಂದು ಸಮರ್ಥ ವಿಮರ್ಶಾರೂಪಕಕ್ಕಾಗಿ ಹುಡುಕುತ್ತಿರುವಾಗ ಶೇಕ್ಸ್‌ಪಿಯರ್‌ನ The Tempest ನಾಟಕದ ಒಂದು ಭಾಗ ನೆರವಾಗಿದೆ. ಮೊದಲ ಬಾರಿಗೆ ಅಷ್ಟೊಂದು ಜನರನ್ನು ಕಂಡ ಆ ಹುಡುಗಿ ಮಿರಾಂಡ ತನ್ನೆಲ್ಲ ಜೀವನೋಲ್ಲಾಸಗಳ ಶೃಂಗ ತಲುಪಿದಂತೆ ಆನಂದದಿಂದ ಕೂಗುತ್ತಾಳೆ. ಜಗತ್ತಿನ ಕ್ರೂರತೆಯ ಪರಿಚಯ ಇನ್ನೂ ಆಗಿರದ ಹುಡುಗಿ ಅವಳು; ಎಲ್ಲೆಲ್ಲೂ ಚೆಲುವನ್ನೆ ಆಕೆ ಕಾಣುತ್ತಾಳೆ.

O'wonder!
How many godly creatures are there here!
How beauteous mankind is!
O'brave new world,
That has such people in't!

ಜೀವನದ ಹೊಡೆತಗಳಿಂದ ಜರ್ಝರಿತನಾಗಿದ್ದ ತಂದೆ ಪ್ರಾಸ್ಪೆರೊ ಮೆಲ್ಲಗೆ ಹೇಳಿದ:

It is new to thee.

ಮಿರಾಂಡಳ ಶಕ್ತಿ ಬೇರೆ ರೀತಿಯದು, ಪ್ರಾಸ್ಪೊರೋನ ಶಕ್ತಿ ಬೇರೆ ರೀತಿಯದು; ಆತನದು ರುದ್ರ ತಿಳಿವಿನ ಶಕ್ತಿ. ಆತನಿಗೆ ಮತ್ತೆ ಮಿರಾಂಡಳ ಶುಭ್ರ ವಿಸ್ಮಯ ಸಾಧ್ಯವಿಲ್ಲ ಎಂಬುದು ನಿಜಕ್ಕೂ ದೊಡ್ಡ ನೋವಿನ ಸಂಗತಿ.

**(3)**

ಎರಡನೆಯ ಘಟ್ಟವನ್ನು ಮೆಟಫಿಸಿಕಲ್ ಕಾವ್ಯ ಎಂದು ಕರೆಯಬಹುದು, ಇಲ್ಲಿಯ ಸೌಂದರ್ಯಾರಾಧನೆ ಮೆಟಫಿಸಿಕಲ್ ತಾತ್ವಿಕತೆಯಿಂದ ಪರಿಷ್ಕೃತವಾಗಿದೆ. "ದೀಪದ ಹೆಜ್ಜೆ"ಯಿಂದ "ತೆರೆದ ದಾರಿ" ತನಕದ ಕವನಗಳನ್ನು ಸ್ಥೂಲವಾಗಿ ಈ ಘಟ್ಟಕ್ಕೆ ಸೇರಿಸಬಹುದು. "ದೀಪದ ಹೆಜ್ಜೆ"ಯಿಂದ ಪ್ರಾರಂಭವಾದ ಈ ಘಟ್ಟದಲ್ಲಿ ಅತ್ಯಂತ ಮಹತ್ವಾಕಾಂಕ್ಷೀ ಕವನಗಳನ್ನು ಕಾಣಬಹುದು. ಜೊತೆಗೆ, ಕನ್ನಡ ವಿಮರ್ಶೆ ಈ ಘಟ್ಟದ ಕೆಲವು ಕವನಗಳನ್ನು ಸಾಕಷ್ಟು ಗಾಢವಾಗಿಯೇ ಚರ್ಚಿಸಿದೆ. "ಹುಟ್ಟಿದ ಹಬ್ಬ", "ಇವನು", "ಸಂಜೆದಾರಿ",

"ಗಡಿಯಾರದಡಿಯಲ್ಲಿ", "ಮಬ್ಬಿನಿಂದಾಗಿ ಮಬ್ಬಿಗೆ", "ಜಡಿಮಳೆಯ ಇರುಳಿನಡಿ", "ಶಾರದೆ", "ಮಳೆರಾತ್ರಿಯ ಒಂದು ಕ್ಷಣ", "ಕನಸಿನಿಂದ ನನಸಿಗೆ", "ಶಾಕುಂತಲದ ಐದನೆಯ ಅಂಕ" ಮುಂತಾದ ಶ್ರೇಷ್ಠ ಕವನಗಳು ಆಧುನಿಕ ಕನ್ನಡ ಕಾವ್ಯದ ಇತಿಹಾಸದಲ್ಲಿ ಕವಿಗೆ ವಿಶಿಷ್ಟಸ್ಥಾನ ದೊರಕಿಸಿಕೊಡುವಂಥವು.

ಕಾವ್ಯಶಿಲ್ಪದ ದೃಷ್ಟಿಯಿಂದಂತೂ ಕವಿ ಇಲ್ಲಿ ಆಶ್ಚರ್ಯಕರ ಪ್ರಬುದ್ಧತೆ ತಲುಪಿದ್ದಾರೆ. ಈ ದೃಷ್ಟಿಯಿಂದ ಅಡಿಗರಿಗೆ "ಚಂಡೆ ಮದ್ದಳೆ" ಇದ್ದ ಹಾಗೆ, ಜಿಎಸ್ಎಸ್ ಅವರಿಗೆ "ದೀಪದ ಹೆಜ್ಜೆ" ಎನ್ನಬಹುದು.

ಜೀವನ ದರ್ಶನದ ದೃಷ್ಟಿಯಿಂದಂತೂ ಎರಡೂ ಕೃತಿಗಳು ಬೇರೆ ಬೇರೆ ಲೋಕಗಳಿಂದ ಬಂದಂಥವು. ಒಂದು aggressive ಆದದ್ದು, ಇನ್ನೊಂದು ಉದಾರವಾದಿ ಮನೋಧರ್ಮಕ್ಕೆ ಸಹಜವಾದ ತಾಳ್ಮೆ ಮತ್ತು ಚಿಂತನಪರತೆಗಳಿಂದ ಹುಟ್ಟಿದ್ದು.

ಇಲ್ಲಿಯ ಕಾವ್ಯಶಿಲ್ಪದ ಮುಖ್ಯ ಗುಣವೆಂದರೆ, ಅನುಭವಪೂರ್ಣತೆ. ಮೊದಲಿನ ಸೌಂದರ್ಯಾತ್ಮಕ ಘಟ್ಟದಲ್ಲಿ ಒಂದು ನಿರ್ದಿಷ್ಟ ಅವಧಿಯ ಅನುಭವ ಮುಖ್ಯವಾದರೆ, ಇಲ್ಲಿಯ ಅನುಭವಗ್ರಹಣ ಕ್ರಮಕ್ಕೆ ಪ್ರಾರಂಭ-ಶೃಂಗ-ಮುಕ್ತಾಯ ಮೂರೂ ಇರುತ್ತವೆ. ಜೀವನದ ಉಳಿದೆಲ್ಲ ಅನುಭವಗಳು ಕಾವ್ಯದಿಂದ ಮಾಯವಾಗಿಬಿಟ್ಟಿವೆ ಎಂಬಂಥ ವಾತಾವರಣದಲ್ಲೂ ಈ ಕವನಗಳು ಹುಟ್ಟಿದವು ಎಂಬ ಅಂಶ ಕವಿಗೆ ನವೋದಯದ ಜೊತೆಗಿದ್ದ ಸುಭದ್ರ ಸಂಬಂಧವನ್ನು ಹೇಳುತ್ತದೆ.

ಈ ಘಟ್ಟದಲ್ಲಿ ನಾಟಕೀಯತೆ ಜಿಎಸ್ಎಸ್ ಅವರ ಕಾವ್ಯವನ್ನು ಪ್ರವೇಶಿಸಿತು. ವಿವಿಧ ಬಗೆಯ ಮನಸ್ಥಿತಿಗಳು, ಅನುರಾಗಗಳು ಇಲ್ಲಿ ಪ್ರಕಟವಾಯಿತು. ಜೊತೆಗೆ ಇಲ್ಲಿಯ ಮುಖ್ಯ ತಾತ್ವಿಕ ನೆಲೆಯೆಂದರೆ ಒಂದು ಬಗೆಯ ಧೀರೋದಾತ್ತ ಆಶಾವಾದ. ಘರ್ಷಣೆಗಳ ಅರಿವಿದ್ದೂ ಅದನ್ನು ದಾಟಬಲ್ಲೆ ಎಂಬ ಆದಿಭೌತಿಕ ಆಶಾವಾದ ಈ ಕವನಗಳ ಶಿಲ್ಪವನ್ನು ಕಟ್ಟಿದೆ. ಅಶಿಕ್ಷಿತ ಆಶಾವಾದದಂತೆ ಕಾಣದೆ ತಾನು ಬದುಕುತ್ತಿರುವ ಸ್ಥಿತಿಯ ನೈತಿಕ ವಿಷಮತೆಗೆ ಪ್ರತಿಸ್ಪಂದಿಸಿಯೇ ಹುಟ್ಟಿದ ತಾತ್ವಿಕ ನಿಲುವು ಅದು. ಅತಿರೇಕದ ಸಂಪ್ರದಾಯವಾದೀ ನಿಲುವುಗಳಿಗೆ ಹೋಗದೆಯೂ ಜೀವನ ಶ್ರದ್ಧೆಯನ್ನು, ಉಳಿಸಿಕೊಳ್ಳುವ ಕ್ರಮಕ್ಕೆ ಈ ಘಟ್ಟದ ಶ್ರೇಷ್ಠ ಕವನಗಳು ಸಾಕ್ಷಿ.

ಮೆಟಫಿಸಿಕಲ್ ಅಂಶಗಳು ಇಲ್ಲಿ ದಟ್ಟವಾಗಿದ್ದರೂ ಅದು ಎಲ್ಲಿಯೂ ಧಾರ್ಮಿಕ ನಿಗೂಢವಾದೀ ನೆಲೆಗಳಿಗೆ ಹೋಗಿ ತಲುಪುವುದಿಲ್ಲ; ಪರಂಪರಾಗತ ಮೌಲ್ಯಗಳ ಮಡಿಲಿಗೆ ಬೀಳುವುದಿಲ್ಲ. ಏಕೆಂದರೆ, ಸಮಕಾಲೀನ ಜೀವನದ ಸವಾಲುಗಳ ತೀವ್ರತೆಯನ್ನು ಇವು ತೆಳ್ಳಗೆ ಮಾಡಿಬಿಡುತ್ತವೆ. ಜೀವನದ ಸೊಗಸು ವಿಷಮತೆಗಳನ್ನು, ಜೀವನದ ಮೂಲಭೂತ ಶ್ರದ್ಧೆಯೊಂದರ ಮೂಲಕವೇ ಒಳಗೊಳ್ಳುತ್ತವೆ. ಚರಿತ್ರೆಯ ಪ್ರಗತಿಪರ ಸತ್ವದ ಬಗ್ಗೆ ಅಪಾರ ಗೌರವವಿರಿಸಿಕೊಂಡಿರುವ ಶ್ರದ್ಧೆ ಅದು. ಹೀಗಾಗಿ, ಆಧುನಿಕ ಭಾರತೀಯ ನಾಗರೀಕತೆ ಒಪ್ಪಿಕೊಂಡಿರುವ ಮೌಲ್ಯಗಳ ಬಗ್ಗೆ ಎಲ್ಲಿಯೂ ಮೂಲಭೂತವಾದ ತಿರಸ್ಕಾರ ಮೂಡುವುದಿಲ್ಲ.

ಸಮಕಾಲೀನ ಪರಿಸ್ಥಿತಿಯ ಬಗ್ಗೆ ಅರಿವಿದ್ದರೂ ಮುಗಿಲಗಲದೆದೆಯಲ್ಲಿರುವ ಚಿಕ್ಕೆಗಳ ದಂಡೆಯ ಮೇಲೊಂದು ಕಣ್ಣು ಇದ್ದೇ ಇರುತ್ತದೆ ಇಲ್ಲಿಯ ಕಾವ್ಯಪ್ರಜ್ಞೆಗೆ. ಎಲ್ಲಕ್ಕಿಂತ ಹೆಚ್ಚಾಗಿ ಇಲ್ಲಿ ಅತಿ ರಂಜಿತ ಆತ್ಮಕಥನವಿಲ್ಲ, ಸಾತ್ವಿಕ ವಿನಯ ಈ ಘಟ್ಟದಲ್ಲಿ ಎಲ್ಲ ಕವನಗಳಿಗೂ ಶ್ರುತಿ ಹಿಡಿದಿದೆ.

## (4)

ಮುಂದಿನ ಘಟ್ಟ ರುದ್ರ ತಿಳಿವಿನ ಘಟ್ಟ. "ತೆರೆದ ದಾರಿ"ಯಲ್ಲೇ ಸಾಕಷ್ಟು ಸ್ಪಷ್ಟವಾಗಿ ಮೂಡಿದ ಈ ಕಾವ್ಯ ತನ್ನ ಶೃಂಗವನ್ನು ತಲುಪಿದ್ದು "ಗೋಡೆ" ಸಂಕಲನದಲ್ಲಿ. ಈ ಎರಡೂ ಕವನ ಸಂಕಲನಗಳ ಮುಖ್ಯ ಕವನಗಳ ಅನುಭವ ಮೂಲತಃ ಟ್ರ್ಯಾಜಿಕ್ ಆದದ್ದು. ಸುತ್ತಲೂ ಮೊರೆವ ಕತ್ತಲಿನ, ಕೆಡುಕಿನ, ಪ್ರೀತಿಹೀನ ಸ್ಥಿತಿಯ ಕಾವ್ಯ ಅದು. ಹೃದಯ ಹೃದಯಗಳ ಸಂಬಂಧ ಕಡಿದು ಬಿದ್ದ ಒಂದು ವಿಷಮ ವಾತಾವರಣದ ಕಾವ್ಯ ಅದು.

"ಮುಂಬೈ ಜಾತಕ", "ರೈಲು ಬರುತ್ತದೆ", "ವಿಫಲ", "ಸಂಕ್ರಮಣ", "ವ್ಯರ್ಥ", "ಗೋಡೆ", "ನನ್ನ ಸುತ್ತ", "ನನ್ನ ನಿನ್ನ ನಡುವೆ", "ಖಾಲಿ ಸೈಟಿನ ಕಡೆಗೆ" ಕವನಗಳ ದಟ್ಟ ವಿಷಾದ ಬೆರಗು ಹುಟ್ಟಿಸುವಂಥದ್ದು. ಅತ್ಯಂತ ವೈಯಕ್ತಿಕವಾದ ಲೋಕವೊಂದನ್ನು ಇಲ್ಲಿಯ ಕವನಗಳು ನಿರ್ಮಿಸುತ್ತವೆ. ಕಾವ್ಯದಲ್ಲಿ ಬರುವ ಮನುಷ್ಯ ಅಖಂಡವಾದವನು ಎಂದು ನಾವು ಹೊರಟರೆ ಕೊನೆಗೆ ಅಲ್ಲಿ ಸಿಗುವುದು ಸಾಮಾಜಿಕ ಮನುಷ್ಯನೇ. ಆದರೆ ಇಲ್ಲಿಯ ಅನುಭವ ಆ ರೀತಿಯದಲ್ಲ. ಮನುಷ್ಯರ ನಡುವಿನ ಸಂವಹನದ ಸಮಸ್ಯೆ ಇಲ್ಲಿ ತನ್ನೆಲ್ಲ ತೀವ್ರತೆಯೊಂದಿಗೆ ಪ್ರಕಟವಾಗುತ್ತದೆ.

ಈ ಘಟ್ಟದ ಜಗತ್ತಿನಲ್ಲಿ ಪ್ರಕಟವಾಗುವ ಬಿಕ್ಕುಗಳು, ನಿಟ್ಟುಸಿರು, ಆಕ್ರಂದನ, ಮೌನ ರೋಮ್ಯಾಂಟಿಕ್ಕರ ಕವನಗಳನ್ನೂ ನೆನಪಿಸುವಂಥದು. ಜಗತ್ತಿನೆಲ್ಲದರ ಬಗ್ಗೆ ನಿರ್ಲಕ್ಷ್ಯ ತಾಳಿ ವ್ಯಕ್ತಿಸಂಬಂಧಗಳ ಬಗ್ಗೆ ಬರೆಯಬಲ್ಲ ದಿಟ್ಟತನವೇ ಆ ಕವನಗಳಿಗೆ ವಿಚಿತ್ರ ಅಂತರ್ಮುಖೀ ಗುಣವನ್ನು ನೀಡಿವೆ. ವೈಯಕ್ತಿಕ ಹಂತದಲ್ಲಿ ದಟ್ಟವಾಗಿ ಹಬ್ಬುವ ಸಂವಹನಹೀನ ಸ್ಥಿತಿ ಇಡೀ ಸಮಾಜಕ್ಕೆ ಹಬ್ಬಿ ನಿಂತಿರುವುದನ್ನು ಕೂಡ ಹೇಳಲಾಗಿದೆ.

ವೈಯಕ್ತಿಕ ಸಂಬಂಧಗಳ ಪಾವಿತ್ರ್ಯತೆಯನ್ನು ಉಳಿಸಗೊಡದ ಹೃದಯಹೀನ ಜಗತ್ತು ಇದು. ಲಾಭಕ್ಕೆ ಹಾತೊರೆವ, ಯಾವ ಥರದ ಪ್ರಬುದ್ಧ ಸ್ವಯಂಪೂರ್ಣತೆಗೂ ಅವಕಾಶಕೊಡದ, ಕುರುಡು ಕಾಂಚಾಣದ ಚಾರಿತ್ರಿಕ ಜಗತ್ತು ಇದು. ಇಂಥ ಸ್ಥಿತಿಯಲ್ಲಿ ಕೆಲವು ಕವಿಗಳು ಆ ಜಗತ್ತನ್ನು ಅದರ ಶರತ್ತುಗಳ ಮೇಲೆಯೇ ವಿರೋಧಿಸುತ್ತಾರೆ. ಪ್ರಖರ ಸಾಮಾಜಿಕ ಸತ್ಯವನ್ನು ಅನ್ವೇಷಿಸುವ ಕಾವ್ಯ ಬರೆಯುತ್ತಾರೆ. ಶ್ರೇಷ್ಠ ವಾಮಪಂಥೀಯ ಕವಿಗಳು ಈ ಬಗೆಯವರು. ಆದರೆ ಇನ್ನೊಂದು ರೀತಿಯ ಕವಿಗಳು ಈ ಜಗತ್ತನ್ನು ಬೇರೆ ನೆಲೆಗಳಿಂದ ವಿರೋಧಿಸುತ್ತಾರೆ. ಆ ಜಗತ್ತು ಕೊಲ್ಲಬಯಸುವ, ಕರಗಿಸಬಯಸುವ ಕ್ಷೇತ್ರಗಳಿಗೆ ಗಟ್ಟಿಯಾಗಿ ಆತುಕೊಳ್ಳುವುದರ ಮೂಲಕ ತಮ್ಮ ಅನುಭವಗಳ ಮೌಲಿಕತೆಯನ್ನೂ

ಸಾರುತ್ತಾರೆ. ಪ್ರಕೃತಿಗೆ, ಪ್ರೇಮಕ್ಕೆ, ಚೆಲುವಿಗೆ ಗಾಢವಾಗಿ ಅಂಟಿಕೊಂಡ ರೊಮ್ಯಾಂಟಿಕ್ ಕವಿಗಳು ಇಂಥವರು. ಅರ್ಥಪೂರ್ಣ ರೊಮ್ಯಾಂಟಿಕ್ ಕಾವ್ಯದ ಉಗಮ ಇಲ್ಲಿಂದಲೇ.

ಈ ದೃಷ್ಟಿಯಿಂದ "ತೆರೆದ ದಾರಿ", "ಗೋಡೆ"ಯಂಥ ಮುಖ್ಯ ಕವನ ಸಂಗ್ರಹಗಳು ನಿಜವಾಗಿಯೂ ಕುತೂಹಲಕಾರಿಯಾದವುಗಳು. ನವೋದಯದ ನಂತರ ವೈಯಕ್ತಿಕ ಸಂಬಂಧಗಳ ಲೋಕದಲ್ಲಿ ಉಂಟಾಗುವ ಅಲ್ಲೋಲ ಕಲ್ಲೋಲವನ್ನು ಪ್ರಮುಖ ವಸ್ತುವನ್ನಾಗಿ ಕಾವ್ಯದಲ್ಲಿ ತಂದದ್ದನ್ನು ಇಲ್ಲಿಯ ತನಕ ಕನ್ನಡ ವಿಮರ್ಶೆ ಗಮನಿಸದೇ ಇದ್ದದ್ದು ನಿಜಕ್ಕೂ ಆಶ್ಚರ್ಯದ ಸಂಗತಿ.

ಇಲ್ಲಿ ಗಮನಿಸಬೇಕಾದ ಇನ್ನೊಂದು ವಸ್ತುವೆಂದರೆ ಒಂಟಿತನದ್ದು. "ಅನಾವರಣ" ಸಂಕಲನದ "ಹೋಟೆಲಿನಲ್ಲಿ" ಕವನದಲ್ಲೇ ಸ್ಪಷ್ಟವಾಗಿ ಕಾಣಿಸಿಕೊಂಡ ಈ ವಸ್ತು ತನ್ನ ಪ್ರಬುದ್ಧ ಘಟ್ಟವನ್ನು ತಲುಪಿದ್ದು "ಗೋಡೆ" ಕೃತಿಯಲ್ಲಿ. ಅಲ್ಲಿ ಈ ವಸ್ತು ಇನ್ನಿತರ ಅನುಭವ ವಲಯಗಳ ಜೊತೆ ಕರಗಿಹೋದರೂ, ಅದರ ಆಳದಲ್ಲಿ ಒಂಟಿತನ ಮೌನವಾಗಿ ಚಲಿಸುತ್ತಲೇ ಇರುತ್ತದೆ. "ಅನಾವರಣ"ದಿಂದಾಚೆಗಿನ ಕವನಗಳಲ್ಲಿ ಮೂಡುವ ಈ ಒಂಟಿತನ ಈ ಕವಿಯಲ್ಲಿ ಕಾಣಿಸಿಕೊಳ್ಳುವುದು ಅನೇಕ ರೀತಿಯಲ್ಲಿ. ಆಧುನಿಕ ನಾಗರಿಕತೆಯೇ ಎಲ್ಲ ಥರದ ಪ್ರೀತಿಯ ಸೆಲೆಗಳನ್ನು ಬತ್ತಿಸಿ ಹಾಕಿದೆ ಎಂಬ ನೆಲೆಯಿಂದ ಅದು ಬಂದಿರಬಹುದು; ಅಥವಾ ಸಮಕಾಲೀನ ಬದುಕೇ ಇಂಥ ಒಂಟಿತನವನ್ನು ಸೃಷ್ಟಿಸಿರಬಹುದು; ಅಥವಾ ಮನುಷ್ಯನ ಮೂಲಭೂತ ಸ್ಥಿತಿಯೇ ಇದಾಗಿರಬಹುದು. ಒಟ್ಟಾರೆಯಾಗಿ ಒಂಟಿತನದ ದ್ರವ್ಯದಲ್ಲೇ ಉಳಿದ ವಿಷಾದದ ಅನುಭವಗಳೂ ರೂಪುಗೊಂಡಿವೆ. "ತೆರೆದ ದಾರಿ"ಯ 'ವಾಲ್ಮೀಕಿ' ಅಂಥ ಪರಿಣಾಮಕಾರಿ ಕವನಗಳಲ್ಲೊಂದು.

ಆಧುನಿಕ ಯುಗದ ಅತ್ಯಂತ ಕ್ರೂರ ಸತ್ಯಗಳಲ್ಲೊಂದು ಈ ಒಂಟಿತನ. ಆಧುನಿಕ ಯುಗದ ಮಾನವನಿಗೆ ಉಂಟಾಗುವ ದಿವ್ಯ ತಿಳಿವು ಎಂದರೆ ಮೂಲತಃ ಈ ಒಂಟತನದ್ದೆ. ಹೀಗಾಗಿ, ಈ ಅನುಭವ ಉಳಿದ ಬಿಕ್ಕಟ್ಟುಗಳ, ವೈಯಕ್ತಿಕ ಸಂಕಟಗಳನ್ನು ರೂಪಿಸುವ ಕೇಂದ್ರ ಭೂಮಿಕೆಯಾಗಿ ಅಲ್ಲಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತದೆ.

## (5)

ಚರಿತ್ರೆಗೆ ಋತುಗಳ ರೀತಿಯ ಬದುಕು ಇದೆ. (ಆದರೆ ವಸಂತ ಮಾತ್ರ ನಿಜವಾಗಿಯೂ ಯುಟೋಪಿಯಾ ಏನೋ!) ಈಗಂತೂ ನಾವು ಬದುಕುತ್ತಿರುವುದು ಖಾಂಡವಾಗ್ನಿಯ ಋತು. ಗ್ರೀಷ್ಮದುರಿಬಿಸಿಲು ಎಲ್ಲ ಜೀವಚೈತನ್ಯವನ್ನು ಬತ್ತಿಸಿ ಹಾಕುತ್ತಿದೆ. ಧಗೆ, ದಾಹಗಳು ನಮ್ಮ ಕೇಂದ್ರ ಅನುಭವಗಳಾಗಿವೆ.

ಎಲ್ಲ ನಾಗರೀಕತೆಗಳೂ ಈ ಬಿಕ್ಕಟ್ಟನ್ನು ಒಂದಲ್ಲ ಒಂದು ಬಾರಿ ಎದುರಿಸಲೇ ಬೇಕಾಗುತ್ತದೆ. ಇಂಥ ಉರಿಬಿಸಿಲಿನ ಋತು ಬಂದಾಗ ಎಲ್ಲೆಲ್ಲೂ ಬರೀ ಬೋಳು ಬಯಲು. ಹಸಿರೇ ಕಾಣದ ಬೆಂಗಾಡು, ಸುಡುವ ಬಂಡೆಗಳು. ಹತ್ತೊಂಬತ್ತನೆ ಶತಮಾನದ ಜರ್ಮನಿ,

ಹೆಗೆಲ್ಲನಿಗೆ ಇದೇ ಬಗೆಯ ತಲ್ಲಣವನ್ನು ಅನುಭವಿಸುತ್ತಿರುವಂತೆ ಕಂಡಿತು. ಆತ ಈ ಋತುವಿನ ಅನುಭವವನ್ನೇ ಪಡೆದು, ಇದನ್ನೆ ನೀರಸ ಗದ್ಯಯುಗ ಎಂದು ಕರೆದ. ಅಸ್ತಿತ್ವದ ನೀರಸ ಗದ್ಯ ಮತ್ತು ಹೃದಯದ ಕಾವ್ಯಗಳ ನಡುವೆ ತೀವ್ರ ರೀತಿಯ ಸಂಘರ್ಷ ಈ ಯುಗದಲ್ಲಿ ಇದ್ದದ್ದೆ ಎಂದು ಸಾರಿದ. ಬಹುಶಃ ಈಗ ನಾವು ಭಾರತದಲ್ಲಿ ಬದುಕುತ್ತಿರುವುದು ಅಂಥದೇ ಋತುವಿನಲ್ಲಿ.

ಎಪ್ಪತ್ತನೆಯ ದಶಕ ಭಾರತೀಯ ಚರಿತ್ರೆಯಲ್ಲಿ ದಟ್ಟ ವಿಷಾದದ ದಶಕ. ವಿನಾಶದ ಅಂಚಿನಲ್ಲಿರುವ ವ್ಯವಸ್ಥೆಯ ರಾಕ್ಷಸೀ ಶಕ್ತಿ ಘನೀಕೃತವಾಗಿ ಈ ಒಂದೇ ದಶಕದಲ್ಲಿ ತನ್ನ ಪಂಜಗಳಿಂದ ತೀವ್ರವಾಗಿ ಹೊಡೆಯಿತು. ಭೀಕರವಾದ ಅರಿವಿನ ಹತ್ತಿರ ನಾವು ಸಾಗುತ್ತಿದ್ದೇವೆ, ನಮ್ಮ ಪ್ರಜ್ಞೆಯೊಳಗೆ ಅದು ತೀರಾ ಇಳಿದು ಬಿಟ್ಟಿದೆ ಎಂಬುದಕ್ಕೆ ಈ ದಶಕದ ಕಾವ್ಯ ಸಾಕ್ಷಿ.

ಉದಾರವಾದಕ್ಕಂತೂ ಇವು ಸೃಜನಶೀಲ ಬಿಕ್ಕಟ್ಟಿನ ದಿನಗಳೂ ಹೌದು. ತಮ್ಮ ಸೃಜನಶೀಲತೆಯ ಮೂಲದ್ರವ್ಯವನ್ನು ಕಾಪಾಡಿಕೊಳ್ಳಲು ಹೊಸ ಬಗೆಯ ನುಡಿಕಟ್ಟು, ರೂಪಕ, ಸಂವೇದನಾಕ್ರಮಗಳನ್ನು ರೂಢಿಸಿಕೊಳ್ಳುವ ಮೂಲಕ ಇವರು ಈ ಬಿಕ್ಕಟ್ಟಿನಿಂದ ಪಾರಾಗಲು ಸಾಧ್ಯವಿದೆ. ಜಿಎಸ್ಎಸ್ ಅವರ "ಕಾಡಿನ ಕತ್ತಲಲ್ಲಿ" ಕೃತಿಯನ್ನು ನಾವು ಅರ್ಥಮಾಡಿಕೊಳ್ಳಬೇಕಾದದ್ದು ಈ ಹಿನ್ನೆಲೆಯಲ್ಲಿಯೇ.

ಎಪ್ಪತ್ತರ ದಶಕದಲ್ಲಿ ಸಾಹಿತ್ಯವನ್ನು ಸಮಾಜಮುಖಿಯನ್ನಾಗಿ ಮಾಡಲು ಯತ್ನಿಸಿದ ಪ್ರಮುಖ ಸಾಹಿತ್ಯಕ ಮೌಲ್ಯಗಳ ಪ್ರಭಾವ ಈ ಸಂಕಲನದ ಮೇಲೆ ಸ್ಪಷ್ಟವಾಗಿ ಕಾಣುತ್ತದೆ. ಸ್ಥೂಲ ಸಮಾಜವಾದೀ ಆಶಯಗಳನ್ನು ಒಳಗೊಳ್ಳುವ ಪ್ರಯತ್ನ ಈ ಕೃತಿಯ ಸತ್ವ. "ಗೋಡೆ" ಕೃತಿಯಲ್ಲಿ ಶೃಂಗವನ್ನು ತಲುಪಿದ್ದ ರುದ್ರ ತಿಳಿವಿನ ಘಟ್ಟ ಇಲ್ಲಿ ಸಾಮಾಜಿಕ ಆಯಾಮವನ್ನು ಒಳಗೊಳ್ಳಲು ಯತ್ನಿಸಿದೆ: ಈ ದೃಷ್ಟಿಯಿಂದ ಇಲ್ಲಿಯ "ದುಃಸ್ವಪ್ನ" ಇಡೀ ಕೃತಿಯ ಶ್ರೇಷ್ಠ ಕವನ.

ನಮ್ಮ ಬದುಕಿನೆಲ್ಲ ಕ್ಷೇತ್ರಗಳು ಭ್ರಷ್ಟಗೊಂಡಿರುವ ಸ್ಥಿತಿಯ ಮೇಲೆ ಮಾರ್ಮಿಕ ವ್ಯಾಖ್ಯಾನ ಈ ಕವನ.

ಕಂಡೆ
ಎಂಥೆಂಥವರು ಏನೇನೋ ಆದದ್ದ ಕಂಡೆ.

ಗೊಮ್ಮಟನಾಗಿ ನಿಂತಿದ್ದ ಮಹಾ ಮೂರ್ತಿ
ಕರಗಿ ಕೊಚ್ಚೆಯಾಗಿ ಹರಿದದ್ದ ಕಂಡೆ

ಇಂದ್ರನೈರಾವತಕ್ಕೆ ತೊಣಚಿ ಹತ್ತಿ
ಬೀದಿ ನಾಯಾಗಿ ಬೂದಿಯಲ್ಲಿ ಹೊರಳಾಡಿದ್ದ ಕಂಡೆ.

ನಿಗಿ ನಿಗಿ ಉರಿದ ಉಜ್ವಲವಾದ ಮಾತೆಲ್ಲ
ಬರೀ ಬೂದಿಯಾಗಿ ತೆಪ್ಪಗಾದದ್ದ ಕಂಡೆ. (ದುಃಸ್ವಪ್ನ)

ಹೀಗೆ ಬೆಳೆಯುತ್ತಾ ಹೋಗುವ ಕವನದ ಕೊನೆ ತುಂಬ ನಾಟಕೀಯವಾದದ್ದು. ಪರಿಸರ ಪ್ರಜ್ಞೆಯ ಮೇಲೆ ಪರಿಣಾಮ ಬೀರುವ ರೀತಿ ಕವನದ ಕೊನೆಯಲ್ಲೇ ಪರಿಣಾಮಕಾರಿಯಾಗಿ ಮೂಡುತ್ತದೆ: 'ಕಂಡು ಎಚ್ಚರಗೊಂಡೆ; ಎಚ್ಚರವೆಲ್ಲ ನಿಗಿ ನಿಗಿ ಉರಿವ ಕೆಂಡದ ಉಂಡೆ' ಈ ಕವನವನ್ನು ಇಲ್ಲಿಯ ಅನುಭವ ಗ್ರಹಣ ಕ್ರಮದ ಕೇಂದ್ರ ರೂಪಕವೆನ್ನಬಹುದು.

"ಕಾಡಿನ ಕತ್ತಲಲ್ಲಿ", "ಇನ್ನೆಂದು ಬೆಳಗು ನಿಮಗೆ", "ಉತ್ತರಾಧಿಕಾರಿ", "ವಸಂತ ಮೂಡುವುದೆಂದಿಗೆ" ಕವನಗಳು ಈ ದೇಶದ ಜನಸಾಮಾನ್ಯನ ವಿಮೋಚನೆಯ ಆಶಯವನ್ನು ಹೊತ್ತ ಕವನಗಳು. ಜಿಎಸ್‌ಎಸ್‌ರವರಿಗೆ ಸಿದ್ಧಿಸಿರುವ ಸರಳ ಭಾವಾಗೀತಾತ್ಮಕ ಶೈಲಿಯಲ್ಲಿ ಈ ಕವನಗಳು ರಚಿತವಾಗಿವೆ. ಜೀವನದಲ್ಲಿಯ ಮೂಲಭೂತ ಘರ್ಷಣೆಗಳ ಅಂತರ್ಮುಖೀ ಅರಿವಿನಿಂದ ಈ ಕವನಗಳು ಹುಟ್ಟಿಲ್ಲವಾದ್ದರಿಂದ ಇವು ಸರಳ ಭಾವಗೀತೆಗಳ ಹಂತಕ್ಕೆ ನಿಂತುಬಿಡುತ್ತವೆ. ಅದರಾಚೆಗೆ ಏರುವುದಿಲ್ಲ. ಹೀಗಾಗಿ, ಇಂಥ ಸಾಮಾಜಿಕ ವಾಸ್ತವವನ್ನೂ ಕುರಿತ ಕವನಗಳು ಅಂಥ ಗಾಢ ಅನುಭವವನ್ನು ನೀಡುವುದಿಲ್ಲ.

ಕವಿಗೆ ತನ್ನನ್ನು ಆವರಿಸಿರುವ ಸೃಜನಶೀಲತೆಯ ಬಿಕ್ಕಟ್ಟಿನ ಅರಿವಿದೆ. "ಸ್ವಗತ" ಪದ್ಯದಲ್ಲಿ ಇದರ ಮಾರ್ಮಿಕ ಕಥನವಿದೆ. "ಕಾರಂಜಿಗಳ ಬಾಯಿಗೆ ಮಣ್ಣು ಮೆತ್ತಿಕೊಂಡು ಒಳಗಿನಿಂದ ನೀರು" ಏರುವುದೇ ಇಲ್ಲ. ಗರಿ ತೆರೆದು ನಿಂತ ಮರಗಳ ತುಂಬ ಹಕ್ಕಿಗಳ ಗುಜಗುಂಪಲೂ ಇಲ್ಲ. ಎಲ್ಲ ಕವಿಗಳಲ್ಲೂ ಮತ್ತೆ ಹೊಸ ಹಾರುವಿಕೆಗಾಗಿ ಅಪ್ರಜ್ಞಾಪೂರ್ವಕವಾಗಿ ಕವಿಪ್ರಜ್ಞೆ ಸಿದ್ಧವಾಗುತ್ತಿದ್ದಾಗಿನ ಮಂಪರು ಇದು. ತಮ್ಮ ಸೃಜನಶೀಲತೆಯ ಒರತೆ ಬತ್ತಿ ಹೋಗಿದೆ, ತಾನಿನ್ನು ಬರೆಯಲಾರೆ ಎಂದ ಕವಿಗಳು, ನಂತರ ಕೆಲವೇ ದಿನಗಳಲ್ಲಿ ಅದ್ಭುತವಾದ ಕಾವ್ಯ ರಚಿಸಿರುವ ಪ್ರಸಂಗಗಳು ಕಾವ್ಯ ಚರಿತ್ರೆಯಲ್ಲಿ ಅನೇಕವಿವೆ.

ಹೀಗಾಗಿ, ಈ ಸಂಕಲನದ ಇನ್ನೊಂದು ರೀತಿಯ ಕವನಗಳ ಬಗ್ಗೆ ನನಗೆ ಕುತೂಹಲವಿದೆ; ನಂಬಿಕೆಯಿದೆ. ಕವಿ ತನ್ನನ್ನು ಪುನರುಜ್ಜೀವಿಸಿಕೊಳ್ಳುತ್ತಿರುವ ಒಂದು ಮಾರ್ಗ ಇದು. ಎಲ್ಲ ರೀತಿಯ ತೆಳು ಸಾಮಾಜಿಕ ವಾಸ್ತವಗಳಿಂದಾಚೆಗೆ ಇರುವ ನಿಗೂಢವಾದ, ಅವ್ಯೆಚಾರಿಕವಾದ ಅನುಭವಗಳನ್ನು ಹೇಳುವ ಕವಿತೆಗಳು ಇವು. ಹೃದಯದ ಕಾವ್ಯದ, ಗೊತ್ತಿಲ್ಲದ ಲೋಕವೊಂದರ ಛಾಯೆಗಳು ತಾನೇ ತಾನಾಗಿ ಇಲ್ಲಿ ಮೂಡುತ್ತವೆ. "ಸಾಲುಮರಗಳ ಕೆಳಗೆ", "ಚೈತ್ರದಲ್ಲಿ", "ನಿನ್ನ ನಗು", "ಕೇರಳದಲ್ಲಿ" ಈ ರೀತಿಯ ಕುತೂಹಲಕಾರಿ ರಚನೆಗಳು. "ನಿನ್ನ ನಗು" ಕವನ "ಜಡೆ" ಕವನದಂತೆ pantheist vision ಅನ್ನು ಹೊಂದಿರುವಂಥದು. ಮತ್ತೆ ಅದೇ ಬಗೆಯ ಸಾತ್ವಿಕ ಹುಚ್ಚುತನ ಈ ಕವನದಲ್ಲಿ ಹಿಂದಿರುಗಿದೆ.

"ದುಃಸ್ವಪ್ನ"ದ ರುದ್ರ ತಿಳಿವನ್ನು ಮತ್ತು ಈ ಕವನಗಳ ಅನುಭವ ಗ್ರಹಣ ಕ್ರಮವನ್ನು ಜಿಎಸ್‌ಎಸ್ ಬೆಸೆಯಬಲ್ಲರಾದರೆ ಅಲ್ಲಿಂದ ಜಿಎಸ್‌ಎಸ್‌ರ ಕಾವ್ಯಜೀವನದ ಹೊಸ ಘಟ್ಟದ ಪ್ರಾರಂಭ; ಕನ್ನಡದಲ್ಲಿ ಇನ್ನೂ ಹುಟ್ಟಬೇಕಾಗಿರುವ ರೊಮ್ಯಾಂಟಿಕ್ ಕಾವ್ಯದ

ಬೇರುಗಳು ಇರುವುದು ಇಂಥ ನೆಲೆಗಳಲ್ಲಿಯೇ. ಗಾರ್ಕಿ ಇಂಥದ್ದನ್ನೆ ಕ್ರಾಂತಿಕಾರಿ ರೊಮ್ಯಾಂಟಿಸಿಸಂ ಎಂದು ಕರೆದ. ಅಸ್ತಿತ್ವದ ನೀರಸ ಗದ್ಯ, ಪ್ರತಿಭೆಯ ಗರಿಗಳನ್ನು ಕತ್ತರಿಸಿ ಹಾಕುತ್ತದೆ; ಸುಟ್ಟು ಬೂದಿ ಮಾಡುತ್ತದೆ. ಆದರೆ ಮನುಷ್ಯನ ಪ್ರತಿಭೆ ಅಷ್ಟು ಸುಲಭವಾಗಿ ಸಾಯುವಂಥದ್ದಲ್ಲ. ಬೂದಿಯಿಂದ ಮತ್ತೆ ಅದು ಅರಳಿ ಹಾರಾಡುತ್ತದೆ. ಆ ಹಕ್ಕಿ ಹಾರುವುದನ್ನು ಅಸಮಾನತೆಯ ಮೇಲೆ ನಿಂತ ವ್ಯವಸ್ಥೆ ಎವೆ ತೆಗೆದಿಕ್ಕದೆ ನೋಡುತ್ತದೆ.

ಅಂಥ ಅರ್ಥಪೂರ್ಣ ರೊಮ್ಯಾಂಟಿಕ್ ಕಾವ್ಯವನ್ನು ಪ್ರಾರಂಭಿಸಲು ಜಿಎಸ್‌ಎಸ್ ರಂಥವರಿಗೆ ಅವರ ಇಡೀ ಕಾವ್ಯ ಜೀವನ ಸಿದ್ಧತೆ ನೀಡಿರುತ್ತದೆ. ತಮ್ಮ ನಂಬಿಕೆಗಳ ಸ್ವರೂಪದ ಕಾರಣಕ್ಕಾಗಿಯೇ ಈ ಕವಿಗಳು ಅಂತರಂಗದ ಹಾಡನ್ನು ಗೆಲ್ಲಿಸಬಲ್ಲರು. ಸುಲಭವಾಗಿ ಬಿಚ್ಚಿಕೊಳ್ಳದ, ನಿಗೂಢ, ಅವೈಚಾರಿಕ (ಗದ್ಯಾತ್ಮಕ "ವಿಚಾರ"ಕ್ಕಿಂತ ಭಿನ್ನವಾದದ್ದು ಎಂದರ್ಥ) ಕಾವ್ಯ ಅವರ ಕಾವ್ಯಜೀವನದ ಸತ್ವ ಸಮಸ್ತವನ್ನೂ ಬಳಸಿಕೊಂಡರೆ ಹುಟ್ಟ ಬಲ್ಲದು. ಬಹುಶಃ ಈ ಕಾರಣಕ್ಕಾಗಿಯೊ ಏನೊ, ಅವರ "ಚೈತ್ರದಲ್ಲಿ" ಪದ್ಯ ನನಗೆ ವಿಶಿಷ್ಟವಾಗಿ ಕಂಡಿತು. ಸಾಮಾಜಿಕ ಪ್ರಜ್ಞೆಯ ಕಾವ್ಯದ ಹೆಸರಿನಲ್ಲಿ ನಮ್ಮ ಸುತ್ತಲೂ ಸರಳ ಪ್ರತಿಕ್ರಿಯೆಗಳೇ ತುಂಬಿರುವಾಗ ಇಂಥ ಕವನಗಳು ಕಾವ್ಯಕ್ಕಿರುವ ಸಾಧ್ಯತೆಗಳನ್ನು ಸೂಚಿಸಬಲ್ಲದು.

ಕಾವ್ಯ ಉಂಟುಮಾಡುವ ಪ್ರಜ್ಞೆಯ ಕ್ರಾಂತಿಕಾರೀ ಪಲ್ಲಟ ಮೂಲತಃ ಈ ಸ್ವರೂಪದ್ದೆ. ಅದಕ್ಕಾಗಿಯೇ ಖ್ಯಾತ ವಾಮಪಂಥೀಯ ಚಿಂತಕ ಹರ್ಬರ್ಟ್ ಮಾರ್ಕ್ಯೂಸ್ ಹೇಳಿದ: ಬೋದಿಲೇರ್ ಮತ್ತು ರಿಂಬಾರ ನಿಗೂಢ ಪದ್ಯಗಳು ಬ್ರೆಕ್ಟನ ಸರಳ ಉಪದೇಶಾತ್ಮಕ ನಾಟಕಗಳಿಗಿಂತ ಹೆಚ್ಚು ತೀವ್ರವಾದ ಕ್ರಾಂತಿಕಾರಿ ಪಾತ್ರವನ್ನು ನಿರ್ವಹಿಸುತ್ತವೆ.

ಗ್ರೀಷ್ಮದುರಿಬಿಸಿಲಿನಲ್ಲಿ ಕಾವ್ಯಾಭಿಮಾನಿಗಳು ಇಂಥ ಕಾವ್ಯಕ್ಕಾಗಿ ಕಾಯುತ್ತಾರೆ. ದಟ್ಟ ಕಾರ್ಮೋಡದ ಆಕಾಶದ ಎದೆವೊಡೆದಂತೆ ಭೋರೆಂದು ನುಗ್ಗುವ, ಧೋ ಧೋ ಎಂದು ಸುರಿಯುವ ಆ ಮಳೆಗಾಗಿ ಕಾಯುತ್ತಾರೆ. ಒಣಗಿ ಬೆಂಗಾಡಾದ ಹೃದಯಗಳು ಮತ್ತೆ ನೀರುಂಡು ತಣಿದು ಬದಲಾವಣೆಯ ರಥಕ್ಕೆ ಕೈ ಹಚ್ಚುತ್ತವೆ. ಅಂಥ ದೈತ್ಯ ಸಂಕಟಗಳ ಹೊತ್ತಿನಲ್ಲೂ ಪ್ರೊಮಿತ್ಯೂಸ್‌ನಿಗೆ ಶಕ್ತಿ ನೀಡಿದ್ದು ಅವನ ಬಾಯಿಂದ ಹೊರಟ ಆ ಮಹಾ ಕವನಗಳಲ್ಲವೇನು? ದೇವರು, ಧರ್ಮಗಳ ಸರಳ ಸಮಾಧಾನಗಳಿಲ್ಲದ ಕಾವ್ಯ ಅದು.

ಜಿಎಸ್‌ಎಸ್ ಅವರ ಐವತ್ತೈದರ ಹೊತ್ತಿಗೆ ಬಂದ ಈ ಕೃತಿಯಲ್ಲೂ ದೇವರ, ಧರ್ಮದ ಸುಳಿವಿಲ್ಲ. ಆಧುನಿಕ ಯುಗದಲ್ಲಿ ಅಂತರ್ಮುಖಿಯಾದವನಿಗೆ ಈ ರೀತಿಯ ನಂಬಿಕೆ ಸಾಧ್ಯವೂ ಇಲ್ಲ. ಏಕೆಂದರೆ-ಹೆಗೆಲ್ ಹೇಳಿದ: ನಿಮ್ಮ ಅಂತರ್ಮುಖೀ ಬೆಂಕಿಯಲ್ಲಿ ದೇವರುಗಳು ಉರಿದು ಬೂದಿಯಾಗಿದ್ದಾರೆ.

ಈ ಕವಿಯ ಮುಂದಿನ ದಾರಿಯ ಬಗ್ಗೆ ಕುತೂಹಲ ಹುಟ್ಟುವುದು ಇದೇ ಕಾರಣಕ್ಕಾಗಿ.

*(ಮೂಲ: 'ಕಾಡಿನ ಕತ್ತಲಲ್ಲಿ' ಕವನ ಸಂಗ್ರಹಕ್ಕೆ ಬರೆದ ಮುನ್ನುಡಿ: 1981)*

■

# ಕನ್ನಡ ಪರಂಪರೆ ಹಾಗೂ ಜಿಎಸ್‌ಎಸ್ ಕಾವ್ಯ

ಡಾ।। ನರಹಳ್ಳಿ ಬಾಲಸುಬ್ರಹ್ಮಣ್ಯ

**ಕ**ನ್ನಡ ಪರಂಪರೆ ಹಾಗೂ ಶಿವರುದ್ರಪ್ಪನವರ ಕಾವ್ಯ ಎಂಬ ವಿಷಯವನ್ನು ಕುರಿತು ಮಾತನಾಡುವಾಗ ಕನ್ನಡ ವಿಮರ್ಶೆ ಎದುರಿಸುತ್ತಿರುವ ಬಹುಮುಖ್ಯ ಸವಾಲೊಂದು ಎದುರಾಗುತ್ತದೆ. ಎಂ.ಜಿ. ಕೃಷ್ಣಮೂರ್ತಿ ಕನ್ನಡ ವಿಮರ್ಶೆಯ ಈ ಸವಾಲನ್ನು ಹೀಗೆ ಗುರ್ತಿಸುತ್ತಾರೆ: 'ಇಂಗ್ಲಿಷ್ ಲೇಖಕನೊಬ್ಬನನ್ನು ವಿಮರ್ಶಿಸುವಾಗ ಸಂಪ್ರದಾಯವೊಂದರ ಹಿನ್ನೆಲೆಯಲ್ಲಿ ಒಬ್ಬ ಲೇಖಕನನ್ನು ಬೆಲೆಗಟ್ಟಬಹುದು. ಆದರೆ ಕನ್ನಡ ಲೇಖಕನೊಬ್ಬನನ್ನು ಹೀಗೆ ವಿಮರ್ಶಿಸುವುದು ಸಾಧ್ಯವೇ? ಇಂಗ್ಲಿಷ್ ವಿಮರ್ಶಕನೊಬ್ಬ ಟಿ.ಎಸ್. ಎಲಿಯಟ್, ಮೆಟಫಿಸಿಕಲ್ ಕವಿಗಳು ಹಾಗೂ Jacobean ನಾಟಕಾರರ ಮಧ್ಯೆ ಫಲಪ್ರದವಾಗಿ ಸ್ಥಾಪಿಸಬಹುದಾದ ಸಂಬಂಧವನ್ನು ಕನ್ನಡ ವಿಮರ್ಶಕನೊಬ್ಬ ಬೇಂದ್ರೆ, ಪುಟ್ಟಪ್ಪ, ಅಡಿಗರಿಗೂ ಮತ್ತು ಮಾರ್ಗ ಹಾಗೂ ಮಧ್ಯಕಾಲೀನ ಕವಿಗಳಿಗೂ ಮಧ್ಯೆ ಸ್ಥಾಪಿಸಬಹುದೆಂದು ನಾನಂತೂ ಭಾವಿಸಲಾರೆ. ಇದಕ್ಕೆ ಕಾರಣಗಳು ಐತಿಹಾಸಿಕವಾಗಿರಬಹುದು. ಅಥವಾ ಸಮಾಜಶಾಸ್ತ್ರೀಯವೂ ಆಗಿರಬಹುದು. ಆದರೆ ಈ ಭಗ್ನಸ್ಥಿತಿಯ ವಾಸ್ತವವನ್ನು ಕಡೆಗಾಣಿಸಲಾಗದು.

ಎಂ.ಜಿ.ಕೆ. ಅವರ ಈ ಬಗೆಯ ಆಲೋಚನೆ ವಸಾಹತುಷಾಹಿ ಸಂಸ್ಕೃತಿಯಿಂದ ರೂಪುಗೊಂಡಿರುವಂಥದು. ಅವರು ಹೇಳುವುದು ನಿಜ—ಕುವೆಂಪು ಅವರನ್ನು ವರ್ಡ್ಸ್‌ವರ್ತ್ ಜೊತೆಗಿಟ್ಟು ಹೋಲಿಸುವುದು ನಮಗೆ ಸಹಜ, ತಾರ್ಕಿಕ ಎನ್ನಿಸುವಂತೆ, ಅವರನ್ನು ಪಂಪ, ಹರಿಹರ ಇವರ ಜೊತೆಗೆ ನಾವು ಹೋಲಿಸಿ ಚರ್ಚಿಸುವುದಿಲ್ಲ. ಆಧುನಿಕ ಲೇಖಕನೊಬ್ಬನ್ನು ನಾವು ಚರ್ಚಿಸುವಾಗ ನಮ್ಮ ಪರಂಪರೆಯ ವ್ಯಾಪ್ತಿ ಬಿಎಂಶ್ರೀ ಅವರಿಗಿಂತ ಹಿಂದೆ ಹೋಗುವುದಿಲ್ಲ. ಏಕೆ ಹೀಗೆ? ಇದಕ್ಕೆ ಕಾರಣವಿದೆ. ಡಿ.ಆರ್. ನಾಗರಾಜ್ ಗುರ್ತಿಸುವಂತೆ— 'ವಸಾಹತುಘಟ್ಟದ ಮುಖ್ಯ ರೋಗವೇ ವಸಾಹತುಪೂರ್ವದ ರಚನೆಗಳೊಡನೆ ಅಧಿಕೃತ ಸಂಬಂಧವನ್ನು ಅಸಾಧ್ಯವಾಗಿಸುವುದು. ಪರಂಪರೆಯೊಂದನ್ನು ಸಜೀವ ಸಾಹಿತ್ಯವನ್ನಾಗಿ ನೋಡಲು, ಚರ್ಚೆ ಮಾಡಲು ಹಿಂಜರಿಕೆ ಹುಟ್ಟುವುದೇ ಬೌದ್ಧಿಕ ವಸಾಹತೀಕರಣದ ಮುಖ್ಯ ಲಕ್ಷಣ.' ಹೀಗಾಗಿ ಜಿಎಸ್‌ಎಸ್ ಅವರ ಕಾವ್ಯವನ್ನು ಕನ್ನಡ ಪರಂಪರೆಯಲ್ಲಿಟ್ಟು ಚರ್ಚಿಸಬೇಕೆನ್ನುವಾಗ ನನ್ನ ಆಸಕ್ತಿ-ಇಡೀ ಕನ್ನಡ ಸಾಹಿತ್ಯ ಪರಂಪರೆಯನ್ನು ಒಂದು ಸಜೀವ

ಪರಂಪರೆ ಎಂದು ನಂಬಿ, ಆ ಹಿನ್ನೆಲೆಯಲ್ಲಿ ವಿಷಯ ಪ್ರವೇಶ ಮಾಡುವುದಾಗಿದೆ. ಇದು ಒಂದು ಬಗೆಯಲ್ಲಿ ಬೌದ್ಧಿಕ ವಸಾಹತೀಕರಣದ ರೋಗದಿಂದ ಪಾರಾಗುವ ಪ್ರಯತ್ನವೂ ಹೌದು.

೨

ಆದಿಕವಿ ಪಂಪ ಕನ್ನಡ ಸಾಹಿತ್ಯ ಪರಂಪರೆಗೆ ಅನೇಕ ಬಗೆಯ ಮಾದರಿಗಳನ್ನು ಒದಗಿಸಿಕೊಟ್ಟಿದ್ದಾನೆ. ಈಗಾಗಲೇ ಕನ್ನಡ ವಿಮರ್ಶೆ ಬಹುವಾಗಿ ಚರ್ಚಿಸಿರುವ ಮಾದರಿಗಳೆಂದರೆ—'ಬೆಳಗುವೆನಲ್ಲಿ ಲೌಕಿಕಮನ್ ಇಲ್ಲಿ ಜಿನಾಗಮಮಂ' ಎಂದು ಹೇಳಿ ಲೌಕಿಕ, ಆಗಮಿಕಗಳೆಂಬ ಎರಡು ಕಾವ್ಯಧಾರೆಗಳನ್ನು ಸೃಷ್ಟಿಸಿದನೆಂಬುದು ಒಂದು. ಪಂಪನ ಈ ಮಾದರಿ ಇಂದಿಗೂ, ಸಾವಿರ ವರ್ಷಗಳ ನಂತರವೂ ಒಂದು ರೀತಿ ಮುಂದುವರೆಯುತ್ತಿರುವುದು ಆಶ್ಚರ್ಯದ ಸಂಗತಿ. 'ಬರೆವೆನಿಲ್ಲಿ ಜನಪ್ರಿಯತೆಗಂ ಗೀತೆಗಳಂ, ಅಲ್ಲಿ ನಿಜಾಭಿವ್ಯಕ್ತಿಗಂ ಕವಿತೆಗಳಂ' ಎಂಬುದು ಇತ್ತೀಚಿನ ಅನೇಕ ಕವಿಗಳ ನಿಲವು. ಈ ಬಗೆಯ ನಿಲುವನ್ನು ಕನ್ನಡ ವಿಮರ್ಶೆ ಈಗ ಪ್ರಶ್ನಿಸುತ್ತಿದೆ. ಪಂಪನದು ಲೌಕಿಕ ಆಗಮಿಕವೆಂದು ವಿಂಗಡಣೆಗೊಂಡ ಖಂಡ ಪ್ರತಿಭೆಯಲ್ಲ, ಅಖಂಡನೆಲೆಯಲ್ಲಿ ಆತನ ಪ್ರತಿಭೆ ಸೃಜನಶೀಲವಾಗಿತ್ತು ಎಂದು ಕುರ್ತಕೋಟಿಯವರು ಇತ್ತೀಚೆಗೆ ಪ್ರತಿಪಾದಿಸಿದ್ದಾರೆ. ಅಂತೆಯೇ ಆಧುನಿಕ ಸಂದರ್ಭದ ಕವಿಗಳು ಪ್ರಕಟಿಸುತ್ತಿರುವ ನಿಲವೂ ಪ್ರಶ್ನಾರ್ಹವೇ.

ಪಂಪನಲ್ಲಿ ಕಾಣುವ ಮತ್ತೊಂದು ಮಾದರಿ-ಪಂಪ ಉದ್ದೇಶಪೂರ್ವಕ ಸೃಷ್ಟಿಸಿದ್ದಲ್ಲ, ಪಂಪನ ಕಾವ್ಯಪ್ರತಿಭೆ ನೀಡಿರುವಂಥದು. ಅದೆಂದರೆ ಕಾವ್ಯವಸ್ತುವನ್ನು ಸೃಜನಶೀಲ ಪ್ರತಿಭೆ ಮೀರಿ ಬೆಳೆಯುವಂಥದು. ಪಂಪ ಬರೆಯಹೊರಟಿದ್ದು ವಿಕ್ರಮಾರ್ಜುನ ವಿಜಯ, ಆದರೆ ಬರೆದದ್ದು ಕರ್ಣನ ಕತೆ. ಅರಿಕೇಸರಿಯನ್ನು ವೈಭವಿಸಲು ಅರ್ಜುನನನ್ನು ನಾಯಕನನ್ನಾಗಿ ಮಾಡಿಕೊಂಡು ವಿಕ್ರಮಾರ್ಜುನ ವಿಜಯ ಬರೆದ ಪಂಪ ಕಡೆಗೆ 'ನೆನೆಯದಿರಣ್ಣ ಭಾರತದೊಳಂ ಪೆರರಾರುಮನ್ ಒಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ... ಕರ್ಣರಸಾಯನಮಲ್ತೆ ಭಾರತಂ' ಎಂದು ಹೇಳುವಲ್ಲಿ ಪಂಪ ತನ್ನನ್ನು ತಾನು ಕಾವ್ಯವಸ್ತುವಿಗೆ ಸಂಪೂರ್ಣ ಒಪ್ಪಿಸಿಕೊಂಡು ತಲ್ಲೀನ ನೆಲೆಯಲ್ಲಿ ಕೃತಿರಚನೆ ಮಾಡಿದ್ದಾನೆ. ಇದನ್ನು 'ತನ್ಮಯ ಪ್ರತಿಭೆ'ಯ ಮಾದರಿ ಎಂದು ಕರೆಯಬಹುದು.

ಇದಕ್ಕೆ ಪರ್ಯಾಯವಾಗಿ ಇನ್ನೊಂದು ಮಾದರಿ ನಮ್ಮಲ್ಲಿದೆ. ಅದು ಹರಿಹರನಲ್ಲಿ ಕಾಣುವ ಮಾದರಿ. ಹರಿಹರ ಅನೇಕ ಮೂಲಗಳಿಂದ ತನ್ನ ರಗಳೆಗಳಿಗೆ ವಸ್ತುವನ್ನು ಆರಿಸಿಕೊಳ್ಳುತ್ತಾನೆ. ವಿವಿಧ ವರ್ಗ, ವರ್ಣಗಳ ವ್ಯಕ್ತಿಗಳು ಆತನ ರಗಳೆಗಳ ನಾಯಕರು. ಮಾದಾರ ಚನ್ನಯ್ಯ, ಕುಂಬಾರ ಗುಂಡಯ್ಯ, ಬೆಸ್ತರ ಅತಿಭಕ್ತ, ಒಕ್ಕಲಿಗ ಇಳೆಯಾಂಡ ಗುಡಿಮಾರ, ಬೇಡರ ಕಣ್ಣಪ್ಪ, ಕೂಲಿಯ ಅರಿವಾಳ್ತಾಂಡ ಹೀಗೆ... ಹರಿಹರ ಆರಿಸಿಕೊಳ್ಳುವ ವಸ್ತುವಿನಲ್ಲಿಯೇ ಅಪಾರ ವೈವಿಧ್ಯವಿದೆ. ಆದರೆ ಹರಿಹರನ ಪ್ರತಿಭೆ ಕಾವ್ಯವಸ್ತು

ವಿನಲ್ಲಿರುವ ಈ ವೈವಿಧ್ಯವನ್ನು ಹಿಂದಕ್ಕೆ ತಳ್ಳಿ ಇವರೆಲ್ಲರನ್ನೂ 'ಭಕ್ತ'ರನ್ನಾಗಿ ಸ್ವೀಕರಿಸಿಬಿಡುತ್ತದೆ. ಹೀಗಾಗಿ ಅವರ ವೈಯಕ್ತಿಕ ಅನುಭವ ಪ್ರಪಂಚ, ಸಾಮಾಜಿಕ ಬದುಕು ಮುಖ್ಯವಾಗದೆ ಭಕ್ತರಾಗಿ ಮಾತ್ರ ಅವರು ವೈಭವೀಕರಣಗೊಳ್ಳುತ್ತಾರೆ. ಹರಿಹರನ ಪ್ರತಿಭೆ ಕಾವ್ಯವಸ್ತುವಿಗೆ ತನ್ನನ್ನು ಇಡಿಯಾಗಿ ಒಪ್ಪಿಸಿಕೊಳ್ಳದೆ ಅದನ್ನು ತನ್ನ ಉದ್ದೇಶಕ್ಕೆ ತಕ್ಕಂತೆ ಬಳಸಿಕೊಳ್ಳುತ್ತದೆ. ಇದನ್ನು ನಾವು 'ನಿಯಂತ್ರಿತ ಪ್ರತಿಭೆ' ಎಂದು ಕರೆಯಬಹುದು. ಕಾವ್ಯವಸ್ತುವನ್ನು ಪ್ರತಿಭೆ ಇಲ್ಲಿ ನಿಯಂತ್ರಿಸುತ್ತದೆ.

ಆಧುನಿಕ ಸಾಹಿತ್ಯ ಸಂದರ್ಭದಲ್ಲಿ ಈ ಎರಡೂ ಮಾದರಿಗಳನ್ನು ನಾವು ಕಾಣ ಬಹುದು. ಕುವೆಂಪು ಪಂಪ ಮಾದರಿಯ 'ತನ್ಮಯ ಪ್ರತಿಭೆ'ಯ ಧಾರೆಗೆ ಸೇರಿದರೆ ಜಿ.ಎಸ್. ಶಿವರುದ್ರಪ್ಪನವರು ಹರಿಹರ ಮಾದರಿಯ 'ನಿಯಂತ್ರಿತ ಪ್ರತಿಭೆ'ಯ ಗುಂಪಿಗೆ ಸೇರುತ್ತಾರೆ. ಕುವೆಂಪು ತಮ್ಮ ಕಾಲದ ಸಾಂಸ್ಕೃತಿಕ ಸವಾಲುಗಳಿಗೆ ಇಡಿಯಾಗಿ ತಮ್ಮನ್ನು ಒಪ್ಪಿಸಿಕೊಂಡವರು, ಮುಖಾಮುಖಿಯಾದವರು. ಅವೈದಿಕ ನೆಲೆಯಿಂದ ಬಂದ ಕುವೆಂಪು ವೈದಿಕ ಪರಿಸರದ ಪ್ರಭಾವವನ್ನು ಒಪ್ಪಿಕೊಂಡು ತಮ್ಮ ಅನನ್ಯತೆಯನ್ನು ಸ್ಥಾಪಿಸಿದ ಕ್ರಮ ಕನ್ನಡ ಸಂಸ್ಕೃತಿಯ ಚರಿತ್ರೆಯಲ್ಲಿ ಅತ್ಯಂತ ಮಹತ್ವದ ಘಟನೆಗಳಲ್ಲೊಂದು. ಏಕಲವ್ಯನ ಗುರುಭಕ್ತಿಯನ್ನು ಒಪ್ಪಿಕೊಂಡೂ, ಅರ್ಜುನ, ದ್ರೋಣರ ಕ್ಷಾತ್ರ-ವೈದಿಕ ಅಧಿಕಾರವನ್ನು ಪ್ರಶ್ನಿಸುವ 'ಬೆರಳ್‌ಗೆ ಕೊರಳ್' ನಾಟಕವನ್ನು ನಾವಿಲ್ಲಿ ನಿದರ್ಶನಕ್ಕಾಗಿ ಗಮನಿಸಬಹುದು. ಕುವೆಂಪು ಅವರ ಸಮಗ್ರ ಸಾಹಿತ್ಯಸೃಷ್ಟಿಯ ಹಿನ್ನೆಲೆಯಲ್ಲಿ ಸಾಂಸ್ಕೃತಿಕ ಒತ್ತಾಯದ ತುರ್ತಿದೆ. ಕುವೆಂಪು ಪ್ರತಿಭೆ ಅದನ್ನು ಸ್ವೀಕರಿಸಿದೆ. ಹಾಗೆ ನೋಡಿದರೆ ಜಿ.ಎಸ್. ಶಿವರುದ್ರಪ್ಪನವರೂ ನವೋದಯ ಸಂದರ್ಭದಲ್ಲಿ ಮೈಸೂರು ಸಾಂಸ್ಕೃತಿಕ ಕೇಂದ್ರದಲ್ಲಿ ರೂಪುಗೊಂಡ ಮುಖ್ಯ ಅವೈದಿಕ ಪ್ರತಿಭೆಗಳಲ್ಲಿ ಒಬ್ಬರು. ಕುವೆಂಪು ಅವರಂತೆಯೇ ಅವರಿಗೂ ಕೆಲವು ಸಾಂಸ್ಕೃತಿಕ ಸವಾಲುಗಳಿದ್ದವು, ಜೊತೆಗೆ ಕುವೆಂಪು ಅವರ ಮಾದರಿಯೂ ಕಣ್ಣಮುಂದಿತ್ತು. ಆದರೆ ಜಿಎಸ್‌ಎಸ್ ಪ್ರತಿಭೆ ತನ್ನ ಕಾಲದ ಸಾಂಸ್ಕೃತಿಕ ಸವಾಲುಗಳನ್ನು ಕುವೆಂಪು ಸ್ವೀಕರಿಸಿದ ಹಾಗೆ ಸ್ವೀಕರಿಸಿದಂತೆ ತೋರುವುದಿಲ್ಲ. ಒಂದು ರೀತಿಯಲ್ಲಿ ಜಿಎಸ್‌ಎಸ್ ಪ್ರತಿಭೆ 'ನಿಯಂತ್ರಿತ ಪ್ರತಿಭೆ'ಯ ಧಾರೆಗೆ ಸೇರುವಂಥದು.

ಇದಕ್ಕೆ ಕಾರಣಗಳೂ ಇವೆ. ಜಿಎಸ್‌ಎಸ್ ಅವರ ಮೊದಲ ಕವನ ಸಂಕಲನ 'ಸಾಮಗಾನ' ಪ್ರಕಟವಾದದ್ದು 1950ರಲ್ಲಿ. ಆ ವೇಳೆಗಾಗಲೇ ಪ್ರಗತಿಶೀಲ ಚಳುವಳಿ ಕನ್ನಡದಲ್ಲಿ ಪ್ರಬಲವಾಗಿತ್ತು. ಅದೇ ವೇಳೆಗೆ ಗೋಕಾಕ್ 'ನವ್ಯ'ದ ಘೋಷಣೆ ಮಾಡಿದ್ದರು. 1952ರಲ್ಲಿ ಗೋಪಾಲಕೃಷ್ಣ ಅಡಿಗರ 'ನಡೆದು ಬಂದ ದಾರಿ' ಪ್ರಕಟವಾಗಿ ಹೊಸ ಕಾವ್ಯಮಾರ್ಗ ಸೃಷ್ಟಿಸಲು ಹವಣಿಕೆ ನಡೆದಿತ್ತು. ಆದರೆ ನವೋದಯದ ಪ್ರಭಾವ ಇನ್ನೂ ದಟ್ಟವಾಗಿತ್ತು. ಸೃಜನಶೀಲ ತರುಣ ಮನಸ್ಸಿಗೆ ಅದೊಂದು ರೀತಿ ಗೊಂದಲದ ಪರಿಸ್ಥಿತಿ. ಈ ಗೊಂದಲದ ಸನ್ನಿವೇಶದಲ್ಲಿ ಜಿಎಸ್‌ಎಸ್ ಕಾವ್ಯಲೋಕ ಪ್ರವೇಶಿಸಿದರು. ಶಿವರುದ್ರಪ್ಪನವರ ಪ್ರತಿಭೆ ತನ್ನನ್ನು ಯಾವುದಕ್ಕೂ ಇಡಿಯಾಗಿ ಒಪ್ಪಿಸಿಕೊಳ್ಳಲು ಸಿದ್ಧವಿರಲಿಲ್ಲ.

ಅದೂ ಬೇಕು ಇದೂ ಬೇಕು
ಎಲ್ಲವೂ ಬೇಕು ನನಗೆ
ದಾರಿ ನೂರಾರಿವೆ ಬೆಳಕಿನರಮನೆಗೆ

ಬೇಡ ನನಗೆ ಸಿದ್ಧಾಂತಗಳ ರಾದ್ಧಾಂತ
ನನಗಿಲ್ಲ, ಇದೇ ಸರಿ ಇಷ್ಟೇ ಸರಿ ಎನುವ ಪಂಥ
ನಾ ಬಲ್ಲೆ ಇವು ಎಲ್ಲ ಏರುವೆಯ
ಒಂದೊಂದು ಹಂತ.

ನೂರಾರು ಭಾವದ ಬಾವಿ; ಎತ್ತಿಕೋ
ನಿನಗೆ ಬೇಕಾದಷ್ಟು ಸಿಹಿನೀರ
ಪಾತ್ರೆಯಾಕಾರಗಳ ಕುರಿತು ಏತಕೆ ಜಗಳ?
ನಮಗೆ ಬೇಕಾದದ್ದು ದಾಹ ಪರಿಹಾರ

ಅದೂ ಬೇಕು ಇದೂ ಬೇಕು ಎಲ್ಲವೂ ಬೇಕು ನನಗೆ ಎನ್ನುವ ಶಿವರುದ್ರಪ್ಪನವರ ಪ್ರತಿಭೆಗೆ ಆ ಕಾಲದ ಸಾಂಸ್ಕೃತಿಕ ಗೊಂದಲ ತನ್ನದೇ ಆದ ವೈಚಾರಿಕ ನೆಲೆಯ ಕಾವ್ಯದ ಆಕೃತಿಯೊಂದನ್ನು ಸೃಷ್ಟಿಸಿಕೊಳ್ಳಲು ಅವಕಾಶ ನೀಡಲಿಲ್ಲ ಅಥವಾ ಶಿವರುದ್ರಪ್ಪನವರ ಕಾವ್ಯ ಪ್ರತಿಭೆ ಅದನ್ನು ಸ್ವೀಕರಿಸಲಿಲ್ಲ.

೩

ಕಾವ್ಯನಾಕಾಮೃತದ ಪ್ರತಿಭಾ ಪ್ರವಾಹದಲಿ
ತೇಲಿದೆನು ನಾನೊಂದು ಹಣತೆಯಾಗಿ
ಶಾಸ್ತ್ರಗಳ ಜಟಿಲತೆಯ ಕಾನನದ ಹೊದರಿನಲಿ
ನುಗ್ಗಿದೆನು ಉನ್ಮತ್ತ ವೀರನಾಗಿ

ಅಲ್ಲಿಯೂ ಇರಲಿಲ್ಲ ನನ್ನೆದೆಯ ಜೇನು
ಎಲ್ಲೆಲ್ಲಿಯೂ ಬರಿಯ ಅತೃಪ್ತಿಯೇನು?

'ಹಣತೆ' ಶಿವರುದ್ರಪ್ಪನವರ ಕಾವ್ಯದಲ್ಲಿ ಕಂಡುಬರುವ ಪ್ರಧಾನ ಪ್ರತಿಮೆ. ಅವರ ಕಾವ್ಯದಲ್ಲಿ 'ಹಣತೆ'—ಬೇರೆ ಬೇರೆ ನೆಲೆಗಳಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತದೆ. ಇದು ಕಾವ್ಯಚಳುವಳಿಗಳ ಗೊಂದಲದಲ್ಲಿ ಶಿವರುದ್ರಪ್ಪನವರು ಆಯ್ಕೆ ಮಾಡಿಕೊಂಡ ದಾರಿಯನ್ನು ಸೂಚಿಸುತ್ತದೆ. ಒಂದು ಹಂತದಲ್ಲಿ—'ಈಗಿವರು ಕೇಳಿದರೆ ಕೊಡುವ ಕುರುಡು ದೀಪಕ್ಕಿಂತ ಕತ್ತಲೆಯೆ ವಾಸಿ' ಎಂಬ ನಿಲವು ತಾಳುವ ಕವಿ ಕಡೆಗೆ—

ಹಣತೆ ಹಚ್ಚುತ್ತೇನೆ—
ಕತ್ತಲೆಯನ್ನು ದಾಟುತ್ತೇನೆಂಬ ಭ್ರಮೆಯಿಂದಲ್ಲ

**ಇರುವಷ್ಟು ಹೊತ್ತು ನನ್ನ ಮುಖ ನೀನು**
**ನಿನ್ನ ಮುಖ ನಾನು**
**ನೋಡಬಹುದೆಂಬ ಒಂದೇ ಒಂದು ಆಸೆಯಿಂದ.**

ಇದೇ ಜಿಎಸ್‌ಎಸ್ ಕಾವ್ಯ ಹಿಡಿದ ದಾರಿ. ಆಧುನಿಕ ಮಾನವನ ಅಸಹಾಯಕತೆಯನ್ನು ಮತ್ತು ಛಿದ್ರವಾದ ಮಾನವ ಸಂಬಂಧಗಳನ್ನು ಒಟ್ಟುಗೂಡಿಸುವುದು ಹೇಗೆಂಬ ಗಂಭೀರ ಚಿಂತನೆಯನ್ನು ಅವರ ಕಾವ್ಯದ ಪ್ರಮುಖ ಕಾಳಜಿಯಾಗಿ ನಾವು ಗುರ್ತಿಸಬಹುದಾಗಿದೆ. ಜಿಎಸ್‌ಎಸ್ ಆಯ್ಕೆಮಾಡಿಕೊಂಡ ಜಗತ್ತು ಅಪಾರ ಪ್ರೀತಿಯಿಂದಾವೃತವಾದ ಜಗತ್ತು. ಎಂಥ ಸಂದರ್ಭದಲ್ಲಿಯೂ ಮಾನವೀಯ ಸಂಬಂಧಗಳಲ್ಲಿ ನಂಬಿಕೆ ಕಳೆದುಕೊಳ್ಳದ ಜಗತ್ತು. ನವ್ಯಕಾವ್ಯಮಾರ್ಗದ ಆಚೆಗುಳಿದ, ವಾಮಪಂಥೀಯ ಎನ್ನಬಹುದಾದ ಕಾವ್ಯ ಒಳಗೊಳ್ಳದ ಅನೇಕ ಮಹತ್ವದ ಅನುಭವ ವಲಯಗಳು ಶಿವರುದ್ರಪ್ಪನವರ ಕಾವ್ಯದಲ್ಲಿ ಅತ್ಯಂತ ಶಕ್ತಿಯುತವಾಗಿ ಪ್ರಕಟವಾದವು. ಡಿ.ಆರ್. ನಾಗರಾಜ್ ಗುರ್ತಿಸುವಂತೆ— ಶಿವರುದ್ರಪ್ಪ, ನರಸಿಂಹಸ್ವಾಮಿ, ಚನ್ನವೀರಕಣವಿ ಹಾಗೂ ಗಂಗಾಧರ ಚಿತ್ತಾಲ ಕನ್ನಡ ನವೋದಯದ ತುಂಬು ಸಮೃದ್ಧತೆಯಿಂದ ಬಹಳಷ್ಟನ್ನು ಪಡೆದು ಮನದುಂಬಿಸಿಕೊಂಡು ತಮ್ಮ ದಾರಿ ಹುಡುಕುತ್ತ ಹೊರಟವರು. ಕಹಿತನದ, ಒಂಟಿತನದ ತೀವ್ರ ಅನುಭವವನ್ನು ತಮ್ಮ ಕಾವ್ಯದಲ್ಲಿ ಹೇಳಿಯೂ ನವೋದಯದ ಉಲ್ಲಾಸವನ್ನು ಮತ್ತೆ ಮತ್ತೆ ಬದುಕ ಬಯಸಿದಂಥವರು ಇವರು. ನವೋದಯದ ಪ್ರಮುಖ ಗುಣವಾದ ಉದಾರವಾದವನ್ನು ಎಲ್ಲ ಬಗೆಯ ಹೊಡೆತಗಳಿಂದ ರಕ್ಷಿಸಿ ಮುನ್ನಡೆಸಿದ ಇವರ ಕಾವ್ಯದ ಅಧ್ಯಯನ ಹೊಸ ಬಗೆಯ ಜೀವನದರ್ಶನವನ್ನು ನಮಗೆ ನಿಸ್ಸಂದೇಹವಾಗಿ ಕಾಣಿಸುತ್ತದೆ.

೪

ಶಿವರುದ್ರಪ್ಪನವರ ಕಾವ್ಯದ ಮೊದಲ ಘಟ್ಟವನ್ನು ಸೌಂದರ್ಯಾತ್ಮಕ ಘಟ್ಟ ಎಂದು ಗುರ್ತಿಸುವುದುಂಟು. ಚೆಲುವಿನ ಆರಾಧನೆಯನ್ನು, ಜೀವನದ ಬಿಕ್ಕಟ್ಟಿನ ಗಳಿಗೆಗಳಲ್ಲಿ ಮನಸ್ಸನ್ನು ಅದರಿಂದ ಮೆಲ್ಲನೆ ತೇಲಿಸುವಂಥ ಮಾರ್ದವತೆಯನ್ನು ಅಲ್ಲಿ ಕಾಣುತ್ತೇವೆ ಎಂಬ ಅಭಿಪ್ರಾಯವಿದೆ. ಈ ಅಭಿಪ್ರಾಯ ಅಂಶಿಕ ಸತ್ಯ ಮಾತ್ರ. ಜಿಎಸ್‌ಎಸ್ ಅವರ ಕಾವ್ಯದಲ್ಲಿ ಎರಡು ಜಗತ್ತುಗಳಿವೆ. ಒಂದು ಪ್ರಕೃತಿ ಪ್ರೀತಿಯ ಜಗತ್ತು; ಮತ್ತೊಂದು ಮಾನವ ಕೇಂದ್ರಿತ ಛಿದ್ರ ಸಮಾಜ. ಇವೆರಡರ ಮುಖಾಮುಖಿ ನವೋದಯದ ದಟ್ಟ ಪ್ರಭಾವಕ್ಕೊಳಗಾಗಿಯೂ ಜಿಎಸ್‌ಎಸ್ ಅವರನ್ನು ಭಿನ್ನವಾಗಿಸಿರುವ ಅಂಶ. ಒಂದೆಡೆ—

**ಪ್ರಕೃತಿ ಪೂಜೆಗೆ ಬನ್ನಿರೆಲ್ಲರು**
**ಪ್ರಕೃತಿ ಪೂಜೆಗೆ ಬನ್ನಿರಿ**
**ಇರಲಿ ಬಾ ಆ ಜಗದ ಜಂಜಡ**

**ಬರಿಯ ಮಣ್ಣಿನ ಗಡಿಬಿಡಿ**
**ಪ್ರಕೃತಿ ಮಾತೆಯ ಸ್ತನ್ಯಪಾನದಿ**
**ಪುಷ್ಟಿಗೊಳುವುದು ಚೇತನ**

ಎಂದು ಆಹ್ವಾನಿಸಿದರೂ—

**ಅಂಧಕಾರ ಮುತ್ತುತಿದೆ**
**ಚಂದದ ಬೆಳಕಾರುತಿದೆ**
**ಪಡುಗಡಲಿನ ನೀರಿನಲ್ಲಿ**
**ದಿನದ ವಿಭವವಳಿದಿದೆ**
**ಒಲವನೀವ ಬೆಳಕು ಹೋಗಿ**
**ಇರುಳು ತೆರೆಯ ತಬ್ಬಿದೆ**

ಎಂಬ ಭಾವ ಆರಂಭದ ಕವಿತೆಗಳಲ್ಲಿಯೇ ದಟ್ಟವಾಗಿ ಕಾಣಿಸುತ್ತದೆ.

**ಮೈನಡುಗಿತು, ಸಿಡಿದೊಡೆಯಿತು ಸೌಂದರ್ಯ!**
**ಸಾವು ಬದುಕಿನ ಹೋರಾಟದ ಕ್ರೌರ್ಯ**
**ಎದೆ ತುಂಬಿತು;**

ಭಗ್ನಗೊಂಡ ಬದುಕಿನ ನೆಲೆಯಿಂದ ಹೊರಟ ಸೌಂದರ್ಯಾರಾಧನೆಯನ್ನು ನಾವಿಲ್ಲಿ ಕಾಣುತ್ತೇವೆ. ಹೀಗಾಗಿಯೇ ನವೋದಯದ ಉದಾರವಾದೀ ನಿಲವು ಜಿಎಸ್‌ಎಸ್ ಅವರಲ್ಲಿ ಕಾಣಿಸಿಕೊಳ್ಳುವುದು, ವಾಸ್ತವ ಜಗತ್ತಿನ ಸಮರಸವಿಲ್ಲದ ಮಾನವ ಸಂಬಂಧದ ಛಿದ್ರತೆಯ ದಟ್ಟವಾದ ಅರಿವಿದ್ದೂ ಪ್ರಕಟಿಸುವ ಧೀರೋದಾತ್ತ ಆಶಾವಾದದ ಮೂಲಕ.

**ಕಪ್ಪು ಕತ್ತಲೆಲ್ಲ ಹಬ್ಬಿ**
**ಕಾಡು ನಾಡನೆಲ್ಲವನ್ನು**
**ತಾನಗೈದಿದೆ**
**ನುಗ್ಗಿ ಹರಿವ ತಿಮಿರವನ್ನು**
**ಕಿರಿಯ ಮಣ್ಣ ಹಣತೆಯೊಂದು**
**ಮನೆಯ ಆಚೆಗಟ್ಟಿ ತಾನೆ**
**ಸ್ತಿಮಿತವಾಗಿದೆ**

ಎಂಬ ಗಾಢಶ್ರದ್ಧೆ, ಹಣತೆಯ ಬೆಳಕಿನಲ್ಲಿ ಬದುಕಿನ ಅರ್ಥಪೂರ್ಣತೆಯನ್ನು ಕಾಣುವ ಅಚಲ ನಂಬಿಕೆ ಜಿಎಸ್‌ಎಸ್ ಅವರ ಕಾವ್ಯವನ್ನು ರೂಪಿಸಿರುವ ದ್ರವ್ಯ. ಇದೇ ಮುಂದೆ ಒಂದು ತಾತ್ವಿಕ ನೆಲೆಯನ್ನು ಶಿವರುದ್ರಪ್ಪನವರ ಕಾವ್ಯಕ್ಕೆ ಕಲ್ಪಿಸಿಕೊಡುತ್ತದೆ.

ಆಧುನಿಕ ಮನುಷ್ಯನ ಅಸಹಾಯಕತೆಯನ್ನು ಜಿಎಸ್‌ಎಸ್ ಅವರ ಕಾವ್ಯ ಅನೇಕ

ನೆಲೆಗಳಿಂದ ಪರಿಶೀಲಿಸುತ್ತದೆ, ವಿವರಿಸಲು ಪ್ರಯತ್ನಿಸುತ್ತದೆ. ಇವುಗಳಲ್ಲಿ ಒಂದು ನೈತಿಕತೆಯ ನೆಲೆ:

**ನೋಡುತ್ತಿದ್ದೇನೆ, ಸುತ್ತಲೂ ಎಂತೆಂಥವೋ**
**ವಿಜೃಂಭಿಸಿ ಮೀಸೆ ತಿರುವುತ್ತವೆ**
**ಏರಬಾರದ ಕಡೆಗೆ ಏರಿ ಇಳಿಯಬಾರದ ಕಡೆಗೆ ಇಳಿದು**
**ಕೆಡಿಸಿ ಹೊಲಸೆಬ್ಬಿಸಿವೆ**
**ಗೆರೆ ದಾಟಬಾರದ ನಾನು ಕಾಯುತ್ತಿದ್ದೇನೆ.**

ಮೌಲ್ಯಗಳ ಅಧಃಪತನದ ಸ್ಥಿತಿಯಿದು. ಸಂವೇದನಾಶೀಲ ವ್ಯಕ್ತಿ, ಇಂಥ ಹೊತ್ತಿನಲ್ಲಿ ಏನು ಮಾಡಬೇಕು? ಎಲ್ಲ ಬಗೆಯ ಸಾಮಾಜಿಕ ನೀತಿ ನಿಯಮಗಳನ್ನು ಉಲ್ಲಂಘಿಸಿ ವೈಯಕ್ತಿಕ ಲಾಭವೊಂದನ್ನೇ ಗುರಿಯಾಗಿಟ್ಟುಕೊಂಡ ಸಂವೇದನಾರಹಿತ ಸಮಾಜದಲ್ಲಿ ಸಾತ್ವಿಕ ವ್ಯಕ್ತಿಯ ಸ್ಥಾನವೇನು? ಈ ತಲ್ಲಣ, ಆತಂಕ ಮತ್ತೆ ಮತ್ತೆ ಜಿಎಸ್‌ಎಸ್ ಅವರ ಕಾವ್ಯದಲ್ಲಿ ವ್ಯಕ್ತವಾಗುತ್ತದೆ. ಸಾಮಾಜಿಕ ಬದುಕಿನ ಈ ದುಸ್ಥಿತಿಯ ಜೊತೆಗೆ ವೈಯಕ್ತಿಕ ಬದುಕಿನಲ್ಲಿ ಸಂವಾದವೇ ಸಾಧ್ಯವಾಗದ ವಿಷಮ ವಾತಾವರಣ ನಿರ್ಮಾಣವಾಗಿರುವುದೂ ಆಧುನಿಕ ಮನುಷ್ಯನ ಅಸಹಾಯಕತೆಯನ್ನು ಮತ್ತಷ್ಟು ತೀವ್ರಗೊಳಿಸುವ ಅಂಶ. 'ಅಹಂ' ಹಾಗೂ 'ಸ್ವಪ್ರತಿಷ್ಠೆ'ಗಳೇ ಕಾರಣವಾಗಿ ಮನುಷ್ಯ ಸಂಬಂಧಗಳ ನಡುವೆ ಎದ್ದು ನಿಂತಿರುವ ಗೋಡೆಗಳು ನಮ್ಮ ಬದುಕನ್ನು ಮತ್ತಷ್ಟು ಹತಾಶ ಸ್ಥಿತಿಗೆ ತಳ್ಳಿವೆ.

**ಉರಿಯುವ ಬೇಸಗೆ ಕೆಂಡದ ಹಾಸುಗೆ**
**ನನ್ನ ನಿನ್ನ ನಡುವೆ**
**ಉದುರುವ ಎಲೆ ಉರಿಯುವ ಚಿತೆ**
**ನನ್ನ ನಿನ್ನ ನಡುವೆ**
**ಹದ್ದಿನ ರೆಕ್ಕೆಯ ನೆರಳೂ ಬೇಟೆ ನಾಯಿಗಳ ಬೊಗಳೂ**
**ನನ್ನ ನಿನ್ನ ನಡುವೆ**

ವೈಯಕ್ತಿಕ ಸಂಬಂಧದ ಘನತೆಯನ್ನು, ಆಪ್ತತೆಯನ್ನು, ಉಲ್ಲಾಸವನ್ನು ಸಾಧ್ಯವಾಗಿಸದ ಸ್ಥಿತಿಯಲ್ಲಿ ನಾವಿದ್ದೇವೆಂಬ ದಟ್ಟ ವಿಷಾದ ಜಿಎಸ್‌ಎಸ್ ಅವರ ಕಾವ್ಯ ಕಟ್ಟಿಕೊಡುವ ಉಳಿದ ಅನೇಕ ಅನುಭವಗಳ ನಡುವೆಯೂ ನಿರಂತರ ಕಾಡುತ್ತಲೇ ಇರುತ್ತದೆ.

ಸ್ವಾತಂತ್ರ್ಯೋತ್ತರ ಭಾರತದಲ್ಲಿ ಎಲ್ಲ ಕ್ಷೇತ್ರಗಳಲ್ಲಿಯೂ ಆವರಿಸಿಕೊಂಡ ಭ್ರಷ್ಟತೆ, ಸ್ವಜನಪಕ್ಷಪಾತ, ಸ್ವಾರ್ಥಪರತೆ—ಇವುಗಳನ್ನು ಕಂಡ ಕವಿ ಮನಸ್ಸು ಆಘಾತ ಕಂಡಿದೆ. ವೈಯಕ್ತಿಕ ಸಂಬಂಧಗಳು ಶಿಥಿಲಗೊಂಡಂತೆಯೇ ಸಾಮಾಜಿಕ ಬದುಕೂ ಅಸಹನೀಯವೆನಿಸಿದ ಸ್ಥಿತಿಯಲ್ಲಿ ನಮ್ಮನ್ನು ರಕ್ಷಿಸುವ ಜೀವದ್ರವ್ಯಗಳ ಬಗ್ಗೆ ಜಿಎಸ್‌ಎಸ್ ಆಸಕ್ತಿ ತಾಳುತ್ತಾರೆ.

ಕಂಡೆ ಎಂತೆಂಥವರು ಏನೇನೋ ಆದದ್ದ ಕಂಡೆ
ಗೊಮ್ಮಟನಾಗಿ ನಿಂತಿದ್ದ ಮಹಾಮೂರ್ತಿ
ಕರಗಿ ಕೊಚ್ಚೆಯಾಗಿ ಹರಿದದ್ದ ಕಂಡೆ

ಇಂದ್ರನೈರಾವತಕ್ಕೆ ತೊಣಚಿ ಹತ್ತಿ
ಬೀದಿನಾಯಾಗಿ ಬೂದಿಯಲ್ಲಿ ಹೊರಳಾಡಿದ್ದ ಕಂಡೆ
ನಿಗಿನಿಗಿ ಉರಿವ ಉಜ್ವಲವಾದ ಮಾತೆಲ್ಲ
ಬರೀ ಬೂದಿಯಾಗಿ ತೆಪ್ಪಗಾದದ್ದ ಕಂಡೆ

ಕಂಡು ಎಚ್ಚರಗೊಂಡೆ
ಎಚ್ಚರವೆಲ್ಲ ನಿಗಿನಿಗಿ ಉರಿವ ಕೆಂಡದ ಉಂಡೆ

ಇಂಥ ಕ್ರೂರ ಬದುಕಿನ ನಡುವೆಯೂ ಹತಾಶವಾಗದ, ನಮ್ಮ ಬಾಳನ್ನು ಹಸನುಗೊಳಿಸುವ ಬದುಕಿನ ಮೌಲ್ಯಗಳನ್ನು ಪ್ರತಿಪಾದಿಸುವ-ದೃಢಚೇತನವೊಂದನ್ನು ಜಿಎಸ್‌ಎಸ್ ಅವರ ಕಾವ್ಯದಲ್ಲಿ ನಾವು ಕಾಣುತ್ತೇವೆ. ಪ್ರಗತಿಪರ ಸೃಜನಶೀಲ ಮನಸ್ಸು ಎದುರಿಸುತ್ತಿರುವ ಬಿಕ್ಕಟ್ಟಿನ ಬಗ್ಗೆ ಜಿಎಸ್‌ಎಸ್ ಮತ್ತೆ ಮತ್ತೆ ಪ್ರಸ್ತಾಪಿಸುತ್ತಾರೆ.

ಮನೆಯಂಗಳದಲ್ಲಿ ಪುಟಿಯುತ್ತಿದ್ದ
ಕಾರಂಜಿಗಳ ಬಾಯಿಗೆ ಮಣ್ಣು ಮೆತ್ತಿಕೊಂಡು
ಒಳಗಿಂದ ನೀರು ಏರುವುದಿಲ್ಲ

ಇದು ಬದುಕು-ಕಾವ್ಯ ಎರಡಕ್ಕೂ ಸಂಬಂಧಪಟ್ಟ ಸ್ಥಿತಿ. ಈ ಸ್ಥಿತಿಯನ್ನು ಶಿವರುದ್ರಪ್ಪನವರ ಕಾವ್ಯ ಉದ್ದಕ್ಕೂ ಮುಖಾಮುಖಿಯಾಗುತ್ತ ಬಂದಿದೆ; ತೀವ್ರ ಚಡಪಡಿಕೆಯ ಇದರಿಂದೆಲ್ಲ ಅಸ್ವಸ್ಥಗೊಂಡ, ನೊಂದ, ನೋಯುತ್ತಲೇ ಅದನ್ನು ಎದುರಿಸಿ ನಿಲ್ಲುವ ಶಕ್ತಿ ಪಡೆವ ದನಿಯೊಂದು ತನ್ನ ಮಿತಿಗಳ ಅರಿವಿನಲ್ಲಿಯೇ ನಮ್ಮೊಡನೆ ಸಂವಾದಿಸುತ್ತದೆ.

ಬಡಬೇಡ ಚರಿತ್ರೆಯನ್ನು ಪುರಾಣವಾಗುವುದಕ್ಕೆ
ನಿನ್ನೆಲ್ಲವನ್ನೂ ಅರೆವ ಗಾಣವಾಗುವುದಕ್ಕೆ
ಇರಲಿ ತಕ್ಕಷ್ಟು ಅಸ್ವಸ್ಥತೆ
ನಿನ್ನ ಒಳ್ಳೆಯದಕ್ಕೆ
ನಡೆದುದೆಲ್ಲವ ಹಿಡಿದು
ಪ್ರಶ್ನೆ ಮಾಡುವುದಕ್ಕೆ
ಪ್ರಶ್ನೆ ಮಾಡುತ್ತಲೇ ಚರಿತ್ರೆಗೆ
ಚಲನೆ ನೀಡುವುದಕ್ಕೆ

**ಯಥಾಸ್ಥಿತಿಯ ಕದಲಿಸದೆ**
**ಸ್ವಸ್ಥವಾಗಿದ್ದಯೋ**
**ಆವರಿಸುತ್ತದೆ ನಿನ್ನನ್ನೂ**
**ಪುರಾಣದ ಪಾಚಿ**
**ಕೊಳಕು ನಾಲಗೆ ಚಾಚಿ**

ಬದುಕು, ಕಾವ್ಯ ಜಡವಾಗಲು ಬಿಡದೆ ಅದು ಚಲನಶೀಲವಾಗಿರುವಂತೆ, ಜೀವಂತವಾಗಿರುವಂತೆ ಎಚ್ಚರ ವಹಿಸಬೇಕೆನ್ನುವ ನಿಲವು—ಜಿಎಸ್‌ಎಸ್ ಅವರ ಕಾವ್ಯಕ್ಕೆ ಸಮಕಾಲೀನ ಸಮಸ್ಯೆಗಳ ಜೊತೆ ಜೊತೆಗೇ ಮಾನವ ಚರಿತ್ರೆಗೆ ಮುಖಾಮುಖಿಯಾಗುವ ವಿಸ್ತಾರವನ್ನು ಕಟ್ಟಿಸಿಕೊಟ್ಟಿದೆ; ಬಹುಮುಖೀ ಅನುಭವ ವಲಯಗಳಿಗೆ ಅವರ ಕಾವ್ಯ ಪ್ರವೇಶ ಪಡೆದುಕೊಳ್ಳುವುದು ಈ ನೆಲೆಯಲ್ಲಿಯೇ.

ಶಿವರುದ್ರಪ್ಪನವರದು ಮೂಲತಃ ಭಾವಗೀತಾತ್ಮಕ ಪ್ರತಿಭೆ. ಇಂಥ ಪ್ರತಿಭೆಯ ಮೂಲಸ್ವರೂಪದಲ್ಲಿಯೇ ಮಾಧುರ್ಯದ ಗುಣವಿರುತ್ತದೆ; ಸಹಿಷ್ಣುತೆಯ ಫಲವಾಗಿ ಮೂಡುವ ಪ್ರಸನ್ನ ಭಾವವಿರುತ್ತದೆ. ಜಿಎಸ್‌ಎಸ್ ಅವರ ಕಾವ್ಯದಲ್ಲಿ ಈ ಗುಣಗಳು ಸಹಜವಾಗಿಯೇ ಬೆರೆತುಹೋಗಿವೆ. ಆದರೆ ಸ್ವಾತಂತ್ರ್ಯೋತ್ತರ ಭಾರತದ 'ದುಸ್ವಪ್ನ'ಗಳನ್ನು ಅವರ ಕಾವ್ಯ ಮಾನವ ಚರಿತ್ರೆಯ ಹಿನ್ನೆಲೆಯಲ್ಲಿ ಹಿಡಿದಿಡಲು ನಡೆಸುವ ಪ್ರಯತ್ನ ಭಾವಸಂವಹನದ ನೆಲೆಯಲ್ಲಿ ನಮಗೆ ಪ್ರಿಯವಾಗುವಂತೆಯೇ, ಅನೇಕ ಬಗೆಯ ಸಂಘರ್ಷ ಸ್ಥಿತಿಯನ್ನು ನಿರ್ಮಿಸಿ ನಮ್ಮನ್ನು ತಲ್ಲಣಗೊಳಿಸುವ ಶಕ್ತಿಯನ್ನೂ ಪಡೆದಿದೆ. ಜಿಎಸ್‌ಎಸ್ ಅವರ ಕಾವ್ಯದಲ್ಲಿ ಕಾಣಿಸಿಕೊಳ್ಳುವ ಈ ತಲ್ಲಣಗಳ ಬಹುಮುಖೀ ಸ್ವರೂಪದ ಅಧ್ಯಯನ ಇಂದಿನ ಕನ್ನಡ ವಿಮರ್ಶೆಯ ಬಹುಮುಖ್ಯ ಅಗತ್ಯಗಳಲ್ಲೊಂದು. ಈ ಬಗೆಯ ಅಧ್ಯಯನ ಆಧುನಿಕ ಕಾವ್ಯ ಬೆಳವಣಿಗೆಯ ಸಮೀಪವನ್ನು ಈವರೆಗಿನ ಅಧ್ಯಯನದ ನೆಲೆಗಿಂತ ಭಿನ್ನ ನೆಲೆಯಲ್ಲಿ ಅರ್ಥಮಾಡಿಕೊಳ್ಳಲು ನಮಗೆ ನೆರವು ನೀಡುತ್ತದೆ.

■

# ಜಿಎಸ್‌ಎಸ್ ಕಾವ್ಯದ ಪ್ರಧಾನ ಆಶಯಗಳು

ಡಾ|| ಎಚ್. ಎಸ್. ವೆಂಕಟೇಶಮೂರ್ತಿ

**ಜಿ**ಎಸ್‌ಎಸ್ ಬಗೆಗೆ ಮಾತನಾಡುವಾಗ ಮತ್ತೆ ಮತ್ತೆ ಕೇಳಿಬರುವ ಪದವೆಂದರೆ 'ಮೇಷ್ಟ್ರು' ಅನ್ನುವುದು. ಜಿಸ್‌ಎಸ್ ಮೇಲೆ ಮೂವರು ಮೇಷ್ಟ್ರುಗಳ ಗಾಢ ಪ್ರಭಾವ ಆಗಿದೆ. ಮೊದಲನೆಯವರು ಕುವೆಂಪು. ಎರಡನೆಯವರು ತೀನಂಶ್ರೀ ಮತ್ತು ಕೊನೆಯದಾಗಿ ತ.ಸು. ಶಾಮರಾಯರು. ಈ ಮೂರೂ ವ್ಯಕ್ತಿತ್ವಗಳ ಪ್ರಭಾವ ಜಿಎಸ್‌ಎಸ್‌ರವರಲ್ಲಿ ಕಾಣುತ್ತದೆ. ಅವರ ಕಾವ್ಯವ್ಯಕ್ತಿತ್ವವನ್ನು ರೂಪಿಸುವಲ್ಲಿ ಕುವೆಂಪು ಪಾತ್ರ ಮಹತ್ವದ್ದಾದರೆ, ಅವರ ಶಿಷ್ಯಪ್ರೀತಿ ಶಾಮರಾಯರಿಂದ ದತ್ತವಾದುದು.

ಸಾಮಾನ್ಯವಾಗಿ ಸಂಘಟಕರಾಗಿ ಅವರು ಮಾಡಿದ ಕೆಲಸವನ್ನು ಗುರುತಿಸುವಾಗ ಅಧ್ಯಯನ ಕೇಂದ್ರವನ್ನೇ ಕೇಂದ್ರವನ್ನಾಗಿಸಿ ಮಾತನಾಡುವುದು ರೂಢಿಗೆ ಬಂದಿದೆ. ಜಿಎಸ್‌ಎಸ್ ಇಂದು ಕರ್ನಾಟಕದಾದ್ಯಂತ ಬೆಳೆಸಿದ ಶಿಷ್ಯರ ಸಂಖ್ಯೆ ಲೆಕ್ಕಕ್ಕೆ ಸಿಕ್ಕುವುದಿಲ್ಲ. ಅವರು ವಿದ್ಯಾರ್ಥಿಗಳನ್ನು ಶಾಮರಾವ್‌ರ ಮಾದರಿಯಲ್ಲಿ ಬೆಳೆಸಿದವರು. ಹಾಗೆಯೇ ತೀನಂಶ್ರೀಯವರು ಅವರ ವಿಮರ್ಶಾತ್ಮಕ ವ್ಯಕ್ತಿತ್ವವನ್ನು, ಕಾವ್ಯಮೀಮಾಂಸಕ ವ್ಯಕ್ತಿತ್ವವನ್ನು ರೂಪಿಸಿದವರು. ಹೀಗೆ ಮೂವರು ಮೇಷ್ಟ್ರುಗಳು ಮುಪ್ಪುರಿಗೊಂಡು ಈ 'ಮೇಷ್ಟ್ರು' ರೂಪುಗೊಂಡರು.

ಜಿಎಸ್‌ಎಸ್ ಬಗ್ಗೆ ಪ್ರಸ್ತಾಪಿತವಾಗುವ ಅನೇಕ ಮುಖ್ಯ ಅಂಶಗಳಲ್ಲಿ ನನಗೆ ಅತ್ಯಂತ ಇಷ್ಟವಾದುದು ಬಸವಣ್ಣನವರೊಂದಿಗೆ ಜಿಎಸ್‌ಎಸ್‌ರವರನ್ನು ಸಮೀಕರಿಸಿ ಮಾತನಾಡುವುದು. ಒಂದು ವಿಚಾರ ನನ್ನನ್ನು ಕಾಡುತ್ತದೆ. ಸಾಂಸ್ಕೃತಿಕವಾಗಿ ಗಟ್ಟಿಯಾಗಿ ಕಾಣುವ ಅನೇಕ ವ್ಯಕ್ತಿಗಳು ಲೇಖಕರಾದಾಗ ಏಕಾಂಗಿಯಾಗಿ, ವಿಷಾದದಿಂದ ಮಾತನಾಡುವುದು ಏಕೆ? ಬಸವಣ್ಣನವರ ವಚನಗಳಲ್ಲಿ ಕೂಡಾ ಇದನ್ನು ಗಮನಿಸುತ್ತೇವೆ. ಅವರು ವಚನಕ್ರಾಂತಿಯನ್ನೇ ಮಾಡಿದರು. ಇಡೀ ಸಮಾಜವನ್ನೇ ಬದಲಾಯಿಸಹೊರಟ ಅಂಥ ಧೀರೋದಾತ್ತ ವ್ಯಕ್ತಿಯ ವಚನಗಳಲ್ಲಿ ಹತಾಶೆಯ, ನಿರಾಸೆಯ, ವಿಷಾದದ ಸೆಲೆ ಕಾಣುತ್ತದೆ. ಅಂದರೆ ಇಲ್ಲಿಯ ಪ್ರಶ್ನೆ ಸಾಂಸ್ಕೃತಿಕವಾಗಿ ಗಟ್ಟಿಯಾದ ವ್ಯಕ್ತಿ ಏಕಾಂತದಲ್ಲಿ ಏಕಾಂಗಿಯಾಗಿರ್ತಾನಾ? ಒಬ್ಬ ಮುಖಂಡ ಅಂತರ್ಯದಲ್ಲಿ ಒಂಟಿಯಾಗಿರ್ತಾನಾ? ಈ ಪ್ರಶ್ನೆ ಮತ್ತೆ ಮತ್ತೆ ನನ್ನನ್ನೂ ಕಾಡಿದೆ. ಕುವೆಂಪು ಆ ರೀತಿಯಲ್ಲಿ ಸಾಂಸ್ಕೃತಿಕವಾಗಿ, ರಾಜಕೀಯವಾಗಿ ಚಳವಳಿ ಕಟ್ಟಿದವರಲ್ಲ.

ಬೆಳೆಸಿದವರಲ್ಲ. ಆದರೆ ಅವರ ಕಾವ್ಯದ ಆಂತರ್ಯದಲ್ಲಿ ಧೀರೋದಾತ್ತವಾದ ಧೈರ್ಯ ಮತ್ತು ಆತ್ಮವಿಶ್ವಾಸ ಅಪ್ರತಿಮವಾದುದು.

ಜಿಎಸ್‌ಎಸ್‌ರವರು ಈ ನಾಲ್ಕು ದಶಕಗಳಿಂದ ನಿರಂತರವಾಗಿ ಕಾವ್ಯರಚನೆ ಮಾಡುತ್ತ ಬಂದ ಕವಿ. ಹಾಡುವುದು ನನ್ನ ಅನಿವಾರ್ಯ ಕರ್ಮ ಎಂದವರು. ಕನ್ನಡದ ಜನತೆ ಅವರ ಹಾಡನ್ನು ಪ್ರೀತಿಯಿಂದ ಕೇಳುತ್ತಾ ಬಂದಿದ್ದಾರೆ. ಅವರ ಕವನಸಂಗ್ರಹಗಳು ಅನೇಕ ಮರುಮುದ್ರಣಗಳನ್ನು ಕಂಡಿರುವುದೇ ಅವರ ಜನಪ್ರಿಯತೆಗೆ ಸಾಕ್ಷಿ. ಜಿಎಸ್‌ಎಸ್‌ರವರ ಸಮಗ್ರಕಾವ್ಯದ ಮೂರು ಆವೃತ್ತಿಗಳು ಬಂದಿವೆ. ವಿಮರ್ಶಕರು ಏನೇ ಹೇಳುತ್ತಿದ್ದರೂ ಕೂಡಾ ಜನ ಯಾವುದನ್ನೋ ತಮ್ಮದನ್ನಾಗಿ ಮಾಡಿಕೊಳ್ತಾನೇ ಇರ್ತಾರೆ. ಕೆಎಸ್‌ನರವರ ಮೈಸೂರು ಮಲ್ಲಿಗೆಯು 18 ಆವೃತ್ತಿಗಳು ಬಂದಿವೆ. ಮೈಸೂರು ಮಲ್ಲಿಗೆಯನ್ನು ಕುರಿತು ನಾವೆಷ್ಟೇ ವಿಮರ್ಶಾತ್ಮಕವಾಗಿ ಮಾತನಾಡಿದರೂ ಕೂಡಾ, ಇಂತಹ ಜನಪ್ರೀತಿ ನಮ್ಮಲ್ಲಿ ಬೈಗುಳದ ಮಾತೇಕೆ ಆಗಬೇಕೆನ್ನುವುದು ಇಂದಿಗೂ ಸಮಸ್ಯೆ. ಜಿಎಸ್‌ಎಸ್ ಕೂಡಾ ಅಂತಹ ಜನತೆಯ ಪ್ರೀತಿಯ ಕವಿ. ಅವರ ಕಾವ್ಯದ ಸುಭಗತೆ, ಸಂವೇದನಾಶೀಲತೆ, ಅಂದಂದಿನ ಅನುಭವಕ್ಕೆ ಪ್ರಾಮಾಣಿಕ ಅಭಿವ್ಯಕ್ತಿ ಕೊಡುವ ತುಡಿತ ಇವು ಅವರ ಜನಪ್ರಿಯತೆಯ ಒಳಗುಟ್ಟುಗಳು. ವ್ಯಷ್ಟಿ ಮತ್ತು ಸಮಷ್ಟಿಯ ಅನ್ಯೋನ್ಯತೆಯನ್ನು ಸದಾ ಹಾರೈಸುವ ಜಿಎಸ್‌ಎಸ್ ಕಾವ್ಯ ಜನತೆಗೆ ಪ್ರಿಯವಾದ ಕಾವ್ಯವಾದದ್ದರಲ್ಲಿ ಆಶ್ಚರ್ಯವಿಲ್ಲ. ಯಾವ ಕಾವ್ಯ, ಸಮುದಾಯವನ್ನು ಗೌರವಿಸುತ್ತದೋ ಅಂತಹುದನ್ನು ಸಮುದಾಯವೂ ಪ್ರೀತಿಯಿಂದ ಒಪ್ಪಿಕೊಳ್ಳುತ್ತದೆ. ವಾಸ್ತವದ ಕಠೋರತೆಯ ಮಧ್ಯೆಯೂ ಒಂದು ಆಸೆಯ ಹಂಬಲ ಜನತೆಗೆ ಬೇಕಾಗಿತ್ತು. ಅದನ್ನು ಜಿಎಸ್‌ಎಸ್ ಕಾವ್ಯ ಅವರಿಗೆ ಒದಗಿಸಿತು.

ಜಿಎಸ್‌ಎಸ್ ಕಾವ್ಯರಚನೆ ಪ್ರಾರಂಭಿಸಿದ ಸಂದರ್ಭ ಒಂದು ಸಂಧಿಕಾಲ. 1951ರಲ್ಲಿ ಅವರ 'ಸಾಮಗಾನ' ಬಂದದ್ದು. ದೇಶದ ಹಿತದಲ್ಲಿ ಹುರಿಗಟ್ಟಿಕೊಂಡು, ಮಿಂಚಿನ ಚಾಟಿ ಆಡಿಸಿದ್ದ ಸಮಾಜ, ಎಳೆಬಿಡಿಸಿಕೊಂಡು ಸ್ವಹಿತದ ಕಡೆ ಹೊರಳಿಕೊಳ್ಳುತ್ತಿದ್ದ ಸಂಧಿಸಮಯ. ಇಡೀ ಇಂಡಿಯಾ ಒಂದು ಎನ್ನುವಂತಿದ್ದದ್ದು, ಸ್ವಾತಂತ್ರ್ಯ ಬಂದಮೇಲೆ ಎಲ್ಲರೂ ಬೇರೆ ಬೇರೆ ಅನ್ನುವ ಹಾಗೆ ಆಯಿತು. ಆದ್ದರಿಂದ ಇಂಡಿಯಾದ ಉತ್ಸಾಹದ ಭೂಮಿಕೆಯ ಮನಸ್ಸು ವಿಷಾದದ ಭೂಮಿಕೆಗೆ ಅನಿವಾರ್ಯವಾಗಿ ಜರುಗತೊಡಗಿತು.

ಸಾಹಿತ್ಯದಲ್ಲಿ ಈ ಸಂವೇದನೆಯ ಗುರುತು ಸ್ಪಷ್ಟವಾಗಿ ಕಾಣಿಸತೊಡಗಿತು. ನವೋದಯದ ಉತ್ಸಾಹಪರ್ವ ಮುಗಿದು ನವ್ಯದ ವಿಷಾದಪರ್ವ, ಅಶಾಂತಿಪರ್ವ ಪ್ರಾರಂಭವಾದ ಸಮಯ. ಅದೇ ಹೊತ್ತಿನಲ್ಲಿ ಭೌತಿಕವಾಗಿ ಹಡಗುಹತ್ತಿದ ವಸಾಹತುಶಾಹಿ ನಿರ್ದೇಹಿಯಾಗಿ ಇಂಡಿಯಾವನ್ನು ಹಿಡಿದು ಕಾಡತೊಡಗಿದ ಸಂಧಿ ಸಮಯ ಅದು. ಒಂದೇ ಒಂದು ಉದಾಹರಣೆಯಿಂದ ಇದನ್ನು ಸೂಚಿಸಿ ಮುಂದೆ ಹೋಗುತ್ತೇನೆ. ಸ್ವಾತಂತ್ರ್ಯಪೂರ್ವದಲ್ಲಿ ರಾಷ್ಟ್ರೀಯ ಶಾಲೆಗಳನ್ನು ಪ್ರಾರಂಭಿಸುವ ವಿದ್ಯಮಾನ ಒಂದು ಚಳುವಳಿಯಂತೆ ಭಾರತದ ಮೂಲೆ ಮೂಲೆಯಲ್ಲಿ ನಡೆಯಿತು. ಸ್ವಾತಂತ್ರ್ಯೋತ್ತರ

ಭಾರತದಲ್ಲಿ ಈ ರಾಷ್ಟ್ರೀಯ ಶಾಲೆಗಳು ಅರಾಷ್ಟ್ರೀಯ ಶಾಲೆಗಳಾಗಿ ಪರಿವರ್ತಿತವಾಗಿರುವುದೇ ಮುಖ್ಯ ವಿದ್ಯಮಾನ. ಹಳ್ಳಿಹಳ್ಳಿಗಳಲ್ಲಿ ಈಗ convent ಚಳುವಳಿ. ಜಿಎಸ್‌ಎಸ್ ಕಾವ್ಯಕ್ರಿಯೆಗೆ ತೊಡಗಿದ್ದು ಇಂತಹ ಸಂದರ್ಭದಲ್ಲಿ. ಆದ್ದರಿಂದಲೇ ಅಡಿಗರಂತೆ, ವಿಷಾದ ಮತ್ತು ವಿಡಂಬನೆ ಅವರ ಕಾವ್ಯದಲ್ಲೂ ಪ್ರಧಾನ ಅಂಶವಾಗಿದೆ. ಮುಖ್ಯ ವ್ಯತ್ಯಾಸವೆಂದರೆ ಇಂತಹ ವಿಷಮಕಾಲದಲ್ಲಿಯೂ ಜಿಎಸ್‌ಎಸ್ ತಮ್ಮ ಕತ್ತಲ ಯಾನವನ್ನು, ನವೋದಯದ ಹಿರಿಯರಿಂದ ಪಡೆದಿದ್ದ ಆದರ್ಶ ಮತ್ತು ಕನಸುಗಾರಿಕೆಯ ದೊಂದಿ ಹಿಡಿದು ಮುಂದು ವರಿಸಿದರು. ಆದರೆ ಸ್ವಾತಂತ್ರ್ಯೋತ್ತರದ ಎಲ್ಲ ಕವಿಗಳಂತೆ ಜಿಎಸ್‌ಎಸ್‌ರವರದ್ದೂ ವ್ಯಷ್ಟಿಯ ದನಿ, ವೈಯಕ್ತಿಕ ವ್ಯಕ್ತಿಯ ದನಿ. ನವೋದಯದಂತೆ ಸಮಷ್ಟಿಯ ದನಿಯಾಗುವ ಭಾಗ್ಯವನ್ನು ಕಳೆದುಕೊಂಡವರು ನಾವು. ಇದು ಪ್ರವಾಹದ ವಿರುದ್ಧ ಈಜುವ ಸಾಹಸ. ತೀವ್ರವಾದ ವಾಸ್ತವಿಕ ಅರಿವು ಮತ್ತು ಕನಸುಕಾಣುವ ಹುಚ್ಚು ಎರಡೂ ಏಕತ್ರ ಮುಖಾಮುಖಿಯಾಗುವ ವಿಶಿಷ್ಟ ಮನಃಸ್ಥಿತಿಯಲ್ಲಿ ಕಾವ್ಯರಚಿಸುತ್ತ ಜಿಎಸ್‌ಎಸ್ ನವೋದಯ ದಿಂದ ಮಾತ್ರವಲ್ಲ, ನವ್ಯದಿಂದಲೂ ತಮ್ಮನ್ನು ಪ್ರತ್ಯೇಕಿಸಿಕೊಂಡರು. ಅವರು ನವೋದಯ ದಿಂದಲೂ ಭಿನ್ನರಾಗಿದ್ದರು. ಹಾಗೇ ನವ್ಯದಿಂದಲೂ ಭಿನ್ನರಾಗಿದ್ದು ಒಂದು ವೈಯಕ್ತಿಕ ದನಿಯನ್ನು ಎತ್ತಲಿಕ್ಕೆ ಜಿಎಸ್‌ಎಸ್‌ರವರಾಗಲೀ ಕಣವಿಯವರಾಗಲೀ ಪ್ರಯತ್ನಿಸಿದರು. ಇದು ಇಡೀ ಅವರ ಕಾವ್ಯದ ಚರಿತ್ರೆ ಮತ್ತು ಸ್ವರೂಪವನ್ನು ಹೇಳುತ್ತದೆ.

ಜಿಎಸ್‌ಎಸ್ ಅವರದ್ದು ಪ್ರಧಾನವಾಗಿ ಇಹನಿಷ್ಠ ಮನೋಧರ್ಮ. ನೆಲವೇ ನನ್ನ ವಾಹನ ಎನ್ನುವ ಕಾವ್ಯ ಅವರದ್ದು. ಆಕಾಶಯಾನಕ್ಕೆ ಅವರ ಕಾವ್ಯ ವಿಮುಖವಾಗಿದೆ. ಇದಕ್ಕೆ ಸಾಕಷ್ಟು ಉದಾಹರಣೆಗಳಿವೆ. ದೊಡ್ಡ ದೊಡ್ಡ ಮಾತನಾಡುತ್ತ ದಿನದಿನದ ಸರಳ ಸಾಧಾರಣ ಬದುಕಿಗೆ ಅವಮಾನ ಮಾಡುವವರನ್ನು ಕಂಡರೆ ಅವರಿಗೆ ಆಗುವುದಿಲ್ಲ. ಈ ನೆಲೆಯಲ್ಲಿ ನಿಜಕ್ಕೂ ಅವರು ಸಾಧಾರಣತೆಯ ಆರಾಧಕರು. ಪ್ರಜಾಪ್ರಭುತ್ವಕ್ಕೆ ಕಡೆದು ಮಾಡಿಸಿದ ಮನಃಸ್ಥಿತಿ ಇದು. ವ್ಯಕ್ತಿ ಒಬ್ಬನೇ ಆದಾಗ ಸಿನಿಕನಾಗಬೇಕು ಅಥವಾ ವಿನಯಶಾಲಿ ಆಗಬೇಕು. ಜಿಎಸ್‌ಎಸ್ ಕಾವ್ಯವ್ಯಕ್ತಿತ್ವ ಹೀಗೆ ವಿನಯದಲ್ಲಿ ರೂಪಿಸಿಕೊಂಡ ಕಾವ್ಯ ವ್ಯಕ್ತಿತ್ವ.

ಹೇಗೋ ನನ್ನ ಪಾಡಿಗೆ ನಾನು ಬದುಕುತ್ತೇನೆ
ಇದ್ದಷ್ಟು ನೆಲವ ಉತ್ತಿಬಿತ್ತಿ ನೀರೆರೆದು
ಮಲಗಿರುವ ಬೀಜಗಳ ಕಣ್ಣು ತೆರೆಸುತ್ತೇನೆ.

ನಾಳೆ ಈ ಸಸಿಗಳೆಲ್ಲ ವಟವೃಕ್ಷಗಳಾಗಿ
ಸಾವಿರ ಜನಕ್ಕೆ ನೆರಳಾಗಲೆಂಬ
ಮಹದಾಸೆ ಇರದಿದ್ದರೂ
ಒಂದೆರಡಾದರೂ ಬೀಜವಾಗುವ
ಹಣ್ಣು ಬಿಟ್ಟಾವೆಂದು ಕಾಯುತ್ತೇನೆ.

ಹೀಗೆ ಉತ್ತು ಬಿತ್ತಿ ಮಲಗಿರುವ ಬೀಜದ ಕಣ್ಣು ತೆರೆಸುವ ಕಾರ್ಯವನ್ನು ಜಿಎಸ್ಎಸ್ ತಮ್ಮ ಕಾವ್ಯದಲ್ಲೂ ಬದುಕಿನಲ್ಲೂ ಮಾಡಿಕೊಂಡು ಬಂದಿದ್ದಾರೆ. ನಾಶದ ಪ್ರಜ್ಞೆ ಅವರನ್ನು ತೀವ್ರವಾಗಿ ಕಾಡಿದೆ ನಿಜ. ಆದರೆ ನಾಶ ಅನಿವಾರ್ಯ ಎಂಬ ದಾರುಣ ಅರಿವಿನಲ್ಲಿ ಸೃಷ್ಟಿಶೀಲವಾಗಿರುವ ಮನಸ್ಸು ಅವರದ್ದು. ಈ ನಾಶವನ್ನು ಎದುರಿಸುವ ಏಕೈಕ ಉಪಾಯ ಸೃಷ್ಟಿಕ್ರಿಯೆ ಎಂದವರು ನಂಬಿದ್ದಾರೆ. ಈ ದೃಷ್ಟಿಯಿಂದ 'ಅಸ್ತಮಾನ' ಕವನ ತುಂಬಾ ಅರ್ಥಪೂರ್ಣವಾದುದು. ಅಸಾಮಾನ್ಯ ಪುರುಷನಾದ ಕೃಷ್ಣನ ಸಾವನ್ನು ಆ ಕವಿತೆ ಹೇಳುತ್ತಿದೆ. ಆ ಯುಗಪುರುಷನ ದಾರುಣ ಸಾವಿನ ಪರಿಣಾಮ ಭೂಮಿ-ವ್ಯೋಮಗಳನ್ನು ವ್ಯಾಪಿಸುವಂಥದ್ದು. ಅಂತಹ ವಿಷಾದದ ಭೂಮಿಕೆಯಲ್ಲೂ ಒಂದು ಆಸೆಯ ಬೀಜವನ್ನು ಬಿತ್ತುವುದನ್ನು ಅವರ ಕವಿತೆ ಮರೆಯುವುದಿಲ್ಲ.

ಜಿಎಸ್ಎಸ್‌ರವರು ಜೀವನವನ್ನು ಮಾತ್ರವಲ್ಲ. ಪ್ರಕೃತಿಯನ್ನೂ ಈ ಸೃಷ್ಟಿಶೀಲತೆಯ ಆಡಂಬೊಲವಾಗಿಯೇ ಪ್ರೀತಿಸುತ್ತಾರೆ. ಕುವೆಂಪು ಬೇಂದ್ರೆ ಮೊದಲಾದ ಹಿರೀಕರು ಪ್ರಕೃತಿಯನ್ನು ನೋಡುವ ಕ್ರಮಕ್ಕೂ ಜಿಎಸ್ಎಸ್ ಪ್ರಕೃತಿಯನ್ನು ನೋಡುವ ಕ್ರಮಕ್ಕೂ ವ್ಯತ್ಯಾಸವಿದೆ. ಪ್ರಕೃತಿ ಜಿಎಸ್ಎಸ್ ರವರಲ್ಲಿ ಆಧ್ಯಾತ್ಮಿಕ ತುಡಿತವನ್ನೂ, ಭಕ್ತಿಭಾವವನ್ನೂ, ಚಿಂತನಶೀಲತೆಯನ್ನೂ ಕೆರಳಿಸುವುದಿಲ್ಲ. ಪ್ರಕೃತಿಸೌಂದರ್ಯ ಸೃಷ್ಟಿಶೀಲತೆಯ ಕಾರಣದಿಂದ ಅವರಿಗೆ ಪ್ರಿಯವಾಗುತ್ತದೆಯೇ ಹೊರತಾಗಿ ಆಧ್ಯಾತ್ಮಿಕಭಾವಕ್ಕೆ ಅವರನ್ನು ಎಳೆದೊಯ್ಯುವುದಿಲ್ಲ. 'ಬಿತ್ತು' ಮತ್ತು 'ಬಿತ್ತುವಿಕೆ' ಜಿಎಸ್ಎಸ್ ಕಾವ್ಯದ ಪ್ರಧಾನ ಕಾಳಜಿಗಳಲ್ಲೊಂದು. ಮರುಭೂಮಿಯನ್ನು ಫಲವತ್ತಾಗಿಸುವ ಏಕಮೇವ ಉಪಾಯ ಅದು ಎಂದು ಅವರು ನಂಬಿದ್ದಾರೆ. ಪ್ರಕೃತಿ ಮತ್ತು ಮನುಷ್ಯನ ಅಂತರಂಗ ಈ ಎರಡೂ ಭೂಮಿಕೆಯಲ್ಲಿ ಬಂಜರನ್ನು ಹಸಿರುಗೊಳಿಸುವ ಯತ್ನ ನಡೆಯಬೇಕಾಗಿದೆ. ಈ ಸೃಷ್ಟಿಶೀಲತೆಗೆ ಪ್ರೀತಿ ಒಂದೇ ಮಾರ್ಗ ಎಂದು ನಂಬಿದ್ದಾರೆ.

ಪ್ರೀತಿ ಇಲ್ಲದ ಮೇಲೆ
ಸಂಶಯದ ಗಡಿಗಳುದ್ದಕ್ಕು
ಸಿಡಿಗುಂಡುಗಳ ಕದನ ನಿಂತೀತು ಹೇಗೆ?
ಜಾತಿ-ಮತ-ಭಾಷೆ-ಬಣ್ಣಗಳ ಗೋಡೆಯ ನಡುವೆ
ನರಳುವ ಪಾಡು ತಪ್ಪೀತು ಹೇಗೆ?
ನಮ್ಮ ನಿಮ್ಮ ಮನಸ್ಸು
ಮರುಭೂಮಿಯಾಗದ ಹಾಗೆ
ತಡೆಗಟ್ಟುವುದು ಹೇಗೆ?

ಜಿಎಸ್ಎಸ್‌ರವರ ಈ ಪ್ರೀತಿಯ ಕಲ್ಪನೆ ವಿಶ್ವವಿಶಾಲ. ಮನುಷ್ಯ ಮನುಷ್ಯರ ನಡುವಿನ ಗೋಡೆಗಳೆಲ್ಲ ಬಿದ್ದು ಅವರು ಒಂದಾಗುವ ದಿನವನ್ನು ಅವರ ಕಾವ್ಯ ಹಂಬಲಿಸುತ್ತದೆ. ಇದು ವ್ಯಷ್ಟಿ ಕಾಣುವ ಸಮಷ್ಟಿಯ ಕನಸು. ಆ ಕನಸು ಬಹಳ ಆರ್ತವಾಗಿದೆ, ದೀನವಾಗಿದೆ.

ಆದರೂ ಉರಿಯದ ಹಣವನ್ನು ಉರಿಯುವ ಹಣವನ್ನಾಗಿಸುವ ಪ್ರಯತ್ನವನ್ನು ಬಿಟ್ಟುಕೊಟ್ಟಿಲ್ಲ. ಆಧುನಿಕ ಸಮಾಜದ ಅಬ್ಬರದ ನಡುವೆ, ಒಂದು ಹೃದಯವಿದ್ರಾವಕವಾದ ಕ್ಷೀಣದನಿ, ಸಾಮಾನ್ಯವಾಗಿ ಎಲ್ಲ ಕವಿಗಳಿಗೆ ಕೇಳಿಸುವಂತೆ ಜಿಎಸ್‌ಎಸ್‌ರವರಿಗೂ ಕೇಳಿಸುತ್ತಲೇ ಇದೆ. ಅದು ಪುತಿನರಿಗೆ ಕೇಳಿಸುವ ಕೊಳಲದನಿಯಲ್ಲ, ಬೇಂದ್ರೆಯವರಿಗೆ ಜೋಗಿ ಪದ್ಯದಲ್ಲಿ ಕೇಳಿಸುವ ಕೋಗಿಲೆಯ ಕೂಗೂ ಅಲ್ಲ. ಅಡಿಗರಿಗೆ ಕೇಳುವ ಮೋಹನಮುರಳಿಯೂ ಅಲ್ಲ. ಜಿಎಸ್‌ಎಸ್‌ರವರನ್ನು ಕಾಡುತ್ತಿರುವ ಧ್ವನಿ ಯಾವುದೆಂದರೆ 'ಎಲ್ಲೋ ಮಗು ಅಳುತ್ತಿರುವ ಹೃದಯ ಹಿಂಡುವ ನೀಳದನಿ.'

**ಮಗು ಅಳುತಾ ಇದೆ ಎಲ್ಲೋ**
**ಒಂದೇ ಸಮನೆ-**
**ಶತಶತಮಾನದ ಬೆವರಿನ ತೆನೆಗಳ**
**ನೆತ್ತಿದ ಹೊಲ-ಗದ್ದೆಗಳಲ್ಲಿ**
**ಕವಿ-ವಿಜ್ಞಾನಿಯ-ಕ್ರಾಂತಿಕಾರಿಗಳ**
**ಸಾಧನೆ-ಅನ್ವೇಷಣೆಗಳ ಹಾದಿಯಲಿ**
**ಬಿರುಗಣ್ಣುರಿಯಲಿ ಕಮರುವ ಕನಸಿನ**
**ಚಿತೆಯ ಜ್ವಾಲೆಗಳ ಧೂಮದಲಿ**
**ಚರಿತ್ರೆಯುದ್ದಕು ಕೆನೆವ ಕುದುರೆಗಳ**
**ರಥ ಚಕ್ರದ ಕೆಂಧೂಳಿಯಲಿ**
**ಎಲ್ಲೋ ಮಗು ಅಳುತಾ ಇದೆ**
**ಒಂದೇ ಸಮನೆ.**

ಅನಾಥವಾದ ಮಾನವತೆಯ ಈ ಆರ್ತದನಿ ಜಿಎಸ್‌ಎಸ್ ಕಾವ್ಯದುದ್ದಕ್ಕೂ ಇರುವ ಅಖಂಡ ಶೃತಿ. ಆಳದಲ್ಲಿ ಅವರಿಗೆ ಮಗುವಿನ ಅಳುವೇ ಪ್ರಧಾನವಾಗಿ ಕೇಳಿಸುತ್ತಾ ಇದೆ. ಇದು ಮಾನವತೆಯ ದೀನ ಅಳು. ಮನುಷ್ಯ ಹೀಗಾದನಲ್ಲ ಅನ್ನುವ ನೋವು ದುಃಖ, ವಿಷಾದ. ಅದನ್ನು ಸರಿಪಡಿಸಲಾಗದ ಕೈಮೀರಿದ ಸ್ಥಿತಿ. ಈ ನೆಲೆಯಲ್ಲಿನ ಜಿಎಸ್‌ಎಸ್ ಕಾವ್ಯ ಪ್ರಮುಖವಾದುದು.

■

# ಜಿಎಸ್‌ಎಸ್ ಕಾವ್ಯವಿಕಾಸ

ಡಾ|| ತಾಳ್ತಜೆ ವಸಂತಕುಮಾರ

ಪಥ ಬದಲಾವಣೆಯೆನ್ನುವುದು ಸೃಷ್ಟಿಗೆ ತುಂಬ ಪ್ರಿಯವಾದ ಒಗ್ಗಿಹೋದ ಕ್ರಿಯೆಯೇ ಆಗಿದೆ. ನಿಸರ್ಗದ ವ್ಯಾಪಾರಗಳಿರಲಿ, ಋತುಗಳ ಆವರ್ತನವಿರಲಿ. ಬೇರುಗಳಿಂದ ಸತ್ವವನ್ನು ಹೀರಿ, ಚಿಗುರೊಡೆಸಿಕೊಂಡು ಕಾಯಾಗಿ, ಹಣ್ಣಾಗಿ ಮತ್ತೆ ಮೂಲಕ್ಕೆ ಮರಳುವ ಜೈವಿಕ ಕ್ರಮವಿರಲಿ ಎಲ್ಲವೂ ಪರಿವರ್ತನಶೀಲತೆಯನ್ನೇ ಆರಿಸಿಕೊಳ್ಳುತ್ತವೆ. ಇಲ್ಲಿರುವ ಸೂಕ್ಷ್ಮವೊಂದನ್ನೂ ಗಮನಿಸಬೇಕು. ಈ ಸಂಚಲನೆ ಪೂರ್ವ ನಿರ್ಧಾರಿತ ಗತಿಯನ್ನು ಅವಲಂಬಿಸುವ ನಿಯಮಕ್ಕೆ ಅಧೀನವಾಗಿರುತ್ತದೆಯೇ ಹೊರತಾಗಿ, ಸ್ವತಂತ್ರವಾದ, ಹೊಸತಾದ ಅಗೆತಗಳಿಗೆ ಹೊರಡಲಾರದು. ಆದರೆ, ಪ್ರತಿಭಾಶೋಧಗಳಲ್ಲಿ ಸದಾ ಉತ್ಸುಕತೆಯಿರುವ ಮನುಷ್ಯ ಪ್ರವೃತ್ತಿಯು ಪ್ರಕೃತಿಯ ಒಳರಚನೆಯಲ್ಲಿರುವ ಈ ಮಿತಿಯನ್ನು ಮೀರುವ ಕಾರ್ಯಗಳಲ್ಲಿ ತೊಡಗುತ್ತದೆ. ನಾಗರಿಕತೆಯು ನಡೆದು ಬಂದ ದಾರಿಯತ್ತ ದೃಷ್ಟಿಯನ್ನು ಹೊರಳಿಸಿದಾಗ ಈ ಅಂಶವು ಸ್ಪಷ್ಟ ನೆಲೆಯನ್ನು ಪಡೆಯುತ್ತದೆ.

ಇಲ್ಲಿ ಎರಡು ಸಂಗತಿಗಳು ಪ್ರಧಾನವಾಗುತ್ತವೆ. ಒಂದು ಸಂವಿಧಾನಾತ್ಮಕವಾದ ಮಾಧ್ಯಮದ ಸೀಮೆಗಳು, ಎರಡನೆಯದು ಅನ್ವೇಷಣಾಕಾಂಕ್ಷೆಯಿಂದ ಪ್ರೇರಣೆ ಪಡೆಯುವ ಬೇರೆ ಬೇರೆ ಜಾಡುಗಳ ಹುಡುಕಾಟಗಳು. ತೀರಾ ಸರಳವಾದ ಉದಾಹರಣೆಯನ್ನು ಮುಂದಿಡುವುದಾದರೆ, ನೆಲದ ವಿಸ್ತಾರವನ್ನು ಅಳೆಯಲು ಕೇವಲ ತನ್ನ ಪಾದಗಳ ಶಕ್ತಿ ಸಾಕಾಗಲಾರದೆಂದು ತಿಳಿದ ಕ್ಷಣವೇ ಮಾನವನು ಅನ್ಯಾನ್ಯ ಸಂಚಾರ ಮಾಧ್ಯಮಗಳ ಸಾಧ್ಯತೆಗಳನ್ನು ಪರಿಶೀಲಿಸಲು ಹೊರಟಿದ್ದಾನೆ. ಮೌಖಿಕ ಸಂಪ್ರದಾಯದ ದುರ್ಬಲ ಸ್ಥಾನಗಳನ್ನು ಗುರುತಿಸಿಕೊಂಡೊಡನೆಯೇ ವಿಶಿಷ್ಟವಾದ ಸಂಗೋಪನ ಸಾಧನಗಳ ಬಳಕೆಯನ್ನು ಅಳವಡಿಸಿಕೊಂಡಿದ್ದಾನೆ. ಈ ಮೂಲಭೂತವಾದ ಪ್ರವೃತ್ತಿಯೇ ಪ್ರತಿಯೊಂದರಲ್ಲೂ ಹೊಸತನ, ಹೊಸತನವನ್ನು ಸೃಷ್ಟಿಸುವ, ಅಸ್ಪಷ್ಟವಾದ, ಅಮೂರ್ತವಾದ ಕಲ್ಪನೆಗಳನ್ನು ಸ್ಥಿರಗೊಳಿಸುವ, ಪುಷ್ಟಗೊಳಿಸುವ ಪ್ರಕ್ರಿಯೆಯ ಉಗಮಸ್ಥಾನವೆನ್ನಬೇಕು. ಈ ತೆಳುಪ್ರಮಾಣದ ಅನಿಸಿಕೆಯು ತನ್ನ ಪಾತ್ರವನ್ನು ಹಿಗ್ಗಿಸಿಕೊಳ್ಳುತ್ತ, ಹತ್ತು ಹಲವು ಸಾಂಸ್ಕೃತಿಕ ದಾರಂದಗಳನ್ನು, ಸೃಜನಮುಖಿಗಳಾದ ತಡಸಲುಗಳನ್ನು, ಪ್ರಯೋಗೋನ್ಮುಖಿಗಳಾದ ಜಲಸಂಧಿಗಳನ್ನು

ನಿರ್ಮಿಸುತ್ತ ನಡೆದಿದೆ. ಇದು ಇತಿಹಾಸ ಮನ್ನಿಸಿದ ಸತ್ಯವೇ ಆಗಿದೆ. ಸಂಸ್ಕೃತಿಯ ಮುಖ್ಯ ಪ್ರವಾಹಗಳಲ್ಲಿ ಒಂದಾಗಿರುವ ಸಾಹಿತ್ಯವೂ ಈ ಮಾತಿಗೆ ಹೊರತಾಗಿಲ್ಲ.

ಸಾಹಿತ್ಯದ ಬೆಂಬಲಕ್ಕೆ ನಿಲ್ಲುವ ಹಲವು ಪರಿಕರಗಳಲ್ಲಿ ಪ್ರಯೋಗಶೀಲತೆಯೂ ಸೇರಿದೆ. ಇದು ಸಾಹಿತ್ಯದ ಎಲ್ಲ ಅಂಗೋಪಾಂಗಗಳಿಗೆ ಅನ್ವಯವಾಗುವ ಮಾತೇ ಆಗಿದೆ. ಅನೇಕ ಸಂದರ್ಭಗಳಲ್ಲಿ ಇದು ಅದ್ಯತನದ ಮಾದರಿಯೂ ಆಗಬಹುದು. ಕನ್ನಡ ಸಾಹಿತ್ಯದ ಮೊದಲ ಘಟ್ಟಗಳಲ್ಲಿಯೇ ಇದರ ಕುರುಹುಗಳು ಕಂಡುಬರುತ್ತವೆ. ಆಶಯಕ್ಕೆ ಅನುಗುಣವಾದ ಲೌಕಿಕ-ಆಗಮಿಕ ಕಾವ್ಯ ವಿಭಜನ ಕ್ರಮವಾಗಲಿ, ಚಂಪೂ, ಷಟ್ಪದಿ ಮುಂತಾದ ಕಾವ್ಯಬಂಧಗಳ ಬಳಕೆಯಾಗಲಿ, ಪದ್ಯದ ಬೇಲಿಯನ್ನು ದಾಟಿ ಗದ್ಯದ ಬಯಲಿಗೆ ಬಂದ ಸಂಕ್ರಾಂತಿಯಾಗಲಿ, ಈ ಸಾಧ್ಯತೆಗಳ ಪರಿಶೀಲನಾಸೂತ್ರವನ್ನು ಅನುಸರಿಸಿದವುಗಳೇ ಆಗಿವೆ. ಹೊಸಗನ್ನಡದ ಸಂದರ್ಭದಲ್ಲಾದರೂ ಅಷ್ಟೇ. ಅನುವಾದ ಸಾಹಿತ್ಯದ ಮಿತಿಗಳನ್ನು ಮೀರುವ, ಸ್ವೋಪಜ್ಞವಾದ ಬರೆವಣಿಗೆಯತ್ತ ವಾಲಿದ ಅಭಿವ್ಯಕ್ತಿ ಕ್ರಮ, ಭಿನ್ನಭಿನ್ನ ಸಾಹಿತ್ಯಿಕ ಚಳವಳಿ ಇತ್ಯಾದಿಗಳು ಈ ನಿಯಮಕ್ಕೆ ವಿಧೇಯವಾದವುಗಳೇ ಆಗಿವೆ.

ಸಾಹಿತ್ಯ ಕ್ಷೇತ್ರದಂತೆ, ವೈಯಕ್ತಿಕ ನೆಲೆಯ ಸಾಹಿತಿಯೂ ತನ್ನ ವ್ಯಾಪ್ತಿಯ ಒಳಗೆ ಹೊಸತಿನ ಹರಿಕಾರನಾಗುವ ನಿಟ್ಟಿನಲ್ಲಿ ಪ್ರಯತ್ನಶೀಲನಾಗಿರುತ್ತಾನೆ. ನಡೆದು ಸವೆದ ದಾರಿಯ ಬಗೆಗೆ ಸ್ವಭಾವ ಸಹಜವಾದ ನಿರಪೇಕ್ಷೆ. ಬೇರೇ ನೆಲವನ್ನು ಮಟ್ಟಸ ಮಾಡಿ, ಬೆಳೆಯ ಹುಲುಸನ್ನು ಕಾಣುವ ಹುಮ್ಮಸ್ಸು, ಹೊಸ ತಂಗುದಾಣಗಳ ಸೌಖ್ಯ, ರೋಮಾಂಚಕತೆ, ಭೀತಿ, ಹಿಂಜರಿಕೆ, ತಲ್ಲಣ, ಆತಂಕಗಳನ್ನು ಅನುಭವಿಸುವ ಉತ್ಸಾಹಗಳೆಲ್ಲ ಈ ಪ್ರಯೋಗಶಾಲೆಯ ತೋರುಗಂಬಗಳೇ ಆಗಿವೆ. ಅವುಗಳು ನಿರ್ದೇಶಿಸಿದಂತೆ ತಮ್ಮ ಸಾಹಿತ್ಯಾದರ್ಶಗಳನ್ನು ರೂಪಿಸಿಕೊಂಡ ಬೆರಳೆಣಿಕೆಯ ಕೆಲವೇ ಸಾಹಿತಿಗಳಲ್ಲಿ ಹಿರಿಯ ಕವಿಗಳಾದ ಜಿ.ಎಸ್. ಶಿವರುದ್ರಪ್ಪನವರೂ ಒಬ್ಬರಾಗಿದ್ದಾರೆ.

ಕಾವ್ಯ, ಗದ್ಯ—ಅದರಲ್ಲೂ ಪ್ರವಾಸ, ಸಾಹಿತ್ಯ-ವಿಮರ್ಶೆ ಹಾಗೂ ಕಾವ್ಯಮೀಮಾಂಸೆಗಳು ಶಿವರುದ್ರಪ್ಪನವರು ಆಯ್ದುಕೊಂಡ ಪ್ರಧಾನ ಮಾಧ್ಯಮಗಳಾಗಿವೆ. ಅವರ ಸೃಷ್ಟಿಶೀಲ ಅಭಿವ್ಯಕ್ತಿಯ ಒಂದು ಮುಖವಾದ ಕಾವ್ಯವನ್ನು ಸ್ವಲ್ಪ ಹತ್ತಿರದಿಂದ ನೋಡುವ ತನ್ನ ನಡೆಗೆ ಅದು ಕಂಡುಕೊಂಡ ತಿರುವುಗಳನ್ನು ಲಕ್ಷಿಸುವ ಉದ್ದೇಶಗಳನ್ನು ಈ ಲೇಖನವು ಇಟ್ಟುಕೊಂಡಿದೆ.

ನಮ್ಮ ಸಂದರ್ಭದಲ್ಲಿ 'ಕವಿಗಳೇನೋ ಧಾರಾಳವಾಗಿದ್ದಾರೆ. ಆದರೆ ಕಾವ್ಯ ಮಾತ್ರ ಕಾಣಲು ಸಿಗುವುದಿಲ್ಲ' ಎನಿಸುವ ವಿಲಕ್ಷಣ ಸನ್ನಿವೇಶದಲ್ಲಿ ಪ್ರಯೋಗಶೀಲತೆಗೇನೂ ಕೊರತೆಯಿಲ್ಲ. ಒಂದು ಕಾಲಕ್ಕೆ ವಿಭಿನ್ನವಾದ ಪದಚ್ಛೇದ, ಪದ್ಯ ಶರೀರದ ವಕ್ರವಿನ್ಯಾಸಗಳೆಲ್ಲವೂ 'ಪ್ರಯೋಗ'ಗಳೆನ್ನುವ ಗೌರವಕ್ಕೆ ಪಾತ್ರವಾದವುಗಳೇ. ಆದರೆ ಸಾಹಿತ್ಯದ ಅಭ್ಯಾಸದ ದೃಷ್ಟಿಯಿಂದ, ರಸಸಿದ್ಧಿಯ ಮಾನದಿಂದ ಇವುಗಳ ಯಶಸ್ಸನ್ನು ಅಳೆಯ ಹೊರಟಾಗ.

ಹೆಚ್ಚಿನ ಸಂದರ್ಭಗಳಲ್ಲಿ ನಿರಾಸೆಯೇ ಎದುರಾಗುತ್ತದೆ. ಶಿವರುದ್ರಪ್ಪನವರು ಈ ಹೇಳಿಕೆಗೆ ಅಪವಾದವಾಗಿದ್ದಾರೆ ಎನ್ನುವುದೂ ಅವರ ಕಾವ್ಯದ ಹೆಗ್ಗಳಿಕೆಯೇ ಆಗುತ್ತದೆ.

ಇಲ್ಲಿ ಎರಡು ಅಂಶಗಳು ವಿಶ್ಲೇಷಣೆಯ ಹದವನ್ನು ನಿಶ್ಚೈಸುತ್ತವೆ. ಒಂದು ಬದಲಾಗುತ್ತಿರುವ ಸಾಹಿತ್ಯ ಕ್ಷೇತ್ರದ ಪ್ರೇರಕಗಳು, ಸಿದ್ಧಾಂತಗಳು ಹಾಗೂ ಸಮುದಾಯಿಕ ಹೊಣೆಗಾರಿಕೆಗಳ ಬಾಹ್ಯಪ್ರಪಂಚ. ಇನ್ನೊಂದು ವೈಯಕ್ತಿಕವಾದ ಸಂವೇದನೆಗಳು, ಬೇರೆಬೇರೆ ಸಾಧ್ಯತೆಗಳ ಹೊಳಹು ಮತ್ತು ಜಂಗಮತ್ವದ ಆಕರ್ಷಕಗಳ ಒಳ ಜಗತ್ತು. ಈ ಎರಡು ನೆಲೆಗಳ ಅನ್ವೇಷಣೆಯನ್ನು ಮಾಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಈ ಹಂತದಲ್ಲಿ ಉಲ್ಲೇಖಿಸಬೇಕಾದ ಮಹತ್ವದ ಅಂಶವೊಂದಿದೆ. ಎಲ್ಲ ಸತ್ವಪೂರ್ಣ ಸಾಹಿತಿಗಳ ಸಂದರ್ಭಗಳಂತೆಯೇ, ಶಿವರುದ್ರಪ್ಪನವರ ಕಾವ್ಯದ ಮಜಲುಗಳನ್ನು ಕಾಲದ ಚೌಕಟ್ಟಿನೊಳಗೆ ಹಿಡಿದಿಡುವುದು ಕಷ್ಟಸಾಧ್ಯ. ಆದುದರಿಂದ, ಅವರ ಕಾವ್ಯವಾಹಿನಿ ಎಲ್ಲೆಲ್ಲಿ ತನ್ನ ದಿಸೆಯನ್ನು ಬದಲಿಸಿಕೊಂಡಿದೆ, ಆ ಬದಲಾವಣೆಯ ಲಕ್ಷಣಗಳೇನು, ಸಾರ್ಥಕವಾದ ಕಾವ್ಯಸ್ರೋತಗಳು ಯಾವುವು ಎನ್ನುವುದರ ತೀರಾ ಸ್ಥೂಲವಾದ ಕಲ್ಪನೆಯನ್ನು ನೀಡುವಷ್ಟಕ್ಕೆ ಈ ಲೇಖನದ ವ್ಯಾಪ್ತಿಯಿರುತ್ತದೆ.

ಸುಗಮ ಸಂಗೀತ ಕ್ಷೇತ್ರದಲ್ಲಿ ಬಹುವಾಗಿ ಮನ್ನಣೆ ಪಡೆದಿರುವ 'ಉಡುಗಣವೇಷ್ಟಿತ...' ('ಅಲ್ಲಿ-ಇಲ್ಲಿ', ಸಮಗ್ರ ಕಾವ್ಯ ಪು.4) ಕವನವನ್ನು ಬರೆದಾಗಲೇ ಶಿವರುದ್ರಪ್ಪನವರ ಕಣ್ಣುಗಳು ತಮ್ಮ ಸುತ್ತಲಿನ ವಾತಾವರಣದಲ್ಲಿರುವ ಎರಡು ಅತಿಗಳನ್ನು ನಿಚ್ಚಳವಾಗಿ ಗುರುತಿಸಿದ್ದುವು. 'ದಿವ್ಯಾಂಬರ ಸಂಚಾರ' ಮತ್ತು 'ಮಣ್ಣಿನ ರೇಖಾಪಥಗಮನ' ಗಳ ಹಿಂದಿನ ಏಕಸೂತ್ರವನ್ನು ಗಮನಿಸುವ ಅವರ ಸಾಮರ್ಥ್ಯ ಕಾಲದೊಂದಿಗೆ ಪಕ್ವವಾಗುತ್ತ ನಡೆದಿದೆ. ಜೀವನಾನುಭವ-ಕಾವ್ಯಾನುಭವಗಳ ಸಂಧಿ ಬಿಂದುವಾಗಿ ಅವರ ಕಾವ್ಯವನ್ನು ಪೋಷಿಸಿದ ಜೀವದ್ರವ್ಯಗಳಲ್ಲಿ ಇದೂ ಒಂದಾಗಿದೆ.

ಶಿವರುದ್ರಪ್ಪನವರು ಪ್ರತಿಮಾಶಿಲ್ಪಿ. ಅವರ ಕಾವ್ಯಾನುಭವಗಳು—ಕೆಲವೊಮ್ಮೆ ನೆಲದ ನೆಂಟನ್ನು ಕಡಿದುಕೊಂಡಿತೇನೋ ಎನ್ನುವ ಆತಂಕದ ನೆರಳಾಡುವಷ್ಟು—ಊರ್ಧ್ವಗಾಮಿಗಳು, ವೈನತೇಯನ ವ್ಯೋಮಯಾನದಂತೆ! ಆದರೆ, ನೆಲದ ಒಡಲಲ್ಲಿ ಎಲ್ಲಿಯಾದರೂ ಹಸುರು ಸೆಲೆಯೊಡೆಯಲು ಹಾಕುವ ಹೊಂಚು ಗೋಚರಿಸಿತೋ ಅವು ತಟಕ್ಕನೆ ಭೂಮಿಯನ್ನು ತಕ್ಕೈಸಿದವೆಂದೇ ಲೆಕ್ಕ. ಈ ಉಡ್ಡಾಣದ ಕ್ರಮಕ್ಕೆ ನಮ್ಮನ್ನು ಹೊಂದಿಸಿಕೊಂಡಾಗಷ್ಟೇ ಕವಿಯ ಕಾವ್ಯಲೋಕದ ವಿಹಾರಕ್ಕೆ ಅನುವು, ಆಸ್ಪದ.

ಕುವೆಂಪು ಅವರಂತೆ, ಜಿಎಸ್ಎಸ್ ಕೂಡಾ ಭಾವಲೋಕ ಸಂಚಾರಿಯೇ. ಇವರ ವಿಧಾನ ಮಾತ್ರ ಅವರಿಗಿಂತ ಭಿನ್ನ. ಗಿಡಗಂಟಿಗಳನ್ನು ಸವರುತ್ತ, ಬಳ್ಳಿಬೀಳಲುಗಳನ್ನು ಸರಿಸುತ್ತ, ಹಳ್ಳ ದಿಣ್ಣೆಗಳನ್ನು ದಾಟುತ್ತ ಸೌಂದರ್ಯದ ಸನ್ನಿಧಿಯನ್ನು ಸಾರುವುದು ಇವರಿಗೆ ಇಷ್ಟವಾದ ಕ್ರಮ. ಹೀಗಾಗಿ ಕಣ್ಣ ಮುಂದೆ ಪ್ರತ್ಯಕ್ಷವಾಗುವ ಕಾವ್ಯಕೇಂದ್ರ ಬಹುಮಟ್ಟಿಗೆ ಅನಿರೀಕ್ಷಿತ. ಹಾಗಿರುವುದರಿಂದಲೇ ಪೂರ್ಣ ಸುಖಾವಹ.

ಆಗಲೇ ಹೇಳಿದಂತೆ, ಶಿವರುದ್ರಪ್ಪನವರ ಕಾವ್ಯ, ಶೈಶವ, ಬಾಲ್ಯ, ಪ್ರೌಢಾವಸ್ಥೆ, ಪಕ್ವಸ್ಥಿತಿಗಳ ಪೂರ್ವನಿಯೋಜಿತ ಕ್ರಮಕ್ಕೆ ಬದ್ಧವಾಗಿಲ್ಲ. ಪ್ರೀತಿಯನ್ನು, ಅದರ ನಾನಾ ನೆಲೆಗಳನ್ನು ಶೋಧಿಸುವ ಅವರ ಕಾವ್ಯದ ಪ್ರೇರಕ ಶಕ್ತಿಯೂ ಪ್ರೀತಿಯೇ ಆಗಿರುವ ವೈಲಕ್ಷಣ್ಯವನ್ನು ಇಲ್ಲಿ ಗುರುತಿಸಬಹುದು. ಸಂದರ್ಭಸಂವಾದಿಯಾಗಿ, ಅದು ಜೀವಪ್ರೀತಿಯೋ, ನಿಸರ್ಗದ ಆರಾಧನೆಯೋ, ತಾತ್ವಿಕ ಊರುಗೋಲೋ, ನಂಬಿಕೆಯ ಬೆನ್ನೆಲುಬೋ ಆಗಿ ಅಸ್ತಿತ್ವವನ್ನು ಪಡೆಯುವ ಬಗೆ ಸದ್ದಿಲ್ಲದಂತೆ ಮನಸ್ಸನ್ನು ಆವರಿಸಿಬಿಡುತ್ತದೆ. ಈ ಅಭಿವ್ಯಕ್ತಿ ಬೇರೆ ಬೇರೆ ಶರೀರಗಳನ್ನು ಪಡೆಯುತ್ತ, ತನ್ನ ಎಲ್ಲ ಸಾಧ್ಯತೆಗಳನ್ನು ಹಿಂಜಿ ಹಿಂಜಿ ನೋಡುತ್ತ ಬಟ್ಟಲು ಬರಿದಾಗಿಯೇ ಬಿಟ್ಟಿತೇನೋ ಎನಿಸುವ ಕ್ಷಣದಲ್ಲಿ, ಅವರು ಬೇರೊಂದು ಸಮೃದ್ಧ ಪಾತ್ರೆಯನ್ನು ಕೈಗೆತ್ತಿಕೊಳ್ಳುವ ಬಗೆಯೂ ಅಷ್ಟೇ ಅಪೂರ್ವ, ಆಕರ್ಷಕ. ಇಲ್ಲಿಯೂ ಮೂಲ ನೆಲೆಯನ್ನು ಅವರು ಪೂರ್ತಾ ತ್ಯಜಿಸುವುದಿಲ್ಲ. ಎಷ್ಟೋ ಸಮಯದ ಬಳಿಕ ಮತ್ತೆ ಅದನ್ನು ಬೇರೊಂದು ಸುತ್ತಿನ ಶೋಧಕ್ಕೆ ಒಳಪಡಿಸುತ್ತಾರೆ. ಅಲ್ಲಿ ಉಳಿದಿರಬಹುದಾದ, ಕಾಲವು ಜತನದಿಂದ ಸಂಗ್ರಹಿಸಿಟ್ಟಿರಬಹುದಾದ ರಸಕ್ಷಣಗಳಿಗಾಗಿ ಹುಡುಕಾಡುತ್ತಾರೆ. ಅಷ್ಟೇ ಮಮತೆಯಿಂದ ಅವುಗಳನ್ನು ಎತ್ತಿ ಹೊರಗಿನ ಬೆಳಕಿಗೆ ಒಡ್ಡುತ್ತಾರೆ. ಈ ಲಾಳಿಯ ಆಟವನ್ನು, ಆರಾಮವಾಗಿ ಹಿಂದೆ ಮುಂದೆ ಸರಿಯಬಲ್ಲ ಲಾಘವ ಕೌಶಲವನ್ನು, ಶಿವರುದ್ರಪ್ಪನವರಲ್ಲಿ ವೈಶಿಷ್ಟ್ಯವಾಗಿ ನಾನು ಗುರುತಿಸುತ್ತೇನೆ.

ಹೀಗೆ ನೋಡಿದಾಗ, ನನ್ನ ಮುಂದೆ ಅವರ ಕಾವ್ಯದ ಹಲವು ನೆಲೆಗಳು ವ್ಯಕ್ತವಾಗುತ್ತವೆ. ಇವುಗಳಲ್ಲಿ ಆಶಯ, ಬಂಧ, ಕಾವ್ಯಾದರ್ಶಗಳನ್ನು ಸರಳವಾಗಿ, ಪ್ರಾಥಮಿಕ ಮಟ್ಟದಲ್ಲಿ ಪ್ರಕೃತಿದತ್ತವಾಗಿ ಸ್ವೀಕರಿಸಿದ ಒಂದು ಮಜಲು ಗೋಚರವಾಗುತ್ತದೆ. ಇಲ್ಲಿ ಕವಿಯ ಪ್ರಯೋಗಗಳೆಲ್ಲ ಆತ್ಮ-ವಿಶ್ವಾಸವನ್ನು ಕುದುರಿಸಿಕೊಳ್ಳುವ ಪ್ರಯತ್ನಗಳು. ಯಾವ ತರದ ಪೈಪೋಟಿಗೂ ಹೊರಡದ, ಒಳಗಿನ ತುರ್ತಿನಿಂದ ಹುಟ್ಟಿಕೊಂಡ ಆರಾಮಪ್ರದವಾದ ಭಂಗಿಗೆ ಒಗ್ಗಿಕೊಂಡವುಗಳು. ಕಾಲಧರ್ಮದಂತೆ, ತಂತ್ರದ ದೃಷ್ಟಿಯಿಂದ, ನವೋದಯ ಸತ್ವವುಳ್ಳ ಈ ಕವನಗಳು ಸುಗಮ ಸಂಗೀತದ ಮೂಲಕವಾಗಿ ಅವರಿಗೆ ತುಂಬ ಜನಾದರವನ್ನೂ ಗಳಿಸಿಕೊಟ್ಟಿವೆ. ಸ್ವಲ್ಪ ಮಟ್ಟಿನ ಶಬ್ದರತಿ, ಬದುಕಿನ ಸ್ವರೂಪದ ಬಗೆಗೆ, ಅಂತರ್ನಿಹಿತ ದ್ವಂದ್ವಗಳ ಬಗೆಗೆ, ಜೀವನದ ಅದಮ್ಯ ಆಕರ್ಷಣೆಯ ಬಗೆಗೆ ಕುತೂಹಲ, ಒಂದಿಷ್ಟು ಆದರ್ಶದ ಲೇಪನದಿಂದ ಈ ಮಾದರಿಯ ಕವನಗಳು ನಿಷ್ಪನ್ನವಾಗಿವೆ. ಕೆಲವು ಉದಾಹರಣೆಗಳ ಮೂಲಕ ಈ ಹೇಳಿಕೆಯನ್ನು ಸಮರ್ಥಿಸಬಹುದು.

ನಿನ್ನ ಕಣ್ಣೊಳು ಹೊಳೆವ ವಾತ್ಸಲ್ಯ ಚಂದ್ರಿಕೆಯೊ-
ಳದ್ದಿ ಶಿಶು ನಗುತಲಿದೆ ಚಕ್ಕೆಯಂತೆ!
ಜಗವನಾಳುವ ಒಲವು ಮೈದೋರಿದೀ ಪರಿಗೆ
ಬೆರಗು ಮೌನದೊಳಿರುವೆ ಬಾನಿನಂತೆ!

('ತಾಯಿಗೆ' ಸಮಗ್ರ ಕಾವ್ಯ, ಪು. 89)

ಮತ್ತು 'ರಥಯಾತ್ರೆ'ಯ

ವಿಶಾಲ ಪಥದಲಿ ಜೀವನ ರಥದಲಿ
ನಿನ್ನೆಯ ಕರುಣೆಯ ಸಾರಥ್ಯದಲಿ

ಹಗಲು ಇರುಳುಗಳ ಬೆಳಕಿನಲಿ
ನಡೆಯುತ್ತಿದೆ ಈ ಜೀವರಥ
ವಿಶಾಲವಾಗಿದೆ ನನ್ನ ಪಥ. (ಸಮಗ್ರ ಕಾವ್ಯ, ಪು. 47)

ಕಾವ್ಯದ ಬಂಧ, ಆಶಯ, ಸ್ವರೂಪಗಳು ಕಾಲದ ಕೃತಕ ಕಟ್ಟನ್ನು ಕಡಿದುಕೊಂಡು ಕವಿಯ ಕೈಯಲ್ಲಿ ಪಳಗುವ ಬಗೆಗೆ ಇಂಥ ಹಲವು ನಿದರ್ಶನಗಳು ಸಿಗುತ್ತವೆ. ಮೇಲಿನ ಎರಡು ಕವನ ಭಾಗಗಳನ್ನು ಗಮನಿಸಿದರೆ, ಉತ್ಕಟವಾಗಿ ಬದುಕನ್ನು ಅನುಭವಿಸುವ ಹಂಬಲ, ಅದರ ಅಂಗ ಪ್ರತ್ಯಂಗವನ್ನೂ ವಿಶದವಾಗಿ ಅರ್ಥೈಸಿಕೊಳ್ಳುವ ತವಕ, ಪರ್ಯಾವರಣಕ್ಕೆ ಸಹಜವಾಗಿ ಒಗ್ಗಿಕೊಳ್ಳಬಲ್ಲ ನಮನಶೀಲತೆ, ಬದುಕನ್ನು ಅದರ ಸರಳ ವ್ಯಾಖ್ಯಾನದಲ್ಲಿಯೇ ಸ್ವೀಕರಿಸಿ, ಆಪ್ತವಾಗಿ ಪರಿಗಮಿಸುವ ಮನೋಭಾವಗಳು ಇಲ್ಲಿ ಎದ್ದು ಕಾಣುತ್ತವೆ. ಇದರ ಬಳಿಯಲ್ಲಿಯೆ, ಇತ್ತೀಚೆಗೆ (1999) ಪ್ರಕಟವಾದ 'ವ್ಯಕ್ತಮಧ್ಯ' ಕವನ ಸಂಕಲನದ 'ವಸಂತಗೀತ'ದ ಸಾಲುಗಳನ್ನು ಇಟ್ಟು ನೋಡೋಣ.

ವಸಂತ ಬಂದಿದೆ ಸಖಿಯೆ,
ಹೊಸತಾವುದು, ಹಳತಾವುದು ನಮಗೆ
ಹಿಂದು ಮುಂದುಗಳು ಬಂದು ಸಂಧಿಸುವ
ಅಂತರಾಳದೊಳಗೆ?
.................
..................
ಮತ್ತೆ ಮತ್ತೆ ಬರಡಾಗುವ ಬದುಕಿಗೆ
ವಸಂತಸ್ಪರ್ಶದ ಕೃಪೆಯಿರದಿದ್ದರೆ
ಚೆಲುವೆಲ್ಲಿದೆ ಜಗಕೆ?

(ವ್ಯಕ್ತಮಧ್ಯ, ಪು. 62)

ಬದುಕನ್ನು ಇಡಿಯಾಗಿ ಗ್ರಹಿಸಬಲ್ಲ ಸಮಗ್ರದೃಷ್ಟಿಯನ್ನು ಹಿನ್ನೆಲೆಗೆ ಇಟ್ಟುಕೊಂಡಿರುವ ಕವಿ, ತಮ್ಮ ಪಕ್ವ ವಯಸ್ಸಿನಲ್ಲಿಯೂ ಸುತ್ತಲಿನ ಬಗೆಗಿನ ಮುಗ್ಧ ಕುತೂಹಲ, ಕನಸುಗಾರಿಕೆಗಳನ್ನು ಕಾಪಿಟ್ಟುಕೊಂಡಿದ್ದಾರೆನ್ನುವುದಕ್ಕೆ ಸಾಕ್ಷಿಯಾಗುವ ಸಾಲುಗಳಿವು. ಆದುದರಿಂದಲೆ ಇವು 'ಹೊಸತು-ಹಳತು'ಗಳ ಗಡಿಗೆರೆಯನ್ನು ನಿರ್ದಾಕ್ಷಿಣ್ಯವಾಗಿ ಅಳಿಸಿಹಾಕುತ್ತವೆ; ಕಾವ್ಯದ ಅನನ್ಯತೆಯನ್ನು ಗಟ್ಟಿಗೊಳಿಸುತ್ತವೆ.

ನೀಳ್ಗವನಗಳ ಸಾಧ್ಯತೆಗಳೊಂದಿಗೆ ಕವಿ ನಡೆಸಿದ ಅನುಸಂಧಾನಕ್ಕೂ ಇಷ್ಟೇ ಮಹತ್ವವಿದೆ. ಇಂಥ ಬಹಳಷ್ಟು ಕವನಗಳನ್ನು ಅವರು ಬರೆದಿಲ್ಲ. ಆದರೆ ಬರೆಹ ರೂಪಕ್ಕಿಳಿದದ್ದೆಲ್ಲ ಚೊಕ್ಕವಾದದ್ದೇ. ಇವುಗಳಲ್ಲಿ ಭಾವಗೀತಾತ್ಮಕತೆಯದೇ ಆಡಳಿತ; ನಿಡುಗಾಲದ ಪರಿಚಯದ ಸಲಿಗೆಯಿಂದ ಅವುಗಳು ನಿಶ್ಶಬ್ದವಾಗಿ ಭಾವಕೋಶದ ಭಾಗವಾಗುವ ಸೊಗಸು ಅನುಭವಕ್ಕಷ್ಟೇ ವೇದ್ಯ.

ಎಳೆಯ ವಧು ತವರೂರಿಗೆ ವಿದಾಯ ಹೇಳುವಂಥ ಸರಳ ವಸ್ತುವನ್ನೂ ಶಿವರುದ್ರಪ್ಪನವರ ಕವಿತಾಶಕ್ತಿ ಭಾವಸ್ಪಂದಿಯಾಗಿ ಮಾಡಿದೆ. ಇಲ್ಲಿ ಅವಳು ಬೀಳ್ಕೊಡುಗೆಯ ಸಂದೇಶವನ್ನು ನೀಡುತ್ತಿರುವುದು ಕೇವಲ ಬಂಧುಗಳಿಗಲ್ಲ. ಎಳೆವೆಯಿಂದ ಮೈಯುಂಡು ಹೋಗಿರುವ ಜೀವನ ಪದ್ಧತಿಗೆ, ಶರೀರದ ನರನಾಡಿಗಳಂತೆ ಎಲ್ಲೆಲ್ಲೋ ಬೆಸುಗೆ ಹಾಕಿಕೊಂಡಿರುವ ಬಾಂಧವ್ಯದ ಬೇರುಗಳಿಗೆ, ಹಿಂದೆ ಜಗ್ಗುತ್ತಿರುವ ಸ್ಮರಣಾನುಭವಗಳಿಗೆ. ಹೊಸ ಪ್ರಪಂಚವೊಂದರ ಪ್ರವೇಶಕ್ಕೆ ತನ್ನನ್ನು ಸನ್ನದ್ಧಗೊಳಿಸಿಕೊಳ್ಳುವ ಅವಳ ಅಕೃತ್ರಿಮ ಮೈತ್ರಿಯೇ ಇಲ್ಲಿ ಪದರೂಪವನ್ನು ಪಡೆದಿದೆ.

**ಹೋಗುತಿರುವೆನು ನಾನು ಕಾಣದೂರನು ಕುರಿತು**
**ಎಂತಿರುವುದೋ ಅಲ್ಲಿ ನನ್ನ ಬದುಕು?**
**ನಿಮ್ಮೆಲ್ಲರೆದೆಯೊಲುಮೆ ನನ್ನ ನಲ್ಲನ ಒಲವು**
**ನುಡಿಯುತಿಹುದೊಳ್ಳನೇ; ಅನಿತೆ ಸಾಕು**

(ಸಮಗ್ರ ಕಾವ್ಯ, ಪು. 150)

ಎಲ್ಲರಿಗೂ ಎಲ್ಲ ಹಂತದಲ್ಲೂ ಅನಿವಾರ್ಯವಾಗಿರುವ ಕ್ಷೇಮಭಾವವನ್ನು ಅವಳು ಆತುಕೊಳ್ಳುವ ರೀತಿಗೆ ಮನಸ್ಸು ಆರ್ದ್ರವಾಗುತ್ತದೆ.

ಇದನ್ನು ಒಂದು ಸಂಕೇತವಾಗಿ ತೆಗೆದುಕೊಂಡಾಗ, ಸಾಹಿತ್ಯವೂ ಸೇರಿದಂತೆ-ರೂಪಾಂತರಗೊಳ್ಳುತ್ತಲೇ ಹೋಗುವ ಬದುಕಿನ ಛಂದಸ್ಸು ಸ್ಫುರಿಸುತ್ತದೆ. 'ಆವಾವ ಹಿರಿಯೊಲವು ಕಿರಿಯೊಲವಿನಿಂದೆಮ್ಮ ಕರೆದುಕೊಂಡೊಯ್ಯುವುದೋ ಏನು ಗೊತ್ತು" (ಅದೇ, ಪು. 151) ಎನ್ನುವ ಉದ್ಗಾರದ ಹಿಂದೆ, ಜೀವನದ ಗತಿಯ ಹಾಗೆಯೇ ಸಾಹಿತ್ಯಿಕ ಮಾರ್ಗದ ತಿರುವುಗಳೂ, ಏರಿಳಿತಗಳೂ ಅನೂಹ್ಯ ಆದರೆ ಸಹಜ ಎನ್ನುವ ಕವಿಯ ನಿಲುವು ಸ್ಪಷ್ಟವಾಗಿ ಕಂಡು ಬರುತ್ತದೆ.

ಕವಿ, ಇಷ್ಟೇ ನಿರಾತಂಕವಾಗಿ ಸಂಕೀರ್ಣ ವಸ್ತುವನ್ನೂ ನೀಳ್ಗವನದ ಬಂಧಕ್ಕೆ ಒಗ್ಗಿಸಿಕೊಳ್ಳುತ್ತಾರೆ. 'ವ್ಯಕ್ತಮಧ್ಯ' ಕವನ ಸಂಕಲನದ 'ಚರಿತ್ರೆಯ ಕಾಲಜ್ಞಾನ' ಸಾಕಷ್ಟು ಚಿಂತನೆಗೆ ಗ್ರಾಸವಾಗಬಲ್ಲ ವಸ್ತುವನ್ನು ಹೊಂದಿದೆ. ಅಲ್ಲಿ ಬುದ್ಧಿಗೇ ಪ್ರಾಧಾನ್ಯ.

...............

............... ಅವರಿವರ ಬೆವರುನೆತ್ತ
ರಿನಲ್ಲಿ ಬೆಳೆಸಿದಹಂಕೃತಿಯ ಚಿತ್ರವಿಕಾ-
ರಕ್ಕೆ ಶಾಶ್ವತದ ಚೌಕಟ್ಟು ಹಾಕುವ ವ್ಯರ್ಥ
ಪ್ರಯತ್ನಕ್ಕೆ ಮುಖವಾಣಿಯಾಗಲೆ ನಾನು?
ಅಥವಾ ತಿಳಿಯ ಹೇಳಲೆ ಕೆಳೆತನದ ಸಲುಗೆಯ
ಬಳಸಿ, ಯಾಕೆ ಮತ್ತೆ ಮತ್ತೆ ಪಾಚಿಗಟ್ಟುವುದು
ಹೀಗೆ ಈ ಮನುಷ್ಯನ ಚಿತ್ತ ಎಂಬ ಸಂಗತಿಯ?

(ವ್ಯಕ್ತಮಧ್ಯ, ಪು. 57)

ಇವುಗಳ ಮಧ್ಯೆ ಹೋಲಿಕೆಯಿರುವುದು ಬರಿಯ ರೂಪದಲ್ಲಿ ಎನ್ನುವುದನ್ನಿಲ್ಲಿ ಗಮನಿಸಬೇಕು. ಲಯವನ್ನು ಕೆಡಿಸದೆಯೂ ಕ್ಲಿಷ್ಟ ವಸ್ತುವಿನ ನಿರ್ವಹಣೆ ಸಾಧ್ಯವೆನ್ನುವುದು ಇಲ್ಲಿ ಸಾಬೀತಾಗಿದೆ.

ಹೊಸತನ್ನು ಸದಾ ಸ್ವಾಗತಿಸುವ ಕವಿಯ ಮನೋಭಾವಕ್ಕೆ ಹಲವು ಕವನಗಳು ವಾಹಕಗಳಾಗಿವೆ; ಅವರ ಕಾವ್ಯಾದರ್ಶವನ್ನು ಸ್ಪಷ್ಟಪಡಿಸಿವೆ.

ಬೇಸರವೇ ಇಲ್ಲ ಈ ನಿಸರ್ಗಕ್ಕೆ,
ಸದಾ ಹೊಚ್ಚ ಹೊಸದಾಗಿ ಹೊಮ್ಮುವುದಕ್ಕೆ,
ಬೇಸರವೇ ಇಲ್ಲ ಈ ಮನಸ್ಸಿಗೆ
ಇವುಗಳ ಜತೆಗೆ ಬೆರೆಯುವುದಕ್ಕೆ,
ಕೊನೆಯೇ ಇಲ್ಲ, ಈ ಮೂರ್ತ ಅಮೂರ್ತಗಳ
ಸಂಗಮದಿಂದ ಸ್ಫುರಿಸುವಾನಂದಕ್ಕೆ.

('ನಿದರ್ಶನಕ್ಕೆ' *ಸಮಗ್ರ ಕಾವ್ಯ*, ಪು. 460)

ನಿಸರ್ಗವು ಹಳೆಯುಡುಪನ್ನು ಕಳಚಿ ಹೊಸ ಹೊದಿಕೆಯೊಳಗಿನ ಬಿಸುಪನ್ನು ಆಹ್ವಾನಿಸುವ ಹಾಗೆಯೇ ಕಾವ್ಯಕ್ಕೂ ಹೊಸ ದಿಕ್ಕುಗಳ ಅನ್ವೇಷಣಾಸಕ್ತಿಯು ಸ್ಥಾಯಿಯಾಗಿರುತ್ತದೆ ಎನ್ನುವ ಭಾವ ಇಂಥ ಕವನಗಳಲ್ಲಿ ವ್ಯಕ್ತವಾಗಿದೆ.

ಈ ಮಾದರಿಯ ಕವನಗಳನ್ನು ಸಾಕಷ್ಟು ಬರೆದಿರುವ ಶಿವರುದ್ರಪ್ಪನವರು ಕಾವ್ಯದ ಆಶಯಗಳಲ್ಲಿ ಮಾಡಿಕೊಂಡ ಮಹತ್ವದ ಬದಲಾವಣೆಗಳು ಅದರ ಬೇರೆಯೆ ಕೆಲವು ಆತಿಗಳಲ್ಲಿ ಪರಿಣಮಿಸಿದೆ. ಈ ಪ್ರಕಾರದ ಅಭಿವ್ಯಕ್ತಿಗೆ ಅವರು ನವೋದಯ, ನವ್ಯ ಅಥವಾ ನವ್ಯೋತ್ತರ ಕಾವ್ಯಬಂಧಗಳನ್ನು ಬಳಸಿಕೊಂಡಿದ್ದಾರೆ. ಇಲ್ಲೆಲ್ಲ ಸಮಾನ ಆಶಯದ ಏಕಸೂತ್ರವೇ ಪ್ರಧಾನವಾಗಿ ಕಂಡುಬರುತ್ತದೆ. ಇದು ಬಾಹ್ಯ ಅನುಭವಗಳು ಆಂತರಿಕ ಸಂವೇದನೆಗಳೊಂದಿಗೆ ನಡೆಸಿದ ಸಂವಾದ-ಸಂಘರ್ಷಗಳಿಂದ ಹುಟ್ಟಿದ ವಿಷಾದದ ತೆಳು ಪದರ, ಅದರೊಳಗೆ ಅಬಾಧಿತವಾಗಿ ಉಳಿಯುವ ಭವಿಷ್ಯದ ಭರವಸೆಯಾಗಿ ಮಾರ್ಪಾಡು ಹೊಂದುವ ಚೋದ್ಯ ಕುತೂಹಲಕರವಾಗಿದೆ.

ಮೊಗದ ಮೇಗಡೆ ಮುಸುಕನೆಳೆದು
ತನ್ನ ಉಸಿರನು ತಾನೆ ಕುಡಿದು
ನಾಲ್ಕು ಗೋಡೆಯ ನಡುವೆ ಮಲಗಿ
ಜೀವ ನಿದ್ರಿಸತೊಡಗಿದೆ
ಒಳಗೆ ಕತ್ತಲು ತುಂಬಿದೆ
ಕಿಟಕಿ ಬಾಗಿಲು ಬಿಚ್ಚಲಿಲ್ಲ
ಬೇರೆ ಗಾಳಿಯು ಬೀಸಲಿಲ್ಲ
ಕುಡಿದ ಗಾಳಿಯ ಕುಡಿದು ಕುಡಿದೂ
ಯಂತ್ರದಂತೆದೆ ಮಿಡಿದು ಮಿಡಿದೂ
ಜೀವ ಕತ್ತಲೊಳದ್ದಿದೆ
ಜಡದಮೇಲದು ಬಿದ್ದಿದೆ.

('ಬೆಳಕು ಹರಿಯಿತೆ?' ಸಮಗ್ರ ಕಾವ್ಯ, ಪು. 49)

ಈ ಭಾಗವನ್ನು, ಇದರಂಥದೇ ಹಲವು ಪದ್ಯಪಂಕ್ತಿಗಳನ್ನು ಗಮನಿಸಿದಾಗ ಕವಿ, ತಮ್ಮೊಳಗಿನ ವ್ಯಗ್ರಭಾವಕ್ಕೆ ನುಡಿ ನೀಡಿದ್ದು ಸ್ಪಷ್ಟವಾಗುತ್ತದೆ. ವೈಯಕ್ತಿಕ ಮಟ್ಟದಲ್ಲಿ, ವ್ಯಕ್ತಿತ್ವದ ಆಕುಂಚನ ಪ್ರಕ್ರಿಯೆಯನ್ನು, ಅದರಿಂದ ಜನಿಸುವ ನಿರ್ಜೀವ ಯಾಂತ್ರಿಕೆಯನ್ನು, ಹೊಸ ಗಾಳಿಯ ಹರಿದಾಟಕ್ಕೆ ಎಡೆಕೊಡದ ಮುಟ್ಟುವಿಕೆಯ ಮೂಗುಬ್ಬಸವನ್ನು ಇಂಥ ಸಂದರ್ಭಗಳಲ್ಲಿ ಕವಿ ಜಾಲಾಡಿದ್ದಾರೆ. ಹೊಸತಿನ ಸ್ವೀಕಾರಕ್ಕೆ ಮೈ, ಮನಸ್ಸು, ಪರಿಸರ, ಪರಿಕರಗಳೆಲ್ಲ ಸಜ್ಜುಗೊಳ್ಳಬೇಕೆಂಬ ಅನುಕ್ತ ಸಂದೇಶವನ್ನು ಈ ಮಾದರಿಯ ಕವನಗಳು ಸಂವಹಿಸುತ್ತವೆ.

ಇದೇ ಭಾವ ಸ್ವಲ್ಪ ವಿಸ್ತಾರವಾದ ಪಾತಾಳಿಯನ್ನು ಆಶ್ರಯಿಸಿದಾಗ, ವ್ಯವಸ್ಥೆಯ ವಿರುದ್ಧದ ಆಕ್ರೋಶದ ದನಿಯಾಗಿ, ವ್ಯಂಗ್ಯ, ವಿಡಂಬನೆ, ಚಾಟೂಕ್ತಿಗಳ ಪ್ರಾಕಾರವನ್ನು ಸೇರುತ್ತದೆ.

ಇಲ್ಲ, ನಮಗೆ ನಾಚಿಕೆಯಿಲ್ಲ, ನಾಚಿಕೆ-
ಯೆಂದರೇನೆಂದೂ ನಮಗೆ ಗೊತ್ತಿಲ್ಲ
ಹೊತ್ತು ಹೊತ್ತಿಗೆ ಕತ್ತೆಯ ಕಾಲು ಹಿಡಿದು
ಬೆಲೆಯುಳ್ಳದ್ದನ್ನೆಲ್ಲ ಕೊಲೆ ಮಾಡಿ ಬಡಿದು
ದೊಡ್ಡ ಮಾತುಗಳ ಹಲಗೆ ಹಿಡಿದು ಕುಣಿ-
ದಿದ್ದೇವೆ. ನಮ್ಮತನವೆಲ್ಲವನ್ನೂ ಹರಾಜಿಗಿಟ್ಟು
ನಿಂತಿದ್ದೇವೆ ಸ್ವಾಮಿ, ನಾವು ಗುಲಾಮರು

('ಗುಲಾಮರು' ಸಮಗ್ರ ಕಾವ್ಯ, ಪು. 346)

ಹರಿತವಾದ ಅಭಿವ್ಯಕ್ತಿಯೂ ಜಿಎಸ್ಎಸ್ ಅವರಿಗೆ ಸಿದ್ಧಿಸಿದೆಯೆನ್ನುವುದಕ್ಕೂ ಹೇರಳವಾದ ಸಾಕ್ಷ್ಯಗಳು ಸಿಗುತ್ತವೆ. ಆದರೆ ಇವೆಲ್ಲವನ್ನೂ ಮೀರಿದ ಜೀವಪ್ರೀತಿಯ ತಂತುಗಳು

ಕಡಿಯದಂತೆ ಕಾಯ್ದುಕೊಂಡ ಅನನ್ಯತೆಯೂ ಅವರದಾಗಿದೆಯನ್ನುವುದನ್ನೂ ಇಲ್ಲಿ ಸ್ಪಷ್ಟಪಡಿಸಬೇಕು.

ಬದುಕಿನ ವಿಕೃತಿಗಳನ್ನು ದಾಖಲಿಸುವ ಮನಸ್ಸು ಒಂದಲ್ಲ ಒಂದು ಹಂತದಲ್ಲಿ ಸ್ವಾನುಕಂಪದ ಸುಳಿಗೆ ಸಿಕ್ಕುತ್ತದೆ. ಇದು ಜಿಎಸ್‌ಎಸ್ ಅವರ ಕಾವ್ಯದಲ್ಲೂ ನುಸುಳುವುದನ್ನು ಕಾಣುತ್ತೇವೆ.

**ಬುವಿಯೊಳೆಲ್ಲೂ ಏಕೆ ನನಗೀ ಒಲುಮೆ ದೊರೆಯದ ವೇದನೆ?**
**ಜಗದ ಪ್ರೀತಿಯ 'ನೇತಿ' ಮಾರ್ಗದಿ 'ಇತಿ'ಯನರಸುತ ಬಂದೆನೆ?**
**ತಾಯ ಪ್ರೀತಿಯ ತೆರದಿ ತಿಂಗಳ ಬೆಳಕು ಎಲ್ಲೆಡೆ ಹಬ್ಬದೆ?**
**ಕಣಿವೆ ಕಂದರಗಳನು ಪ್ರೀತಿಯ ತೋಳಿನಲ್ಲದು ತಬ್ಬದೆ?**

('ಮುರಿದ ಒಲುಮೆಗೆ', ಸಮಗ್ರ ಕಾವ್ಯ, ಪು. 118)

ಈ ಮಾದರಿಯ ಕವನಗಳಲ್ಲಿ ಅಸ್ಮಿತೆಯ ಅರಸುವಿಕೆಗೆ, ತಳಕಾಣಲಾರದ ಸಂದಿಗ್ಧಗಳಿಗೆ, ಬದುಕಿನೊಂದಿಗಿನ ಸಂಧಾನಗಳ ಸ್ವರೂಪ ಕಲ್ಪನೆಗೆ ಆದ್ಯತೆಯು ದೊರೆತಿದೆ. ವೈಚಾರಿಕ ತಿಕ್ಕಾಟಗಳಿಂದ ತಲೆಯೆಲ್ಲ ಕೆಟ್ಟು ರಾಡಿಯಾಗುವ, ಮಾನಸಿಕ ತಳ್ಳಂಕಗಳಿಗೆ ಕಾರಣವಾಗುವ ಇಬ್ಬಂದಿ ಸ್ಥಿತಿಯ ಚಿತ್ರಣವೂ ಜಿಎಸ್‌ಎಸ್ ಅವರ ಕಾವ್ಯದಲ್ಲಿ ಅವಕಾಶವನ್ನು ಪಡೆದಿದೆ.

ಈ ಎಲ್ಲ ಸರಪಳಿ ಕ್ರಿಯೆಯಗಳನ್ನು ಅಭಿವ್ಯಕ್ತಿಸುತ್ತ ನಡೆದರೂ ಅವರು ಸುರಂಗದಾಚೆಯ ಸೂರ್ಯರಶ್ಮಿಯನ್ನು ಕಾಣುವ ಪ್ರವೃತ್ತಿಯನ್ನು ಉಳಿಸಿಕೊಳ್ಳುತ್ತಾರೆ.

**ಮುರುಕು ಜೋಪಡಿಯೊಳಗೆ**
**ಮಳೆಯ ನೀರಿಳಿವಂತೆ**
**ಇಳಿಯುತಿವೆ ತಲೆಯೊಳಗೆ ನೂರು ಚಿಂತೆ**

('ಇವನು', ಸಮಗ್ರ ಕಾವ್ಯ, ಪು. 175)

ಇದು ವಸ್ತುಸ್ಥಿತಿಯ ಯಥಾವತ್ತಾದ ದಾಖಲೆ. ಆದರೆ ಈ ಒತ್ತಡಗಳನ್ನು ಅನುಭವಿಸಿಯೂ ವ್ಯಕ್ತಿತ್ವ ಕಾಪಾಡಿಕೊಳ್ಳುವ ಸಮತೂಕವಿದೆಯಲ್ಲ, ಅದು ಕವಿಯ ಕಾಣ್ಕೆ. ನಾಳಿನ ಬಗೆಗಿನ ಅಚಲ ಭರವಸೆ.

**ಆದರೂ, ಆದರೂ ನಿರಾಸೆಯಲಿ ಮುಳುಗಿ**
**ನೋಯನಿವನು**
............
**ಬೆಳಕ ಮುಡಿಯಲಿ ಹೊತ್ತು ನಿಂತ ಲಾಂದ್ರದ ಹಾಗೆ**
**ನಿಂತಿರುವನು** (ಅದೇ)

ಈ ಭಾವವನ್ನು ಪ್ರಸಾರಗೊಳಿಸುವ ದೃಷ್ಟಿ ಅವರ ಕಾವ್ಯಕ್ಕೆ ಆಪ್ತ ಸ್ಪರ್ಶವನ್ನು ನೀಡುತ್ತದೆ.

ಆದರೆ, ಇದೇ ವಿವಾದ. ಕೆಲವೊಮ್ಮೆ ಕವಿಯ ನಿಯಂತ್ರಣವನ್ನು ಮೀರಿ, ತೀವ್ರವಾದ ಖಿನ್ನತೆಯ ಗೆರೆಗಳನ್ನು ಕೊರೆಯುತ್ತದೆ. ನಂಬಿಕೆಯ ಬೇರುಗಳು ಸಡಿಲಗೊಳ್ಳುತ್ತಿರುವ ಆಭಾಸವನ್ನು ಹುಟ್ಟಿಸುತ್ತವೆ.

"ಯಾವ ಬೀಜ ಮೊಳೆತೀತು ಇಲ್ಲಿ
ಈ ತೀರದಲ್ಲಿ
ಉಪ್ಪು ಕಪ್ಪಾದ ಕಡಲಿನಗತಿ
ದಡದ ಬಂಡೆಯ ಮೇಲೆ
ಭೀತಿ ಭೂತದ ಶಿಲ್ಪ ಕೊರೆಯುವಲ್ಲಿ
ಒಡೆದ ಹಡಗಿನ ತುಂಡು
ಹೊಳೆವ ಎಲುಬಿನ ಹಿಂಡು
ಬೆಂಕಿ ಬಿಸಿಲಿನ ಕೆಳಗೆ ಬೇಯುವಲ್ಲಿ"

('ಬೆಂಗಾಡು' ಸಮಗ್ರ ಕಾವ್ಯ, ಪು. 222)

ಮೂಲಾನುಭವಕ್ಕೆ ಅತ್ಯಂತ ನಿಷ್ಠವಾದ, ನೈಜ ಜಗತ್ತಿನ ಪ್ರತಿರೂಪಗಳನ್ನೇ ಸಂವಹಿಸುವ ನವ್ಯಪ್ರಜ್ಞೆಯಿಂದ ಪ್ರೇರಿತವಾದ ಕವನಗಳನ್ನೂ ಶಿವರುದ್ರಪ್ಪನವರು ಸಾಕಷ್ಟು ಬರೆದಿದ್ದಾರೆ. ವೈಯಕ್ತಿಕ ನೋವುಗಳಿಗೆ, ಕೀಳರಿಮೆಗಳಿಗೆ, ಸುತ್ತಿನ ಬಗೆಗೆ ತೀಕ್ಷ್ಣವಾದ ತಿರಸ್ಕಾರಕ್ಕೆ ದನಿ ನೀಡುವ ಸಾಲುಗಳಿಗೂ ಅವರ ಲೇಖನಿ ಮಾಧ್ಯಮವಾಗಿದೆ. ಸಾಹಿತ್ಯಿಕ ಪರಿಸರದಿಂದ ಈ ಮಾದರಿಯ ಕವನಗಳು ಪ್ರೇರಿತವಾಗಿವೆ.

ಸಿಕ್ಕಿಕೊಂಡಿದ್ದೇನೆ ನಾನೂ
ಕೊಳಕು ಮಂಡಲದ ನಡುವೆ
ಕೊಂಕು ನಗೆ, ನರಿ ಮಾತು, ಕಪಿ ಮುಷ್ಟಿ
ವೃಕೋದರಗಳ ಮಧ್ಯೆ.
..........
ಮೊದಮೊದಲು ನಯವಾದ ಜೇಡನ ಜಾಲ
ಅನಂತರ ರೇಸಿಮೆಯ ನೂಲಿನ ಕುಣಿಕೆ
ಬರಬರುತ್ತಾ ಬೆಸ್ತ ಬಲೆ, ಗಾಳವ ಬೀಸುತ ಗತ್ತು
ನನ್ನ ಸುತ್ತೂ

('ನನ್ನ ಸುತ್ತ' ಸಮಗ್ರ ಕಾವ್ಯ, ಪು. 225)

ಎನ್ನುವಂಥ ಖೇದ, ತಾತ್ಸಾರ, ಜಿಗುಪ್ಸೆಗಳನ್ನೂ ಅವರು ಅಭಿವ್ಯಕ್ತಿಸಿದ್ದಾರೆ. ಪ್ರಾಮಾಣಿಕವಾಗಿ ಹೇಳಬೇಕಾದರೆ, ಈ ವರ್ಗದ ಕವನಗಳಲ್ಲಿ ಹೆಚ್ಚಿನವು ಬುದ್ಧಿಪೂರ್ವಕವಾದ ರಚನೆಗಳಾಗಿ ಕಾಣುತ್ತವೆಯೇ ಹೊರತಾಗಿ, ಕವಿ ಶಿವರುದ್ರಪ್ಪನವರ ಸ್ವೋಪಜ್ಞ ಮುದ್ರೆಯನ್ನು ಒತ್ತಿಸಿಕೊಂಡ,

ಅಂತಃಸ್ಫೂರ್ತವಾದ ಕವನಗಳಾಗಿ ಅಲ್ಲ. ಈ ಮಾತಿಗೂ ಅಪವಾದಗಳಿವೆ ಎನ್ನುವುದನ್ನೂ ಒಪ್ಪಿಕೊಂಡೇ ಈ ಅಂಶವನ್ನು ಸೂಚಿಸುತ್ತಿದ್ದೇನೆ. ಈ ಇಂಥ ಭ್ರಮನಿರಸನದ ಸ್ಥಿತಿಯಲ್ಲಿ ಅವರೂ ತಮ್ಮ ಕಾವ್ಯಯಾನದ ದಿಕ್ಕನ್ನು ಮತ್ತೆ ಬದಲಿಸಿಕೊಳ್ಳುತ್ತಾರೆ.

ಗಾಳಿ ಬಯಲುಗಳನ್ನೆ ಸೀಳುತ್ತ ನಿನ್ನ ಕಡೆ ಧಾವಿಸಿದೆ
ನಿನ್ನ ಮುಖಮಂಡಲದ ಸೆಳೆತದೊಳಕ್ಕೆ
ಹೇಗೋ ನುಗ್ಗಿದೆ
ನುಗ್ಗಿದರೆ ನಾನು ಕಂಡದ್ದೇನು-
ದೂರದಿಂದಲೇ ನನ್ನನ್ನು ತಾರಮ್ಯ್ಯ ಆಡಿಸಿದ ನೀನು
ಒಂದು ಮಹಾ ಮರುಭೂಮಿ
...........
ಬೇಡ ಬೇಡ ನಿನ್ನಾಸೆ ನನಗೆ
ಹೋಗುತ್ತೇನೆ ಹಿಂದಕ್ಕೆ
ಆ ಅವಳ ಸೆಳೆತಕ್ಕೆ
..................
ನಾನು ಇದ್ದಲ್ಲೇ ಪರಮಸುಖಿ

('ಚಂದ್ರಮುಖಿಗೆ' ಸಮಗ್ರ ಕಾವ್ಯ, ಪು. 383)

ಈ ಸಾಲುಗಳು ಕವಿ ತಮಗೆ ಪ್ರಿಯವಾದ ಅಭಿವ್ಯಕ್ತಿ ಕ್ರಮದೆಡೆಗೆ ಮತ್ತೆ ಹೊರಳುತ್ತಿರುವುದರ ಸುಳುಹನ್ನು ಕೊಡುತ್ತವೆ.

ಹೀಗಾಗಿ "ಶತಮಾನಗಳ ಕತ್ತಲನ್ನೊಡೆದು ಮೆತ್ತಗೆ ತಲೆಯೆತ್ತುವ ಮೊಳಕೆ" (ಸಮಗ್ರ ಕಾವ್ಯ ಪು. 453) ಗಳತ್ತ ಕವಿಯ ಪ್ರೇಮಾರ್ದ್ರವಾದ, ಸ್ನೇಹಸ್ನಿಗ್ಧವಾದ ಮಮತೆ ಹರಿಯುತ್ತದೆ. ಅದರೊಂದಿಗೆ ಸೃಷ್ಟಿಕ್ರಿಯೆಯ ಮೂಲವನ್ನು ಹುಡುಕಿ ಕಾವ್ಯದಲ್ಲಿ ಹಿಡಿದಿಡುವ ಹುಮ್ಮಸ್ಸು ಗರಿಮೂಡಿಸಿಕೊಳ್ಳುತ್ತದೆ. ಈ ಸುಮಧುರ ಯಾತನೆಗೆ ಸ್ಪಂದಿಸುವ ಅವರು,

ಹೊಸ ವರ್ಷದಲ್ಲಿ ಮರ ಚಿಗುರಿದಾಗ
ನೋಡುವುದಕ್ಕೆ ತುಂಬ ಹಗುರಾಗಿ ಕಂಡರೂ
ಆಗಿರುವ ಕೆಲಸ ಸುಲಭದ್ದಲ್ಲ
ಮೊದಲು ಇದ್ದುದನ್ನೆಲ್ಲ ಬುಡಮಟ್ಟ
ಕಿತ್ತು ಎಸೆಯುವುದು
ಮತ್ತೆ ಒಳಗಿನಿಂದ ಮೂಲಾಧಾರ ಒತ್ತಿಕೊಂಡು
ಒಡಮೂಡುವುದು ತುಂಬ ನೋವಿನ ಕೆಲಸ

('ಹೊಸ ವರ್ಷದಲ್ಲಿ' ಸಮಗ್ರ ಕಾವ್ಯ, ಪು. 455)

ಇದು ಸೃಷ್ಟಿಯ ಬೆನ್ನಿಗೇ ಇರುವ ನೋವು. ಅದನ್ನು ತೀವ್ರವಾಗಿ ಅನುಭವಿಸದ ಹೊಸತು ಹೊರಬರಲಾರದು. ಹಾಗಾಗಿಯೇ ಈ ಒತ್ತಡ ಮತ್ತು ಅದರಿಂದ ಬಿಡುಗಡೆ ಪಡೆಯುವ ಪ್ರಯತ್ನದಲ್ಲಿ ರೂಪತಾಳುವ ಹೊಸ ಶಿಶುಗಳೆರಡೂ ಜೀವಜಗತ್ತಿನ ಸಾತತ್ಯದ ಕೊಂಡಿಗಳೇ. ಹಾಗಾಗಿಯೇ—

**ಸೃಷ್ಟಿ ಎಂದರೆ ಹೇರುವ, ಹೆರುವ**
**ಅಸ್ತಿತ್ವವನ್ನೆ ಕೊರೆದು ಹೊರ ಬರುವ**
**ಹೂಟ**
**ನಿತ್ಯವೂ ಹೊಸತಾಗುವುದಕ್ಕೆ**
**ನಿಸರ್ಗ ಕಟ್ಟಿದ ಆಟ!** (ಅದೇ)

ಎನ್ನುತ್ತಾರೆ, ಅವರು. ಈ ನೆಲೆಯ ಕೆಲವು ಕವನಗಳು ಕವಿಯ ಶೋಧಕ್ರಮದ ಬೇರೆಯೇ ಆಯಾಮಗಳನ್ನು ಪರಿಚಯಿಸುತ್ತವೆ. ಇದು ಒಂದು ಘಟ್ಟದಲ್ಲಿ ಸಮಷ್ಟಿ ಚಿಂತನೆ ಮತ್ತು ವ್ಯಕ್ತಿ ಸಾಪೇಕ್ಷ ಸಂವೇದನೆಗಳು ಬೆಸೆಯುವ ಬಿಂದುವಿನ ಹುಡುಕಾಟವೇನೋ ಎನಿಸುತ್ತದೆ. 'ಹಲವು ಕೊಂಬೆಗಳ ಚಾಚಿಕೊಂಡರೂ ಮರಕ್ಕೆ ಬುಡ ಒಂದೇ' ಎನ್ನುವ, ವೇದಾಂತ ಶರಣವಾದ ಕವನಗಳೂ ಅಲ್ಲೊಮ್ಮೆ ಇಲ್ಲೊಮ್ಮೆ ಕಾಣಿಸುತ್ತವೆ. ಈ ಬಾಧ್ಯತೆಯಿಂದಲೂ, ಮೃದುವಾಗಿ ತಮ್ಮನ್ನು ಬಿಡಿಸಿಕೊಳ್ಳುವ ಕವಿ, ನಿರಾಕಾರಗಳ ನಡುವಿನ ತಮ್ಮ ಆಕಾರವನ್ನು ಸ್ಪಷ್ಟವಾಗಿ ಗುರುತಿಸುತ್ತಾರೆ.

**ನಾನು ಕೂತಿದ್ದೇನೆ, ಈ ನಡುವೆ**
**ಆಕಾರವಾಗಿ**
**ಉಸಿರಾಡುತ್ತ, ಇದನ್ನೆಲ್ಲ ನೋಡುತ್ತ**
**ನನಗು-ಅವರಿಗು ನಡುವೆ**
**ವ್ಯತ್ಯಾಸವೇನೆಂದು ಚಿಂತಿಸುತ್ತ**
**ಒಳಗು-ಹೊರಗಿನ ಗೆರೆಯ ಗುರುತಿಸುತ್ತ**

('ಗೆರೆ' ಸಮಗ್ರ ಕಾವ್ಯ, ಪು. 465)

ಈ ದಿಸೆಯಲ್ಲಿ ಸಾಕಷ್ಟು ದೂರ ಸಾಗುವ ಜಿಎಸ್‌ಎಸ್ ತಮ್ಮ ಪ್ರತ್ಯೇಕತೆಯನ್ನೂ, ಅನನ್ಯತೆಯ ಅನ್ವೇಷಣೆಯನ್ನೂ ಅವಧಾರಣೆಯೊಂದಿಗೆ ವ್ಯಕ್ತಪಡಿಸುತ್ತಾರೆ. ಇಂಥ ತಳಮಳವನ್ನು ಅಳಿಸಿಕೊಂಡ, ಸೌಹಾರ್ದವು ಆಪ್ಯಾಯಮಾನವಾಗುತ್ತದೆ.

ಸಿದ್ಧವಸ್ತುವಿನ ಮೂಲಶಿಲ್ಪವನ್ನು ಬೇರೆಯೇ ಒಂದು ಕೋನದಿಂದ ನೋಡಿ ಆ ನೋಟ ಕಾಣಿಸಿದ ಹೊಸಕೃತಿಯನ್ನು ಲೋಕಕ್ಕೆ ಪರಿಚಯಿಸುವುದು ಶಿವರುದ್ರಪ್ಪನವರಿಗೆ ತುಂಬ ಇಷ್ಟವಾದ ಪರಿಕ್ರಮ. ಅಂಬಿಕಾತನಯದತ್ತರು ಗಂಗೆಯ ಅವತರಣವನ್ನು "ಅವತಾರವೆಂದೆ ಎಂದಾರೆ ತಾಯಿ ಈ ಅಧಃಪಾತವನ್ನೆ" ಎಂದು ಸಹಾನುಭೂತಿಯಿಂದ ನೋಡಿದರೆ, ಸ್ಥೂಲದೃಷ್ಟಿಗೆ ಪತನವೆನ್ನಿಸುವ ಕ್ರಮವನ್ನೂ ಪ್ರಗತಿಯ ಮೆಟ್ಟಿಲಾಗಿ ಕಾಣುತ್ತಾರೆ,

ಶಿವರುದ್ರಪ್ಪನವರು. ಅವರು ಸೋಲಿನ ಪರಂಪರೆಯನ್ನೂ ಆತ್ಮಬಲವರ್ಧಕ ಸಾಮಗ್ರಿಯಾಗಿ, ವ್ಯಕ್ತಿತ್ವವನ್ನು ಕಡೆಯುವ ಬಾಣದ ಏಟಾಗಿ ಗುರುತಿಸಿಕೊಳ್ಳುವ ಮನೋಭಾವವನ್ನು ನೆಚ್ಚಿಕೊಂಡವರು.

ಪಾಶ್ಚಾತ್ಯ ಪೌರಾಣಿಕ ಪ್ರತಿಮೆಗಳಾದ ಆಡಂ-ಈವರ ಕಥೆಗೆ ಅವರು ಕೊಡುವ ತಿರುವು ಈ ಪರಿಣಾಮವನ್ನು ಹೇಗೆ ಸಾಧಿಸಿದೆ ನೋಡಿ: 'ಜ್ಞಾನವೃಕ್ಷದ ಹಣ್ಣನ್ನು ತಿನ್ನಬೇಡಿ' ಎಂದ ದೇವರ ಆದೇಶಕ್ಕೆ "ಮನುಷ್ಯರಿಗೆ ಜ್ಞಾನವೆಂಬುದು ಅತ್ಯಮೂಲ್ಯವೆಂಬ ವಿಚಾರ ದೇವರಿಗೆ ತಿಳಿಯದುದೇನಲ್ಲ. ಜ್ಞಾನಫಲವನ್ನು ತಿನ್ನಬೇಡಿ ಎಂದರೆ ಮನುಷ್ಯರು ಸದಾ ಅಜ್ಞಾನದಲ್ಲೇ ಇರಬೇಕು ಎಂದಾಗಿರಲಾರದು" ಎನ್ನುವ ಪುನಾವ್ಯಾಖ್ಯಾನವನ್ನು ಅವರು ಪ್ರಸ್ತುತ ಪಡಿಸುತ್ತಾರೆ; ತಮ್ಮ ಹೊಸ ನಿಲುವಿಗೆ

**...... ಆ ನಿಷಿದ್ಧ ಫಲವನು**
**ಅವರಿಬ್ಬರು ತಿಂದು ಅಲ್ಲಿಂದುಚ್ಚಾಟನೆಗೊಂಡರು**
**'ಮೊಟ್ಟಮೊದಲ ಅವಿಧೇಯತೆ'ಯಿಂದ ಮನುಷ್ಯತ್ವಕೆ**
**ಕ್ರಿಯಾಶೀಲ ಧೈರ್ಯಮೂಡಿ ಸ್ಫೂರ್ತಿಯಾಯ್ತು ಪ್ರಗತಿಗೆ**

('ಒಂದು ಹಳೆಯಕತೆ' ವ್ಯಕ್ತಮಧ್ಯ, ಪು. 23)

ಎಂದು ಅಭಿವ್ಯಕ್ತಿ ನೀಡಿದ್ದಾರೆ.

ಈ ವಿಧಾನವನ್ನು ಅವರು ಹಿಂದೆಯೂ ಬಳಸಿಕೊಂಡಿದ್ದಾರೆ. ಅವರು ಚಿತ್ರಿಸುವ ಮನು, ಜಗತ್ತೆಲ್ಲವನ್ನೂ ಪ್ರಳಯ ಕಬಳಿಸಲೆಂದು ಹಿಂದೆ ಬಿಟ್ಟು ಮಹಾಮತ್ಸ್ಯವನ್ನು ಆಶ್ರಯಿಸಿದ ಮನುವಲ್ಲ; ಬದಲಿಗೆ,

**......... ನಾನೊಲ್ಲೆ**
**ಇರುವ ಈ ಎಲ್ಲವನು ನಿರ್ನಾಮಗೊಳಿಸಿ**
**ನಾಳಿನ ದಿವಸ ನಾನು ನನ್ನ ಪರಿವಾರ**
**ಉಳಿದು ಬದುಕುವ ಭಾಗ್ಯ ನನಗೆ ಬೇಡ**
**ನೀ ವರ್ಣಿಸಿದ ವಾಸ್ತವದ ಒಂದಂಶ**
**ನಾನೂ ಕೂಡಾ.**

**ಕೊಚ್ಚಲಿ ಬಿಡು ನನ್ನನ್ನೂ ಸೇರಿಸಿಕೊಂಡು**
**ಈ ಮಹಾಪ್ರವಾಹ**
**ನನಗಿಲ್ಲ ನಾನೊಬ್ಬನೇ ಬದುಕುವ ದಾಹ**
**ನಾಳೆ ಬೆಳೆದೀತು ಹೊಸ ಮಣ್ಣಿನಲ್ಲಿ ಬೇರೂರಿ**
**ನನ್ನಲ್ಲಿರುವ ಒಳ್ಳಿತೇನಾದರೂ**
**ಕೊಂಬೆ ರೆಂಬೆಗೆ ಪುಟಿದು ಹೊಸ ಹೂವು-ಚಿಗುರು**

('ಹೊಸ ಹುಟ್ಟು', ಸಮಗ್ರ ಕಾವ್ಯ, ಪು. 481)

ಎಂದು ಕೈಮುಗಿದು ಬೇಡುವ ಮನು; ನಾಶದ ಒಡಲಿನಲ್ಲಿಯೇ ಹೊಸಹುಟ್ಟಿನ ಬೀಜ ಹುದುಗಿರುವುದನ್ನು ಕಾಣುವ ಮನು. ಜಗತ್ತಿನ ಬಗೆಗೆ ನಿಜವಾದ ಅಂತಃಕರಣವಿದ್ದಾಗ ಮಾತ್ರ ಇಂಥ ಜೀವಪ್ರೀತಿ, ಔದರ್ಯ, ನಿಸ್ವಾರ್ಥಗಳ ಸೆಲೆ ಉಕ್ಕುತ್ತದೆ; ಕಾವ್ಯವನ್ನು ಕಾಲ-ದೇಶಗಳ ಸೀಮೆಯಿಂದ ಮುಕ್ತಗೊಳಿಸುತ್ತದೆ.

ಹಲವು ಸಂದರ್ಭಗಳಲ್ಲಿ ಅವರು ಏಕನಾದವನ್ನು ಮುರಿಯುವ, ಹೊಸ ಸ್ವರ ಸಂಯೋಜನೆಗಳಿಗೆ ಕೈ ಹಚ್ಚುವ ಬಗೆಯನ್ನು ಗುರುತಿಸಬಹುದು. ಆಗೆಲ್ಲ ಅವರು ಮೂರ್ತ-ಅಮೂರ್ತಗಳ ಪರಿವೆಯನ್ನಾಗಲಿ, ಆದರ್ಶ-ವಾಸ್ತವಗಳ ಗೊಡವೆಯನ್ನಾಗಲಿ, ಪದ್ಯ ಬಂಧಗಳ ಹಂಗನ್ನಾಗಲಿ ಇಟ್ಟುಕೊಳ್ಳದೆ ತಾವು ಒಲಿದಂತೆ ಬರೆದವರು.

ಶಿವರುದ್ರಪ್ಪನವರು, 'ಮೌನಧ್ವನಿ'ಯನ್ನು ದುಡಿಸಿಕೊಂಡ ರೀತಿಯನ್ನು ಇಲ್ಲಿ ವಿಶೇಷವಾಗಿ ಉಲ್ಲೇಖಿಸಬೇಕು. ಕಾವ್ಯಮೀಮಾಂಸೆಯನ್ನು ಬಹಳ ಶ್ರದ್ಧೆಯಿಂದ ಮಾಡಿದ ಅವರಿಗೆ ಈ ಸಾಮರ್ಥ್ಯ ಸಹಜವೇ. ಬದುಕಿನ ಸೂಕ್ಷ್ಮಾತಿಸೂಕ್ಷ್ಮ ಸಂವೇದನೆಗಳನ್ನು—ಏನನ್ನು ಹೇಳದೆಯೂ—ದಾಟಿಸುವ ಕೌಶಲಕ್ಕೆ ಅವರ ಕಾವ್ಯದಲ್ಲಿ ಬರಗಾಲವಿಲ್ಲ. ಕವನದಲ್ಲಿ ಉಲ್ಲೇಖವೇ ಇಲ್ಲದ ಯಾವ ಯಾವುದಕ್ಕೋ ಭಾವಕೋಶದಲ್ಲಿ ಅವಕಾಶ ನೀಡುವಂಥ ಈ ಕ್ರಮವು ಅವರ ವೈಶಿಷ್ಟ್ಯಗಳಲ್ಲಿ ಒಂದಾಗಿದೆ.

ಕಳೆದ ಕಾಲದ ನೆನಪುಗಳನ್ನೇ ಸಂಕೇತವಾಗಿ ಬಳಸಿಕೊಳ್ಳುತ್ತ ಸ್ಪಷ್ಟಾಸ್ಪಷ್ಟ ಕಲ್ಪನೆಗಳ ಒಡ್ಡು ಸರಿಸುವ ಸಾಲುಗಳೂ ಅವರ ಕಾವ್ಯದಲ್ಲಿ ಅಪೂರ್ವವಲ್ಲ.

**ನನ್ನ ಬಾಲ್ಯದ ನೆನಪಿನೊಳಗಿನ್ನೂ ಥಳಥಳಿ**
**ಸುತ್ತಿವೆ ಹೊಚ್ಚ ಹೊಂಬಿಸಿಲಲ್ಲಿ ಗರಿಗೆದರಿ**
**ಈಗಲೋ ಆಗಲೋ ಹಾರಿ ಹೋಗಲೆಂದನು**
**ವಾದ ಅಸಂಖ್ಯ ಒಂಟಿಕಾಲಿನ ಪಕ್ಷಿಯಂತಿ-**
**ರುವ ತೆಂಗಿನ ಮರದ ವಿಸ್ತಾರ. ಈ ನೆಲದಾಳ**
**ಗಳಲ್ಲಿ ಬೇರೂರಿ, ವ್ಯಕ್ತಮಧ್ಯದೊಳ-**
**ಗೆಲ್ಲೊ ಥಟ್ಟನೆ ಅರಳಿ ನೆಲ ಮುಗಿಲಿಗೂ ನಡುವೆ**
**ನಿಂತ ಈ ಒಂದೊಂದೂ ಜೀವಂತ ಕವಿತೆಗಳೆ.**

('ಕವಿತೆ ಕಂಡದ್ದು ಹೀಗೆ' ವ್ಯಕ್ತಮಧ್ಯ, ಪು. 5)

'ವ್ಯಕ್ತಮಧ್ಯ'ದಂಥ ಪ್ರಿಯವಾದ ಪದಗುಚ್ಛಗಳನ್ನು ಸಂದರ್ಭಕ್ಕೆ ತಕ್ಕಂತೆ ಮಣಿಸುವ ಈ ಶಕ್ತಿ ಕಾವ್ಯದ ಸಾಧ್ಯತೆಗಳನ್ನು ವಿಸ್ತರಿಸುತ್ತದೆ.

'ಚಿತ್ತದ ಹುತ್ತ ಕಟ್ಟುವಿಕೆ' ಯಂತೆಯೇ 'ಆರೋಗ್ಯಕರ ಅಸ್ವಾಸ್ಥ್ಯ'ವನ್ನೂ ಜೀವನದ ಸ್ವಾಸ್ಥ್ಯಕ್ಕೆ ಅನಿವಾರ್ಯವೆನ್ನುವ ಅಂತರ್ವಿರೋಧಿ ಸ್ಥಿತಿಯನ್ನು ಅವರು ಅತ್ಯಂತ ಕಾಳಜಿಯಿಂದ ನಿಭಾಯಿಸುತ್ತಾರೆ.

ಆತ್ಮ ವೃತ್ತಾಂತವನ್ನೂ ಕವಿತೆಯ ಮಾಧ್ಯಮದ ಮೂಲಕ ಸಂವಹಿಸಬಹುದೆಂದು ಕವಿ ತೋರಿಸಿಕೊಟ್ಟಿದ್ದಾರೆ.

ದತ್ತವಾಗಿದೆ ಮತ್ತೆ ವ್ಯಕ್ತಮಧ್ಯದ ಬದುಕು
ಮೊದಲಿಗಿಂತಲೂ ಹೊಸತಾಗಿ ಕಂಡಿದೆ ಲೋಕ
ಈವರೆಗೂ ಮಹಾವಿಸ್ಮೃತಿಯಲ್ಲಿ ಕರಗಿ ಹೊರಬಂದ
ಅಸ್ತಿತ್ವಕ್ಕೆ ಎಲ್ಲವನ್ನೂ ತಬ್ಬಿಕೊಳ್ಳುವ ತವಕ.

('ಅವಸ್ಥೆ' ವ್ಯಕ್ತಮಧ್ಯ ಪು. 51)

ಈ 'ಮಹಾವಿಸ್ಮೃತಿ'ಯು ಮೇರೆ ತಿಳಿಯದ ಹುಟ್ಟಿನ ಮೊದಲಿನ ಅವಸ್ಥೆಯಾಗಿರಲೂ ಬಹುದು. ಅರಿವಳಿಕೆಯ ಸೂಜಿಮೊನೆಯ ಸ್ಪರ್ಶದ ಅನಂತರದ ತಾತ್ಕಾಲಿಕ ಸ್ಥಿತಿಯೂ ಆಗಬಹುದು. ಎರಡೂ ಅಗೋಚರಗಳ ಬಳಿಕ ಎಳೆಎಳೆಯಾಗಿ ರೂಪುಪಡೆಯುವ ಬಾಹ್ಯ-ಆಂತರಿಕ ಜಗತ್ತುಗಳನ್ನು ಪರಿಚಯಿಸಿಕೊಳ್ಳುವುದು ಮಾತ್ರ ಅನನ್ಯವಾದ ಅನುಭವ. ಇದನ್ನು 'ಕರಗಿ ಹೊರಬಂದ' ಹೊಸ ಸ್ವರೂಪವನ್ನು ಧರಿಸಿದ ಕ್ರಿಯೆಯಾಗಿ ಗುರುತಿಸುವ ಬಗೆಯೂ ವಿಭಿನ್ನವಾದುದೇ ಆಗಿದೆ.

ಅನುಭಾವದ ಅಂಚನ್ನು ಸವರುವ

ಲಕ್ಷ ನಕ್ಷತ್ರ ನೀಹಾರಿಕಾ ನಭದ
ರಾಸಲೀಲೆಯೊಳಿದ್ದೆ
......
ಗಿರಗಿರನೆ ತಿರುಗಿತ್ತು ಅಗ್ನಿಗೋಳದ ಬುಗುರಿ
ಶೂನ್ಯಸಿಂಹಾಸನದ ಜ್ಯೋತಿಲಿಂಗ!
ಜಡೆಯ ಜ್ವಾಲೆಗೆ ಬೆದರಿ ಮತ್ತೊಮ್ಮೆ ಸ್ಪಂದಿಸಿತು
ಈ ವಿಶ್ವರಂಗ!
ಯುಗಯುಗವನೊಂದೊಂದೆ ಬೊಗಸೆಯಲಿ ಮುಕ್ಕಳಿಸಿ
ಸಾಗಿತ್ತು ನಟರಾಜನಗ್ನಿ ನೃತ್ಯ

('ಹುಟ್ಟಿದ ಹಬ್ಬ' ಸಮಗ್ರ ಕಾವ್ಯ, ಪು. 163)

ಅಥವಾ ತೀರಾ ಇತ್ತೀಚೆಗಿನ

ಎಲ್ಲವನ್ನೂ ತೊರೆದು ಎಲೆ ಕಳಚಿ ಉಲು
ಹಡಗಿ, ಹರತೊಟ್ಟು ಕೂತ ಮೈ-ಮನದ
ಕೊಂಬೆ ರೆಂಬೆಯ ತುಂಬ ಪಂಚಾಗ್ನಿ
ಪ್ರವಾಹ

('ಸುಜಾತ' ವ್ಯಕ್ತಮದ್ಯ, ಪು. 9)

ಎನ್ನುವಂಥ ನಿಜದ ನೆಲೆಗಳ ಹುಡುಕಾಟದಲ್ಲಿ ಶಬ್ದಶರೀರದಲ್ಲಿ ಹಿಡಿದಿಡಲಾರದ ಅನುಭವವನ್ನು ಹಿಂಬಾಲಿಸುವ ಸ್ವಂತ ಸ್ವರೂಪದ ಕಲ್ಪನೆಯಲ್ಲಿ ಅವರು ಮಗ್ನರಾಗುತ್ತಾರೆ.

ಪುರಾಣ ಪ್ರತಿಮೆಗಳನ್ನು ಆಧುನಿಕ ಪರಿಸರದಲ್ಲಿಟ್ಟು ನೋಡುವ ಪ್ರಯತ್ನವನ್ನೂ ಶಿವರುದ್ರಪ್ಪನವರು ಮಾಡಿದ್ದಾರೆ. ವ್ಯೋಮಕೇಶನ ಧಾರಣ ಶಕ್ತಿಯನ್ನು, ಹಳೆಯ ನೆನಪುಗಳನ್ನೇ ಮತ್ತೆ ಮತ್ತೆ ರುಬ್ಬುವ "ಭೀಮಾಲಾಪ"ವನ್ನು, ಪ್ರತಿಭೆ-ಪಾಂಡಿತ್ಯಗಳ ನಿದರ್ಶನಗಳಾಗಿ ಋತುಪರ್ಣ ಬಾಹುಕರನ್ನು, ನಿಸ್ಸಾರ ಬದುಕಿನ ಸಂಕೇತವಾಗಿ ಓಝಿಮಂಡಿಯಾಸನನ್ನು ಕಾವ್ಯ ಮಾಧ್ಯಮದಲ್ಲಿ ಬಳಸಿಕೊಂಡು, ಅದರ ಮುನ್ನಡೆಯನ್ನವರು ಸಾಧಿಸಿದ್ದಾರೆ.

ಭಾಷೆಯ ದೃಷ್ಟಿಯಿಂದ ಹೇಳುವುದಾದರೆ, ಶುದ್ಧ ಜಾನಪದ ಸತ್ವದ ಗ್ರಾಮ್ಯಭಾಷೆಯ ಸಾಧ್ಯತೆಗಳನ್ನೂ ಅವರು ಪರಿಶೀಲಿಸಿದ್ದಾರೆ. ವಿಡಂಬನೆಯ ಚುರುಕು ಮುಟ್ಟಿಸುವ, ಬಿ.ಎಂ. ಶ್ರೀಯವರು ಪಂಪನ ಬಗೆಗೆ ಮಾಡಿದ ಭಾಷಣವನ್ನು ವಸ್ತುವಾಗಿಟ್ಟುಕೊಂಡಿರುವ 'ಪಂಪೋತ್ಸವ' ಇದಕ್ಕೆ ಒಳ್ಳೆಯ ಉದಾಹರಣೆ. ಅದರ ಕೆಲವು ಸಾಲುಗಳು ಹೀಗಿವೆ:

**ಭಾಳ ಛಲೋ ಮಾತಾಡಿದ್ರಿ ಇಷ್ಟೊತ್ತನಕಾ ನೀವು**
**ಹೊತ್ತೇ ಹೋದದ್ ಗೊತ್ತಾಗ್ಲಿಲ್ಲ ಕರಗ್ಹೋದಿಗ್ವಿ ನಾವು**
**ಪಂಪ ಪಂಪ ಅಂತ ನೀವು ಇಷ್ಟೊತ್ ಬಡ್ಕೊಂಡ್ರೂನು**
**ಒಂದ್ ತೊಟ್ ನೀರೂ ಬರಲಿಲ್ಲಾಂದ್ಮೇಲೆ ಎಂಥಾ ಪಂಪೋ ಏನೋ**

('ಪಂಪೋತ್ಸವ', ವ್ಯಕ್ತಮಧ್ಯ, ಪು. 15)

ಇಂಥ ಭಾಷೆಯ ಪ್ರಯೋಗವನ್ನು ಅವರು ಬೇರೆಡೆಗಳಲ್ಲೂ ಮಾಡಿದ್ದಾರೆ.

ಕಾವ್ಯಬಂಧದಲ್ಲಿ ಅವರು ತರಲು ಪ್ರಯತ್ನಿಸಿದ ಹೊಸತನವು ವಿಶೇಷ ಉಲ್ಲೇಖಕ್ಕೆ ಅರ್ಹವಾಗಿದೆ.

**ದೀಪ ಮುಡಿಸುವ ಮೊದಲು ಕವಿದ ಕತ್ತಲೆಯಲ್ಲಿ ಒಂದೇ ಕೊರಗು**
**ಕತ್ತಲಾಗಿದೆ ಇನ್ನು ಬೆಳಕು ಬೇಕು**
**ದೀಪವಾರಿಸಿದಾಗ ಕವಿದ ಕತ್ತಲಿನಲ್ಲಿ ಒಂದೇ ಬೆರಗು**
**ಇಷ್ಟೊಂದು ದೀಪದ ಬೆಳಕು ಎಲ್ಲಿ ಹೋಯ್ತು!**

('ಎರಡು ಕತ್ತಲ ನಡುವೆ'; ಸಮಗ್ರ ಕಾವ್ಯ, ಪು. 348)

ಇದು ಅವರ ಚುಟುಕಗಳ ಮಾಲಿಕೆಯಲ್ಲಿ ಒಂದು. ಪ್ರಾಯಶಃ ಇದು ತಮ್ಮ ಮಾಧ್ಯಮ ವಲ್ಲವೆಂದವರು ಬದಿಗೆ ಸರಿಸಿದ ಅಭಿವ್ಯಕ್ತಿ ಪ್ರಕಾರ.

ಇತ್ತೀಚೆಗೆ ಅವರು ಹೆಚ್ಚಾಗಿ ಪ್ರಯೋಗ ಮಾಡುತ್ತಿರುವ 'ಮುಕ್ತಬಂಧ' ತೀರಾ ವಿಭಿನ್ನವಾದ ನೆಲೆಯದಾಗಿದೆ. ಅವರ ಮಾತುಗಳನ್ನೇ ಉದ್ಧರಿಸುವುದಾದರೆ

*"ಏಳು ವರ್ಷಗಳ ಹಿಂದೆ (1992) ಪ್ರಕಟವಾದ ನನ್ನ 'ಚಕ್ರಗತಿ' ಎಂಬ ಕವನ ಸಂಗ್ರಹದ ಕವಿತೆಗಳ ಮೂಲಮಾನದಲ್ಲಿ ನಾನು ನಡೆಯಿಸಿದ 'ಪದ್ಯಬಂಧ'ದ ಪ್ರಯೋಗಗಳು, ಈ ಸಂಗ್ರಹದ ಅರ್ಧದಷ್ಟು ಕವಿತೆಗಳಲ್ಲಿ ಇನ್ನಷ್ಟು ವೈವಿಧ್ಯತೆಯಿಂದ ಮುಂದುವರಿದಿವೆ. ಈ ಪ್ರಯೋಗಗಳ ಲಕ್ಷಣ ವೆಂದರೆ, ಇಡೀ ಆಧುನಿಕ ಕನ್ನಡ ಕಾವ್ಯದ ಉದ್ದಕ್ಕೂ ಪರಿಚಿತವಾದ ಹಾಗೂ ಸಮೃದ್ಧವಾದ 'ಚತುಷ್ಪದಿ' ಪದ್ಯಬಂಧವನ್ನು ಅದರ ಚೌಕಟ್ಟನ್ನು ದಾಟಿಸಿ, ಪದ್ಯದಿಂದ ಮುಂದುವರಿಸುವ ಪ್ರಯತ್ನವನ್ನು ಇಲ್ಲಿ ಕಾಣಬಹುದು"*

('ವ್ಯಕ್ತಮಧ್ಯ' ಎರಡು ಮಾತು, ಪು. 5)

'ವ್ಯಕ್ತಮಧ್ಯ' ಸಂಕಲನದ 'ಆರೋಹಣ' ಕವನದ ಈ ಬಂಧವನ್ನು ಗಮನಿಸಿ:

**"....................**
**......ಸ್ವಚ್ಛ ಬಿಳಿ ಹಿಮದ**
**ಮಹಾ ಸಾಮ್ರಾಜ್ಯದೊಳಗಲ್ಲಲ್ಲಿ ಬಂಡಾಯ**
**ವೆದ್ದಿರುವ ವಕ್ರ ಶಿಲಾ ಸಮುಚ್ಚಯದ**

**ಮಧ್ಯೆ ಟಟ್ಲಸ್ ಶಿಖರ ಪರ್ವತ ಪ್ರಾ-**
**ಣವೇ ಶೀತೋಜ್ವಲ ಶ್ವೇತ ಕುಟ್ಮಲ**
**ದಂತೆ ಮೇಲೆದ್ದು, ನಭದ ನೀಲಿಮೆಗೆ**
**ನೈವೇದ್ಯವಾಗುತಿದೆ"**

('ಆರೋಹಣ' ವ್ಯಕ್ತಮಧ್ಯ, ಪು. 47)

ಇಲ್ಲಿ ಹೊಸ ಪ್ರಯೋಗದ ಮೋಹಕ್ಕೆ ಸಿಲುಕಿ ಕಾವ್ಯದ ಕೊಂಡಿ ಕಳಚಿಲ್ಲ. ಭಾವಗಳು ಅಂತರಾಳದಲ್ಲಿ ತಡಕಾಡುತ್ತಿಲ್ಲ. ನದಿಯ ಹರಿವು ಪಾತ್ರದ ಆಕಾರಕ್ಕೆ ತಕ್ಕಂತೆ ತನ್ನ ಮೈಯನ್ನು ಅಳವಡಿಸಿಕೊಳ್ಳುತ್ತಲೇ ಅದನ್ನು ತನಗೆ ಬೇಕಾದಂತೆ ತಿದ್ದಿಕೊಳ್ಳುವ ರೀತಿಯಿದು. ಮಳೆ ನಿಂತ ಮೇಲೂ ತೊಟ್ಟು ತೊಟ್ಟಾಗಿ ಹನಿಯುತ್ತಲೇ ಇರುವ ಸೋಗೆಯ ಮಾಡಿನಂತೆ, ಭಾವವನ್ನು ಜಿನುಗಿಸುತ್ತ, ಅಭಿವ್ಯಕ್ತಿಯನ್ನು ಮಜಲಿನಿಂದ ಮಜಲಿಗೆ ಒಯ್ಯುವ ಈ ಕ್ರಮ ಸ್ವಾಗತಾರ್ಹವೇ ಆಗಿದೆ.

ಕಾವ್ಯ ಮಾಧ್ಯಮದಲ್ಲಿ ಶಿವರುದ್ರಪ್ಪನವರು ನಡೆಸಿದ ಹೊಸತಿನ ಅನ್ವೇಷಣೆಗೆ ಹಲವು ನೆಲೆಗಳಿವೆ. ಕೆಲವು ಸಂದರ್ಭಗಳಲ್ಲಿ ಬಾಹ್ಯಾಲಂಕಾರಗಳ ನಾವೀನ್ಯ, ಹಲವು ಸ್ಥಾನಗಳಲ್ಲಿ ವಿಶಿಷ್ಟ, ವಿಭಿನ್ನ ವರ್ಣಗಳ ಸಂಯೋಜನೆ, ಇನ್ನೂ ಹಲವೆಡೆಗಳಲ್ಲಿ ರೂಪ ಪಲ್ಲಟನ, ಕಾವ್ಯಪ್ರತಿಭೆ ಎಲ್ಲ ತಡೆಗಳನ್ನು ಕೊಡವಿ ಧುಮ್ಮಿಕ್ಕಿದಾಗೆಲ್ಲ ಇಡಿಯ ಶಿಲ್ಪವನ್ನೇ ಬಿಡಿಸಿ ಮತ್ತೆ ಹೊಸತಾಗಿ ಕಟ್ಟುವ ಕಾರ್ಯ, ಆಗೊಮ್ಮೆ ಈಗೊಮ್ಮೆ ಗಣಿಯಿಂದಗೆದು ತೆಗೆದ ಮೂಲದ್ರವ್ಯವನ್ನು ಸಂಸ್ಕರಿಸುವ, ತಿಕ್ಕುವ, ತೀಡುವ, ಹೊಳಪು ಕೊಡುವ, ಹೊಸ

ರೂಪವನ್ನು ಕಡೆಯುವ ಸಾರ್ಥಕ ಕ್ಷಣಗಳಿಗೆಲ್ಲ ಆಸರೆ ನೀಡಿದ ಔದಾರ್ಯ, ಶಿವರುದ್ರಪ್ಪನವರ ಕಾವ್ಯದ್ದಾಗಿದೆ.

ಈ ಲೇಖನದ ಸೀಮಿತ ಅವಕಾಶದೊಳಗೆ ಶಿವರುದ್ರಪ್ಪನವರ ಕಾವ್ಯವಲ್ಲರಿಯ ಕೆಲವೇ ಸ್ಫುರಣಗಳನ್ನು ಪರಿಚಯಿಸುವುದು ಸಾಧ್ಯವಾಗಿದೆ. ಅವರ ಕಾವ್ಯ ಬಹಳಷ್ಟು ಅಧ್ಯಯನಗಳಿಗೆ ಈಗಾಗಲೇ ತನ್ನನ್ನು ಒಡ್ಡಿಕೊಂಡಿದೆ. ಅವರ ಪ್ರಯೋಗಶೀಲತೆಯೊಂದಿಗೆ ಸಂವಾದದಲ್ಲಿ ತೊಡಗುವ ಅದರ ಹಲವು ಮಗ್ಗುಲುಗಳಿನ್ನೂ ಅಪ್ರಕಟಿತವಾಗಿಯೇ ಇವೆ. ಜ್ಞಾನ ಜಗತ್ತಿಗೆ ಪ್ರವೇಶ ಪಡೆಯುವುದಕ್ಕಾಗಿ ಕಾದಿವೆ.



# ಜಿಎಸ್ಎಸ್ ಅವರ ಕಾವ್ಯದ ಸಾಮಾಜಿಕ ಆಯಾಮಗಳು

ಡಿ. ಎಸ್. ನಾಗಭೂಷಣ

**ಒ**ಬ್ಬ ಕವಿ ತನ್ನ ಇಡೀ ಜೀವಮಾನದಲ್ಲಿ ಬರೆಯುವ ಕವಿತೆ ಒಂದೇ ಎಂಬ ಮಾತಿದೆ. ಅಂದರೆ ಆತ ಎಷ್ಟೆಲ್ಲ ಕವಿತೆಗಳನ್ನು ಬರೆದರೂ ಅವೆಲ್ಲವೂ ಸೇರಿ ಒಂದು ಕವಿತೆಯಾಗಲು ಹವಣಿಸುತ್ತಿರುತ್ತವೆ. ಅಥವಾ ಆತನ ಪ್ರತಿಯೊಂದು ಕವಿತೆಗೂ ಆತ ಬರೆಯಬೇಕೆಂದು ಬಯಸಿಯೂ ಬರೆಯಲಾಗದಿರುವ ಒಂದು ಮಹಾ ಕವಿತೆಯ ಅಭ್ಯಾಸ ಅಥವಾ ತಿದ್ದತಿಗಳಂತಿರುತ್ತವೆ. ಈ ಮಾತನ್ನು ಇಂದು ಸನ್ಮಾನಿತರಾಗುತ್ತಿರುವ ಕವಿ ಜಿ.ಎಸ್. ಶಿವರುದ್ರಪ್ಪನವರಿಗೆ ಅನ್ವಯಿಸಿ ನೋಡಿದಾಗ ನಾವು ಕಾಣುವುದು ಅವರ ಮೊದಲ ಕವನ ಸಂಕಲನ 'ಸಾಮಗಾನ'ದ ಕವಿತೆಗಳೇ ಈಗ, ಇನ್ನೂ ಪ್ರಕಟವಾಗಬೇಕಾದ ಅವರ ಹದಿಮೂರನೇ ಸಂಕಲನದ ಕವನಗಳಲ್ಲಿ ಜನ್ಮಾಂತರ ಪಡೆಯುತ್ತಿರುವ ವಿಸ್ಮಯವನ್ನು.

1997, ಜಿಎಸ್ಎಸ್ ಅವರ ಕಾವ್ಯಕರ್ಮದ 50ನೇ ವರ್ಷ. ನಾನು ಕಾವ್ಯ ಕರ್ಮ ಎಂದೆ; ಕಾವ್ಯತಪಸ್ಸು ಎನ್ನಲಿಲ್ಲ. ಕಾವ್ಯವನ್ನು ತಪಸ್ಸು ಎಂದೇ ಬಗೆದಂತೆ ಪದ್ಯ ಬರೆಯುತ್ತಿದ್ದ ಕುವೆಂಪು ಅವರ ಪ್ರಿಯ ಶಿಷ್ಯರಾಗಿಯೂ, ಅವರಂತೆಯೇ ಅದ್ವೈತ ತತ್ವ ದೃಷ್ಟಿಕೋನದ ಪದ್ಯಗಳೊಡನೆಯೇ ಕಾವ್ಯ ರಚನೆ ಆರಂಭಿಸಿದರೂ ಜಿಎಸ್ಎಸ್ ಅವರು ಕುವೆಂಪು ಅವರಂತೆ ಕಾವ್ಯದ ಎಲ್ಲ ರಸಗಳನ್ನು ಆತ್ಯಂತಿಕವಾಗಿ ಅಧ್ಯಾತ್ಮದ ಮೂಸೆಯಲ್ಲಿ ಕರಗಿಸಿ ಅರ್ಥ ಹೊಳೆಸುವ ರಸಋಷಿಯಾಗಲು ನಿರಾಕರಿಸಿದವರು. ನಿರಾಕರಿಸಿದವರು ಎನ್ನುವುದಕ್ಕಿಂತ ಕಾವ್ಯಲೋಕದ ಹೊಸ ರೀತಿಯ ಒತ್ತಡಗಳಿಗೆ ಒಡ್ಡಿಕೊಂಡವರು ಎನ್ನಬಹುದೇನೋ.... ಏಕೆಂದರೆ ಕುವೆಂಪು ಪ್ರಧಾನವಾಗಿ ಸ್ವಾತಂತ್ರ್ಯಪೂರ್ವದ ಕವಿಯಾದರೆ ಜಿಎಸ್ಎಸ್ ಸ್ವತಂತ್ರ ಭಾರತದ ಕವಿ. ಅವರು ಎದುರಿಸಬೇಕಾಗಿ ಬಂದ ಹೊಸ ರೀತಿಯ ಒತ್ತಡಗಳು ಸ್ವಾತಂತ್ರ್ಯೋತ್ತರ ಭಾರತದ ಸಾಮಾಜಿಕ ಜೀವನದಲ್ಲಿ ಉಂಟಾದ ಹೊಸನಿರೀಕ್ಷೆ, ಆಶಯ, ಆತ್ಮವಿಮರ್ಶೆ, ಸಿನಿಕತೆ, ವಿಷಾದ-ಹತಾಶೆಗಳ ಕಂಪನಗಳಿಂದುಂಟಾದ ಒತ್ತಡಗಳು. ಅದಕ್ಕೇ ಇವರದ್ದು **ಕಾವ್ಯಕರ್ಮ**. ಇವರ ಮೊದಲ ಸಂಕಲನ 'ಸಾಮಗಾನ'ದ (1951) ಕೊನೆಯ ಪದ್ಯಗಳನ್ನು ಬರೆಯುವ ಹೊತ್ತಿಗೇ 'ಎಲ್ಲ ಕೇಳಲಿ ಎಂದು ನಾನು ಹಾಡುವುದಿಲ್ಲ; ಹಾಡುವುದು ಅನಿವಾರ್ಯ ಕರ್ಮ ನನಗೆ' ಎಂಬ ಅರಿವೂ ಇವರಿಗೆ ಉಂಟಾಗಿರುವುದನ್ನು ನಾವು ಗಮನಿಸಬೇಕು. ಅಂದರೆ ಕವಿಗೆ ಕಾವ್ಯ ತನ್ನ ವ್ಯಕ್ತಿತ್ವದ ಅವಿಭಾಜ್ಯ ಅಂಗ; ತಾನು

ಹಾಡದೆ ತನ್ನ ವ್ಯಕ್ತಿತ್ವವನ್ನು ಬೆಳಗಿಸಲಾಗದು ಎಂಬ ಮನವರಿಕೆ ಉಂಟಾಗಿದೆ. ಆದರೆ ಇದೇ ಕವಿ, ಇವರ ಕಾವ್ಯಜೀವನದ ನಿರ್ಣಾಯಕ ಘಟ್ಟವನ್ನು ಪ್ರತಿನಿಧಿಸುವರೆಂದು ಭಾವಿಸಬಹುದಾದ 'ಪ್ರೀತಿ ಇಲ್ಲದ ಮೇಲೆ' (1987) ಎಂಬ ತಮ್ಮ ಹತ್ತನೇ ಕವನಸಂಕಲನದ ಹೊತ್ತಿಗೆ 'ಯಾವ ಹಾಡ ಹಾಡಲಿ? ಯಾವ ಹಾಡಿನಿಂದ ನಿಮಗೆ ನೆಮ್ಮದಿಯನು ನೀಡಲಿ?' ಎಂಬ ಪ್ರಶ್ನೆ ಕೇಳುವಂತಹ ದಟ್ಟ ವಿಷಾದಕ್ಕೆ ಒಳಗಾಗಿದ್ದಾರೆ:

**ಸುತ್ತಮುತ್ತ ಮನೆಮಠಗಳು**
**ಹೊತ್ತಿಕೊಂಡು ಉರಿಯುವಲ್ಲಿ**
**ಸೋತು ಮೂಕವಾದ ಬದುಕು**
**ನಿಟ್ಟುಸಿರೊಳು ತೇಲುವಲ್ಲಿ**
**ಯಾವ ಹಾಡ ಹಾಡಲಿ?**
**ಉರಿವ ಕಣ್ಣ ಚಿತೆಗಳಲ್ಲಿ**
**ಇರುವ ಕನಸು ಸೀಯುವಲ್ಲಿ**
**ಎದೆ ಎದೆಗಳ ಜ್ವಾಲಾಮುಖಿ**
**ಹೊಗೆ ಬೆಂಕಿ ಕಾರುವಲ್ಲಿ**
**ಯಾವ ಹಾಡ ಹಾಡಲಿ?**
**ಬೆಳಕಿಲ್ಲದ ದಾರಿಯಲ್ಲಿ**
**ಪಾಳುಗುಡಿಯ ಸಾಲಿನಲ್ಲಿ**
**ಬಿರುಗಾಳಿಯ ಬೀಡಿನಲ್ಲಿ**
**ಕುರುಡು ಪಯಣ ಸಾಗುವಲ್ಲಿ**
**ಯಾವ ಹಾಡ ಹಾಡಲಿ?**

—ಎಂಬ ಎಡೆಬಿಡದೆ ಕಾಡುವ ಪ್ರಶ್ನೆಯ ಬೇಗೆಯಲ್ಲಿ ಕವಿ ತಮ್ಮ ಕಾವ್ಯ ಕರ್ಮದ ಅಂತಿಮ ಬಿಕ್ಕಟ್ಟಿನ ಸೂಚನೆ ನೀಡುತ್ತಾರೆ. 'ಕೇಳುವವರಿಹರೆಂದು ನಾ ಬಲ್ಲೆನದರಿಂದ ಹಾಡುವೆನು ಮೈದುಂಬಿ ಎಂದಿನಂತೆ। ಯಾರು ಕಿವಿ ಮುಚ್ಚಿದರು ನನಗಿಲ್ಲ ಚಿಂತೆ' ಎಂಬ ಆತ್ಮವಿಶ್ವಾಸ ದೊಡನೆ ಹಾಡತೊಡಗಿದ್ದ ಕವಿ ಇಂತಹ ಬಿಕ್ಕಟ್ಟಿಗೆ ಎದುರಾದುದಾದರೂ ಹೇಗೆ? ಈ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವುದರಲ್ಲೇ ಜಿಎಸ್‌ಎಸ್ ಅವರ ಕಾವ್ಯದಲ್ಲಿನ ಸಾಮಾಜಿಕ ದರ್ಶನ ಅಥವಾ ಸಾಮಾಜಿಕ ಆಯಾಮಗಳ ಅನಾವರಣವಾಗುತ್ತದೆ. ಈ ಅನಾವರಣದಲ್ಲಿ ಗೋಚರವಾಗುವ ಒಂದು ಕುತೂಹಲದ ಸಂಗತಿ ಎಂದರೆ 'ನಂಬಿಕೆ'ಯ ಕವಿಯಾಗಿ ಕವನ ರಚನೆಗೆ ತೊಡಗಿದ ಜಿಎಸ್‌ಎಸ್ ಕ್ರಮೇಣ ಈ ನಂಬಿಕೆಯನ್ನು ಪ್ರಶ್ನಿಸುವ, ಪರೀಕ್ಷಿಸುವ ಸಾಮಾಜಿಕ ಕವಿಯಾಗಿ ಮಾರ್ಪಟ್ಟು ನಂತರದಲ್ಲಿ, ಅಂದರೆ ಇತ್ತೀಚಿನ ಕವನಗಳಲ್ಲಿ ಈ ನಂಬಿಕೆ, ಪರೀಕ್ಷೆಗಳನ್ನು ದಾಟಿ ನಿಂತ ಸತ್ವವೊಂದರ ಸ್ಪರ್ಶ ಮಾಡಿದವರಂತೆ ಹೊಸತೊಂದು ಸಮತೋಲನದಲ್ಲಿ ಸ್ಥಿರಗೊಳ್ಳುವುದು.

೨

ಶಿವರುದ್ರಪ್ಪನವರು ಕುವೆಂಪು ಅಥವಾ ಮಾಸ್ತಿಯವರಂತೆ ಸಾಧಕರಾದ ಲೇಖಕರಲ್ಲ. ಅತೀತತೆಯನ್ನು ಸಾಧಿಸಿಕೊಂಡು ಅದರ ಬೆಳಕಿನಲ್ಲಿ ಬರೆದವರು ಅವರಿಬ್ಬರು. ಆದರೆ ಜಿಎಸ್‌ಎಸ್ ಹಾಗಲ್ಲ, ಬರವಣಿಗೆಯನ್ನೇ ಅತೀತತೆಯ ಸಾಧನೆಗಾಗಿ ಮಾಧ್ಯಮ ಮಾಡಿಕೊಂಡವರು. ಅತೀತತೆ, ಅಂದರೆ ಇಂದ್ರಿಯಗಮ್ಯ ಲೋಕವಾಚೆಗಿನ ತತ್ವದೆಡೆಗಿನ ಇವರ ಒಲವು, ಇವರ ಆರಂಭಿಕ ಕವನಗಳಲ್ಲೇ ವ್ಯಕ್ತವಾಗಿದೆ. ಇವರ ಮೊದಲ ಕವನ 'ವೀಣಾಧ್ವನಿ'ಯೇ ಒಂದು ಅದ್ವೈತ ತತ್ವ ಸಾರುವ ಕವನ. ವೀಣಾ ಮಧುರನಾದ ಇಲ್ಲಿ 'ಕಾಲದೇಶಾತೀತ'ವಾಗಿ, 'ಭಾವ ಭಾಷಾತೀತ'ವಾಗಿ 'ಸಚ್ಚಿದಾನಂದನ ಅನಂತರೂಪವನು ನನ್ನ ಸಾಂತತೆಯಲ್ಲಿ ಸೆರೆಗೈದು ತೋರುತಿದೆ' ಎಂದು ಭಾಸವಾಗಿದೆ ಕವಿಗೆ. ಈ ಸಾಂತ-ಅನಂತಗಳ ದ್ವಂದ್ವ ಉಂಟುಮಾಡುವ ವಿಸ್ಮಯ ಇವರ ಇಡೀ ಕಾವ್ಯಜೀವನದುದ್ದಕ್ಕೂ ಒಂದು ಹಿನ್ನೆಲೆಯಾಗಿ ಕೆಲಸ ಮಾಡುತ್ತಾ ಬಂದಿರುವುದನ್ನು ನಾವು ಇವರ ಎಲ್ಲ ಹನ್ನೊಂದು ಕವನ ಸಂಕಲನಗಳಲ್ಲೂ ಕಾಣಬಹುದಾಗಿದೆ. ಇವರ ಇನ್ನೊಂದು ಸಂಕಲನ 'ತೀರ್ಥವಾಣಿ' (1953) ಪೂರ್ಣವಾಗಿ, ಶ್ರೀರಾಮಕೃಷ್ಣ ವಚನವೇದಕ್ಕಾಗಿ ಅನುವಾದ ಮಾಡಿದ ಭಕ್ತಿಗೀತೆಗಳ ಸಂಕಲನವೇ ಆಗಿದೆ. ಮೊದಲ ಸಂಕಲನ 'ಸಾಮಗಾನ' ಈ 'ತೀರ್ಥವಾಣಿ'ಗೆ ಒಂದು ಹಿನ್ನೆಲೆಯಾಗಿ ನಿಂತಂತೆ, ಮುಗ್ಧನಂಬಿಕೆ ಹಾಗೂ ಅದರಿಂದ ಹುಟ್ಟುವ ಸರಳ ಆದರೆ ಸುಂದರವಾದ ಕಲ್ಪನಾಚಿತ್ರಗಳನ್ನು ಬಿಡಿಸುವ ಲಯಬದ್ಧ ಸಾಲುಗಳಿಂದ ಅನುರಣಿತವಾಗಿದೆ. ಎಂತಿದ್ದರೂ ಇದರ ಶೀರ್ಷಿಕೆ 'ಸಾಮಗಾನ' ತಾನೇ!

ಎರಡನೇ ಕವನಸಂಕಲನ 'ಚೆಲುವು ಒಲವು' (1953). ಇದೀಗ ಅನ್ವೇಷಣೆ ಆರಂಭ. ಚೆಲುವು ಒಲವುಗಳೆಂಬ ಲೋಕರುಚಿಗಳ ನಿಕಷದಲ್ಲಿ ನಂಬಿಕೆಯ ಪರೀಕ್ಷೆ. ಈ ಪರೀಕ್ಷೆ ಮುಂದೆ-ಬಹುಶಃ 'ಅನಾವರಣ' (1963) ಸಂಕಲನದ ಹೊರತಾಗಿ—ಮಿಕ್ಕೆಲ್ಲ ಕವನ ಸಂಕಲನಗಳಲ್ಲಿನ ಅನೇಕ ಕವನಗಳ ('ಮಲ್ಲಿಗೆ', 'ಸುಂಟರಗಾಳಿ', 'ನಕ್ಷತ್ರಲೋಕ', 'ಜಡೆ', 'ಯಾರು', 'ಕೃಷ್ಣಶಕ್ತಿ', 'ಹುಟ್ಟಿದ ಹಬ್ಬ', 'ಕನಸಿನಿಂದ ನನಸಿಗೆ', 'ಆವಾಹನೆ', 'ಶಾಕುಂತಲ ಸಂಧ್ಯೆ', 'ಆದಿಕವಿಗೆ', 'ಒಂದು ಸಂಜೆ', 'ವ್ಯಕ್ತಿತ್ವ', 'ನಿನ್ನ ನಗು', 'ವರ್ಷಕ್ಕೊಮ್ಮೆ', 'ಪುರಿ ಜಗನ್ನಾಥನ ದೇಗುಲದಲ್ಲಿ....' ಇತ್ಯಾದಿ) ವಸ್ತುವಾಗಿ ಬೆಳೆದು ಕಾವ್ಯದ ಕಸಬುದಾರಿಕೆಯಲ್ಲಿ ಹದಗೊಂಡು, ಅವರ ಈವರೆಗಿನ ಕೊನೆಯ ಸಂಕಲನ 'ಚಕ್ರಗತಿ'ಯ ಕೊನೆಯ ಕವನ 'ಅಸ್ತಮಾನ'ದಲ್ಲಿ ತಾನೇತಾನಾಗಿ ಜಿಎಸ್‌ಎಸ್ ಅವರ ಕಾವ್ಯಸಾಧನೆಯ ಉತ್ತುಂಗ ಶಿಖರದಂತೆ ಒಂದು ಕವಿತೆಯಾಗಿ ಹೊರಹೊಮ್ಮುತ್ತದೆ. ಶ್ರೀಕೃಷ್ಣನ ಸಾವನ್ನು ಚಿತ್ರಿಸುವ ಈ ಕವನದಲ್ಲಿ ಶ್ರೀಕೃಷ್ಣನೇ ಇಲ್ಲ, ಇದ್ದರೂ ಆತ ಲೋಕದ ವಿವಿಧ ರೂಪಗಳಲ್ಲಿ, ಬಣ್ಣಗಳಲ್ಲಿ ಪಡಿಮೂಡಿದ್ದಾನಷ್ಟೆ. ಆತನಿಗೆಂತಹ ಸಾವು?

.... ಶ್ರೀಹರಿಪಾದ

ಅಪೂರ್ವ ಪಕ್ಷಿಯ ಹಾಗೆ ತೋರಿರಲು ದಟ್ಟ

ಪೊದೆಗಳ ನಡುವೆ, ಕೂಡಲೇ ಹೂಡಿ ಬಿಲ್ಲಿಗೆ ಬಾಣ
ಬಿಟ್ಟನು ಗುರಿಗೆ. ತಾಗಿದ್ದೆ ತಡ ಛಿಲ್ಲೆಂದು
ಚಿಮ್ಮಿತು ರಕ್ತ: ಕೆಂಪಾಯ್ತು ನೀಲಿ ಗಗನ
ಹೊಲದಲ್ಲಿ ಗೇಯುತ್ತಿದ್ದ ಆ ರೈತ ಕಂಡನೊಂ
ದದ್ಭುತವ: ಇದ್ದಕ್ಕಿದ್ದಂತೆ ಸಂಜೆಯ ಸೂರ್ಯ
ಜರ್ರನೆ ಜಾರಿ ಕಡಲೊಳಗೆ, ಪಾಂಚಜನ್ಯದ
ಮೊಳಗು ಒಂದೇ ಒಂದು ಕ್ಷಣ ಪರಮಾಶ್ಚರ್ಯ
ಪ್ರಭೆಯಾಗಿ ವ್ಯಾಪಿಸಿತು ಭೂಮಿ-ವ್ಯೋಮಗಳನ್ನು.
ಬೆರಗಾಗಿ, ನೇಗಿಲ ಹೊತ್ತು ನಡೆದನು ರೈತ
ಇಡೀ ದಿವಸ ಹರಗಿ ಹದಮಾಡಿದ್ದ ಹೊಲದೊಳಗೆ
ಬೀಜ ಬಿತ್ತುವ ಬಗ್ಗೆ ಯೋಚಿಸುತ್ತ.

ಲೋಕದ ಪ್ರತಿರೂಪದಂತಿದ್ದ ಅಥವಾ ಯಾರಿಗೆ ಲೋಕವೇ ಪ್ರತಿರೂಪವಾಗಿತ್ತೋ ಆತನೇ ಸತ್ತರೂ, ಲೋಕಚಕ್ರ ಬೀಜಬಿತ್ತುತ್ತ ಸುತ್ತುತ್ತಲೇ ಇದೆ. ಇದೇ ಚೋದ್ಯ. ಈ ಕರ್ಮಚಕ್ರದ ಚೋದ್ಯವನ್ನು ಮೌನದೊಳಗೆ ಅರಿಯುವ ಪ್ರತಿಭೆ ಈ ಕವನದಲ್ಲಿದೆ. ಹಾಗೇ ಜಿಎಸ್‌ಎಸ್ ಅವರ ಕಾವ್ಯಚಕ್ರ ಒಂದು ಸುತ್ತು ಮುಗಿಸುತ್ತಿರುವ ಸೂಚನೆಯೂ ಇಲ್ಲಿದೆ: (ಆರಂಭಿಕ ಕವನಗಳ) ನಂಬಿಕೆ ಇಲ್ಲಿ ಅನುಭವದ (ಕರ್ಮಚಕ್ರದ) ಮೂಲಕ ಅನುಭಾವವಾಗಿ ಮಾಗುತ್ತಿದೆ. ಈ ಅರ್ಥದಲ್ಲೇ ನಾನು ಎಲ್ಲ ಪ್ರತಿಭಾವಂತ ಕವಿಗಳಂತೆ ಶಿವರುದ್ರಪ್ಪನವರೂ ತಮ್ಮ ಮೊದಲ ಕವನ ಸಂಕಲನದ ಪದ್ಯಗಳನ್ನೇ ಈಗಲೂ ಮತ್ತೆ ಮತ್ತೆ ಬರೆಯುತ್ತಾ ಅವುಗಳಿಗೆ ಹೊಸ ಜನ್ಮ ನೀಡುವ ವಿಸ್ಮಯ ಸೃಷ್ಟಿಸುತ್ತಿದ್ದಾರೆಂದು ಹೇಳಿದ್ದು. ಇಂತಹ ಕವಿ ಚಾರಿತ್ರಿಕ ಅನಿವಾರ್ಯತೆಗಳಿಂದಾಗಿ ಲೋಕಮಗ್ನತೆಗೆ ಈಡಾದಾಗಲೂ ಅಗ್ಗದ ಕಾವ್ಯ ಸೃಷ್ಟಿಸಲಾರ. ಜಿಎಸ್‌ಎಸ್ ಅವರ ಸಾಮಾಜಿಕವೆಂದು ವರ್ಗೀಕರಿಸಬಹುದಾದ ಬಹಳಷ್ಟು ಕವನಗಳು ಕೇವಲ ಪ್ರತಿಕ್ರಿಯೆಗಳು ಅಥವಾ ಆವೇಶಾತ್ಮಕ ಹೇಳಿಕೆಗಳಾಗದೆ ಪಾರಾಗಿರುವುದಕ್ಕೆ ಇದೇ ಮುಖ್ಯಕಾರಣವೆಂದು ನಾನು ಭಾವಿಸುತ್ತೇನೆ. ಏನಾದರೂ ಇವು, ಕವಿ ತನ್ನ ಕಾವ್ಯಚಕ್ರದ ಒಂದು ಪೂರ್ಣ ಸುತ್ತನ್ನು ಮುಗಿಸುವಾಗ ನಡೆಸಿದ ಪ್ರಯೋಗಗಳು ಹಾಗೂ ಅಭ್ಯಾಸಗಳೇ ಅಲ್ಲವೇ? ಈ ಪ್ರಯೋಗ-ಅಭ್ಯಾಸಗಳ ಒಂದು ಸ್ಥೂಲ ಪರಿಶೀಲನೆ ಜಿಎಸ್‌ಎಸ್ ಅವರ ಕಾವ್ಯದ ಸಾಮಾಜಿಕ ಆಯಾಮಗಳನ್ನೂ, ಜೊತೆ ಜೊತೆಗೇ ಆವರ ವಿಕಾಸದ ಹಾದಿಯ ವಿನ್ಯಾಸ-ಗತಿಗಳನ್ನೂ ಪರಿಚಯಿಸುತ್ತದೆ.

೩

ಹಾಗೆ ನೋಡಿದರೆ ಜಿಎಸ್‌ಎಸ್ ಅವರ ಆರಂಭಿಕ ನಂಬಿಕೆಯ ಕವನಗಳಲ್ಲೇ ಸಾಮಾಜಿಕತೆ ಅಂತರ್ಗತವಾಗಿದೆ. ಅತೀತವನ್ನು ಸಾಧಿಸುವುದು ಎಂದರೆ ಲೋಕವನ್ನು

ಅರ್ಥೈಸಿಕೊಂಡು ಅದನ್ನು ದಾಟಿ ನಿಲ್ಲುವುದು. ಲೋಕವನ್ನು ಅರ್ಥೈಸಿಕೊಳ್ಳುವುದೆಂದರೆ ಲೋಕದ ದುಃಖವನ್ನು ಅರ್ಥೈಸಿಕೊಳ್ಳುವುದು; ಲೋಕದ ದುಃಖದೊಂದಿಗೆ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳುವುದು. ಇದು ತಾತ್ವಿಕವಾಗಿ ಬುದ್ಧ-ಬಸವ-ರಾಮಕೃಷ್ಣ-ವಿವೇಕಾನಂದರ ದಾರಿ. ಈ ದಾರಿಯಲ್ಲೇ ನಡೆದು ಸಾಧಿಸಿಕೊಂಡ ಅದ್ವಯ ದೃಷ್ಟಿಕೋನದಿಂದಾಗಿ, ಜಲಗಾರನಲ್ಲಿ ಶಿವನನ್ನು ಕಾಣಲು ಹಿಂಜರಿಯದ ಕುವೆಂಪು ಅವರ ಪ್ರಿಯ ಶಿಷ್ಯರಾದ ಜಿಎಸ್‌ಎಸ್ ಅವರ ಕಾಣ್ಕೆ ಕೂಡಾ ಅದೇನೇ. 'ಅಲ್ಲಿ-ಇಲ್ಲಿ' ಎಂಬ ಅವರ ಎರಡನೇ ಕವನದಲ್ಲೇ ಶಿವನು 'ಉಡುಗಣವೇಷ್ಟಿತ ಚಂದ್ರ ಸುಶೋಭಿತ ದಿವ್ಯಾಂಬರ ಸಂಚಾರಿ/ಕಣ್ಣ ನೀರಿನಲ್ಲಿ ಮಣ್ಣಧೂಳಿನಲಿ ಹೊರಳುತ್ತಿರುವರ ಸಹಚಾರಿ'ಯಾಗಿ ಕಾಣುತ್ತಾನೆ. ಅಷ್ಟೆ ಅಲ್ಲ, ಮುಂದಿನ ಒಂದು ಕವನದಲ್ಲಿ ಕಣ್ಣೀರೇ ಜಗದ ಹೃದಯ ಇರಬಹುದೆಂಬ ಭಾವವೂ ಇವರನ್ನಾವರಿಸುತ್ತದೆ. 'ಕಣ್ಣೀರು' ಎಂಬ ಕವನದ ಕೊನೆಯ ಈ ಮೂರು ಸಾಲುಗಳನ್ನು ಗಮನಿಸಿ:

**ಕಣ್ಣೀರಿನಲ್ಲಿ ಕಾಲದೇಶಗಳು ಕರಗುವುವು**
**ವಿಶ್ವದಲಿ ತೇಲುವೀ ಬ್ರಹ್ಮಾಂಡಗಳು ಎಲ್ಲ**
**ಕಣ್ಣೀರಿನುಂಡೆಗಳೋ ಬಲ್ಲವನೆ ಬಲ್ಲ.**

ಹಾಗೇ 'ಹಣತೆ' ಎಂಬ ಕವನದಲ್ಲಿ

**ಈ ಮುರುಕು ಗುಡಿಸಿಲಿನಲಿ**
**ಕಿರಿ ಹಣತೆ ಬೆಳಗುತಿದೆ**
**ಧ್ಯಾನಸ್ಥಯೋಗಿಯೊಲು ಸ್ತಿಮಿತವಾಗಿ**
**ಬಡವರಾತ್ಮದ ಹಣತೆ**
**ಇಂತೆ ಬೆಳಗುವುದಲ್ತೆ**
**ಅಜ್ಞಾತವಾಸದಲಿ ದೀನವಾಗಿ-**

ಎಂದು ಹೇಳುವಾಗಾಗಲೀ ಅಥವಾ 'ನೆಲದ ಕರೆ' ಎಂಬ ಕವನದಲ್ಲಿ

**ಎಲ್ಲಿ ಹೋಗುವಿರಿ ನಿಲ್ಲಿ ಮೋಡಗಳೇ**
**ನಾಲ್ಕು ಹನಿಯ ಚೆಲ್ಲಿ**
**ದಿನದಿನವು ಕಾದು ಬಾಯಾರಿ ಬೆಂದೆ**
**ಬೆಂಗದಿರ ತಾಪದಲ್ಲಿ**

..............................

**ಓ ಬನ್ನಿ ಬನ್ನಿ, ಓ ಬನ್ನಿ ಬನ್ನಿ**
**ನನ್ನೆದೆಗೆ ತಂಪ ತನ್ನಿ**
**ನೊಂದ ಜೀವರಿಗೆ ತಂಪನೀಯುವುದೆ**
**ಪರಮ ಪೂಜೆಯೆನ್ನಿ**

ಎಂದು ಹೇಳುವಾಗಾಗಲೀ, ಕವಿಗೆ ಲೋಕವನ್ನು ದಾಟುವುದೆಂದರೆ ದುಃಖವನ್ನು ದಾಟುವುದು; ಅದೇ ಅತೀತದೆಡೆಗೆ ನಮ್ಮನ್ನು ಕೊಂಡೊಯ್ಯುವುದು ಎಂಬ ತಿಳುವಳಿಕೆ ಇರುವುದು ಗೊತ್ತಾಗುತ್ತದೆ. ಅಂದರೆ ಅತೀತದ ಹಾದಿಯನ್ನು ಲೋಕದೊಳಗೇ ಹುಡುಕಿಕೊಂಡು ಹೊರಟಿರುವ ಸಹಜತೆಯ ಸೂಚನೆಯೂ ಇಲ್ಲಿದೆ.

ಜಿಎಸ್‌ಎಸ್ ಅವರ ಕಾವ್ಯದ ಮುಂದಿನ ಘಟ್ಟವೆಲ್ಲ ಲೋಕದೊಡನೆ ವ್ಯವಹರಿಸಿದುದರ ಅನುಭವಗಳ ಒರೆಗಲ್ಲಿನ ಮೇಲೆ ಒಳಗಿನ ನಂಬಿಕೆಯನ್ನು ತಿಕ್ಕಿತೀಡುವುದಕ್ಕೆ ಮೀಸಲಾದದ್ದು. ಈ ಹಿನ್ನೆಲೆಯಲ್ಲಿ 'ದೇವಶಿಲ್ಪ' (1956) ಸಂಕಲನದ 'ಇದು ಲೋಕವಂತೆ' ಕವನದಲ್ಲಿ ಮೊದಲಬಾರಿಗೆ ವ್ಯಕ್ತವಾಗಿರುವ ಕವಿಯ ಈ ಸಿನಿಕತೆಯನ್ನು ಗಮನಿಸಿ:

**ಹೊಗಳುಭಟ್ಟರ ಸಂತೆ**
**ಇದು ಲೋಕವಂತೆ**
**ಎಲ್ಲೆಲ್ಲಿಯೂ ಇವರೆ**
**ಕಂತೆ ಕಂತೆ**
**ಆದರ್ಶ ಗೀದರ್ಶ**
**ಬರಿ ಬಣಗು ಕಂತೆ**
**ಪುಸ್ತಕದ ಬದನೆಕಾಯಿ**
**ತಿನುವುದಕೆ ಬಂತೆ?**
........................
**ಹೊಗಳಿ ಹೊಗಳಿಸಿಕೊಳುವ**
**ಚಿಂತೆಯೇ ಚಿಂತೆ**
**ಒಂಟೆ ಮದುವೆಗೆ ಕತ್ತೆ**
**ಪದ ಹೇಳಿದಂತೆ....**

ಆದರೆ ಕವಿತೆಯ ಜಾಳುತನಕ್ಕೂ ಕಾರಣವಾಗಿರುವ ಈ ಸಿನಿಕತೆ ಇನ್ನೂ ಈ ಕವಿಯನ್ನು ಪೂರ್ಣ ಆವರಿಸಿಲ್ಲ ಎಂಬುದು ಅವರ ಮುಂದಿನ 'ದಾರಿ' ಎಂಬ ಪದ್ಯದಲ್ಲಿ ಸ್ಪಷ್ಟವಾಗುತ್ತದೆ:

**ಹರಿದಾರಿ ಹರದಾರಿ ಹರಿದಿರುವ ದಾರಿ**
**ಅಲ್ಲಿಯೂ ದಾರಿ ಇಲ್ಲಿಯೂ ದಾರಿ**
**ಎಲ್ಲೆಲ್ಲಿಯೂ ನೂರು ದಾರಿ**
...................
**ನಡೆದುದೇ ದಾರಿ ನುಡಿದುದೇ ದಾರಿ**
**ಎಂಬ ರೀತಿಯಲ್ಲಿ**
**ನೂರು ದಾರಿಗಳ ಜೇಡಜಾಲದಲಿ**
**ದಿಕ್ಕು ತಪ್ಪಲೆಂದು**

ಇದು ಪ್ರಗತಿಯೆಂದು ಕರೆದು
ತಡಕಾಡುತಿಹುದು ಮನುಕುಲವು ನೋಡು
ಆ ಜ್ಯೋತಿ ಪಥವ ಮರೆತು.

ಈ ಜ್ಯೋತಿ ಪಥದ ನೆನಪು-ಮರೆವುಗಳ ಉಯ್ಯಾಲೆ 'ದೀಪದ ಹೆಜ್ಜೆ' (1959) ಹಾಗೂ 'ಕಾರ್ತೀಕ' (1961) ಕವನಸಂಕಲನದುದ್ದಕ್ಕೂ ಜೀಕಿರುವುದನ್ನು ನಾವು ಗಮನಿಸಬಹುದು. ಈ ಜೀಕು ಶಿವರುದ್ರಪ್ಪನವರ ಈ ಘಟ್ಟದ ಕಾವ್ಯಕ್ಕೆ ಹೊಸ ಚಲನೆಯೊಂದಿಗೆ ಆಳ ಹಾಗೂ ವಿಸ್ತಾರಗಳನ್ನು ತಂದುಕೊಟ್ಟಿದೆ. 'ದೀಪದ ಹೆಜ್ಜೆ' ಕವನಸಂಕಲನವಂತೂ ಜಿಎಸ್‌ಎಸ್ ಅವರ ಕಾವ್ಯ ಪ್ರಯೋಗಶೀಲತೆಯ ಅತ್ಯುತ್ತಮ ಉದಾಹರಣೆಗಳಿಂದ ತುಂಬಿ ಹೋಗಿದೆ. ನಂಬಿಕೆಯನ್ನು ಅನುಭವಗಳ ಒರೆಗಲ್ಲಿಗೆ ಹಚ್ಚಿ ಪರಿಶೀಲಿಸಿದಾಗ ಕಂಡ ಬದುಕಿನ ಕಟು ನಿಷ್ಠುರತೆ ಕವಿಯ ಹೃದಯಕ್ಕೆ ಬಲವಾಗಿ ತಾಕತೊಡಗಿರುವುದನ್ನು ಇಲ್ಲಿನ ಕವನಗಳಲ್ಲಿ ನೋಡಬಹುದು. 'ಇವನು' ಕವನದ ಈ ಸಾಲುಗಳನ್ನು, ಕವಿ ಬದುಕನ್ನು ಈಗ ಮುಗ್ಧತೆಯನ್ನು ಮೆಟ್ಟಿನಿಂತ ಹೊಸ ನಿಷ್ಠುರತೆಯಿಂದ ನೋಡಲು ನಡೆಸಿರುವ ಪ್ರಯತ್ನದ ದೃಷ್ಟಿಯಿಂದ ಗಮನಿಸಿ:

ತಲೆಯ ತಪ್ಪಲೆಯಲ್ಲಿ
ವಿಚಾರಗಳ ಕುದಿತ
ಎದೆಯ ಗೂಡೊಳಗೆನಿತೊ
ಮುರಿದ ಗಡಿಯಾರಗಳ ತುಡಿತ
.......
ಸಿನಿಮ-ಹೊಟೆಲ್-ಸರ್ಕಸ್-ಆ ದೊಂಬರಾಟ
ಇಸ್ಪೀಟು-ಸಿಗರೇಟು-ಹಾವಾಡಿಗನ ಮಾಟ
ಕಾವ್ಯಪಾರಾಯಣ-ಭಾಷಣ-ಹರಿಕತೆಯ ಸವಿಯೂಟ
ಓ ಎಷ್ಟೊಂದು-ನೋವು ಮರೆಯಲು ಮಾನವನು
ಮಾಡಿರುವ ಹೂಟ

ಹಾಗೇ 'ಸಂಜೆದಾರಿ' ಎಂಬ ಕವನದ ಕಟುವಿಷಾದದ ಈ ಬಹು ಚಿತ್ರವತ್ತಾದ ಸಾಲುಗಳು:

ಕೈಹಿಡಿದ ಸರಪಳಿಯ ಜಗ್ಗುತಿದೆ ಕರಿನಾಯಿ
ಹೊಳೆ ಹೊಳೆವ ಕೆಂಗಣ್ಣು ಜೋಲ್ವ ನಾಲಿಗೆ ಬಾಯಿ
ಸಂಜೆ ಮುಗಿಲಿನ ಕೆಳಗೆ
ದೂರ ದೂರದವರೆಗೆ
ಮುಗಿವಿರಿದ ಪ್ರಶ್ನೆಯೊಲು ಹಾಸಿರಲು ಟಾರ್‌ಬೀದಿ
ಕೈಹಿಡಿದು ಸರಪಳಿಯ ಜಗ್ಗುತಿದೆ ಕರಿನಾಯಿ ಮುಂದೆ ಮುಂದೆ
ಹಿಡಿದ ಕೈ ಸಾಗುತಿದೆ ಹಿಂದೆ ಹಿಂದೆ.....

ಈ ಕಟುಸತ್ಯದ ಅನುಭೂತಿ ಮುಂದಿನ ಇನ್ನೂ ಅನೇಕ ಕವನಗಳಲ್ಲಿ ಘನಗೊಂಡು 'ಕಾರ್ತೀಕ' ಸಂಕಲನದ 'ಕನಸಿನಿಂದ ನನಸಿಗೆ' ಎಂಬ ಕವನದಲ್ಲಿ ಈ ಬೆರಗು ಸೃಷ್ಟಿಯಾಗುವುದು:

**ಯಾವ ಮಗ್ಗ ಇದು! ಯಾರು ನೇಯುವರೋ ಕಾಣದಲ್ಲ ಲಾಳಿ!**
**ಕನಸಿನಿಂದ ಎಚ್ಚರದ ದಡಕೆ ಬಂದಿರುವ ಸೊಗದ ದಾಳಿ!**
**ದಿನವು ಹಡಗುಗಳು ಬಂದು ತಂಗುವುವು ಈ ತೆಂಗು ತೀರದಲ್ಲಿ**
**ಏನು ಬರುವುವೋ ಎಷ್ಟು ಬರುವುವೋ ಹೇಗೆ ಬರುವುವೋ**
**....ನಿಲವು ಪ್ರಶ್ನೆಯಲ್ಲಿ**

೪

ಆದರೆ ಈ ಬೆರಗು, ಪ್ರಶ್ನೆ ಇದ್ದಕ್ಕಿದ್ದಂತೆ ಸ್ಥಬ್ದಗೊಂಡಂತೆ ಜಿಎಸ್ ಎಸ್ ಅವರ ಕಾವ್ಯ ಒಂದು ಮಹಾನ್ ಸ್ಥಿತ್ಯಂತರವನ್ನು ಕಾಣುತ್ತದೆ, ಮುಂದಿನ ಕವನ ಸಂಕಲನಗಳಲ್ಲಿ. ಯಾಕೆ ಹೀಗೆಂದು ಕಾವ್ಯದ ಹೊರಗೆ ಕಾರಣಗಳನ್ನು ಹುಡುಕಲು ಹೊರಟರೆ, ಇದು ನೆಹರೂ ಆಡಳಿತದ ಇಳಿಗಾಲದ ದಿನಗಳು, ಮೌಲ್ಯಗಳ ಇಳಿದಾರಿಯ ದಿನಗಳು ಎಂಬುದು ಗೋಚರವಾಗುತ್ತದೆ. ಶಿವರುದ್ರಪ್ಪನವರ ಕಾವ್ಯಕ್ಕೆ ನಗರಪ್ರಜ್ಞೆಯ ಸೂಕ್ಷ್ಮಗಳೂ, ಉಪಮೆ ಸಂಕೇತಗಳೂ ಹೊಸ ಉತ್ಸಾಹದೊಂದಿಗೆ ಪ್ರವೇಶಿಸಿದ ಕಾಲವಿದು. ಕವಿಯ ಮನಸ್ಸನ್ನು ಈಗ ಆಧುನಿಕ ಮಧ್ಯಮವರ್ಗದ ಪ್ರಜ್ಞೆ ಆವರಿಸಿಕೊಂಡಿರುವ ಸೂಚನೆಗಳನ್ನು ಇವರ ಮುಂದಿನ ಕವನಸಂಕಲನಗಳಾದ 'ಅನಾವರಣ' (1963) ಹಾಗೂ 'ತೆರೆದ ದಾರಿ' (1966) ಗಳ ಕವನಗಳಲ್ಲಿ ಕಾಣಬಹುದು. ಇಲ್ಲಿ ದೇವಿ, ಬೆಳದಿಂಗಳು, ಗುರು, ಹೂವು, ಹಕ್ಕಿಗಳಿಗೆ ಬದಲಾಗಿ ಗಾಂಧಿ, ನೆಹರೂ, ಹಳೇಪೇಪರ್ ಖಾಲಿಶೀಶೆಯವನಲ್ಲದೆ; ನಾಯಿ, ಛತ್ರಿ, ಬಟ್ಟೆಯಂಗಡಿ, ಹೊಟೆಲ್, ರೇಡಿಯೋ ಮುಂತಾದ ಸಾಮಾಜಿಕ ವ್ಯಕ್ತಿತ್ವಗಳೂ ಪ್ರತೀಕಗಳೂ ಇವರ ಕಾವ್ಯದ ವಸ್ತುಗಳಾಗಿರುವುದನ್ನು ನಾವು ಗಮನಿಸಬಹುದು. ಕವಿಯ ನಂಬಿಕೆ ಅಲ್ಲಾಡತೊಡಗಿದೆ. 'ಕುಲುಮೆಯ ಒಳಗೆ ಕಿಡಿಯಿಲ್ಲ', 'ನಾಯಿಗಳಿವೆ ಎಚ್ಚರಿಕೆ', 'ಕೋಗಿಲೆ ರಿಪೇರಿ' ಮುಂತಾದ ಕವನಗಳು ಕವಿಯ ಈ ವಿಚಲಿತ ಪ್ರಜ್ಞೆಗೆ ಸಾಕ್ಷಿಯಂತಿವೆ. ಕವಿ ಇಲ್ಲಿ ತಾನು ಪ್ರವೇಶಿಸಿರುವ ಅನುಭವ ಲೋಕದ ಎಲ್ಲ ತಲ್ಲಣ-ತರಂಗಾಂತರಗಳನ್ನೂ ನಿಭಾಯಿಸಲು ಬೇಕಾದ ತಕ್ಕ ಕಾವ್ಯ ಪರಿಕರಗಳಿಲ್ಲದೆ ತನ್ನ ಕಾವ್ಯವನ್ನು ವರ್ತಮಾನದ (ಸಾಮಾಜಿಕ) ಒತ್ತಡಗಳಿಗೆ ಒಪ್ಪಿಸಿಬಿಟ್ಟು ದಿಙ್ಮೂಢರಾಗಿ ಕೂತಂತೆ ತೋರುತ್ತದೆ. ಇದು ಆಧುನಿಕ ಮಧ್ಯಮವರ್ಗದ ಮಿತಿಗಳನ್ನು ಮೀರಲಾಗದ ಅಸಹಾಯಕ ಸ್ಥಿತಿಯೂ ಇರಬಹುದು.

ಇಲ್ಲಿಂದ ಮುಂದೆ ಸಾಮಾಜಿಕ ಸಮ್ಮೋಹಿನಿಗೊಳಗಾದಂತೆ ಜಿಎಸ್‌ಎಸ್ ಪೂರ್ಣವಾಗಿ ಸಾಮಾಜಿಕ ಕವಿಯಾಗಿ ಪರಿವರ್ತನೆಗೊಳ್ಳುತ್ತಾರೆ. ಮುಂದೆ, ದೇಶಾದ್ಯಂತ ನಿಧಾನವಾಗಿ ತೆರೆ ತೆರೆಗಳಾಗಿ ಇತ್ತೀಚಿನವರೆಗೂ ನಮ್ಮ ರಾಷ್ಟ್ರಜೀವನದ ದಡಗಳನ್ನು ಅಪ್ಪಳಿಸಿದ

ಸಾಮಾಜಿಕ / ರಾಜಕೀಯ ಪ್ರವಾಹಗಳು ಇವರ ಕಾವ್ಯವನ್ನು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಘಾಸಿಗೊಳಿಸಿರುವುದನ್ನು ನಾವು ನೋಡಬಹುದು. ಜಿಎಸ್‌ಎಸ್ ಇಲ್ಲೆಲ್ಲಾ ತಮ್ಮ ವ್ಯಕ್ತಿತ್ವದ ಲಾಲಿತ್ಯವನ್ನೇ ಕಳೆದುಕೊಂಡಂತೆ ತಮ್ಮ ಕವನಗಳಲ್ಲಿ ಅಸಮಾಧಾನ ಆಕ್ರೋಶಗಳೇ ಮೇಲುಗೈ ಸಾಧಿಸಲು ಬಿಟ್ಟಿರುವುದು ಆಶ್ಚರ್ಯವನ್ನುಂಟುಮಾಡುತ್ತದೆ. ಜಿಎಸ್‌ಎಸ್ ಅವರ ಕಾವ್ಯಜೀವನ ನವೋದಯದಲ್ಲಿ ಆರಂಭವಾದರೂ ಅದು ನಂತರ ಪ್ರಗತಿಶೀಲ, ನವ್ಯ ಹಾಗೂ ಬಂಡಾಯ ಎಂಬ ಮೂರು ಸಾಹಿತ್ಯ ಚಳುವಳಿಗಳ ಮೂಲಕ ಹಾದು ಬರಬೇಕಾಯಿತು. ಈ ಮೂರೂ ಚಳುವಳಿಗಳ ಅಡ್ಡ ಪರಿಣಾಮಗಳಿಗೆ ಜಿಎಸ್‌ಎಸ್ ಅವರ ಕಾವ್ಯ ಅನುಕ್ರಮವಾಗಿಲ್ಲದಿದ್ದರೂ, ಸಂದರ್ಭಾನುಸಾರ ಈಡಾಗಿರುವುದನ್ನು ನಾವು ಕಾಣಬಹುದು. ಅದರ ಮೊದಲ ಸೂಚನೆ 'ತೆರೆದ ದಾರಿ'ಯ 'ಸಾಕು ನಿಲ್ಲಿಸು ಸಾಮಗಾನ' ಎಂಬ ಕವನದಲ್ಲಿ ಕಾಣಸಿಗುತ್ತದೆ. ಇವರ ಮೊದಲ ಕವನಸಂಕಲನದ ಹೆಸರು 'ಸಾಮಗಾನ' ಎಂಬುದನ್ನು ನೆನಪಿಸಿಕೊಂಡಾಗ ಜಿಎಸ್‌ಎಸ್ ಇಲ್ಲಿ ತಮ್ಮ ಆವರೆಗಿನ ಕಾವ್ಯವನ್ನೇ ಧಿಃಕರಿಸಿ ನಿಂತಂತೆ ತೋರುತ್ತದೆ! ಕವಿ ತಮ್ಮ ಕಾವ್ಯದ ಬಗ್ಗೆ ತಾವೇ ನಂಬಿಕೆ ಕಳೆದುಕೊಂಡಿದ್ದಾರೆಯೆ? ಈ ಕವನದಲ್ಲಿ ಮೊದಲ ಬಾರಿಗೆ ಕವಿ ಸಾಮಾಜಿಕವಾಗಿ ಆಸ್ಫೋಟಿಸುತ್ತಾರೆ:

> **ದೇಶಾದ್ಯಂತ ಅಣೆಕಟ್ಟುಗಳ ಕಟ್ಟಿ ನಾವು**
> **ಬೆಳೆದಿದ್ದೇನು, ಬರಿ ಹಸಿವೆ?**
> ........................
> **ಬಂತೆ ದೀಪಾವಳಿ? ಇಷ್ಟೊಂದು ಹಣತೆಗಳಲ್ಲಿ**
> **ಎಣ್ಣೆಯಿಲ್ಲ,**
> **ಬರೀ ಮಾತುಗಳ ಕಡ್ಡಿ ಗೀಚುವಿಯಲ್ಲ,**
> **ನಿನಗೆ ನಾಚಿಕೆಯಿಲ್ಲ?**

ಹಾಗೇ 'ಸರಸ್ವತಿ' ಎಂಬ ಕವನದಲ್ಲಿ ತಾವು ನಂಬಿದ್ದ ಶಕ್ತಿ ಸರಸ್ವತಿಯನ್ನು ಹೀಗೆ ಕೇಳಿಕೊಳ್ಳುತ್ತಾರೆ:

> **ಓ ತಾಯಿ ಸರಸ್ವತಿ**
> **ನಿನ್ನ ವೀಣೆ ತಂತಿಗಳಲಿ**
> **ಜೇಡ ಬಲೆಯ ನೂತಿದೆ**
> **ನಿನ್ನ ಪಾದಪೀಠದ ಕೆಳ-**
> **ಗಿಲಿ ಹೆಗ್ಗಣ ಸೇರಿವೆ**
> ........................
> ........................
> **ಓ ತಾಯಿ ಸರಸ್ವತಿ**
> **ಏನಿದೆಂಥ ದುರ್ಗತಿ**

**ಕಾಳಿಯಾಗಿ ಏಳು ತಾಯಿ**
**ಶೂಲವನ್ನು ತಾಳು ತಾಯಿ**
**ಕಲ್ಲಾದರೆ ನೀನು ಹೀಗೆ**
**ಹೇಳಿಕೊಳುವುದಾರಿಗೆ?**

ಕವಿ ಸಾಮಾಜಿಕವಾಗಿ ಎಷ್ಟು ಅಶಾಂತಿಗೀಡಾಗಿದ್ದಾರೆ, ಅಸಹಾಯಕರಾಗಿದ್ದಾರೆ ಎಂಬುದನ್ನು ಈ ಸಾಲುಗಳಲ್ಲಿ ಕಾಣಬಹುದು. ಆದರೆ ಏಕೆ ಎಂಬ ಪ್ರಶ್ನೆಗಳನ್ನು ಉತ್ತರಿಸುವಷ್ಟು ಶಕ್ತಿ ಈ ಸಾಲುಗಳಲ್ಲಿ ಇಲ್ಲ. ಜಿಎಸ್‌ಎಸ್ ಅವರ ಕಾವ್ಯದ ಹುಟ್ಟುಗುಣವಾದ ಸರಳ ಲಯವಷ್ಟೆ ಇಲ್ಲಿನ ಸಾಲುಗಳಿಗೆ ಕಾವ್ಯಶಕ್ತಿ ನೀಡಿರುವುದು. ಸಿಟ್ಟು ಸೆಡವು ಆಸ್ಫೋಟಗಳು ಈ ಕವಿಯ ಸಹಜ ಅಭಿವ್ಯಕ್ತಿ ರೂಪಗಳಲ್ಲ; ಇವುಗಳ ಪ್ರಯೋಗದಿಂದ ಇವರ ಕಾವ್ಯ ಬಿರುಕು ಬಿಡತೊಡಗಿದೆಂಬುದನ್ನು ಈ ಘಟ್ಟದ ಇವರ ಅನೇಕ ಕವನಗಳಲ್ಲಿ ಕಾಣಬಹುದು. ಈ ಅಶಾಂತ ಘಟ್ಟ 'ದೋಷೋದ್ಧಾರಕ', 'ನಿತ್ಯಕಥೆ', 'ದಾಸಪಂಥ' ಮುಂತಾದ ಸಾಮಾಜಿಕ ಪರಿವೇಷವುಳ್ಳ ಕವನಗಳ ಮೂಲಕ ಕಾವ್ಯದೊಳಕ್ಕೆ ಅಶಾಂತಿಯ ಜೊತೆಗೆ ವ್ಯಂಗ್ಯ, ಕಟಕಿಗಳನ್ನೂ ತಂದುಕೊಳ್ಳುತ್ತಾ 'ಗೋಡೆ' (1972) ಎಂಬ, ಜಿಎಸ್‌ಎಸ್ ಅವರ ಕಾವ್ಯಜೀವನದ ಈ ನಿರ್ಬಂಧಿತ ಘಟ್ಟಕ್ಕೆ ಅರ್ಥಪೂರ್ಣವೆನಿಸುವ ಶೀರ್ಷಿಕೆಯ ಕವನ ಸಂಕಲನವನ್ನು ಪ್ರವೇಶಿಸುತ್ತದೆ.

೫

ಇದೀಗ ಅವರ ಕಾವ್ಯಜೀವನದ ಹೊಸ ಸವಾಲು. ಸರಳ, ವ್ಯಂಗ್ಯ, ಕಟಕಿಗಳಲ್ಲೇ ತನ್ನ ಸಾರ್ಥಕತೆಯನ್ನು ಕಂಡುಕೊಳ್ಳುವ ಅಶಾಂತಿ ಎಂಬ, ಸುತ್ತ ಎದ್ದಿರುವ ಗೋಡೆಯನ್ನು ದಾಟಿ ಮತ್ತೆ ಕಾವ್ಯದಲ್ಲಿ ಸಮತೆಯನ್ನು ಸಾಧಿಸಿಕೊಳ್ಳಬೇಕಾದ ಸವಾಲು. ಈ ಸವಾಲಿಗೆ ಆತ್ಮಪರಿವೀಕ್ಷಣೆಯೇ ಉತ್ತರ ಎಂಬುದು ಕವಿಗೂ ಈ ಹೊತ್ತಿಗೆ ಗೊತ್ತಾಗಿದೆ. ಇದರ ಹೊಳಹುಗಳನ್ನು 'ಗೋಡೆ' ಮತ್ತು ಮುಂದಿನ, ಇದರಂತೆಯೇ ಇನ್ನೊಂದು ಅರ್ಥಪೂರ್ಣ ಶೀರ್ಷಿಕೆಯುಳ್ಳ 'ಕಾಡಿನ ಕತ್ತಲೆಯಲ್ಲಿ' (1982) ಎಂಬ ಕವನಸಂಕಲನಗಳ ಮುಖ್ಯ ಕವನಗಳಲ್ಲಿ ಕಾಣಬಹುದು. 'ಗಾಂಧಿ ಶತಮಾನೋತ್ಸವ' ಎಂಬ ಕವನದಲ್ಲಿ, ಹಬ್ಬಿರುವ ಮಬ್ಬಿನೊಳಗೆ ನಮ್ಮೆಲ್ಲರಲ್ಲೂ ಅಂತಃಸಾಕ್ಷಿಯಾಗಿ ಅಡಗಿರುವ ಗಾಂಧಿಯನ್ನು ಕಲ್ಪಿಸಿಕೊಳ್ಳುವ ಪರಿ ಇದು—

**ನಾವೂ ಇದ್ದೇವೆ-**
**ಮೂಲೆಯಲ್ಲಿ ಮಿಣ ಮಿಣ ಮೋಂಬತ್ತಿ ಮಬ್ಬಿನ ಸುತ್ತ**
**ಎಲೆ ತಿರುವಿ ಹಾಕುತ್ತ**
**ಅವರಿವರ ಪಾಚಿಗಟ್ಟಿದ ಮಾತಿನ ಮೇಲೆ ಕಾಲೂರಿ ನಡೆಯುತ್ತ**

ಗದ್ದುಗೆಯ ಮೇಲೆ ವಿರಾಜಿಸುವ ಹದ್ದುಗಣ್ಣಿನ
ಮೃಗರಾಜನೆದುರು ಪಂಚತಂತ್ರ ಪ್ರತಿಭೆಯಲ್ಲಿ ಬಾಲವಲ್ಲಾಡಿ
ಸುತ್ತಾ, ಗುಂಪಿನಲ್ಲಿ ಗೋವಿಂದವಾಗುತ್ತ
ಬೇಯುವಲ್ಲೆಲ್ಲಾ ನುಗ್ಗಿ, ಕೈಗೆ ಸಿಕ್ಕಷ್ಟು ಲಪಟಾಯಿಸುತ್ತಾ
ಬೀದಿ ಧೂಳುಗಳ, ಗಲ್ಲಿಗಳ, ಕೊಳಕುಗಳ
ಕಿರುಚುಗಳ, ಬಣ್ಣಗಳ, ಕಣ್ಣುಗಳ ನಡೂಮಧ್ಯ
ನಾವೂ ಇದ್ದೇವೆ.....
ಇದ್ದಕ್ಕಿದ್ದಂತೆ ಇದರೊಳಗೆ ಯಾರೋ
ಕೋಲು ಕುಟ್ಟುವ ಸದ್ದು ಕೇಳುತ್ತದೆ
ಯಾರೋ ಸಣ್ಣಗೆ ಕಣ್ ತೆರೆದು ನಮ್ಮೊಳಗನ್ನೆಲ್ಲಾ
ಟಾರ್ಚ್ ಹಾಕಿ ಝಗ್ಗೆಂದು ಬಯಲಿಗೆಳೆದಂತೆ
ಭಯವಾಗುತ್ತದೆ....

ಅಂತಃಸಾಕ್ಷಿಯನ್ನೇ ಕಳೆದುಕೊಂಡಂತಿರುವ ಇಡೀ ರಾಷ್ಟ್ರದ ಈ ದುರಂತಮಯ ಸ್ಥಿತಿಯನ್ನು ಮಹಾಭಾರತದ ಒಂದು ದೃಶ್ಯೋಪಮೆಯ ಮೂಲಕ ಕಾವ್ಯದ ಎಲ್ಲ ಆಂತರಿಕ ಕ್ರಿಯಾ ಶೀಲತೆಯೊಡನೆ ಹೊರ ಹೊಮ್ಮುವ ಚಿತ್ರವತ್ತತೆಯಲ್ಲಿ ಕಟ್ಟಿಕೊಡುವ 'ಭೀಮಾಲಾಪ', ಜಿಎಸ್‌ಎಸ್ ತಮ್ಮ ಈ ಸಾಮಾಜಿಕ ಕಾವ್ಯ ಪ್ರಯೋಗದಲ್ಲಿ ಸಾಧಿಸಿದ ಕೌಶಲ್ಯದ ಅತ್ಯುತ್ತಮ ಉದಾಹರಣೆಯಂತಿದೆ. ಕವಿ ತನ್ನನ್ನು ಇಲ್ಲಿ ದುಃಖಧ್ಯಾನಿತನಾಗಿರುವಂತೆ ತೋರುವ ಭೀಮನಿಗೆ ಹೋಲಿಸಿಕೊಂಡು ಬರೆಯುತ್ತಾರೆ:

ಸೀರೆ ಉಟ್ಟು, ಬಳೆತೊಟ್ಟು, ಕಾಲಿಗೆ
ಗೆಜ್ಜೆಕಟ್ಟಿದ್ದಾನೆ ಒಬ್ಬ
ಇನ್ನೊಬ್ಬ ಕಾವಿ ಉಟ್ಟು
ಮೂಲೆಗೆ ಕೂತಿದ್ದಾನೆ
ದನದ ಕೊಟ್ಟಿಗೆಯಲ್ಲಿ ಒಬ್ಬ ಕುದುರೆ ಲಾಯದಲ್ಲಿ
ಮತ್ತೊಬ್ಬ
ಇದ್ದಾಳೆ ಇವಳು ಅವರಿವರ ತಲೆಯ
ಹೇನು ಹೆಕ್ಕುತ್ತಾ
ಆಗಾಗ ನಮ್ಮನ್ನೂ ಕುಕ್ಕುತ್ತಾ.

ನಾನೂ ಇದ್ದೇನೆ-ಅಡುಗೆ ಮನೆಯಲ್ಲಿ
ಉರಿವ ಸೌದೆಗಳ ಜೊತೆಗೆ
ಪಾತ್ರೆಗಳಲ್ಲಿ ಕೊತ ಕೊತ ಕುದಿದು
ಹಳೆಯ ನೆನಪುಗಳನ್ನು ರುಬ್ಬುತ್ತಾ....

ಈ ದುಃಖಧ್ಯಾನ ಮುಗಿಯುವುದು ಈ ಎಚ್ಚರದಲ್ಲಿ—

**ಗೆರೆ ದಾಟಲಾರದ ನಾನು ಕಾಯುತ್ತಿದ್ದೇನೆ**
**ಉರಿವ ಸೌದೆಗಳ ಜೊತೆಗೆ**
**ಪಾತ್ರೆಗಳಲ್ಲಿ ಕೊತ ಕೊತ ಕುದಿದು ಕಾಯುತ್ತಿದ್ದೇನೆ.**

ಗೆರೆ ದಾಟಲಾರದ ಎಚ್ಚರ ಇಲ್ಲಿ ಕವಿತೆಯೊಳಗಿನ ಭೀಮನದು ಮಾತ್ರವಲ್ಲ; ಕವಿತೆ ಕಟ್ಟುವ ಕಸಬುದಾರಿಕೆಯ ಎಚ್ಚರ ಕೂಡಾ. ನವ್ಯರ ಮಧ್ಯ ಇದ್ದೂ, ಕವಿತೆ ಅನಗತ್ಯವಾಗಿ ಅಶ್ಲೀಲವಾಗಲು ಬಿಡದ ಜಿಎಸ್‌ಎಸ್ ಅವರ ಅಂತರ್ಯದ ಎಚ್ಚರ ಕೂಡಾ ಇದು. ನವ್ಯರ ಸಾಮಾಜಿಕ ಕ್ರೋಧಕ್ಕೂ ಈ ಕವಿಯ ಸಾಮಾಜಿಕ ಕ್ರೋಧಕ್ಕೂ ಇರುವ ವ್ಯತ್ಯಾಸ ಇದೇ. ನವ್ಯರು ಇದನ್ನು ವೈಯಕ್ತಿಕ ಕ್ರೋಧದ ಆಸ್ಫೋಟನೆಯ ಮೂಲಕ ವೈಯುಕ್ತಿಕವಾಗಿ ಪರಿಹರಿಸಿಕೊಳ್ಳುವುದರಲ್ಲೇ ತೃಪ್ತರಾದರೆ, ಈ ಕವಿ 'ಸಾಮಾಜಿಕ ಧ್ಯಾನ'ವೆಂಬ 'ಅಪಶಬ್ದ'ದ ಮೂಲಕ ಕರೆಯಬಹುದಾದ—ಎಲ್ಲಕ್ಕೂ ಪ್ರತಿಕ್ರಿಯಿಸುತ್ತಲೇ ಅದನ್ನು ಅರಿಯುವ, ವಾಸ್ತವ ಸತ್ಯಕ್ಕೆ ದಟ್ಟ ವಿಷಾದದೊಡನೆ ಎಚ್ಚರಗೊಳ್ಳುವ—ವ್ಯವಧಾನದ ಕ್ರಮವನ್ನು ಅನುಸರಿಸುವರು. ಇದು ಜಿಎಸ್‌ಎಸ್ ಈ ಮುನ್ನ ಅನುಭವಿಸಿದ ಆಧುನಿಕ ಕಾವ್ಯ ಪರಿಕರಗಳ ಕೊರತೆಯನ್ನು ತುಂಬಿಕೊಳ್ಳುವ ಸೃಜನಶೀಲ ಪ್ರಯತ್ನವೂ ಆಗಿರಬಹುದು. ಆದುದರಿಂದಲೇ ಜಿಎಸ್‌ಎಸ್ ಅವರ ಕಾವ್ಯದಲ್ಲಿ ನವ್ಯಕಾವ್ಯದ ತೀವ್ರತೆ ಹಾಗೂ ತುರ್ತು (ಹಾಹಾಕಾರ) ಎದ್ದು ಕಾಣುವುದಿಲ್ಲ. ಆದರೆ ಈ ತೀವ್ರತೆ ಹಾಗೂ ತುರ್ತುಗಳ ಹಿಂದಿರುವ ಅಹಂಮೂಲವಾದ ಅನಾಥಪ್ರಜ್ಞೆಗೆ ಪರ್ಯಾಪ್ತವಾದ ಸಾಮಾಜಿಕ ಆವೃತತೆಯಿಂದ ಹುಟ್ಟುವ ಆತ್ಮಸಾಕ್ಷತ್ವದ ಪಾರದರ್ಶಕ ಬೆಳಕಿದೆ. ಜಿಎಸ್‌ಎಸ್ ತಮ್ಮ ಕಾವ್ಯಪ್ರಯೋಗದ ಮೂಲಕ ಕಂಡುಕೊಂಡ ಸಾಮಾಜಿಕ ಸತ್ಯದ ಈ ಪಾರದರ್ಶಕ ರೂಪವನ್ನು, ಅವರ 'ದುಃಸ್ವಪ್ನ' ಎಂಬ ಕವನದಲ್ಲಿ ಕಾಣಬಹುದು.

**ಎಂತೆಂಥವರು ಏನೇನೋ ಆದದ್ದ ಕಂಡೆ**
**ಗೊಮ್ಮಟನಾಗಿ ನಿಂತಿದ್ದ ಮಹಾಮೂರ್ತಿ**
**ಕರಗಿ ಕೊಚ್ಚೆಯಾಗಿ ಹರಿದದ್ದ ಕಂಡೆ**
**ಇಂದ್ರನೈರಾವತಕ್ಕೆ ತೊಣಚಿ ಹತ್ತಿ**
**ಬೀದಿನಾಯಾಗಿ ಬೂದಿಯಲ್ಲಿ ಹೊರಳಾಡಿದ್ದ ಕಂಡೆ**
**ನಿಗಿ ನಿಗಿ ಉರಿವ ಉಜ್ವಲ ಮಾತೆಲ್ಲ**
**ಬರೀ ಬೂದಿಯಾಗಿ ತೆಪ್ಪಗಾಗಿದ್ದ ಕಂಡೆ**
**ಕೊಳಕುಮಂಡಲಕ್ಕೆ ಏಳು ಹೆಡೆ ಮೂಡಿ**
**ಮಾನಸ ಸರೋವರದಲ್ಲಿ ಜಲಕ್ರೀಡೆಯಾಗಿದ್ದ ಕಂಡೆ**

—ಹೀಗೆ ಅವನತಿಯ, ತಲ್ಲಣಗೊಳಿಸುವ ಚಿತ್ರ ಕೊಡಕೊಡುತ್ತಾ ಸಾಗುವ ಈ ಕವನ

**ಕಂಡು ಎಚ್ಚರಗೊಂಡೆ**
**ಎಚ್ಚರವೆಲ್ಲ ನಿಗಿ ನಿಗಿ ಕೆಂಡದ ಉಂಡೆ**

ಎಂಬ ಅರಿವು-ಎಚ್ಚರಗಳ ಸಾಮಾಜೀಕರಣದಲ್ಲಿ ಮುಗಿಯುತ್ತದೆ. ಈವರೆಗಿನ ಸಿಟ್ಟು, ವ್ಯಂಗ್ಯ, ವಿಷಾದಗಳೆಲ್ಲ ಮುಪ್ಪುರಿಗೊಂಡು ಗ್ರಹಿಕೆಯ ಹೊಸ ಹದವೊಂದು ಸೃಷ್ಟಿಯಾಗಿದೆ ಇಲ್ಲಿ. ನಾನು ಈ ಮುನ್ನ ಅಪಶಬ್ದವೆಂದು ಬಳಸಿದ 'ಸಾಮಾಜಿಕ ಧ್ಯಾನ'ವೆಂದರೆ ಇದೇ. ಇದು ಕವಿಯನ್ನು 'ಸಾಮಾಜಿಕ ಸತ್ಯ'ದ ಪ್ರತಿಕ್ರಿಯಾತ್ಮಕ ಸ್ಥಿತಿಗೆ ಕೊಂಡೊಯ್ದಿದೆ. 'ಕಾಡಿನ ಕತ್ತಲಲ್ಲಿ' ಸಂಕಲನದ ಕೊನೆಯ ಪದ್ಯ 'ನಾನೇಕೆ ಬರೆಯುತ್ತೇನೆ', ಜಿಎಸ್‌ಎಸ್ ಕಂಡುಕೊಂಡಿರುವ ಸಾಮಾಜಿಕ ಸತ್ಯ ಹಾಗೂ ಕಾವ್ಯಸತ್ಯಗಳೆರಡಕ್ಕೂ ಉದಾಹರಣೆಯಂತಿದೆ:

ನಾನು ಬರೆಯುತ್ತೇನೆ
ಸುಮ್ಮನಿರಲಾರದಕ್ಕೆ,
ನನ್ನ ವೇದನೆ ಸಂವೇದನೆಗಳನ್ನು
ಕ್ರಿಯೆ ಪ್ರತಿಕ್ರಿಯೆಗಳನ್ನು
ದಾಖಲು ಮಾಡುವುದಕ್ಕೆ,
ನಿಂತ ನೀರಾಗದೆ, ಮುಂದಕ್ಕೆ
ಹರಿಯುವುದಕ್ಕೆ,
ಎಲ್ಲದರ ಜತೆ ಬೆರೆಯುವುದಕ್ಕೆ,
ನಾನು ಬರೆಯುತ್ತೇನೆ
ನನ್ನನ್ನು ನಾನು ಕಂಡುಕೊಳ್ಳುವುದಕ್ಕೆ,
ಮತ್ತೆ ಕಾಣಿಸುವುದಕ್ಕೆ,
ನಿಮ್ಮೊಂದಿಗೆ ಸಂವಾದಿಸುವುದಕ್ಕೆ,
ನಾನು ಬರೆಯುತ್ತೇನೆ
ಖುಷಿಗೆ, ನೋವಿಗೆ
ರೊಚ್ಚಿಗೆ ಮತ್ತು ಹುಚ್ಚಿಗೆ
ಅಥವಾ ನಂದಿಸಬಾರದ ಕಿಚ್ಚಿಗೆ.

ಜಿಎಸ್‌ಎಸ್ ಅವರ ಕಾವ್ಯದ ಸಾಮಾಜಿಕ ಸತ್ಯದ ಆವಿಷ್ಕಾರ ಹೀಗೆ ಒಡನಾಡಿ ಬದುಕುವುದರ ಮೂಲಕ ತನ್ನನ್ನು ತಾನು ಕಂಡುಕೊಳ್ಳುವುದರ ಸರಳ ಅರಿವಿನೊಂದಿಗೆ ಮುಕ್ತಾಯಗೊಳ್ಳುತ್ತದೆ. ವ್ಯಕ್ತಿಯೆಂದರೆ ಸಮಾಜದ ಇನ್ನೊಂದು ಮುಖ; ಹಾಗೇ ಸಮಾಜ ವೆಂದರೆ ವ್ಯಕ್ತಿಯ ಇನ್ನೊಂದು ಮುಖ, ಈ ಕಂಡರಿಸುವಿಕೆಯಲ್ಲಿ ಕಾಡಿನ ಕತ್ತಲಿನ ಹಾದಿ ಮುಗಿಯುತ್ತದೆ. ಹಾಗೆಯೇ, ಮುಂದಿನ ಸಂಕಲನವಾದ 'ಪ್ರೀತಿ ಇಲ್ಲದ ಮೇಲೆ' (1987) ಎಂಬ ಮತ್ತೊಂದು ಅರ್ಥಪೂರ್ಣವಾದ ಶೀರ್ಷಿಕೆಯುಳ್ಳ ಕವನಸಂಕಲನದ 'ಅವಸ್ಥೆ' ಎಂಬ ಪದ್ಯದಲ್ಲಿ ಈ ಅರಿವು ಹೀಗೆ ವೈಯಕ್ತಿಕ ಸಾಕ್ಷಾತ್ಕಾರದ ರೂಪದಲ್ಲಿ ವ್ಯಕ್ತವಾಗಲು ಸಾಧ್ಯವಾಗಿದೆ:

**ಚಳಿಗೆ ಗಡಗಡನೆ ನಡುಗಿ**
**ಮುದುರಿ ಮೂಲೆಗೆ ಕೂತ**
**ಹರಕು ಚಿಂದಿಯ ಪುಟ್ಟ ಹುಡುಗನನ್ನು ಕಂಡು**
**ಬೆಚ್ಚನೆಯ ಬಟ್ಟೆ ತೊಟ್ಟ ನನ್ನೊಳಗೂ**
**ನಡುಕ ಶುರುವಾಗುತ್ತದೆ**
**ಅವನು ಹಾಗಿರೋದಿಕ್ಕೆ**
**ನಾನೂ ಕಾರಣ ಅನಿಸುತ್ತೆ**

—ಎಂದು ಆರಂಭವಾಗುವ ಕವನ, ಇಂತಹ ಹಲವು ಸಾಮಾಜಿಕ ಚಿತ್ರಗಳನ್ನು ನೀಡುತ್ತಾ

**ಅವರೆಲ್ಲಾ ಹಾಗಿರೋದಕ್ಕೆ**
**ನಾನೂ ಕಾರಣ ಅನಿಸುತ್ತೆ**

ಎಂದು ಪದೇ ಪದೇ ಮನವರಿಕೆ ಮಾಡಿಕೊಳ್ಳುವ, ಪುನರಾವೃತ್ತಿಯ ಲಯದಲ್ಲಿ ಮನಸ್ಸಿನಲ್ಲಿ ನಿಂತುಬಿಡುತ್ತದೆ. ಹಾಗೆ ನೋಡಿದರೆ ಈ ಸಂಕಲನದ—ಶೀರ್ಷಿಕಾ ಪದ್ಯವೂ ಸೇರಿದಂತೆ—ಹಲವು ಕವನಗಳು ಈ ಪುನರಾವೃತ್ತಿಯ ಲಯವನ್ನು ಬಳಸಿಕೊಂಡು ಪ್ರೀತಿ ಇಲ್ಲದ ಸ್ಥಿತಿಯ ಅರ್ಥಹೀನತೆನಯ್ನೂ, ಅಸಮಾನತೆಯನ್ನೂ ಮನವರಿಕೆ ಮಾಡಿಕೊಡುವಂತಹ ಮನಕಲಕುವ ಪ್ರಶ್ನೆಗಳೊಂದಿಗೆ ಮನಸ್ಸನ್ನು ತುಂಬಿಕೊಳ್ಳುತ್ತವೆ:

**ಪ್ರೀತಿ ಇಲ್ಲದ ಮೇಲೆ**
**ದಕ್ಷಿಣಾಫ್ರಿಕದ ಕಗ್ಗತ್ತಲಿಗೆ**
**ಬೆಳಕು ಮೂಡೀತು ಹೇಗೆ?**
**ಸೆರೆಮನೆಯ ಕಂಬಿಯ ನಡುವೆ**
**ಕಮರುವ ಕನಸು ಕೊನರೀತು ಹೇಗೆ?**
**ಬಿಳಿ ಜನರ ಕರಾಳ ಕಪ್ಪು ಹೃದಯಕ್ಕೆ**
**ಕ್ರಿಸ್ತನ ಕರುಣೆ ಅರ್ಥವಾದೀತು ಹೇಗೆ?**

—ಈ ಸಾಲುಗಳ, ಕವನಗಳ ಪರಿಣಾಮಶೀಲತೆಗೆ ಮುಖ್ಯ ಕಾರಣ ಅವು ಬಿಡಿಸಿಡುವ ಸರಳ, ನೇರ ಆದರೆ ಆತ್ಮೀಯವಾದ ಸಾಮಾಜಿಕ ಚಿತ್ರಗಳ ಮೂಲಕ ಜಿನುಗುವ ದುಃಖ. ಇದು ಮನವರಿಕೆಯ-ತನ್ನ ಕಾವ್ಯ ಪ್ರಯೋಗದ ನೆಲೆಯಲ್ಲಿಯೇ ಸಾಧಿಸಿಕೊಂಡ ಸಾಕ್ಷಾತ್ಕಾರ (realisation)ದ–ಫಲವಾದ ದುಃಖ. ಇದು ಸಹಜವಾಗಿಯೇ ಅರಿವು ತುಂಬಿಕೊಂಡ ದುಃಖ. (ಸಂಸಾರ ದುಃಖಮಯ ಎಂಬ, ಬುದ್ಧನ ಅರಿವಿನ ಬೇರಿನಲ್ಲಿರುವ ಪಾರಮಾರ್ಥಿಕ ದುಃಖ). ಈ ಲೇಖನದ ಪೀಠಿಕೆಯಲ್ಲಿ ಜಿಎಸ್‌ಎಸ್ ಅವರ ಕಾವ್ಯದ ಅಂತಿಮ ಬಿಕ್ಕಟ್ಟನ್ನು ಸೂಚಿಸುತ್ತದೆಂದು ಪ್ರಸ್ತಾಪಿಸಿದ 'ಯಾವ ಹಾಡ ಹಾಡಲಿ?' ಕವನದ ತುಂಬಾ ತುಂಬಿಕೊಂಡಿರುವುದೂ ಪುನರಾವೃತ್ತಿಯ ಲಯ ಕೌಶಲ್ಯದ ಮೂಲಕ ಮಂಥನಗೊಂಡು ಹುಟ್ಟುವ, ಇಂತಹ ದುಃಖವೇ. ಹೀಗಾಗಿ ಈ ದುಃಖ,

ಜಿಎಸ್‌ಎಸ್ ಅವರ ಕಾವ್ಯದ ಅಂತಿಮ ಬಿಕ್ಕಟ್ಟಿನ ಹೇಗೋ ಹಾಗೆ ಅಂತಿಮ ಬಿಡುಗಡೆಯ ಅವಸ್ಥೆಯೂ ಹೌದು. ಹಾಗೇ ಪುನರಾವೃತ್ತಿಯ ಲಯವನ್ನು ತನ್ನೊಡಲೊಳಗೆ ಇಟ್ಟುಕೊಂಡ ಈ ಅವಸ್ಥೆಯಿಂದಾಗಿ ಜಿಎಸ್‌ಎಸ್ ಅವರ ಕಾವ್ಯದೊಳಕ್ಕೆ ಆಗುವ ಚಕ್ರದ ಪ್ರವೇಶದ ಪ್ರತೀಕವಾಗಿ ಅವರ ಕಾವ್ಯ ಹೊಸದೊಂದು ನೆಲೆ ಮುಟ್ಟುವ ಅಚ್ಚರಿಯನ್ನು ನಾವು ಮುಂದೆ ಕಾಣಬಹುದು. 'ಎಲ್ಲೋ ಮಗು ಅಳುತಾ ಇದೆ' ಕವನವನ್ನೇ ನೋಡಿ. ಇಲ್ಲಿ ಕವಿ, ದುಃಖವು ಮಗುವಿನ ದುಃಖದ ರೂಪಕದ ಮೂಲಕ ವೈಯಕ್ತಿಕ-ಸಾಮಾಜಿಕ ಸ್ತರಗಳ ದ್ವಂದ್ವವನ್ನು ಮೀರಿ ಚರಿತ್ರೆಯ ಚಲನೆಗೆ ಶೃತಿಯಾಗುವುದನ್ನು ಕಂಡರಿಸುತ್ತಾರೆ:

**ಎಲ್ಲೋ ಮಗು ಅಳುತಾ ಇದೆ**
**ಒಂದೆ ಸವನೆ**
**ದೂರದ ಬಿರುಗಾಳಿಯ ಮೊರೆಯಂತೆ**
**ಮುಗಿಲಿಂದಿಳಿಯುವ ಧಾರಾಕಾರದ**
**ಮಳೆಯಂತೆ**

—ಎಂದು ಪ್ರಕೃತಿಲೋಕದ ರೂಪಕಾಲಂಕಾರಗಳ ಧ್ವನಿಶಕ್ತಿಯೊಂದಿಗೆ ಆರಂಭವಾಗಿ ಮತ್ತೆ ಮತ್ತೆ 'ಎಲ್ಲೋ ಮಗು ಅಳುತಾ ಇದೆ ಒಂದೇ ಸಮನೆ' ಎಂಬ ಪುನರಾವರ್ತನೆಯ ಲಯದ ಮೂಲಕ, ಮನುಷ್ಯ ಲೋಕದ ಸಾಹಸ ಸಾಧನೆಗಳನ್ನೆಲ್ಲ ಮಣ್ಣು ಮಾಡುವ ಆತ್ಯಂತಿಕ ದುರಂತದಲ್ಲಿ ತಾರಕವನ್ನು ಮುಟ್ಟಿ ಹೀಗೆ ಮುಗಿಯುತ್ತದೆ:

**ಮಗು ಅಳುತಾ ಇದೆ ಒಂದೇ ಸಮನೆ**
**ಶತಶತಮಾನದ ಬೆವರಿನ ತೆನೆಗಳ-**
**ನೆತ್ತಿದ ಹೊಲ ಗದ್ದೆಗಳಲ್ಲಿ**
**ಕವಿ-ವಿಜ್ಞಾನಿಯ-ಕ್ರಾಂತಿಕಾರಿಗಳ**
**ಸಾಧನೆ-ಅನ್ವೇಷಣೆಗಳ ಹಾದಿಯಲಿ**
**ಬಿರುಗಣ್ಣುರಿಯಲಿ ಕಮರುವ ಕನಸಿನ**
**ಚಿತೆಯ ಜ್ವಾಲೆಗಳ ಧೂಮದಲಿ**
**ಚರಿತ್ರೆಯುದ್ದಕು ಕೆನೆವ ಕುದುರೆಗಳ**
**ರಥ ಚಕ್ರದ ಕೆಂಧೂಳಿಯಲಿ**
**ಎಲ್ಲೋ ಮಗು ಅಳುತಾ ಇದೆ.......**

ಈ ಚಕ್ರ ಚರಿತ್ರೆಯ ಚಕ್ರ. ಅಥವಾ ಕರ್ಮ ಚಕ್ರ. ದುಃಖದ ಸುಳಿ ಹುಟ್ಟುವುದೂ ಅಡಗುವುದೂ ಇದರ ಅಚ್ಚಿನಲ್ಲಿಯೇ. ಆದುದರಿಂದ ಈ ಸುಳಿಯಿಂದ ಬಿಡುಗಡೆ ಪಡೆಯುವ ಏಕೈಕ ಮಾರ್ಗವೆಂದರೆ ಈ ಚಕ್ರದ ಚಲನೆಯ ತರ್ಕವನ್ನು ಅರ್ಥಮಾಡಿಕೊಳ್ಳುವುದು. 'ಚರಿತ್ರೆ-ಪುರಾಣ' ಎಂಬ ಕವಿತೆಯಲ್ಲಿ ಕವಿಗೆ ಅದರ ಹೊಳಹು ಸಿಕ್ಕಿದೆ:

ಮುಂದಕ್ಕೆ ಚಲಿಸುತ್ತಿದ್ದರೆ ಅದು ಚರಿತ್ರೆ
ನಿಂತು ಮಡುಗಟ್ಟಿದರೆ ಪುರಾಣ
ಪರಿಸ್ಥಿತಿ ಹೀಗೆ ಪುರಾಣವಾಗುತ್ತಲೇ
ಶುರುವಾಗುತ್ತದೆ ಅದರ ಪಾರಾಯಣ.

ಚರಿತ್ರೆ-ಪುರಾಣಗಳ ರೂಪಾಂತರದ ಈ ಚಕ್ರೀಯ ಸತ್ಯದ ಹೊಳಹು ಜಿಎಸ್‌ಎಸ್ ಅವರ ಕಾವ್ಯವನ್ನು ಒಂದು ಹೊಸ ನೆಲೆಗೇ ಒಯ್ಯುತ್ತದೆ. ಇಲ್ಲಿಂದ ಅವರ ಕಾವ್ಯದ ಜನ್ಮಾಂತರ ಆರಂಭ.

೬

ಜನ್ಮಾಂತರವೆಂದರೆ ಒಂದು ಅವಸ್ಥೆಯ ಅನುಭವ-ಅನುಭೂತಿ-ತಿಳುವಳಿಕೆಯನ್ನೆಲ್ಲ ಬೀಜೀಕರಿಸಿಕೊಂಡು ಮಣ್ಣಲ್ಲಿ (ಕಾಲದಲ್ಲಿ) ಮಲಗಿ ಮತ್ತೆ ಗಿಡವಾಗಿ ಎದ್ದು ಮರವಾಗಿ ಅರಳುವುದು. ಜಿಎಸ್‌ಎಸ್. ಅವರ ಈವರೆಗಿನ ಕೊನೆಯ ಸಂಕಲನ 'ಚಕ್ರಗತಿ' (1992) ಯಲ್ಲಿ ನಾವು ಹಳೆಯ ಕಾವ್ಯಪ್ರಯೋಗಗಳೆಲ್ಲದರಿಂದ ಹೊಮ್ಮಿದ ಹೊಸ ಎಚ್ಚರ, ಕೌಶಲಗಳ ಸ್ಪಷ್ಟ ಸೂಚನೆಗಳನ್ನು ಕಾಣಬಹುದು. ವ್ಯಕ್ತಿ ಮತ್ತು ಅತೀತದ ಸಂಬಂಧವನ್ನು ನಂಬಿಕೆಯ ನೆಲೆಯಲ್ಲಿ ಒಪ್ಪಿಕೊಂಡು ಆರಂಭವಾದ ಇವರ ಕವಿತೆ ವೈಚಾರಿಕತೆಗೆ ತೆರೆದುಕೊಳ್ಳುತ್ತಾ ವ್ಯಕ್ತಿ ಮತ್ತು ಸಮಾಜಗಳ ನಡುವಣ ಸಂಬಂಧದ ಅನ್ವೇಷಣೆ ತಿರುಗಿ, ಅದು ಮಾಗಿದಂತೆ ಮತ್ತೆ ಇನ್ನೊಂದು ಸ್ತರದಲ್ಲಿ ವ್ಯಕ್ತಿ ಮತ್ತು ಅತೀತದ ನಡುವಣ ಸಂಬಂಧವೇ ಆಗಿರುವುದನ್ನೂ; ಈ ಎಲ್ಲ ಸಂಬಂಧಗಳೂ ಅರಿವು ತುಂಬಿಕೊಂಡ ದುಃಖದ ಮೂಲಕವೇ ಅರ್ಥಪೂರ್ಣವಾಗುವುದನ್ನೂ ಕಂಡು ಬೆರಗಾಗಿ ನಿಲ್ಲುವುದರೊಂದಿಗೆ ಒಂದು ಪೂರ್ಣ ಸುತ್ತು ಮುಗಿಸುತ್ತದೆ. ಈ ಹೊಸ ಬೆರಗೇ 'ಚಕ್ರಗತಿ'ಯ ಬಹಳಷ್ಟು ಕವನಗಳನ್ನು ಆವರಿಸಿ ಜಿಎಸ್‌ಎಸ್ ಅವರನ್ನು ಒಬ್ಬ ಹಚ್ಚಹೊಸ ಕವಿಯೇನೋ ಎಂಬಂತೆ ಹೊಸ ಬೆಳಕಿನಲ್ಲಿ ನಿಲ್ಲಿಸಿರುವುದು. ಈ ಸಂಕಲನದ 'ಸಂಭವ' ಎಂಬ ಮೊದಲ ಕವನವೇ ಕವಿಯಲ್ಲಿ ಕಾವ್ಯ ಕುರಿತ ತಿಳುವಳಿಕೆ ಹೇಗೆ ಕ್ರಾಂತಿಕಾರಕವಾಗಿ ಮಾರ್ಪಾಡಾಗಿದೆ ಎಂಬುದನ್ನು ಸೂಚಿಸುತ್ತದೆ:

ಕಾಯುತ್ತಿರಲು ಹೀಗೆ ನಾನೊಬ್ಬನೆ
ಕವಿತೆಗೆ, ಅದೆಲ್ಲಿಂದಲೋ ಸದ್ದಿರದೆ
ಹಾರಿ ಬಂತೊಂದು ಕಪ್ಪನೆ ಕಾಗೆ, ಅಸ್ಪಷ್ಟತೆಗೆ
ಮೂಡಿದ ಹಾಗೆ ಎರಡು ರೆಕ್ಕೆ.
ವಕ್ತಾಭಿವ್ಯಕ್ತಗಳ ಕೊಂಬೆ ನಕ್ಸೆಯ ನಡುವೆ
ರೆಕ್ಕೆಯರಳಿಸಿ, ಸ್ವರವೆತ್ತಿ ಕೂತೊಡನೆ ಕಾಗೆ
ಇಡೀ ಮರಕ್ಕೆ ಮರವೇ, ಪ್ರತೀಕವಾಗಿ
ಪರಿಣಮಿಸಿತ್ತು ನಾನು ಕಾಯುತ್ತಿದ್ದ ಕವಿತೆಗೆ.

ಪೌರಾಣಿಕವಾಗಿ ಪಿತೃಗಳಿಗೆ ಪ್ರತೀಕವಾಗಿರುವ ಕಾಗೆ ಈ ಕವನದಲ್ಲಿ, ಅಸ್ತಿತ್ವದ ನಿಗೂಢ ನೆನಪಿನಾಳದಿಂದೆದ್ದ ಒಂದು ತರಂಗ ಇಡೀ ಅಸ್ತಿತ್ವಕ್ಕೇ ಒಂದು ಹೊಸ ರೂಪ ಹಾಗೂ ಅರ್ಥ ನೀಡುವ ಪವಾಡ ಸದೃಶತೆಗೆ ಸಾಕ್ಷಿಯಾಗಿದೆ. ಬದುಕಿಗೂ ಕಾವ್ಯಕ್ಕೂ, ಚರಿತ್ರೆಗೂ ಪುರಾಣಕ್ಕೂ ಇರುವ ಸಂಬಂಧವೂ ಹೀಗೆ, ಇಷ್ಟೇ ಪವಾಡಸದೃಶವಾದುದು; ತಿರುಗುವ ಗಾಲಿ ಎಲ್ಲವನ್ನೂ ಒಂದು ಮಾಡುತ್ತದೆ. ಈ ಚಕ್ರೀಯ ಸತ್ಯದ ಅರಿವು ಇಲ್ಲಿ ದಾಖಲಾಗಿದೆ:

> ಜಗನ್ನಾಥನ ಗಾಲಿ ಕಣ್ಣುಗಳಲ್ಲಿ ಕಂಡೆ: ವಿಸ್ತಾರ
> ವಾದ ಸೂರ್ಯಕಾಂತಿಯ ಹೊಲದ ವೈಭವವನ್ನು,
> ಹಗಲು-ರಾತ್ರಿಗಳನ್ನು ಒಟ್ಟಿಗೇ ಹಿಡಿದು, ಆಯ-
> ಸ್ಕಾಂತ ಕೇಂದ್ರಬಿಂದುವಿಗೆ ತಂದ ಕೌಶಲವನ್ನು.

*(ಪುರಿ ಜಗನ್ನಾಥನ ದೇಗುಲದಲ್ಲಿ)*

ಈ ಕೌಶಲವೇ ನಾನು ಈ ಮುನ್ನ ಜಿಎಸ್‌ಎಸ್ ಅವರ ಕಾವ್ಯ ಸಾಧನೆಯ ಉತ್ತುಂಗ ಶಿಖರವೆಂದು ಗುರುತಿಸಿ ಪ್ರಸ್ತಾಪಿಸಿದ, 'ಅಸ್ತಮಾನ' ಕವಿತೆಯನ್ನು ಸೃಷ್ಟಿಸಿರುವುದು. ಈ ಕೌಶಲದ ಒಂದು ರೂಪ ಇಲ್ಲಿ ಹಾಗೂ ಈ ಸಂಕಲನದ ಇನ್ನೂ ಹಲವು ಕವನಗಳಲ್ಲಿ ಕಾಣಬರುವ run on stanza ತಂತ್ರ; ಅಂದರೆ ಪದ್ಯ ಸ್ಟಾಂಜಾಗಳಲ್ಲಿ ವಿರಮಿಸದ ನಿರಂತರತೆಯನ್ನು ಕಾಪಾಡಿಕೊಂಡು ಹೋಗುವ ತಂತ್ರ. ಕಂದ-ವೃತ್ತ-ಚಂಪೂಗಳನ್ನು ಜೋಡಿಸುವ ಪಂಪನ ತಂತ್ರದ ವಿಕಸಿತ ರೂಪದಂತಿರುವ ಇದು, ಬದುಕೂ, ಸತ್ಯವೂ ಹಾಗೇ ಎಂದು ಜಿಎಸ್‌ಎಸ್ ಅವರಿಗೆ ಆಗಿರುವ ಮನವರಿಕೆಗೆ ಸಂಬಂಧಿಸಿದ ತತ್ವವೂ ಆಗಿರಬಹುದು. ಹೀಗೆ ಗ್ರಹಿಕೆ ಮತ್ತು ಅಭಿವ್ಯಕ್ತಿಗಳನ್ನು ಐಕ್ಯಗೊಳಿಸುವ ಈ ಚಕ್ರೀಯ ಸತ್ಯವನ್ನು ತಮ್ಮ ಇತ್ತೀಚಿಗಿನ 'ಚರಿತ್ರೆ ಅಂದರೆ' ಎಂಬೊಂದು, ಈ ತಂತ್ರದಲ್ಲೇ ಬರೆದಿರುವ ಕವನದಲ್ಲಿ ಅಂತಿಮವಾಗಿ ಕಾಣಿಸಿರುವುದು ಹೀಗೆ:

> ಚರಿತ್ರೆ ಅಂದರೆ ನಡೆದುದಷ್ಟೇ ಅಲ್ಲ, ನಡೆಯು-
> ತ್ತಿರುವುದು ಕೂಡಾ. ಎಲ್ಲ ಪಾತಗಳೂ ಮರೆತು
> ಮತ್ತೆ ಚಿತ್ತವಿಕಾರ. ನಾಗರೀಕತೆಯ ಹೃದ-
> ಯದ ಮೇಲೆ ಎಷ್ಟೊಂದು ಗಾಯಗಳ ಗುರುತು!

೨

ಇದಿಷ್ಟು ಇದುವರೆಗಿನ ಜಿ.ಎಸ್. ಶಿವರುದ್ರಪ್ಪನವರ ಕಾವ್ಯದಲ್ಲಿನ ಸಾಮಾಜಿಕ ದರ್ಶನ. ಬಹುಶಃ ಇವರಷ್ಟು ಸಾಮಾಜಿಕ ಕವನಗಳನ್ನು ಬರೆದ ಹಿರಿಯಕವಿ ಇನ್ನೊಬ್ಬರಿಲ್ಲ.

ಅಡಿಗರ ಸಾಮಾಜಿಕತೆ ಸಾರತಃ ರಾಜಕೀಯ ಸ್ವರೂಪದ್ದು. ಆದರೆ ಜಿಎಸ್‌ಎಸ್ ಸಾರ್ವತ್ರಿಕ ನೆಲೆಗಳಲ್ಲಿಯೇ ಸಮಾಜದ ಏರುಪೇರುಗಳಿಗೆ ಪ್ರತಿಕ್ರಿಯಿಸಿದವರು. ಇಂತಹ ಪ್ರತಿಕ್ರಿಯೆಗಳ ಪ್ರಕ್ರಿಯೆಯ ಮೂಲಕವೇ ತಮ್ಮ ಕಾವ್ಯದ ಕಸಬುದಾರಿಕೆಯನ್ನು ಹದಗೊಳಿಸಿ ಕೊಂಡು ಹೊಸ ಕಾಣ್ಕೆಗಳಿಗೆ ತಮ್ಮ ಕಾವ್ಯದ ಕಣ್ಣುಗಳನ್ನು ತೆರೆದುಕೊಂಡವರು.

ಈ ಅರ್ಥದಲ್ಲಿ ಜಿಎಸ್‌ಎಸ್ ನಮ್ಮ ಓರ್ವ ಬಹುಮುಖ್ಯ ಸಾಮಾಜಿಕ ಕವಿ. ಈ ಮಾತನ್ನು ಇಲ್ಲಿ ಎತ್ತಿ ಹೇಳುತ್ತಿರುವುದೇಕೆಂದರೆ, ಹೀಗೆ ಸಾಮಾಜಿಕ ಕವಿಗಳಾದ ಅನೇಕರು ಕ್ರಮೇಣ ಕವಿತ್ವವನ್ನೇ ಕಳೆದುಕೊಂಡು ಬರೀ ಸಾಮಾಜಿಕರಾದದ್ದೇ ಹೆಚ್ಚು. ಈ ದೃಷ್ಟಿಯಿಂದ ಇದು ಅಪಾಯದ ದಾರಿ. ಆದರೆ ಈ ಕವಿ, ಕವಿತೆ ಮತ್ತು ಸಾಮಾಜಿಕತೆಗಳ ದ್ವಂದ್ವವನ್ನು ಕಾವ್ಯಕಸುಬುದಾರಿಕೆಯಲ್ಲಿ (ಎಲ್ಲ ಅತಿಗಳನ್ನೂ ಐಕ್ಯಗೊಳಿಸುವ) ಮಧ್ಯಮ ಮಾರ್ಗವನ್ನು ಅನುಸರಿಸುವ ಮೂಲಕ ಪರಿಹರಿಸಿಕೊಂಡಿದ್ದಾರೆ. ಈ ಕಾರಣದಿಂದಲೇ ಇವರ ಕಾವ್ಯ ಸರಳ, ಪಾರದರ್ಶಕ ಹಾಗೂ ಉತ್ತರಣೀಯವೂ (transcedent) ಆಗಿದೆ. ಈ ಅರ್ಥ ದಲ್ಲಿ ಜಿಎಸ್‌ಎಸ್ ಅವರನ್ನು ಸಮನ್ವಯಕವಿ ಎನ್ನುವುದಕ್ಕಿಂತ ಮಧ್ಯಮಮಾರ್ಗದ ಕವಿ ಎಂದು ಗುರುತಿಸುವುದು ಹೆಚ್ಚು ಉಚಿತ ಅನ್ನಿಸುತ್ತದೆ. ಎಷ್ಟಾದರೂ ಈ ಮಧ್ಯಮ ಮಾರ್ಗದ ಗುರು ಬುದ್ಧ ತಾನೇ? ಹಾಗಲ್ಲದೆ 'ಅಸ್ತಮಾನ'ದ ಕೃಷ್ಣ ಹೀಗೆ ಕಂಡಾನೆ?"

**ನಿಶ್ಶಬ್ದ ಕಾನನದೊಳಗೆ ಹಸಿರ ಹೆಡೆ ಬಿಡಿಸಿದ-**
**ಶ್ವತ್ಥ ವೃಕ್ಷದ ಕೆಳಗೆ ಮಂದಹಾಸದ**
**ಮೂರ್ತಿ; ಒಂದು ಕಾಲನ್ನಿನ್ನೊಂದು ಕಾಲಿನ ಮೇಲೆ**
**ನವಿಲುಗರಿಯಂತಿರಿಸಿ ಮಲಗಿದ ಮೌನ.**

*(ಮೂಲ: ಶಿವಮೊಗ್ಗದ ಕರ್ನಾಟಕ ಸಂಘ ಜಿಎಸ್‌ಎಸ್ ಅವರಿಗೆ*
*ಗೌರವ ಸದಸ್ಯತ್ವ ನೀಡಿದ ಸಂದರ್ಭದಲ್ಲಿನ*
*ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ: 1997)*



# ಜಿಎಸ್‌ಎಸ್ ಕಾವ್ಯದಲ್ಲಿ ವೈಚಾರಿಕತೆ

ಕರುಣಾಕರ

ಕನ್ನಡದಲ್ಲಿ ನವೋದಯ ಸಾಹಿತ್ಯದ ಆರಂಭವು ಒಂದು ಮಹತ್ವದ ತಿರುವು. ಭಾಷೆ, ಅಭಿವ್ಯಕ್ತಿ ಕ್ರಮ, ಜೀವನದೃಷ್ಟಿ, ಸಾಹಿತ್ಯದ ಧ್ಯೇಯೋದ್ದೇಶಗಳು—ಹೀಗೆ ಸಾಹಿತ್ಯದ ಬಹುಮುಖ್ಯ ಅಂಶಗಳಲ್ಲಿ ಹೊಸದೊಂದು ಮಾರ್ಗ ತೆರೆದುಕೊಂಡಿತು. ಕನ್ನಡ ಸಾಹಿತ್ಯದಲ್ಲಿ ಕಂಡುಬರುವ ವೈವಿಧ್ಯಮಯವಾದ ಆಧುನಿಕ ಸಾಹಿತ್ಯಕ್ಕೆಲ್ಲ ಮೂಲವಾದುದು ನವೋದಯ ಸಾಹಿತ್ಯ—ಎಂಬುದು ನಿಸ್ಸಂಶಯವಾದುದು.* ಸಾಹಿತ್ಯಿಕವಾಗಿ ಕನ್ನಡಕ್ಕೆ ಅತ್ಯಂತ ಮೌಲಿಕವಾದದ್ದನ್ನು ನೀಡಿದ ನವೋದಯ ಸಾಹಿತ್ಯವು ಸಾಹಿತ್ಯ ಪ್ರಕಾರವಾಗಿ ತನ್ನ ಪ್ರಖರತೆಯ ದೃಷ್ಟಿಯಿಂದ ಒಂದು ಆಗಿ ಹೋದ ಘಟ್ಟವೆನಿಸಿದರೂ, ಹೊಸ ಪೀಳಿಗೆಯ ಬರಹಗಾರರನ್ನು ಇಂದಿಗೂ ಪ್ರಚೋದಿಸುತ್ತಿದೆ. ಒಂದಲ್ಲ ಒಂದು ರೀತಿಯಿಂದ ತನ್ನ ಪ್ರಭಾವವನ್ನು ಬೀರುತ್ತಿದೆ. ಕನ್ನಡದ ನವೋದಯೋತ್ತರ ಪ್ರಗತಿಶೀಲ, ನವ್ಯ, ದಲಿತ, ಬಂಡಾಯ ಸಾಹಿತ್ಯಗಳ ಬಳಿಕವೂ ಕಂಡು ಬರುವ ಈ 'ಪ್ರಚೋದನೆ' ನವೋದಯವನ್ನೊಂದು ಮುಗಿದು ಹೋದ ಸಾಹಿತ್ಯಿಕ ಅವಸ್ಥೆಯಾಗಿಸದೆ ಅದನ್ನೊಂದು ನಿರಂತರ ಪ್ರಕ್ರಿಯೆಯನ್ನಾಗಿಸುತ್ತದೆ. ಹೊರಗಿನ ಪ್ರಚೋದನೆಯಿಂದ ಬಂದಾಗಲೂ ಅದು ಹೇಗೆ ನಮ್ಮದೇ ಆಗಿ ಈ ನೆಲದಲ್ಲಿ ಬೆಳೆಯುವಲ್ಲಿ ಅದರ ಸತ್ವವೆಂತಹುದು ಎಂಬುದಕ್ಕೆ ಈ ಅಂಶ ಸಾಕ್ಷಿಯಾಗುತ್ತದೆ.

ಕವಿಯಾಗಿ ಕಾವ್ಯವನ್ನು ತಮ್ಮ ಅಭಿವ್ಯಕ್ತಿಯ ಅಧಿಕೃತ ಮಾಧ್ಯಮವನ್ನಾಗಿಸಿಕೊಂಡ ಜಿ.ಎಸ್. ಶಿವರುದ್ರಪ್ಪನವರಿಗೆ ಅದೊಂದು ಅನಿವಾರ್ಯ ಕರ್ಮ; ಅಂದರೆ ಸಹಜ ಸ್ಫೂರ್ತಿಕ್ರಿಯೆ. ತಮ್ಮ ಕಾವ್ಯಕ್ಕೆ ಮೂಲ ಪ್ರೇರಣೆಯನ್ನು ಕವಿ ನವೋದಯ ಸಾಹಿತ್ಯದಿಂದಲೇ ಪಡೆದಿದ್ದಾರೆ ಎಂಬುದು ಅತ್ಯಂತ ಸ್ಪಷ್ಟವಾದ ಅಂಶವಾಗಿದೆ. 1947-51ರ ಮಧ್ಯೆ ರಚಿತವಾದ ಇವರ ಮೊದಲ ಕವನ ಸಂಕಲನ 'ಸಾಮಗಾನ'ದಲ್ಲಿನ ಕವಿತೆಗಳಲ್ಲಿ ಇದಕ್ಕೆ ಆಧಾರಗಳಿವೆ.*[1] ಆದರೆ ಇಲ್ಲಿ ಬಹಳ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ

---

* ನವೋದಯ ಸಾಹಿತ್ಯದ ಬಳಿಕ ಬಂದ ಸಾಹಿತ್ಯ ಪ್ರಕಾರಗಳು ಅದಕ್ಕೆ ಪ್ರತಿಕ್ರಿಯೆಯಾಗಿಯೋ, ಅದರ ನ್ಯೂನತೆಯನ್ನು ಟೀಕಿಸಿಯೋ ಹುಟ್ಟಿಕೊಂಡವುಗಳು ಎಂಬ ದೃಷ್ಟಿಯಿಂದ.

*[1] ತನ್ನ ಸ್ಫೂರ್ತಿಯ ನೆಲೆಯಾಗಿ ಬಹಳ ಗೌರವದಿಂದ ಮಹಾಕವಿ ಕುವೆಂಪು ಅವರನ್ನು ನೆನೆಯುತ್ತಾ ಈ ಅಂಶವನ್ನು ಕವಿ ಮತ್ತಷ್ಟು ಸ್ಪಷ್ಟಪಡಿಸಿದ್ದಾರೆ. (ಕಾಡಿನ ಕತ್ತಲಲ್ಲಿ, ಶ್ರೀ ಕುವೆಂಪು ಅವರಿಗೆ-444).

ನವೋದಯದಿಂದ ತಮ್ಮ ಕಾವ್ಯ ಜೀವನವನ್ನು ಆರಂಭಿಸಿದ ಈ ಕವಿ, ಮುಂದಿನ ತಮ್ಮ ಬೆಳವಣಿಗೆಯ ಹಂತದಲ್ಲಿ ಸ್ವತಃ ನವೋದಯಕ್ಕಾಗಲೀ, ಅನಂತರ ಬೆಳೆದ ಯಾವುದೇ ಸಾಹಿತ್ಯ ಮಾರ್ಗಗಳಿಗಾಗಲಿ ತಮ್ಮನ್ನು ಸೀಮಿತಗೊಳಿಸಿಕೊಂಡವರಲ್ಲ. ಅದೇ ಸಮಯದಲ್ಲಿ ಎಲ್ಲರಿಂದಲೂ ಒಂದಿಷ್ಟು ತೆಗೆದುಕೊಂಡ ರೀತಿಯೂ ಅಲ್ಲ. ಬದಲಾಗಿ ತಮ್ಮ ಕವಿತೆಗಳುದ್ದಕ್ಕೂ ತಮ್ಮದೇ ಆದೊಂದು ದಾರಿಯನ್ನು ತುಳಿದು ವ್ಯಕ್ತಿವಿಶಿಷ್ಟರಾಗಿ ಬೆಳೆದಿದ್ದಾರೆ. ಈ ದಾರಿ ಸ್ವಂತಿಕೆಯದ್ದು, ಸಾಹಸದ್ದು. ಜಿಎಸ್‌ಎಸ್ ಅವರ ಕಾವ್ಯವನ್ನು ವಿಮರ್ಶಿಸುವ ಯಾರೂ ಮೊದಲಿಗೆ ತಿಳಿಯಬೇಕಾದ್ದು ಇದು.

ನವ್ಯರಿಂದ ಕನ್ನಡದಲ್ಲಿ ಬೆಳೆದು ಬಂದ ಸಾಹಿತ್ಯ ವಿಮರ್ಶೆಗೆ ಸಹಜವಾಗಿಯೇ ಕೆಲವು ಮಿತಿಗಳಿವೆ. ನವ್ಯರು ನವ್ಯೇತರ ಸಾಹಿತ್ಯ-ಕವಿಗಳನ್ನು ನೋಡುವ ದೃಷ್ಟಿಯೂ ಅವರ ವಿಮರ್ಶೆಯ ಒಂದು ಪರಿಮಿತಿಯಾಗಿ ಸೇರಿಕೊಂಡಿದೆ. ಈ ದೃಷ್ಟಿ ಬದಲಾಗಬೇಕು. ಈ ಕುರಿತಂತೆ—"ಕನ್ನಡ ಕಾವ್ಯದ ಪ್ರಧಾನ ಸ್ರೋತವೆಂಬುದು ಹಲವು ಬಗೆಗಳಿಂದ ರಚಿತವಾದುದಾಗಿದೆ. ಈ ಬಹುಮುಖತ್ವವನ್ನು ಇನ್ನು ಗುರುತಿಸಬೇಕಾಗಿದೆ. ಅದಕ್ಕೆ ಅವಶ್ಯವಾದ ವಿಮರ್ಶಾ ಮಾನದಂಡಗಳು ಸದ್ಯ ನಮ್ಮಲ್ಲಿಲ್ಲ" (ನಾರಾಯಣ ಕೆ.ವಿ., ಮುನ್ನುಡಿ, ಸಮಗ್ರ ಕಾವ್ಯ) ಎಂಬ ಮಾತು, ನವ್ಯೇತರ ಅದರಲ್ಲೂ ನವೋದಯ ಮತ್ತು ಅದರ ಪ್ರಚೋದನೆಯಿಂದ ಬರೆಯುವ ಕವಿಗಳ, ಕಾವ್ಯದ ವಿಮರ್ಶೆಯ ಸಂದರ್ಭದಲ್ಲಿ ತೀರಾ ಸತ್ಯವಾದುದು. ಈ ಹಿನ್ನೆಲೆಯಲ್ಲಿ ಜಿಎಸ್‌ಎಸ್ ಅವರ ಕಾವ್ಯದ ಅಧ್ಯಯನ ಸಾಗಬೇಕಾದ ದಿಕ್ಕನ್ನು ಗುರುತಿಸಿಕೊಳ್ಳಬೇಕಾಗಿದೆ.

ಜಿಎಸ್‌ಎಸ್ ಅವರ ಕವನಗಳಲ್ಲಿನ ವೈಚಾರಿಕತೆಯನ್ನು ಗುರುತಿಸುವ ಮೊದಲು ಈ ಮಾತನಾಡಬೇಕಾಯಿತೇಕೆಂದರೆ, ಈ ಕವಿಯ ಕಾವ್ಯವನ್ನು ವಿಮರ್ಶಿಸುವ ಅನೇಕರು ಇದರ ಮೂಲಕ ಮೊದಲು ತಿಳಿಯ ಯತ್ನಿಸುವುದು ಈ ಕವಿ ಸಾಹಿತ್ಯಿಕವಾಗಿ ಯಾವ 'ಜಾತಿ'ಗೆ ಸೇರಿದವರೆಂಬುದನ್ನು. ಕಾವ್ಯದಲ್ಲಿನ ಛಂದಸ್ಸು, ಅಲಂಕಾರಗಳನ್ನಷ್ಟೇ ನೋಡಿ ಕಾವ್ಯದ, ಆ ಮೂಲಕ ಕವಿಯ ಬೆಲೆಕಟ್ಟುವ ಸಂಸ್ಕಾರದ ಇಂಥ ದೃಷ್ಟಿಗೆ ಆಧುನಿಕ ಕಾವ್ಯ ವಿಮರ್ಶೆಯ ಸಂದರ್ಭದಲ್ಲೂ ಈ ಪೂರ್ವಜನ್ಮವಾಸನೆ ತಪ್ಪಲಿಲ್ಲವೆನ್ನಿಸುತ್ತದೆ. ಅದೇನಿದ್ದರೂ ಇದು ಕವಿಯೊಬ್ಬನ ಸತ್ವವನ್ನು ಗುರುತಿಸುವ ಸರಿಯಾದ ಕ್ರಮವಂತೂ ಖಂಡಿತಾ ಅಲ್ಲ. ಈ ಎಲ್ಲ ಮಾತುಗಳ ಉದ್ದೇಶ ಕವಿಯನ್ನು ಯಾವುದೋ ಒಂದು ಗುಂಪಿನ ಅಡಿಯಲ್ಲಿ ಗುರುತಿಸುವುದಲ್ಲ. ಈಗಾಗಲೇ ಈ ಕವಿಯ ಬಗ್ಗೆ ಅಂದದ್ದನ್ನು ಸಮರ್ಥಿಸುವುದಕ್ಕೂ ಅಲ್ಲ. ಬದಲಾಗಿ ಇವರ ಕಾವ್ಯಗಳನ್ನಷ್ಟೇ ಇರಿಸಿಕೊಂಡು ಅಧ್ಯಯನ ಮಾಡಿದಾಗ ವೈಚಾರಿಕವಾಗಿ ಈ ಕವಿ ಎಂಥ ಜೀವನ ದೃಷ್ಟಿಯನ್ನು ಅಭಿವ್ಯಕ್ತಪಡಿಸಿದ್ದಾರೆ, ಇವರ ಕವನಗಳಲ್ಲಿನ ಸಾಮಾಜಿಕ ಕಾಳಜಿಯ ಸ್ವರೂಪ ಎಂಥದ್ದು ಮತ್ತು ಇವುಗಳ ಮೇಲಿಂದ ಈ ಕವಿ ಎಷ್ಟರ ಮಟ್ಟಿನ ಜೀವನಪರವಾದ ಧೋರಣೆಗಳನ್ನು ತಮ್ಮ ಕಾವ್ಯದಲ್ಲಿ ವ್ಯಕ್ತಪಡಿಸಿದ್ದಾರೆ ಎಂಬುದನ್ನು ಗುರುತಿಸುವ ಒಂದು ಪ್ರಯತ್ನವಷ್ಟೇ ಆಗಿದೆ.

ಜಿಎಸ್ಎಸ್ ಅವರ ಮೊದಲ ಕವನ ಸಂಕಲನ 'ಸಾಮಗಾನ'ದಿಂದ ಆರಂಭಿಸಿ 'ಪ್ರೀತಿ ಇಲ್ಲದ ಮೇಲೆ' ವರೆಗಿನ ಹತ್ತು ಕವನ ಸಂಕಲನಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಇವರ ಕಾವ್ಯ ಬೆಳೆದುಬಂದ ದಾರಿಯ ಹೊಳಹು ಸ್ಪಷ್ಟವಾಗಿ ದೊರೆಯುತ್ತದೆ. 'ಸಾಮಗಾನ'ದಲ್ಲಿ ಕಂಡುಬರುವ 'ಪ್ರಕೃತಿಯ' ಒಲವು ಅನಂತರ ಬದಲಾಗುತ್ತಾ ಹೋಗಿ ಸಂಪೂರ್ಣವಾಗಿ ಸಮಾಜದತ್ತ ಮುಖಮಾಡಿ ನಿಂತಿದ್ದು ಕಾಣುತ್ತದೆ. "ಎಲ್ಲ ಕೇಳಲಿ ಎಂದು ನಾನು ಹಾಡುವುದಿಲ್ಲ. ಹಾಡುವುದು ಅನಿವಾರ್ಯ ಕರ್ಮ ನನಗೆ" (ತೃಪ್ತಿ-62) ಎಂದು ತಮ್ಮ ಕವಿಕರ್ಮವನ್ನು ವ್ಯಾಖ್ಯಾನಿಸಿದ ಕವಿ ತಮ್ಮ ಕಾಡಿನ ಕತ್ತಲಲ್ಲಿ, ಪ್ರೀತಿ ಇಲ್ಲದ ಮೇಲೆ ಕವನ ಸಂಕಲನಗಳ ಹೊತ್ತಿಗೆ ತನ್ನ ಬರಹದ ಉದ್ದೇಶವನ್ನು ಹೀಗೆ ಘೋಷಿಸಿಕೊಳ್ಳುತ್ತಾರೆ.

ನಾನು ಬರೆಯುತ್ತೇನೆ
ನನ್ನ ಸಂವೇದನೆಗಳನ್ನು
ಕ್ರಿಯೆ ಪ್ರತಿಕ್ರಿಯೆಗಳನ್ನು
ದಾಖಲು ಮಾಡುವುದಕ್ಕೆ,
ನಿಂತ ನೀರಾಗದೇ ಮುಂದಕ್ಕೆ
ಹರಿಯುವುದಕ್ಕೆ
ನನ್ನನ್ನು ನಾನು ಕಂಡುಕೊಳ್ಳುವುದಕ್ಕೇ.

ನಾನು ಬರೆಯುತ್ತೇನೆ
ಖುಷಿಗೆ, ನೋವಿಗೆ
ರೊಚ್ಚಿಗೆ ಮತ್ತು ಹುಚ್ಚಿಗೆ
ಅಥವಾ ನಂದಿಸಲಾರದ ಕಿಚ್ಚಿಗೆ.

(ನಾನೇಕೆ ಬರೆಯುತ್ತೇನೆ, ಪು. 450)

ಅಥವಾ

ನಾನು ಬರೆಯುತ್ತೇವೆ
ನೆಲದಾಳಗಳಲ್ಲಿ ಮಲಗಿರುವ ಮೂಳೆಗಳ
ನಿಟ್ಟುಸಿರನ್ನು ಕುರಿತು
ಶತಮಾನಗಳ ಕತ್ತಲನ್ನೊಡೆದು
ಮೆತ್ತಗೆ ತಲೆಯೆತ್ತುವ ಮೊಳಕೆಗಳನ್ನು ಕುರಿತು
ಕೊನೆಯಿರದ ಬೀದಿಯ ಮೇಲೆ
ಕೀರ್ತಿಗೆ ಕಚ್ಚಾಡುವವರನ್ನು ಕುರಿತು
........................
ನನ್ನ ಒಂದೊಂದೇ ಎಲೆಯುದುರಿ
ನಾನು ಬೋಳಾಗುವುದನ್ನು ಕುರಿತು

(ಪ್ರೀತಿಯಿಲ್ಲದ ಮೇಲೆ, ಪು. 453)

ಮೇಲಿನ ಸಾಲುಗಳಲ್ಲಿ ಜಿಎಸ್‌ಎಸ್ ಅವರ ಕಾವ್ಯದ ಧ್ಯೇಯೋದ್ದೇಶಗಳ ಬಗೆಗೆ ಕೆಲವು ಬಹು ಮುಖ್ಯ ಸಂಗತಿಗಳು ಗೋಚರಿಸುತ್ತವೆ. ಕಾವ್ಯ ಪ್ರಕಾರವನ್ನು ತಮ್ಮ ಅಭಿವ್ಯಕ್ತಿಯ ಅಧಿಕೃತ ಮಾಧ್ಯಮವನ್ನಾಗಿಸಿಕೊಂಡ ಕವಿಗೆ ತನ್ನ ನೋವು ನಲಿವುಗಳನ್ನು ಸುತ್ತಣ ಪರಿಸರದ ಕುರಿತ ತನ್ನ ಎಲ್ಲ ಪ್ರತಿಕ್ರಿಯೆಗಳನ್ನು ಈ ಮಾಧ್ಯಮದಲ್ಲೇ ವ್ಯಕ್ತಪಡಿಸುವುದು ಅನಿವಾರ್ಯವಾಗುತ್ತದೆ. 'ಕಲೆಗಾಗಿ ಕಲೆ' ಎನ್ನುವಂತೆ 'ಕಾವ್ಯಕ್ಕಾಗಿ ಕಾವ್ಯ' ಎಂದಾಗದೇ ಜಿಎಸ್‌ಎಸ್ ಅವರಿಗೆ ಕಾವ್ಯವು ತಮ್ಮನ್ನು ಕಂಡುಕೊಳ್ಳುವ ಕಾಣಿಸುವ, ಬೆಳೆಯುವ ಹಾಗೂ ಸಮಾಜದ ಶೋಷಿತರ ಮತ್ತು ಶೋಷಕರ ಬಗೆಗೆ ತಮ್ಮ ಪ್ರತಿಕ್ರಿಯೆ ಗಳನ್ನು ದಾಖಲು ಮಾಡುವ ಸತ್ವಯುತವಾದ ಮಾಧ್ಯಮವಾಗಿಬಿಡುತ್ತದೆ. ಮಾನವನ ಬದುಕಿನಿಂದಲೇ ಜನಿಸಿದ ಸಾಹಿತ್ಯ ಅಂತರ್ಮುಖಿಯಾಗಿ ಮುರುಟದೆ ಬದುಕಿನತ್ತ, ಸಮಾಜದತ್ತ ಮುಖ ಮಾಡಬೇಕೆಂಬ ನಿಲುವು ಕವಿಯದು. ಸಾಹಿತ್ಯ ಎನ್ನುವುದು ಕೇವಲ ಕಲ್ಪನೆಗಳ ಕಂತೆಯಾಗದೆ, ಕೆಲವೇ ಮಂದಿಯ ಸಮಯ ಕಳೆಯುವ ಸಾಧನವಾಗದೆ, ಸಮಕಾಲೀನ ಅರೆಕೊರೆಗಳನ್ನು ವಿಮರ್ಶಿಸುವ ಕೆಲಸ ಮಾಡಬೇಕೆನ್ನುವ ಮೂಲಕ ಸಾಹಿತ್ಯಕ್ಕೊಂದು ಸಾಮಾಜಿಕ ಜವಾಬ್ದಾರಿ ಇದೆ ಎಂದು ಜಿಎಸ್‌ಎಸ್ ಗುರುತಿಸುತ್ತಾರೆ. ಇದು ಅವರ ಕವನಗಳುದ್ದಕ್ಕೂ ಸ್ಥಾಯಿಯಾಗಿ ಕಂಡುಬರುವ ಅಂಶವಾಗಿದೆ. ಜಿಎಸ್‌ಎಸ್ ಅವರ ಕವನಗಳಲ್ಲಿ ಕಂಡುಬರುವ ಸಾಮಾಜಿಕ ವಿಡಂಬನೆ, ಟೀಕೆಗಳಾಗಲಿ, ಬದುಕಿನ ಕುರಿತ ವೈಚಾರಿಕ ದೃಷ್ಟಿಯಾಗಲಿ ಅವೆಲ್ಲ ಸಾಹಿತ್ಯಕ್ಕೊಂದು ಸಾಮಾಜಿಕ ಜವಾಬ್ದಾರಿ ಇದೆ ಎಂದು ತಿಳಿದ ನೆಲೆಯಿಂದ ಬಂದವುಗಳಾಗಿವೆ.

ಮಾನವನಿಂದ ಹುಟ್ಟಿದ ಸಾಹಿತ್ಯಕ್ಕೆ ಸಾಮಾಜಿಕವಾದ ಜವಾಬ್ದಾರಿಯು ಒಂದು ಸಹಜವಾದ ಅಂಶವಾಗುವಂತೆ ಸಾಮಾಜಿಕರಲ್ಲಿ ಒಬ್ಬನಾದ ಕವಿಯೂ ಸಮಾಜದ ಒಂದು ಅಂಶವಾಗುತ್ತಾನೆ. "ಶತಮಾನಗಳ ಹಸಿವು ರೂಪತಾಳಿ ಬಂದಂತೆ ಗೇಟಾಚೆ ನಿಂತು ಅನ್ನಕೆ ಅರಚುವ ತಿರುಪೆ ಮುದುಕಿ ಇರುವಾಗ ನಾ ಹೇಗೆ ಊಟ ಮಾಡಲಿ".... "ಕೊಳಗೇರಿಯ ಚಿಂದಿ ಛಾವಣಿಯಲ್ಲಿ ಹೇಗೋ ಬದುಕಿರುವಸಂಖ್ಯರ ಕಂಡು ಬೆಚ್ಚನೆಯ ಮನೆಯಲ್ಲಿ ನಾ ಹೇಗೆ ತೆಪ್ಪಗಿರಲಿ" *(ಅವಸ್ಥೆ-469)* ಎನ್ನುವಲ್ಲಿ ಇವರ ಬಗ್ಗೆ ಕವಿ ಮಾನವೀಯ ನೆಲೆಯಲ್ಲಿ ಮಿಡಿಯುವುದು ಮಾತ್ರ ತೋರುತ್ತದೆಯಾದರೂ,

**ಅವರೆಲ್ಲ ಹಾಗಿರೋದಕ್ಕೆ**
**ನಾನು ಕಾರಣ ಅನಿಸುತ್ತೆ** (ಅದೇ)

ಎನ್ನುವಲ್ಲಿ ಸಮಾಜದಲ್ಲಿ ಬಡವರ 'ಸೃಷ್ಟಿ'ಯಲ್ಲಿ ತನ್ನನ್ನೂ ನೈತಿಕ ಹೊಣೆಗಾರನನ್ನಾಗಿಸಿ ಕೊಳ್ಳುತ್ತಾರೆ. ಹೀಗೆನ್ನುವುದು ಕವಿ ತನ್ನನ್ನೂ ಸಮುದಾಯದೊಡನೆ ಗುರುತಿಸಿಕೊಂಡುದರ ಫಲವಾಗಿದೆ. ಇಂತಹ ಸ್ಥಿತಿಯನ್ನು ಕಂಡೂ ಕಾಣದ ಹಾಗೆ ಬದುಕುವುದು ಸಾಧ್ಯವಿಲ್ಲದ

ಕಾರಣ ಕವಿ ಸ್ವತಃ ತನ್ನ ಮೇಲೆ ತನ್ನನ್ನೂ ಒಳಗೊಂಡ ಸಮಾಜದ ಮತ್ತು ಇಡೀ ವ್ಯವಸ್ಥೆಯ ಬಗ್ಗೆ ಅಸಹನೆಯನ್ನು ವ್ಯಕ್ತಪಡಿಸುತ್ತಾರೆ. ಹೀಗೆ ಸಾಹಿತ್ಯಕ್ಕೆ ಸಾಮಾಜಿಕವಾದ ಒಂದು ಜವಾಬ್ದಾರಿಯನ್ನು ಪ್ರತಿಪಾದಿಸುವುದರೊಂದಿಗೆ ಜಿಎಸ್ಎಸ್ ಸಾಹಿತ್ಯವನ್ನು ಸಮಾಜಕ್ಕೆ ಅಭಿಮುಖವಾಗಿಸಿದ್ದಾರೆ: ಬದುಕಿನ ಹತ್ತಿರಕ್ಕೆ ತಂದು ನಿಲ್ಲಿಸಿದ್ದಾರೆ, ಇವರ ಕವನಗಳಲ್ಲಿನ ವೈಚಾರಿಕತೆಯ ಈ ಅಂಶವನ್ನು ಗಮನದಲ್ಲಿರಿಸಿಕೊಂಡಾಗಲೇ ಅವರ ಸಾಮಾಜಿಕ, ಧಾರ್ಮಿಕ-ರಾಜಕೀಯ ಟೀಕೆಗಳ ಹಿಂದಿನ ಭಾವನೆಗಳ ಗುರುತ್ವವನ್ನೂ, ಪ್ರಾಮಾಣಿಕತೆಯನ್ನೂ ತಿಳಿಯಲು ಸಾಧ್ಯವಾಗುತ್ತದೆ. ಈ ಹಿನ್ನೆಲೆಯೊಂದಿಗೆ ಜಿಎಸ್ಎಸ್ ಅವರ ಕಾವ್ಯದಲ್ಲಿನ ವೈಚಾರಿಕ ದೃಷ್ಟಿಕೋನವನ್ನು ಸಾಮಾಜಿಕ, ಧಾರ್ಮಿಕ, ರಾಜಕೀಯ ಇತ್ಯಾದಿ ವಿವಿಧ ಸ್ತರಗಳಲ್ಲಿ ಹೀಗೆ ಗುರುತಿಸಬಹುದು.

**ಹೆಣ್ಣಿನ ಸ್ಥಾನಮಾನಗಳ ಕುರಿತ ದೃಷ್ಟಿ**

ಪುರುಷ ಪ್ರಧಾನ ಭಾರತೀಯ ಸಂಸ್ಕೃತಿ ಹೆಣ್ಣನ್ನು ಗಂಡಿಗೆ ಅಧೀನಳಾಗಿರಬೇಕಾದವಳು ಎಂದೇ ಪ್ರತಿಪಾದಿಸುತ್ತಾ ಬಂದಿದೆ. ಅನೇಕ ವೇಳೆ ಅವಳನ್ನು ಶೂದ್ರ ಸಮಾನವಾಗಿ ಕಂಡಿದೆ. ಜಿಎಸ್ಎಸ್ ಅವರ ಕವನಗಳಲ್ಲಿ ಹೆಣ್ಣಿನ ಸ್ಥಾನಮಾನಗಳ ಕುರಿತ ದೃಷ್ಟಿಕೋನ ಇದಕ್ಕಿಂತ ತೀರಾ ಭಿನ್ನವಾದುದು. ಇಲ್ಲಿ ಹೆಣ್ಣು ಜಡನಾದ ಗಂಡಿಗೆ ಜೀವವನ್ನೀಯುವ ಶಕ್ತಿಯಾಗಿ ಬರುತ್ತಾಳೆ. 'ನಿನ್ನ ಶಕ್ತಿಯ ಬಲದಿಂದಲೇ ವ್ಯಕ್ತಿಯಾದೆನು ನಾನು ಈ ಲೋಕದಲ್ಲಿ' *(ಬೆಳಗು ಬಾ-12)* ಎನ್ನುವಲ್ಲಿ ಕವನದಲ್ಲಿ ಗಂಡಿನಷ್ಟೇ ಅಥವಾ ಅದಕ್ಕಿಂತಲೂ ಹೆಣ್ಣಿನ ಸ್ಥಾನ ಮಿಗಿಲಾದುದು ಎಂದು ಪ್ರತಿಪಾದಿಸಲಾಗಿದೆ.

**......... ಎದೆಯ ಕರಗಿಸಿ**
**ಸೂರೆಗೊಳುವಂತೆಸೆಯುವ ಸಲ್ಲಾತು**
**......... ಮಧುರ ಮಂಗಳಮೂರ್ತಿ**
**ಜೀವಯಾತ್ರೆಯ ಪಥಕೆ ಸಹಯಾತ್ರಿ ಮೇಣ್ ಸ್ಫೂರ್ತಿ**

(ಮನದನ್ನೆ, 78)

ಎನ್ನುವಲ್ಲಿ ಮೇಲಿನ ಅಂಶವೇ ಪ್ರಧಾನವಾಗಿವೆ. ಮಡದಿಯ ಅಕ್ಕರೆಯ ಹೂಗಂಪಿನಿಂದ, ಮುದ್ದು ಮಗುವಿನ ಎಳೆನಗೆಯ ತಿಂಗಳಿನಿಂದ ಕೂಡಿದ ತುಂಬು ಸಂಸಾರದ ನೆರಳಿನಲ್ಲಿ ಕಡು ಬೇಸಿಗೆಯ ಧಗೆಯಾಗಲೀ, ಮನದೊಳಗೆ ಮುತ್ತುವ ನೂರಾರು ಚಿಂತೆಗಳ ತೊಂದರೆಗಳಾಗಲೀ ಏನೂ ಕಷ್ಟವಾಗುವುದಿಲ್ಲ. ಇಂಥ ಸಂಸಾರದೊಳಗಿನ ತನ್ನ ಬಾಳು ಕವಿಗೆ—'ಬೇಸಗೆಯ ನಡು ಹಗಲು ತಿಳಿನೀರ ತೊರೆಯೊಳಗೆ ಮಲಗಿ ಮಿನುಗುವ ಹರಳುಗಲ್ಲುಗಳ ಬದುಕಿನಂತೆ'-ನೆಮ್ಮದಿಯ ಹಿತವಾದ ಅನುಭವವನ್ನು ಕೊಡುತ್ತದೆ. ಹೆಣ್ಣನ್ನು ಮಾಯೆಯಾಗಿ ಪರಿಗಣಿಸುವ ಸಂಸಾರವನ್ನು ಬಂಧನವಾಗಿ, ಕಾಮವನ್ನು ನಿಗ್ರಹಿಸಬೇಕಾದ ಪಾಪವಾಗಿ

ಕಂಡ ವೈದಿಕ ಸಾಂಸ್ಕೃತಿಕ ಮೌಲ್ಯಗಳಿಗೆ, ಇದೇ ವಿಷಯಗಳ ಕುರಿತಂತೆ ಜಿಎಸ್ಎಸ್ ಅವರ ಕವನಗಳಲ್ಲಿ ಕಂಡು ಬರುವ ವೈಚಾರಿಕ ದೃಷ್ಟಿ ತದ್ವಿರುದ್ಧವಾದುದು. ಪ್ರಕೃತಿಯಲ್ಲಿ ಹೆಣ್ಣು ಗಂಡಿನಷ್ಟೇ ಸ್ಥಾನಪಡೆದವಳು. ಇದರಲ್ಲಿ ವ್ಯತ್ಯಾಸವನ್ನು ಕಲ್ಪಿಸಿದ ಮಾನವನ ಸಾಂಸ್ಕೃತಿಕ ವಿಕೃತಿಯನ್ನು ಮೀರಿ ಸಾಂಸಾರಿಕ ಬದುಕಿಗೆ ಒತ್ತು ಕೊಡುವ ಕವಿ ಇಹದ ಬದುಕಿನ ಕುರಿತು ಒಲವು ವ್ಯಕ್ತಪಡಿಸುತ್ತಾರೆ.

ಭಾರತೀಯ ಸಮಾಜ ವ್ಯವಸ್ಥೆ ಹೆಣ್ಣನ್ನು ನೋಡಿದ ದೃಷ್ಟಿಗನುಗುಣವಾಗಿ ಸಾಂಸಾರಿಕವಾಗಿ ಆಕೆಯ ಸ್ಥಾನವೂ ಸೂಚಿತವಾಗಿದೆ. ಗಂಡಿನಂತೆ ಹೆಣ್ಣು ತಾನೂ ಹುಟ್ಟಿದ ಕಡೆಯೇ ನಿಂತು ಬದುಕು ನಡೆಸುವುದು ನಮ್ಮ ವ್ಯವಸ್ಥೆಯಲ್ಲಿ ಸಾಧ್ಯವಿಲ್ಲ. ಆಕೆ ಬದುಕಿಗಾಗಿ ಹುಟ್ಟಿದೂರನ್ನು ಬಿಟ್ಟು ಗಂಡನ ಮನೆಗೆ ಹೊರಡಬೇಕಾಗುತ್ತದೆ. ಈ ಮಧ್ಯೆ ಸಂಬಂಧಗಳ ನೆಲೆಯಲ್ಲಿ ಆತ್ಮೀಯತೆ ಇರಬಹುದು; ಆದರೆ ಬದುಕಿಗಾಗಿ ಹೆಣ್ಣನ್ನು ಗಂಡಿಗೆ ಒಪ್ಪಿಸುವಿಕೆಯ ಹಿಂದೆ ಕಂಡುಬರುವುದು "ಹೆಣ್ಣು-ಗಂಡಿಗಾಗಿ ಇರುವವಳು" ಎಂಬ ಮನೋಭಾವವೇ ಆಗಿದೆ. ಮದುವೆಯಾಗಿ ಗಂಡನ ಮನೆಗೆ ಹೊರಟ ಹೆಣ್ಣು ಮಗಳೊಬ್ಬಳು "ಹುಟ್ಟಿದೂರನು ಬಿಟ್ಟು ಕಾಣದೂರಿಗೆ ಹೋಗಿ ಬಾಳನಡೆಸುವ ಸಮಯ ಬಂದುದೆನಗೆ" *(ಬೀಳ್ಕೊಡುಗೆ-150)* ಎಂಬ ಮಾತಿನಲ್ಲಿ ಸಂಪೂರ್ಣ ಭಿನ್ನ ಪರಿಸರದಲ್ಲಿ ಬದುಕಬೇಕಾದಲ್ಲಿನ ಮಾನಸಿಕ ಭಯದ ಧ್ವನಿಯಿದೆ. ನಮ್ಮ ಸಮಾಜದಲ್ಲಿ ಹೆಣ್ಣು ಈ ವ್ಯವಸ್ಥೆಗೆ ಒಗ್ಗಿ ಹೋಗಿದ್ದಾಳೆ. ಈ 'ಒಗ್ಗಿ'ರುವಿಕೆ ಎಷ್ಟು ಗಾಢವಾದುದೆಂದರೆ ಆಕೆ ತಾನಿರುವ ಸ್ಥಿತಿಯೇ ಸಹಜವಾದುದೆಂದು ತಿಳಿದಿರುತ್ತಾಳೆ. ಇಲ್ಲ ಇದು ಆಕೆಯೊಬ್ಬಳ ಮನಸ್ಥಿತಿಯಲ್ಲ, ಸಮಾಜದಲ್ಲಿ ಆ ವರ್ಗದ ಮನಸ್ಥಿತಿಯೂ ಆಗಿರುತ್ತದೆ. ಹುಟ್ಟಿದೂರನ್ನು ಬಿಟ್ಟು ಹೋಗುವಲ್ಲಿನ ನೋವು, ಕಾಣದೂರಿಗೆ ಹೋಗಬೇಕಾದ ಚಿಂತೆ, ಈ ಮಧ್ಯೆ ವಿಶ್ವಾಸದಿಂದ ಕೈಹಿಡಿದ ಗಂಡನ ಮೇಲಿನ ಪ್ರೀತಿ-ಹೀಗೆ ಜಿಎಸ್ಎಸ್ ಅವರ ಕವನಗಳಲ್ಲಿ ಈ ವ್ಯವಸ್ಥೆಯ ನಡುವೆ ಶೋಷಣೆ ಕಷ್ಟಗಳ ಅರಿವಿಲ್ಲದೆ ಅದೇ ಸಹಜ ಸ್ಥಿತಿಯೆಂದು ಒಪ್ಪಿಕೊಂಡು ಅದರಲ್ಲೇ ನೆಮ್ಮದಿಯ, ತೃಪ್ತ ಜೀವನ ನಡೆಸಲು ಹೆಣಗುವ ಹೆಣ್ಣಿನ ಚಿತ್ರಣ ಕಂಡುಬರುತ್ತದೆ.

'ಮನೆಮನೆಯಲಿ ದೀಪಮುಡಿಸಿ, ಹೊತ್ತುಹೊತ್ತಿಗೆ ಅನ್ನ ಉಣಿಸಿ ತಂದೆ ಮಗುವ ತಬ್ಬುವಾ' (ಸ್ತ್ರೀ-313) ಹೆಣ್ಣು ಜಿಎಸ್ಎಸ್ ಅವರ ಕವನಗಳಲ್ಲಿ ಅಬಲೆಯಲ್ಲ. ಆಕೆಗೆ ಬದುಕಿನಲ್ಲಿ ಹಿರಿದಾದ ಸ್ಥಾನವನ್ನಿತ್ತುದು ಮಾತ್ರವಲ್ಲ, ಆಕೆಯನ್ನು ಮಾತೃದೈವವಾಗಿ, ಪೂಜ್ಯವಾಗಿ ಕಂಡು 'ಹಸುರನ್ನುಟ್ಟ ಬೆಟ್ಟಗಳಲಿ ಮೊಲೆಹಾಲಿನ ಹೊಳೆಯೆನಿಳಿಸಿ ಬಯಲ ಹಸುರನಗಿಸಿದಾಕೆ' *(ಅದೇ)* ಇವಳು ಎಂದು ಪ್ರಕೃತಿಯ ನೆಲೆಯಲ್ಲಿ ಆಕೆಯನ್ನು ಗುರುತಿಸಿದ್ದಾರೆ. ಕವಿಯ ಈ ತರ, ಹೆಣ್ಣಿಗೆ ಪೂಜ್ಯತೆಯನ್ನಾರೋಪಿಸಿ ಮತ್ತೆ ಆಕೆಯನ್ನು ಸಾಂಪ್ರದಾಯಿಕ ಸ್ಥಾನದಲ್ಲಿ ನಿಲ್ಲಿಸುವಂತಹುದಲ್ಲ.

**ಧಾರ್ಮಿಕ ದೃಷ್ಟಿಕೋನ**

ಜಿಎಸ್ಎಸ್ ಅವರ ಆಧ್ಯಾತ್ಮಿಕ ದೃಷ್ಟಿ ಯಾವುದೋ ಧಾರ್ಮಿಕ ಸ್ಥಾನಗಳ ಕಲ್ಲುಮೂರ್ತಿಗಳ ಸುತ್ತ ಕೇಂದ್ರೀಕೃತವಾದುದಲ್ಲ. ತಮ್ಮ ಆರಂಭದ ಕವನಗಳಲ್ಲಿ ಪ್ರಕೃತಿ ಪೂಜೆಯಲ್ಲಿ ಆಧ್ಯಾತ್ಮಿಕ ಭಾವವನ್ನು ವ್ಯಕ್ತಪಡಿಸಿದ ಕವಿ, ಬೆಳೆದಂತೆಲ್ಲಾ ಇಹದ ಬದುಕನ್ನೇ ತೃಪ್ತಿಯಿಂದ ಮತುವರ್ಜಿಯಿಂದ ಬದುಕುವುದೇ ಪೂಜೆ ಎಂಬ ಭಾವನೆಯನ್ನು ವ್ಯಕ್ತಪಡಿಸುತ್ತಾರೆ.

**ಈ ಜೀವ ಜಾತ್ರೆಯಲಿ ಕೃತಕೃತ್ಯನಾಗುವೆನು**
**ಪೂಜೆ ಎನ್ನುತ ತಿಳಿದು ಬಾಳನಿದನು**

(*ಕಲೆ*-60)

ಎಂಬ ನಿಲುವು ತಾಳುತ್ತಾರೆ. ಕೆಲವೊಮ್ಮೆ ಆ ಆಧ್ಯಾತ್ಮಿಕ ಶಕ್ತಿಗೆ ತನ್ನ ಸರ್ವಸ್ವವನ್ನೂ ಸಮರ್ಪಿಸುವ ಸರ್ವಸಮರ್ಪಣಾಭಾವ ಕಂಡುಬರುತ್ತದೆ. ಕವಿಯ ಬದುಕಿನಲ್ಲಿ ಅಂತಿಮವಾಗಿ ತಲುಪಬೇಕಾದ ಗುರಿ ಅದೇ ಎಂಬಂತೆ ಕಂಡುಬರುತ್ತದೆ. ಆದರೆ ಆ ಸರ್ವಸಮರ್ಪಣಾ ಭಾವವು ಇಹದ ಬದುಕು ಒಂದು ಬಂಧನವೆಂದೂ, ಅನುಭವಿಸಬಾರದ ಮಿಥ್ಯೆಯೆಂದೂ ಪ್ರತಿಪಾದಿಸುವುದರ ಮೇಲೆ ನಿಂತುದಲ್ಲ ಎಂಬುದು ಗಮನಾರ್ಹ ನಿಲುವು.

**ಕಹಿಯೇನು ಸಿಹಿಯೇನು ಅಳುವೇನು ನಗುವೇನು**
**ಎಲ್ಲವನು ತುಂಬುವೆನು ವಿಧಿಯಿತ್ತುದನ್ನು**
**ಕಡೆಗಿದನು ಅರ್ಪಿಸುವೆ ಆ ದೇವನಡಿಯಲ್ಲಿ**
**ತುಂಬರುವ ನನ್ನೆದೆಯ ಬಟ್ಟಲನ್ನು**

(*ಕಲೆ*-60)

ಎಂದು ಕವಿ ಆ ದೇವನಡಿಗೆ ಅರ್ಪಿಸುವ ಮುನ್ನ ತುಂಬು ಜೀವನದ ಕನಸು ಕಾಣುತ್ತಾರೆ.

ಕವಿ ತಲೆಬಾಗುವ ಆ 'ದೇವರು' ಕೇವಲ ಉಳ್ಳವರ ಸೊತ್ತಲ್ಲ. ಆತ 'ಉಡುಗಣವೇಷ್ಟಿತ, ಚಂದ್ರಸುಶೋಭಿತ-ದಿವ್ಯಾಂಬರ ಸಂಚಾರಿ'ಯಾಗಿದ್ದಾಗಲೂ 'ಕಣ್ಣ ನೀರಿನಲಿ, ಮಣ್ಣಧೂಳಿನಲಿ ಹೊರಳುತ್ತಿರುವವರ ಸಹಚಾ'ರಿಯಾಗಿರುತ್ತಾನೆ. *(ಅಲ್ಲಿ-ಇಲ್ಲಿ: 4)*. ಈ ದೃಷ್ಟಿ ಕವಿಯ ಆಧ್ಯಾತ್ಮಿಕ ಚಿಂತನಾಶೈಲಿಯಲ್ಲಿ ಉದ್ದಕ್ಕೂ ಕಂಡುಬರುವ ಸ್ಥಾಯಿ ಭಾವವಾಗಿದೆ. ಗುಡಿ-ಗುಂಡಾರಗಳಿಗೆ ಬದಲಾಗಿ ದೇವರನ್ನೇ ಪ್ರಕೃತಿಯಲ್ಲಿ ಕಾಣುವುದು, ಮಂತ್ರ-ತಂತ್ರಗಳ ಕೃತಕ ಪೂಜೆಯ ಬದಲಾಗಿ ಜೀವವನ್ನೇ ಪೂಜೆಯಾಗಿ ತಿಳಿಯುವುದು ಮತ್ತು ಸೃಷ್ಟಿಯಲ್ಲಿ ಸರ್ವಸಮಾನತೆಯನ್ನು ಪ್ರತಿಪಾದಿಸುವುದು ಜಿಎಸ್ಎಸ್ ಅವರ ಆಧ್ಯಾತ್ಮಿಕ ಕವನಗಳಲ್ಲಿನ ಕೆಲವು ಮುಖ್ಯ ಲಕ್ಷಣಗಳಾಗಿವೆ.

ದೇವರ ಕಲ್ಪನೆಯ ಜೊತೆಗೆ ಢಾಂಬಿಕ ಭಕ್ತರ ಕುರಿತ ವಿಮರ್ಶೆ ಜಿಎಸ್ಎಸ್ ಅವರ ಆಧ್ಯಾತ್ಮಿಕ ದೃಷ್ಟಿಯ ಇನ್ನೊಂದು ಮುಖವಾಗಿದೆ. ಇದು ಅನೇಕ ವೇಳೆ ಸಾಮಾಜಿಕ

ವಿಮರ್ಶೆಯ ಧ್ವನಿಯನ್ನೂ ಒಳಗೊಳ್ಳುತ್ತದೆ. ಸ್ವಾರ್ಥಪೂರಿತ ಭಕ್ತಿಯನ್ನು ಕವಿ ಮೆಚ್ಚುವುದಿಲ್ಲ. 'ಅಷ್ಟಗ್ರಹಕೂಟ' ದಿಂದ ತಮಗೆ ಅಪಾಯವಿದೆ ಎಂದು ತಿಳಿದಾಗ ಮಾತ್ರ ಅದರಿಂದ ತಮ್ಮನ್ನು ಕಾಪಾಡುವಂತೆ ಭಜನೆ ಮಾಡುವ ಮಂದಿ ಉಳಿದಂತೆ ಆ ಬಗ್ಗೆ ಚಿಂತಿಸುವುದಿಲ್ಲ. ಇಂಥ ಢಾಂಬಿಕರನ್ನು ಕವಿ-'ಠಕ್ಕರು, ಜೀವಗಳ್ಳರು'—ಎಂದು ಕರೆದಿದ್ದಾರೆ; 'ಇವರ ಭಕ್ತಿಯ ರೀತಿ ದಬ್ಬೆ ಬಿಚ್ಚಿದ ಬಾಲ'—*(ಅಷ್ಟಗ್ರಹ ಕೂಟದ ಇರುಳು-290)* ಎಂದು ಲೇವಡಿ ಮಾಡಿದ್ದಾರೆ. ಧಾರ್ಮಿಕ ಶೋಷಣೆ ಪಾಮರರ ಮೇಲೆ ನಡೆಯುವ ಇನ್ನೊಂದು ಸಾಮಾಜಿಕ ಅತ್ಯಾಚಾರವಾಗಿದೆ.

ಸಾಮಾಜಿಕ ಸಮಸ್ಯೆಗಳನ್ನು ಗುರುತಿಸುವಾಗ ಕವಿ ಶೋಷಕರನ್ನು ಮತ್ತು ಶೋಷಿತರನ್ನು ಬೇರೆ ಬೇರೆ ಕಾರಣಗಳಿಗಾಗಿ ಆದರೆ ಏಕಕಾಲಕ್ಕೆ ವಿಮರ್ಶಿಸುತ್ತಾರೆ, 'ಸವಾರಿಗೆ ಬೆನ್ನು ನೀಡುವ ಮಂತ್ರದ ಬಾಯಿಗೆ ಮರುಳಾಗುವ, ನಾಮಕೆ, ಜುಟ್ಟಿಗೆ, [illegible] ವಿಭೂತಿಗೆ, ಸದಾ ಬಾಗುವ' *(ಶೂದ್ರನಿಗೊಂದು ಪತ್ರ-458)* ಮಂದಿಯ ಅಜ್ಞಾನವೇ ಶೋಷಕರಿಗೆ ಬಂಡವಾಳವಾಗಿದೆ. ಆದುದರಿಂದ ಸಮಸ್ಯೆಯ ಪರಿಹಾರಕ್ಕೆ ಶೋಷಿತರು ಪ್ರಜ್ಞಾವಂತರಾಗಬೇಕು ಎಂದು ಚಿಂತಿಸುತ್ತಾರೆ. ಭಾರತೀಯ ಸಮಾಜವನ್ನು ವರ್ಣವ್ಯವಸ್ಥೆಯಲ್ಲಿ ಒಡೆದು ಜಾತಿಗಳಾಗಿ ತುಂಡು ಮಾಡಿದ ಪುರೋಹಿತಶಾಹಿಯೇ ನಮ್ಮ ಸಮಾಜದ ಎಲ್ಲ ಅನಿಷ್ಟಗಳ ಮೂಲವಾಗಿದೆ. ನಾವು ಗುಲಾಮತನಕ್ಕೆ ಹಿಗ್ಗಿದರೆ, ಸ್ವಾಭಿಮಾನ, ಸ್ವಾತಂತ್ರ್ಯಗಳೆಲ್ಲ ತಲೆನೋವಿನ ಸಂಗತಿಗಳಾಗಿದ್ದರೆ, ಇಹದ ಬದುಕನ್ನು ಸುಳ್ಳು ಎಂದು ಇಲ್ಲದ ಪರಕ್ಕೆ ಹಂಬಲಿಸುತ್ತಿದ್ದರೆ ಅದರ ಮೂಲ ಪುರೋಹಿತಶಾಹಿಯ ಮಿದುಳಿನಲ್ಲಿದೆ. ಆದರೆ ಬದುಕನ್ನು ಸುಳ್ಳೆಂದು ನಂಬಿಸಿದ್ದು, ಉಳಿದವರನ್ನೆಲ್ಲ ಅದರಿಂದ ಪರಾಙ್ಮುಖರನ್ನಾಗಿಸಿದ್ದು— 'ಬದುಕುವುದಕ್ಕೆ' ಎಂಬುದನ್ನು ಗುರುತಿಸಿದ ಕವಿ—

**'ಎಲ್ಲಕ್ಕೂ ಹಿನ್ನೆಲೆಯಾದ ಏ ಪೂಜಾರಿ, ಶತಮಾನದಿಂದಲೂ**
**ನಡೆಯುತ್ತಿದೆಯಯ್ಯ ನಿನ್ನ ಚಾತುರ್ಯ**
**....... ನಿನಗೆ ಬೇಕಾದ್ದು ಬರೀದಕ್ಷಿಣೆ**
**ಗೊತ್ತು ನೀನೇ ರಚಿಸಿದ್ದು ಈ ನಂಬಿಕೆಯ ವ್ಯೂಹ**

(ಜಾತ್ರೆ-300)

ಎಂದು ಪುರೋಹಿತಶಾಹಿಯ ನಗ್ನದರ್ಶನ ಮಾಡಿಸುತ್ತಾರೆ. ಜಿಎಸ್‌ಎಸ್ ಅಂತಿಮವಾಗಿ ದೇವರನ್ನು ಕಾಣಲು ಯತ್ನಿಸುವುದು ಮಾನವ-ಮಾನವರ ಮಧ್ಯೆ ಇರುವ ಸಂಬಂಧವಲ್ಲಿ.

**ಎಲ್ಲೋ ಹುಡುಕಿದೆ ಇಲ್ಲದ ದೇವರ**
**ಕಲ್ಲು ಮಣ್ಣುಗಳ ಗುಡಿಯೊಳಗೆ**
**ಇಲ್ಲೇ ಇರುವ ಪ್ರೀತಿ-ಸ್ನೇಹಗಳ**
**ಗುರುತಿಸದಾದೆನು ನಮ್ಮೊಳಗೆ**

(ಅನ್ವೇಷಣೆ-409)

ಎನ್ನುತ್ತ ಕಲ್ಲು-ಮಣ್ಣುಗಳ ಗುಡಿಯಲ್ಲಿ, 'ಇಲ್ಲದ' ದೇವರನ್ನು ಹುಡುಕುತ್ತ ನಮ್ಮೊಳಗಿನ ಪ್ರೀತಿ ವಿಶ್ವಾಸವನ್ನು ಮರೆತುದನ್ನು ಅರಿತುಕೊಳ್ಳುತ್ತಾರೆ. ತಾನು ಕಂಡುದನ್ನೇ ಕವಿ ಇತರರಿಗೂ ಪರಿಚಯಿಸುತ್ತಾರೆ. ಹೀಗೆ ಜಿಎಸ್‌ಎಸ್ ಅವರ ಕವನಗಳಲ್ಲಿ ಕಂಡು ಬರುವ ಆಧ್ಯಾತ್ಮಿಕ ದೃಷ್ಟಿ 'ಜೀವನ ಪರದೃಷ್ಟಿ'—ಬದುಕನ್ನು ಪ್ರೀತಿಸುವ ದೃಷ್ಟಿ.

**ಸಾಮಾಜಿಕ ವಿಮರ್ಶೆ**

ಸಮಕಾಲೀನ ಸಮಾಜದ ರೋಗಕ್ಕೆ ಧಾರ್ಮಿಕ ಶಕ್ತಿಯಷ್ಟೇ ರಾಜಕೀಯ ಶಕ್ತಿಯೂ ಹೊಣೆಯಾಗಿದೆ. ಇದನ್ನು ಗುರುತಿಸಿದ ಜಿಎಸ್‌ಎಸ್ ತಮ್ಮ ಕವನಗಳಲ್ಲಿ ರಾಜಕೀಯ ಶಕ್ತಿಯ ಇಂಥ ಅತ್ಯಾಚಾರಗಳ ವಿರುದ್ಧ ತೀವ್ರ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಾರೆ. ತಮ್ಮ ಸುತ್ತಿನ ಸಮಾಜಕ್ಕೆ ಸಕ್ರಿಯವಾಗಿ ಕವಿ ಸ್ಪಂದಿಸಿದ್ದರ ಕುರುಹು ಇದು.

ಭಾರತವು ಸ್ವಾತಂತ್ರ್ಯ ಪಡೆದು ಇಷ್ಟು ಕಾಲ ಕಳೆದರೂ ತೊಲಗಿಸಲಾಗದ ಬಡತನ, ನಿತ್ಯ ನಡೆವ ಕೊಲೆಸುಲಿಗೆಗಳ ನಡುವೆ ನಿಂತ ಸಂವೇದನಾಶೀಲ ಮನಸ್ಸು ಹೇಗೆ ಕ್ಷೋಭೆಗೊಂಡಿದೆ ಮತ್ತು ಅದರ ಸಾತ್ವಿಕ ಕೋಪ, ಪ್ರತಿಭಟನೆಯಾಗಿ, ಆಕ್ರೋಶವಾಗಿ ಹೊರಬಂದ ಸ್ವರೂಪ ಮೊದಲಾದುವನ್ನು ಇಲ್ಲಿ ಅರಿಯಬಹುದು. "ಬರೀ ಮಾತುಗಳ ಕಡ್ಡಿ ಗೀಚುವೆಯಲ್ಲ ನಿನಗೆ ನಾಚಿಕೆಯಿಲ್ಲ"—*(ಸಾಕು ನಿಲ್ಲಿಸು ನಿನ್ನ ಸಾಮಗಾನ-339)* ಎಂದು ಕೇವಲ ಆಶ್ವಾಸನೆಗಳನ್ನಿತ್ತೇ ಬದುಕುವ ರಾಜಕಾರಣಿಗಳ ಮೇಲೆ ಕಿಡಿಕಾರುವ ಕವಿ, ಅದೇ ಉಸಿರಿನಲ್ಲಿ ವರ್ಷಗಟ್ಟಲೆ ಕೇಳಿದ್ದನ್ನೇ ಕೇಳಿದ ಬಳಿಕವೂ ಇದಿರೇಳದೆ, ಚಿಂತಿಸದೆ ಜಡರಾದ ಜನರನ್ನೂ ಚುಚ್ಚುತ್ತಾರೆ. ಕೊರಳಪಟ್ಟಿಯಲ್ಲಿ ಬೆಳೆದ ನಾಯಿ 'ಕೊನೆಗೆ ಅದನ್ನು ಬಿಚ್ಚಿಬಿಟ್ಟಾಗಲೂ ಅಭ್ಯಾಸ ಬಲದಿಂದ ಅಲ್ಲೇ ನಿಂತುಬಿಡುವಂತೆ, ಶತಮಾನಗಳ ಕಾಲ ಧಾರ್ಮಿಕ ಶೋಷಕರ ಕೈಯಿಂದ ತುಂಡರಸರವರೆಗೆ ಎಲ್ಲರಕೆಳಗೂ ದಾಸ್ಯದಲ್ಲಿ ಬೆಳೆದ ನಾವು ಪುನಃ ಬ್ರಿಟಿಷರ ಕೆಳಗೆ ಶತಮಾನಗಳ ಕಾಲ ನಿಶ್ಚಿಂತೆಯಿಂದ ಬದುಕಿದ್ದೇವೆ. ಈ ಮಧ್ಯೆ ಸ್ವಂತ ಯೋಚನೆ, ಸ್ವಾಭಿಮಾನ, ಸ್ವಾತಂತ್ರ್ಯಗಳನ್ನು ಸಂಪೂರ್ಣ ಮರೆತಿದ್ದೇವೆ: 'ಬೆಲೆಯಿದ್ದುದನ್ನೆಲ್ಲ ಕೊಲೆ ಮಾಡಿ ದೊಡ್ಡ ಮಾತುಗಳ ಹಲಗೆ ಹಿಡಿದು ಕುಣಿದೆವು' *(ಗುಲಾಮರು-346)*. ದೇಶಕ್ಕೆ ಸ್ವಾತಂತ್ರ್ಯ ನೀಡಿದ ಗಾಂಧೀಜಿಗೆ ಗುಂಡು ಹೊಡೆದವರು ನಾವು. ಭಾರತೀಯ ಸಮಾಜದಲ್ಲಿ ಅಲ್ಪಸಂಖ್ಯಾತರಿಂದಾದ ಬಹುಸಂಖ್ಯಾತರ ಶೋಷಣೆಯ ವಿರುದ್ಧ ಎತ್ತಿದ ಯಾವ ಧ್ವನಿಯು ಬಹುಕಾಲ ಬಾಳಲಿಲ್ಲ. ಶೋಷಿತರೆನಿಸಿ ಕೊಂಡವರ ಮೌಢ್ಯವೇ ಇದಕ್ಕೆ ಕಾರಣವಾಗಿದೆ. ಜಿಎಸ್‌ಎಸ್ ಅವರ ಕವನಗಳಲ್ಲಿನ ಇಂತಹ ಸಾಮಾಜಿಕ ಕಾಳಜಿಯ ವಿಚಾರಗಳು ನಮ್ಮನ್ನು ಮತ್ತೆ ಮತ್ತೆ ಆತ್ಮವಿಮರ್ಶೆಗೆ ಹಚ್ಚುತ್ತವೆ.

ಜಿಎಸ್‌ಎಸ್ ಅವರ ಕವನಗಳಲ್ಲಿ ಕಂಡು ಬರುವ ಪ್ರತಿಭಟನೆ 'ಕಾದು ನೋಡುವ' ವಿವೇಚನಾಶೀಲ ತಾಳ್ಮೆಯ ಸ್ಥಿತಿಯ ಅನಂತರ ವ್ಯಕ್ತವಾಗುವ ಪ್ರಕ್ರಿಯೆವಾಗಿದೆ. 'ಇಂದಲ್ಲ ನಾಳೆ ಮೈತುಂಬಿಕೊಂಡು ಸಿಡಿಲಾಗುವುದು ಈ ನಾಡು ಸಾವಧಾನದಿ ಕಾದು ನೋಡು'

*(ಬಿಡುಗಡೆಯ ನೆನಪು-215)*—ಈ ಮಾತುಗಳ ಹಿಂದಿರುವುದು ಎಲ್ಲಕ್ಕೂ ಮುಗಿಲಾಚೆಯ ಶಕ್ತಿಯ ಸಹಾಯಕ್ಕಾಗಿ ಕಾಯುವ ಪ್ರವೃತ್ತಿಯಲ್ಲ, ಬದಲಾಗಿ ವಸ್ತುಸ್ಥಿತಿಯನ್ನು ಸರಿಪಡಿಸಲು ಪ್ರಾಮಾಣಿಕ ಪ್ರಯತ್ನ ಮಾಡಿದ ಬಳಿಕ ಫಲಕ್ಕಾಗಿ ಕಾಯುವ ವಿಶ್ವಾಸಪೂರ್ಣ ಆಶಾವಾದವಾಗಿದೆ. ಮಾನವ ಪ್ರಯತ್ನ ಮತ್ತು ಅದರಿಂದ ಫಲನಿರೀಕ್ಷೆ ಎರಡಕ್ಕೂ ಸಮಾನ ಪ್ರಾಶಸ್ತ್ಯ ನೀಡಲಾಗಿದೆ.

ಕಾಯುವ ಕ್ರಿಯೆ ಕೆಲವು ಸಲ ಅಸಹನೆಯ ಸ್ಥಿತಿಗೂ ಒಯ್ಯುತ್ತದೆ, ಬದುಕನ್ನು ಬಿತ್ತರದ ನೆಲೆಗೊಯ್ಯುವ ಶಕ್ತಿಯ ಆಗಮನದಲ್ಲಿ ನಂಬಿಕೆ ಸಡಿಲಿದ ಸ್ಥಿತಿಯಿಂದ 'ಕಾಯಬೇಕೇ ಇನ್ನು ಎಲ್ಲಿವರೆಗೆ' *(ಪತಿತ-205)* ಎನ್ನುವಲ್ಲಿ ಕಾಯುವಿಕೆ ಅರ್ಥಹೀನ ಎಂಬ ಭಾವದ ಜೊತೆಗೆ ಸ್ವಪ್ರಯತ್ನವೂ ಅಗತ್ಯ ಎಂಬ ಧ್ವನಿಯಿದೆ. ವಸ್ತುಸ್ಥಿತಿಯ ಕುರಿತ ಆತ್ಮಗತ ಖೇದ, ಕವಿವ್ಯಕ್ತಪಡಿಸುವ ಮಾನಸಿಕ ಅಸಹನೆಯ ಬಳಿಕ ಮತ್ತೆ ತೀವ್ರ ಸ್ವರೂಪ ಪಡೆಯುತ್ತದೆ. ಬದಲಾದ ಕಾಲದ ಅಗತ್ಯಕ್ಕೆ ತಕ್ಕಂತೆ ಇಲ್ಲೂ ಬದಲಾವಣೆ ಅನಿವಾರ್ಯವಾಗುತ್ತದೆ. 'ಕೂಗಿದರೆ ಬೇಡಿದರೆ ಸ್ತುತಿಸಿದರೆ ಓಗೊಡುವ ಕಾಲಕ್ಕೆ' ಬದಲಾಗಿ ಬಯ್ದು ಮೂತಿಗೆ ತಿವಿದು ಹೇಳುವ *(ಮಳೆಯ ಮೋಡಕ್ಕೆ-74)* ಸ್ಥಿತಿ ಬರಬೇಕಾಗುತ್ತದೆ.

ಸಮಕಾಲೀನ ಸಮಾಜದಲ್ಲಿ, ಅದರಲ್ಲೊಬ್ಬರಾಗಿ ತಮ್ಮನ್ನು ಗುರುತಿಸಿಕೊಳ್ಳುವ ಮೂಲಕ ಜಿಎಸ್‌ಎಸ್ ಸತ್ಯ-ಅಹಿಂಸೆ ಮೊದಲಾದ ಮೌಲ್ಯಗಳ ಪತನದ ಕುರಿತು ಖೇದಗೊಳ್ಳುತ್ತಾರೆ. *(ಭಯಗೀತ-468)*. ನಯವಂಚಕರ, ಸಂಚುಗಾರರ ಹಾಗೂ ಇತರ ಸಮುದಾಯ ವಿರೋಧಿ ಶಕ್ತಿಗಳ ವಿರುದ್ಧ ದನಿಯೆತ್ತುತ್ತಾರೆ. ಇಂಥ ಪರಿಸ್ಥಿತಿಯಲ್ಲಿ ತನ್ನ ಸಾಮಾಜಿಕ ಜವಾಬ್ದಾರಿಯನ್ನು ಮರೆತು ಹಳೆಯ ಜಾಡಿನಲ್ಲೇ ಗುನುಗುವ ಕವಿಯ ಕುರಿತು ಪ್ರತಿಭಟನೆಯ ದಿಕ್ಕು ಬದಲಾಗಬೇಕು ಎಂದು ಎಚ್ಚರಿಸುತ್ತಾರೆ.

ಈ ಪ್ರತಿಭಟನೆ ಸಮಾಜದಲ್ಲಿನ ದುಷ್ಟಶಕ್ತಿಗಳ, ಶೋಷಕರ ವಿರುದ್ಧ ತಿರುಗಬೇಕು; ಆ ಮೂಲಕ ಸಮಾಜದಲ್ಲೊಂದು ಹೋರಾಟಕ್ಕೆ ಸಾಹಿತ್ಯ ಕಾರಣವಾಗಬೇಕು ಎಂಬುದು ಜಿಎಸ್‌ಎಸ್ ಅವರ ನಿಲುವು. ಶತ್ರು ಸೈನ್ಯದ ಮೇಲೆ ಕತ್ತಿ ಕುದುರೆಯೇರಿ ಹೊರಡುವ ಲಗ್ಗೆಯ ಗುಂಗಿನಲ್ಲಿರುವ ಕವಿಯನ್ನುದ್ದೇಶಿಸಿ ಹೇಳುವ ಮಾತುಗಳು *(ಒರೆಗಲ್ಲು-299)* ವರ್ತಮಾನದ ಅಗತ್ಯವಾಗಿ ಕಾವ್ಯದ ದಿಕ್ಕು ಬದಲಾಗಬೇಕು ಎಂಬುದನ್ನು ಸೂಚಿಸುತ್ತದೆ.

**ಜೀವನದ ದೃಷ್ಟಿ**

'ನಿಸ್ತರಂಗವೆಂಥ ಬದುಕೊ ಸತರಂಗವೆ ಜೀವನ'—*(ಬಾಡಿಗೆ ಮನೆ-136)* ಎಂದು ಘೋಷಿಸುವ ಜಿಎಸ್‌ಎಸ್, ಜೀವನ ಚಲನಶೀಲವಾಗಿರಬೇಕು ಎಂದು ಪ್ರತಿವಾದಿಸುತ್ತಾರೆ. ಬದುಕಿನ ಬಗ್ಗೆ ಕವಿ ತಳೆಯುವ ನಿಲುವು ನಿರಾಶೆಯದಲ್ಲ. ಬದುಕು ಕಷ್ಟ-ದುಃಖಗಳಿಂದ ಕೂಡಿದ್ದೆಂಬುದಕ್ಕಾಗಿ ತ್ಯಜಿಸುವಂತೆ ಬೋಧಿಸುವ, ಅದನ್ನು ತ್ಯಜಿಸಿದಾಗಲೆ ಮೋಕ್ಷ ಸಿಗುವುದೆಂದು ಸಾಧಿಸುತ್ತ ನಮ್ಮನ್ನು ಬದುಕಿನಿಂದ ದೂರಕ್ಕೊಯ್ಯುವ ಜನ ವಿರೋಧಿಯಾದ

ಪುರೋಹಿತಶಾಹೀ ತತ್ವ ವಿರೋಧ ದೃಷ್ಟಿಯು ಬದುಕನ್ನು ಅದರ ಎಲ್ಲ ಸ್ತರಗಳಲ್ಲಿ ಇದ್ದಂತೆಯೆ ಸ್ವೀಕರಿಸುವ, ಇಹದ ಈ ಬದುಕೇ ಸತ್ಯ-ಸುಂದರ ಎಂಬ ವಾಸ್ತವವಾದೀ ನಿಲುವನ್ನು ತಾಳಿದೆ. 'ಹಸಿವಿರದ ತೃಷೆಯಿರದ ಬದುಕು ಬದುಕೇ ಅಲ್ಲ' *(ಸ್ವರ್ಗಕ್ಕೆ-470)* ಎನ್ನುವ ಸಾಲುಗಳು ಜನಸಾಮಾನ್ಯರನ್ನು ವರ್ತಮಾನದ ಬದುಕಿನಿಂದ ದೂರಕ್ಕೊಯ್ಯುವ, ಆ ಮೂಲಕ ಧಾರ್ಮಿಕ ಶೋಷಣೆಗೆ ಒಂದು ಅಸ್ತ್ರವಾದ 'ಸ್ವರ್ಗ'ದ ಕಲ್ಪನೆಯನ್ನು ಅದರ ವಿವರಗಳಲ್ಲೇ ಲೇವಡಿ ಮಾಡುತ್ತವೆ; ಕಾಣದ ಸ್ವರ್ಗಕ್ಕಿಂತ ಕೈಗೆಟಕುವ ಬದುಕು ಶ್ರೇಷ್ಠ ಎಂದು ಸಾಧಿಸುತ್ತವೆ.

**ಬೇಸಗೆಗೆ ಒತ್ತುವ ಮಳೆಗಾಲಕ್ಕೆ ಏರುವ**
**ಬೆಟ್ಟ ಕಡಲಿನ ನಡುವೆ ಹರಿಯುವ ಹೊಳೆಯ**
**ಸೋಪಾನ ಘಟ್ಟಗಳೆ ಸಾಕು ನಮಗಾದರೂ**

(*ಸ್ವರ್ಗಕ್ಕೆ*-470)

ಎಂದು ಕವಿ ಹೇಳುವ ಸುಖ-ದುಃಖಗಳ ಏರಿಳಿತಗಳಿರುವ, ಆರಂಭ-ಅಗತ್ಯಗಳ ನಡುವೆ ಅರಳುವ ಬದುಕಿನ ಬಗ್ಗೆ ಆಳವಾದ ಪ್ರೀತಿಯನ್ನು ವ್ಯಕ್ತಪಡಿಸುತ್ತಾರೆ.

ಇಂಥ ಬದುಕು ಗಂಡು-ಹೆಣ್ಣು ಪರಸ್ಪರ ಒಬ್ಬರನ್ನೊಬ್ಬರು ಅರಿತು ಬದುಕಿವಾಗ ಸಹ್ಯವಾಗುತ್ತದೆ. ಆದುದರಿಂದಲೇ ಕವಿ, 'ಸುತ್ತ ಹಸಿರು ಹೊಲ, ಮೊಳೆವ ಪೈರಿರುವಾಗ ಈ ಸಿಡಿಮದ್ದಿನುಗ್ರಾಣದಲಿ ಪರಸ್ಪರ ಕಡ್ಡಿಗೀಚುವುದು ಬೇಡ' ಎಂದು *(ಒಪ್ಪಂದ-354)* ಹೊಂದಾಣಿಕೆಯ ಮನೋಭಾವವನ್ನು ವ್ಯಕ್ತಪಡಿಸುತ್ತಾರೆ. ಕಾಮದ ಬಗ್ಗೆ ಸಂಸ್ಕೃತಿಯ ಹೆಸರಿನಲ್ಲಿ ನಾವು ರೂಢಿಸಿಕೊಂಡ ವಿಕೃತಿಗೆ ಬದಲಾಗಿ ವೈಚಾರಿಕ ನಿಲುವುಗಳು ಜಿಎಸ್‌ಎಸ್ ಅವರ ಕವನಗಳಲ್ಲಿ ವ್ಯಕ್ತವಾಗುತ್ತವೆ. ಹಸಿವು, ನೀರಡಿಕೆ ಮೊದಲಾದ ದೈಹಿಕ ಅಗತ್ಯಗಳಂತೆ ಕಾಮವನ್ನೂ ಸಹಜವಾದ ದೈಹಿಕ ಬೇಡಿಕೆಯಾಗಿ ಗಣಿಸಿದ ಕವಿಗೆ ಅದೊಂದು ಸಮಸ್ಯೆ ಎಂದಾಗುವುದಿಲ್ಲವಾದರೆ ಅದು ಈ ಕಾರಣದಿಂದ.

'ಬಹುದೊಡ್ಡ ಮಾತನಾಡುತ್ತ ದಿನದಿನದ ಸರಳ ಸಾಧಾರಣ ಬದುಕಿಗವಮಾನ ಮಾಡುವರನ್ನು ಕಂಡರೆ ನನಗೆ ಆಗುವುದಿಲ್ಲ'; 'ತೂಗಾಡುವ ಕಿರೀಟಗಳಿಗೆ ತಕ್ಕಂತೆ ತಲೆಯ ಆಕಾರಗಳನ್ನು ಬದಲಾಯಿಸುತ್ತ ಪರದಾಡುವುದು ನನಗೆ ಅಭ್ಯಾಸವಿಲ್ಲ' *(ನಿಲುವು-403)* ಎಂದು ಸರಳವಾಗಿ ಅಷ್ಟೇ ಖಂಡತುಂಡವಾಗಿ ಹೇಳಿಕೊಳ್ಳುವ ಕವಿ ನಿಷ್ಠುರವಾದಿ. ಮಠಗಳಿಂದ-ಅಧಿಕಾರದ ಕುರ್ಚಿಯ ತನಕ ಯಾವುದರ ಮುಲಾಜಿಲ್ಲದೆ ಮುಖಕ್ಕೆ ರಾಚಿದಂತೆ ನುಡಿಯುವ ಮಾತುಗಳಲ್ಲಿ ವಾಸ್ತವದ ಬಗೆಗೆ ಹರಿತವಾದ ವಿಮರ್ಶೆ ಇದೆ. ಇವು ಸಮಾಜದ ಆರೋಗ್ಯದ ಬಗೆಗಿನ ಕಾಳಜಿಯ ನೆಲೆಯಿಂದ ಬಂದವುಗಳು ಎಂಬುದು ಇಲ್ಲಿ ಗಮನಿಸಬೇಕಾದ ಅಂಶವಾಗಿದೆ. ಪ್ರಳಯ ಕಾಲದಲ್ಲಿ ವಿನಾಶದಿಂದ ಪಾರಾಗುವ ದಾರಿ ಹೇಳಿದ ಮೀನಿಗೆ, 'ನಾನೊಲ್ಲೆ'—ಎಂದು ನಿರಾಕರಿಸುವ ಇಲ್ಲಿನ 'ಮನು', 'ಇರುವ

ಈ ಎಲ್ಲವನ್ನೂ ನಿರ್ನಾಮಗೊಳಿಸಿ ನಾಳಿನ ದಿವಸ ನಾನು, ನನ್ನ ಪರಿವಾರ ಉಳಿದು ಬದುಕುವ ಭಾಗ್ಯ ನನಗೆ ಬೇಡ; ನೀ ವರ್ಣಿಸಿದ ವಾಸ್ತವದ ಒಂದಂಶ ನಾನೂ ಕೂಡಾ; ಕೊಚ್ಚಲಿ ಬಿಡು ನನ್ನನ್ನೂ ಸೇರಿಸಿಕೊಂಡು ಈ ಮಹಾಪ್ರವಾಹ, ನನಗಿಲ್ಲ ನಾನೊಬ್ಬನೇ ಉಳಿದು ಬದುಕುವ ದಾಹ'—*(ಹೊಸಹುಟ್ಟು-480)* ಎನ್ನುತ್ತಾನೆ. ಸಮುದಾಯದ ಜೊತೆ ತಮ್ಮನ್ನೂ ಒಬ್ಬನನ್ನಾಗಿ ಗುರುತಿಸಿಕೊಳ್ಳುವ ಕವಿ ಅದರೊಳಗಿದ್ದುಕೊಂಡೇ ಬದುಕುವ ಹಟ ತೊಡುತ್ತಾರೆ. ಹೀಗೆ ಸಮಷ್ಟಿಯ ಒಂದಂಶವಾಗಿ ತನ್ನನ್ನು ಗುರುತಿಸಿಕೊಳ್ಳುತ್ತ ಅದರ ಅಳಿವು-ಉಳಿವು ತನ್ನದೂ ಎಂಬ ನಿರ್ಧಾರ ತಳೆಯುವ ಜಿಎಸ್ಎಸ್ ಇಲ್ಲಿ ಸಮುದಾಯದ ಧ್ವನಿಯಾಗುತ್ತಾರೆ.

ಸಮಾಜವೊಂದರಲ್ಲಿನ ಕುಂದುಕೊರತೆಗಳೆಲ್ಲವನ್ನೂ, ಒಬ್ಬ ವ್ಯಕ್ತಿಯಿಂದ ಪರಿಹರಿಸುವುದು ಸಾಧ್ಯವಿಲ್ಲ. ನಾಳೆಯ ಬಗೆಗೆ ತೀವ್ರ ಆಶಾವಾದಿಯಾಗಿರುವ ಕವಿಗೆ ಈ ನಿಟ್ಟಿನಲ್ಲಿ ತನ್ನ ಸಾಮರ್ಥ್ಯದ ಸ್ಪಷ್ಟ ಕಲ್ಪನೆಯಿದ್ದು ತನ್ನೆದುರಿಗಿರುವ ಸ್ಥಿತಿಯನ್ನು ಸಂಪೂರ್ಣವಾಗಿ ಸರಿಪಡಿಸಲು ಸಾಧ್ಯವಿಲ್ಲ ಎಂದು ತಿಳಿದಾಗಲೂ ಕೈಚೆಲ್ಲಿ ಸುಮ್ಮನಿರುವ ನಿರಾಶವಾದವನ್ನು ಸಹಿಸುವುದಿಲ್ಲ. 'ಹಣತೆ ಹಚ್ಚುತ್ತೇನೆ ನಾನೂ ಈ ಕತ್ತಲನ್ನು ಗೆದ್ದು ನಿಲ್ಲುತ್ತೇನೆಂಬ ಜಿದ್ದಿನಿಂದಲ್ಲ' *(ನನ್ನ ಹಣತೆ-368)* ಎಂದುಕೊಳ್ಳುತ್ತ, 'ಲೆಕ್ಕವೇ ಇರದ ದೀಪಾವಳಿಯ ಹಡಗುಗಳೆ ಇದರಲ್ಲಿ ಮುಳುಗಿ ಕರಗಿರುವಾಗ ನಾನು ಹಚ್ಚುವ ಹಣತೆ ಶಾಶ್ವತವೆಂಬ ಭ್ರಾಂತಿ ನನಗಿಲ್ಲ....' *(ಅದೇ)* ಎಂದು ತನಗಿಂತ ಹಿಂದೆ ಇಂತಹ ಕೆಲಸ ಮಾಡಿದವರ ಪ್ರಯತ್ನ ಕಾಲಗರ್ಭದಲ್ಲಿ ನಾಮಾವಶೇಷವಾದುದರ ಚಾರಿತ್ರಿಕ ಪ್ರಜ್ಞೆಯನ್ನು ವ್ಯಕ್ತಪಡಿಸುತ್ತಾರೆ.

ಆದರೂ ಹಣತೆ ಹಚ್ಚುತ್ತೇನೆ ನಾನೂ
ಕತ್ತಲೆಯನ್ನು ದಾಟುತ್ತೇನೆಂಬ ಭ್ರಮೆಯಿಂದಲ್ಲ
ಇರುವಷ್ಟು ಹೊತ್ತು ನಿನ್ನ ಮುಖ ನಾನು, ನನ್ನ ಮುಖ ನೀನು
ನೋಡಬಹುದೆಂಬ ಒಂದೇ ಆಸೆಯಿಂದ,

*(ಅದೇ)*

ಇದು ಹೇಗೆ ಎಂದರೆ, ಹಣತೆ ಆರಿದ ಮೇಲೆ ನಾವು ಪರಸ್ಪರ ಅಪರಿಚಿತರಾಗಿ ಬಿಡುತ್ತೇವೆ. ಆದುದರಿಂದ ಅದು ಆರುವ ಮುನ್ನ ಇರುವಷ್ಟು ಹೊತ್ತು ಬದುಕನ್ನು ಅನುಭವಿಸಬೇಕು. ಅದೇ ಬದುಕಿನ ಸಾರ್ಥಕ್ಯವಾಗುತ್ತದೆ.

ಇದೇ ರೀತಿ—

ನಾಳೆ ಈ ಸಸಿಗಳೆಲ್ಲ ವಟವೃಕ್ಷವಾಗಿ
ಸಾವಿರ ಜನಕ್ಕೆ ನೆರಳಾದಾವೆಂಬ ಮಹದಾಸೆ ಇರದಿದ್ದರೂ
ಒಂದೆರಡಾದರೂ 'ಬೀಜವಾಗುವಂಥ' ಹಣ್ಣು
ಬಿಟ್ಟಾವೆಂದು 'ನಂಬಿ ಕಾಯುತ್ತೇನೆ'.

ಎನ್ನುವಲ್ಲಿ ಅತಿಯಾಸೆಯಿಲ್ಲದ ಆದರೆ ವಿಶ್ವಾಸದ ನಿರೀಕ್ಷೆ ಇದೆ. ತನ್ನ ಪ್ರಾಮಾಣಿಕ ಶ್ರಮದ ಬಗೆಗೆ ನಂಬಿಕೆ ಇದೆ. ಸ್ವಾರ್ಥವನ್ನು ಮೀರಿದ, ಚಿರಂತನದ, ಅಭಿವೃದ್ಧಿಯ, ಮಾನವ ಬದುಕಿನ ನಿರಂತರ ಆಶಾಭಾವನೆಯಿದೆ.

ಈ ಎಲ್ಲದರ ಹಿನ್ನೆಲೆಗಿರುವುದು ಕವಿಗೆ ಜೀವದ ಬಗೆಗಿರುವ ಕಾಳಜಿಯಾಗಿದೆ. ಎರಡು ಅತಿಗಳ ಮಧ್ಯೆ ಸಮತೂಕದ ಜೀವನ ದೃಷ್ಟಿ ಇಲ್ಲಿ ಕಂಡುಬರುತ್ತದೆ. ಹೀಗೆ ಜಿ.ಎಸ್.ಎಸ್. ಸಮಕಾಲೀನ ಬದುಕಿಗೆ ಸಕ್ರಿಯವಾಗಿ ಸ್ಪಂದಿಸಿದ್ದಾರೆ. ತಮ್ಮನ್ನು ಅದರ ಜೊತೆಗೆ ಗುರುತಿಸಿಕೊಂಡಿದ್ದಾರೆ. ಸಮಾಜದೊಳಗಿನ ಕುಂದುಕೊರತೆಗಳಿಗೆ ಕನ್ನಡಿಯಾಗ ಬೇಕಾದ್ದು ಕಾವ್ಯದ ಕರ್ತವ್ಯ ಎಂದು ಸಾಹಿತ್ಯದ ಗುರುತ್ವವನ್ನು ಪ್ರತಿಪಾದಿಸಿದ್ದಾರೆ. ಬದುಕಿನ ಬಗೆಗೆ ಕವಿ ವ್ಯಕ್ತಪಡಿಸುವ ಪ್ರೀತಿ-ಕಾಳಜಿಗಳು, ಪುರೋಗಾಮಿಯಾದ ವೈಚಾರಿಕ ದೃಷ್ಟಿಕೋನಗಳು ಅವರನ್ನು ಒಬ್ಬ ಜನಪರ ಧೋರಣೆಯ, ಜನರ ಕವಿಯನ್ನಾಗಿಸುತ್ತವೆ.

*(ಮೂಲ: 'ಸಾಧನೆ' ಜ-1992-ಜೂನ್-1993)*



# ಭಾವಗೀತಕಾರ ಜಿಎಸ್ಎಸ್: ಟಿಪ್ಪಣಿ ರೂಪದ ಮಾತುಗಳು

ಪ್ರೊ॥ ಎಸ್. ಜಿ. ಸಿದ್ಧರಾಮಯ್ಯ

ಜಿಎಸ್ಎಸ್ ಅವರ ಕಾವ್ಯದ ಬೆಳವಣಿಗೆಯನ್ನು ಗುರುತಿಸುವುದೆಂದರೆ ಆಧುನಿಕ ಕನ್ನಡ ಕಾವ್ಯದ ಬೆಳವಣಿಗೆಯನ್ನು ಗ್ರಹಿಸುವುದೆಂದೇ ಅರ್ಥ. ಈ ಅರ್ಥ ಇತ್ಯಾತ್ಮಕ ಭಾವದಲ್ಲಿ ಕವಿಚೇತನವೊಂದರಲ್ಲಿ ಬೆಳಗಿದ ತ್ರಿಕಾಲ ಸ್ಥಿತಿಯ ಎಚ್ಚರವನ್ನು ಬಿಂಬಿಸುತ್ತದೆ. ಕಾವ್ಯಮೀಮಾಂಸೆಯಲ್ಲಿ ವಿವೇಚನೆಗೆ ಒಳಗಾಗಿರುವ ಪ್ರಜ್ಞೆಯ ಸ್ವರೂಪವನ್ನು ಒಳಗೊಂಡ ಎಚ್ಚರವಿದು. ಅಂದರೆ ಸ್ಮೃತಿ ಬುದ್ಧಿ ಮತಿಗಳ ತ್ರಿಕಾಲ ಕೇಂದ್ರಿತ ಪ್ರಜ್ಞಾ ವಿಶೇಷದ ಫಲವಿದು. ಈ ತ್ರಿಕಾಲ ಸ್ಥಿತಿಗಳು ಪರಸ್ಪರ ಮುಖಾಮುಖಿಯಾಗುತ್ತಾ ಅನುಭವಕ್ಕೆ ಅನುಭಾವಿಕ ದ್ರವ್ಯವನ್ನು ಪ್ರದಾನ ಮಾಡುವ ಸಂಘರ್ಷಾತ್ಮಕ ಸ್ವರೂಪದವು—'ದಾರಿ ನೂರಾರಿವೆ ಬೆಳಕಿನರಮನೆಗೆ'—ಎಂಬ ತಿಳಿವಳಿಕೆಯವು. ಈ ತಿಳಿವಳಿಕೆ ಆಶಾಜೀವಿಯ ಶ್ರದ್ಧೆ ಉತ್ಸಾಹದ ಮನಃಸ್ಥಿತಿಯನ್ನು ಮಾತ್ರ ಬಿಂಬಿಸುತ್ತಿಲ್ಲ; ಗತಿಶೀಲ ಭಾವದಲ್ಲಿನ ನಿರ್ಧಾರಿತ ಕ್ರಿಯಾಶೀಲ ಮನೋಧರ್ಮವನ್ನೂ ಧ್ವನಿಸುತ್ತದೆ. ಇಂಥ ಮನೋಧರ್ಮದ ವಿಶೇಷತೆಯೆಂದರೆ ಅನುಭವಕ್ಕೆ ನಿಷ್ಠವಾಗಿ ನೆಲೆಯನ್ನು ಅರಸುವಂಥ ಸ್ವತಂತ್ರ ಸ್ವಭಾವ. 'ಬೇಡೆನಗೆ ಸಿದ್ಧಾಂತಗಳ ರಾದ್ಧಾಂತ, ನನಗಿಲ್ಲ ಇದೇ ಸರಿ ಇಷ್ಟೇ ಸರಿ ಎನುವ ಪಂಥ, ನಾ ಬಲ್ಲೆ ಇವೆಲ್ಲ ಏರುವೆಯ ಒಂದೊಂದು ಹಂತ'. ಇದು ಜಿಎಸ್ಎಸ್ ಅವರ ಕವಿ ಸ್ವಭಾವ. ಇದು ಸಿದ್ಧಾಂತಗಳ ನಿರಾಕರಣೆಯಲ್ಲ; ಸಿದ್ಧಾಂತಗಳ ಮಿತಿಯನ್ನು ಅರಿತುಕೊಂಡು ಸಿದ್ಧಾಂತಗಳ ಆಚೆಗಿನ ಬದುಕಿನ ಅಪಾರತೆಯನ್ನು ಪರಿಭಾವಿಸುವ ನಿಲುವು. ಹೀಗಿರುವುದರಿಂದಲೇ ಇವರಿಗೆ ಕಾವ್ಯವೆಂದರೆ ಕವಿಗಳು ಬರೆದ ಭಾಷಿಕ ರಚನೆಗಳು ಮಾತ್ರ ಅಂತ ಅನ್ನಿಸಿಲ್ಲ. "ಈ ನೆಲದಾಳಗಳಲ್ಲಿ ಬೇರಾಗಿ ವ್ಯಕ್ತಮಧ್ಯದೊಳಗೆಲ್ಲೋ ಥಟ್ಟನೆ ಅರಳಿ ನೆಲಮುಗಿಲುಗಳ ನಡುವೆ ನಿಂತ ಈ ಒಂದೊಂದೂ ಜೀವಂತ ಕವಿತೆಗಳೆ." ಇಂಥ ಜೀವಂತ ಕವಿತೆಗಳ ನಡುವೆ ಬದುಕುವುದೆಂದರೆ ಅದು ಮನುಷ್ಯ ಕೇಂದ್ರಿತ ಮಿತಿಯಲ್ಲಿ ಕುಬ್ಜವಾಗುವುದಲ್ಲ; ವ್ಯಕ್ತಮಧ್ಯದ ಬದುಕಿನ ವಿಸ್ತಾರದಲ್ಲಿ ವಿಕಾಸಶೀಲವಾಗುವುದು. 'ಒಳಗೊಂದು ಪ್ರೀತಿಯ ಹಣತೆ ಹಚ್ಚಿಡುವ ಕಲೆಗಾರಿಕೆ' ಅದು. ಹೀಗೆ ಬಾಳುವುದು ಹೇಗೆ ಕಲೆಗಾರಿಕೆಯೋ ಬಾಳಿನ ಅನುಭವವನ್ನು ಭಾಷಿಕ ಆಕೃತಿಗಿಳಿಸುವುದೂ ಪ್ರತಿಭೆಯ ಫಲವಾಗಬೇಕು. ಇದು ಕಾವ್ಯರಚನೆಯ ಬಗೆಗೆ ಜಿಎಸ್ಎಸ್ ಅವರಿಗಿರುವ ನಂಬಿಕೆ.

ಹಾಡು ಹಳೆಯದಾದರೇನು
ಭಾವ ನವ ನವೀನ
ಎದೆಯ ಭಾವ ಹೊಮ್ಮುವುದಕೆ
ಭಾಷೆ ಒಂದು ಸಾಧನ *(ಸಾಮಗಾನ: 1957)*

ನಾನೊಂದು ಕತ್ತಲೆಯ ಕೇಂದ್ರ
ಇದರೊಳಗಿಂದ ಬೆಳಕಿನ ಹಾಡ
ಪ್ರಸಾರ ಮಾಡುವನು ಯಾವನೋ
ನಾನು ಕಾಣದ ಚಂದ್ರ *(ಗೋಡೆ: 1972)*

ತಣ್ಣಗೆ ಉರಿವ
ಸಣ್ಣ ಹಣತೆಯ ಕಣ್ಣ ಬೆಳಕಿನಲ್ಲಿ
ಜಗತ್ತಿನ ತೇಜಸ್ಸೆಲ್ಲವು ತುಂಬಿಕೊಂಡಿದೆ
ಒಂದೇ ಒಂದು ಹಣತೆಯ ಕಣ್ಣಿನಲ್ಲಿ *(ಚಕ್ರಗತಿ: 1972)*

ನಾನು ಬರೆಯುತ್ತೇನೆ
ಶತಮಾನಗಳ ಕತ್ತಲನ್ನೊಡೆದು
ಮೆತ್ತಗೆ ತಲೆ ಎತ್ತುವ ಮೊಳಕೆಗಳನ್ನು ಕುರಿತು

ನಾನು ಬರೆಯುತ್ತೇನೆ
ಒಂದೊಂದೇ ಎಲೆಯುದುರಿ
ನಾನು ಬೋಳಾಗುವುದನ್ನು ಕುರಿತು *(ಚಕ್ರಗತಿ: 1972)*

ಈ ಎಲ್ಲ ರಚನೆಗಳ ಆಳದಲ್ಲಿ ಹರಡಿರುವ ಆಶಯ ಹಾಗೂ ಚಿಂತನೆ ಬದುಕು ಮತ್ತು ಕವಿಯ ನಡುವಿನ ಸಂಬಂಧದ ಅನ್ವೇಷಣೆಯೇ ಆಗಿದೆ. ಮೊಳಕೆಯಿಂದ ಬೋಳಿನವರೆಗಿನ ಬದುಕನ್ನು ಏಕತ್ರ ಭಾವದಲ್ಲಿ ಪರಿಭಾವಿಸಿದ ಸಮಗ್ರ ದೃಷ್ಟಿಯ ಅನ್ವೇಷಣೆ ಇದು. ಸಮಗ್ರತೆಯೆಂದರೆ ಕಣ್ಣಳತೆಯಲ್ಲಿನ ಕತ್ತಲೆಯನ್ನು ಹೊರದೂಡಿದ ದೀಪದ ಬೆಳಕಿನ ಪರಿ—ಎಂಬ ಅರಿವೂ ಇಲ್ಲಿ ಬಹಳ ಮುಖ್ಯವಾದದ್ದು. ಅನುದಿನದ ಬಾಳಿನಲ್ಲಿ ಎದುರಾಗುವ ಅನುಭವಗಳನ್ನು ಬೆಳಕಿಗೊಡ್ಡಿಕೊಳ್ಳುವ ಪ್ರಕ್ರಿಯೆಯ ಫಲರೂಪಿ ಇದು.

ನಗುವ ಅಳುವ ಕವಿತೆಗಿಂತ
ಬರೆವ ಕವಿತೆ ದೊಡ್ಡದೆ?
ಆ ಕವಿತೆಗೆ ಭ್ರಾಂತರಾಗಿ
ಈ ಕವಿತೆಯ ಮರೆವರೆ?

ಒಲೆಯ ಬದಿಗೆ ನಿಮ್ಮ ಕುವರ
ನೀವು ಬರೆದ ಕವಿತೆಯ
ತಂದಿರುವನು ನಿಮಿಷದಲ್ಲಿ
ಮಾಡಬಹುದು ಬೂದಿಯ.

ಈ ಸಾಲುಗಳ ಹಿಂದಿನ ತಾತ್ವಿಕ ಚಿಂತನೆ ಕಲೆ ಮತ್ತು ಮನುಷ್ಯ ಹಾಗೂ ಸೃಜನೆ ಮತ್ತು ಸಂಸ್ಕೃತಿಗಳ ಸಂಬಂಧವನ್ನು ಗಾಢವಾಗಿ ವಿಶ್ಲೇಷಣೆಗೆ ಒಡ್ಡಿದೆ. ಸರಳ ಸನ್ನಿವೇಶದಂತೆ ಕಾಣುವ ಈ ರಚನೆಯ ಆಳದಲ್ಲಿನ ಅನುಭಾವಿಕ ಗ್ರಹಿಕೆ ಬಗೆದಷ್ಟೂ ವಿಸ್ತಾರಗೊಳ್ಳುವ ಅರ್ಥ ಸಮೃದ್ಧಿಯಿಂದ ಕೂಡಿದೆ. ಇದು ಜಿಎಸ್‌ಎಸ್ ಅವರ ಕಾವ್ಯದ ಅನನ್ಯತೆ ಹಾಗೂ ಕಾವ್ಯ ಕುರಿತ ಚಿಂತನೆಯ ವಿಶೇಷತೆ.

ಆಧುನಿಕ ಕನ್ನಡ ಕಾವ್ಯ ಪ್ರಪಂಚದಲ್ಲಿ ಭಾವಗೀತೆಗಳಿಗಿರುವ ಸ್ಥಾನ ವಿಶೇಷವಾದುದು. ಕವಿ ಹಾಗೂ ಸಹೃದಯರ ನಡುವೆ ಒಂದು ಸುಭಗ ಸಂವಹನವನ್ನು ಸಾಧ್ಯಗೊಳಿಸಿರುವ ಕಾವ್ಯಪ್ರಕಾರದಲ್ಲಿ ಭಾವಗೀತೆಯದು ಅಗ್ರಮಾನ್ಯ ಸಾಲು. ಕನ್ನಡ ಭಾವಗೀತೆಗಳ ಸಮೃದ್ಧಿಯ ಸುಗ್ಗಿ ನಡೆದದ್ದು ನವೋದಯದಲ್ಲಿ. ವಸಾಹತೀಕರಣಕ್ಕೆ ಒಳಗಾದ ಭಾರತೀಯ ಬದುಕಿನ ಎಲ್ಲ ವಿಷಮ ಸನ್ನಿವೇಶಗಳ ನಡುವೆಯೂ ಬತ್ತದ ಜೀವನ ಪ್ರೀತಿಯನ್ನು ಇಟ್ಟುಕೊಂಡು ಬದುಕಿಗೆ ಮುಖಾಮುಖಿಯಾಗಿ ಬಾಳಿದ ಕವಿಗಣ ಅದು. ಬದುಕಿನಲ್ಲಿ ಬರೀ ವಿಕಾರ-ಕಷ್ಟ-ನೋವು-ಘೋರವಾಸ್ತವತೆ-ಭೌತಿಕ ಪ್ರಧಾನತೆ ಇತ್ಯಾದಿ ಅಂಶಗಳನ್ನೇ ಪ್ರಧಾನ ಮಾಡಿಕೊಂಡು ಅವುಗಳ ಬಗ್ಗೆ ರಾಜಕೀಯ ಪ್ರಣಾಳಿಕೆಯ ರೀತಿಯಲ್ಲಿ ಸೂತ್ರಬದ್ಧ ಸಾಲುಗಳನ್ನು ಹೊಸೆಯುವ ಇತ್ತೀಚಿನ ಬರಹವನ್ನು ಗಮನಿಸಿದಾಗ ನವೋದಯಕಾಲದ ಜೀವನ ಪ್ರೀತಿಯ ಮಹತ್ವದ ಅರಿವುಂಟಾಗುತ್ತದೆ. ನವೋದಯದ ಭಾವಗೀತಕಾರರು ಈ ಮೇಲಿನ ವಿಚಾರಗಳಿಗೆ ಕುರುಡರಾಗಿದ್ದರು, ಕಿವುಡರಾಗಿದ್ದರು ಅಂತ ಅಲ್ಲ. ಅವರ ಕಾವ್ಯ ಈ ಎಲ್ಲ ವಿಚಾರಗಳಿಗೆ ಎದೆ ತೆರೆದಿದ್ದು ಎಷ್ಟು ಸತ್ಯವೋ ಅಷ್ಟೇ ಮಟ್ಟಿಗೆ ಅವುಗಳಿಂದ ಕುಗ್ಗಿಹೋಗದ ಆತ್ಮಸ್ಥೈರ್ಯವನ್ನು ಆರೋಗ್ಯಕರ ಚಿಂತನೆಯನ್ನು ಉಳಿಸಿಕೊಂಡಿದ್ದರು ಎಂಬುದು ಅಷ್ಟೇ ನಿಷ್ಠುರ ವಾಸ್ತವ. ಬದುಕಿನ ಈ ನೇತ್ಯಾತ್ಮಕ ಅಂಶಗಳು ಅವರ ಜೀವನ ಪ್ರೀತಿಯನ್ನು ಕುಗ್ಗಿಸುವ ನಿರಾಶೆ ಹತಾಶೆ ಸಿನಿಕತೆಗಳನ್ನು ಬೆಳೆಸುವ ಅತಿರೇಕದ ಸಂಗತಿಗಳಾಗಿ ಅವರಲ್ಲಿ ಬಳಕೆಯಾಗಲಿಲ್ಲ. ವಸ್ತುಸ್ಥಿತಿಯನ್ನು ಅನುಭವಕ್ಕೆ ತಂದು ಬದುಕಿನ ಸ್ವಸ್ವರೂಪವನ್ನು ಮನಗಾಣಿಸುವ ಸಂಗತಿಗಳಾಗಿವೆ. ಹಾಗೂ ಈ ಸ್ಥಿತಿಯಿಂದ ಬಿಡಿಸಿಕೊಂಡು ಹೊಸ ಬದುಕಿಗೆ ತುಡಿಯುವ ವಿವೇಚನೆಯನ್ನು ಬೆಳೆಸಿವೆ. ನವೋದಯದ ಮತ್ತೊಂದು ವಿಶೇಷ ವೆಂದರೆ ಕನ್ನಡ ಭಾಷೆಯ ಲಯವನ್ನು ಭಾವಗೀತಕಾರರು ದುಡಿಸಿಕೊಂಡದ್ದು. ಒಂದು ಕಾವ್ಯ ಸಹಜವಾಗಿ ಒಳಗೊಳ್ಳಬೇಕಾದ ಸಂಗೀತ ಗುಣವನ್ನು ಕಡೆಗಣಿಸಿದ ಕನ್ನಡದ ಇತ್ತೀಚಿನ ರಚನೆಗಳನ್ನು ನೋಡಿದಾಗ ನವೋದಯದ ಭಾವಗೀತಕಾರರ ಭಾಷಾಪ್ರಯೋಗದ ವಿಶಿಷ್ಟತೆ ಗೊತ್ತಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಕತ್ತರಿಸಿಟ್ಟ ಗದ್ಯದ ಸಾಲುಗಳ ರೀತಿಯ

ನೀರಸ ರಚನೆಗಳನ್ನು ಓದುವಾಗ ಕಾವ್ಯಭಾಷೆಗಿರಬೇಕಾದ ಅನನ್ಯತೆಯ ಅಂಶ ಹೆಚ್ಚು ಕಾಡಿಸುತ್ತದೆ. ಯಾವುದೇ ವಸ್ತು-ವಿಚಾರಗಳ ಬಗ್ಗೆ ನಿಷೇಧ ಹೇರಿಕೊಳ್ಳದೆ, ಅನುಭವಕ್ಕೆ ತೆರೆದುಕೊಂಡು ಸಂಸ್ಕೃತಿ ನಿಷ್ಠ ನೈತಿಕ ಹೊಣೆಗಾರಿಕೆಯಲ್ಲಿ ಕಾವ್ಯಕಟ್ಟಿದ ನವೋದಯದ ಸಂದರ್ಭ ಕನ್ನಡ ಕಾವ್ಯ ಚರಿತ್ರೆಯಲ್ಲಿ ಬಹಳ ಪ್ರಮುಖವಾದ ಕಾಲಘಟ್ಟವೆನ್ನುವುದನ್ನು ಮರೆಯುವಂತಿಲ್ಲ. ಈ ಎಲ್ಲ ವಿಚಾರಗಳನ್ನು ಕನ್ನಡ ನವೋದಯ ಒಳಗೊಳ್ಳಲು ಪ್ರಮುಖ ಕಾರಣ ಆಗಿನ ಕಾಲದ ಕವಿಗಳಿಗೆ ಬದುಕಿನ ಬಗ್ಗೆ ಇದ್ದ ಆರೋಗ್ಯಕರ ಭಾವದ ಜೀವನ ಪ್ರೀತಿ. ಜಿಎಸ್‌ಎಸ್ ಅವರ ಕಾವ್ಯದ ಬೆಳವಣಿಗೆಯ ಹಿಂದಿನ ಮೂಲದ್ರವ್ಯ ಕೂಡ ಈ ಆರೋಗ್ಯಕರ ಜೀವನ ಪ್ರೀತಿ ಎನ್ನುವುದು ಬಹಳ ಮುಖ್ಯವಾದ ಅಂಶ.

**ಪ್ರೀತಿ ಇಲ್ಲದ ಮೇಲೆ**
**ಹೂವು ಅರಳೀತು ಹೇಗೆ?**
**ಮೋಡ ಕಟ್ಟೀತು ಹೇಗೆ?**
**ಹನಿಯೊಡೆದು ಕೆಳಗಿಳಿದು**
**ನೆಲಕ್ಕೆ ಹಸಿರು ಮೂಡೀತು ಹೇಗೆ?**

**ಪ್ರೀತಿ ಇಲ್ಲದ ಮೇಲೆ-**
**ಮಾತಿಗೆ ಮಾತು ಕೂಡೀತು ಹೇಗೆ?**
**ಅರ್ಥ ಹುಟ್ಟೀತು ಹೇಗೆ?**
**ಬರೀ ಪದಕ್ಕೆ ಪದ ಜತೆಗಿದ್ದ ಮಾತ್ರಕ್ಕೆ**
**ಪದ್ಯವಾದೀತು ಹೇಗೆ?**

ಕನ್ನಡ ಜನಮನದಲ್ಲಿ ಮತ್ತೆ ಮತ್ತೆ ಅನುರಣನಗೊಳ್ಳುವ ಹಲವು ಸುಂದರ ಭಾವಗೀತೆಗಳ ರಚಯಿತರಲ್ಲಿ ಜಿಎಸ್‌ಎಸ್ ಕೂಡ ಪ್ರಮುಖರು. ಅವರ *ಉಡುಗಣವೇಷ್ಟಿತ, ಎಲ್ಲಿ ಹೋಗುವಿರಿ ನಿಲ್ಲಿ ಮೋಡಗಳೆ, ನೆನಪಿದೆಯಾ ನಿನಗೆ, ಶಕ್ತಿಯ ಕೊಡು, ಎಲ್ಲೋ ಹುಡುಕಿದೆ ಇಲ್ಲದ ದೇವರ, ನವೋದಯ, ಹೌದೇನೆ ಉಮಾ, ಯಾರವರು ಯಾರವರು, ಹಳೆಯ ಹಾಡು, ಕಾವೇರಿ, ಪ್ರಣಯ, ಸಂಧ್ಯಾರಾಗ* ಮೊದಲಾದ ಹಲವು ರಚನೆಗಳು ತಮ್ಮ ಸರಳಸುಂದರ ಮಾರ್ದವಗುಣದ ಜೊತೆಗೆ ನಾಟಕೀಯ ಸತ್ವದಿಂದ ಆಪ್ತವೆನ್ನಿಸಿ ಜನಮನ ಗೆದ್ದಿವೆ. ಸ್ವಾನುಭವ ನಿವೇದನೆಯ ಜೊತೆಗೆ ಇತಿಹಾಸ ಪುರಾಣಗಳ ಪಾತ್ರಗಳನ್ನು ಅನುಭವ ಕೇಂದ್ರವಾಗಿಸಿಕೊಂಡು ಇವರು ರಚಿಸಿದ ಹಲವು ರಚನೆಗಳು ಭಾವಗೀತೆಯ ಹೊಲಮಾಳದಲ್ಲಿ ಸದಾ ಹಸಿರಾಗಿರುವ ಜೀವವೃಕ್ಷಗಳು.

ಸ್ವಾತಂತ್ರ್ಯಾನಂತರದ ಭಾರತದ ಸಾಮಾಜಿಕ ಚಿತ್ರ ಸಹಜವಾಗಿ ಇವರ ಕಾವ್ಯದ ಅಂತರ್ಯದಲ್ಲಿನ ಚಿಂತನಾದ್ರವ್ಯವಾಗಿದೆ. ಆದರೆ ಈ ಚಿಂತನೆಯ ವಸ್ತುರೂಪ ನೇರವಾಗಿ ಸಮಸ್ಯೆಯನ್ನು ಮುಖಾಮುಖಿಯಾಗಿಸಿಕೊಂಡದ್ದಲ್ಲ. ಬಹುತೇಕವಾಗಿ ವಸ್ತು ನಿಸರ್ಗವನ್ನು

ಕುರಿತದ್ದು; ವ್ಯಕ್ತಿಗತ ಸಂಬಂಧಗಳ ಭಾವಮೂಲಗಳನ್ನು ಅನುಸರಿಸಿದ್ದು. ಅಂತರಮುಖಿಯಾಗುತ್ತಾ ಐಂದ್ರಿಯಿಕ ಸಹಜ ಗುಣದೋಷಗಳ ನಿರೀಕ್ಷೆಯಲ್ಲಿ ಭಾವಶುದ್ಧಿಗೆ ಹಂಬಲಿಸುವುದು. ಇಲ್ಲಿನ ದನಿ ಮೆಲುಮಾತಿನ ತುಂಬು ಗಾಂಭೀರ್ಯದ ಚೆಲುವಿನ ದನಿ. ಈ ಚಿಂತನೆಯ ಒಡಲಲ್ಲಿ ಸಂಭ್ರಮವಿದೆ, ಸಂತೋಷವಿದೆ, ನೋವಿದೆ, ವಿಷಾದವಿದೆ, ದ್ವಂದ್ವಭಾವದ ಸಂದಿಗ್ಧ ಸೂಕ್ಷ್ಮಗಳಿವೆ. ಇವೆಲ್ಲ ಸಂದರ್ಭವಶದ ಸಂಚಾರಿಗಳಾಗಿವೆ. ಆದರೆ ಇವೆಲ್ಲವನ್ನೂ ಜೀವಪರ ಭಾವಮೂಲದಲ್ಲಿ ಕಟ್ಟಿ ಬೆಳೆಸುವ ವ್ಯಕ್ತಿತ್ವ ವಿಶಿಷ್ಟತೆ ಅನನ್ಯವಾದುದು. ತಾಯಿಯ ಅಂತಃಕರಣದ ಆರ್ದ್ರತೆಯ ಜೊತೆಗೆ ಸಂಸ್ಕೃತಿಪರವಾದ ಮಾನವೀಯ ಹೃದಯವಂತಿಕೆಯನ್ನೂ ಕಾಳಜಿ ಸಂಪನ್ನ ಧೀಃಗುಣವನ್ನೂ ಜೀವದ್ರವ್ಯವಾಗಿಸಿಕೊಂಡ ವಿಶಿಷ್ಟತೆ ಇದು. ಹೀಗಾಗಿ ಹಲವು ರಚನೆಗಳ ಆಳದಲ್ಲಿ ತುಂಬಿಕೊಂಡ ನಿರಾಶೆ ಇದ್ದರೂ ಅದು ನೇತ್ಯಾತ್ಮಕ ಹಾದಿ ಹಿಡಿಯುವುದಿಲ್ಲ. ಭರವಸೆಯನ್ನು ತಾಳಿದ ಇತ್ಯಾತ್ಮಕ ಹಾರೈಕೆಯಾಗಿ ಸಂಸ್ಕೃತಿ ಪರವಾಗುತ್ತದೆ; ಸಂಸ್ಕೃತಿಯೇ ಆಗುತ್ತದೆ.

**ಕಸ ಪೂರಕೆಯಲ್ಲದೆಯೆ ಬೇರೆ ಗುರುವೇತಕೆ,**
**ಮಾನವತೆಯನು ಮೇಲೆ ಕೊಂಡೊಯ್ಯುವದಕೆ**
**ಕಲ್‌ಗುಂಡಿನೆದೆಯಲ್ಲು ಕೋಮಲತೆಯರಳಿಸುವ**
**ಮೂಲರಸವಡಗಿಹುದು! ಈ ಬಂಡೆಯೇ ಅಲ್ಲಿ**
**ಮರದ ತುದಿಯಲಿ ಹೂವಾಗಿ ಅರಳಿಹುದು**

ಇದು ನವೋದಯದ ದೃಷ್ಟಿ. ಸೌಂದರ್ಯವೆಂದರೆ ಬರೀ ಬಾಹ್ಯ ಆಕೃತಿಯ ಬೆಡಗಲ್ಲ, ಬೆರಗೂ ಅಲ್ಲ; ರೂಕ್ಷತೆಯು ವಿಕಾಸ ಹೊಂದಿ ಸಂಸ್ಕೃತಿಯಾಗುವ ಚೆಲುವಿನ ಪರಿ. ಈ ದರ್ಶನ ವಿಶೇಷತೆ ನವೋದಯದ ನಿಜವಾದ ಚೆಲುವಿನ ನೆಲೆ. ಹೀಗಾಗಿ ಇಲ್ಲಿ ಭಾವಾವೇಶವಿಲ್ಲ, ಭಾವದ ನೀರವತೆಯಲ್ಲಿ ಬಗೆಯ ಎಚ್ಚರವಿದೆ, ಏಕಾಂತದ ಮಾತಿನಲ್ಲೂ ಲೋಕಾಂತದ ವಿವೇಕವಿದೆ.

ಜಿಎಸ್‌ಎಸ್ ಅವರ ಭಾವಗೀತೆಗಳ ದನಿ ಏಕಾಂತದ ಮಣಿಮಂತ್ರ ಸ್ವರೂಪಿಯದಲ್ಲ; ಅಂತರ್ಮುಖಿಯಾದರೂ ಅನುಭವ ಜಗತ್ತನ್ನು ಮರೆಯದ ಚಿಂತಕನದು. ಹೀಗಾಗಿ ಈ ದನಿಗೆ ಬಣ್ಣದ ಬೆಡಗಿಲ್ಲ, ಪ್ರಣಾಳಿಕೆಯ ಅಬ್ಬರವಿಲ್ಲ, ನಿಶ್ಯಬ್ದದ ಬರಿ ಬೆರಗೂ ಇಲ್ಲ. ಮಿಗಿಲಾಗಿ ನಿವೇದನೆಯ ನಿಕಷದಲ್ಲಿ ನಿಜದ ಶೋಧಕ್ಕೆ ತೊಡಗಿದ ನೀರವ ಚಲನೆ ಇದೆ; ಇದು ಬೋಧನಾತ್ಮಕ ಧಾರೆಯಾಗದೆ ನಿವೇದನಾತ್ಮಕ ಸೊಲ್ಲಾಗಿ ಆಪ್ತತೆಯಲ್ಲಿ ಅನುರಣನಗೊಳ್ಳುವ ಭಾವರವವಾಗಿದೆ. ಅರಳಿನಗುವ ಮಲ್ಲಿಗೆಯನ್ನು ಕಂಡಾಗಲೂ ಅದನ್ನು ಜಗತ್ತಿಗೆ ತೋರಿಸಿ ತನ್ನ ಸಂತೋಷದಲ್ಲಿ ಜಗತ್ತನ್ನು ಒಳಗು ಮಾಡಿಕೊಳ್ಳುವ ಭಾವದ ಬಗೆಯಿದು. ಈ ಭಾವ ಅಬ್ಬರದ ಘೋಷಣೆಯಾಗದೆ ಪರಿಸ್ಥಿತಿಯನ್ನು ಕದಡದ ಪ್ರಶಾಂತ ಕರೆಯಾಗಿದೆ.

ನಿಸರ್ಗದ ಆಕೃತಿ ಸೌಂದರ್ಯವನ್ನು ಕಾಣಿಸುತ್ತಲೇ ಆಕೃತಿಯ ಆಂತರ್ಯದಲ್ಲಿನ ಅರ್ಥವಾಗದ ವಿದ್ಯಮಾನಗಳ ಬಗೆಗೆ ಬೆರಗುಗೊಂಡೂ ಆ ಬೆರಗಿನ ಅಮೂರ್ತವನ್ನು ಬದುಕಿನ ಅನುಭವಗಳ ಮೂರ್ತರೂಪಗಳಲ್ಲಿ ಮನಗಾಣಿಸುವ ಪ್ರಯತ್ನಮುಖಿಯಾದುದು. 'ಮಲ್ಲಿಗೆ' ಕವನ ಇದಕ್ಕೆ ಉತ್ತಮ ಉದಾಹರಣೆ.

**ನೋಡು ಇದೋ ಇಲ್ಲರಳಿ ನಗುತಿದೆ**
**ಏಳುಸುತ್ತಿನ ಮಲ್ಲಿಗೆ**
**ಇಷ್ಟು ಹಚ್ಚನೆ ಹಸುರ ಗಿಡದಿಂ-**
**ದೆಂತು ಮೂಡಿತೊ ಬೆಳ್ಳಗೆ!**

**ಸತ್ವಶೀಲನ ಧ್ಯಾನಮೌನವೆ**
**ಅರಳಿ ಬಂದೊಲು ತೋರಿದೆ**
**ಒಲವು ತುಂಬಿದ ಮುಗುದೆಯೆದೆಯಿಂ**
**ದೊಗೆದ ನಲ್ನುಡಿಯಂತಿದೆ**

**ಎನಿತು ನವುರಾಗಿಹವು ದಳಗಳು**
**ಹಸುಳೆ ಕಾಣುವ ಕನಸೊಲು!**
**ಏನು ಇಂಪಿನ ಕಂಪು ಇದರದು**
**ಆ ಮಹಾತ್ಮರ ಮನದೊಲು**

**ಹರಿವ ಮನವನು ಹಿಡಿದು ಒಂದೆಡೆ**
**ನಿಲಿಸಿ ತೋಳಿದಿದೆ ಹೂವಿದು**
**ಚೆಲುವು ಬಾಳನು ಹಸನುಗೊಳಿಸುವ**
**ಅಚ್ಚರಿಯ ಪರಿ ಎಂಥದು!**

ಬೆಳಗು ನಮ್ಮ ಕನ್ನಡ ಕವಿಗಳ ಬೆರಗಿಗೆ ಕಾರಣವಾಗಿ ಅಪಾರ ಕವನಗಳು ಹುಟ್ಟಿವೆ. ಹಾಗೆಯೇ ಬೆಳದಿಂಗಳು ತನ್ನ ಸೌಂದರ್ಯದ ಸೂರೆಯನ್ನು ತೋರಿ ಕಾವ್ಯರಚನೆಗೆ ಕಾರಣವಾಗಿದೆ. ಈ ನಡುವೆ ದಟ್ಟ ಹಗಲನ್ನು ಕುರಿತು, ದಟ್ಟ ಇರುಳನ್ನು ಕುರಿತು ಕಾವ್ಯ ರಚಿಸಿದ ಕವಿಗಳು ಇಲ್ಲವೆನ್ನುವಷ್ಟು ಕಡಿಮೆ. ಕುವೆಂಪು ಈ ಮಾತಿಗೆ ಅಪವಾದವಾದ ಕವಿ. ಮಧ್ಯಾಹ್ನದ ಬೋರೆಯ ಮೌನವನ್ನು, ಕಗ್ಗತ್ತಲ ಕಾರ್ಗಾಲವನ್ನು ಅವರು ಶಬ್ದಾನುಭೂತಿಯಲ್ಲಿ ಕಟ್ಟಿಕೊಟ್ಟವರು. ಜಿಎಸ್‌ಎಸ್ ಅವರಲ್ಲಿ ಬೆಳಗು ಶುದ್ಧ ನಿಸರ್ಗಾನುಭೂತಿಯ ಶಬ್ದ ಚಿತ್ರವಾಗಿ ಮೂಡಿಬಂದಿರುವುದು ಕಡಿಮೆ. ಬೆಳಗು ಒಂದು ಪ್ರತಿಮೆಯಾಗಿ ಬದುಕಿನ ಅಂತಃಸ್ವರೂಪವನ್ನು ಮನಗಾಣಿಸುವ ಅನುಭೂತಿಯಾಗಿ ವರ್ಣನೆಗೊಳ್ಳುತ್ತದೆ:

**ಬೆಳಕು ಹರಿಯಿತು ಹೊರಗಡೆ**
**ಕತ್ತಲಿನ್ನೂ ಒಳಗಡೆ**
**............................**
**ಜೀವ ಕತ್ತಲೊಳದ್ದಿದೆ**
**ಜಡದವೋಲದು ಬದ್ದಿದೆ**
**..................**
**ಇದಕೆ ಎಚ್ಚರ ಎಂದಿಗೆ?**
**ಎಂದು ಬಿಡುಗಡೆ ಬಂದಿಗೆ?**

ಪ್ರಕೃತಿಯ ಸಹಜ ವ್ಯಾಪಾರ ಮನುಷ್ಯ ನೋಡುವುದರಿಂದ ಮನುಷ್ಯ ಅನುಭವಿಸುವುದರಿಂದ ಮಾತ್ರ ಅರ್ಥಪೂರ್ಣತೆ ಪಡೆದುಕೊಳ್ಳುವುದಿಲ್ಲ. ಋತುಮಾನದ ಚಕ್ರಗತಿಗೆ ಒಂದು ಗುರಿ ಇದೆ. ಅದನ್ನು ನಡೆಸುವ ಕಾಣದ ಶಕ್ತಿಯ ಬಗ್ಗೆ ಈ ಕವಿಗೆ ನಿರಂತರ ಕುತೂಹಲವಿದ್ದಷ್ಟೇ ಕೃತಜ್ಞತಾಪೂರ್ವ ಬೆರಗೂ ಇದೆ. ಕಾಣದ ಕೈಯಿನ ಈ ವ್ಯಾಪಾರದಲ್ಲಿ ಸಕಲ ಸಚರಾಚರಗಳೂ ಪಾತ್ರಧಾರಿಗಳು ಎಂಬ ನಂಬಿಗೆ ಕವಿಯದು. ಈ ನಂಬಿಗೆ ಕರ್ಮ ತತ್ವದ ಪರಿಯ ನಂಬಿಕೆಯಲ್ಲ. ಸೃಜನಶೀಲತೆಯ ಹಿಂದಿನ ರಹಸ್ಯವನ್ನು ಶೋಧಿಸಿ ಉತ್ತರ ಕಾಣದೆ ಮೂಕವಿಸ್ಮಿತನಾಗಿ ಬೆರಗುಗೊಂಡ ಕಲೆಗಾರನ ತಿಳಿವಳಿಕೆ:

**ನೂರು ರೀತಿಯಲ್ಲಿ ಪ್ರಕೃತಿ**
**ವ್ಯಕ್ತಗೊಳ್ಳಲೆಳಸಿತು**
**ತನ್ನ ಎದೆಯ ಭಾವಗಳನು**
**ನುಡಿದು ತೋರ ಬಯಸಿತು**

ಹೀಗೆ ಪ್ರಕೃತಿಯ ಸೆಳೆತ ಕವಿಗೆ ವ್ಯಕ್ತಮಧ್ಯದ ಆಕರ್ಷಣೆಯಾಗಿ ಭಾವದುದ್ದೀಪನವಾಗಿ ಬದುಕಿನ ಶೋಧದ ಬಾಗಿಲಾಗಿ ಅನುಭವವಾಗಿ ಅರಳಿದೆ. ನಿಸರ್ಗದ ಕಡೆ ಕಣ್ಣು ನೆಟ್ಟರೆ ನೆಲದಲ್ಲಿ ನಿಟ್ಟುಸಿರಿನ ಬದುಕೊಂದಿದೆ ಎಂಬುದನ್ನು ಅರಿವಿಗೇ ತಂದುಕೊಳ್ಳದ ಭಾವೋನ್ಮತ್ತ ನಿಸರ್ಗಾರಾಧನೆ ಅಲ್ಲ ಇದು. ಕಣ್ಣ ನೀರಿನಲಿ ಮಣ್ಣ ಧೂಳಿನಲಿ ಹೊರಳುತ್ತಿರುವವರನ್ನು ಮರೆಯದ, ಉಳುತಿಹ ರೈತನ ನೇಗಿಲ ಸಾಲಿನ ಶ್ರಮಸಂಸ್ಕೃತಿಯನ್ನು ಕಡೆಗಣಿಸದ, ಮುರುಕು ಗುಡಿಸಲಿನ ಉಪವಾಸಿಗಳ ಸಂಕಷ್ಟಗಳಿಗೆ ಎದೆ ತೆರೆದ ದೃಷ್ಟಿ ವಿಶೇಷದ ನಿಸರ್ಗಾನುಭೂತಿಯಿದು. ಇವರ ನಿಸರ್ಗೋಪಾಸನೆಯ ಬಹುತೇಕ ಕವನಗಳಲ್ಲಿ ರೈತಪ್ರಜ್ಞೆಯೊಂದು ಸದಾ ಜಾಗೃತವಿದ್ದು ಮಿಡಿಯುವುದನ್ನು ಕಾಣುತ್ತೇವೆ. ಈ ಪ್ರಜ್ಞೆ ನೆಲದ ಬದುಕಿನ ಬಗ್ಗೆ ಕವಿಯನ್ನು ಸದಾ ಎಚ್ಚರದಲ್ಲಿ ನಡೆಸುವ ಪ್ರಜ್ಞೆ. ಸೌಂದರ್ಯೋಪಾಸನೆ ಗಾಳಿಗೀಳಾಗದಂತೆ ಕಪೋಲ ಕಲ್ಪಿತ ಶಬ್ದಾಡಂಬರವಾಗದಂತೆ ನೋಡಿಕೊಂಡ ಅನುಭವ ಭೂಮಿಕೆಯ ಎಚ್ಚರ ಪ್ರಜ್ಞೆ ಇದು. ಹೀಗಾಗಿ ಕವಿಗೆ ಪ್ರಕೃತಿ ಶುದ್ಧ ಸೌಂದರ್ಯೋಪಾಸದ ಕೇಂದ್ರವಲ್ಲ; ಬಾಳಿನ ಏರಿಳಿತಗಳ ನಾಡಿ ಮಿಡಿತಕ್ಕೆ ನಿಜ ದನಿಯಾದ ಪ್ರತಿಮಾಕೃತಿ. ವ್ಯವಸಾಯ ಸಂಸ್ಕೃತಿಯ

ಭಾವಕೋಶದ ಜತೆಗೆ ಆಧ್ಯಾತ್ಮಿಕ ಅನುಭೂತಿಯ ಚೈತನ್ಯ ಶೀಲತೆಯನ್ನು ಮೇಳೈಸಿಕೊಂಡ ನಡೆ ಇಲ್ಲಿಯ ಚಿಂತನಾ ಜಗತ್ತಿನದು.

ಮಳೆ ಈ ಕವಿಯನ್ನು ಮತ್ತೆ ಮತ್ತೆ ಕಾಡಿರುವ ಅನುಭವ. ಕುವೆಂಪು ಅವರಲ್ಲಿ ಮಳೆ ಸಮೃದ್ಧ ಅನುಭವವಾಗಿ ವೈವಿಧ್ಯಮಯ ವರ್ಣನೆಯ ವೈಭೋಗವಾಗಿ ಗದ್ಯಪದ್ಯಗಳಲ್ಲಿ ಮೈತುಂಬಿ ಮೊರೆದಿದೆ. ಆದರೆ ಜಿಎಸ್‌ಎಸ್ ಅವರಲ್ಲಿ ಅದೊಂದು ನಿರೀಕ್ಷೆಯ ಮೊರೆಯಾಗಿ ಪ್ರಾರ್ಥಿತವಾಗಿರುವುದೇ ಹೆಚ್ಚು. ನಿಸರ್ಗದ ಫಲಿತ ಗುಣಕ್ಕೆ ಅಗತ್ಯದ ಗತಿಶೀಲ ಧರ್ಮವಾಗಿರುವ ಈ ಮಳೆ ನೇರ ಅನುಭವವಾದಂತೆ ಇವರ ಹಲವು ಕವಿತೆಗಳಿಗೆ ವಸ್ತುವಾಗಿದೆ. ಆದರೆ ಎಲ್ಲ ಸಂದರ್ಭಗಳಲ್ಲೂ ಕೇವಲ ಕಣ್ಣಿಗೆ ಕಾಣುವ ಚಿತ್ರವಾಗಿ ಅದು ವರ್ಣನೆಯಾಗುವುದಿಲ್ಲ. ಇಡೀ ಇಳೆಯ ಸಂಬಂಧದಲ್ಲಿ ಬದುಕನ್ನು ಫಲಿಸುವ ಜೀವಶಕ್ತಿಯಾಗಿ ಪರಿಭಾವನೆಗೆ ಒಳಗಾಗುತ್ತಾ ಅನುಭೂತಿಯ ನೆಲೆಯಲ್ಲಿ ಚೈತನ್ಯದಾಯಿಯಾಗುತ್ತದೆ.

ಮಳೆಯನ್ನು ವ್ಯಕ್ತೀಕರಣಗೊಳಿಸಿ ಪ್ರಾರ್ಥಿಸುವ ಈ ಕವಿಯ ಮೊರೆ ಇಡೀ ಭೂಮಿಯ ಎದೆಯಾಳದ ದನಿಯಾಗುತ್ತದೆ :

ಗುಡುಗಿನ ಮೃದಂಗ; ಮಿಂಚಿನ ಆರತಿ
ಎಲ್ಲವು ಈ ನೆಲದೊಳಿತಕೆ,

ಮಳೆ ಬೀಳುವ ಕ್ರಿಯೆಯನ್ನು ಸಂಗೀತದಂತೆ ಪರಿಭಾವಿಸುವ ಈ ಅನುಭೂತಿ ಅನನ್ಯವಾದುದು. ಋತುಮಾನದ ಸಹಜಕ್ರಿಯೆಯಾದ ಮಳೆ ಕೂಡ ಕವಿಗೆ ಒಂದು ರಿಚುಯಲ್ ಆಗಿ ಅನುಭವಕ್ಕೆ ಬಂದಿದೆ. ಈ ರಿಚುಯಲ್ ಭೂಮಿ ಬದುಕಿನ ಶುಭಕಾಂಕ್ಷೆಯ ಮಂಗಳಾಚರಣೆ. ಇಂಥ ಆಚರಣೆಯಲ್ಲಿ ಪಾಲ್ಗೊಂಡ ಮನಸ್ಸುಗಳು ಮಕ್ಕಳ ಮುಗ್ಧತೆಯಲ್ಲಿ ಸಂಭ್ರಮಿಸುತ್ತವೆ. ಸುರಿದ ಮಳೆಯ ಅನುಭವದಲ್ಲಿ ತೊಯ್ದ ಭಾವದ ಅನುಭೂತಿಯಾದಾರೂ ಎಂಥದ್ದು—ಒಲವಿಗೆ ಒಲವಲ್ಲದೆ ಬೇರೇನಿದೆ ಕೊಡುಗೆ?

ಇವರ ಇನ್ನು ಕೆಲವು ಕವಿತೆಗಳಲ್ಲಿ ಮಳೆ ಬೇರೆ ಅನುಭವಗಳ ವಿಸ್ತರಣೆಗೆ ಒದಗಿ ಬಂದ ಪ್ರತಿಮಾಕೃತಿಯಾಗಿದೆ.

ನೀನು ಮುಗಿಲು ನಾನು ನೆಲ
ನಿನ್ನ ಒಲವೆ ನನ್ನ ಬಲ
ನಮ್ಮಿಬ್ಬರ ಮಿಲನದಿಂದ
ಉಲ್ಲಾಸವೆ ಶ್ಯಾಮಲ

.........................

ನಾನಚಲದ ತುಟಿಯೆತ್ತುವೆ
ನೀ ಮಳೆಯೊಲು ಮುತ್ತನಿಡುವೆ
ನಿನ್ನಿಂದಲೆ ತೆರವುದೆನ್ನ
ಚೈತನ್ಯದ ಕಣ್ಣವೆ.

ಸೂರ್ಯಚಂದ್ರ ಚಕ್ಕೆಗಣ್ಣ
ತೆರೆದು ನೀನು ಸುರಿವ ಬಣ್ಣ
ಹಸುರಾಯಿತು ಹೂವಾಯಿತು
ಚೆಲುವಾಯಿತು ಈ ನೆಲ
ನಮ್ಮಿಬ್ಬರ ಮಿಲನದಿಂದ
ಸುಫಲವಾಯ್ತು ಜೀವನ

ಹೀಗೆ ಮಳೆ ಮನುಷ್ಯನ ಜೀವನ ಸಾಫಲ್ಯದ ನೆಲೆಗೆ ಒದಗಿ ಬರುವುದು ಪ್ರಕೃತಿಯ ಪರಮ ಗಂತವ್ಯ ಕಾರಣದಿಂದ. ಅಂದರೆ ಪ್ರಕೃತಿ ಸಿಂಧು. ಅದರೊಳಗೆ ಮನುಷ್ಯನ ಬದುಕೊಂದು ಬಿಂದು. ಈ ಬಿಂದುವಿಗೆ ಅರ್ಥಬರುವುದು ಆ ಸಿಂಧುವಿನ ಆವರಣದಲ್ಲಿಯೇ ಹೊರತು ಅದರ ನಿರಾಕರಣೆಯಲ್ಲಿ ಅಲ್ಲ. ಹೀಗಾಗಿ ಮತ್ತೆ ಮತ್ತೆ ಮಳೆಗಾಗಿ ಹಂಬಲಿಸುವ ಪ್ರಾರ್ಥಿಸುವ ಕವಿಯ ಮೊರೆ ಮಳೆ ಎಂಬ ಅರ್ಥಸಂಕೋಚದಲ್ಲಿ ನಿಲ್ಲುವುದಿಲ್ಲ; ನೆಲದ ಮೇಲಿನ ಜೀವ ಜಾಳದ ಜೊತೆಗೆ ವ್ಯೋಮದಂಗಳದ ಅನೂಹ್ಯ ಚಕ್ರಗತಿಯ ಸಂಬಂಧದ ಕಡೆಗೆ ಕಾಳಜಿ ಪೂರ್ಣವಾಗಿ ಹರಿದ ಅನುಭಾವಿಕ ವಿಸ್ತರಣೆಯಾಗಿದೆ:

ಮೇಲೆ ಬೆಳಕಿನ ಬೆರಳು
ದಾರಿ ತೋರುತಲಿರಲು
ಯಾತ್ರೆ ಸಾರ್ಥಕವಹುದು ಶ್ರದ್ಧೆಯಿರಲು

ಬೇಯಿಸಿದವರು ಮಳೆ ಹೊಯ್ಯುತ ಹಸುರನು
ಕೊನರಿಪ ಕರುಣೆಗೆ ನಮೋ ನಮೋ.

ಬದುಕಿನ ಬಗ್ಗೆ ಈ ಕವಿಯ ನಿಲುವು ನೇರವಾದುದು; ಆರೋಗ್ಯಕರವಾದುದು. ಮರಕುಟಿಕ ಹಕ್ಕಿಯ ರೂಪಕದಲ್ಲಿ ಅದು ಅರಳಿದ ಪರಿಮಳವಾಗಿದೆ. ಮರದ ಪ್ರತಿಮೆಯಲ್ಲಿ ಬಾಳಿನ ಸಂಸ್ಕೃತಿ—ಬೇರು ಕಾಂಡ ಚಿಗುರು ಹೂವು ಹಣ್ಣುಗಳ—ಪೂರ್ಣತೆಯಲ್ಲಿ ಪರಿಭಾವನೆಗೆ ಒಳಗಾಗಿದೆ. ಇಂಥ ಜೀವ ವೃಕ್ಷವನ್ನು ಆಶ್ರಯಿಸುವ ಮನುಷ್ಯ ಮರಕುಟಕನಾಗ ಬಾರದು, ಪೂರ್ಣತೆಯ ಫಲವನ್ನು ಸವಿದ ರಸಿಕನಾಗಬೇಕು!

ಮರದ ಕೊಂಬೆಯನಿಂತು ಕೊಕ್ಕನಿಂಕುಕ್ಕುತಲಿ
ಗುರಿಯನಾವುದನಿಂತು ಹುಡುಕುತಿರುವೆ?
ಅಲ್ಲಿಯೇ ಪಕ್ಕದಲಿ ತನಿವಣ್ಣು ತೂಗುತಿರೆ
ಮರದ ಕೊಂಬೆಯನೇಕೆ ಕುಕ್ಕುತಿರುವೆ!

ನೀನು ಹುಡುಕುವ ತತ್ವ ನಿನ್ನಲ್ಲೇ ಹುದುಗಿಹುದು
ನಿನ್ನೆದೆಯ ನೊಂದಿನಿತು ಕುಕ್ಕಿ ನೋಡು
ಮರವ ಕುಕ್ಕುವ ಬದಲು ಅಲ್ಲಿ ತೂಗುತಲಿರುವ
ತನಿವಣ್ಣನೊಂದಿನಿತು ತಿಂದು ನೋಡು

ಮನುಷ್ಯ ಕೇಂದ್ರಿತ ದೃಷ್ಟಿಯಲ್ಲಿ ಇಡೀ ನಿಸರ್ಗದ ಜೀವ ಜಗತ್ತನ್ನು ನಾಶಗೈಯ್ಯುತ್ತಿರುವ ವಿಜ್ಞಾನಯುಗದ ಇಂದಿನ ಮನುಷ್ಯನ ವಿದ್ಯಮಾನಗಳ ನೆಲೆಯಲ್ಲಿ ಈ ಪದ್ಯದ ಚಿಂತನೆ ಜೀವಕೇಂದ್ರಿತ ನೆಲೆಯಲ್ಲಿ ನಿಸರ್ಗವನ್ನು ಪರಿಭಾವಿಸಿದ ಪ್ರತಿಮಾ ದ್ರವ್ಯವಾಗಿದೆ. ಆತ್ಮ ನಿರೀಕ್ಷೆಯ ಮುಖೇನ ವ್ಯಕ್ತಿತ್ವದ ಶೋಧ ಆಗದ ಯಾವುದೇ ಅರಿವು, ಭೌತಿಕ ಪ್ರಯೋಜನಕಾಂಕ್ಷೆಯ ವಿಷಯಜ್ಞಾನವಾಗಬಹುದೇ ಹೊರತು ಸಂಸ್ಕೃತಿಯನ್ನು ಬೆಳಗಿಸುವ ಸತ್ವವಾಗುವುದಿಲ್ಲ. ಆ ಸತ್ವನಿರೀಕ್ಷೆ ಇವರ ಕಾವ್ಯದ ಬಹುಮುಖ್ಯ ಆಶಯ. ಬಾಳನ್ನು ಮುನ್ನಡೆಸುವ ಅಗೋಚರ ಶಕ್ತಿಯ ಬಗ್ಗೆ ಈ ಕವಿಗೆ ಇನ್ನಿಲ್ಲದ ನಂಬಿಕೆ ಇದೆ. ಈ ನಂಬಿಕೆ ಕುರುಡು ಮೌಢ್ಯದ ನಂಬಿಕೆಯಲ್ಲ; ವಿಜ್ಞಾನ ಶೋಧದಾಚೆಗೂ ಮನುಷ್ಯ ಬುದ್ಧಿಗೆ ನಿಲುಕದಿರುವ ನೆಲೆಯ ನಿಗೂಢವನ್ನು ಕುರಿತಂತೆ ಇರುವ ಎಚ್ಚರದ ನಂಬಿಕೆ. ಇದು ಜಡರೂಪಿಯದಲ್ಲ, ಜಂಗಮಶೀಲವಾದದ್ದು. ಕಾರಣ ಈ ನಂಬಿಕೆಗೆ ಪೂರಕವಾಗಿ ಇವರಲ್ಲಿರುವ ಮತ್ತೊಂದು ಬಹುದೊಡ್ಡ ವಿಶ್ವಾಸವೆಂದರೆ ಮನುಷ್ಯನ ಬುದ್ಧಿಭಾವಗಳ ವಿದ್ಯುದಾಲಿಂಗನ ರೂಪಿಯಾದ ಪ್ರತಿಭಾಶಕ್ತಿಯ ಮೇಲೆ. ಇದು ಸಂಸ್ಕೃತಿಯನ್ನು ಬೆಳೆಸುವ ಮೂಲದ್ರವ್ಯ. ವಿಜ್ಞಾನ, ಕಲೆ, ಅಧ್ಯಾತ್ಮ—ಹೀಗೆ ಹಲವು ಟೊಂಗೆಗಳಲ್ಲಿ ವಿಕಾಸಗತಿಯಲ್ಲಿರುವ ಜೀವವೃಕ್ಷ. ಇಂಥ ಈ ಜೀವವೃಕ್ಷ ವಿಸ್ಮೃತಿ-ಸಂಸ್ಕೃತಿಗಳ ನಿರಂತರ ಸಂಘರ್ಷದಲ್ಲಿ ಶೋಧಕ್ಕೆ ಒಳಗಾಗುತ್ತ ವರ್ತಮಾನದಲ್ಲಿ ಅನಾವರಣವಾಗುವುದು.

**ಚರಿತ್ರೆ ಅಂದರೆ ನಡೆದುದಷ್ಟೇ ಅಲ್ಲ, ನಡೆಯುತ್ತಿರುವುದು**
**ಕೂಡ. ಎಲ್ಲ ಪಾಠಗಳು ಮರೆತು**
**ಮತ್ತೆ ಚಿತ್ತ ವಿಕಾರ. ಈ ಮಾನವತೆಯ ಹೃದ**
**ಯದ ಮೇಲೆ ಎಷ್ಟೊಂದು ಗಾಯಗಳ ಗುರುತು!**

ಸಂಸ್ಕೃತಿಯ ಗತಿಶೀಲ ಸಂದರ್ಭದಲ್ಲಿ ವಿಸ್ಮೃತಿಯಿಂದಾಗುವ ಪರಿಣಾಮವನ್ನು ಕವಿಪ್ರಜ್ಞೆ ಪರಿಭಾವಿಸಿರುವ ಕ್ರಮ ಇದು. ಆದರೆ ಇದು ನಿರಾಶಾಮುಖಿಯಾದ ಸ್ಥಾಯಿ ಅಲ್ಲ. ಚರಿತ್ರೆಯ ಜತೆಗೆ ಯಾವತ್ತಿನಿಂದಲೋ ಹೆಜ್ಜೆ ಇಕ್ಕುತ್ತ ಬಂದ ಕವಿಪ್ರಜ್ಞೆಯು ಸಂದರ್ಭ ಸ್ಥಿತಿಗಳನ್ನು ಪರಿಭಾವಿಸಿದ ಪರಿ. ಚರಿತ್ರೆಯನ್ನು, ಚರಿತ್ರೆಯ ಪಾಠವನ್ನು ವಿಸ್ಮೃತಿಗೆ ಒಳಗು ಮಾಡಿಕೊಂಡು ಜಗತ್ತಿನ ವಿದ್ಯಮಾನ ಬೆಳಗುತ್ತದೆ. ಕಾರಣ ವಿಸ್ಮೃತಿ ಎಷ್ಟು ಗಾಢವಾದದ್ದೋ ಅದಕ್ಕಿಂತ ಗಾಢವಾದದ್ದು ಮನುಷ್ಯನ ಪ್ರತಿಭಾ ಸತ್ವ.

**..... ಯಾವ ನಿಜವಾದ**
**ಸತ್ವವೂ ಬತ್ತಿಹೋಗುವುದಿಲ್ಲ ಇದ್ದ-**
**ಕ್ಕಿದ್ದಂತೆಯೇ. ಸುಪ್ತವಾಗಿರುವುದದು, ಈ**
**ಬೆಳೆವ ಮಕ್ಕಳ ಒಳಗೆ, ಮರವು ಮಲಗಿದ**

> **ಹಾಗೆ ಬೀಜದೊಳಗೆ ಬೆಟ್ಟದೆತ್ತರ ಬೆಳೆದು ಸ್ಪ**
> **ರ್ಧಿಸುವ ಈ ಒಂದೊಂದು ವೃಕ್ಷವೂ, ನಾನು**
> **ಕಂಡಂತೆ ಹಿಂದೊಮ್ಮೆ ಪುಟ್ಟ ಸಸಿ. ಎತ್ತರದ**
> **ಮರಗಳಡಿ ಮತ್ತೆ ತಲೆಯೆತ್ತುತ್ತಿವೆ ನೂರು**
> **ಉತ್ಸಾಹಗಳು ನೀಲಿಯಾಕಾಶಕ್ಕೆ ಕಣ್ಣ**
> **ತೆರೆದು ಒಳ್ಳಿತನು ಕುರಿತು ಮೊದಲು ನಂಬಿಕೆ**
> **ಬೇಕು, ಕೆಟ್ಟದೆಷ್ಟಿದ್ದರೂ. ಈ ಜಗವನಾ-**
> **ಳುತ್ತಿರುವುದಾವುದೋ ಹಿರಿಯ ಸೋಜಿಗವೆ**
>
> **ದಿಟ. ವಿಶ್ವಾಸವಿರಬೇಕು ನಮಗದರ ವಿನ್ಯಾ**
> **ಸದಲ್ಲಿ.**

ಇದು ಜಿಎಸ್ಎಸ್ ಅವರ ಬದುಕು ಬರಹಗಳ ಜೀವದ್ರವ್ಯ. ಕವಿಯಾಗಿ ಗುರುವಾಗಿ ಸಹೃದಯರಿಗೆ ವಿದ್ಯಾರ್ಥಿಗಳಿಗೆ ಅವರು ನೀಡಿದ ಬೆಳಕಿನ ಪಾಠ.



# ಮುಂಬೈ ಜಾತಕ: ಒಂದು ವಿಶ್ಲೇಷಣೆ

ಡಾ|| ಚಂದ್ರಶೇಖರ ಕಂಬಾರ

ಶಿವರುದ್ರಪ್ಪನವರು ಅಡಿಗರ ನಂತರದ ತಲೆಮಾರಿನವರಲ್ಲಿ ತಮ್ಮ ವಿಶಿಷ್ಟ ಧ್ವನಿಯಿಂದ, ಅತಿರೇಕವಲ್ಲದ ವೈವಿಧ್ಯಮಯವಾದ ಕಾಳಜಿಗಳಿಂದ, ತುಂಬ ಮಹತ್ವದ ಕವಿಯಾಗಿದ್ದಾರೆ. ಕನ್ನಡದಲ್ಲಿ ಬರುತ್ತಿರುವ ನವ್ಯಕಾವ್ಯದ ಓಘದಲ್ಲಿ ಒಂದು ಕಾಲಕ್ಕೆ ಅವರ ಹೆಸರು ವಿಮರ್ಶಕರಿಂದ ಮರೆತುಹೋಗಿರುವ ಉದಾಹರಣೆಗಳುಂಟಾದರೂ ತಮ್ಮ ಕಾಳಜಿಗಳನ್ನು ಭ್ರಷ್ಟಗೊಳಿಸದಿದ್ದುದೇ ಅವರ ಜಿಗುಟುತನಕ್ಕೆ ಸಾಕ್ಷಿಯಾಗಿದೆ. ಅವರ ಪ್ರಾರಂಭದ ಕವಿತೆಗಳನ್ನು ಓದಿದರೆ ತಮ್ಮನ್ನು ಒಂದು ವಿಶಿಷ್ಟ ಕಾವ್ಯ ಸಂದರ್ಭದಿಂದ ಬೇರ್ಪಡಿಸಿಕೊಳ್ಳುತ್ತಿದ್ದಾರೆಂದೂ, ಅಸಹಾಯಕರಾಗಿ ಆಧುನಿಕವಲ್ಲದ ಮೌಲ್ಯಗಳೊಂದಿಗೆ ಹೊಂದಾಣಿಕೆ ನಡೆಸುತ್ತಿದ್ದಾರೆಂದೂ ಒಮ್ಮೊಮ್ಮೆ ಅನ್ನಿಸುತ್ತಿತ್ತು. ಇಂಥ ಅನ್ನಿಸಿಕೆಗಳಿಗೆ ಅವಕಾಶವಾದುದು ಅವರು ಕುವೆಂಪು, ಬೇಂದ್ರೆ ಮತ್ತು ಅಡಿಗರ ಮಧ್ಯದ 'ಸೇತುವೆ-ಕಾವ್ಯ' ರಚಿಸುತ್ತಿದ್ದಾರೆ ಎಂಬಂಥ ಹೇಳಿಕೆಗಳಿಂದ. ಅಲ್ಲದೆ ಅಡಿಗರ ಕಾವ್ಯ ಹುಟ್ಟಿಸಿದ ನಿರೀಕ್ಷೆಗಳು ಪ್ರತಿಯೊಬ್ಬ ಕವಿಯನ್ನಳೆಯುವ ಪ್ರಮಾಣಗಳಾಗಿ ಸ್ವೀಕೃತವಾದುದರಿಂದ, ಅದಕ್ಕೆ ಹೊಂದದವರನ್ನು ಬೇಂದ್ರೆ, ಕುವೆಂಪುಗಳ ಕಾವ್ಯ ಸಂದರ್ಭಕ್ಕೆ ಅಥವಾ ಅದರ ತುದಿಗೆ ಒಪ್ಪಿಸಿ ಕೈತೊಳೆದುಕೊಳ್ಳುವುದು ವಿಮರ್ಶಕರಿಗೆ ಹಾಯೆನಿಸಿತ್ತು. ಬೇಂದ್ರೆ, ಕುವೆಂಪು ಹಾಗೂ ಶಿವರುದ್ರಪ್ಪನವರ ಕಾವ್ಯಮನೋಧರ್ಮ ಬಹಳ ಭಿನ್ನವಾದುದು. ಹಾಗೆ ನೋಡಿದರೆ ಒಂದೇ ಸಂದರ್ಭದ ಕುವೆಂಪು, ಬೇಂದ್ರೆಗಳ ಕಾವ್ಯಮನೋಧರ್ಮಗಳು ಪರಸ್ಪರ ಭಿನ್ನವಾದವುಗಳೂ ಹೌದು. ಆದರೆ ಅವರಿಬ್ಬರು ಕೆಲವು ಮೌಲ್ಯಗಳನ್ನೊಪ್ಪಿರುವಲ್ಲಿ ಸಮಾನರಾಗಿದ್ದಾರೆ. ಅಡಿಗರ, ಅವರ ನಂತರದ ಶಿವರುದ್ರಪ್ಪನವರು ಬೇರ್ಪಡುವುದೇ ಇಲ್ಲಿ.

ಅವರ ಹಿಂದಿನ ರೋಮಾಂಟಿಕ್ ಕವಿಗಳು ಬದುಕನ್ನು ಅದರ ವೈಭವಪೂರ್ಣ ಅರ್ಥದಲ್ಲಿ ಒಪ್ಪಿಕೊಂಡರು. ಧಾರ್ಮಿಕ ವಿಧಿಯನ್ನಾಚರಿಸುವ ಪೂಜಾರಿಯಂತೆ ಅದರಲ್ಲಿ ತನ್ಮಯರಾದರು. ಈ ತನ್ಮಯತೆಯಲ್ಲಿ ಶಬ್ದ ಮಂತ್ರವಾಗಿ ಆ ವಿಧಿಯನ್ನು ವಿವರಿಸಲಿಕ್ಕಾಗಿರುವ ವಿವರಣೆ ಅಥವಾ ಪುರಾಣ(Myth)ವಾಗಿ ಕಾರ್ಯ ಮಾಡುತ್ತದೆ. ವಿಧಿಕ್ರಿಯೆಯ ತನ್ಮತ್ರೆಯಿಂದ ದೂರವಾದಾಗ ಪೂಜಾರಿ ನಟನಾಗುತ್ತಾನೆ. ಶಬ್ದ ತನ್ನ ಮಂತ್ರಶಕ್ತಿಯನ್ನು

ಕಳೆದುಕೊಂಡು ಕಲೆಯಾಗುತ್ತದೆ. ಅಡಿಗರಲ್ಲಿ ಬರುವ ಯಕ್ಷಗಾನ ಕರ್ಣನ ಭಾಷಣ-ವೈಖರಿಯನ್ನು ಉದಾಹರಣೆಗಾಗಿ ನೋಡಬಹುದು. ಶಿವರುದ್ರಪ್ಪನವರಿಗೆ ತಾವು ತನ್ಮಯದ ಸಂದರ್ಭದವರಲ್ಲವೆಂಬ ಪ್ರಜ್ಞೆಯೊಂದಿಗೆ ನಟನ ದುರಂತದ ಅರಿವೂ ಇದೆ, ನಿಜ. ಆದರೆ ಈ ಅರ್ಥದಲ್ಲಿ ಅವರದ್ದು ಸೇತುವೆ ಕಾವ್ಯ ಎನ್ನುವುದೂ ತಪ್ಪೆ. ಯಾಕೆಂದರೆ ಅವರ ಕಾವ್ಯ ಮನೋಧರ್ಮ ಯಾವ ದೃಷ್ಟಿಯಲ್ಲಿಯೂ ರೋಮಾಂಟಿಕ್ ಮತ್ತು ನವ್ಯಕಾವ್ಯಗಳ ಕೊಂಡಿಯಾಗುವುದಿಲ್ಲ. ಅಡಿಗರಿಗೆ ಗಟ್ಟಿ ಮುಟ್ಟಾದ ಆರ್ಷೇಯ ನೆಲಗಟ್ಟಿನಿಂದ ತಾನು ಬೇರ್ಪಟ್ಟವನೆಂಬ ಪ್ರಜ್ಞೆಯಿದ್ದಂತೆ ಇವರಲ್ಲಿಯೂ ಇದೆ. ಬದುಕಿನ ದುರಂತ ವಿಕಾರವನ್ನು ಅದರೊಂದಿಗಿನ ಸೋಲಿನ ನೋವನ್ನು ಇವರು ಒಪ್ಪಿಕೊಂಡವರು. ಇವರ ಕಾವ್ಯದ ನಾಯಕ ಸಮಾಜದ ಟೀಕಾಕಾರನಾಗಿ ಸಂಭಾಷಿಸಬಲ್ಲಂತೆ ವಿದೂಷಕನಾಗಿಯೂ ನಗಬಲ್ಲವನಾಗಿದ್ದಾನೆ. ಟೀಕಾಕಾರನಾಗಿ ಸಂಭಾಷಿಸಿದ್ದು ನಿರರ್ಥಕ, ನಿಷ್ಪ್ರಯೋಜಕವೆಂಬ ತಿಳುವಳಿಕೆ ಮೂಡಿ ತನ್ನ ಶಬ್ದಶಕ್ತಿಯ ಮಿತಿಯನ್ನು ಕಂಡುಕೊಳ್ಳುತ್ತಾನೆ. ಇದರ ಪರಿಣಾಮವಾಗಿ ವಿದೂಷಕನಾಗುತ್ತಾನೆ. ವಿದೂಷಕ ನಟನೆಯ ಲಘುತ್ವದ ಅರಿವಾಗಿ ಮತ್ತೆ ನಾಯಕನ ಫೋಜು ಕೊಡಲು ಶುರುಮಾಡುತ್ತಾನೆ. ಈ ಮಧ್ಯದ ಲಾಳಿಎಸೆತ, ಸಂದಿಗ್ಧ ಭಯಂಕರ ಸ್ಥಿತಿ ಈ ಕಾವ್ಯನಾಯಕನ ದಾರಿ. ನಟನೆಯ ಈ ವಿಶೇಷ ಅರಿವೇ ಅವರನ್ನು ಅಡಿಗರಿಂದ ಬೇರ್ಪಡಿಸುತ್ತದೆ. ಅಂದರೆ ಅಡಿಗರಿಗಿರುವ ಕೆಲವು ಆರ್ಷೇಯ ಮೌಲ್ಯಗಳು ಅವರ ಕಾವ್ಯನಾಯಕನಲ್ಲಿ ಕೆಲವು (positive) ಧೋರಣೆಗಳನ್ನು ರೂಪಿಸುತ್ತವೆ. ಇಲ್ಲಿ ಹಾಗೆ ಆಗದಿರುವುದೇ ಈ ಕಾವ್ಯನಾಯಕನ ವೈಶಿಷ್ಟ್ಯ ಮತ್ತು ಆದ್ದರಿಂದಲೇ ಇದು ಮಹತ್ವದ್ದು.

ಉದಾಹರಣೆಗೆ "ಮುಂಬೈ ಜಾತಕ" ಎಂಬ ಕವಿತೆಯನ್ನು ನೋಡಬಹುದು. ಈ ಕವಿತೆ ಅವರು ರೋಮಾಂಟಿಕ್ ಕವಿಗಳಿಂದ ಎಷ್ಟು ದೂರ ನಿಂತಿದ್ದಾರೆಂಬುದನ್ನು ಸೂಚಿಸುವುದರ ಜೊತೆಗೆ ಅಡಿಗರಿಂದ ಹೇಗೆ ಭಿನ್ನವಾಗಿದ್ದಾರೆಂಬುದನ್ನು ಖಾತ್ರಿಯಾಗಿಸುತ್ತದೆ. ಈ ಕವಿತೆ ಆಧುನಿಕ ಮಾನವನ ನಿರರ್ಥಕ ಜೀವನವನ್ನು ಸಾರ್ಥಕವಾಗಿ ಪ್ರತಿಮಿಸುತ್ತದೆ. ಇಲ್ಲಿ ನೋಡಬೇಕಾದ್ದು ಕವಿತೆ ಎಷ್ಟು ಮಟ್ಟಗಳಲ್ಲಿ ದುಡಿಯುತ್ತದೆ ಎಂಬುದು. ಒಂದೆರಡು ಸರ್ವನಾಮಗಳನ್ನು ನಿಷ್ಕ್ರೀಯಗೊಳಿಸಿದರೆ ಇದೊಂದು ಮೆಶಿನ್ ಕುರಿತು ಬರೆದ ಪದ್ಯ ಎನ್ನಿಸಬಹುದಾದಷ್ಟು ಈ ಕವಿತೆಯ ಸಾಮಗ್ರಿ ನಿರ್ಜೀವತೆಯಿಂದ ಕೂಡಿಕೊಂಡಿದೆ. ನೇರವಾಗಿ ವಸ್ತುವಿನ ವ್ಯಕ್ತಿತ್ವಕ್ಕೆ ಸಂಬಂಧಪಟ್ಟ ಕೊನೆಯ ಭಾಗದಲ್ಲಿ ಬಂದಿರುವ ಕ್ರಿಯಾಪದಗಳೆಲ್ಲ ಮುಂದುವರಿಯುವುದು, ಏಳುವುದು, ಬಿಡುವುದು, ಹಿಡಿಯುವುದು ಇತ್ಯಾದಿಗಳಲ್ಲಿನ ಸಂದಿಗ್ಧತೆ (ambiguity). ಮುಂಬೈ ನಪುಂಸಕಲಿಂಗವಾದ್ದರಿಂದ ವಾಚ್ಯಾರ್ಥದಲ್ಲಿ ಅದಕ್ಕೆ ಸರಿಹೊಂದಿರುವುದರ ಜೊತೆಗೆ ಮಾನವ ಜೀವನದ ನಿಷ್ಕ್ರಿಯತೆಯನ್ನು ಅಥವಾ ಕ್ರಿಯೆಯ ಯಾಂತ್ರಿಕತೆಯನ್ನು ಸೂಚಿಸುತ್ತದೆ. ಇದರ ತಯಾರಿ ಪದ್ಯದ ಪ್ರಾರಂಭದಿಂದಲೇ ಶುರುವಾಗಿದೆ. ಈ ಕಾವ್ಯದ ನಾಯಕ (ಸದ್ಯಕ್ಕೆ ಇವನು ಎಂದಿಟ್ಟುಕೊಳ್ಳಬಹುದು)

ನಿಸರ್ಗದಿಂದ ಬದುಕಿನ ಗಟ್ಟಿಮುಟ್ಟಾದ ನೆಲೆಯಿಂದ ಮತ್ತು ಅದರ ತಾಜಾತನದಿಂದ ದೂರವಾಗಿದ್ದವನು.

**ಹುಟ್ಟಿದ್ದು: ಆಸ್ಪತ್ರೆಯಲ್ಲಿ**
**ಬೆಳೆದದ್ದು: ಬಸ್ಸು, ಕಾರು, ಎಲೆಕ್ಟ್ರಿಕ್ ಟ್ರೇನುಗಳಲ್ಲಿ**

ಎಂಬ ಸಾಲು ಗಮನಿಸಬೇಕು. ಕುಡಿದದ್ದು ಎಂಬ ಭಾಗದಲ್ಲಿ ಬರುವ 'ಕಾಣದೆಮ್ಮೆಯ ಕೆಚ್ಚಲು ಕರೆದು ಕಳುಹಿಸಿದ ಬಾಟ್ಲಿಯ ಹಾಲು' ಎಂಬಲ್ಲಿನ ಕಟ್ಟು ಕಥೆಯ ಧಾಟಿ ಆ ನಿಸರ್ಗ ಸಂಬಂಧದ ಕೃತಕತೆಯನ್ನು ಸೂಚಿಸುತ್ತದೆ. ಈತ ಕಲಿತದ್ದು 'ಸಂಚರಿಸು, ಓಡು, ಅವರಿವರ ತಳ್ಳಿ ಮುನ್ನುಗ್ಗು, ಇವೆಲ್ಲ ಕ್ಯೂ, ಫುಟ್‌ಪಾತ್‌ಗಳ ಮೇಲೆ ಓಡು' ಎಂಬ ಕ್ರಿಯಾಪದದ ಬೇರೆ ಬೇರೆ ಶಬ್ದಗಳಲ್ಲಿ ಪದ್ಯದ ಕೊನೆಯ ತನಕ ಹೇಗೆ ಮೇಲಿಂದ ಮೇಲೆ ಅವತರಿಸುತ್ತದೆ ನೋಡಬೇಕು. 'ಕಲಿತದ್ದು' ಮತ್ತು 'ತಾಯಿ' ಭಾಗದಲ್ಲಿ ಬೇರಿರದವನು, ಸಂಬಂಧಗಳ ಸಜೀವತೆಗೆ ಎರವಾದವನು ಆಗಿರುವುದರ ಜೊತೆಗೆ ಸಾವಿನ ಬಗ್ಗೆ ಎರಡು ಸಲ ಎಚ್ಚರಿಕೆ ಕಲಿತವನು ಎಂಬುದರಿಂದ ಆತನ ಅನಾಥ ಪ್ರಜ್ಞೆ ಅವನಿಗೆ ಅರಿವಿಲ್ಲದೆ ಬೆಳೆಯುತ್ತಿರುವುದನ್ನು ಸೂಚಿಸುತ್ತದೆ. ಅವನಿಗೆ ಸಿಕ್ಕ ವಿದ್ಯೆ ಕೂಡ ಅವನು ಬದುಕಿನಿಂದ ವಂಚಿತನಾದ ಸಂಗತಿಯನ್ನು ಖಚಿತವಾಗಿಸುತ್ತದೆ. ಅವನೇ ಖುದ್ದಾಗಿ ಕಲಿತದ್ದು 'ಬಸ್‌ಸ್ಟಾಪಿನಲ್ಲಿ ನಿಂತ ಬಣ್ಣಗಳ ಕಡೆಗೆ ಕಣ್ಣಾಡಿಸುವುದೊಂದೆ ಹೊರತು' ಎಂಬಂಥ ಕೇವಲ absurd gesture ಮಾತ್ರ.

ಕೊನೆಯ ಭಾಗವಾದ ಜೀವನ: ಈ ಎಲ್ಲ ಸಂಕೀರ್ಣ ಸಾಮಗ್ರಿ ಗಟ್ಟಿಗೊಂಡು ಹಿಂದಿನ ಭಾಗಗಳನ್ನು ಸ್ಮರಿಸುತ್ತ ಮುಂದುವರಿಯುತ್ತದೆ. ಇನ್ನೊಂದರ ಆಟಿಕೆಯಾಗಿ, ವ್ಯಕ್ತಿತ್ವಹೀನವಾದ ಯಂತ್ರವಾಗಿ ಬಟ್ಟೆಯಲ್ಲಿ ಮೈತುರುಕಿ ಓಡುವುದು. ಇದಕ್ಕೂ, ಅಥವಾ ಅವನಿಗೂ ಆಯಾಸವಿದೆ, ಮಡದಿಯಿದ್ದಾಳೆ ಕೊನೆಗೆ,

**ತಣ್ಣಗೆ ಕೊರೆವ ಕೂಳುಂಡು**
**ಬಾಡಿಗೆ ಮನೆಯ ನೆರಳಿನ ಕೆಳಗೆ ಮತ್ತೆ**
**ಸಾವಿರ ಗಾಲಿಯುಜ್ಜುವ ಕನಸುಬಂಡಿಯ ಕೆಳಗೆ**
**ಹಾಸುಗಂಬಿಯ ಹಾಗೆ ತತ್ತರಿಸುತ್ತ ಮಲಗುವುದು**

ಎಂಬ ಭಯಾನಕ ಚಿತ್ರದೊಂದಿಗೆ ಕವಿತೆ ಕೊನೆಗೊಳ್ಳುತ್ತದೆ. ಇಡೀ ಕವಿತೆಯ ರಚನೆ ಜಾತಕ ಹೇಳುವವನ ಧಾಟಿಯಲ್ಲಿದ್ದು ವಾಚ್ಯವಾದ ಕರ್ಮ, ಕ್ರಿಯಾ ಪದಗಳಿಗೆ ಕರ್ತೃ, ಇಲ್ಲಿ 'ಇವನು' ಆಗಿರದೆ 'ಇದು' (ಮುಂಬೈ) ಎಂಬುದು ಬಹು ಗುಪ್ತವಾಗಿ ಹರಿದು ಬರುತ್ತದೆ. ಇಷ್ಟಾಗಿಯೂ 'ಇದರ' ಮಾನುಷ ಗುಣಗಳನ್ನು ತೋರಿಸುವ ಭಾಗಗಳು ಬಸ್‌ಸ್ಟಾಪಿನಲ್ಲಿ ನಿಂತ ಬಣ್ಣಗಳತ್ತ ಕಣ್ಣಾಡಿಸುವುದು, ಕನಸಿನ ಕೆಳಗೆ ಸಿಕ್ಕು ತತ್ತರಿಸುವುದು, ಕಣ್ಣಾಡಿಸುವುದು ಹಿಂದೆ ಹೇಳಿದಂತೆ ಅರ್ಥಹೀನ gesture ಮಾತ್ರವಾಗಿದ್ದರೆ, ಕನಸಿನಲ್ಲಿ

ಕೂಡ ಕರ್ತೃತ್ವ ಮರೆಯದೆ ಅದರ ಗಾಲಿಯ ಕೆಳಗೆ ಹಾಸುಗಂಬಿಯಾಗಿರುವ ನಿಸ್ಸಹಾಯಕತೆ ಇದೆ. ಇಡೀ ಕವಿತೆ ನಮ್ಮ ನಗರಜೀವನದ ಅನಾಥಪ್ರಜ್ಞೆಯ ಯಾಂತ್ರಿಕ ಅರ್ಥಶೂನ್ಯವನ್ನು ತನ್ನೆಲ್ಲ ಸಂಕೀರ್ಣತೆಗಳ ಮೂಲಕ ಧ್ವನಿಸುತ್ತದೆ. ಗಟ್ಟಿಮುಟ್ಟಾದ ಮೌಲ್ಯಗಳ ಆಧಾರವೂ ಇಲ್ಲದ, ಅಂಥ ಆಸೆಯ ಸಾಧ್ಯತೆಗಳನ್ನು ಉಳಿಸಿಕೊಳ್ಳದ, ಅದರ ಪ್ರಜ್ಞೆಯಿಂದ ನಾಯಕ ನಟಸಾರ್ವಭೌಮನಾಗಿ ಫೋಜುಕೊಟ್ಟು ಉದ್ಧರಿಸಿಕೊಳ್ಳುವ ನಟನೆಯನ್ನು ಹೊಂದದ ಈ ನಾಯಕನ ಸ್ಥಿತಿ ಬೇಂದ್ರೆ, ಪುಟ್ಟಪ್ಪ, ಹಾಗೂ ಅಡಿಗರ ಕಾವ್ಯಗಳಲ್ಲಿನ ನಾಯಕರಿಗಿಂತ ಭಿನ್ನವಾದುದು. ಇಷ್ಟಾಗಿ ಕವಿ ಈ ಜಾತಕ ಹೇಳುವಾಗಿನ ವ್ಯಂಗ್ಯ ತಾಟಸ್ಥ್ಯ ಗಮನಾರ್ಹವಾದುದು. ಅದು ಜಾತಕದಂತ ರಚನೆಯಿಂದ ಸಾಧ್ಯವಾಗಿಬರಬಹುದಾದರೂ ಅದರ ಮೂಲಕ ಇಷ್ಟೊಂದು ಸಂಕೀರ್ಣವಾದ ಅನುಭವವನ್ನು ಧ್ವನಿಸುವಂತೆ ದುಡಿಸಿಕೊಂಡದ್ದು ಈ ಕವಿತೆಯ ಹೆಚ್ಚುಗಾರಿಕೆ. ಮೊದಲಿನ ಭಾಗಗಳಲ್ಲಿ ಬರುವ ಕಂಡದ್ದು: ಎಂಬ ಭಾಗದಲ್ಲಿ 'ಅವಸರದ ಹೆಜ್ಜೆಯ ಮೇಲೆ ಸರಿವ ಸಾವಿರ ಕೊರಳು' ಎಂಬ ಮಾತು ಕವಿತೆಯ ಕೊನೆ ಮುಟ್ಟಿದಾಗ ಬದುಕಿನ ದರ್ಶನವಾಗಿ ಪರಿವರ್ತನೆಗೊಳ್ಳುವುದನು ಗಮನಿಸಬೇಕು.

ಒಂದು ನಿರ್ದಿಷ್ಟ ಪರಿಹಾರದ ಕಟ್ಟುಪಾಡಿಗೆ ಕವಿ ಬದ್ಧನಾಗದಿದ್ದಲ್ಲಿ, ಅವನು ನಿಂತ ನಿಲುವು ಹೇಗೆ ಗೊತ್ತಾದೀತೆಂಬ ವಾದವೂ ಇದೆ. ಒಂದು ಕವಿತೆಯನ್ನು ಓದುವ ಮುನ್ನ ಇದ್ದುದಕ್ಕಿಂತ, ಓದಿಯಾದ ಮೇಲೆ ನನ್ನ ಮನಸ್ಸಿನಲ್ಲಿ ಬದಲಾವಣೆ, ಬೆಳವಣಿಗೆ, ಒಂದು ವಿಶೇಷ ಪ್ರಜ್ಞೆ ಹುಟ್ಟಿಕೊಂಡರೆ ಅದು ಸಾರ್ಥಕವಾದ ಪದ್ಯ. ಅಲ್ಲದೇ ಕವಿತೆ ಇದೇ ರೀತಿ ಇರಬೇಕೆಂಬ inhibition ಇಟ್ಟುಕೊಂಡಷ್ಟೂ ಕ್ರಿಯಾಶೀಲತೆಗೆ ಮಿತಿ ಹೆಚ್ಚು. ಇಂಥ ಕವಿ ತನ್ನ ತಾ ಅನುಕರಿಸುವ ಭಯವೂ ಹೆಚ್ಚು. ಶಿವರುದ್ರಪ್ಪನವರು ಇಂಥ ಮಿತಿಗಳನ್ನು ಹಾಕಿಕೊಳ್ಳದಿದ್ದರಿಂದಲೇ ಅವರ ನಂತರದವರಿಗೆ ಸಾಧ್ಯವಾಗದಿದ್ದ ವೈವಿಧ್ಯಮಯವಾದ ಕಾಳಜಿಗಳಿಗೆ ಪ್ರತಿಕ್ರಿಯೆ ವ್ಯಕ್ತಮಾಡುವ ಜೀವಂತತನ ಅವರಿಗೆ ಸಾಧ್ಯವಾಗಿದೆ. ಈ ಎಲ್ಲ ದೃಷ್ಟಿಗಳಿಂದ ಈ ಕವಿತೆ ಬಹಳ ಸಾರ್ಥಕವಾದ, ಕನ್ನಡದ ಒಂದು ಉತ್ತಮವಾದ ಕವಿತೆ ಎಂದು ಅನ್ನಿಸುತ್ತದೆ.

### ಮುಂಬೈ ಜಾತಕ

ಹುಟ್ಟಿದ್ದು : ಆಸ್ಪತ್ರೆಯಲ್ಲಿ

ಬೆಳೆದದ್ದು : ಬಸ್ಸು ಟ್ರಾಂ ಟ್ಯಾಕ್ಸಿ ಎಲೆಕ್ಟ್ರಿಕ್ ಟ್ರೇನುಗಳಲ್ಲಿ

ಕುಡಿದದ್ದು : ಕಾಣದೆಮ್ಮೆಯ ಕೆಚ್ಚಲು ಕರೆದು ಕಳುಹಿಸಿದ
ಬಾಟ್ಲಿಯ ಹಾಲು, ಗ್ರೈಪ್‌ಸಿರಪ್, ಹಾರ್ಲಿಕ್ಸ್ ಇತ್ಯಾದಿ

ಕಂಡದ್ದು : ಬೆಳಗಿಂದ ಸಂಜೆಯ ತನಕ ಲಕ್ಷ ಚಕ್ರದ ಉರುಳು
ಅವಸರದ ಹೆಜ್ಜೆಯ ಮೇಲೆ ಸರಿವ ಸಾವಿರ ಕೊರಳು

ಕಲಿತದ್ದು : ಕ್ಯೂ ನಿಲ್ಲು; ಫುಟ್‌ಪಾತಿನಲ್ಲೇ ಸಂಚರಿಸು;
ರಸ್ತೆದಾಟುವಾಗೆಚ್ಚರಿಕೆ; ಓಡು, ಎಲ್ಲಿಯೂ
ನಿಲ್ಲದಿರು; ಹೇಗೋ ಅವರಿವರ ತಳ್ಳಿ ಮುನ್ನುಗ್ಗು;
ಎಲ್ಲಾದರೂ ಸರಿಯೆ, ಬೇರೂರು, ಹೀರು.

ತಾಯಿ : ಸಾವಿರ ಗಾಲಿ ಉರುಳಿ ಹೊರಳುವ ರಸ್ತೆಯಂಚಿನಲ್ಲೇ
ಕೈಹಿಡಿದು ನಡೆಸಿದವಳು, ಇರುವ ಒಂದಿಂಚು
ಕೋಣೆಯಲ್ಲೇ ಹೊರಲೋಕವನು ಪರಿಚಯಿಸಿ
ಎಚ್ಚರಿಕೆ ಕೊಟ್ಟವಳು.

ತಂದೆ : ಬೆಳಗಿಂದ ಸಂಜೆಯ ತನಕ ಕಣ್ಮರೆಯಾಗಿ
ಒಮ್ಮೊಮ್ಮೆ ರಜಾ ದಿನದಲ್ಲಿ ಕಣ್ಣಿಗೆ ಕಂಡು
ಕುಳಿತು ಕೆಮ್ಮುವ ಪ್ರಾಣಿ

ವಿದ್ಯೆ : ಶಾಲೆ ಕಾಲೇಜುಗಳು ಕಲಿಸಿದ್ದು; ದಾರಿ ಬದಿ
ನೂರಾರು ಜಾಹಿರಾತುಗಳ ತಲೆಗೆ ತುರುಕಿದ್ದು;
ರೇಡಿಯೋ ಸಿಲೋನ್ ವ್ಯಾಪಾರ ವಿಭಾಗ ಶಿಫಾರಸು ಮಾಡಿದ್ದು
ನೀನಾಗಿ ಕಲಿತದ್ದು ಬಲು ಕಡಿಮೆ, ಬಸ್‌ಸ್ಟಾಪಿನಲ್ಲಿ ನಿನ್ನ
ಬಣ್ಣಗಳ ಕಡೆಗೆ ಕಣ್ಣಾಡಿಸುವುದೊಂದನು ಹೊರತು

ಜೀವನ : ಈ ಲಕ್ಷದಾರಿಗಳ ಚದುರಂಗದಾಟದಲಿ, ನೂರು
ಬೆಳಕಿನ ಕೆಳಗೆ ಯಾರದೋ ಕೈಗೊಂಬೆಯಾಗಿ
ಮುಂದುವರಿಯುವುದು ಏಳುವುದು, ಬಟ್ಟೆಯಲಿ
ಮೈ ತುರುಕಿ ಓಡುವುದು; ರೈಲನ್ನೋ ಬಸ್ಸನ್ನೋ
ಹಿಡಿಯುವುದು, ಸಾಯಂಕಾಲ ಸೋತು ಸುಸ್ತಾಗಿ
ರೆಪ್ಪೆಯ ಮೇಲೆ ಹತ್ತು ಮಣ ಆಯಾಸವನು ಹೊತ್ತು
ಹನ್ನೊಂದು ಘಂಟೆ ಹೊಡೆದಾಗ ಮನೆಯಲ್ಲಿ
ಕೂಡೂ ಕಾಡೂ ತೂಕಡಿಸಿ ಮಂಕಾದ ಮಡದಿಯನು
ಎಚ್ಚರಿಸುವುದು, ತಣ್ಣಗೆ ಕೊರೆವ ಕೂಳುಂಡು
ಬಾಡಿಗೆ ಮನೆಯ ನೆರಳಿನ ಕೆಳಗೆ ಮತ್ತೆ
ಸಾವಿರ ಗಾಲಿಯುಜ್ಜುವ ಕನಸ ಬಂಡಿಯ ಕೆಳಗೆ
ಹಾಸುಗಂಬಿಯ ಹಾಗೆ ತತ್ತರಿಸುತ್ತ ಮಲಗುವುದು.

*(ಮೂಲ: 'ಪ್ರಾಯೋಗಿಕ ವಿಮರ್ಶೆ')*

■

# ಜಿ.ಎಸ್. ಶಿವರುದ್ರಪ್ಪನವರ 'ಮುಂಬೈ ಜಾತಕ'

ಡಾ|| ಜಾ. ಗೋ.

ಶ್ರೀ ಜಿ.ಎಸ್. ಶಿವರುದ್ರಪ್ಪನವರ 'ಮುಂಬೈ ಜಾತಕ'ವು ಕನ್ನಡ ಅತ್ಯಂತ ನಿಜವಾದ, ಸ್ವತಂತ್ರವಾದ, ನಿರ್ದುಷ್ಟವಾದ ಮತ್ತು ವೈಶಿಷ್ಟ್ಯಪೂರ್ಣವಾದ ನವ್ಯ ಕವಿತೆಗಳಲ್ಲೊಂದಾಗಿದ್ದು ಅವುಗಳಲ್ಲಿ ಅಗ್ರಗಣ್ಯವಾದಂಥದಾಗಿದೆ. ಈ ಕವಿತೆಯ ಪೂರ್ವಗ್ರಹ ಮುಕ್ತವಾದ ಅಧ್ಯಯನದಿಂದ ನಮ್ಮಲ್ಲಿನ 'ನವ್ಯರು' (ಡಾ. ಜಿ.ಎಸ್. ಶಿವರುದ್ರಪ್ಪನವರು 'ನಿಜವಾದ ಅರ್ಥದಲ್ಲಿ ನವ್ಯ'ವಾದಂಥ ಹಲವಾರು ಕವಿತೆಗಳನ್ನು ರಚಿಸಿರುವರಾದರೂ ಅವರು ನಮ್ಮಲ್ಲೀಗ 'ಸಾಮಾನ್ಯವಾಗಿ ಪ್ರಚಲಿತವಾಗಿರುವ ಅರ್ಥ'ದಲ್ಲಿ "ನವ್ಯ ಕವಿ" ಅಲ್ಲ.) ಹಲವಾರು ಮಹತ್ವದ ಪಾಠಗಳನ್ನು ಕಲಿಯಬಹುದಾಗಿದೆ. ಈ ಕವಿತೆಯ ಕೆಲವು ಮಹತ್ವದ ಹಾಗೂ ವಿಶಿಷ್ಟ ಗುಣಾಂಶಗಳನ್ನು ಕುರಿತು ಮತ್ತು ಇದರಲ್ಲಿನ ನವ್ಯಾಂಶಗಳನ್ನು ಕುರಿತು ಶ್ರೀ ಚಂದ್ರಶೇಖರ ಕಂಬಾರರು 'ಪ್ರಾಯೋಗಿಕ ವಿಮರ್ಶೆ' (ಬೆಂಗಳೂರು ವಿಶ್ವವಿದ್ಯಾಲಯ, 1971)ಯಲ್ಲಿ ಪ್ರಕಟವಾದ 'ಮುಂಬೈ ಜಾತಕ'ವನ್ನು ಕುರಿತ ತಮ್ಮ ಲೇಖನದಲ್ಲಿ ಪರಿಣಾಮಕಾರಿಯಾಗಿ (ಮತ್ತು ಕಲಾತ್ಮಕವಾಗಿ) ಬರೆದಿದ್ದಾರೆ. ಡಾ. ಕಂಬಾರರು ತಮ್ಮ ಆ ಲೇಖನದಲ್ಲಿ ಈ ಕವಿತೆಯ ಬಗ್ಗೆ ಹೇಳಿರುವ ಅನೇಕ ಮಾತುಗಳು ನನಗೂ ಒಪ್ಪಿಗೆಯಾಗಿವೆ. ಆದರೂ ಈ ಮಹತ್ವದ ಕವಿತೆಯನ್ನು ಇನ್ನಿತರ ಕೆಲವು ಮಹತ್ವದ ಅಂಶಗಳಲ್ಲಿ ಪರಿಶೀಲಿಸಿ ಇದರ ಬಗ್ಗೆ ಬೇರೆ ಕೆಲವು ಮಾತುಗಳನ್ನು ನಾನು ಹೇಳಬೇಕಾಗಿರುವುದರಿಂದ ಈ ಲೇಖನವನ್ನು ಬರೆಯುತ್ತಿದ್ದೇನೆ ಮತ್ತು ಇನ್ನೊಂದು ಕಾರಣವೆಂದರೆ, ಶ್ರೀ ಕಂಬಾರರು ತಮ್ಮ ಲೇಖನದಲ್ಲಿ ಈ ಕವಿತೆಯನ್ನು ಸಾಂಗೋಪಾಂಗವಾಗಿ ಅದರ ಎಲ್ಲ ವಿವರಗಳಲ್ಲಿ ಪರಿಶೀಲಿಸಿಲ್ಲ. ವಿಮರ್ಶಾತ್ಮಕವಾಗಿ ಅತ್ಯಂತ ಅವಶ್ಯಕವಾದ ಆ ಕೆಲಸವನ್ನು ಮಾಡುವುದೂ ಇಲ್ಲಿನ ನನ್ನ ಮುಖ್ಯ ಉದ್ದೇಶಗಳಲ್ಲೊಂದಾಗಿದೆ.

ಈ ಕವಿತೆಯ ಬಂಧವು ನಮ್ಮಲ್ಲಿನ ಕವಿತೆಗಳ (ನಮ್ಮಲ್ಲಿನ ನವ್ಯ ಕವಿತೆಗಳೂ ಸೇರಿದಂತೆ) ಮಾಮೂಲು ಬಂಧಕ್ಕಿಂತ ಬಹಳ ಭಿನ್ನವಾದಂಥಾಗಿದೆ. ಕವಿತೆಯು 'ಹುಟ್ಟಿದ್ದು', 'ಬೆಳೆದದ್ದು', 'ಕುಡಿದದ್ದು', 'ಕಂಡದ್ದು' ಮತ್ತು 'ಕಲಿತದ್ದು' ಎಂಬ ಕ್ರಿಯಾಪದ ರೂಪಗಳ ಉಪಶೀರ್ಷಿಕೆಗಳಲ್ಲಿ ಪ್ರಾರಂಭವಾಗಿ ಮುಂದುವರಿಯುತ್ತದೆ. ಇಲ್ಲಿ ಬೇಕಾದರೆ ನಾವು, ಶ್ರೀ ಕಂಬಾರರು ತಮ್ಮ ಲೇಖನದಲ್ಲಿ ಸೂಚಿಸಿರುವಂತೆ (ಪ್ರಾ.ವಿ; ಪು. 121, ಕೊನೆಯ ಸಾಲು),

'ಇವನು' ಎಂಬ ಕರ್ತೃಪದವನ್ನು ಸೇರಿಸಿಕೊಂಡು ಕವನದ ಮೊದಲ ಐದು ನುಡಿಗಳನ್ನು ಅರ್ಥೈಸಬಹುದು. ಶ್ರೀ ಕಂಬಾರರು ತಮ್ಮ ಲೇಖನದಲ್ಲಿ ಹೇಳುವಂತೆ, ಈ ಕವನಕ್ಕೆ ಒಂದರ್ಥದಲ್ಲಿ "ಇವನು" (ಇವನು ಮುಂಬೈಯಲ್ಲಿ ಹುಟ್ಟಿ, ಮುಂಬೈಯಲ್ಲಿ ಬೆಳೆದು, ಮುಂಬೈಯಲ್ಲಿಯೇ ಜೀವನ ಸವೆಸುವ ಯಾವನೂ ಆಗಬಲ್ಲನು) ಎಂಬವನೇ ನಾಯಕ— ಹೀರೋ. ಈ ಕವನದಲ್ಲಿ ಮುಖ್ಯ "ಕರ್ತೃ" (subject)ವಂತೂ ಈ "ಇವನು ಎಂದು ನಾವು ಹೆಸರಿಸಬಹುದಾದಂಥ ವ್ಯಕ್ತಿಯೇ. ಕವನದ ಮೊದಲಿನ ಐದು ನುಡಿಗಳಲ್ಲಿ ಈ "ಇವನು" ಅನ್ನುವದೇ ಅನುಕ್ತವಾದರೂ ನೇರವಾದ ಕರ್ತೃಪದವಾಗಿದ್ದು, ಮುಂದಿನ ನಾಲ್ಕು ನುಡಿಗಳಲ್ಲಿ ನೇರವಾದ ಮತ್ತು ನೇರವಾಗಿಯೇ ಉಕ್ತವಾದ ಕರ್ತೃಪದಗಳು 'ತಾಯಿ', 'ತಂದೆ', 'ವಿದ್ಯೆ' ಮತ್ತು 'ಜೀವನ' ಎಂಬವಾಗಿದ್ದರೂ ಅವುಗಳೆಲ್ಲ ಈ 'ಇವನಿಗೇ' ಸಂಬಂಧಿಸಿದಂಥವಾಗಿರುವುದರಿಂದ 'ಇವನು' ಎನ್ನುವದೇ ಈ ಕವಿತೆಯ ಮುಖ್ಯ ಕರ್ತೃಪದವಾಗಿದೆಯೆಂದೂ ಹಾಗೂ ಈ 'ಇವನು' ಎಂಬುವನೇ ಈ ಕವನದ ನಾಯಕ ನಾಗಿದ್ದಾನೆಂದೂ ನಾವು ತಿಳಿಯಲಡ್ಡಿಯಿಲ್ಲ. ಆದರೂ ನಿಜವಾಗಿ ನೋಡಿದರೆ, ಈ ಕವನದ ಮುಖ್ಯ ವಿಷಯವು ಅಥವಾ ವಸ್ತುವು (the main theme) ಕೇವಲ ಈ 'ಇವನು' ಅಥವಾ 'ಇವನ ಜೀವನ'ವಾಗಿರದೇ (ಕವನದಲ್ಲಿನ ಜಾತಕವು ಇವನದಾಗಿದ್ದರೂ) 'ಮುಂಬೈ ನಗರ' ಅಥವಾ 'ಮುಂಬೈಯ ನಗರಜೀವನ' ಹಾಗೂ ತನ್ಮೂಲಕ, ಪರ್ಯಾಯವಾಗಿ, 'ಯಾವುದೇ ಇಂಥ ನಗರ' ಅಥವಾ 'ಯಾವುದೇ ಇಂಥ ನಗರಜೀವನ' ಇವುಗಳಾಗಿರುತ್ತವೆ. ಹೀಗಾಗಿ ಈ ಕವನದ ಮುಖ್ಯ "ಥೀಮು" (Theme). ಅದರ ಶೀರ್ಷಿಕೆಯೇ ಹೇಳುವಂತೆ, ಮುಂಬೈ ನಗರದ ಹಾಗೂ ಪರ್ಯಾಯವಾಗಿ, ಅಂಥ ಎಲ್ಲ ನಗರಗಳ ನಿವಾಸಿಗಳ ಜಾತಕವೇ ಆಗಿರುತ್ತದೆ.

ಕವನದ ಮೊದಲ ಐದು ನುಡಿಗಳಲ್ಲಿ ನಗರದಲ್ಲಿನ (ಅಥವಾ ಮುಂಬೈಯಂಥ ನಗರಗಳಲ್ಲಿನ) ಹುಟ್ಟು, ಬೆಳವಣಿಗೆ, ಪೌಷ್ಟಿಕ ಪಾನೀಯಗಳು, ದಿನನಿತ್ಯದ ದೃಶ್ಯಗಳು ಹಾಗೂ ಕಲಿತ ಪಾಠಗಳು ಇವುಗಳ ಚಿತ್ರವತ್ತಾದ, ಅರ್ಥಪೂರ್ಣವಾದ ಹಾಗೂ ಧ್ವನಿಪೂರ್ಣವಾದ ವರ್ಣನೆ ಬರುತ್ತದೆ. ಮುಂಬೈಯಂಥ ದೊಡ್ಡ ನಗರಗಳಲ್ಲಿ ಕೂಸುಗಳು ಹುಟ್ಟುವುದು-ಈಗ ಸಾಮಾನ್ಯವಾಗಿ ಎಲ್ಲ ಚಿಕ್ಕಪುಟ್ಟ ಪಟ್ಟಣಗಳಲ್ಲಿ ಕೂಡ ಮಾಮೂಲು ಆಗಿರುವಂತೆ ಮನೆಗಳಲ್ಲಲ್ಲ; (ಹೆಚ್ಚಿನ ನಗರವಾಸಿಗಳ ಮನೆಗಳಲ್ಲಿ ಕೂಸುಗಳು ಹುಟ್ಟಲು ಸ್ಥಳವೇ ಇರುವುದಿಲ್ಲ. ಆದರೂ ನಗರಗಳಲ್ಲಿ ದಿನಂಪ್ರತಿ ಸಾವಿರಾರು ಕೂಸುಗಳು ಹುಟ್ಟುತ್ತಲೇ ಇರುತ್ತವೆ) ಪ್ರಸೂತಿಗೃಹ (Maternity Homes) ಗಳಲ್ಲಿ, ಎಂದರೆ ಹೆರಿಗೆಮನೆ ಅಥವಾ ಆಸ್ಪತ್ರೆಗಳಲ್ಲಿ. ಹೀಗೆ ಆಸ್ಪತ್ರೆಗಳಲ್ಲಿ ಹುಟ್ಟಿದ ಕೂಸುಗಳು ಬೆಳೆಯುವುದು ಮನೆಗಳ ಒಳಗಾಗಲಿ ಅಥವಾ ಮನೆಗಳ ಅಂಗಳಗಳಲ್ಲಾಗಲಿ ನಡೆದಾಡಿಕೊಂಡು ಅಲ್ಲ; (ದೊಡ್ಡ ನಗರಗಳಲ್ಲಿ ಮನೆಗಳ ಒಳಗೆ ಕೂಸುಗಳು ಅಂಬೆಗಾಲಿಡಲು ಅಥವಾ ನಡೆದಾಡಲು ಸ್ಥಳವೇ ಇರುವುದಿಲ್ಲ ಮತ್ತು ನಗರಗಳ ಹೆಚ್ಚಿನ ಮನೆಗಳಿಗೆ ತಾಗಿದಂತೆ ಅಂಗಳಗಳೇ

ಇರುವುದಿಲ್ಲ) ನಗರಗಳಲ್ಲಿ ಎಲ್ಲೆಡೆಗಳಲ್ಲಿಯೂ ದಿನ ಬಳಕೆಯಲ್ಲಿರುವ ಬಸ್ಸು, ಟ್ರಾಮ್, ಟ್ಯಾಕ್ಸಿ ಹಾಗೂ ಎಲೆಕ್ಟ್ರಿಕ್ ಟ್ರೇನು ಮುಂತಾದ ವಾಹನಗಳಲ್ಲಿ. ಹಾಗೆ ಬೆಳೆಯುವಾಗ ನಗರದಲ್ಲಿನ ಕೂಸುಗಳು ಸಾಮಾನ್ಯವಾಗಿ ಕುಡಿಯುವುದು ತಾಯಿ ಮೊಲೆಹಾಲನ್ನಲ್ಲ, ಹತ್ತಿರದಲ್ಲೆಲ್ಲೂ 'ಕಾಣದ ಎಮ್ಮೆಯ ಕೆಚ್ಚಲು ಕರೆದು ಕಳುಹಿಸಿದ ಬಾಟ್ಲಿಯ ಹಾಲನ್ನು' (ಮುಂಬೈ ನಗರಕ್ಕೆ ಗುಜರಾತ ರಾಜ್ಯದಲ್ಲಿನ "ಆನಂದ"ದಷ್ಟು ದೂರದ ಗ್ರಾಮೀಣ ಪ್ರದೇಶಗಳಲ್ಲಿನ ಎಮ್ಮೆಗಳಿಂದ ಕರೆಯಲಾದ ಹಾಲೂ ವಿಭಿನ್ನ ಡೇರಿ ಕೇಂದ್ರಗಳ ಮೂಲಕ ಪ್ರತಿನಿತ್ಯ ಬಾಟ್ಲಿಗಳಲ್ಲಿ ಬರುತ್ತದೆ) ಹಾಗೂ ಗ್ರೈಪ್ ಸೈರಪ್, ಹಾರ್ಲಿಕ್ಸ್ ಮುಂತಾದ ಫ್ಯಾಕ್ಟರೀ ನಿರ್ಮಿತವಾದ ಅಥವಾ ಲೆಬೋರೇಟರೀ ನಿರ್ಮಿತವಾದ ಪೌಷ್ಟಿಕ ಪಾನೀಯಗಳನ್ನು. ಇನ್ನು ಮುಂಬೈಯಂಥ ಮಹಾನಗರಗಳಲ್ಲಿ ಬೆಳಗಿನಿಂದ ಸಂಜೆಯವರೆಗೆ ನಾವು ಕಾಣುವ ದೃಶ್ಯ ಎಂಥದು? ನೋಡುವ ನೋಟ ಎಂಥದು? ಅದು ಲಕ್ಷಲಕ್ಷ ವಾಹನಗಳ ಚಕ್ರಗಳು ತಮ್ಮ ಅಕ್ಷಗಳ ಸುತ್ತ ರಸ್ತೆಗಳ ಮೇಲೆ ದಿಂಡುರಿಕೆ ಉರುಳುವ ದೃಶ್ಯ ಮತ್ತು ತಮ್ಮ ದಿನನಿತ್ಯದ ಕೆಲಸ ಕಾರ್ಯಗಳಿಗಾಗಿ ಅವಸರವಸರವಾಗಿ ಹೆಜ್ಜೆಯಿಕ್ಕುತ್ತ ನಡೆಯುವ ಮತ್ತು ಓಡುವ ಸಾವಿರಾರು ನಗರವಾಸಿಗಳ ತ್ರಸ್ತ ಮುಖಗಳ, ಅವಸರದ ಹೆಜ್ಜೆಗಳ ಮೇಲೆ ಸರ-ಸರ ಸರಿಯುವ ಆ ಸಾವಿರ ತ್ರಸ್ತ ಕೊರಳುಗಳ, ಕರುಳು ಕೊರೆಯುವ ದೃಶ್ಯ ಎಂದು ಹೇಳುತ್ತಾರೆ ಕವಿ. ಇಲ್ಲಿನ 'ಅವಸರದ ಹೆಜ್ಜೆಯ ಮೇಲೆ ಸರಿವ ಸಾವಿರ ಕೊರಳು' ಅನ್ನುವುದು ಒಂದು ಅತ್ಯಂತ ಸುಂದರವಾದ ಮತ್ತು ಚಿತ್ರವೇಧಕವಾದ ಶಬ್ದ ಚಿತ್ರವಾಗಿದೆ. ಇಲ್ಲಿ ಶರೀರದ ಕೆಳಭಾಗದಲ್ಲಿನ ಅವಸರವಸರವಾಗಿ ಸರಿಯುವ ಹೆಜ್ಜೆಗಳಿಗೂ ಅವುಗಳ ಮೇಲೆ, ಅವುಗಳ ಒಡನೆಯೇ ಅವಸರವಸರವಾಗಿ ಸರಿಯುವ ಶರೀರದ ಮೇಲ್ಭಾಗದ ಕೊರಳುಗಳಿಗೂ ಒಂದು ರೀತಿಯ "ವಿನಾಸಂಬಂಧ" (ಶರೀರದ ಈ ಎರಡೂ ಭಾಗಗಳ ಅಂಗಗಳ ನಡುವೆ ಸಾಮಾನ್ಯವಾಗಿ ಇರಬೇಕಾದ "ಅವಿನಾ ಸಂಬಂಧ"ಕ್ಕೆ ತದ್ವಿರುದ್ಧವಾದ) ಏರ್ಪಟ್ಟು ಅದು ಆ ಮುಖಗಳ ಮತ್ತು ಆ ಕೊರಳುಗಳ ಮಾಲೀಕರಾದ ನಗರವಾಸಿಗಳ ಜೀವನದಲ್ಲಿನ ಹಾಗೂ ಅವರ ವ್ಯಕ್ತಿತ್ವದಲ್ಲಿನ "ವಿಘಟತೆ"ಯನ್ನು ಅಥವಾ "ಬಿರುಕ"ನ್ನು ಅತ್ಯಂತ ಚಿತ್ರಪೂರ್ಣವಾಗಿ ಹಾಗೂ ಧ್ವನಿಪೂರ್ಣವಾಗಿ ನಿರೂಪಿಸುತ್ತದೆ. ಹಾಗೆಯೇ ಕವನದ ಈ ಎರಡು ಪಂಕ್ತಿಗಳಲ್ಲಿ ಬಂದಿರುವ 'ಉರುಳು' ಮತ್ತು 'ಕೊರಳು' ಎಂಬ ಅಂತ್ಯಪ್ರಾಸವು (ಅಥವಾ ಅದಕ್ಕೆ ಅತಿ ಸಮೀಪವಾದ ಶಬ್ದಾನುಪೂರ್ವಿಯು) ಅಲ್ಲಿ 'ಕೊರಳು'ಗಳಿಗೆ 'ಉರುಳು'ಗಳನ್ನು (the nooses) ಅತ್ಯಂತ ಅರ್ಥಪೂರ್ಣವಾಗಿ ತಳಕು ಹಾಕುತ್ತದೆ. ಕವನದ ಮುಂದಿನ ನುಡಿ ಅಥವಾ ಭಾಗವಾದ "ಕಲಿತದ್ದು" ಎಂಬುದರಲ್ಲಿ ಕವಿ 'ಕ್ಯೂ ನಿಲ್ಲು', 'ಫುಟ್‌ಪಾತಿನಲ್ಲೇ ಸಂಚರಿಸು', 'ರಸ್ತೆ ದಾಟುವಾಗ ಎಚ್ಚರಿಕೆ' ಇತ್ಯಾದಿಯಾಗಿ ಚುಟುಕಾದ, ಆದರೆ ಅತ್ಯಂತ ಚುರುಕಾದ, ಆಜ್ಞಾರ್ಥಕ ವಾಕ್ಯಗಳನ್ನು ಪ್ರಯೋಗಿಸಿದ್ದು, ಈ ಪ್ರಯೋಗವು 'ಕಲಿಸುವಿಕೆ'ಯ ಮತ್ತು 'ಕಲಿಯುವಿಕೆ'ಯ ಕ್ರಿಯೆಗಳನ್ನು ಅರ್ಥಪೂರ್ಣವಾಗಿ ಹಾಗೂ ನಾಟಕೀಯವಾಗಿ ಪ್ರತಿಬಿಂಬಿಸುತ್ತದೆ. 'ಹೇಗೋ ಅವರಿವರ

ತಳ್ಳಿ ಮುನ್ನುಗ್ಗು; ಎಲ್ಲಾದರೂ ಸರಿಯೆ ಬೇರೂರು, ಹೀರು' ಎಂದು ಅನ್ನುವಲ್ಲಿ ಕವಿ ನಗರಜೀವನದ ಅಮಾನವೀಯವಾದ, ಕ್ರೂರ ಪೈಪೋಟಿಯನ್ನು, ಸ್ವಾರ್ಥಪ್ರೇರಿತವಾದ ಎಗ್ಗಿಲ್ಲದ ಮುನ್ನುಗ್ಗುವಿಕೆಯನ್ನು, ಜೀವನದಲ್ಲಿ ಹೇಗಾದರೂ ಮಾಡಿ ಬೇರೂರಬೇಕೆಂಬ ಮತ್ತು ತಮಗೆ ಸಾಧ್ಯವಾದಷ್ಟೂ ಜೀವನದ ಐಹಿಕ ಸುಖವನ್ನು ಹೀರಬೇಕೆಂಬ ನಗರದ ಜನರ ಪ್ರವೃತ್ತಿಯನ್ನು ವ್ಯಂಗ್ಯವಾಗಿ ಅತ್ಯಂತ ಪರಿಣಾಮಕಾರಿಯಾಗಿ, ತರಾಟೆಗೆ ತೆಗೆದು ಕೊಳ್ಳುತ್ತಾರೆ.

ಕವನದ ಮುಂದಿನ ಎರಡು ನುಡಿಗಳಲ್ಲಿ (6ನೆಯ ಮತ್ತು 7ನೆಯ ನುಡಿಗಳಲ್ಲಿ) ಕವಿ ನಮಗೆ ಮುಂಬೈ ನಗರದಲ್ಲಿನ 'ತಾಯಿ' ಮತ್ತು 'ತಂದೆ' ಇವರುಗಳ ವ್ಯಾಖ್ಯೆಯನ್ನು ಅಥವಾ ವ್ಯಕ್ತಿತ್ವದ ವರ್ಣನೆಯನ್ನು ಕೊಡುತ್ತಾರೆ. "ತಾಯಿ"ಯ ವ್ಯಕ್ತಿತ್ವವನ್ನು ವರ್ಣಿಸುತ್ತ ಕವಿ, ಅವಳು 'ಇವನನ್ನು' (ಕವನದ ನಾಯಕನನ್ನು) ಇವನು ಮಗುವಾಗಿದ್ದಾಗ ಸಾವಿರ ಗಾಲಿಗಳು ಉರುಳಿ ಹೊರಳುವ ರಸ್ತೆಯ ಅಂಚಿನಲ್ಲೇ ಕೈಹಿಡಿದು ನಡೆಸಿದವಳು ಹಾಗೂ ಮನೆಯಲ್ಲಿರುವ ಒಂದಿಂಚು (ಇಲ್ಲಿ ಕವಿಯು ಮನೆಯ ಕ್ಷೇತ್ರವನ್ನು ಫೂಟು ಅಥವಾ ಚೌರಸ್ ಫೂಟುಗಳಲ್ಲಿ ಹೇಳದೇ 'ಇಂಚು'ಗಳಲ್ಲಿ ಹೇಳುತ್ತಿದ್ದಾರೆ ಅನ್ನುವುದನ್ನು ನಾವು ಗಮನಿಸಬೇಕು.) ಕೋಣೆಯಲ್ಲಿಯೇ ಮಗುವಿಗೆ ಹೊರಲೋಕವನ್ನು ಪರಿಚಯ ಮಾಡಿಕೊಟ್ಟು, ಅದರ ಬಗ್ಗೆ ಅವಶ್ಯಕ ಮುನ್ನೆಚ್ಚರಿಕೆಯನ್ನು ಕೂಡ ಕೊಟ್ಟವಳು ಎಂದು ಹೇಳುತ್ತಾರೆ. ಕವಿಯ ಈ ಮಾತುಗಳಲ್ಲಿ ಮುಂಬೈಯಂಥ ಅತ್ಯಂತ ಜನದಟ್ಟಣೆಯ ನಗರಗಳಲ್ಲಿ ಮನೆಯ ಹೊರಗೆ ಖಾಲೀ ಜಾಗ, ಆಟದ ಬಯಲು ಮತ್ತು ಮನೆಯೊಳಗೆ ಸಾಕಷ್ಟು ಖಾಸಗೀ (private) ಸ್ಥಳ ಇವುಗಳಿಗಿರುವ ಅಭಾವ ಮತ್ತು ಈ ಅಭಾವಗಳ ಬಗ್ಗೆ ಕವಿಗಿರುವ ಕಳಕಳಿ ಇವು ವ್ಯಕ್ತವಾಗುತ್ತದೆ. ಇದರ ಮುಂದಿನ (ಕವನದ 7ನೆಯ) ನುಡಿಯಲ್ಲಿ "ತಂದೆ"ಯ ವರ್ಣನೆ ಬರುತ್ತದೆ.

> 'ಬೆಳಗಿನಿಂದ ಸಂಜೆಯ ತನಕ ಕಣ್ಮರೆಯಾಗಿ
> ಒಮ್ಮೊಮ್ಮೆ ರಜಾದಿನಗಳಲ್ಲಿ ಕಣ್ಣಿಗೆ ಕಂಡು
> ಕುಳಿತು ಕೆಮ್ಮುವ ಪ್ರಾಣಿ'

ಎಂದು ಅತ್ಯಂತ ಚಿತ್ರವತ್ತಾಗಿ ಮತ್ತು ಕನಿಕರದಿಂದ ಮುಂಬೈಯಲ್ಲಿನ 'ಮಗುವಿನ ತಂದೆ' ಎಂಬ ಪ್ರಾಣಿಯನ್ನು ವರ್ಣಿಸುತ್ತಾರೆ ಕವಿ ಇಲ್ಲಿ. ಬೇಕಾದರೆ ಕವಿಯ ಈ ಚಿತ್ರವನ್ನು ಪೂರ್ಣಗೊಳಿಸಲು,

> 'ಕುಳಿತು ಸಿಗರೇಟು-ಬೀಡಿ ಸೇದುತ್ತ ಕೆಮ್ಮುವ ಪ್ರಾಣಿ'

ಎಂದು ಸೇರಿಸಿಕೊಳ್ಳಬಹುದು. ಮುಂಬೈಯಲ್ಲಿ ಮಕ್ಕಳಿಗೆ, ಆಫೀಸು-ಫ್ಯಾಕ್ಟರಿಗಳಲ್ಲಿ ಬೆಳಗಿನಿಂದ ಸಂಜೆಯವರೆಗೆ ಕೆಲಸ ಮಾಡುವ ತಮ್ಮ ತಂದೆಗಳ ಮುಖದರ್ಶನವಾಗುವುದು, ಇಲ್ಲಿ ಕವಿ ಹೇಳುವಂತೆ ಹೆಚ್ಚಾಗಿ ರಜಾದಿನಗಳಲ್ಲಿಯೇ.

ಇದರ ಮುಂದಿನ (ಕವನದ 8ನೆಯ) ನುಡಿಯಲ್ಲಿ ಮುಂಬೈಯಲ್ಲಿ ಮಕ್ಕಳು ಕಲಿಯುವ 'ವಿದ್ಯೆ'ಯನ್ನು ಕವಿ ವರ್ಣಿಸುತ್ತಾರೆ: ಮುಂಬೈಯಂಥ ಸ್ಥಳಗಳಲ್ಲಿ 'ಶಾಲೆ-ಕಾಲೇಜುಗಳು ಕಲಿಸಿದ್ದೇ' ವಿದ್ಯೆ ಎಂದು ತಿಳಿಸುತ್ತಾರೆ ಕವಿ. ಇದು ಅತ್ಯಂತ ನಿಜವಾದ ಮಾತು. ಆದರೆ ಈ ಮಾತು ಮುಂಬೈಯಂಥ ನಗರಗಳ ಮಟ್ಟಿಗೆ ಮಾತ್ರವಲ್ಲ, ಹೆಚ್ಚು-ಕಡಿಮೆ ನಮ್ಮ ಕಾಲದ ಎಲ್ಲ ಶಾಲಾ-ಕಾಲೇಜುಗಳಿರುವ ಊರುಗಳ ವಿಷಯದಲ್ಲೂ ನಿಜ. ಶಾಲೆಗಳೇ ಇರದ ಹಳ್ಳಿಗಳು ಮಾತ್ರ (ಈಗ ಅವೂ ನಮ್ಮಲ್ಲಿ, ನಮ್ಮ ಸರ್ಕಾರಗಳ ಕೃಪೆಯಿಂದಾಗಿ, ಬಹಳ ಕಡಿಮೆಯಾಗಿಬಿಟ್ಟಿವೆ!) ಈ ಮಾತಿಗೆ ಅಪವಾದವಾಗಬಹುದೇನೋ! ಇಲ್ಲಿ ಕವಿ ವರ್ಣಿಸುವ ಇನ್ನೆರಡು ಬಗೆಯ ವಿದ್ಯೆಗಳೆಂದರೆ:

i) 'ದಾರಿ ಬದಿ ನೂರಾರು ಜಾಹೀರಾತುಗಳು ತಲೆಗೆ ತುರುಕಿದ' ವಿದ್ಯೆ; ಮತ್ತು

ii) 'ರೇಡಿಯೋ ಸಿಲೋನ್ ವ್ಯಾಪಾರ ವಿಭಾಗ ಶಿಫಾರಸು ಮಾಡಿದ' ವಿದ್ಯೆ.

ಇವೆರಡರಲ್ಲಿ ಮೊದಲಿನ ವಿದ್ಯೆಯು (ದಾರಿ ಬದಿಯ ಜಾಹೀರಾತುಗಳದು) ನಮಗೆ ಮುಂಬೈಯಂಥ ದೊಡ್ಡ ನಗರಗಳಲ್ಲಿ ಬಹಳ ವಿಪುಲವಾಗಿ ಮತ್ತು ಬಹಳ ಸಲೀಸಾಗಿ ಸಿಗುವಂಥದು—ನಾವು ಬೇಡವೆಂದರೂ ಬಿಡದೇ ಎಲ್ಲೆಡೆಯಲ್ಲಿಯೂ ಸಿಗುವಂಥದು (ಇಲ್ಲಿ ಕವಿ ಪ್ರಯೋಗಿಸಿರುವ 'ತಲೆಗೆ ತುರುಕಿದ' ಎಂಬ ಅರ್ಥಪೂರ್ಣವಾದ ಪದಗಳನ್ನು ಗಮನಿಸಬೇಕು). ಎರಡನೆಯ ವಿದ್ಯೆಯು (ರೇಡಿಯೋ ಸಿಲೋನಿನ ವ್ಯಾಪಾರ ವಿಭಾಗ ಶಿಫಾರಸು ಮಾಡಿದ್ದು) ನಮಗೆ ಭಾರತದಲ್ಲಿ ಎಲ್ಲೆಡೆಗೂ (ಹಳ್ಳಿ ಮತ್ತು ದಿಳ್ಳಿ ಎರಡೂ ಕಡೆಗಳಲ್ಲೂ) ಲಭ್ಯವಾಗುವಂಥದು. ಆದರೂ ಈ ವಿದ್ಯೆಯ ಉಪಲಬ್ಧಿ ಮತ್ತು ಸಿದ್ಧಿ ಇವು ಹಳ್ಳಿಗಾಡುಗಳಲ್ಲಿಗಿಂತ ಹೆಚ್ಚಾಗಿ ಮುಂಬೈಯಂಥ ನಗರಗಳಲ್ಲೇ ಜಾಸ್ತಿ ಅನ್ನುವುದು ಸತ್ಯ ಸಂಗತಿ. ಈ ನುಡಿಯಲ್ಲಿನ ಮುಂದಿನ ಪಂಕ್ತಿಯನ್ನು 'ನೀನಾಗಿ ಕಲಿತದ್ದು ಬಲು ಕಡಿಮೆ' ಅನ್ನುವವದಷ್ಟೇ ಓದಿದಾಗ "ಎಲ್ಲಾ! ಇದೇನು ಬಹಳ ವಾಚ್ಯವಾದ ಹೇಳಿಕೆಯಾಯ್ತಲ್ಲ!" ಎಂದು ನಮಗನಿಸಿದರೂ ಮುಂದೆ ಆ ಪಂಕ್ತಿಯನ್ನು:

> **'.......... ಬಸ್ ಸ್ಟಾಪಿನಲ್ಲಿ ನಿನ್ನ**
> **ಬಣ್ಣಗಳ ಕಡೆಗೆ ಕಣ್ಣಾಡಿಸುವದೊಂದನು ಹೊರತು'**

ಎಂದು ಪೂರ್ತಿಯಾಗಿ ಓದಿದಾಗ ನಮ್ಮ ಆ ಅನಿಸಿಕೆಯು ಅಳಿಸಿಹೋಗುವುದು. ಈ 'ಬಸ್‌ಸ್ಟಾಪಿನಲ್ಲಿ..... ಬಣ್ಣಗಳ ಕಡೆಗೆ ಕಣ್ಣಾಡಿಸುವ' ಕ್ರಿಯೆಯನ್ನು ಶ್ರೀ ಕಂಬಾರರು ತಮ್ಮ ಲೇಖನದಲ್ಲಿ 'ಕೇವಲ Absurd gesture' ಎಂದು ಕರೆದಿದ್ದಾರೆ (ಪ್ರಾಯೋಗಿಕ ವಿಮರ್ಶೆ, ಪು. 122) ಆಳವಾದ ಅರ್ಥದಲ್ಲಿ-ಅದು ಒಂದು 'Absurd Gesture ಅನ್ನುವುದು ನಿಜ. ಯಾಕೆಂದರೆ, ಮುಂಬೈಯಂಥ ನಗರದ ಬಸ್‌ಸ್ಟಾಪು (ರೋಡ್ ಸೈಡ್ ರೋಮಿಯೋಗಳ ವ್ಯಾಕರಣದಲ್ಲಿ 'Bus-stop' ಎಂಬ ಸಂಯುಕ್ತ ಪದಕ್ಕೆ 'Bust-up' ಮತ್ತು 'Bust-op' ಎಂಬ ಎರಡು ವಿಧವಾದ ಪ್ರಚಲಿತ ವಿಗ್ರಹಗಳಿವೆ) ಗಳಲ್ಲಿ ನಿಂತುಕೊಂಡು ಅಲ್ಲಿ ನೆರೆಯುವ

ಬಗೆಬಗೆಯ "ಬಣ್ಣ"ಗಳ ಕಡೆಗೆ ಬೀದಿ ಕಾಮಣ್ಣಗಳು ಕಣ್ಣಾಡಿಸುವ ಕ್ರಿಯೆಯು ನಿಜವಾಗಿ ನೋಡಿದಲ್ಲಿ (ಅವರುಗಳ ದೃಷ್ಟಿಕೋನದಿಂದಲೇ ನೋಡಿದಾಗ ಕೂಡ) ಒಂದು ಅರ್ಥಹೀನ, ಆ್ಯಬ್ಸರ್ಡ್ ಕ್ರಿಯೆಯಲ್ಲದೇ ಮತ್ತಿನ್ನೇನು? ವಿವಿಧ ವೃಕ್ಷಗಳಲ್ಲರಳುವ ಪುಷ್ಪಗಳ ಸೌಂದರ್ಯವನ್ನು ಆ ಪುಷ್ಪಗಳನ್ನು ಕೀಳದೇ, ಮುಟ್ಟದೆ ಮತ್ತು ಮೂಸದೇ ದೂರದಿಂದಲೇ ನೋಡಿ ಆಸ್ವಾದಿಸುವಂಥ ಮತ್ತು ಅಷ್ಟರಿಂದಲೇ ತೃಪ್ತರಾಗುವಂಥ ನಿಷ್ಕಾಮಿಗಳಾದ ಸೌಂದ್ಯಾರಾಧಕರು ನಮ್ಮಲ್ಲಿ ಅದರಲ್ಲೂ ನಮ್ಮ ನಗರಗಳ ಬೀದಿ ಕಾಮಣ್ಣಗಳಲ್ಲಿ ಎಷ್ಟು ಜನ? ಆದ್ದರಿಂದ ಈ "ಬಣ್ಣ"ಗಳ ಕಡೆಗೆ ಕಣ್ಣಾಡಿಸುವ ಕ್ರಿಯೆಯು, ಶ್ರೀ ಕಂಬಾರರು ಹೇಳುವಂತೆ, ಒಂದು "Absurd Gesture" ಆಗಿದೆ ಎಂದೇ ಹೇಳಬೇಕು.

ಕವನದ ಕೊನೆಯ ನುಡಿ ಅಥವಾ ಭಾಗ "ಜೀವನ" ಅನ್ನುವುದು. ಕವನದ ಈ ಭಾಗವನ್ನು ಕುರಿತು ಬರೆಯುತ್ತ ಶ್ರೀ ಕಂಬಾರರು ತಮ್ಮ ಲೇಖನದಲ್ಲಿ ಹೀಗೆ ಹೇಳುತ್ತಾರೆ: "ಕೊನೆಯ ಭಾಗವಾದ ಜೀವನ: ಈ ಎಲ್ಲ ಸಂಕೀರ್ಣ ಸಾಮಗ್ರಿ ಗಟ್ಟಿಕೊಂಡು ಹಿಂದಿನ ಭಾಗಗಳನ್ನು ಸ್ಮರಿಸುತ್ತ ಮುಂದುವರಿಯುತ್ತದೆ." *(ಪ್ರಾಯೋಗಿಕ ವಿಮರ್ಶೆ, ಪುಟ: 122)* ಕವನದ ಈ ಭಾಗದಲ್ಲಿ, ಶ್ರೀ ಕಂಬಾರರು ಹೇಳುವಂತೆ, ಕಾವ್ಯದ ಸಂಕೀರ್ಣ ಸಾಮಗ್ರಿಯು ಹೆಚ್ಚು ಘನೀಭೂತವಾಗಿ ಅಭಿವ್ಯಕ್ತವಾಗಿದೆ ಅನ್ನುವದೇನೋ ನಿಜ. ಆದರೆ ಅವರು ಹೇಳುವಂತೆ ಇಲ್ಲಿ ಕವನದ ಹಿಂದಿನ ಭಾಗಗಳನ್ನು ಸ್ಮರಿಸುವ, ಇಲ್ಲವೇ ಸಿಂಹಾವಲೋಕಿಸುವ ಕ್ರಿಯೆ ಮಾತ್ರ ನಡೆಯುವುದಿಲ್ಲ. ಈ ಭಾಗದಲ್ಲಿ ನಿರೂಪಿತವಾಗಿರುವುದು ಕವನದ ನಾಯಕ ರೂಪಿಯಾದ ವ್ಯಕ್ತಿಯ (ಅಥವಾ 'ಇವನ') ಮುಂಬೈ ಜೀವನದ ಒಂದು (ಯಾವುದೇ ಒಂದು) ದಿನದ, ಬೆಳಗಿನಿಂದ ರಾತ್ರಿ 11-12ರ ವರೆಗಿನ ದಿನಚರಿ ಮಾತ್ರ. ಆದರೆ ಇಲ್ಲಿನ ಈ ನಿರೂಪಣೆಯು ಅತ್ಯಂತ ಸಾಂದ್ರವಾದ, ಕೇಂದ್ರವಾದ ಮತ್ತು ಸಂತತವಾದ ತನ್ನ ಪ್ರತಿಮಾತ್ಮಕತೆಯಿಂದಾಗಿ ಇಡೀ ಕವನದ ಒಟ್ಟಾರೆ ಅರ್ಥವನ್ನು, ಆಶಯವನ್ನು ಮತ್ತು ಧಾಟಿ-ಧೋರಣೆಗಳನ್ನು ಅತ್ಯಂತ ಪರಿಣಾಮಕಾರಿಯಾಗಿ, ವ್ಯಂಗ್ಯಪೂರ್ಣವಾಗಿ ಪ್ರತಿಬಿಂಬಿಸುತ್ತದೆ ಎಂದು ಹೇಳಬಹುದು.

> **'ಈ ಲಕ್ಷದಾರಿಗಳ ಚದುರಂಗದಾಟದಲಿ, ನೂರು**
> **ಬೆಳಗಿನ ಕೆಳಗೆ ಯಾರದೋ ಕೈಗೊಂಬೆಯಾಗಿ,**
> **ಮುಂದುವರಿಯುವುದು...'**

ಎಂದು ಪ್ರಾರಂಭವಾಗುತ್ತದೆ ಕವನದ ಕೊನೆಯ ಈ ಭಾಗ. ಇಲ್ಲಿ 'ಕೈಗೊಂಬೆ' ಅನ್ನುವುದು ಒಂದು ಬಹು ಮುಖ್ಯ ಪ್ರತಿಮೆ. ಮುಂಬೈಯಂಥ ಮಹಾನಗರದಲ್ಲಿ ಅಲ್ಲಿನ ಸಾಮಾನ್ಯ ನಗರವಾಸಿಗಳೆಲ್ಲರ ಪ್ರತಿನಿಧಿಯಾದ ಅಥವಾ ಸಂಕೇತವಾದ 'ಅವನು' ಒಂದರ್ಥದಲ್ಲಿ ನಿಜವಾದ ಯಾರದೋ ಕೈಗೊಂಬೆಯಾಗಿ, ಚದುರಂಗ ಪಟ (chess board) ದಂತಿರುವ ನಗರದ ನೂರಾರು ದಾರಿಗಳಲ್ಲಿ (ಕವನದಲ್ಲಿ 'ಲಕ್ಷದಾರಿಗಳ' ಎಂದು ಇದೆ. ಇಲ್ಲಿ 'ಲಕ್ಷ'ದ

ಬದಲು 'ನೂರು ಅಥವಾ ನೂರಾರು ದಾರಿಗಳ' ಎಂದಿದ್ದರೆ ಹೆಚ್ಚು ವಾಸ್ತವವೆನಿಸುತ್ತಿತ್ತು ಮತ್ತು ಮುಂದಿನ 'ನೂರು ಬೆಳಕಿನ ಕೆಳಗೆ' ಅನ್ನುವುದಕ್ಕೆ ಹೆಚ್ಚು ಸರಿಹೋಗುತ್ತಿತ್ತು; ಅಥವಾ ಮುಂಬೈಯಂಥ ಮಹಾನಗರಗಳಲ್ಲಿ ಲಕ್ಷಗಟ್ಟಲೆ ದಾರಿಗಳಿರುವವೆನ್ನುವುದೇ ಹೆಚ್ಚು ವಾಸ್ತವವೆನಿಸುತ್ತವೆ ಎಂದು ನಾವು ಒಂದೇ ವೇಳೆ ಅಂದುಕೊಂಡರೆ ಆಗ ಬೆಳಕುಗಳ ಸಂಖ್ಯೆಯೂ ಲಕ್ಷಾವಧಿ ಆಗಬೇಕಾಗುತ್ತದೆ) ನೂರಾರು, ಸಾವಿರಾರು ದಾರಿದೀಪಗಳ ಬೆಳಕಿನ ಕೆಳಗೆ ಮುಂದುವರಿಯುತ್ತಾನೆ, ಅಲ್ಲಲ್ಲಿ.... ಮುಂದುವರಿಸಲ್ಪಡುತ್ತಾನೆ. ಈ ಪಂಕ್ತಿಗಳಲ್ಲಿ ಬರುವ 'ಚದುರಂಗದಾಟ', 'ನೂರು ಬೆಳಕು' ಮತ್ತು 'ಕೈಗೊಂಬೆ' ಈ ಪದಗಳು ಗೊಂಬೆಯಾಟದ, ನಾಟಕದ ಮತ್ತು ಬೆಳಕಿನ ವ್ಯವಸ್ಥೆ (Light effects) ಮುಂತಾದ ರಂಗಸಜ್ಜಿಕೆಗಳ ಚಿತ್ರವತ್ತಾದ ಪರಿಣಾಮವನ್ನುಂಟು ಮಾಡುತ್ತವೆ. 'ಕೈಗೊಂಬೆಯಾಗಿ ಮುಂದುವರಿಯುವುದು' ಎಂಬ ಪ್ರಯೋಗವು 'ಅವನ' (ಅಥವಾ ನಗರವಾಸಿಗಳ) ಜೀವನದ ಅಸಹಾಯಕತೆಯನ್ನು ಹಾಗೂ ಅದರ ಯಾಂತ್ರಿಕವಾದ ನಿಯಂತ್ರಿತತೆಯನ್ನು ಚೆನ್ನಾಗಿ ಪ್ರತಿಮೀಕರಿಸುತ್ತದೆ.

**'ಏಳುವುದು, ಬಟ್ಟೆಯಲಿ**
**ಮೈತುರುಕಿ ಓಡುವುದು;**
**ರೈಲನೋ ಬಸ್ಸನೋ ಹಿಡಿಯುವುದು'**

ಎಂಬ ಕವನದ ಮುಂದಿನ ಪಂಕ್ತಿಗಳು ಮುಂಬೈವಾಸಿಗಳು ತಂತಮ್ಮ ಕೆಲಸ ಕಾರ್ಯಗಳಿಗಾಗಿ ಬೆಳಿಗ್ಗೆ ಬೇಗ ಏಳುವ (ಒಂದು ಅರ್ಥದಲ್ಲಿ ಮುಂಬೈ ನಗರವು ಮಲಗುವದೇ ಇಲ್ಲ ಎಂದು ಹೇಳಬಹುದು), ಎದ್ದವರೇ ಅವಸರವಸರವಾಗಿ ತಂತಮ್ಮ ಬಟ್ಟೆಗಳಲ್ಲಿ ತಮ್ಮ 'ಮೈತುರುಕಿ' (ಈ ಪ್ರಯೋಗದಲ್ಲಿ ಸ್ಫುಟವಾಗಿ ವ್ಯಕ್ತವಾಗುವ ಮೈಯ ಯಾಂತ್ರೀಕರಣವನ್ನು Mechanisation- ಮತ್ತು ಉಪಕರಣೀಕರಣ-Instrumentalisation-ವನ್ನು ಹಾಗೂ 'ತುರುಕಿ' ಎಂಬ ಪದದ ಪ್ರಯೋಗದಲ್ಲಿ ಸ್ಪಷ್ಟವಾಗಿ ವ್ಯಕ್ತವಾಗುವ ಆ ಕ್ರಿಯೆಯ ಅರ್ಥಹೀನ ವಾದ ಮತ್ತು ಜೀವರಹಿತವಾದ ಯಾಂತ್ರಿಕತೆಯನ್ನು ಹಾಗೂ ಯಾಂತ್ರಿಕವೇಗವನ್ನು ನಾವು ಗಮನಿಸಬೇಕು) ತಮ್ಮ ದಿನನಿತ್ಯದ ರೈಲನ್ನೋ ಬಸ್ಸನ್ನೋ ಹಿಡಿಯಲು ಓಡುವ ಅತ್ಯಂತ ಯಾಂತ್ರಿಕವೂ ನಾಟಕೀಯವೂ ಆದ ದೃಶ್ಯವನ್ನು ನಮ್ಮ ಕಣ್ಣಿಗೆ ಕಟ್ಟುವಂತೆ ಅತ್ಯಂತ ಪರಿಣಾಮಕಾರಿಯಾಗಿ ಅಭಿನಯಿಸಿ ತೋರಿಸುತ್ತವೆ. ಮುಂದೆ:

**'ಸಾಯಂಕಾಲ ಸೋತು ಸುಸ್ತಾಗಿ**
**ರೆಪ್ಪೆಯ ಮೇಲೆ ಹತ್ತು ಮಣ**
**ಆಯಾಸವನು ಹೊತ್ತು'**

ಎಂದು ಪ್ರಾರಂಭವಾಗುವ ಕವನದ ಕೊನೆಯ ಭಾಗದ ಪಂಕ್ತಿಗಳು ಮುಂಬೈ ನಗರದ ಅತ್ಯಂತ ಯಾಂತ್ರಿಕವಾದ ಮತ್ತು ಆಯಾಸಕರವಾದ ದಿನಚರಿಯ ಹೃದಯವಿದ್ರಾವಕವಾದ

ಕೊನೆಯ ದೃಶ್ಯವನ್ನು (the Last Scene) ವರ್ಣಿಸುತ್ತವೆ. ಉದರಂಭರಣಕ್ಕಾಗಿ ತನ್ನ ದಿನದ 'ಕೂಲಿ-ಕೆಲಸ'ವನ್ನು ಮಾಡಿ ಸಾಯಂಕಾಲದ ಹೊತ್ತಿಗೆ ಪೂರ್ತಿ ಸುಸ್ತು ಹೊಡೆದುಬಿಟ್ಟಂಥ ಮುಂಬೈ ನಿವಾಸಿಯು ತನ್ನ ಕಣ್ಣ 'ರೆಪ್ಪೆಯ ಮೇಲೆ ಮಣದಷ್ಟು ಆಯಾಸ'ವನ್ನು (ಈ ಪ್ರತಿಮೆಯ ಹೊರಾರ್ಥ ಮತ್ತು ಒಳಾರ್ಥ ಇವೆರಡರ ಸೂಕ್ಷ್ಮತೆ, ಆಳ ಮತ್ತು ಪರಸ್ಪರ ಪೂರಕವಾದ ವ್ಯಂಜಕತೆ ಇವುಗಳನ್ನು ಗಮನಿಸಬೇಕು) ಹೊರಲಾರದೆ ಹೊತ್ತುಕೊಂಡು ದೂರದ ಉಪನಗರ (suburb) ದಲ್ಲಿನ ತನ್ನ ಬಾಡಿಗೆ ಮನೆಯನ್ನು ತಲುಪುವ ಹೊತ್ತಿಗೆ ಗಂಟೆ ರಾತ್ರಿ ಹತ್ತೋ-ಹನ್ನೊಂದೋ ಆಗಿಬಿಟ್ಟು, ಅಷ್ಟು ಹೊತ್ತಿನವರೆಗೂ ತನ್ನ ಆಗಮನಕ್ಕಾಗಿ ಕಾಯ್ದು ಕಾಯ್ದು, ಕೂತು ತೂಕಡಿಸಿ, ಮಂಕಾಗಿದ್ದ ತನ್ನ ಮಡದಿಯನ್ನು ಇವನು ಆಗ ಎಚ್ಚರಿಸಿ, ಅಷ್ಟು ಹೊತ್ತಿಗಾಗಲೇ ಕೊರೆಯುವಷ್ಟು ತಣ್ಣಗಾಗಿ ಬಿಟ್ಟಿದ್ದ ಯಾವಾಗಲೋ ಮಾಡಿಟ್ಟ ಅಡುಗೆಯನ್ನು (ಇಲ್ಲಿ ಕವಿ ಅಡಿಗೆಗೆ 'ಕೂಳು' ಎಂಬ ಹೆಚ್ಚು ಕೊರೆಯುವ ಪದವನ್ನು ಔಚಿತ್ಯಪೂರ್ಣವಾಗಿ ಬಳಸಿದ್ದಾರೆ) ಉಂಡು, ತನ್ನ ಆ ಬಾಡಿಗೆಯ ಮನೆಯ ನೆರಳಿನ (ಇಲ್ಲಿ 'ನೆರಳು' ಎಂಬ ಪದವು 'ಆಸರೆ' ಎಂಬ ಅರ್ಥಕ್ಕಿಂತ ಹೆಚ್ಚಾಗಿ 'ಇರುಳಿನ ಕರಾಳ ಛಾಯೆ' ಎಂಬ ಭೀಕರವಾದ ಅರ್ಥವನ್ನು ಸೂಚಿಸುತ್ತದೆ ಎಂದು ಹೇಳಬಹುದು) ಕೆಳಗೆ ಮತ್ತು (ಇನ್ನೂ ಭೀಕರವಾಗಿದೆಯೆಂದರೆ) ತನ್ನ ಕನಸಿನಲ್ಲಿಯ 'ಸಾವಿರ ಗಾಲಿಗಳುಜ್ಜುವ ರೈಲುಬಂಡಿಯ ಕೆಳಗೆ ಹಾಸು ಕಂಬಿಯ ಹಾಗೆ ತತ್ತರಿಸುತ್ತ' ಮಲಗುತ್ತಾನೆ.

ಅಲ್ಲಿಗೆ ಮುಗಿಯುತ್ತದೆ.... ಅಲ್ಲಲ್ಲ.... ಮುಗಿದಂತಾಗುತ್ತದೆ ಮುಂಬೈ ವಾಸಿಯ ಒಂದು ದಿನದ (ಮತ್ತು ದಿನದಿನದ) ಕತೆ. ಅಲ್ಲಿಗೆ ಈ ಕವಿತೆ ಕೂಡ ಮುಗಿಯುತ್ತದೆ. ಕವಿತೆಯ ಕೊನೆಯ ಪಂಕ್ತಿಗಳಲ್ಲಿ ಬಂದಿರುವ ಈ "ಸಾವಿರ ಗಾಲಿಯುಜ್ಜುವ ಬಂಡಿ"ಯ ದುಃಸ್ವಪ್ನ (Nightmare)ದ ಪ್ರತಿಮೆಯು ಒಂದರ್ಥದಲ್ಲಿ ಇಡೀ ಕವಿತೆಯ ಮಥಿತಾರ್ಥದ ಅತ್ಯಂತ ಸುಂದರವಾದ ಪ್ರತಿಮೀಕರಣವಾಗಿದೆ. ನಮ್ಮ ನಾಗರೀಕರಣ (Urbanisation) ಮತ್ತು ಔದ್ಯಮೀಕರಣ (Industrialisation) ಗಳ ಪ್ರಕ್ರಿಯೆಯ ಕ್ರೂರವಾದ ಅಮಾನವೀಯತೆ ಮತ್ತು ಯಾಂತ್ರೀಕತೆಗಳನ್ನು ಹಾಗೂ ಆ ಕ್ರೂರಪ್ರಕ್ರಿಯೆಯ ದುಷ್ಪರಿಣಾಮಗಳಾದ ಅಸುರಕ್ಷತತೆ (Insecurity), ಏಕಾಕಿತನ, ಅನಾಥಪ್ರಜ್ಞೆ ಮತ್ತು ಅಸ್ವಾಭಾವಿಕವೂ ಅತಾರ್ಕಿಕವೂ ಆದ ಹೆದರಿಕೆ (Phobia) ಇವೆಲ್ಲವುಗಳನ್ನು ಏಕಕಾಲಕ್ಕೆ ಸಂಕೇತಿಸುವ, ಮೇಲಿನ 'ಸಾವಿರ ಗಾಲಿಯನ್ನುಜ್ಜುವ ಕನಸ ಬಂಡಿ'ಯು ನಿಜಕ್ಕೂ ಒಂದು ಅದ್ಭುತವಾದ ಸಂಕೀರ್ಣ ಪ್ರತಿಮೆಯಾಗಿದ್ದು ಅದು ಇಡೀ ಕವಿತೆಯ ಅಂತರಾರ್ಥವನ್ನು ಅತ್ಯಂತ ಪರಿಣಾಮಕಾರಿಯಾಗಿ ಧ್ವನಿಸಿದೆ. ವೃತ್ತಪತ್ರಿಕೆಗಳಲ್ಲಿನ ವರದಿಯಂತೆ ಅತ್ಯಂತ ಸಂಕ್ಷಿಪ್ತವಾದ (ಆದರೆ ಮೊನಚಾದ) ಗರಿಗರಿ ಗದ್ಯದ ಭಾಷೆಯಲ್ಲಿ ನೇಯಲ್ಪಟ್ಟ ಡಾ. ಜಿ.ಎಸ್. ಶಿವರುದ್ರಪ್ಪನವರ ಈ ಕವನವು ನಮ್ಮ ಅತ್ಯಂತ ಅಥೆಂಟಿಕ್ ಆದ ಮಹತ್ವದ ನವ್ಯ ಕವನಗಳಲ್ಲೊಂದಾಗಿದೆ.

*(ಮೂಲ 'ಕಾವ್ಯಮಂಥನ' ಪು. 73-104)*

■

# ಜಿಎಸ್ಎಸ್ ಅವರ 'ಅವಸ್ಥೆ' ಕವಿತೆಯನ್ನು ಕುರಿತು

ಸುಮತೀಂದ್ರ ನಾಡಿಗ

೧

ಅರಿವಳಿಕೆ ಸೂಜಿಮೊನೆ ತಾಗಿದ್ದಷ್ಟೇ ಗೊತ್ತು:
ಮೂರ್ತದಿಂದ ಅಮೂರ್ತಕ್ಕೆ ಒಂದೇ ನೆಗೆತ.
ಬರೀ ನಿರಾಕಾರ ಶೂನ್ಯದ ಕಡಲು ಎತ್ತೆತ್ತಲೂ,
ಅಲ್ಲಿ ರವಿಯಿಲ್ಲ, ಶಶಿಯಿಲ್ಲ, ನಕ್ಷತ್ರ-

ವೊಂದೂ ಇಲ್ಲ, ನಾನು ನೀನುಗಳಿಲ್ಲ, ನಾಮ
ರೂಪಗಳಿಲ್ಲ, ಹಿಂದಿಂದು ಮುಂದುಗಳಿ-
ಗರ್ಥವೇ ಇಲ್ಲ. ಸೃಷ್ಟಿ ಪೂರ್ವದ ಪ್ರಳಯ-
ದಲ್ಲಿ ಹೆಪ್ಪುಗಟ್ಟಿದ ಕಪ್ಪು. ಕಾಲಾತೀತನದಲ್ಲಿ

ಲಯವಾಗಿ ಹೋಗಿದ್ದೆನೋ ಏನೊ! ಯಾವುದಕ್ಕೆ
ಹೋಲಿಸಿ ಹೇಳಲಿ ನಾನು ಈ ಅವಸ್ಥೆಯನ್ನು?
ಯೋಗಿಯ ಸಮಾಧಿಯೊಳಗಿದ್ವೈತವೋ, ಅಥವಾ
ಮಹಾಭ್ರಾಂತಿಯೋ, ಪರಮಶಾಂತಿಯೋ? ಇದನ್ನು

ಈ ಭವದ ಅನುಭವದ ಯಾವುದೇ ಆಕೃತಿ-
ಯೊಳಗೆ ಹಿಡಿದು ತೋರಿಸಲಾರೆ. ಅಷ್ಟು ಹೊತ್ತೂ
ಬಿದ್ದುಕೊಂಡಿದ್ದಾಗ ಈ ದೇಹ ಶಸ್ತ್ರಕ್ರಿಯೆಗೊಳಗಾಗುತ್ತ
'ನೈನಂಛಿಂದಂತಿ ಶಸ್ತ್ರಾಣಿ'ಯಾದ ಈ ಆತ್ಮ ಎಲ್ಲಿತ್ತು?

೨

ಥಟ್ಟನೆಚ್ಚರವಾಗಿ ಕಣ್ಣು ಕುಕ್ಕುವ ಬೆಳಕು. ಪ್ರತ್ಯಕ್ಷ-
ವಾದ ಪಂಚೇಂದ್ರಿಯ ಪ್ರಪಂಚದೊಳಗೆರಡು
ಕರುಣಾಪೂರ್ಣ ಕಣ್ಣುಗಳು. ಹಣೆಮೇಲೆ ಹೆಣ್ಣು
ಕೈ ಬೆರಳುಗಳ ಸಾಂತ್ವನದ ಸ್ಪರ್ಶ. ಆ ಕುರುಡು

ಕತ್ತಲೆಯಿಂದ ಈ ಬೆಳಕಿನೆಚ್ಚರದೊಳಗೆ ಬಂ-
ದದ್ದು ಯಾವಾಗ? ನಾನಾರು? ಯಾಕಿದ್ದೇನೆ? ಎಲ್ಲಿ-
ದ್ದೇನೆ? ಅರೆ! ನನ್ನ ಶರೀರವೆಲ್ಲಿ? ನೋಡುತ್ತೇನೆ
ಮೈ ತುಂಬ ಏನೇನೊ ನಳಿಗೆಗಳು! ಕಾಡುಬಳ್ಳಿ-

ಗಳು ಹೆಣೆದುಕೊಂಡಿರುವೊಂದು ಸಸ್ಯವಿಶೇಷದಂ-
ತಿದ್ದೇನೆ! ಈ ಮನುಷ್ಯತ್ವದಿಂದ ಹಿಮ್ಮುಖವಾಗಿ
ಸಸ್ಯ ಸ್ಥಿತಿಗೆ ಪಯಣ ಮಾಡುತ್ತ ಸ್ಥಗಿತಗೊಂ-
ಡಿದ್ದೇನೆಯೆ? ಅಥವಾ ಅಲ್ಲಿಂದ ಮೇಲ್ಮುಖವಾಗಿ

ಬರುತ್ತಲಿದ್ದೇನೆಯೆ? ಅಲ್ಲ, ಮರವಲ್ಲ, ಮನುಷ್ಯ.
ಈಗೀಗ ಪ್ರಜ್ಞೆಯೊಳಕ್ಕೆ ತೇಲಿಬರುತ್ತಲಿವೆ ನಿಧ
ನಿಧಾನವಾಗಿ ನೆನಪುಗಳು. ಕ್ಷೀಣದನಿಯಿಂದ
ಕೇಳಿದೆನು ಬಳಿನಿಂತ ಹಸಿರು ಮುಸುಕಿನೊಳಿದ್ದ

ಹೆಣ್ಣನ್ನು: 'ನಾನು ಎಲ್ಲಿದ್ದೇನೆ? ಟೈಮೆಷ್ಟು?' 'ನೀವೀಗ
ಇಂಟೆನ್ಸಿವ್ ಕೇರ್ ಯೂನಿಟ್ಟಿನಲ್ಲಿದ್ದೀರಿ. ಸಮಯ
ಮಧ್ಯಾಹ್ನ ಮೂರೂವರೆ. ನಿಮಗೆ ಆಪರೇಷನ್ ಆಗಿ
ಇಪ್ಪತ್ತೆಂಟು ಗಂಟೆಗಳಾಯ್ತು ಇನ್ನಿಲ್ಲ ಅಪಾಯ.'

೩

ದತ್ತವಾಗಿದೆ ಮತ್ತೆ ವ್ಯಕ್ತಮಧ್ಯದ ಬದುಕು;
ಮೊದಲಿಗಿಂತಲೂ ಹೊಸತಾಗಿ ಕಂಡಿದೆ ಲೋಕ.
ಈವರೆಗು ಮಹಾವಿಸ್ಮೃತಿಯಲ್ಲಿ ಕರಗಿ, ಹೊರಬಂದ
ಅಸ್ತಿತ್ವಕ್ಕೆ ಎಲ್ಲವನ್ನೂ ತಬ್ಬಿಕೊಳ್ಳುವ ತವಕ.

—ಇದು ಜಿಎಸ್‌ಎಸ್ ಅವರ 'ಅವಸ್ಥೆ' (ವ್ಯಕ್ತಮಧ್ಯ, ಪು. 49) ಎಂಬ ಕವಿತೆ

**ವ್ಯಾ**ವಹಾರಿಕ ಪ್ರಪಂಚದಲ್ಲಿ ದೈನಂದಿನ ಚಟುವಟಿಕೆಗಳಲ್ಲಿ ನಾನು, ನೀನು, ಕಾಣಿಸುತ್ತವೆ. ವ್ಯಕ್ತಿಗಳು ನಾಮರೂಪಗಳಾಗಿ ಕಾಣಿಸುತ್ತವೆ. ಹಿಂದು ಮುಂದು ನಿನ್ನೆ ನಾಳೆಗಳು ನಮಗೆ ಗೊತ್ತಿರುತ್ತವೆ. ದೇಹ ಬೇರೆ ಆತ್ಮ ಬೇರೆ ಅನ್ನಿಸುತ್ತಿರುತ್ತದೆ.

ಯೋಗಿಯ ಸಮಾಧಿಯ ಸ್ಥಿತಿಯಲ್ಲಿ ಇವು ಯಾವುದೂ ಇರುವುದಿಲ್ಲವಂತೆ. ಪರಮಶಾಂತಿಯಲ್ಲಿ ಈ ಯಾವ ದ್ವಂದ್ವಗಳೂ ಇರುವುದಿಲ್ಲವಂತೆ. ಸುಷುಪ್ತಿಯಲ್ಲಿ ಇವು ಯಾವುವೂ ಇರುವುದಿಲ್ಲವಂತೆ. ಸೃಷ್ಟಿಪೂರ್ವದಲ್ಲೂ ಇವು ಯಾವುವೂ ಇರಲಿಲ್ಲವಂತೆ.

ಸೃಷ್ಟಿಪೂರ್ವದ ಪ್ರಳಯದಲ್ಲಿ ಹೆಪ್ಪುಗಟ್ಟಿದ ಕಪ್ಪು ಮಾತ್ರ ಇತ್ತು. ಅದು ಕಾಲಾತೀತವಾಗಿತ್ತು. ಅದ್ವೈತದ ಸ್ಥಿತಿಯಲ್ಲಿ ಸಃ ಮತ್ತು ಅಹಂ ಎರಡೂ ಒಂದಾಗಿಬಿಡುತ್ತವೆ ಎಂದು ಹಿರಿಯರು ಹೇಳುತ್ತಾರೆ. ಇಂಥದೊಂದು ಅನುಭವ, ತನ್ನ ಹೃದಯಕ್ಕೆ ಶಸ್ತ್ರಚಿಕಿತ್ಸೆಗೂ ಮುಂಚೆ ಅರಿವಳಿಕೆಯನ್ನು (ಅನಸ್ಥೇಸಿಯಾ) ಕೊಟ್ಟಾಗ, ತನಗೆ ಆದದ್ದನ್ನು 'ಅವಸ್ಥೆ' ಕವಿತೆಯ ನಿವೇದಕ ನಮ್ಮ ಮುಂದೆ ಇಡುತ್ತಾನೆ.

ಕವಿತೆಯ ಎರಡನೆಯ ಭಾಗದಲ್ಲಿ ಶಸ್ತ್ರಚಿಕಿತ್ಸೆ ಮುಗಿದದ್ದು ಗೊತ್ತಿಲ್ಲದೆ ಎಚ್ಚರದ ಸ್ಥಿತಿಗೆ ಬಂದಾಗ, ಕಣ್ಣಿಗೆ ಬೆಳಕು ಕುಕ್ಕುತ್ತದೆ. ಪಂಚೇಂದ್ರಿಯ ಪ್ರಪಂಚದಲ್ಲಿ ಎರಡು ಕರುಣಾಪೂರ್ಣ ಕಣ್ಣು ಕಾಣುತ್ತವೆ. ಹಣೆ ಮೇಲೆ ಹೆಣ್ಣಿನ ಬೆರಳು ಸಮಾಧಾನವನ್ನು ತರುವ ಸ್ಪರ್ಶ ಅನುಭವಕ್ಕೆ ಬರುತ್ತದೆ.

ಕವಿತೆಯ ನಿವೇದಕನಿಗೆ ತನ್ನನ್ನು 'ಇಲ್ಲವಾಗಿಸಿದ್ದ' ಕತ್ತಲೆಯಿಂದ ಬೆಳಕಿಗೆ ಮತ್ತು ಎಚ್ಚರಕ್ಕೆ ಬಂದದ್ದು ಯಾವಾಗ ಎನ್ನುವ ಪ್ರಶ್ನೆ ಮೂಡುತ್ತದೆ. ನಾನು ಯಾರು? ಯಾಕಿದ್ದೇನೆ? ಎಲ್ಲಿದ್ದೇನೆ? ಅರೆ ನನ್ನ ಶರೀರವೆಲ್ಲಿ? ಎನ್ನುವ ಪ್ರಶ್ನೆಗಳು ಧುತ್ತೆಂದು ಎದುರಾಗುತ್ತವೆ. ಅದಿನ್ನೂ ಪೂರ್ಣ ಎಚ್ಚರದ ಸ್ಥಿತಿಯಲ್ಲವಾದ್ದರಿಂದ, ತನ್ನ ದೇಹದ ಕಡೆ ನೋಡಿದಾಗ ಮೈತುಂಬ ಏನೇನೊ ನಳಿಗೆಗಳು ಕಾಣಿಸುತ್ತವೆ. "ಕಾಡುಬಳ್ಳಿಗಳು ಹಣೆದುಕೊಂಡಿರುವ ಒಂದು ಸಸ್ಯವಿಶೇಷದಂತಿದ್ದೇನೆ" ಎಂದುಕೊಳ್ಳುತ್ತಾನೆ. ತಾನು ಮನುಷ್ಯನಾಗಿದ್ದವನು ಸಸ್ಯಸ್ಥಿತಿಗೆ ಹೋಗಿ ನಿಂತಿದ್ದೇನೆಯೆ ಎಂದು ಭ್ರಮಿಸುತ್ತಾನೆ. ಅಥವಾ ಸಸ್ಯಸ್ಥಿತಿಯಿಂದ ಈಗ ಮನುಷ್ಯಸ್ಥಿತಿಗೆ ಬರುತ್ತಿದ್ದೇನೆಯೆ ಎಂದು ಪ್ರಶ್ನಿಸಿಕೊಳ್ಳುತ್ತಾನೆ. ತಾನು ಮರವಲ್ಲ, ಮನುಷ್ಯ ಎನ್ನುವುದು ಸ್ಪಷ್ಟವಾಗುವುದಕ್ಕೆ ಒಂದಿಷ್ಟು ಸಮಯ ಹಿಡಿಯುತ್ತದೆ.

ನಿಧಾನವಾಗಿ ನೆನಪುಗಳು ಬರುವ ಹಾಗೆ ಕಾಣಿಸುತ್ತವೆ. ಹಸುರು ಮುಸುಕಿನಲ್ಲಿದ್ದ ಪಕ್ಕದ ಹೆಣ್ಣನ್ನು 'ನಾನು ಎಲ್ಲಿದ್ದೇನೆ? ಟೈಮೆಷ್ಟು?' ಎಂದು ನಿವೇದಕ ಕೇಳುತ್ತಾನೆ, ಅವಳು ಹೇಳುತ್ತಾಳೆ:

**ನೀವೀಗ**
**ಇಂಟೆನ್ಸಿವ್ ಕೇರ್ ಯೂನಿಟ್ಟಿನಲ್ಲಿದ್ದೀರಿ, ಸಮಯ**
**ಮಧ್ಯಾಹ್ನ ಮೂರೂವರೆ. ನಿಮಗೆ ಆಪರೇಷನ್ ಆಗಿ**
**ಇಪ್ಪತ್ತೆಂಟು ಗಂಟೆಗಳಾಯ್ತು, ಇನ್ನಿಲ್ಲ ಅಪಾಯ**

ಮೂರನೆಯ ಭಾಗದಲ್ಲಿ ನಿವೇದಕನಿಗೆ ತನಗೆ ಮತ್ತೊಮ್ಮೆ ಜನ್ಮಸಿಕ್ಕ ಹಾಗೆ ಅನಿಸುತ್ತದೆ. ಸುತ್ತಲಿನ ಪಂಚಭೂತಗಳ ಪ್ರಪಂಚ ಹೊಸತಾಗಿ ಕಾಣುತ್ತದೆ. ಇಲ್ಲಿಯವರೆಗೂ ಎಲ್ಲವನ್ನು ಮಹಾವಿಸ್ಮೃತಿಯಲ್ಲಿ ಕಳೆದುಕೊಂಡಿದ್ದು ಈಗ ಅಸ್ತಿತ್ವವನ್ನು ಪಡೆದ ನಿವೇದಕನಿಗೆ ಎಲ್ಲವನ್ನೂ ತಬ್ಬಿಕೊಳ್ಳಬೇಕು ಎನ್ನುವ ಪ್ರೀತಿ ಉಕ್ಕುತ್ತದೆ.

* * *

ಇದಿಷ್ಟು ಕವಿತೆಯ ವಸ್ತು. ಒಂದು ರೀತಿಯಲ್ಲಿ ಇದು ಮೃತ್ಯುಲೋಕದಲ್ಲಿದ್ದು ಬಂದವನ ಅನುಭವ. ಬದುಕಿನ ಲೋಕದಲ್ಲಿದ್ದಾಗ ನಾವು ನಮ್ಮ ಅಹಂಕಾರದಲ್ಲಿ, ಸ್ವಾರ್ಥದಲ್ಲಿ, ಸ್ವಪ್ರತಿಷ್ಠೆಯಲ್ಲಿ ನಮ್ಮ ಅಧಿಕಾರವನ್ನು ಚಲಾಯಿಸುತ್ತ, ನಾವು ಮಹತ್ವವಾದದ್ದನ್ನು ಸಾಧಿಸುವುದಕ್ಕೆ ಉಳಿದವರು ಅಡ್ಡಿಯಾಗುತ್ತಾರೆ ಎನ್ನುವ ಅಸಹನೆಯಲ್ಲಿ ನಮ್ಮ ಸುತ್ತಲಿನ ಪ್ರಪಂಚ ಅದ್ಭುತವಾದದ್ದು ಎನ್ನುವುದನ್ನು ಮರೆತಿರುತ್ತೇವೆ. ಅದು ನಮಗೆ ಎಷ್ಟು ಬೇಕಾದದ್ದು, ಅದು ಪ್ರೀತಿಸಬೇಕಾದ ಪ್ರಪಂಚ, ತಬ್ಬಿಕೊಳ್ಳಬೇಕಾದ ಪ್ರಪಂಚ ಅನ್ನುವುದನ್ನು ಮರೆತು ಅದನ್ನು ದೂರವೇ ಇಟ್ಟಿರುತ್ತೇವೆ. ಹೆಣ್ಣು ನಮ್ಮನ್ನು ಕಾಪಾಡುವ ಶಕ್ತಿ, ನಮಗೆ ಸಮಾಧಾನ ಕೊಡುವ ಶಕ್ತಿ, ನಮಗೆ ಧೈರ್ಯಕೊಡುವ ಶಕ್ತಿ ಎನ್ನುವುದನ್ನು ಮರೆತುಬಿಟ್ಟಿರುತ್ತೇವೆ. ಇದು ಕವಿತೆ ನಮಗೆ ಕಲಿಸುತ್ತಿರುವ ಪಾಠವೋ? ಹೀಗೆ ಪಾಠ ಕಲಿಸುವ ಉದ್ದೇಶ ಈ ಕವಿತೆಗಿದೆಯೆ?

ನಾನು ಎನ್ನುವುದು ಕಾಣಿಸಿಕೊಳ್ಳುವುದಕ್ಕೆ ಪೂರ್ವದಲ್ಲಿ 'ನಾನು' ಏನಾಗಿತ್ತು? ಈ ನಾನು ಅಷ್ಟು ಮುಖ್ಯವೊ ಅಥವಾ ನನ್ನ ಸುತ್ತಲಿನ ಪ್ರಪಂಚವೊ? ಬದುಕುವುದು ಅಂದರೇನು? ನನ್ನ ಸುತ್ತಲಿನ ಪ್ರಪಂಚದ ಜೊತೆಗೆ ಮಧುರವಾದ ಸಂಬಂಧವೇ ಅಲ್ಲವೆ? ಹಾಗಿದ್ದರೆ ನಾನು ಈ ಸಂಬಂಧವನ್ನು ಕ್ಷಣಕ್ಷಣಕ್ಕೂ ಕಳೆದುಕೊಳ್ಳುವ ಹಾಗೆ ಏಕೆ ಬದುಕುತ್ತೇನೆ? ಇಂಥ ಪ್ರಶ್ನೆಗಳನ್ನು ಕೇಳಿಕೊಳ್ಳುವಂತೆ ಮಾಡುವುದೇ ಈ ಕವಿತೆಯ ಉದ್ದೇಶವೊ? ಅದೇ ಅದರ ಅರ್ಥವೊ?

ಅಮೂರ್ತವಾದ ಸಾವಿನ ಅರಮನೆ ಸುಖವಾದದ್ದು ಅಂತ ಕವಿತೆ ಹೇಳುವುದಿಲ್ಲ. ಅದರ ನೆರಮನೆಯಲ್ಲಿ ಮೂರ್ತವಾದ ಬದುಕು ಅದ್ಭುತವಾದದ್ದು ಎಂದು ಕವಿತೆ ಹೇಳುತ್ತಿದೆ. ಕಾಲಾತೀತದಲ್ಲಿ ಲಯವಾಗಿ ಹೋಗುವುದು ಯೋಗಿಯ ಸಮಾಧಿ ಯೊಳಗಿನದ್ವೈತವೊ ಅಥವಾ ಮಹಾಭ್ರಾಂತಿಯೋ ಎಂದು ಪ್ರಶ್ನಿಸುವ ನಿವೇದಕನಿಗೆ ಅವೆರಡೂ ಒಂದೇ ಅನ್ನಿಸುವ ಹಾಗೆ ಕಾಣುತ್ತದೆ. ಅಂತಹ ಸ್ಥಿತಿಯಲ್ಲಿ 'ನೈನಂ ಛಿಂದಂತಿ ಶಸ್ತ್ರಾಣಿ' ಎನ್ನುವ ಆತ್ಮಕ್ಕೂ ಅರ್ಥವಿಲ್ಲ ಅಂತ ಅವನಿಗೆ ಅನ್ನಿಸುತ್ತಿರಬಹುದು.

ದೇಹ ಮತ್ತು ಆತ್ಮಗಳು ಕೂಡಿರುವ ಸ್ಥಿತಿಯಲ್ಲಿ ಪಂಚಭೂತಗಳ ಪ್ರಪಂಚದ ಅದ್ಭುತವನ್ನು ಅನುಭವಿಸುವ ಬದುಕು ಮುಖ್ಯ ಅಂತ ಈ ಕವಿತೆ ಹೇಳುತ್ತಿದೆ ಅನ್ನಿಸುತ್ತೆ. ಇದು ನಮಗೆಲ್ಲಾ ಗೊತ್ತಿರುವ ವಿಚಾರವೇ ಅಲ್ಲವೆ? ವಿಚಾರ ಗೊತ್ತಿರುವುದು ಬೇರೆ, ಅನುಭವದಿಂದ ಆ ವಿಚಾರ ನಮ್ಮ ಅರಿವಿನ ಅಂಶವಾಗುವುದು ಬೇರೆ. ಹಾಗೆ ಹೃದಯಶಸ್ತ್ರ ಚಿಕಿತ್ಸೆಯ ಒಂದು ಅನುಭವದ ಮೂಲಕ ನಮ್ಮ ಅರಿವಿಗೆ ತಂದುಕೊಡುವ ಬದುಕಿನ ಬಗ್ಗೆ ಒಳನೋಟವನ್ನು ಈ ಕವಿತೆ ನಮ್ಮ ಮುಂದಿಡುತ್ತದೆ.

* * *

ಕವಿತೆ ಮಾತಾಡಿದಂತೆ ಇದೆ. ಆದರೆ ಮಾತಿನಲ್ಲಿ ಪ್ರಾಸಗಳಿರುವುದಿಲ್ಲ. ಮಾತಿನಲ್ಲಿ ಒಂದೊಂದು ಸಾಲಿಗೂ ಇಪ್ಪತ್ತು ಮಾತ್ರೆಯನ್ನು ನಿಗದಿಪಡಿಸಿರುವುದಿಲ್ಲ. ಅಂತಹ ನಾಕು ನಾಕು ಸಾಲಿನ ಆಕೃತಿಯೊಂದು ನಮ್ಮ ಕಣ್ಣಮುಂದಿಡುವುದಿಲ್ಲ. ಮಾತಿನಲ್ಲಿ ಅರಿವಳಿಕೆಯಿಂದ ಬರುವ ವಿಸ್ಮೃತಿಯನ್ನು ಕತ್ತಲಾಗಿ ಚಿತ್ರಿಸುವ ಕಲ್ಪನಾಶಕ್ತಿ ಕೆಲಸಮಾಡುವುದಿಲ್ಲ. ಆದರೆ ಈ ಕವಿತೆಯಲ್ಲಿ ಅದೆಲ್ಲವೂ ಇದೆ. ಏಕೆಂದರೆ ಇದು ಕವಿತೆಯಾಗಿದೆ. ಕವಿತೆಯೆಂದರೆ ಬರೀ ಮಾತುಗಳನ್ನು ಉದ್ದ ಗಿಡ್ಡ ಸಾಲುಗಳಾಗಿ ಜೋಡಿಸುವ ಕೆಲಸವಲ್ಲ. ಅದು ಹ್ರಸ್ವ ದೀರ್ಘಗಳ, ಅಲ್ಪಪ್ರಾಣ ಮಹಾಪ್ರಾಣಗಳ, ಒತ್ತಕ್ಷರವಿರುವ ಮತ್ತು ಇಲ್ಲದಿರುವ, ಸನಾದ ಸ್ವರವ್ಯಂಜನಗಳ ಕಲಾತ್ಮಕ ಹೊಂದಿಸುವಿಕೆಯೂ ಆಗಿರುತ್ತದೆ. ಕವಿತೆಗೆ ಅದರ ಅನುಭವದ ಮನೋರೂಪ ಒಂದಿದ್ದರೆ, ಅದಕ್ಕೆ ಹೊಂದುವಂತೆ ಕಣ್ಣಿಗೆ ಕಾಣುವ ಚಾಕ್ಷುಕ ರೂಪ ಹಿಂದಿರುತ್ತದೆ. ಅದನ್ನು ಕಂಡುಕೊಳ್ಳುವುದು ಕಲೆಗಾರಿಕೆಯಾಗುತ್ತದೆ. ಈ ಕವಿತೆ, ಕಾವ್ಯವೊಂದು ಕಲೆ ಎನ್ನುವುದನ್ನೂ ಹೇಳುತ್ತಿದೆ.

* * *

ಅರಿವಳಿಕೆ ಸೂಜಿಮೊನೆ, ಶಸ್ತ್ರಕ್ರಿಯೆ, ನಳಿಗೆಗಳು, ಇಂಟೆನ್ಸಿವ್ ಕೇರ್ ಯೂನಿಟ್, ಆಪರೇಷನ್, ಇವಿಷ್ಟೇ ಶಬ್ದಗಳಲ್ಲಿ ಇಡೀ ಆಸ್ಪತ್ರೆಯ ವಾತಾವರಣ, ಶಸ್ತ್ರಚಿಕಿತ್ಸೆಯ ಸಂದರ್ಭ, ಸೃಷ್ಟಿಪೂರ್ವದವರೆಗೂ ಬದುಕಿನ ಹಿನ್ನೋಟ, ದೇಹ ಆತ್ಮಗಳ ಸಂಬಂಧ, ಪಂಚಭೂತಗಳಿಂದಾದ ಪಂಚೇಂದ್ರಿಯ ಪ್ರಪಂಚ, ಬದುಕಿನ ಅದ್ಭುತ, ಸಾವಿನ ಸಪ್ಪೆತನವನ್ನೆಲ್ಲ ಕಟ್ಟಿಕೊಂಡು ಬಂದು, ಅವಕ್ಕೆ ಸಂಬಂಧಿಸಿದ ತಾತ್ವಿಕ ಚಿಂತನೆಯನ್ನೆಲ್ಲ ಎಬ್ಬಿಸುವ ಈ ಕವಿತೆ ಅಪೂರ್ವವಾಗಿದೆ.

* * *

ಒಂದು ಕವಿತೆಯಲ್ಲಿ ತಾತ್ಕಾಲಿಕ ಅನುಭವಷ್ಟೆ ಇರುವುದಿಲ್ಲ. ಈ ಕವಿತೆಯಲ್ಲಿ ಋಗ್ವೇದದಲ್ಲಿರುವ 'ನಾಸದೀಯ ಸೂಕ್ತ'ದ ನೆನಪೂ ಸೇರಿಕೊಂಡಿದೆ. ಅದನ್ನು ನೆನಪು ಮಾಡಿಕೊಳ್ಳುವುದಕ್ಕಾಗಿ ಈ ಸಾಲುಗಳನ್ನು ನೋಡಬಹುದು:

**ನಾಸಾದೀಸನ್ನೋ ಸದಾಸೀತ್ ತದಾನೀಂ ನಾಸೀದ್ರಜೋ ನೋ ವ್ಯೋಮಾ ಪರೋಯತ್।**
**ಕಿಮಾವರೀವಃ ಕುಹ ಕಸ್ಯ ಶರ್ಮನ್ನಂಭಃ ಕಿಮಾಸೀದ್ಗಹನಂ ಗಭೀರಮ್।**
**ತಮ ಆಸೀತ್ ತಮಸಾ ಗೂಳ್ಹಮಗ್ರೇಪ್ರಕೇತಂ ಸಲಿಲಂ ಸರ್ವಮಾ ಇದಂ।**
**ತುಚ್ಛ್ಯೇನಾಭ್ವಪಿಹಿತಂ ಯದಾಸೀತ್ ತಪಸಸ್ತನ್ಮಹಿನಾಜಾಯತೈಕಮ್।**

(ಋ. 10.129. 1, 3)

ಈ ಕವಿತೆಯ ಬಗ್ಗೆ ಮಾತಾಡುತ್ತಿದ್ದಾಗ ಜಿಎಸ್‌ಎಸ್ ಅವರು ವಿವೇಕಾನಂದರ ಒಂದು ಅನುಭವವನ್ನು ನೆನಪುಮಾಡಿಕೊಂಡರು. ವಿವೇಕಾನಂದರು ತಮಗೆ ನಿರ್ವಿಕಲ್ಪ ಸಮಾಧಿಗೆ ಹೋಗಬೇಕೆಂದು ರಾಮಕೃಷ್ಣ ಪರಮಹಂಸರಲ್ಲಿ ಕಾಡುತ್ತಿದ್ದರು. ಒಂದು ಸಾರಿ ರಾಮಕೃಷ್ಣರು ವಿವೇಕಾನಂದರನ್ನು ನಿರ್ವಿಕಲ್ಪ ಸಮಾಧಿಗೆ ಹೋಗಲಿಕ್ಕೆ ಬಿಟ್ಟರು. ಆಮೇಲೆ ಸಮಾಧಿಯಿಂದ ಎಚ್ಚರಕ್ಕೆ ಬರಲಿಕ್ಕೆ ಬಿಟ್ಟರು. ಎಚ್ಚರವಾದ ಕೂಡಲೆ ವಿವೇಕಾನಂದರು ಕೇಳಿದ ಪ್ರಶ್ನೆ "ನನ್ನ ಶರೀರ ಎಲ್ಲಿ?"

ನನಗೆ ಗೊತ್ತಿಲ್ಲದ ಇನ್ನೊಂದು ವಿಷಯವನ್ನು ಜಿಎಸ್‌ಎಸ್ ಹೇಳಿದರು—ಇಂಟೆನ್ಸಿವ್ ಕೇರ್ ಯೂನಿಟ್‌ನಲ್ಲಿರುವವರು ಹಸುರುಬಟ್ಟೆಯನ್ನು ಧರಿಸುತ್ತಾರಂತೆ. ಭೂಮಿಯೂ ಹಸಿರುಬಟ್ಟೆಯನ್ನು ಧರಿಸುತ್ತಾಳೆ!

■

## 'ಸೌಂದರ್ಯ ಸಮೀಕ್ಷೆ' ಮತ್ತು ನವೋದಯ ಮೀಮಾಂಸೆ

ಡಾ|| ಕೆ. ವಿ. ನಾರಾಯಣ

**ಚಾ**ರಿತ್ರಿಕವಾದ ಕಾರಣಗಳಿಂದ ಉಂಟಾದ ನವೋದಯವು ಕನ್ನಡ ಸಾಹಿತ್ಯದಲ್ಲಿ ಒಂದು ಹೊಸತನವನ್ನು ತಂದಿತಷ್ಟೆ. ಈ ಹೊಸತನ ಸೃಜನಶೀಲತೆಯಲ್ಲಿ ಮೈದಾಳಿ ಬಂದಂತೆ ವಿಮರ್ಶಕನ ಪ್ರಜ್ಞೆಯಲ್ಲೂ ಕಾಣತೊಡಗಿತು. ಹಾಗೆ ನೋಡಿದರೆ ಇವೆರಡೂ ಅಕ್ಕಪಕ್ಕದಲ್ಲೇ ಬೆಳೆದಂತೆ ತೋರುತ್ತದೆ. ಇದರ ಜೊತೆಗೆ ಸಾಹಿತ್ಯವನ್ನು ವಿಶೇಷವಾಗಿ ಅಧ್ಯಯನ ಮಾಡುವುದು ಶಿಕ್ಷಣ ಪ್ರಣಾಲಿಯಲ್ಲಿ ಸೇರಿಕೊಂಡು ಬಂದದ್ದೂ ಕೂಡಿತು. ಅದರಿಂದ 'ಸಾಹಿತ್ಯ'ದ ಜತೆ 'ಸಾಹಿತ್ಯವನ್ನು ಕುರಿತ ಸಾಹಿತ್ವ'ವೂ ಬೆಳೆಯಿತು. ಇಂಗ್ಲಿಷಿನ ಮೂಲಕ ತೆರೆದುಕೊಂಡ ಪಾಶ್ಚಾತ್ಯ ಸಾಹಿತ್ಯ ಮತ್ತು ಮೀಮಾಂಸೆಗಳ ಬೆಳಕಿನಲ್ಲಿ ಆವರೆಗೆ ಮಾದರಿಗಳಾಗಿದ್ದ ಪ್ರಾಚೀನ ಸಾಹಿತ್ಯ ಮತ್ತು ಮೀಮಾಂಸೆಗಳನ್ನು ನೋಡುವುದು; ಪರಿಣಾಮವಾಗಿ ಈವರೆಗೆ ಸ್ವೀಕರಿಸಿದ್ದ ಮಾದರಿಗಳಲ್ಲಿ ಅಕಾಲಿಕವಾದದ್ದನ್ನು ಕೈಬಿಟ್ಟು, ಸೂಕ್ತವಾದ ಪಾಶ್ಚಾತ್ಯಮಾದರಿಗಳನ್ನು ಸ್ವೀಕರಿಸುವುದು ಪ್ರಾರಂಭವಾದವು. ಈ ಚಟುವಟಿಕೆಯ ಮುಂಚೂಣಿಯಲ್ಲಿ ಕವಿಗಳೇ ಇದ್ದರು. ಎಂದರೆ ಸೃಜನಶೀಲ ಚಟುವಟಿಕೆಯಲ್ಲಿ ತೊಡಗಿದವರೇ ಸೂಕ್ತವಾದ ವಿಮರ್ಶಾನೆಲೆಗಳನ್ನೂ ಸಿದ್ಧಪಡಿಸುವುದು ಕಂಡುಬರುತ್ತದೆ. ಈ ಸಂಗತಿಗಳ ಹಿನ್ನೆಲೆಯಲ್ಲಿ ಡಾ. ಜಿ.ಎಸ್. ಶಿವರುದ್ರಪ್ಪನವರ ಮಹಾಪ್ರಬಂಧ 'ಸೌಂದರ್ಯ ಸಮೀಕ್ಷೆ'ಯನ್ನು ಗಮನಿಸಬೇಕಾಗುತ್ತದೆ.

'ಸೌಂದರ್ಯ'ವೆಂಬ ಸಂಪ್ರತ್ಯಯ (concept) ಭಾರತೀಯ ಕಾವ್ಯ ಮೀಮಾಂಸೆಗೆ ಅಪರಿಚಿತವಾದುದೇನೂ ಅಲ್ಲ. ಕಾವ್ಯದ ಚರ್ಚೆಯ ಸಂದರ್ಭದಲ್ಲಿ ಅದರ ಪ್ರಾಸಂಗಿಕ ಉಲ್ಲೇಖಗಳು ಬಂದಿವೆ. ಅವುಗಳನ್ನು ಆಧರಿಸಿ ಭಾರತೀಯರ ಸೌಂದರ್ಯಸಂಬಂಧಿ ವಿಚಾರಗಳನ್ನು ಪುನಾರಚಿಸುವ ಬೇರೆ ಬೇರೆ ಪ್ರಯತ್ನಗಳು ನಡೆದಿವೆ. (ಈ ಪುನಾರಚನೆಗೆ ಕಾವ್ಯಮೀಮಾಂಸೆಯ ಜತೆಗೆ ಕಲೆಯ ವಿವಿಧ ಪ್ರಕಾರಗಳಾದ ವಾಸ್ತುಶಿಲ್ಪ, ಸಂಗೀತ, ನೃತ್ಯ, ಚಿತ್ರಕಲೆಗಳ ನೆರವನ್ನು ಪಡೆದಿರುವ ಸಂದರ್ಭಗಳು ಕನ್ನಡದಲ್ಲಿ ಇಲ್ಲವೆನ್ನುವಷ್ಟು ಕಡಿಮೆ.) ಕಾವ್ಯಾನುಭವವನ್ನು ಸೌಂದರ್ಯಾನುಭವವೆಂದು ಕರೆಯುವುದಾದರೆ ಈ ಅನುಭವದ ಸ್ವರೂಪವನ್ನು ಚರ್ಚಿಸುವುದರ ಜತೆಗೆ ಅದರ ಕಾರಣ ಮೀಮಾಂಸೆಯನ್ನೂ ಮಾಡುವುದು ತೀರಾ ಅವಶ್ಯವಾದ ಕೆಲಸವೇನೋ ಸರಿ. ಕನ್ನಡದ ಸಂದರ್ಭದಲ್ಲಿ ಈ ಬಗೆಯ ಕೆಲಸವನ್ನು

ಈ ಪ್ರಬಂಧದಲ್ಲಿ ಮೊದಲಬಾರಿಗೆ ಮಾಡಲಾಗಿದೆ ಎನ್ನುವುದನ್ನು ಗಮನಿಸಬೇಕು. ಒಂದು ಕಾವ್ಯ ಒಟ್ಟಾಗಿ ಇಲ್ಲವೆ ಅಂಶಿಕವಾಗಿ ಓದುಗನನ್ನು ಆಕರ್ಷಿಸಲು ಇರುವ ಕಾರಣಗಳನ್ನು ಸಾಂಪ್ರದಾಯಿಕವಲ್ಲದ ಅನ್ಯತ್ರನೆಲೆಗಳಲ್ಲಿ ಹುಡುಕುವ ಯತ್ನ ಈ ಪ್ರಬಂಧದಲ್ಲಿದೆ. ಸಾಂಪ್ರದಾಯಿಕವಾಗಿ ಅಲಂಕಾರ, ರಸ, ಧ್ವನಿ, ರೀತಿ ಮುಂತಾದ ಪರಿಕರಗಳನ್ನು ಬಳಸಿ ಕಾವ್ಯರಚನೆ ಓದುಗನಿಗೆ ನೀಡುವ ಅನುಭವವನ್ನು ವಿವರಿಸಲು ಯತ್ನಿಸಲಾಗುತ್ತಿತ್ತು. ಈ ಪರಿಕರಗಳು, ಅಭಿವ್ಯಕ್ತಗೊಂಡ ಕಾವ್ಯದ ಭಾಷಿಕ ಸ್ವರೂಪವನ್ನು ಆಧರಿಸಿ, ಪ್ರಾಸಂಗಿಕವಾಗಿ ಗಮನಾರ್ಹವಾದ ನಿಲುವುಗಳಿಗೆ ಕಾರಣವಾದರೂ ಸರ್ವತ್ರವ್ಯಾಪ್ತಿಯನ್ನು ಪಡೆಯುವಂತಿರಲಿಲ್ಲ. ಅದಕ್ಕಾಗಿಯೇ ಅನ್ಯತ್ರನೆಲೆಗಳು ಬೇಕೆನಿಸಿದ್ದವು. ಒಂದು ವರ್ಣನೆಯ ಹೊಸತನವೇ ಅದರ ಆಕರ್ಷಣೆಗೆ ಕಾರಣವೆಂಬ ಮಾತು ಪ್ರತಿಭೆಯ ಚರ್ಚೆಯ ಸಂದರ್ಭದಲ್ಲಿ ಬಂದಿದ್ದರೂ ಅದನ್ನು ಇಡೀ ಕಾವ್ಯಾನುಭವದ ವ್ಯಾಪ್ತಿಯಲ್ಲಿ ವಿವರಣೆಗೆ ತಂದದ್ದು ಈ ಪ್ರಬಂಧದ ಮುಖ್ಯಸಾಧನೆ. ನವೋದಯದ ಪ್ರಮುಖ ಪ್ರಯತ್ನಗಳು ಈ ದಿಕ್ಕಿನಲ್ಲೇ ಇದ್ದು, ಆ ಅಂಶದ ಪ್ರಾತಿನಿಧಿಕ ಮಹತ್ವಗಳನ್ನು ಇಲ್ಲ ಗುರುತಿಸಬಹುದಾಗಿದೆ. ಅವುಗಳಲ್ಲಿ ಕೆಲವನ್ನು ಮೊದಲು ನೋಡಬಹುದು.

ಕಾವ್ಯಕ್ಕೆ ಕವಿಯೇ ಕಾರಣನೆಂಬ ಮಾತು ಅನುಷಂಗಿಕವಾಗಿ ಪ್ರಾಚೀನರಲ್ಲಿ ಕಂಡರೂ ಅದನ್ನು ಅವರು ಗಣನೀಯವಾಗಿ ಬೆಳೆಸಿಲ್ಲ. ಕಾವ್ಯಹೇತುವಾದ ಪ್ರತಿಭೆಯನ್ನು ದೈವದತ್ತವೆಂದೇ ತಿಳಿದಿದ್ದರು. ಪ್ರತಿಭೆಯನ್ನು ಗಳಿಸಲು ಸಾಧ್ಯವಿದ್ದರೂ ಅದು ಪ್ರಥಮದರ್ಜೆಯದ್ದಾಗಿರಲು ಸಾಧ್ಯವಿಲ್ಲವೆಂಬುದೇ ಅವರ ನಿಲುವು. ಹೀಗಾಗಿ ಕಾವ್ಯವನ್ನು ಕವಿಯ ಮಾನಸಿಕ ವ್ಯಾಪಾರವೆಂದು ಗಣಿಸಲಿಲ್ಲ. ಪ್ರಾಪಂಚಿಕ ವ್ಯವಹಾರಗಳನ್ನು ತಾನು ಗ್ರಹಿಸಿದ ರೀತಿಯನ್ನು ಅವು ತನ್ನ ಮೇಲೆ ಬೀರಿದ ಪರಿಣಾಮಗಳನ್ನು ಗುರುತಿಸಲೆಂದೇ ಕಾವ್ಯ ರಚಿಸುವನೆಂಬ ಮಾತಂತೂ ನವೋದಯ ಕಾಲದಲ್ಲಿ 'ಭಾವಗೀತೆ'ಯ ಉದಯದೊಡನೆ ಮಾತ್ರ ಪರಿಚಯವಾದದ್ದು. ಇದರ ಪರಿಣಾಮವಾಗಿ ಕಾವ್ಯವನ್ನು ಕವಿಯ ಅನುಭವದ ಅನಿಸಿಕೆಗಳ ದಾಖಲೆಯನ್ನಾಗಿ ಪರಿಗಣಿಸುವ ಪ್ರವೃತ್ತಿ ಬೆಳೆಯಿತು. ಈ ಪ್ರಬಂಧದುದ್ದಕ್ಕೂ ಕಾವ್ಯವನ್ನು ನವೋದಯಕಾಲ ರೂಪಿಸಿಕೊಂಡ ಹೊಸ ನಿಟ್ಟಿನಲ್ಲಿ, ಎಂದರೆ ಕವಿಯ ಅನಿಸಿಕೆಗಳನ್ನಾಗಿ, ನೋಡಲಾಗಿದೆ. ಹೀಗೆ ಬದಲಾದ ದೃಷ್ಟಿಕೋನವನ್ನು ಪಡೆದದ್ದು ತಾಂತ್ರಿಕ ಸೌಲಭ್ಯವೇ ಅಥವಾ ಗುಣಾತ್ಮಕ ವ್ಯತ್ಯಾಸವೇ (Qualitative difference) ಎಂಬುದು ಈಗ ಏಳುವ ಪ್ರಶ್ನೆ. ಪ್ರಾಚೀನರಲ್ಲಿ ಕಾವ್ಯಾನುಭವವೆಂಬುದು ಒಂದು ಪ್ರಚೋದಯ (stimulus) ಮಾತ್ರ. ಎಂದರೆ ವಾಸನಾರೂಪದಲ್ಲಿ ಓದುಗನಲ್ಲೋ ನೋಟಕನಲ್ಲೋ ಇದ್ದ ಅನುಭವಗಳು ಸಾಹಿತ್ಯ ಕೃತಿಗಳ ಮೂಲಕ ಪ್ರಚೋದನೆಯನ್ನು ಪಡೆದು ಜಾಗೃತ ಅವಸ್ಥೆಗೆ ಬರುತ್ತವೆ. ಕಾವ್ಯವನ್ನು ಪ್ರಚೋದಕ ಉಪಕರಣವನ್ನಾಗಿ ವಿವರಿಸುವ ತತ್ತ್ವ ಅಭಿನವಗುಪ್ತನಲ್ಲಿ ಖಚಿತವಾದ ರೂಪವನ್ನು ತಳೆಯಿತು. ಆದರೆ 'ಸೌಂದರ್ಯ ಸಮೀಕ್ಷೆ'ಯಲ್ಲಿ ತಳೆಯಲಾದ ನಿಲುವು ಕಾವ್ಯಾನುಭವದ ಪ್ರೇರಣೆಯನ್ನು ಕಾವ್ಯದಲ್ಲೇ ಇರಿಸುತ್ತದೆ. ಓದುಗ ಯಾವುದನ್ನೂ

ತನ್ನೊಳಗಿನಿಂದ ಹೊರಗೆ ತಂದುಕೊಳ್ಳುವುದಿಲ್ಲ. ಕಾವ್ಯದಿಂದಲೇ ಗ್ರಹಿಸುತ್ತಾನೆ. ಎಂದರೆ ಸಹೃದಯ ನಿರುಪಯುಕ್ತನಾದನೆಂದಲ್ಲ. ಕಾವ್ಯವನ್ನು ಕೇವಲ ಸಾಧನ (means) ವನ್ನಾಗಿ ಗಣಿಸದೆ ಸಾಧ್ಯ (end) ವೆಂದು ರೂಪಿಸಿದ್ದು ಮುಖ್ಯ ಬದಲಾವಣೆ. ಇದು ಗುಣಾತ್ಮಕ ವ್ಯತ್ಯಾಸವೆಂದು ಹೇಳಲಡ್ಡಿಯಿಲ್ಲ. ಹೀಗೆ ಕಾವ್ಯವನ್ನು ಬದಲಾದ ನೆಲೆಯಲ್ಲಿ ಇರಿಸಿದ್ದರ ಪರಿಣಾಮಗಳು ಎರಡು.

(1) ನವೋದಯ ಕಾವ್ಯವನ್ನು ಗ್ರಹಿಸಬೇಕಾದ ನಿಲುವು ಈ ಮೂಲಕ ಖಚಿತವಾಯಿತು. ಏಕೆಂದರೆ ಕವಿಯ ವಿಶಿಷ್ಟ ಭಾವಗಳನ್ನೇ ಕಾವ್ಯ ಹೊತ್ತು ನಿಂತಿರುವಾಗ ಅದು ಸಾಧಾರಣೀಕೃತ ಭಾವವೊಂದರ ಪ್ರಚೋದಕವಾಗುತ್ತದೆಯೆಂದು ಹೇಳುವ ವಿರೋಧ ತಪ್ಪಿತು.

(2) ಚಾರಿತ್ರಿಕವಾಗಿ ಬದ್ಧವಾಗಿರುವ ಪ್ರಾಚೀನ ಕಾವ್ಯಗಳು ನಿರ್ದಿಷ್ಟ ಶ್ರೋತೃವೃಂದಕ್ಕೆ ಕೇವಲ 'ಸಾಧನ'ಗಳೇ ಆಗಿದ್ದಿರಬಹುದಾದ ಸಾಧ್ಯತೆಯನ್ನು ಮೀರಿ ಅದನ್ನು ಈ ಕಾಲದಲ್ಲೂ ಗ್ರಹಿಸಲು, ಮೆಚ್ಚಲು ಇದ್ದ ಮಾರ್ಗಗಳಲ್ಲೊಂದು: ಕೃತಿಯನ್ನು 'ಸಾಧ್ಯ'ವೆಂದು ತಿಳಿಯುವುದು. ಆದ್ದರಿಂದ ಪ್ರಾಚೀನವಾದ ಕಾವ್ಯಗಳು ನೀಡುವ ಅನುಭವಗಳನ್ನು ನಿರ್ವಾತದಲ್ಲಿ ವಿವರಿಸುವುದು ಬಳಕೆಗೆ ಬಂತು. ಮತ್ತು 'ಸೌಂದರ್ಯ ಸಮೀಕ್ಷೆ' ತನ್ನ ವ್ಯಾಪ್ತಿಯನ್ನು ವೇದಗಳಿಂದ ಹಿಡಿದು ನವ್ಯಕಾವ್ಯದವರೆಗೆ ಇಟ್ಟುಕೊಳ್ಳಲು ಸಾಧ್ಯವಾಯಿತು.

ಈ ಪರಿಣಾಮಗಳು ಸರಿಯೇ ತಪ್ಪೇ ಎಂಬುದು ಈಗ ಮುಖ್ಯವಲ್ಲ. ಈ ಕುರಿತ ಚರ್ಚೆ ಮುಂದಿದೆ. ಆದರೆ ಚಾರಿತ್ರಿಕ ಅವಶ್ಯಕತೆಗಳು ರೂಪಿಸಿದ ಮೀಮಾಂಸೆಯ ಅಂಶಗಳನ್ನು ಈ ಪ್ರಬಂಧ ಒಳಗೊಂಡಿದೆಯೆಂಬುದು ಇಲ್ಲಿ ಗಮನಾರ್ಹ.

ಸೌಂದರ್ಯವನ್ನು ಕುರಿತ ವಾದಗಳನ್ನು, ಚರ್ಚೆಗಳನ್ನು ಪ್ರಬಂಧದ ಮೊದಲಲ್ಲಿ ಸಂಗ್ರಹಿಸಲಾಗಿದೆ. ಪಾಶ್ಚಾತ್ಯರ ವಾದಗಳನ್ನು ಅಲ್ಲಿರುವ ಭಿನ್ನಾಭಿಪ್ರಾಯಗಳೊಡನೆ ಮಂಡಿಸಲಾಗಿದೆ. ಈ ಹಂತದಲ್ಲಿ ಖಚಿತವಾಗಿ ಯಾವೊಂದು ತಾತ್ತ್ವಿಕ ನೆಲೆಯನ್ನೂ ಒಪ್ಪುವಂತೆ ಕಾಣುವುದಿಲ್ಲವಾದರೂ ಕಾಂಟನ 'ನಿಸ್ಸಂಗ ಪರಿಭಾವನೆ'ಯನ್ನು ಸ್ಥೂಲವಾಗಿ ಸೌಂದರ್ಯಾನುಭವಕ್ಕೆ ಕಾರಣವನ್ನಾಗಿ ಗುರುತಿಸಿಕೊಳ್ಳುವಂತಿದೆ. ಲೌಕಿಕ ಪ್ರಯೋಜನಾಕಾಂಕ್ಷೆಯನ್ನು ಬಿಟ್ಟು, ಬುದ್ಧಿ ಪೂರ್ವಕವಾಗಿಯಾದರೂ ದೂರವಿರಿಸಿ, ಅನುಭವವನ್ನು ಗ್ರಹಿಸುವುದರ ಮೂಲಕ ಸೌಂದರ್ಯಾನುಭೂತಿ ಸಾಧ್ಯವೆಂದು ಹೇಳಲಾಗಿದೆ. ಒಂದು ವಸ್ತು ಯಾ ಅನುಭವ ಸಾಧಾರಣವಾಗಿ ಲೌಕಿಕ ಪ್ರಯೋಜನಾಕಾಂಕ್ಷೆಯಂತಹ ಸಿದ್ಧಪ್ರತಿಕ್ರಿಯೆ (Stock response)ಗಳನ್ನು ಉಂಟುಮಾಡಬಲ್ಲದು: ಮತ್ತೊಬ್ಬನಿಗೆ ನಿಸ್ಸಂಗಪರಿಭಾವನೆಯಿಂದ ಸೌಂದರ್ಯಾನುಭೂತಿಯನ್ನುಂಟುಮಾಡಬಲ್ಲುದು. ಎರಡನೆಯವನು ತನಗಾದ ವಿಶಿಷ್ಟ ಅನುಭವವನ್ನು ಹೇಳಿದಾಗ ಮೊದಲನೆಯವನಿಗೆ ತನಗಾದ ಅನುಭವವು ನೆನಪಿಗೆ ಬಂದರೂ ಅದರ ವಿಶಿಷ್ಟ ಅಂಶವನ್ನು ಆತ ಪರ್ಯಾಯವಾಗಿ ಗ್ರಹಿಸಿ ಆನಂದಿಸುತ್ತಾನೆ. ಇಲ್ಲಿ ಎಚ್ಚರದಿಂದ ಗ್ರಹಿಸಬೇಕಾದ ಮಾತೆಂದರೆ ಇದು. ಪ್ರಾಚೀನರ ವಾದದಂತೆ ಕಾವ್ಯದ

ವರ್ಣನೆಗಳು ಓದುಗನ ಸ್ವಂತ ಅನುಭವಗಳನ್ನು ಸಾಧಾರಣೀಕರಿಸಿಕೊಳ್ಳಲು ಪ್ರಚೋದಿಸುತ್ತವೆ. ಏಕೆಂದರೆ ಕವಿಯೂ ಅನುಭವಗಳನ್ನು ಸಾಧಾರಣೀಕರಿಸಿರುತ್ತಾನೆ. ಆದರೆ ಇಲ್ಲಿನ ವಾದದಂತೆ ಓದುಗ ಕಾವ್ಯದ ವರ್ಣನೆಯಿಂದಾಗಿ ತನ್ನ ಸ್ವಂತ ಅನುಭವದಲ್ಲಿ ತಾನು ಸಾರಭೂತ (essential) ಎಂದುಕೊಂಡ ಲೌಕಿಕ ಪ್ರಯೋಜನಾಕಾಂಕ್ಷೆಯ ಭಾಗವನ್ನು ಕೈಬಿಟ್ಟು ಕವಿಯು ಕಂಡ ವಿಶಿಷ್ಟ ಅಂಶಗಳನ್ನು ಉಳಿಸಿಕೊಳ್ಳುತ್ತಾನೆ. ಎಂದರೆ ನಿಸ್ಸಂಗ ಪರಿಭಾವನೆಯನ್ನು ಒಪ್ಪಿಕೊಳ್ಳುವುದರ ಮೂಲಕ ಕಾವ್ಯದಲ್ಲಿ ಮೂಡಿದ ಅನುಭವ ವಿಶಿಷ್ಟತೆಯನ್ನು ಮತ್ತು ಅದು ತನ್ನಲ್ಲೇ ಪೂರ್ಣವಾಗಿರುವುದನ್ನು ಸೂಚಿಸಿದಂತಾಯ್ತು.

ಸೌಂದರ್ಯವೆಂದರೆ ಅದು ವಸ್ತುವಿನಲ್ಲಿ ಇರತಕ್ಕದ್ದೋ ಅಥವಾ ನೋಟಕನಲ್ಲೇ ಇರತಕ್ಕದ್ದೋ ಎಂಬುದು ಮುಂದಿನ ಪ್ರಶ್ನೆ. ಪಾಶ್ಚಾತ್ಯ ಸೌಂದರ್ಯಶಾಸ್ತ್ರದಲ್ಲಿ ಎರಡೂ ಬಣಗಳೂ ಬಲವಾಗಿಯೇ ಬೆಳೆದು ಘರ್ಷಿಸಿವೆ. ಈ ಮಾತನ್ನು ಪ್ರಬಂಧ ಪೂರ್ವಾರ್ಧದಲ್ಲಿ ಚರ್ಚಿಸಲಾಗಿದೆ. ಪ್ರಬಂಧದಲ್ಲಿ ಪಕ್ಷಗಳನ್ನು ಸಮರ್ಥಿಸುವ ಇಲ್ಲವೇ ವಿರೋಧಿಸುವ ಧಾಟಿ ಏನೂ ಇಲ್ಲ. ಉಲ್ಲೇಖಗಳೊಡನೆ ವಿವರಿಸಲಾಗಿದೆ. ಮುಂದೆ ಕಾವ್ಯಗಳನ್ನು ಉದಾಹರಿಸಿ ಕೊಂಡು ಅಲ್ಲಿನ ಸೌಂದರ್ಯವನ್ನು ವಿವರಿಸುವ ಪ್ರಸಂಗಗಳು ಬಂದಾಗ ಸೌಂದರ್ಯವೆಂದರೆ ಅದು ಕವಿಯ ಮನಸ್ಸಿನಲ್ಲಿ ಮೂಡಿದ ಅನುಭವದ ವಿಶಿಷ್ಟರೂಪಿನ ಪರಿಣಾಮವೆಂಬ ನಿಲುವನ್ನು ಒಪ್ಪಲಾಗಿದೆ. ಇದರಿಂದ ಸಿದ್ಧವಾಗುವುದೆಂದರೆ ಲೌಕಿಕ ಜಗತ್ತು ತನ್ನ ನಿತ್ಯದ ವ್ಯಾಪಾರಗಳನ್ನು 'ತನ್ನ ಪಾಡಿಗೆ ತಾನು' ನಿರ್ವಹಿಸಿಕೊಳ್ಳುತ್ತದೆ. ಆದರೆ ಮನೋಭಾವ ವಿಶಿಷ್ಟನಾದ ಕವಿ ಈ ವ್ಯಾಪಾರಗಳನ್ನು ಅವುಗಳ ಸದ್ಯನಿಬದ್ಧತೆಯಿಂದ ಮುಕ್ತಗೊಳಿಸಿ ಬೇರೊಂದು ಬಗೆಯಲ್ಲಿ 'ಕಾಣು'ತ್ತಾನೆ. ಇದೇ ಓದುಗನಲ್ಲಿ ಸೌಂದರ್ಯಾನುಭೂತಿಗೆ ಕಾರಣವಾಗುವ ಮೂಲವಸ್ತು. ಇದರಿಂದ ನೋಡುವವನ 'ಬಗೆಗಣ್ಣ'ನಲ್ಲಿ ಸೌಂದರ್ಯವನ್ನು ಉಂಟುಮಾಡುವ, ಕಾಣುವ ಶಕ್ತಿ ಇರುತ್ತದೆ ಎಂಬುದನ್ನು ಒಪ್ಪಿದಂತಾಯ್ತು. ಇದರಿಂದ ಕವಿಯ ವಿಶಿಷ್ಟ ಅನುಭವಗಳಿಗೆ ಪ್ರಚೋದನೆಯನ್ನು ಒದಗಿಸುವುದೇ ಹೊರಜಗತ್ತಿನ ಕೆಲಸವೆಂದಾಗುತ್ತದೆ.

ಪ್ರಬಂಧದ ಉತ್ತರಾರ್ಧದಲ್ಲಿ ಕಾವ್ಯಗಳಲ್ಲಿ ಸೌಂದರ್ಯವನ್ನು ಗುರುತಿಸುವ ಭಾಗಗಳಿವೆ ಯಷ್ಟೆ. ಇಲ್ಲಿ ವಸ್ತುವನ್ನು ವಿಭಜಿಸಿಕೊಳ್ಳುವ ಕ್ರಮ ಮತ್ತೊಂದು ಸಂಗತಿಯನ್ನು ಹೊರಚೆಲ್ಲುತ್ತದೆ. ಕಾವ್ಯಗಳಲ್ಲಿ ಸೌಂದರ್ಯವನ್ನು ವಿವರಿಸುವಾಗ ನಿಸರ್ಗದ ಕೆಲವು ವ್ಯಾಪಾರಗಳನ್ನು ಮೂಲ ಮಾನವನ್ನಾಗಿ ಇರಿಸಿಕೊಳ್ಳಲಾಗಿದೆ. ಉದಾಹರಣೆಗೆ ಹಗಲು, ರಾತ್ರಿ, ಸೂರ್ಯೋದಯ, ಚಂದ್ರೋದಯ, ಋತುಗಳು ಹೀಗೆ.... ಈ ವ್ಯಾಪಾರಗಳನ್ನು ಪ್ರತಿಯೊಂದು ಕಾವ್ಯವೂ ಹೇಗೆ ವಿಶಿಷ್ಟವಾಗಿ ನೋಡಿದೆ ಎಂಬುದನ್ನು ವಿವರಿಸಲಾಗಿದೆ. ಈ ವಿಶಿಷ್ಟತೆಯೇ ಆಯಾ ಕಾವ್ಯಭಾಗಗಳ ಸೌಂದರ್ಯವೆಂದು ಗೃಹೀತ. ಈ ಚೌಕಟ್ಟನ್ನು ನಿರ್ಮಿಸಿಕೊಂಡದ್ದರಿಂದ ಎಲ್ಲ ಕಾವ್ಯಗಳ ಸೌಂದರ್ಯಾನುಭೂತಿಯನ್ನು ವಿವರಿಸಲು ಒಂದು ಸಾಮಾನ್ಯ ನೆಲೆ ದೊರಕಿತು. ಇದು ಮೇಲುನೋಟಕ್ಕೆ ಅಧ್ಯಯನ ಸೌಲಭ್ಯವೆಂದು ಕಾಣುತ್ತದೆ. ಆದರೆ ಈ

ವರ್ಗೀಕರಣದ ಹಿನ್ನೆಲೆಯಲ್ಲಿ ಒಂದು ಚಾರಿತ್ರಿಕ ಆಶಯವಿದೆ. ಅದನ್ನು ಹೀಗೆ ವಿವರಿಸಬಹುದು. ವಸ್ತುಜಗತ್ತನ್ನು ಅದರ ವ್ಯಾಪಾರಗಳನ್ನು ಸದ್ಯನಿಬದ್ಧತೆಯ ಹಿನ್ನೆಲೆಯಲ್ಲಿ ವಿವರಿಸಿ ಅದು ಎಲ್ಲ ಕಾಲಕ್ಕೂ ಒಂದೇ ಬಗೆಯಲ್ಲಿ ನಡೆಯುವ ಪ್ರಕ್ರಿಯೆಗಳ ಮೊತ್ತವೆಂದು ತಿಳಿಯುವುದು ಈ ಚಾರಿತ್ರಿಕ ಆಶಯದ ತಿರುಳು. ಎಂದರೆ ಸೂರ್ಯೋದಯವೆಂಬುದು ನಿಸರ್ಗದ ವ್ಯಾಪಾರ. ಅದರ ಪ್ರಾಥಮಿಕ ಉದ್ದೇಶ ಬೇರೆ. ಅದು ದಿನವೂ ನಡೆಯುವ ವ್ಯವಹಾರ. ಇದನ್ನು ವೇದದ ಋಷಿಗಳಿಂದ ಹಿಡಿದು ಸಮಕಾಲೀನ ಕವಿಗಳವರೆಗೆ ಬೇರೆ ಬೇರೆ ರೀತಿ ಕಾಣುತ್ತಾ ಬಂದಿದ್ದಾರೆ. ಇಲ್ಲಿ ಬದಲಾಗುತ್ತಿರುವುದು ನೋಡುತ್ತಿರುವ ಮಾನವರ ವಿಚಾರಗಳು. ಸ್ಥಿರವಾಗಿರುವುದು ವಸ್ತು ಜಗತ್ತು. ಹೀಗೆ ವಸ್ತು ಜಗತ್ತು ಸ್ಥಿರ (Static) ಮತ್ತು ವಿಚಾರಗಳು (Idea) ಚಲನಶೀಲ (dynamic) ಎಂದು ವಿವರಿಸಿದ್ದು ಈ ಪ್ರಬಂಧದ ಅನ್ವಯಿಕ ಭಾಗ ಪ್ರತಿನಿಧಿಸುವ ಚಾರಿತ್ರಿಕ ಆಶಯ. ವ್ಯಕ್ತಿಕೇಂದ್ರಿತ ಆಲೋಚನೆಗಳು ಬೆಳೆಯುತ್ತಿದ್ದ ನವೋದಯದಲ್ಲಿ ಈ ಆಶಯ ಪ್ರಾತಿನಿಧಿಕವಾದದ್ದು ಸಹಜವಾಗಿಯೇ ಇದೆ.

ಇನ್ನೂ ಒಂದು ವಿಚಾರವನ್ನು ನಾವೀಗ ಗಮನಿಸಬಹುದು. ಸೌಂದರ್ಯವನ್ನು ಶ್ರೇಣಿಯೇ ಇಲ್ಲದ ಏಕರೂಪದ ಅನುಭವವೆಂದು ಇಲ್ಲಿ ಭಾವಿಸಿಲ್ಲ. ಅದರಲ್ಲಿ ನಾಲ್ಕು ಬಗೆಗಳನ್ನು ಗುರುತಿಸಲಾಗಿದೆ. (ನೋಡಿ: 'ಚತುರ್ಮುಖ ಸೌಂದರ್ಯ', ಪು: 22-41) ಈ ನಾಲ್ಕು ಬಗೆಗಳ ನಡುವೆ ಗುಣಾತ್ಮಕವಾದ ವ್ಯತ್ಯಾಸವಿದೆ. ಸೌಂದರ್ಯಪ್ರಜ್ಞೆಯ ಏರುವಿಕೆಯಲ್ಲಿ ಈ ಬಗೆಗಳ ಅಳವಡಿಕೆ ಹೀಗಿರುತ್ತದೆ. 'ಇಂದ್ರಿಯ ಸೌಂದರ್ಯ', 'ಕಲ್ಪನಾ ಸೌಂದರ್ಯ', 'ತಾತ್ತ್ವಿಕ ಸೌಂದರ್ಯ' ಮತ್ತು 'ಆತ್ಮದ ಸೌಂದರ್ಯ' ಇವು ಒಂದಕ್ಕಿಂತ ಇನ್ನೊಂದು ಶ್ರೇಷ್ಠವಾಗುತ್ತಾ ಹೋಗುವಂತಹವು. ಒಂದು ಇರುವಲ್ಲಿ ಇನ್ನೊಂದು ಇರುವುದಿಲ್ಲವೆನ್ನುವಂತಿಲ್ಲ. ಇದಿಷ್ಟು ಸಂಗ್ರಹಿಸಿ ಹೇಳಬಹುದಾದ ಮಾತುಗಳು. ಹೀಗೆ ಸೌಂದರ್ಯದ ಬಗೆಗಳನ್ನು ಗುರುತಿಸುವಲ್ಲಿ ಮತ್ತು ಅವುಗಳ ಮೌಲ್ಯನಿರ್ಧಾರದಲ್ಲಿ ಜಾರಿಯಲ್ಲಿರುವ ತಾತ್ತ್ವಿಕನೆಲೆಯನ್ನು ಗಮನಿಸಬೇಕು. ವಸ್ತುಜಗತ್ತು ಸೌಂದರ್ಯಾನುಭವಕ್ಕೆ ನೇರವಾಗಿ ಮತ್ತು ಬಹುಮಟ್ಟಿಗೆ ಕಾರಣವಾಗುವ ಹಂತ 'ಇಂದ್ರಿಯ ಸೌಂದರ್ಯ'. ಇಲ್ಲಿಂದ ಮುಂದಿನ ಹಂತಗಳಲ್ಲಿ ವಸ್ತುಜಗತ್ತು ನಿಷ್ಕ್ರಿಯವಾಗುತ್ತಾ ಹೋದಂತೆ ಮೊದಲ ಹಂತದಲ್ಲಿ ಪ್ರಾತಿನಿಧ್ಯವೇ ಇಲ್ಲದ ವಿಚಾರಜಗತ್ತು ಹೆಚ್ಚು ಹೆಚ್ಚು ಕ್ರಿಯಾಶೀಲವಾಗುತ್ತಾ ಬರುತ್ತದೆ. ಇದರಿಂದಾಗಿ ವಸ್ತುಜಗತ್ತು ಸ್ವತಃ ತಾನೇ ಸೌಂದರ್ಯಾನುಭವದ ಮೂಲವಸ್ತುವನ್ನು ಹೊಂದಿರುವುದರ ಸಾಧ್ಯತೆಯನ್ನು ಒಪ್ಪಿಕೊಂಡರೂ ಅದು ಸೌಂದರ್ಯದ ಶ್ರೇಷ್ಠ ಬಗೆಯಲ್ಲ ಎಂದು ವಾದಿಸಿದಂತಾಯ್ತು. ಈ ಹಿಂದೆ ಹೇಳಿದ ಚಾರಿತ್ರಿಕ ಆಶಯದ ವ್ಯಾಪ್ತಿ ಈ ಸಂಗತಿಯಿಂದ ಇನ್ನಷ್ಟು ಹೆಚ್ಚಾಯಿತು. ವಸ್ತು ಜಗತ್ತಿನ ವ್ಯಾಪಾರಗಳು ಸೌಂದರ್ಯಕ್ಕೆ ಕಾರಣವಾಗುತ್ತವೆಯಾದರೂ ಅವು ಶ್ರೇಷ್ಠ ಬಗೆಯ ಸೌಂದರ್ಯಕ್ಕೆ ಪೋಷಕವಾಗುತ್ತವೆ. 'ಆತ್ಮದ ಸೌಂದರ್ಯ'ವೆಂಬ ಶ್ರೇಷ್ಠ ಬಗೆಯಲ್ಲಿ 'ಇಂದ್ರಿಯ ಸೌಂದರ್ಯ'ದ ಪ್ರಭಾವ ಇಲ್ಲವೆನ್ನುವಷ್ಟು ಕಡಿಮೆ. ಹೀಗೆ ಸೌಂದರ್ಯವನ್ನು ವಿಂಗಡಿಸಿಕೊಂಡು ಅಧ್ಯಯನ

ಮಾಡಿರುವುದು ವಿಚಾರ ಜಗತ್ತಿನ ಮಹತ್ತ್ವವನ್ನು ಎತ್ತಿಹಿಡಿದ ನವೋದಯ ಸಾಹಿತ್ಯಮೀಮಾಂಸೆಯ ಪ್ರಾತಿನಿಧಿಕ ವಿಚಾರವೇ ಆಗಿದೆ.

ಈ ಪ್ರಬಂಧದಲ್ಲಿ ಒಪ್ಪಲಾದ, ಅನ್ವಯಿಸಲಾದ ಸೌಂದರ್ಯಸಿದ್ಧಾಂತಗಳು ವಿಚಾರ ಮೂಲವಾದಿ (Idealist) ಯವು. ಈವರೆಗೆ ವಿವರಿಸಲಾದ ಸಂಗತಿಯಿಂದ ಈ ಮಾತು ಸ್ಪಷ್ಟವಾಗಿದೆ. ಈಗ ಮುಂದುವರಿದು ಇನ್ನೊಂದು ಪೂರಕ ಅಂಶವನ್ನು ಗಮನಿಸಬಹುದು. 'ವಿಕೃತಿ'ಯನ್ನು ಕುರಿತು ಅಧ್ಯಾಯವೊಂದಿದೆ. (ನೋಡಿ: 'ವಿಕೃತಿ', ಪುಟ: 369-383) ಇಲ್ಲಿನ ವಿಚಾರಗಳ ಪ್ರಕಾರ ವಸ್ತುಜಗತ್ತಿನ ಹಲವಾರು ಘಟನೆಗಳು, ವಸ್ತುಗಳು ಆಕರ್ಷಣೀಯ ವಲ್ಲದಿದ್ದರೂ ಅವುಗಳನ್ನು ಚಿತ್ರಿಸುವಾಗ ಕವಿ ಸುಂದರವೆನಿಸುವಂತೆ ಮಾಡಬಲ್ಲ. ಅಂತಹ ವರ್ಣನೆಗಳನ್ನು ಓದಿದಾಗ, ಆ ವರ್ಣನೆಗೆ ಮೂಲವಾದ ವಸ್ತು ಓದುಗನಿಗೆ ನಿಜಜೀವನದಲ್ಲಿ ತರುವ ವಿಕರ್ಷಣೆಯ ಬದಲು ಆಕರ್ಷಣೆಯುಂಟಾಗುತ್ತದೆ. ಈ ವಾದ ಮಿತವ್ಯಾಪ್ತಿ ಯುಳ್ಳದ್ದೆಂದು ಹೇಳಬೇಕಾಗಿದೆ. ಈ ವಾದದ ಪ್ರಕಾರ ವಸ್ತುಜಗತ್ತಿನ ಕೆಲವು ವಸ್ತುಗಳು ಉಂಟುಮಾಡುವ ಅನುಭವಗಳನ್ನು ವಿಕರ್ಷಣೆಯೆಂದು ಕರೆಯಲಾಗಿದೆ. ವಸ್ತುವನ್ನು ಅದರ ಪ್ರಯೋಜನದಿಂದ ಬೇರ್ಪಡಿಸಿ ಅದರ ಬಗ್ಗೆ ಚಿಂತಿಸಿ ಅದು ವಿಕರ್ಷಿಸುತ್ತದೋ, ಆಕರ್ಷಿಸುತ್ತದೋ ಎಂದು ನಿರ್ಧರಿಸುವುದು ಚಾರಿತ್ರಿಕವಾಗಿ ಸರ್ವತ್ರವ್ಯಾಪ್ತಿಯನ್ನು ಪಡೆಯುವುದಿಲ್ಲ. ಒಂದು ವಸ್ತು ಅದರ ಪ್ರಯೋಜನದಲ್ಲೇ ಮೂಲಭೂತವಾಗಿ ಮನುಷ್ಯನ ಅನುಭವಕ್ಕೆ ಕಾರಣವಾಗುವುದು. ಆದ್ದರಿಂದ ಕಾವ್ಯದ ವರ್ಣನೆಯಲ್ಲಿ ಸುಂದರವಾಗಿದ್ದು, ಅದು ವಸ್ತುಜಗತ್ತಿನಲ್ಲಿ ವಿಕೃತವಾಗಿರುತ್ತದೆ ಎಂದು ಭಾವಿಸಿದಾಗ ಇವೆರಡೂ ಅನುಭವಗಳಿಗೆ ಕಾವ್ಯವೇ ಕಾರಣವಾಗಿದ್ದು, ಪರಿಣಾಮದಲ್ಲಿ ಸುಂದರ ಮತ್ತು ವಿಕೃತಿಯ ಘರ್ಷಣೆಯನ್ನೇ ಅಪೇಕ್ಷಿಸಿರುತ್ತದೆ. ಉಲ್ಲೇಖಿಸಿರುವ ಉದಾಹರಣೆಯಾದ ಮಂಥರೆಯ ಪಾತ್ರದ ವರ್ಣನೆಯನ್ನೇ ಗಮನಿಸಿ. ಅವಳ ಪಾತ್ರದ ವರ್ಣನೆ ಮತ್ತು ವರ್ತನೆಗಳನ್ನು ವಿರುದ್ಧ ದಿಕ್ಕಿನಲ್ಲಿಡುವುದರಿಂದ ತುಯ್ತವನ್ನು ಸಾಧಿಸಲಾಗಿದೆ. ಆದ್ದರಿಂದ ವಿಕೃತ ವಸ್ತುವೆಂಬುದು ಭಾವಾರೋಪಣೆಯಿಂದ ಮುಕ್ತವಾದ ವಸ್ತುಜಗತ್ತಿನಲ್ಲಿ ಇರುವುದನ್ನು ಒಪ್ಪುವುದು ಕಷ್ಟ. ಅಂದರೆ ವಿಕೃತಿ ಮತ್ತು ಸೌಂದರ್ಯವನ್ನು ಕುರಿತ ಸಂಬಂಧ ಮತ್ತೆ ಸೌಂದರ್ಯವನ್ನು ವಿಚಾರ ಮೂಲವಾದದ ನೆಲೆಯಲ್ಲೇ ವಿವರಿಸುತ್ತದೆ.

'ಭವ್ಯತೆ'ಯನ್ನು ಕುರಿತ ವಿಚಾರಗಳನ್ನು (ಪುಟ 384-408) ಈಗ ಗಮನಿಸಬಹುದು. ಸೌಂದರ್ಯಾನುಭವದ ಒಂದು ಬಗೆಯಲ್ಲಿ ಅನುಭವಿಸುತ್ತಿರುವವನ ವ್ಯಕ್ತಿತ್ವಕ್ಕೆ 'ಅಲ್ಪತೆ'ಯ ಅರಿವು ಉಂಟಾಗುತ್ತದೆ. ಇದು ಭವ್ಯತಾನುಭವ. ವಸ್ತುಜಗತ್ತಿನ ನೂರೆಂಟು ವಿವರಗಳು ವ್ಯಕ್ತಿಯನ್ನು ಅಪಘಾತಕ್ಕೆ ಪಕ್ಕಾಗಿಸಬಹುದು. ಆದರೆ ಕಾವ್ಯದಲ್ಲಿ ಓದಿನಿಂದ ಉಂಟಾಗುವ ಅಘಾತ ಸುಂದರವೆನಿಸುತ್ತದೆ. ಇಲ್ಲಿಯ ಸೌಂದರ್ಯವನ್ನು ನೇತ್ಯಾತ್ಮಕ (Negative)ವೆಂದು ಕಾಂಟನು ಕರೆದದ್ದು ಗಮನಾರ್ಹ. ಇಂತಹ ಅನುಭವದ ಸಾಧ್ಯತೆಗಳು ವಸ್ತುವಿನಲ್ಲೇ ಇರಬಹುದೆಂದು ಒಪ್ಪಿದರೂ ಕವಿಯು ವಸ್ತುವನ್ನು ಕುರಿತು ಆಲೋಚಿಸುವ ಕ್ರಮದಲ್ಲೇ

ಭವ್ಯತೆಯು ಸಾಧ್ಯವೆಂಬ ನಿಲುವಿನ ಕಡೆಗೆ ಹೆಚ್ಚು ಒತ್ತಿದೆ. ಇಲ್ಲಿ ಗಮನಿಸಬೇಕಾದ ವಿಚಾರವೊಂದಿದೆ. ಲೌಕಿಕ ಜಗತ್ತಿನ ವಸ್ತುಗಳು ವ್ಯಕ್ತಿಗೆ ಆಘಾತವನ್ನು ತಂದರೂ ಚಾರಿತ್ರಿಕವಾಗಿ ಅದು ನೇತ್ಯಾತ್ಮಕ ಪರಿಣಾಮವನ್ನುಂಟು ಮಾಡುವುದಿಲ್ಲವೆಂಬುದಕ್ಕೆ ಜ್ಞಾನದ ಬೆಳವಣಿಗೆಯ ಇತಿಹಾಸವೇ ಸಾಕ್ಷಿ. ಆದರೆ ಕಾವ್ಯ ನೀಡುವ ಭವ್ಯತಾನುಭವ ಹೇಗೆ ಇತ್ಯಾತ್ಮಕವಾಗಬಲ್ಲವೆಂಬುದು ಇನ್ನೂ ಬಗೆಹರಿಯದ ಸಂಗತಿ.

ವಿಚಾರಮೂಲವಾದಿ ಸೌಂದರ್ಯತತ್ವಗಳನ್ನು ನವೋದಯ ಸಾಹಿತ್ಯ ಮೀಮಾಂಸೆ ಒಪ್ಪಿಕೊಂಡಿದ್ದ ಪ್ರಾತಿನಿಧಿಕ ಕೃತಿಯಾಗಿ 'ಸೌಂದರ್ಯ ಸಮೀಕ್ಷೆ'ಯನ್ನು ಗಮನಿಸಿದ್ದೇವೆ. ಈ ಸೌಂದರ್ಯ ತತ್ವಗಳು ವಸ್ತುಜಗತ್ತನ್ನು ಸ್ಥಿರವೆಂದು ಭಾವಿಸುತ್ತವೆ. ಸೌಂದರ್ಯವನ್ನು ವಿಚಾರ ಮೂಲದಲ್ಲಿ ವಿವರಿಸುತ್ತವೆ. ಇದರಿಂದ ಕಾವ್ಯವೆಂಬುದು ವಿಜ್ಞಾನದ ಜತೆ ವಿರೋಧವನ್ನು ರಚಿಸಿಕೊಳ್ಳುತ್ತದೆ. ಇದನ್ನು ಹೀಗೆ ವಿವರಿಸಬಹುದು. ಕಾವ್ಯವನ್ನು ಅವಿಚಾರಿತ ರಮಣೀಯವೆಂದು, ವಿಜ್ಞಾನವನ್ನು ವಿಚಾರಿತ ಸುಂದರವೆಂದು ಕರೆದಿದ್ದಾರಷ್ಟೆ. ವಸ್ತುಜಗತ್ತನ್ನು ಅರಿಯುವ ಮನುಷ್ಯಪ್ರಯತ್ನದ ಎರಡು ಮುಖಗಳಾದ ವಿಜ್ಞಾನ ಮತ್ತು ಕಲೆಯಾಗಿ-ಕಾವ್ಯ ಇವುಗಳ ನಡುವೆ ವಿರೋಧವಿಲ್ಲವೆಂಬುದು ವಸ್ತು ಮೂಲವಾದಿಗಳ (Materialists) ನಿಲುವು. ವಸ್ತುಜಗತ್ತು ಚಲನಶೀಲ ಮತ್ತು ಬದಲಾವಣೆಯ ಸಾಧ್ಯತೆಗಳನ್ನು ತನ್ನಲ್ಲೇ ಒಳಗೊಂಡಿರುತ್ತದೆ. ಆದ್ದರಿಂದ ಕವಿಯಾಗಲೀ, ವಿಜ್ಞಾನಿಯಾಗಲಿ ಒಂದು ಚಾರಿತ್ರಿಕ ಸನ್ನಿವೇಶಕ್ಕೆ ಬದ್ಧರು. ಅವರ ವಿಚಾರಗಳು ಆ ಕಾಲಕ್ಕೆ ಬದ್ಧ. ಆದ್ದರಿಂದ ಪ್ರಾಚೀನ ಕವಿಯ ಸುತ್ತ ಇದ್ದ ವಸ್ತುಜಗತ್ತಿಗೂ ಆತನಿಗೂ ಇದ್ದ ಸಂಬಂಧದ ಸ್ವರೂಪ ಈಗಿನ ಕವಿಯ ವಿಚಾರದಲ್ಲಿ ಬದಲಾಗಿದೆ. ಈ ಮಾತು ವಿಜ್ಞಾನಿಗೂ ನಿಜ. ಆದ್ದರಿಂದ ಸೌಂದರ್ಯವನ್ನು ಕುರಿತು ಆಲೋಚಿಸುವಾಗ ಅದನ್ನು ನಿರ್ವಾತದಲ್ಲಿಟ್ಟು ನೋಡುವುದು ಸರಿಯಾಗಲಾರದು. ವಸ್ತುಜಗತ್ತಿನ ಸಾಧ್ಯತೆಗಳು ವಿಜ್ಞಾನ ಮತ್ತು ಕವಿ ಇವರಿಗೆ ಅರಿವಾಗುತ್ತಾ ಬಂದ ಬೆಳವಣಿಗೆಯ ಕ್ರಮವನ್ನು ಗುರುತಿಸಬೇಕಾಗುತ್ತದೆ. ಈ ಸಂಗತಿ ಕಾವ್ಯವನ್ನು ಸಂಸ್ಕೃತಿಯ ಸಂದರ್ಭದಲ್ಲಿಡುತ್ತದೆ ಮತ್ತು ಇಲ್ಲಿಗೆ ಅಪ್ರಸ್ತುತವಾದ ಹಲವಾರು ಪ್ರಶ್ನೆಗಳಿಗೆ ಕಾರಣವಾಗುತ್ತದೆ. ಆದರೆ 'ಸೌಂದರ್ಯ ಸಮೀಕ್ಷೆ' ನವೋದಯ ಸಾಹಿತ್ಯ ಮೀಮಾಂಸೆಯ ಲಕ್ಷಣಗಳನ್ನು ಪ್ರತಿನಿಧಿಸುವಾಗಲೇ ಅದರ ಮಿತಿಗಳನ್ನು ಸೂಚಿಸುತ್ತದೆಯೆಂಬುದು ಮಾತ್ರ ಇಲ್ಲಿ ಮುಖ್ಯ.

*(ಮೂಲ: 'ಬೇರು ಕಾಂಡ ಚಿಗುರು')*

■

# 'ಕಾವ್ಯಾರ್ಥ ಚಿಂತನ' ಕುರಿತಂತೆ...

ಪ್ರೊ।। ಎಂ. ಗೋಪಾಲಕೃಷ್ಣ ಅಡಿಗ

ಕನ್ನಡದ ಉತ್ತಮ ವಿದ್ವಾಂಸರೂ ಅಧ್ಯಾಪಕರೂ ಆಗಿರುವ ಡಾಕ್ಟರ್ ಶಿವರುದ್ರಪ್ಪನವರ 'ಕಾವ್ಯಾರ್ಥಚಿಂತನ' 1983ರಲ್ಲಿ ಪ್ರಕಟವಾಗಿರುವ ನಾನು ಓದಿರುವ ಕೃತಿಗಳಲ್ಲೆಲ್ಲಾ ಅತ್ಯಂತ ಗಣ್ಯವಾಗಿರುವಂಥದು ಮಾತ್ರವಲ್ಲ, ಸಾಹಿತ್ಯ ಶಾಸ್ತ್ರಕ್ಕೆ, ವಿಮರ್ಶೆಗೆ, ಸಂಬಂಧಪಟ್ಟ ಒಂದು ಗಣ್ಯಕೃತಿ ಎಂದು ನನಗೆ ಅನ್ನಿಸುತ್ತದೆ. ವಿಷಯ ಸಂಗ್ರಹದ ದೃಷ್ಟಿಯಿಂದ, ವಿಷಯ ಮಂಡನೆಯ ದೃಷ್ಟಿಯಿಂದ ಸಾಹಿತ್ಯ ಕೃತಿಗಳ ಅಭ್ಯಾಸಕ್ಕೆ ಹೊಸ ಬೆಳಕನ್ನು ನೀಡುವ ದೃಷ್ಟಿಯಿಂದ ಈ ಗದ್ಯ ಕೃತಿ ತೀ.ನಂ.ಶ್ರೀ ಅವರ 'ಭಾರತೀಯ ಕಾವ್ಯಮೀಮಾಂಸೆ'ಯ ಸಾಲಿನಲ್ಲಿ ನಿಲ್ಲತಕ್ಕ ಕೃತಿ ಎಂದು ನನಗೆ ಅನ್ನಿಸುತ್ತದೆ. ಈ ಕೃತಿಯ ಹಿಂದೆ ಇರುವ ಸಂಸ್ಕೃತ ಇಂಗ್ಲಿಷ್ ಭಾಷೆಗಳಲ್ಲಿರುವ ಆಧಾರ ಗ್ರಂಥಗಳ ಅಭ್ಯಾಸ, ಮನನ, ಪಾಶ್ಚಾತ್ಯ ಮತ್ತು ಭಾರತೀಯ ಕಾವ್ಯ ಪರಿಕಲ್ಪನೆಗಳ ನಿರ್ದಿಷ್ಟವಾದ ನಿರ್ದುಷ್ಟವಾದ ಗ್ರಹಿಕೆ, ಇವು ದಂಗು ಬಡಿಸುವಂಥದು ಎನ್ನಬಹುದು. ಒಬ್ಬ ನಿಜವಾದ ವಿದ್ವಾಂಸ ಹೇಗೆ ಕೆಲಸ ಮಾಡುತ್ತಾನೆ, ಹೇಗೆ ಕೆಲಸ ಮಾಡಬೇಕು ಎನ್ನುವುದಕ್ಕೆ ಈ ಕೃತಿ ಅತ್ಯುತ್ತಮವಾದುದೊಂದು ನಿದರ್ಶನ. ಏಕೆಂದರೆ ಇದರಲ್ಲಿ ಕೇವಲ ಜಡ ಪಾಂಡಿತ್ಯದ ಭಾರ ಎಲ್ಲಿಯೂ ಕಾಣುವುದಿಲ್ಲ. ಆದರೆ ಬರೆಯುವ ಪ್ರತಿಯೊಂದು ಮಾತಿನ ಹಿಂದಿರುವ ಹೃದ್ಯ ವೈಶದ್ಯದ ಅರಿವು ಮತ್ತೆ ಮತ್ತೆ ಮಿಂಚದೆಯೂ ಇರುವುದಿಲ್ಲ.

ಇಂದಿನ ನಮ್ಮ ಸಾಂಸ್ಕೃತಿಕ ಜೀವನ ಹೇಗೋ ಹಾಗೆ ಕಾವ್ಯ ಪ್ರಪಂಚವೂ ತುಂಬ ಸಂಕರವಾಗಿ, ಗೊಂದಲ ತುಂಬಿ ಓರಣಗೆಟ್ಟು, ಹೊಸಬರನ್ನು ದಾರಿತಪ್ಪಿಸುವಂಥದೂ ಆಗಿದೆ. ಇದಕ್ಕೆ ಮುಖ್ಯ ಕಾರಣ ನಮ್ಮ ಬದುಕಿನ ಮೇಲೆ ಇನ್ನೂರು ವರ್ಷಗಳಿಂದ ಆಗುತ್ತ ಬಂದಿರುವ ಜೀವಂತ ಪಾಶ್ಚಾತ್ಯದ ಬೇರು ಮುಟ್ಟುತ್ತಿರುವ ಪ್ರಭಾವ ಎಂದು ಎಲ್ಲರಿಗೂ ಗೊತ್ತಿದೆ. ಇಂಗ್ಲಿಷ್ ಮೂಲಕ ಅಭ್ಯಾಸ ಮಾಡಿ ಕಾವ್ಯ ಓದಿ ಅನುಭವಿಸುವುದನ್ನು ಆ ಭಾಷೆಯ ವಿಮರ್ಶ ಸೂತ್ರಕ್ಕೆ ಅನುಸಾರವಾಗಿಯೇ ಕಲಿತವರಿಗೆ ನಮ್ಮ ಸಂಸ್ಕೃತ ಅಲಂಕಾರ ಶಾಸ್ತ್ರಜ್ಞರ ಅಗಾಧ ಚಿಂತನೆ, ಅವರು ನಿರ್ಮಿಸಿದ ಪರಿಕಲ್ಪನೆಗಳು, ಪದ ವಿಶೇಷಗಳು ಅಪರಿಚಿತವೇ ಆಗಿವೆ. ಇದರಿಂದ ಒಟ್ಟಿನಲ್ಲಿ ನಮ್ಮ ಬದುಕಿನಲ್ಲಿ ಹೇಗೋ ಹಾಗೆ ಕಾವ್ಯಾಭ್ಯಾಸದಲ್ಲಿ ಕೂಡ ಒಂದು ಬಿರುಕು ಕಾಣಿಸುತ್ತದೆ. ಈ ಬಿರುಕನ್ನು ಮುಚ್ಚಿ ನಮ್ಮ

ಬದುಕು ಅಖಂಡವಾಗಿ ಏಕಮುಖವಾಗಿ ಬೆಳೆಯುವಂತೆ ಮಾಡುವುದು, ಅತ್ಯಂತ ಮುಖ್ಯವಾದ ದೇಶ ಸೇವಾಕಾರ್ಯವಾಗಿರುವಂತೆ, ನಾವು ಪಾಶ್ಚಾತ್ಯರಿಂದ ಕಲಿತ ಪರಿಕಲ್ಪನೆಗಳಿಗ ಸರಿಯಾಗುವಂಥ ಶಬ್ದಗಳನ್ನು ನಮ್ಮ ಆಲಂಕಾರಿಕರಿಂದ ಪಡೆದು ಬಳಸುವದು ಕನ್ನಡ ಕಾವ್ಯಾಭ್ಯಾಸದ ದೃಷ್ಟಿಯಿಂದ ಅತ್ಯಗತ್ಯವಾದ ಕೆಲಸ. ಆ ದಿಕ್ಕಿನಲ್ಲಿ ಈ ನಮ್ಮ 'ಕಾವ್ಯಾರ್ಥ ಚಿಂತನ' ಅತ್ಯಮೂಲ್ಯವಾದ ಕೆಲಸವನ್ನು ಮಾಡಿದೆ. ಪ್ರತಿಭೆ, ರೂಪಕ, ಕಲ್ಪನೆ, ಶಕ್ತಿ ಮುಂತಾದ ಕಾವ್ಯ ವಿಮರ್ಶೆಯ ಪದವಿಶೇಷಗಳಿಗೆ ಅತ್ಯಂತ ನಿಷ್ಕೃಷ್ಟವಾದ ಅರ್ಥವನ್ನು ಅತ್ಯಂತ ಸರಳವಾದ ಆದರೆ ತರ್ಕಬದ್ಧವೂ ಆದ ಶೈಲಿಯಲ್ಲಿ ಇಲ್ಲಿ ಹೇಳುತ್ತಾ, ಪಾಶ್ಚಾತ್ಯರಿಂದ ಹೇಗೋ ಹಾಗೆ ಕನ್ನಡದಿಂದಲೂ ಯೋಗ್ಯ ಉದಾಹರಣೆಗಳನ್ನು ಅಗತ್ಯವಾದಲ್ಲಿ ಬಳಸಲಾಗಿದೆ. ಹೀಗೆ ಈ ಗ್ರಂಥ ಕಾವ್ಯಾಭ್ಯಾಸಿಗೆ ಅತ್ಯಂತ ಉಪಯುಕ್ತವಾದ ಮಾರ್ಗದರ್ಶಿ ಆಗಿದೆ. ನನ್ನ ಮನಸ್ಸಿಗೆ ಬೆರಗನ್ನುಂಟುಮಾಡಿ ತುಂಬ ತೃಪ್ತಿಯನ್ನು ಕೊಟ್ಟ ಹಲವು ಸಂಗತಿಗಳಲ್ಲಿ ಒಂದನ್ನು ನಾನು ಎತ್ತಿ ಹೇಳಬೇಕು. ಕಾವ್ಯರಚನೆಯಲ್ಲಿ ಸಂವೇದನೆ ಅನುಭವಶಕ್ತಿಗಳು ಎಷ್ಟು ಅಗತ್ಯವೋ ಅಷ್ಟೇ ಅಗತ್ಯವಾದದ್ದು ಸ್ವವಿಮರ್ಶ ಶಕ್ತಿ ಎಂದು ನಾನು ಎಷ್ಟೋ ಕಡೆ ಹೇಳುತ್ತ ಬಂದಿದ್ದೆ. ಎಂದರೆ ಸೃಷ್ಟಿ ಶಕ್ತಿ ವಿಮರ್ಶಶಕ್ತಿ ಈ ಎರಡೂ ಜೊತೆಜೊತೆಗೆ ಇರತಕ್ಕವು, ಬಹುಶಃ ಒಂದೇ ಶಕ್ತಿಯ ಎರಡು ಮುಖಗಳು ಎಂದು ನನಗೆ ಅನ್ನಿಸುತ್ತಿತ್ತು. ಆದರೆ ಇದನ್ನು ಹೆಸರಿಸುವ ಒಂದು ಪದ ನಮ್ಮ ಲಾಕ್ಷಣಿಕರಲ್ಲಿ ಇದೆ ಎಂಬ ತಿಳುವಳಿಕೆ ನನಗೆ ಇರಲಿಲ್ಲ. ಈ ಗ್ರಂಥದಲ್ಲಿ ಪ್ರತಿಭೆ-ಸೃಷ್ಟಿ ಶಕ್ತಿಯ ಬಗ್ಗೆ ವಿವರಿಸುವಾಗ ನಮ್ಮ ಅಲಂಕಾರಿಕರು ಕಾವ್ಯಸೃಷ್ಟಿಗೆ "ವ್ಯುತ್ಪತ್ತಿ"ಯೂ ಅಗತ್ಯ ಎಂದು ಹೇಳಿದ್ದಾರೆ ಎಂಬ ಮಾತು ಕೇಳಿ, ಆ ಮಾತಿಗೆ ಎರಡು ಅರ್ಥಗಳಿದ್ದು, ಒಂದು ವಿಶಾಲವಾದ ತಿಳಿವಳಿಕೆ ಇನ್ನೊಂದು ಔಚಿತ್ಯ ಜ್ಞಾನ ಎಂದು ಹೇಳಿದ್ದಾರೆ ಎಂಬುದನ್ನು ಓದಿದಾಗ ನನಗೆ ಒಂದು ಅಪೂರ್ವ ತೃಪ್ತಿ ಸಿಕ್ಕಿ ನಮ್ಮ ಹಿಂದಿನ ಲಾಕ್ಷಣಿಕರಲ್ಲಿ ಇದ್ದ ಗೌರವ ಹೆಚ್ಚುವಂತೆ ಆಯಿತು. ಈ ಬಗೆಯ ಕೂಲಂಕಷತೆ ಈ ಗ್ರಂಥದ ಮೊದಲಿಂದ ಕೊನೆಯವರೆಗೆ ನಮಗೆ ಕಂಡುಬರುತ್ತದೆ. ನಮಗೋಸ್ಕರ ಇಷ್ಟು ಕಷ್ಟಪಟ್ಟು ಗ್ರಂಥರಚಿಸಿದವರ ಬಗ್ಗೆ ಕೃತಜ್ಞತೆ ಹುಟ್ಟುತ್ತದೆ.

*(ಮೂಲ: ಅಡಿಗರ ಪ್ರಬಂಧಗಳು)*



# ಡಾ॥ ಜಿ. ಎಸ್. ಶಿವರುದ್ರಪ್ಪನವರ ಪ್ರವಾಸಕಥನಗಳು

ಬಿದರಹಳ್ಳಿ ನರಸಿಂಹಮೂರ್ತಿ

ಕನ್ನಡಿಗರು ಪ್ರವಾಸಪ್ರಿಯರು. ಕನ್ನಡ ಲೇಖಕರು ಪ್ರವಾಸಸಾಹಿತ್ಯ ನಿಷ್ಣಾತರು. ಹಾಗೆಂದೇ ಕನ್ನಡದಲ್ಲಿ ಪ್ರವಾಸ ಸಾಹಿತ್ಯ ವಿಪುಲವಾಗಿ ಬೆಳೆದುನಿಂತಿದೆ. ಕತೆ ಕಾದಂಬರಿಗಿರುವಷ್ಟೆ ಬೇಡಿಕೆ ನಮ್ಮಲ್ಲಿ ಪ್ರವಾಸಸಾಹಿತ್ಯಕ್ಕೂ ಇರುವುದು ನಮ್ಮ ಕುತೂಹಲದ ಚಾಚುಗಳಿಗೆ ತೋರುಬೆರಳಾಗಿದೆ.

ಪ್ರವಾಸಕಥನ ಪ್ರವಾಸಿಗನ ವ್ಯಕ್ತಿತ್ವದ ಅನಾವರಣ ಎನ್ನಬಹುದು. ಜೊತೆಗೇ ಅದು ಅವನ ಅಭಿರುಚಿಯ ಅನುರಣನವೂ ಹೌದು. ಹೀಗಾಗಿ ಒಂದೇ ಜಾಗಕ್ಕೆ ಹೋಗಿಬಂದ ವಿಭಿನ್ನ ಪ್ರವಾಸಿಗರ ಕಥನಗಳು ಓದುಗರಿಗೆ ಬೇರೆ ಬೇರೆ ಬಗೆಯ ಖುಷಿಕೊಡುವ ಸಾಧ್ಯತೆ ಇದೆ. ರಾಮಸ್ವಾಮಿ ಅಯ್ಯಂಗಾರರ 'ಅಮೆರಿಕದಲ್ಲಿ ಗೊರೂರು', ಬಿ.ಜಿ.ಎಲ್. ಸ್ವಾಮಿ ಅವರ 'ಅಮೆರಿಕದಲ್ಲಿ ನಾನು'. ಡಾ. ಜಿ.ಎಸ್. ಶಿವರುದ್ರಪ್ಪನವರ 'ಅಮೆರಿಕದಲ್ಲಿ ಕನ್ನಡಿಗ'—ಈ ಎಲ್ಲ ಕೃತಿಗಳೂ ಅಮೆರಿಕದ ಬಗ್ಗೆ ಬೇರೆ ಬೇರೆಯಾದ ಚಿತ್ರಗಳನ್ನೇ ನೀಡುತ್ತವೆ. ಯಾಕೆಂದರೆ ಇವರಲ್ಲಿ ಪ್ರತಿಯೊಬ್ಬರೂ ಆ ದೇಶವನ್ನು ನೋಡುವ ದೃಷ್ಟಿ ಹಾಗೂ ನೋಡಿದನ್ನು ಹೇಳಿಕೊಳ್ಳುವಾಗ ಕೊಡುವ ಒತ್ತು ಅವರಿಗೇ ವಿಶಿಷ್ಟವಾದದ್ದಾಗಿರುತ್ತದೆ. ಹೀಗಾಗಿ ಅವರದ್ದೇ ಒಂದು ಶೈಲಿ ರೂಪಪಡೆಯುತ್ತದೆ.

ಕಾರಂತರ 'ಅಪೂರ್ವ ಪಶ್ಚಿಮ' National Geographic Channel ಮಾದರಿಯಲ್ಲಿ ಎಲ್ಲವನ್ನೂ ಶಾಂತವಾಗಿ, ಕೂಲಾಗಿ, ಕೂಲಂಕಷವಾಗಿ, ವಸ್ತುನಿಷ್ಠವಾಗಿ ತೋರಿಸುತ್ತದೆ. ಶಿವರುದ್ರಪ್ಪನವರ 'ಇಂಗ್ಲೆಂಡಿನಲ್ಲಿ ಚತುರ್ಮಾಸ' ಇಂಗ್ಲೆಂಡಿನ ಹಸಿರು ಪರಿಸರ, ಷೇಕ್ಸ್‌ಪಿಯರ್, ವರ್ಡ್ಸ್‌ವರ್ತ್, ಬರ್ನ್ಸ್ ಇವರ ಹುಟ್ಟೂರುಗಳು, ಅಲ್ಲಿನ ಜನರ ಅಚ್ಚುಕಟ್ಟಿನ ಬಗ್ಗೆ ಒಂದು ಭಾವಲೋಕವನ್ನೇ ಕಟ್ಟಿಕೊಟ್ಟು ಅಲ್ಲಿಗೆ ಹೋಗಲೇಬೇಕೆಂಬ ತುಡಿತ ಕಡೆಯುತ್ತದೆ. ತೇಜಸ್ವಿಯವರ 'ಅಲೆಮಾರಿಯ ಅಂಡಮಾನ್' ಅವರ ತಿಳಿಹಾಸ್ಯ, ನವಿರು ವ್ಯಂಗ್ಯಗಳಿಂದಾಗಿ ಮನುಷ್ಯನ ಫಜೀತಿಗಳು, ಅವನ ಅಸಹಾಯಕತೆಗಳ ಕಡೆಗೆ ನಮ್ಮ ಗಮನವನ್ನು ಹೆಚ್ಚಾಗಿ ಸೆಳೆಯುತ್ತದೆ. ನಾಗಭೂಷಣಸ್ವಾಮಿಯ 'ನನ್ನ ಹಿಮಾಲಯ' ಒಂದು ಬಗೆಯ ಸರ್ರಿಯಲಿಸ್ಟ್ ನಿಗೂಢತೆಯಲ್ಲಿ ಹಿಮಾಲಯದಲ್ಲಾದ ಅನುಭವಗಳನ್ನು ಬಿಚ್ಚಿಡುತ್ತದೆ. ಈ ದೃಷ್ಟಿಯಲ್ಲಿ ಪ್ರವಾಸಕಥನ ವ್ಯಕ್ತಿವಿಶಿಷ್ಟತೆಗೆ ಇಂಬುಕೊಡುವ ಒಂದು ಪ್ರಕಾರವಾಗಿದೆ

೨

ಡಾ॥ ಜಿಎಸ್ಎಸ್ ಅವರು ಇದುವರೆಗೆ ಬರೆದಿರುವ ಪ್ರವಾಸಕಥನಗಳು ನಾಲ್ಕು: 'ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ' (1973); 'ಗಂಗೆಯ ಶಿಖರಗಳಲ್ಲಿ' (1985); 'ಅಮೆರಿಕದಲ್ಲಿ ಕನ್ನಡಿಗ' (1995); 'ಇಂಗ್ಲೆಂಡಿನಲ್ಲಿ ಚತುರ್ಮಾಸ' (1997). ಇವೆಲ್ಲವೂ ಸರಳ ಶೈಲಿಯ, ನೇರ ನಿರೂಪಣೆಯ ಕೃತಿಗಳಾಗಿದ್ದು, ಓದುಗರನ್ನು ಆಕರ್ಷಿಸುತ್ತವೆ.

ಪ್ರವಾಸಕಥನ ವ್ಯಕ್ತಿತ್ವದ ಅನಾವರಣವೂ ಆಗುತ್ತದೆಂದೆ. ಆ ಮಾತು ಜಿಎಸ್ಎಸ್ ಅವರಿಗೆ ನಿಜಕ್ಕೂ ಅಪ್ಲೈ ಆಗುತ್ತದೆ. ಜಿಎಸ್ಎಸ್ ಅವರದು ಪಾರದರ್ಶಕ ವ್ಯಕ್ತಿತ್ವ. ಯಾವುದೆ ಅವಗುಂಠನ ತೊಡದ ಅವರ ವ್ಯಕ್ತಿತ್ವ, ಮಗುವಿನಷ್ಟು ಮುಗ್ಧವೂ, ಹಳ್ಳಿಗರಷ್ಟು ಸರಳವೂ, ಸದಭಿರುಚಿಯ ವಿದ್ವಾಂಸರಷ್ಟು ನಮ್ರವೂ ಆದದ್ದಾಗಿದೆ. ಅವರ ಕಾವ್ಯ ಹಾಗು ವಿಮರ್ಶೆಗಿಂತ ಪ್ರವಾಸದಲ್ಲಿ ಈ ವ್ಯಕ್ತಿತ್ವದ ಪರಿಚಯ ಹೆಚ್ಚು ನಿಕಟವಾಗಿ ಆಗುತ್ತದೆ. ಜನರೊಡನೆ ಸುಲಭವಾಗಿ ಬೆರೆಯುವುದು, ನಿಸರ್ಗದ ಚೆಲುವಿಗೆ ಪರವಶರಾಗುವುದು, ಕೆಡುಕು ಕಂಡಲ್ಲಿ ಸಿಡಿಮಿಡಿ ಮಾಡುವುದು, ಉದಾತ್ತತೆಯನ್ನು ಆರಾಧಿಸುವುದು ಈ ವ್ಯಕ್ತಿತ್ವದ ಹುಟ್ಟುಗುಣಗಳು. ಇಷ್ಟೆಲ್ಲವನ್ನೂ ಯಾವುದೇ ಗಿಮಿಕ್ ಇಲ್ಲದೆ, ಸರಳ ನಿರಾಡಂಬ ಮಾತುಗಳಲ್ಲಿ ಹೇಳಿಬಿಡುವುದು ಕೂಡ ಜಿಎಸ್ಎಸ್ ಅವರಿಗಷ್ಟೇ ವಿಶಿಷ್ಟವಾದದ್ದಾಗಿದೆ.

'ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ' ಅವರ ಮೊಟ್ಟಮೊದಲ ಪ್ರಕಟಿತ ಪ್ರವಾಸಕಥನ. ಭಾರತ ಸರ್ಕಾರದ ಪ್ರತಿನಿಧಿಯಾಗಿ, ರಷ್ಯನ್ ಸರ್ಕಾರದ ಅತಿಥಿಯಾಗಿ, ಭಾರತ-ಸೋವಿಯತ್ ಸಾಂಸ್ಕೃತಿಕ ವಿನಿಮಯ ಯೋಜನೆಯ ಅಡಿಯಲ್ಲಿ, ಜಿಎಸ್ಎಸ್ ಮಾಸ್ಕೋ ತಲುಪಿದರು. ಈ ಮಾಸ್ಕೋ ಸಂಕ್ಷಿಪ್ತ ರಷ್ಯದಂತೆ ಕಂಡರೂ "ದೇಶದ ನಿಜವಾದ ಜೀವನ ಅದರ ಯಥಾವತ್ತಾದ ಸ್ವರೂಪದಲ್ಲಿ ಕಾಣುವುದು. ಈ ನಗರ ಕೇಂದ್ರಗಳಾಚೆಯ ಒಳನಾಡುಗಳಲ್ಲಿ" ಎಂಬ ನಂಬಿಕೆ ಅವರದು. ಹೀಗಾಗಿ ಸರ್ಕಾರಿ ಬೇಹುಗಾರಿಕೆಯ ಉಪಾಧಿಯಲ್ಲಿ, ಪೂರ್ವನಿಯೋಜಿತ ಭೇಟಿಗಳಲ್ಲಿ, ದ್ವಿಭಾಷೆಯ ಅವಲಂಬನೆಯಲ್ಲಿ, ಮಾರ್ಗದರ್ಶಿಗಳು, ವಾಹನ ಚಾಲಕರ ಬೇಜವಾಬ್ದಾರಿಯಲ್ಲಿ ಜಿಎಸ್ಎಸ್ ಅವರಿಗೆ ಮಾಸ್ಕೊ ನಗರದೊಡನೆ ಸಹಜ ಸಂಪರ್ಕ ಸಾಧ್ಯವಾಯಿತೆ ಎಂಬುದು ಪ್ರಶ್ನೆ. ಯು.ಜಿ.ಸಿ.ಯಿಂದ ಸಂದರ್ಶಕ ಪ್ರಾಧ್ಯಾಪಕರಾಗಿ ಆಯ್ಕೆಯಾಗಿ, ಕ್ರಾಂತಿಭೂಮಿಯ ಬಗ್ಗೆ ಕುತೂಹಲಿಯಾದ ಕವಿಯಾಗಿ ಹೊರಟವರಿಗೆ "ಈಗ ವಾರಾಂತ್ಯದಲ್ಲಿ ಮಾಸ್ಕೋಗೆ ಕಳಿಸಬೇಡಿ.... ವಸತಿಯ ಬಗ್ಗೆ ಖಚಿತಪಡಿಸಿಕೊಂಡ ನಂತರ ಕಳಿಸಿ" ಎಂಬ ಸಂದೇಶ ಬಂದರೆ ಹೇಗಾಗಬೇಡ? ದಿಲ್ಲಿಯ ವಿಮಾನನಿಲ್ದಾಣದಲ್ಲಿ ಹೀಗೆ ತೊಂದರೆಗೆ ಒಳಗಾದ ಜಿಎಸ್ಎಸ್ "ರಷ್ಯನ್ ರಾಯಭಾರಿ ಕಛೇರಿಯ ಮುಚ್ಚುವ-ತೆರೆಯುವ ಕಿಟಕಿಯ ನೆನಪು ಬಂತು" ಎಂದಿರುವುದು ತುಂಬ ಧ್ವನಿಪೂರ್ಣವಾಗಿದೆ.

ಇಂಥ ಬಗೆ ಬಗೆಯ ಬವಣೆಗಳ ನಡುವೆಯೂ ಜಿಎಸ್ಎಸ್ ಕೆಲವು ವಿಚಾರವಂತರನ್ನು, ಕಲಾವಿದರನ್ನು ಭೇಟಿ ಮಾಡಿದರು. ಒಂದೆರಡು ಸುಂದರ ತಾಣಗಳನ್ನು

ನೋಡಿಬಂದರೆಂಬುದು ಸಮಾಧಾನದ ಸಂಗತಿ. Writers' Unionನ ಕವಿ Robert Rozhdestvenskyಯ ಮಾತುಗಳು ಮೆಲುಕು ಹಾಕುವಂತಿವೆ. "ರಷ್ಯದಲ್ಲಿ ಕ್ರಾಂತಿಯಾಗಿದೆ ನಿಜ. ಆದರೆ ಕ್ರಾಂತಿಯ ಹೆಸರಿನಲ್ಲಿ ನಾವು ಪರಂಪರೆಯ ಒಳ್ಳೆಯ ಅಂಶಗಳನ್ನು ತಿರಸ್ಕರಿಸಿಲ್ಲ" ಎಂಬುದು ತುಂಬ ಜವಾಬ್ದಾರಿಯ ಹೇಳಿಕೆ. ಅದೇ ರೀತಿ, "ರೋಚಕವಾಗಿ ತೋರುವ ಯಾವ ಪ್ರಭಾವಗಳನ್ನಾಗಲಿ ನಾವು ಅನುಕರಿಸುವ ಜನವಲ್ಲ. ಪ್ರಭಾವಗಳನ್ನು ಅರಗಿಸಿಕೊಳ್ಳುತ್ತೇವೆ; ನಾವು ನಮ್ಮದೇ ಪರಿಸರದಲ್ಲಿ, ನಮ್ಮದೇ ರೀತಿಯಲ್ಲಿ ಬರೆಯುತ್ತೇವೆ" ಎಂಬ ಮಾತು ಆ ದೇಶದ ಸಾಂಸ್ಕೃತಿಕ, ಸಾಹಿತ್ಯಕ ಪರಂಪರೆ ಎಷ್ಟು ಗಟ್ಟಿಮುಟ್ಟಾದದ್ದು ಎಂಬುದನ್ನ ಸೂಚಿಸುತ್ತದೆ.

ಸೋವಿಯತ್ತಿನ ಸಮಾಜವಾದಿ ವ್ಯವಸ್ಥೆ ಕುರಿತಂತೆ ಜಿಎಸ್‌ಎಸ್‌ರವರ ಅಬ್ಸರ್ವೇಶನ್ ತುಂಬ ಗಮನಾರ್ಹವಾಗಿದೆ: "ಲಕ್ಷಾಂತರ ಜನ ನೆಮ್ಮದಿಯಾಗಿರುವ ಸ್ಥಿತಿಯನ್ನು ತಂದ ಒಂದು ರಾಷ್ಟ್ರದಲ್ಲಿ, ನಾಲ್ಕು ಜನ ಬುದ್ಧಿಜೀವಿಗಳು ನರಳಿದ್ದರೆ ಅದನ್ನು ದೊಡ್ಡದು ಮಾಡಬೇಕಾಗಿಲ್ಲ." ವಾಕ್‌ಸ್ವಾತಂತ್ರ್ಯದಿಂದ ಬರಿ ವಟವಟಗುಟ್ಟುವ ನಮ್ಮ ಪ್ರಜಾಪ್ರಭುತ್ವವಾದಿ ದೇಶದ ಬುದ್ಧಿಜೀವಿಗಳನ್ನು ಕುರಿತು ಅವರು ಮುಂದುವರಿದು ಹೇಳುವ ಈ ಮಾತು ನಮ್ಮೆಲ್ಲರ ಕಣ್ತೆರೆಸುವಂತಿದೆ: "ಲಕ್ಷಾಂತರ ಜನ ಹೊಟ್ಟೆಗಿಲ್ಲದೆ ನರಳುವ ಸ್ಥಿತಿಯಲ್ಲಿರುವದು, ಕೋಟ್ಯಾಂತರ ಜನ ಯಾವ ಸುಖವನ್ನೂ ಕಾಣದೆ, ನಾಳೆ ಎಂತೊ ಏನೊ ಎಂದು ತಾಕಲಾಡುವುದು, ನಮ್ಮ ಬುದ್ಧಿಜೀವಿಗಳನ್ನು ಸದಾಕಾಲ ಕೆರಳಿಸಿ, ಅವರ ಸಾಹಿತ್ಯಕ್ಕೆ ಮುಖ್ಯಪ್ರೇರಣೆಯಾಗುವ ಅವಕಾಶ ಎಷ್ಟುಬೇಗ ಮುಗಿದರೆ ಅಷ್ಟು ಒಳ್ಳೆಯದು." ಸ್ವಾತಂತ್ರ್ಯವನ್ನೆ ಸ್ವಚ್ಛಂದವೆಂಬಂತೆ ಅಪಾರ್ಥಮಾಡಿಕೊಂಡು, ದೇಶವನ್ನು ಲೂಟಿಮಾಡಿ ದಿವಾಳಿಯೆಬ್ಬಿಸುತ್ತಿರುವುದನ್ನ ನೋಡಿ ನೊಂದ ಕವಿ ಮನಸ್ಸು ಸರ್ವಸಮಾನತೆಯ ಭರವಸೆ ನೀಡುವ ಸಮಾಜವಾದಿ ವ್ಯವಸ್ಥೆಗಾಗಿ ತುಡಿಯುವುದನ್ನು ಈ ಮಾತುಗಳಲ್ಲಿ ಕಾಣಬಹುದಾಗಿದೆ.

ಕಾದಂಬರಿ ಮಹರ್ಷಿಯಾದ ಟಾಲ್‌ಸ್ಟಾಯ್‌ನ ಹುಟ್ಟೂರು ಯಾಸ್ನಾಯಾ ಪೊಲ್ಯಾನಾಕ್ಕೆ ಕಾಲಿಟ್ಟಕೂಡಲೆ ಜಿಎಸ್‌ಎಸ್ ಅಲ್ಲಿನ ಪ್ರಶಾಂತ ಹಸಿರು ಪರಿಸರದಿಂದ ರೋಮಾಂಚನ ಗೊಳ್ಳುತ್ತಾರೆ. ಯಾತ್ರಿಕನಂತೆ ಅಲ್ಲಿ ಸಂಚರಿಸುತ್ತ ತಮ್ಮ ಗುರುಗಳಾದ ಕುವೆಂಪುವನ್ನೂ, ಟಾಲ್‌ಸ್ಟಾಯನ್ನೂ ಹೋಲಿಸಿ ನೋಡುತ್ತಾರೆ. "ಉದ್ದಕ್ಕೂ ನನಗೆ ನಮ್ಮ ಕುವೆಂಪು ಅವರ ನೆನಪು. ಇಂಥದೇ ಹಸುರಿನ ದಟ್ಟಗಾಡಿನ ನಡುವೆ ಬೆಳೆದದ್ದು ಅವರ ಚೇತನ. ಟಾಲ್‌ಸ್ಟಾಯ್‌ನಂತೆಯೇ ಕ್ರಾಂತಿಕಾರವಾದ ದಿಟ್ಟ ವ್ಯಕ್ತಿತ್ವ ಕುವೆಂಪು ಅವರದು. ಸತ್ವದಲ್ಲಿ, ಗಾತ್ರದಲ್ಲಿ ಅವರ ಕೃತಿಗಳು ಟಾಲ್‌ಸ್ಟಾಯ್ ಬರೆದ ಕೃತಿಗಳನ್ನು ನೆನಪಿಸುತ್ತವೆ. ಟಾಲ್‌ಸ್ಟಾಯ್‌ನಂತೆಯೆ ಕುವೆಂಪು ಅವರೂ ದಟ್ಟವಾದ ಅರಣ್ಯಗಳ ನಡುವೆ ತಮ್ಮ ದಾರಿಗಳನ್ನು ದಿಟ್ಟತನದಿಂದ ತೆರೆದು ನಡೆದವರು" ಎಂಬ ಅವರ ಹೋಲಿಕೆ ಸಮಂಜಸವಾಗಿದೆ. ಟಾಲ್‌ಸ್ಟಾಯ್‌ನ ಆ ಎಸ್ಟೇಟ್ ಮ್ಯೂಸಿಯಂನ ಗೇಟ್ ದಾಟಿದೊಡನೆ ಮಿರುಮಿರುಗುತ್ತ ಇರುವ ವಿಸ್ತಾರ ಕೆರೆಯಲ್ಲಿ ಆ ಮಹಾಕಾದಂಬರಿಕಾರ ಬೇಸಿಗೆಯಲ್ಲಿ ಈಸುತ್ತಿದ್ದನಂತೆ;

ಚಳಿಗಾಲದಲ್ಲಿ ಹೆಪ್ಪುಗಟ್ಟಿದ ಅದರ ಹಿಮಹಾಸಿನ ಮೇಲೆ ಸ್ಕೇಟಿಂಗ್ ಆಡುತ್ತಿದ್ದನಂತೆ. ಮರವೊಂದರ ಕೆಳಗಿರುವ ಹಾಸುಗಲ್ಲಮೇಲೆ 'ಟಾಲ್‌ಸ್ಟಾಯ್ ಹುಟ್ಟಿದ್ದು ಇಲ್ಲಿ' ಎಂದು ಬರೆದಿದ್ದಾರಂತೆ. ದಟ್ಟವಾದ ದೈತ್ಯಮರಗಳು ಕವಾಯಿತಿಗೆ ನಿಂತಹಾಗಿವೆಯಂತೆ. ಹೀಗೆ ಔಚಿತ್ಯಪೂರ್ಣ ವಿವರಗಳ ಮೂಲಕ ಆ ತಾಣವನ್ನು ನಮ್ಮ ಮನಸ್ಸಿನಲ್ಲಿ ಪ್ರತಿಸೃಷ್ಟಿ ಮಾಡುವ ಜಿಎಸ್ಎಸ್ ಅವರ ವರ್ಣನೆಗೆ ಸಾಟಿಯಿಲ್ಲ.

'ಗಂಗೆಯ ಶಿಖರಗಳಲ್ಲಿ' ಜಿಎಸ್ಎಸ್ ಅವರ ಎರಡನೆ ಪ್ರವಾಸಕಥನ. ಗಂಗೋತ್ರಿ, ಯಮುನೊತ್ರಿ, ಕೇದಾರನಾಥ, ಬದರಿನಾಥ ಕ್ಷೇತ್ರಗಳನ್ನು ಸಂದರ್ಶಿಸಲು ಅವರು ಕೈಗೊಂಡ ಸಾಂಸಾರಿಕ ಯಾತ್ರೆ ಇದಾದರೂ ಇಲ್ಲಿ ಸಾಂಸಾರಿಕ ಚಿತ್ರ ಸಾಂಕೇತಿಕವಾಗಿ ಮಾತ್ರ ಉಳಿದಿದೆ. ಗಂಗೋತ್ರಿಯಾತ್ರೆ ಮುಗಿಸಿ, ಗೌರಿಕುಂಡದ ಮಾರ್ಗವಾಗಿ ಕೇದಾರನಾಥನನ್ನು ಕಂಡು ವಾಪಸ್ ಬರುವ ಸಂದರ್ಭದಲ್ಲಿ ಜಿಎಸ್ಎಸ್ ಒಂದು ನವಿರಾದ ಚಟಾಕಿ ಹಾರಿಸುತ್ತಾರೆ: "ಮೈತುಂಬಾ ಶಾಲು ಹೊದ್ದು, ತಲೆಗಳಿಗೆ ಉಣ್ಣೆಯ ಮಫ್ಲರುಗಳನ್ನು ಸುತ್ತಿಕೊಂಡು, ಕಂಡಿಯ ಬಿದಿರುಬುಟ್ಟಿಯಲ್ಲಿ ಮುದುರಿಕೊಂಡು ಕೂತಿದ್ದ ನಮ್ಮ ಮನೆಯವರಿಬ್ಬರೂ ಗ್ರಾಮದೇವತೆಯರಂತೆ ವಿರಾಜಮಾನರಾಗಿದ್ದರು. ನನಗೆ ಒಂದು ಕ್ಷಣ ನಗು ಬಂತು." ಗಂಗೆ ಗೌರಿಯರ ಉಭಯ ರಮಣನಾದ ಶಿವನಿಗೆ ಮಾತ್ರ ಕರೆಕ್ಟಾಗಿ ಅರ್ಥವಾಗುವಂತಿದೆ ಈ ಚಟಾಕಿಯ ಬಿಕ್ಕಟ್ಟು. ತಕ್ಷಣ ಸ್ವವಿಮರ್ಶೆ ಜಾಗ್ರತವಾಗಿ "ನಾನು ಸಹ ಕೋಟು ತೊಟ್ಟು, ಮುಸುಗುಟೋಪಿ ಹಾಕಿಕೊಂಡದ್ದರಿಂದ, ಕಂಡಿಯಲ್ಲಿ ಕೂತ ಸಮಯದಲ್ಲಿ, ಅವರ ಕಣ್ಣಿಗೆ ಏನೇನೋ ಆಗಿ ಕಾಣಿಸಲು ಸಾಧ್ಯ ಎಂದು ಅಂದುಕೊಳ್ಳುತ್ತಾ ಹಿಂದೆ ನಡೆದೆ" ಎನ್ನುತ್ತಾರೆ. ಜಿಎಸ್ಎಸ್ ನಮಗೆ ಇಷ್ಟವಾಗುವುದು, ಆಪ್ತರೆನಿಸುವುದು ಇಂಥ ನಿರಂಬಳ ಗಳಿಗೆಗಳಲ್ಲಿ.

"ನಾನು ಪುಣ್ಯಸಂಪಾದನಾರ್ಥಿಯಾದ ಯಾತ್ರಿಕನೂ ಅಲ್ಲ ಅಥವಾ ಕೇವಲ ಸೌಂದರ್ಯಾನ್ವೇಷಿಯಾದ ಪ್ರವಾಸಿಯೂ ಅಲ್ಲ" ಎಂದು ಅವರು ಹೇಳಿಕೊಂಡಿದ್ದಾರೆ. ತಮ್ಮ ಸಾಂಸಾರಿಕ ಸಹಯಾತ್ರಿಗಳೊಡನೆ ಒಂದು ಬಗೆಯ ನಿಸರ್ಗ ಸಂಸರ್ಗಕ್ಕಾಗಿ ಅವರು ಹಿಮಾಲಯಕ್ಕೆ ಹೋಗಿದ್ದರು ಎನಿಸುತ್ತದೆ. ನಿಸರ್ಗದ ವೈಚಿತ್ರಗಳಿಗೆ ತೆರೆದ ಕಣ್ಣಾಗುತ್ತ, ಬದುಕಿನ ಅಯಾಚಿತ ಅನುಭವಗಳಿಗೆ ತೆರೆದ ಮನವಾಗುತ್ತ ಅವರು ಈ ಪ್ರಕೃತಿಯಾತ್ರೆ ಕೈಗೊಂಡಿರಬಹುದು. ಒಂದು ಬಗೆಯ ಸ್ಥಿಮಿತ ತಲುಪಿದ ಸಾಕ್ಷಿಪ್ರಜ್ಞೆಯೊಂದು ಈ ಪ್ರವಾಸಕಥನದುದ್ದಕ್ಕೂ ಕಂಡುಬರುತ್ತದೆ. ಭಕ್ತರ ಭಾವನೆ-ಭಜನೆಗಳಿಂದ ರೋಮಾಂಚಿತ ರಾದರೂ ಕೇದಾರೇಶ್ವರ ಲಿಂಗವನ್ನು ಕಂಡಾಗ, ಲಿಂಗದಷ್ಟೆ ತಣ್ಣಗೆ, ನಿರ್ಲಿಪ್ತವಾಗಿ ನಿಲ್ಲುತ್ತಾರೆ ಜಿಎಸ್ಎಸ್. "ಕೇದಾರನಾಥ ಅನ್ನುವುದು ವಾಸ್ತವವಾಗಿ ಒಂದು ಮೂರ್ತಿ ಅಲ್ಲ; ಲಿಂಗವೂ ಅಲ್ಲ. ಅದೊಂದು ಶಿಲಾಖಂಡ. ಹೊರಗೆ ನಾವು ಕಾಣುವ ಮಹಾಪರ್ವತದ ಒಂದು ಸಂಕ್ಷಿಪ್ತರೂಪ. ಬೆಟ್ಟವೊಂದರ ಶಿಖರಾಕೃತಿಯ ಮೈಯನ್ನು ಮೂರು ನಾಲ್ಕು ಅಡಿಗಳಿಗೆ ಭಟ್ಟಿಯಿಳಿಸಿದರೆ ಹೇಗೋ ಹಾಗಿರುವ ಒಂದು ಶಿಲಾಕೃತಿ. ಅಂದರೆ ಹೊರಗೆ

ಕಾಣುವ ಪರ್ವತವನ್ನೇ ಇಲ್ಲ ಒಳಗೆ ಸಾಂಕೇತಿಕವಾಗಿ ಪೂಜಿಸುತ್ತಾರೆ ಎಂದಂತಾಯಿತು" ಎಂದು ವಿವರಿಸುತ್ತಾರೆ. ಇದು ಮೂಲಭೂತವಾಗಿ ಚಾರಿತ್ರಿಕ, ಸಮಾಜ ವಿಕಾಸಾತ್ಮಕ ದೃಷ್ಟಿಕೋನ. ಕಾರಂತರಂತೆ, ಜಿಎಸ್‌ಎಸ್ ಅವರೂ ಅಪ್ಪಟ ವಿಜ್ಞಾನವಾದಿ ಚಿಂತಕರು.

ಪುಸ್ತಕದ ಪ್ರಾರಂಭದಲ್ಲೆ 'ಗಂಗೆಯಲ್ಲಿ ದೀಪಮಾಲೆ' ಎಂಬ ಅಧ್ಯಾಯವಿದೆ. ಹರದ್ವಾರದ ಗಂಗಾನದಿಯ ಸೀಳುಗಳಲ್ಲಿ ಭಕ್ತಾದಿಗಳು ತೇಲಿಬಿಡುವ ನೂರೆಂಟು ಆಸೆಯ ದೀಪಗಳನ್ನ ಬಗೆ ಬಗೆಯ ಪ್ರಾರ್ಥನೆಯ ದೀಪಗಳನ್ನ ಜಿಎಸ್‌ಎಸ್ ಬಣ್ಣಿಸುವುದನ್ನ ಓದುವುದೆ ಮುದಕೊಡುವ ಅನುಭವ: "ನೀರಿನಲ್ಲಿ ಕಾಲುಗಳನ್ನು ಇಳಿಯಬಿಟ್ಟುಕೊಳ್ಳುವಷ್ಟು ಹತ್ತಿರದಲ್ಲಿ ಕುಳಿತೆವು. ಎಲ್ಲರ ಕೈಯಲ್ಲು—ಅದರಲ್ಲಿಯೂ ಹೆಂಗಸರ—ಹೂವಿನ ದೀಪದ ದೊನ್ನೆಗಳು. ಎಲೆಯ ದೊನ್ನೆ, ಅದರ ತುಂಬ ಹೂವು, ಅದರ ನಡುವೆ ಒಂದೊಂದು ಎಣ್ಣೆಯ ಬತ್ತಿ. ಈ ಬತ್ತಿಗೆ ಕಡ್ಡಿ ಗೀರಿ ಕಿಡಿ ಹೊತ್ತಿಸಿ, ಉರಿಯುವ ದೀಪದ ದೊನ್ನೆಯನ್ನ ನೀರಿನಲ್ಲಿ ತೇಲಿಬಿಡಲು ಶುರುಮಾಡಿದರು. ಸಂಜೆಯಾಗುತ್ತಿದ್ದಂತೆ ನೂರಲ್ಲ ಸಾವಿರ, ಸಾವಿರ ಅಲ್ಲ ಲಕ್ಷ, ಅನ್ನುವ ಸಂಖ್ಯೆಯ ಜನ ನದಿಯ ಎರಡೂ ಬದಿಗೆ ಪೂಜೆಯನ್ನು ವೀಕ್ಷಿಸಲು ಕಿಕ್ಕಿರಿದರು." ಜಿಎಸ್‌ಎಸ್ ಅವರು ವಾಸ್ತವವಾದಿ. ಒಳಿತಿನ ಮೇಲೆ ಕಣ್ಣು ನೆಟ್ಟಿದ್ದರೂ ಬದುಕಿನಲ್ಲಿನ ಕೆಡಕು, ಅಪಘಾತ ಅವರ ಕಣ್ತಪ್ಪಿಸಲಾರದು. ದೀಪಗಳ ಕಡೆಗೇ ಕಣ್ಣುನೆಟ್ಟ ಅವರಿಗೆ ಕಂಡದ್ದನ್ನು ಕೇಳಿ: "'ಗಂಗಾಮಾಯಿ'ಗೆ ಹೆಣ್ಣುಮಕ್ಕಳು, ಗಂಡ-ಹೆಂಡತಿಯರು ತೇಲಿಬಿಟ್ಟ ಹೂವಿನ ದೊನ್ನೆಯ ದೀಪಗಳು ನದೀ ಜಲದಲ್ಲಿ ಚಲಿಸತೊಡಗಿದವು. ಕೆಲವು ದೊನ್ನೆಗಳು ತೇಲಿಬಿಟ್ಟ ನಂತರ ಒಂದೆರಡು ಮಾರು ದೂರಹೋಗುವಷ್ಟರಲ್ಲಿಯೇ ಸೆಳವಿಗೆ ಸಿಕ್ಕು ಗಿರಗಿರನೆ ಸುತ್ತಿ ತಲೆಕೆಳಕಾಗಿ, ಹತ್ತಿದ ದೀಪ ನೀರಲ್ಲಿ ಆರಿ, ಅದರ ಜತೆಗಿದ್ದ ಹೂವುಗಳು ದಿಕ್ಕಾಪಾಲಾಗಿ ಕೊಚ್ಚಿ ಹೋಗುತ್ತಿದ್ದವು; ಕೆಲವು ದೊನ್ನೆ-ದೀಪಗಳು ಸ್ವಲ್ಪ ದೂರದವರೆಗೆ ಉರಿಯುತ್ತಾ, ನದೀ ಜಲದಲ್ಲಿ ಪ್ರತಿಬಿಂಬಿತವಾಗುತ್ತ ಮುಂದೆ ಹೋಗಿ, ಇನ್ನಿತರ ದೊನ್ನೆಗಳಿಗೆ ತಗುಲಿ ತಲೆಕೆಳಕಾಗುತ್ತಿದ್ದವು; ಇನ್ನು ಕೆಲವು ಅಬಾಧಿತವಾಗಿ ತೇಲುತ್ತ ಉರಿಯುವ ದೀಪಗಳ ಸಹಿತ ದೂರದೂರಕ್ಕೆ ಹೋಗುತ್ತಿದ್ದವು. ನೋಡಿದಂತೆ ನೋಡಿದಂತೆ ಬಹುಸಂಖ್ಯೆಯಲ್ಲಿ ತೇಲಿಬಿಟ್ಟ ದೀಪಗಳು ನದಿಯ ಹರಹನ್ನೆಲ್ಲ ತುಂಬಿಕೊಂಡು ಅದ್ಭುತವಾದ ದೃಶ್ಯಮಾಲೆಯನ್ನು ನಿರ್ಮಿಸಿದವು; ಸಂಜೆಯ ಕೆಂಪು ಕರಗಿ, ನದಿಯ ನೀರು ಕಪ್ಪಾದಂತೆ, ಅದರ ಮೇಲೆ ತೇಲುವ ನೂರಾರು ದೀಪಗಳು, ನದಿಯ ಬಟ್ಟೆಗೆ ಬೆಳಕಿನ ಕಸೂತಿ ಹಾಕಿದಂತೆ ಕಾಣುತ್ತಿದ್ದವು." ಈ ಸಾಲುಗಳು ತಮ್ಮಷ್ಟಕ್ಕೆ ತಾವೆ ಕಾವ್ಯವಾಗುವ, ಧ್ವನಿಪೂರ್ಣವಾಗಿಬಿಡುವ ಪವಾಡವನ್ನು ಮೆರೆಯುತ್ತವೆ. ಜೀವನದಿಯಲ್ಲಿ ಜೀವಿದೀಪಗಳು ತೇಲುವ ಮುಳುಗುವ ಅಪೂರ್ವ ಲಯಗಾರಿಕೆಗೆ ಈ ಸಾಲುಗಳು ಪ್ರತೀಕವಾಗುತ್ತವೆ. ಕವಿಯೊಬ್ಬನ ಭಾವಶುದ್ಧಿ, ತುಂಬ ಸರಳ ಮಾತುಗಳಿಗೂ ಇಂಥ ಆಳವಾದ ಧ್ವನಿಶಕ್ತಿಯನ್ನು ನೀಡಬಲ್ಲುದು. ಜಿಎಸ್‌ಎಸ್ ಅವರ ಈ ಮನಸ್ಥಿತಿಗೆ ಡಯಮೆಟ್ರಿಕಲಿ ಅಪೊಸಿಟ್ಟಾದ ಡಿ.ಆರ್. ನಾಗರಾಜರ ಮನಸ್ಥಿತಿಯ ಪಡಿನೆಳಲನ್ನು ಅವರು

ಥಾಯ್‌ಲ್ಯಾಂಡಿನ ಬ್ಯಾಂಕಾಕ್‌ನ ಪ್ರವಾಸದ ಬಗ್ಗೆ ಬರೆದಿರುವ "ಕಂಕಾ ನದಿಯ ದಡದಲ್ಲಿ ಕಾಮನ ರಾಜಧಾನಿ" (ಸಾಹಿತ್ಯ ಕಥನ-ಪುಟ-375) ಎಂಬ ಲೇಖನದಲ್ಲಿ ಕಾಣಬಹುದಾಗಿದೆ. ಈ ಅಧ್ಯಾಯವನ್ನು ಆ ಲೇಖನದೊಡನೆ ಹೋಲಿಸಿದರೆ, ನಾನು ಹೇಳುತ್ತಿರುವುದು ಏನೆಂದು ಸ್ಪಷ್ಟವಾಗುತ್ತದೆ. ಭಾವಪೂರ್ಣತೆಯ ಆಚರಣೆಗಳ ಜೀವಾಳ. ಜಿಎಸ್ಎಸ್ ನೋಡುತ್ತಿರುವ ಕ್ರಿಯೆ act of faith. ಡಿ.ಆರ್.ಎನ್ ನೋಡುತ್ತಿರುವ ಕ್ರಿಯೆ ಎರಡರಲ್ಲೂ ಇದೆಯೊ ಅಥವಾ ಎರಡರಲ್ಲು ಇಲ್ಲವಾಗಿದೆಯೊ ಎಂಬುದು ಬಿಡಿಸಲಾರದ ಪ್ರಶ್ನೆಯಂತಿದೆ. ಇದೊಂದು ಸಾಂಸ್ಕೃತಿಕ ಬಿಕ್ಕಟ್ಟು.

ಜಿ.ಎಸ್.ಎಸ್ ಅವರ ಜೀವನಶ್ರದ್ಧೆ ಅವರನ್ನು ಎಂದೂ ಗೊಡ್ಡು ಧಾರ್ಮಿಕತೆಗೆ, ನೀಚ ಮತಾಂಧತೆಗೆ ಬಲಿಗೊಡುವುದಿಲ್ಲ. ಸ್ಪಷ್ಟವಾದ ವಾಸ್ತವವಾದಿ ನೆಲೆಗಟ್ಟಿನಮೇಲೆ ನಿಂತಿರುವ ಅವರ ಜೀವನ ಶ್ರದ್ಧೆ, ಎಲ್ಲವನ್ನೂ ಒಂದು ಬಗೆಯ ನಿಸರ್ಗ ಸಹಜತೆಯಿಂದ ನಿರುಕಿಸುತ್ತದೆ; ಒಂದು ಅಪ್ಪಟ ವೈಜ್ಞಾನಿಕ ಕಣ್ಣೆಲೆಯಿಂದ ಎಲ್ಲವನ್ನೂ ಪರಿಭಾವಿಸುತ್ತದೆ. ಹೀಗಾಗಿ ಕೇದಾರ, ಹರದ್ವಾರಗಳಲ್ಲಿ ಅವರ ಹೊರಗಣ್ಣಿಗೆ ಆಗುವ 'ದರ್ಶನ' ಅವರ ಒಳಗಣ್ಣಿಗೆ ಮತ್ತೊಂದು ವಿಭಿನ್ನ ಬಗೆಯ 'ದರ್ಶನ'ವನ್ನು ಉಂಟುಮಾಡುತ್ತದೆ: "ಹರದ್ವಾರದಲ್ಲಿ ಇಡೀ ಗಂಗಾನದಿಯನ್ನು ಪೂಜೆ ಮಾಡುವುದರ ಹಿಂದೆ ಯಾವ ಅರ್ಥವಂತಿಕೆ ಇದೆಯೋ ಅದೇ ಇಲ್ಲಿ ಪುನರಾವರ್ತನೆಗೊಂಡಿದೆ, ಮಹಾಪರ್ವತವನ್ನೆ ಒಳಗಿನ ಗರ್ಭಗುಡಿಯಲ್ಲಿ ಪ್ರತಿಮೆಯನ್ನಾಗಿ ಭಾವಿಸುವ ಮನೋಧರ್ಮದಲ್ಲಿ. ಈ ಮಹಾಪರ್ವತಗಳು, ನದಿಗಳು, ಇವೇ ತಾನೆ ನಮ್ಮ ದೇವರುಗಳು?" ಎಂದು ಕೇಳಿ ಓದುಗರನ್ನು ಬೆರಗಿಗೆ ತಳ್ಳುತ್ತಾರೆ. ನಿಸರ್ಗಾರಾಧನೆಯ ವಿಕಸನದ ಹೆಜ್ಜೆ ಮೂಡದ ಹಾದಿಯನ್ನು ಕ್ಷಣಕಾಲ ಬೆಳಗಿಸಿ 'ಹ್ಞ, ಸಿಕ್ಕಿತು missing link' ಎಂಬ ಖುಷಿಗೆ ಒಯ್ದು ಮುಟ್ಟಿಸುತ್ತಾರೆ. ಶಿವರಾಮ ಕಾರಂತರು ತಮ್ಮ 'ಸ್ವಪ್ನದ ಹೊಳೆ', 'ಮೂಕಜ್ಜಿಯ ಕನಸು' ಕಾದಂಬರಿಗಳಲ್ಲಿ ಮಾಡುತ್ತಿರುವ ವಿಚಾರಕ್ರಾಂತಿ ಇದೇ ಬಗೆಯದು. ಬರಿ ಮಣ್ಣಿನ ಕಣ್ಣುಗಳಿಂದ ನೋಡುವುದಕ್ಕೂ, ಮೂರನೆ ಕಣ್ಣು ತೆರೆದುನೋಡುವುದಕ್ಕೂ ಇರುವ ವ್ಯತ್ಯಾಸ ಅಂದರೆ ಇದೇನೆ.

ಎಲ್ಲವನ್ನೂ ಕಣ್ಣಿಗೆ ಕಟ್ಟುವಂತೆ ಹೇಳುವ ಚಿತ್ರಶಕ್ತಿ, ಉಪಯುಕ್ತವೆನಿಸುವ ಐತಿಹಾಸಿಕ ಮಾಹಿತಿ, ಹಿತವೆನಿಸುವ ಪೌರಾಣಿಕ ನೆನಪುಗಳು, ಕಣ್ತೆರೆಸುವ ವೈಜ್ಞಾನಿಕ ಚಿಂತನೆ ಮತ್ತು ವಾಸ್ತವವಾದಿ ದೃಷ್ಟಿಕೋನ ಇವುಗಳಿಂದಾಗಿ 'ಗಂಗೆಯ ಶಿಖರಗಳಲ್ಲಿ' ಒಂದು ಅತ್ಯುತ್ತಮ ಪ್ರವಾಸಕಥನ ಎನ್ನಬಹುದು.

'ಅಮೆರಿಕದಲ್ಲಿ ಕನ್ನಡಿಗ' ಜಿಎಸ್ಎಸ್‌ರವರ ಮೂರನೆ ಪ್ರವಾಸಕಥನ. "ನಾನು ಅಮೆರಿಕದಲ್ಲಿ ನಮ್ಮ ಕನ್ನಡಿಗರ ನಡುವೆ ಇದ್ದರೂ, ಅಮೆರಿಕನ್ನರ ಬದುಕಿನೊಂದಿಗೆ ಬೆರೆಯುವ ಅವಕಾಶ ದೊರೆಯದೇ ಹೋದರೂ, ಅಮೆರಿಕದ ಜೀವನವನ್ನು ಒಬ್ಬ ಭಾರತೀಯನಾಗಿ ನಾನು ಗಮನಿಸಿದ್ದೇನೆ" ಎಂದು ಅವರು ಹೇಳಿಕೊಂಡಿದ್ದಾರೆ. ಅಮೆರಿಕದಲ್ಲಿ ಅಸಂಖ್ಯಾತ ಕನ್ನಡಿಗರಿದ್ದಾರೆಂಬ ಹೆಮ್ಮೆಯ ಜೊತೆಗೇ, ಅವರೆಲ್ಲ ನಮ್ಮ ಪ್ರೀತಿಯ

ಕವಿಯನ್ನು ತಮ್ಮ ಸಂಘಟನೆಗಳ ಮೂಲಕ ಎಂಥ ಸಂಭ್ರಮ ಸಡಗರದಿಂದ ಸತ್ಕರಿಸಿದರಲ್ಲ ಎಂಬ ಅಭಿಮಾನದ ಜೊತೆಗೇ, ಇದರಿಂದ ನಮ್ಮ ಪ್ರೀತಿಯ ಕವಿಗಳ ಅನುಭವ ಪ್ರಪಂಚ ಕೊಂಚ ಸೊರಗಿತೇನೊ ಎಂದೂ ಅನ್ನಿಸುತ್ತದೆ. ನಿಸರ್ಗ-ನಾಗರಿಕತೆ ಎರಡನ್ನೂ ಪ್ರೀತಿಸುತ್ತ ಬಂದಿರುವ ಜಿಎಸ್‌ಎಸ್ ತಾವು ನೋಡಿಬಂದ ಕಾಡುಗಳು, ಜಲಪಾತಗಳು, ಮಾಯಾನಗರಿಯಂಥ ನಿರ್ಮಾಣಗಳು ಎಲ್ಲವನ್ನೂ ಸಾದ್ಯಂತ ಬಣ್ಣಿಸಿದ್ದಾರೆ. ಪ್ರವಾಸಕಥನದ ಈ ಮಗ್ಗುಲು ಸೊರಗಿಲ್ಲ. ಆದರೆ ಅಮೆರಿಗನ್ನಡಿಗರ ಸತ್ಕಾರ ಸಾಗರದ ನಡುವೆ ಜಿಎಸ್‌ಎಸ್ ಅವರಿಗೆ ಅಮೆರಿಕದ ಸಮಾಜ, ಸಂಸ್ಕೃತಿ, ಇತಿಹಾಸ, ಕಲೆ ಮುಂತಾದವುಗಳೊಡನೆ ಆಳವಾದ ಸಂಪರ್ಕ ಸಾಧ್ಯವಾಗಿಲ್ಲ. ಕನ್ನಡದಲ್ಲಿ ವಿಪುಲವಾಗಿ ಬಂದಿರುವ ಅಮೆರಿಕ ಪ್ರವಾಸಕಥನಗಳ ಹಿನ್ನೆಲೆಯಲ್ಲಿ ಈ ಮಾತು ಸ್ಪಷ್ಟವಾಗುತ್ತದೆ.

ಆದರೆ ಮ್ಯೂಸಿಯಂಗಳು, ಪ್ರವಾಸೀತಾಣಗಳು ಜಿಎಸ್‌ಎಸ್ ಅವರ ಲೇಖನಿಯ ಮೂಲಕ ಅಚ್ಚುಕಟ್ಟಾಗಿ ಮೈ ಪಡೆದಿವೆ. ಫಿಲಡೆಲ್ಫಿಯಾದ ಮ್ಯೂಸಿಯಂನಲ್ಲಿ ಅವರು ಕಂಡ mummificationನ ಈ ವಿವರವನ್ನು ಓದಿರಿ: "ಈಜಿಪ್ಟ್‌ನ ರಾಜ ರಾಣಿಯರ ಶರೀರಗಳನ್ನು ಮಮ್ಮಿಗಳನ್ನಾಗಿ ಮಾಡಿ ಸಂರಕ್ಷಿಸುವ ಕ್ರಮ ಹೀಗಿದೆ: ಆ ಮೃತದೇಹಗಳ ಹೊಟ್ಟೆಯನ್ನು ಸೀಳಿ, ಅಲ್ಲಿರುವ ಕರುಳು ಇತ್ಯಾದಿಗಳನ್ನು ಸಂಪೂರ್ಣವಾಗಿ ತೆಗೆದುಹಾಕಿ, ಅನಂತರ ತಲೆಯೊಳಗಿನ ಮೆದುಳನ್ನು ಮೂಗಿನ ಮೂಲಕ ಹೊರಕ್ಕೆ ತೆಗೆದು, ವಿವಿಧ ಲೇಪನಗಳಿಂದ ಆ ಶರೀರಗಳನ್ನು ಸವರಿ, ಆ ಶವಗಳನ್ನು ಬಟ್ಟೆಯಲ್ಲಿ ಬಿಗಿಯಾಗಿ ಸುತ್ತುತ್ತಿದ್ದರು. ಆಮೇಲೆ ಆ ಶರೀರಗಳ ಆಕಾರಕ್ಕೆ ಅನುಗುಣವಾದ ಮರದ ಕವಚಗಳನ್ನು ಜೋಡಿಸಿ, ಕೆಲವು ವೇಳೆ ಮುಖದ ಆಕಾರ-ಲಕ್ಷಣಕ್ಕೆ ಹೊಂದುವಂಥ ಸಚಿತ್ರವಾದ ಮರದ ಮುಖವಾಡ ಕವಚವನ್ನು ಜೋಡಿಸಿ, ಆಯಾ ರಾಜ ರಾಣಿಯರಿಗೆ ಪ್ರಿಯವಾದ ಸಮಸ್ತ ವಸ್ತುಗಳನ್ನು ಅವುಗಳ ಬದಿಗಿರಿಸಿ, ಪಿರಿಮಿಡ್ಡಿನ ಕೋಣೆಗಳಲ್ಲಿ ಭದ್ರವಾಗಿ ಮುದ್ರೆ ಮಾಡುತ್ತಿದ್ದರು."

ಈ ವಿವರಣೆಯನ್ನು ಕಾರಂತರ 'ಅಪೂರ್ವ ಪಶ್ಚಿಮ'ದ ಒಂದು ವರ್ಣನೆಯ ಪಕ್ಕ ಇಟ್ಟು ನೋಡಬಹುದು: "ನನ್ನ ಎಡಕ್ಕೆ ತಗ್ಗಾದ ಫಲವತ್ತಾದ ಬಯಲು ಭೂಮಿ; ಉತ್ತು ಬಿತ್ತಿದ ಹೊಲಗಳು. ಸಾಲುಸಾಲಾಗಿ ನೆಟ್ಟ ಖರ್ಜೂರದ ಮರಗಳು. ಬಲದ ಮಗ್ಗುಲಲ್ಲಿ ಮಾನವ ನಿರ್ಮಿತ ಬೆಟ್ಟಗಳಿದ್ದವು, ಒಂದಲ್ಲ-ಮೂರು. ಅವೇ ಪಿರಮಿಡ್ಡುಗಳು. ನನ್ನ ಎದುರಿನ ನೆಲವು ಇಳಿದು ತಗ್ಗಾಗಿತ್ತು. ಮುಂದೊಂದು ಕಣಿವೆ, ಅಲ್ಲಿಗೆ ನೂರು ಗಜವೂ ಇಲ್ಲ. ಇಳಿಯುವವನ ಎದುರಿಗೇನೇ ದೊಡ್ಡದಾದೊಂದು ಕುಣಿ. ಅದರ ದಂಡೆಯಮೇಲೆ ಭವ್ಯವಾಗಿ ಕಾಣಿಸುವ ಶಿಲಾವಿಗ್ರಹ-ಸ್ಫಿಂಕ್ಸ್; ಪ್ರಾಚೀನ ಐಗುಪ್ತರ ನಾರಸಿಂಹ. ನಮ್ಮ ನಾರಸಿಂಹ-ಸಿಂಹಮುಖಿ, ನರ ಶರೀರ. ಅವರ ನಾರಸಿಂಹ-ನರಮುಖಿ, ಸಿಂಹಶರೀರ! ನೆಲದಿಂದೆದ್ದ ಶಿಲೆಯ ಪದರೊಂದನ್ನು ಕೊರೆದು ಮಾಡಿದ ಸ್ಫಿಂಕ್ಸ್ ಸುಮಾರು ಮೂವತ್ತು ಅಡಿ ನೀಳವಾಗಿದೆ. ಅದರ ಅರ್ಧದಷ್ಟು ಎತ್ತರವಾಗಿದೆ. ಆ ಪ್ರತಿಮೆಗೆ ಎದುರಾಗಿ ನಿಂತರೆ

ಅದರ ಮುಖದ ಗಂಭೀರ ಮೌನ ಒಡೆದು ಕಾಣುತ್ತದೆ. ಆ ಬಗೆಯ ಮೌನಮುಖವನ್ನು ಬಣ್ಣಿಸುವಾಗ 'ಸ್ಫಿಂಕ್ಸ್‌ನ ಮೌನದಂತೆ' ಎನ್ನುವ ನಾಣ್ಣುಡಿಯುಂಟಾಯಿತು. ಪ್ರಾಚೀನಯುಗದ ದೊರೆಯೊಬ್ಬನ ಮುಖವದು. ಆ ಮುಖದ ಹಿಂದೆ ಆಳವರಿಯಲಾರದ ಯಾವುದೋ ಒಂದು ಗೂಢ ವಿಚಾರಸರಣಿ ತುಂಬಿದ್ದಂತೆ ಕಾಣುತ್ತದೆ."

ಜಿ.ಎಸ್.ಎಸ್ ಅವರ ವಿವರಣೆ, ಕಾರಂತರ ವರ್ಣನೆಗಳಲ್ಲಿ ಕಂಡುಬರುವ ಸಾಮಾನ್ಯ ಅಂಶಗಳೆಂದರೆ—ಸರಳವಾದ ಭಾಷೆ, ಸಹಜವೆನಿಸುವ ಶೈಲಿ, ಕೇಳಿದ್ದನ್ನು ಕಂಡದ್ದನ್ನು ಮನಮುಟ್ಟುವಂತೆ ಚಿತ್ರಖಚಿತವಾಗಿ ಹೇಳುವ ಒಂದು ವಿಶಿಷ್ಟ ಸಾಮರ್ಥ್ಯ—ಇವು. ಅಗತ್ಯವಾದ, ಉಚಿತ ವಿವರ, ವರ್ಣನೆ ಇದೆ; ಆದರೆ ಶಬ್ದಾಡಂಬರ ಒಂದಿಷ್ಟೂ ಇಲ್ಲ. ಲೇಖಕರ ತನ್ಮಯತೆ, ಓದುಗರ ತನ್ಮಯತೆಯಾಗಿ ಪರಿಣಮಿಸುವುದು ಎಲ್ಲ ಒಳ್ಳೆಯ ಬರಹಗಳ ಒಳಗುಟ್ಟು. ಇಂಥ ಬರವಣಿಗೆಗೆ ಓದುಗರ ಕಲ್ಪನೆಗಳನ್ನು evoke ಮಾಡುವ, ಅವರ ಭಾವಲೋಕವನ್ನು, ಚಿಂತನಾ ಸಾಮರ್ಥ್ಯವನ್ನು ವಿಸ್ತರಿಸುವ ಶಕ್ತಿ ಇರುತ್ತದೆ. ಜಿಎಸ್‌ಎಸ್ ರವರ ಪ್ರವಾಸಕಥನಗಳನ್ನು ಓದುವಾಗ ಪದೇಪದೇ ಕಾರಂತರು ನೆನಪಾಗುತ್ತಾರೆ.

"ನೆಲಮಟ್ಟದಿಂದ 630 ಅಡಿಗಳೆತ್ತರದ.... ಬೃಹದಾಕಾರದ ಲೋಹದ ಕಮಾನು. ಮಧ್ಯಾಹ್ನದ ಬಿಸಿಲಲ್ಲಿ ಥಳಥಳ ಹೊಳೆಯುತ್ತಾ, ನೆಲದ ಪಾಣಿಪೀಠದ ಮೇಲೆ ವಿರಾಜಿಸುವ ವಿಜ್ಞಾನದ ಮಹಾಶಿವಲಿಂಗದಂತೆ ಆಕಾಶದ ಹಿನ್ನೆಲೆಯಲ್ಲಿ ವಿಸ್ಮಯವನ್ನುಂಟುಮಾಡುತ್ತದೆ"—ಹೀಗೆ ವರ್ಣಿತವಾಗಿರುವ ಸೇಂಟ್ ಲೂಯೀಸ್ ನಗರದ ಲೋಹದ ಕಾಮನಬಿಲ್ಲು; "ಬೆಳ್ಳನೆಯ ಸುಣ್ಣಕಲ್ಲಿನ ಈ ಗುಹೆಗಳಲ್ಲಿ ಪದರ ಪದರಗಳಾಗಿ, ದಳ ದಳಗಳಾಗಿ ವಿನ್ಯಾಸಗೊಂಡ ಶಿಲಾಕೃತಿಗಳು ಕಲ್ಲರಳಿ ಹೂವಾದ ಬೆರಗನ್ನು ಕವಿಸುತ್ತವೆ. ಕಲ್ಲು ಅನ್ನುವುದು ತನ್ನ ಘನರೂಪಕ್ಕೆ ಬೇಸತ್ತು, ದ್ರವರೂಪವಾಗಲು ಪ್ರಯತ್ನಿಸಿ, ತಾತ್ಕಾಲಿಕವಾಗಿ ಸ್ತಬ್ಧವಾಗಿದೆಯೋ ಅನ್ನುವಂತೆ, ಕಲ್ಲು ವಿವಿಧಾಕಾರದ ಎಳೆಗಳಾಗಿ, ಬಿಳಲುಗಳಾಗಿ, ಬೇರುಗಳಾಗಿ, ಅಸಂಖ್ಯಾತ ಚಿತ್ರವಿಚಿತ್ರಾಕೃತಿಗಳಾಗಿ ರೂಪುಗೊಂಡಿದೆ"—ಎಂದು ಬಣ್ಣಿಸಲ್ಪಟ್ಟಿರುವ ಮಿರಾಮಿಕ್ ಗುಹೆಗಳು; "ನೆಲದೊಳಗಿನ ಬಿಲಗಳಿಂದ 'ಬುಸುಗುಟ್ಟುವ ಪಾತಾಳದ ಹಾವೋ' ಎಂಬಂತೆ ರೋಷದಿಂದ ಚಿಮ್ಮಿ ನೆಗೆಯುವ ಬಿಸಿನೀರಿನ ಬುಗ್ಗೆಗಳ ಮೈ ಬೀಸುವ ಗಾಳಿಗೆ ತುಂತುರು ತುಂತುರಾಗಿ ಬಹುದೂರಕ್ಕೆ ಹನಿಗಳನ್ನು ಎರಚಿ, ಮತ್ತೆ ಏರಿದೆತ್ತರದಿಂದ ಥಟ್ಟನೆ ನೆಲಕ್ಕೆ ಕುಸಿದು, ಬಿಸಿ ಕಳೆದುಕೊಂಡು ತಣ್ಣಗೆ ಹರಿದುಹೋಗುವ ದೃಶ್ಯ..." ಎಂದು ಬಣ್ಣನೆಗೊಳಗಾಗಿರುವ ಎಲ್ಲೊಸ್ಟೋನ್ ಪಾರ್ಕಿನ ಬಿಸಿಬುಗ್ಗೆಗಳು; "ದಟ್ಟವಾದ ಕಾಡೊಳಗಿನ... ಬೃಹದ್ಗಾತ್ರದ 'ರೆಡ್‌ವುಡ್' ಮರಗಳ ಬುಡಗಳಲ್ಲಿ ಗುಹೆಯಾಕಾರದ ಪೊಟರೆಗಳನ್ನು ಕಂಡೆವು. ಏಳೆಂಟು ಮಂದಿ ಸಲೀಸಾಗಿ ಹೋಗಿ ನಿಲ್ಲಬಹುದಾದಷ್ಟು ಅವಕಾಶವಿದೆ. ಆ ಪೊಟ್ಟರೆಯ ಹೊಟ್ಟೆಗಳಲ್ಲಿ.... ಒಂದು ಭಾರೀ ಮರದ ಮೈಯಮೇಲೆ 'the Father of the Forest' (ಅರಣ್ಯದ ತಂದೆ) ಎಂದು ಬೋರ್ಡು ಹಾಕಲಾಗಿತ್ತು"—ಎಂದು ಚಿತ್ರವತ್ತಾಗಿ ಮೂಡಿರುವ 'ರೆಡ್‌ವುಡ್' ಪಾರ್ಕ್; "ನಯಾಗರಾ ಎಂದರೆ ರೆಡ್

ಇಂಡಿಯನ್ನರ ಭಾಷೆಯಲ್ಲಿ 'ಗುಡುಗುವ ನೀರು' ಎಂದು ಅರ್ಥ... ವರ್ಷಕ್ಕೆ ಒಂದು ಸಲ ತಮ್ಮ ಜನಾಂಗದ ಚೆಲುವೆಯಾದ ಕನ್ಯೆಯೊಬ್ಬಳನ್ನು ಸರ್ವಾಲಂಕಾರಗಳಿಂದ ಶೃಂಗಾರಮಾಡಿ, ಹೂವಿನಿಂದ ಅಲಂಕರಿಸಿದ ದೋಣಿಯೊಂದರಲ್ಲಿ ಕೂರಿಸಿ, ಈ ನದೀಜಲದ ಮೇಲೆ ತೇಲಿ ಬಿಡುತ್ತಿದ್ದರಂತೆ; ಹಾಗೆ ಬಿಟ್ಟ ದೋಣಿ.... ಸೀದಾ ನಯಾಗರ ಜಲಪಾತದೊಳಕ್ಕೆ ಬಿದ್ದು, ಆ ಕನ್ಯೆ ನದೀದೇವತೆಗೆ ಅರ್ಪಿತವಾಗುತ್ತಿದ್ದಳಂತೆ" ಎನ್ನುವ ಪ್ರಾಚೀನ ಪ್ರಪಾತ ಪುರಾಣ ಇವೆಲ್ಲ ಓದುಗರ ಮನಸ್ಸಿನಲ್ಲಿ ಬಣ್ಣಬಣ್ಣದ ನೆನಪುಗಳಾಗಿ ಮೆತ್ತಿಕೊಂಡಿರುತ್ತವೆ. ಇಲ್ಲೆಲ್ಲ ಹೇಳುವವರಿಗು ಕೇಳುವವರಿಗು ನಡುವಿನ ಭಾಷೆ ಸ್ಫಟಿಕಸ್ಪಷ್ಟವಾಗಿ, ಅತ್ಯಂತ ಪಾರದರ್ಶಕ ಮಾಧ್ಯಮವಾಗಿರುತ್ತದೆ. ಎಷ್ಟೋಸಲ ಇಬ್ಬರ ನಡುವೆ 'ಭಾಷೆ' ಎಂಬ ಮಾಧ್ಯಮವಿದೆ ಎಂಬುದೆ ಗಮನಕ್ಕೆಬಾರದೆ ಅವರು ಕಂಡದ್ದನ್ನ ಇವರು ಕಾಣುತ್ತ ಹೋಗುತ್ತಾರೆ, ಅವರು ಕೇಳಿದ್ದನ್ನೆ ಇವರೂ ಕೇಳುತ್ತಾರೆ. ಇದರಿಂದಾಗಿ ಜಿಎಸ್‌ಎಸ್ ಅವರ ಪ್ರವಾಸಗದ್ಯ ಎಲ್ಲರಿಗು ಹೃದ್ಯವೆನಿಸುತ್ತದೆ.

'ಇಂಗ್ಲೆಂಡಿನಲ್ಲಿ ಚತುರ್ಮಾಸ' ಅವರ ನಾಲ್ಕನೆಯ ಹಾಗು ಅತ್ಯುತ್ತಮ ಪ್ರವಾಸಕಥನ. ಇಂಗ್ಲಿಷರು ಭಾರತವನ್ನು ವಸಾಹತುಶಾಹಿ ದಬ್ಬಾಳಿಕೆಗೆ ಗುರಿಪಡಿಸಿದವರು; ಇಂಗ್ಲಿಷ್ ಸಂಸ್ಕೃತಿ ಭಾರತೀಯ ಸಂಸ್ಕೃತಿಗೆ ತುಂಬ ವ್ಯತಿರಿಕ್ತವಾದದ್ದು; ಇಂಗ್ಲೆಂಡ್ ಇಂಡಿಯಾದ ಒಂದು ರಾಜ್ಯದಷ್ಟಿರುವ ಪುಟಾಣಿ ರಾಷ್ಟ್ರ—ಎಂಬೆಲ್ಲ ದ್ವೇಷ, ತಿರಸ್ಕಾರ, ಮೂದಲಿಕೆಗಳನ್ನ ಪುಟ್ಟಂಪೂರ ಇಲ್ಲವಾಗಿಸಿ, ಇಂಗ್ಲೆಂಡ್‌ನ ಬಗೆಗೆ ಒಂದು ಮೃದುಮಧುರವಾದ ಸ್ನೇಹಭಾವವನ್ನು ಉಂಟುಮಾಡುತ್ತದೆ ಈ ಪುಟ್ಟ ಪುಸ್ತಕ. ಇಂಗ್ಲೆಂಡಿನ ಹಸಿರು ಸ್ವರ್ಗಗಳು, ಕವಿ ಕಾವ್ಯಗಳ ಭಾವಲೋಕಗಳು, ಇಂಗ್ಲಿಷರ ಸಾಮಾಜಿಕ ಎಚ್ಚರ, ಸಾಂಸ್ಕೃತಿಕ ಸೂಕ್ಷ್ಮ, ಐತಿಹಾಸಿಕ ಪ್ರಜ್ಞೆ, ಕಲಾಪ್ರಜ್ಞೆ ಇವನ್ನೆಲ್ಲ ಸವಿರಾಗಿ ಪರಿಚಯಿಸುತ್ತ ಆ ನಾಡಿನ ಬಗ್ಗೆ ನಮ್ಮಲ್ಲಿ ಒಂದು ಬಗೆಯ ಆಪ್ತತೆಯನ್ನು ಉಂಟುಮಾಡುತ್ತದೆ. ಇಡಿ ಪುಸ್ತಕ ಒಂದು ಪ್ರೀತಿಯ ಗದ್ಯ ಕೃತಿಯಂತೆ ಓದಿಸಿಕೊಳ್ಳುತ್ತದೆ. ಒಂದಿಷ್ಟು ಹಸಿರು ನೆನಪನ್ನು ನಮ್ಮೊಳಗೆ ಬಿಟ್ಟುಹೋಗುತ್ತದೆ.

ಡಾ. ಜಿ.ಎಸ್.ಎಸ್ ಅವರ ಮನಸ್ಸು ಅಪ್ಪಟ ಕನ್ನಡ ಸಂವೇದನೆಯ ಮನಸ್ಸು. ಸಮಕಾಲೀನ ಸಾಹಿತಿಗಳಲ್ಲಿ ಹೇರಳ ಸಂಖ್ಯೆಯಲ್ಲಿ ಕಾಣಸುವ ಕನ್ನಡ ಎಂ.ಎ ಹಾಗು ಇಂಗ್ಲಿಷ್ ಎಂ.ಎ. ಪದವೀಧರರಲ್ಲಿ ಒಂದು ಬಗೆಯ ವ್ಯತ್ಯಾಸ ಎದ್ದು ಕಾಣುತ್ತದೆ. ಕನ್ನಡ ಎಂ.ಎ ಮಾಡಿರುವ ಬಹುಮಂದಿ ಪದವೀಧರರು ಜೈನ, ಶೈವ, ವೀರಶೈವ, ವೈಷ್ಣವ ಮುಂತಾದ ಮತೀಯ ಯುಗಧರ್ಮಗಳ ಚೌಕಟ್ಟಿನಲ್ಲಿ ರಚಿತವಾದ ಹಳೆಗನ್ನಡ, ನಡುಗನ್ನಡ ಕೃತಿಗಳಿಂದ ಗಾಢವಾಗಿ ಪ್ರಭಾವಿತರಾಗಿರುತ್ತಾರೆ. ಇವರಲ್ಲಿ ಬಹಳಷ್ಟು ಜನ ಗ್ರಾಮೀಣ, ರೈತಾಪಿ, ಜಾನಪದೀಯ ಜೀವನ ಶೈಲಿಯನ್ನು, ಮೌಲ್ಯಗಳನ್ನು ಪ್ರತಿನಿಧಿಸುತ್ತಾರೆ. ಇವರಿಗೆ ಹೊರಜಗತ್ತಿನ ಪರಿಚಯ ಅಷ್ಟಕಷ್ಟೆ; ಅಂದರೆ ಹೊರದೇಶಗಳ ಸಂಸ್ಕೃತಿ ಸಾಹಿತ್ಯ ಕಲೆಗಳ ಬಗ್ಗೆ ಇವರು ಕುತೂಹಲ ಬೆಳೆಸಿಕೊಂಡಿರುವುದು ಅಪರೂಪ. ಇನ್ನು ಇಂಗ್ಲಿಷ್ ಎಂ.ಎ. ಮಾಡಿದವರು ಅಷ್ಟಿಷ್ಟು ಷೇಕ್ಸ್‌ಪಿಯರ್‌ನ ನಾಟಕಗಳನ್ನು, ಧಾರಳಾವಾಗಿ ಯುರೋಪಿಯನ್

ಮಾಡರ್ನ್ ಕ್ಲಾಸಿಕ್ಸ್ ಓದಿ ಪ್ರಭಾವಿತರಾಗಿ ತಮ್ಮ ಜೀವನಶೈಲಿಯನ್ನೇ westernised ಆಗಿಸಿಕೊಂಡು ಪರಕೀಯರಂತೆ ಬದುಕುತ್ತಾರೆ. ಇವರಿಗೆ ಕನ್ನಡದ ಬೇರುಗಳ ಪರಿಚಯವೇ ಇರುವುದಿಲ್ಲ. ಆದರೆ ನಮ್ಮ ಜಿಎಸ್‌ಎಸ್‌ರವರು ಅವರಿಬ್ಬರ ಅರ್ಧಸತ್ಯಗಳನ್ನು ಒಗ್ಗೂಡಿಸುವಂಥ ಒಂದು ಪೂರ್ಣವ್ಯಕ್ತಿತ್ವವನ್ನು ಬೆಳೆಸಿಕೊಂಡಿದ್ದಾರೆ. ಕನ್ನಡದ ಸಾಂಸ್ಕೃತಿಕ ಸತ್ವದ ಆಳದಲ್ಲಿ ಕಾಲೂರಿನಿಂತೇ ಅವರು ಜಾಗತಿಕ ಸಾಹಿತ್ಯ ಸಂಸ್ಕೃತಿ ಕಲೆಗಳನ್ನು ಅಧಿಕಾರವಾಣಿಯಿಂದ ಮಾತಾಡಿಸಬಲ್ಲರು. ಹೀಗಾಗಿ ಅವರು ಇಂಗ್ಲೆಂಡಿನ ಸರೋವರ ಮಂಡಲಗಳ ಮಧ್ಯೆಯಾಗಲಿ, ಷೇಕ್ಸ್‌ಪಿಯರನ ನೆನಪುಗಳ ನಡುವೆಯಾಗಲಿ ಸುತ್ತಾಡುವುದು ಥೇಟ್ ಪಂಪ ಕವಿ ಬನವಾಸಿ ನಾಡಿನಲ್ಲಿ ಸುತ್ತಾಡಿದಂತೆ. ಅಲ್ಲಿನ ಹಸಿರು ಪ್ರಶಾಂತತೆಯನ್ನು ಹೀರಿಕೊಳ್ಳುತ್ತ, ಅಲ್ಲಿನ ರಸಿಕರ ಕಾವ್ಯಪ್ರೇಮಕ್ಕೆ ಕನ್ನಡಿ ಹಿಡಿಯುತ್ತ, ಒಬ್ಬ ಸಾಮಾನ್ಯನಂತೆ ಸರಳವಾಗಿ ಅಡ್ಡಾಡುತ್ತಾರೆ. ನಿಜವಾಗಲು ಆ ದೂರದ ನಾಡಲ್ಲಿ ನಮ್ಮ ಪ್ರೀತಿಯ ಕನ್ನಡಿಗನೊಬ್ಬ ಸಂಚಾರ ಮಾಡುತ್ತಿರುವ ಖುಷಿಯನ್ನು ನೀಡುತ್ತಾರೆ. ಅವರಿಗೆ ಪಂಪ ಪ್ರಶಸ್ತಿ ನೀಡಿದ್ದು ಈ ದೃಷ್ಟಿಯಿಂದಲೂ ಸಾರ್ಥಕವಾಗಿದೆ.

ನಮ್ಮ ಸಾಕಷ್ಟು ಇಂಗ್ಲಿಷ್ ಪ್ರೊಫೆಸರುಗಳು ಪದೆ ಪದೆ ಇಂಗ್ಲೆಂಡಿಗೆ ಹೋಗಿಬರುತ್ತಾರೆ. ಯಾವ ಯಾವುದೊ ಸ್ಕಾಲರ್‌ಷಿಪ್ಪು, ಯಾವಯಾವುದೊ ವಿಶ್ವವಿದ್ಯಾಲಯಗಳ ಆಹ್ವಾನದ ಮೇಲೆ ಅಲ್ಲಿಗೆ ಹೋಗಿಬರುವ ಈ ಮಹನೀಯರು ಅಲ್ಲಿನ ಬದುಕಿನ ಆಳಕ್ಕಿಳಿಯುವುದಿಲ್ಲ. ನಗರಗಳಲ್ಲಿ, ಯೂನಿವರ್ಸಿಟಿ ಕ್ಯಾಂಪಸ್‌ಗಳಲ್ಲಿ ಹೆಪ್ಪುಗಟ್ಟಿರುವ ಆಧುನಿಕ ಶೈಲಿಗೆ ಮಾರುಹೋಗುತ್ತಾರೆ. ಅವರು ಯಾರೂ ಹೀಗೆ ಇಂಗ್ಲೆಂಡನ್ನು ಒಳಹೊಕ್ಕು ನೋಡಿ, ಇಂಗ್ಲಿಷ್ ಸಾಹಿತ್ಯದ ವಿದ್ಯಾರ್ಥಿ / ನಿಯರಿಗೆ ಉಪಯುಕ್ತವಾಗುವ ಇಂಥ ಒಂದು ಪುಸ್ತಕ ಇದುವರೆಗೆ ಬರೆದಿಲ್ಲ.

ಷೇಕ್ಸ್‌ಪಿಯರ್ ಹುಟ್ಟಿದೂರಲ್ಲಿ ಹರಿಯುತ್ತಿರುವ ಏವನ್ ನದಿಯ ದಂಡೆಯನ್ನು ಒಂದು ಜೀವಂತವಾದ ಸಾಂಸ್ಕೃತಿಕ, ನೈಸರ್ಗಿಕ ಆಕರ್ಷಣೆಯ ಸ್ಥಳವನ್ನಾಗಿ ಉಳಿಸಿಕೊಂಡಿದ್ದಾರೆ ಬ್ರಿಟಿಷರು. ಜಿಎಸ್‌ಎಸ್ ಅದನ್ನು ಹೀಗೆ ಬಣ್ಣಿಸಿದ್ದಾರೆ: "ನದಿ ತೀರಾ ಅಗಲವಾಗೇನೂ ಇಲ್ಲ. ನದಿಯ ಎರಡೂ ಕಡೆ ವಿಸ್ತಾರವಾದ ಪಾರ್ಕುಗಳಿವೆ. ಪಾರ್ಕುಗಳಲ್ಲಿ ಮಕ್ಕಳಿಗೆ ಆಟದ ಸೌಕರ್ಯಗಳು, ನೆರಳನ್ನು ಚೆಲ್ಲುವ ಮರಗಳೂ ಇವೆ. ನದಿಯ ಇಕ್ಕೆಲಗಳಲ್ಲೂ, ನೀರಿನಲ್ಲಿ ತಮ್ಮ ನೆರಳನ್ನು ನೋಡಿಕೊಳ್ಳುವಂತೆ ಬಾಗಿದ, ದಟ್ಟವಾದ, ವಿಲ್ಲೋ ವೃಕ್ಷಗಳಿವೆ. ನದಿಯ ಮೇಲೆ ಹಾದು ಹೋಗಿರುವ ಮಧ್ಯಕಾಲೀನ ಮಾದರಿಯ ಎರಡು ಸೇತುವೆಗಳಿವೆ.... ಬೆಳಗಿನಿಂದ ಸಂಜೆಯವರೆಗೆ ಜನ ಈ ನದೀಜಲದಲ್ಲಿ ದೋಣಿಗಳಲ್ಲಿ ಕೂತು ವಿಹರಿಸುತ್ತಾರೆ. ನದಿಯ ತುಂಬ; ತೇಲುವ ದೋಣಿಗಳ ಅಕ್ಕಪಕ್ಕದಲ್ಲಿ ನಿರ್ಭಯವಾಗಿ ತೇಲುವ ಹಂಸೆಗಳು, ಬಾತುಕೋಳಿಗಳು. ಅವುಗಳಿಗೆ ಬ್ರೆಡ್ಡಿನ ಚೂರನ್ನೆಸೆದು, ಖುಷಿಪಡುವ ಮಕ್ಕಳು." ಇಂಥ ಚೇತೋಹಾರಿ ಚಿತ್ರಗಳು ಅಲ್ಲಿನ ಪರಿಸರದ ಚೆಲುವನ್ನೂ ನಮ್ಮಲ್ಲಿನ ಪರಿಸರಮಾಲಿನ್ಯವನ್ನೂ ತೂಗಿನೋಡಲು ಹಚ್ಚುತ್ತವೆ. ಅಲ್ಲಿನ ಪರಿಸರದ ಅಚ್ಚುಕಟ್ಟನ್ನು

ಮೆಚ್ಚುವಂತೆ ಮಾಡುತ್ತಲೇ, ನಮ್ಮ ಪರಿಸರವನ್ನೂ ನಾವು ಮನಸ್ಸು ಮಾಡಿದರೆ ಹೇಗೆ ಇಟ್ಟುಕೊಳ್ಳಬಹುದೆಂಬುದನ್ನು ಪರೋಕ್ಷವಾಗಿ ಸೂಚಿಸುತ್ತವೆ.

ಹೀಗೆಯೆ 'ಬರ್ನ್ಸ್‌ಕಂಟ್ರಿ'ಯ ಗ್ರಾಮೀಣ ಸೌಂದರ್ಯ, ಬರ್ನ್ಸ್ ಹುಟ್ಟಿದ ಗುಡಿಸಲಿನ ಮುಗ್ಧ ಪರಿಸರವನ್ನು ಇವತ್ತಿಗೂ ಕಾಪಾಡಿಕೊಂಡು ಬಂದಿರುವ ರೀತಿ, ಗೌರಕ್ ಪರ್ವತಾರಣ್ಯಗಳ ಉಸಿರುಗಟ್ಟಿಸುವ ಹಸಿರು, ವರ್ಡ್ಸ್‌ವರ್ತ್ ಕವಿ ಬಾಲ್ಯದಲ್ಲಿ ಅಲೆದಾಡಿದ ಲೇಕ್ ಡಿಸ್ಟ್ರಿಕ್ಟಿನ ಪ್ರಶಾಂತ ಪ್ರಕೃತಿ ಎಲ್ಲವನ್ನೂ ಎಳೆಎಳೆಯಾಗಿ ವರ್ಣಿಸುತ್ತ ಜಿಎಸ್‌ಎಸ್ ಓದುಗರನ್ನು ಮೋಡಿ ಮಾಡಿಬಿಡುತ್ತಾರೆ.

ಈ ಎಲ್ಲ ಔಚಿತ್ಯಪೂರ್ಣ ವಿವರಗಳು ಹಾಗು ವರ್ಣನೆಗಳು ಸಾಹಿತ್ಯಾಭ್ಯಾಸಿಗಳಿಗೆ ಅತ್ಯಗತ್ಯವಾದ ಒಂದು ಸಾಂಸ್ಕೃತಿಕ ಹಿನ್ನೆಲೆಯನ್ನು ಒದಗಿಸುತ್ತವೆ. ಈ ಕಾರಣಕ್ಕಾಗಿ 'ಇಂಗ್ಲೆಂಡಿನಲ್ಲಿ ಚತುರ್ಮಾಸ' ಪುಸ್ತಕವನ್ನು ನಮ್ಮ ವಿಶ್ವವಿದ್ಯಾಲಯಗಳು ಇಂಗ್ಲಿಷ್ ಸಾಹಿತ್ಯವನ್ನು ಐಚ್ಛಿಕ ವಿಷಯವನ್ನು ಅಧ್ಯಯನ ಮಾಡುವ ವಿದ್ಯಾರ್ಥಿ/ವಿದ್ಯಾರ್ಥಿನಿಯರಿಗೆ ಕಡ್ಡಾಯವಾದ ರೆಫರೆನ್ಸ್ ಬುಕ್ ಎಂದು ನಿಗದಿಪಡಿಸಬಹುದಾಗಿದೆ. ಇಂಥ ಹಿನ್ನೆಲೆಯಿಂದ ಇಂಗ್ಲಿಷ್ ಕಾವ್ಯವನ್ನು ಪ್ರವೇಶಿಸಿದರೆ ಅದನ್ನು ಹೆಚ್ಚು ಅರ್ಥವತ್ತಾಗಿ ಆಸ್ವಾದಿಸಬಹುದು. ನಮ್ಮ ಪಠ್ಯಪುಸ್ತಕ ಸಮಿತಿಗಳು ತಮ್ಮ ಚರ್ವಿತಚರ್ವಣ ಕೃತಿಗಳ ವರ್ತುಲ ಬಿಟ್ಟು ಇಂಥ ಮಹತ್ವದ ಕೃತಿಗಳ ಕಡೆಗೆ ಕಣ್ಣುಹಾಯಿಸಬೇಕಾಗಿದೆ.

೩

ಡಾ. ಜಿ.ಎಸ್. ಶಿವರುದ್ರಪ್ಪನವರ ಪ್ರವಾಸಕಥನಗಳನ್ನು ಅವರ ಆತ್ಮಕಥನನದ ಆಯ್ದಭಾಗಗಳಂತೆ ಓದಬಹುದಾಗಿದೆ. ಕಂಡದ್ದು ಕಂಡಹಾಗೆ, ಅನಿಸಿದ್ದು ಅನಿಸಿದಹಾಗೆ, ಸರಳವಾಗಿ, ನಿರಾಳವಾಗಿ ಹೇಳಿಬಿಡುವ ಅವರ ಭಾಷಾಶೈಲಿ ಪಂಡಿತರನ್ನೂ ಪಾಮರರನ್ನೂ ಒಟ್ಟೊಟ್ಟಿಗೆ ತನ್ನೆಡೆಗೆ ಸೆಳೆಯುತ್ತದೆ. ಶಬ್ದಗಳನ್ನು ಬರಿ ಅಲಂಕರಣಕ್ಕಾಗಿ ಬಳಸದೆ ಚಿತ್ರವತ್ತಾಗಿ ತಮ್ಮ ಅನುಭವವನ್ನು ಕಟ್ಟಿಕೊಡಲು, ತಮ್ಮ ಚಿಂತನೆ, ಭಾವನೆಗಳನ್ನು ಯಥಾರ್ಥವಾಗಿ ಮೂಡಿಸಲು ಬಳಸುತ್ತಾರೆ ಅವರು. ಅಲ್ಲದೆ ಓದುಗರನ್ನು ಆಪ್ತಸಖರಂತೆ ಭಾವಿಸಿದಾಗ ಮಾತ್ರ ಹೊರಬರುವ ಒಂದು ವಿಶಿಷ್ಟ ಆತ್ಮೀಯ ಶೈಲಿಯನ್ನು ಅವರ ಈ ಬರಹಗಳಲ್ಲಿ ಕಾಣಬಹುದಾಗಿದೆ. ಇದರಿಂದಾಗಿ ಅವರ ಅನುಭವ ಕಥನದಲ್ಲಿ ಯಾವುದೇ ಮುಚ್ಚುಮರೆಯಿಲ್ಲ. ಬಿಂಕಬಿನ್ನಾಣಗಳಿಲ್ಲ. ಬಿಚ್ಚುಮನಸ್ಸಿನಿಂದ ನಿವೇದಿಸಿಕೊಳ್ಳುವ ಅವರ ಸದಭಿರುಚಿಯ ಸಂಕಥನಗಳಾದ ಈ ಪ್ರವಾಸ ಸಾಹಿತ್ಯ ಕೃತಿಗಳಿಂದ ನಾವು ಕಲಿಯಬೇಕಾದದ್ದು ಸಾಕಷ್ಟಿದೆ. ಒಂದು ಹೊಸ ಜಾಗೆಗೆ ಹೋದಾಗ ಯಾವುದನ್ನ ಕಾಣುವ ಕುತೂಹಲ ಇಟ್ಟುಕೊಳ್ಳಬೇಕು? ಹೇಗೆ ನೋಡಬೇಕು? ಹೇಗೆ ಪರಿಭಾವಿಸಬೇಕು? ಅಂಥ ಸಂದರ್ಭಗಳಲ್ಲಿ ನಮ್ಮ ನಡೆನುಡಿ ಹೇಗಿರಬೇಕು? ಎದುರಾದ ಕಷ್ಟಗಳನ್ನು ಬಗೆಹರಿಸಿಕೊಳ್ಳಲು ನಮ್ಮ

ಮನಸ್ಥಿತಿಯನ್ನು ಹೇಗೆ ಅಣಿಗೊಳಿಸಿಕೊಳ್ಳಬೇಕು?—ಇಂಥ ಹಲವಾರು ನಡೆ-ನುಡಿಯ ಸೂಕ್ಷ್ಮಗಳನ್ನು ಈ ಪುಸ್ತಕಗಳು ನಮಗೆ ಕಲಿಸಿಕೊಡುತ್ತವೆ.

ಭಾರವಾಗದಂಥ ಹಿತವಾದ ರೂಪಕಗಳನ್ನು, ಸುಲಭವಾದ ಉಪಮೆಗಳನ್ನು ಬಳಸುತ್ತ, ಆಗೀಗ ತಿಳಿಹಾಸ್ಯದ ಚಟಾಕಿಗಳನ್ನು ಹಾರಿಸುತ್ತ, ಆದರೆ ಯಾವುದೆ ಬಗೆಯ ಕೊಂಕಿನ ಸೋಂಕು ತಲೆಹಾಕದಂತೆ ಎಚ್ಚರವಹಿಸುತ್ತ, ಹಿತಮಿತವಾದ ವರ್ಣನೆ ವಿವರಣೆಯ ಮೂಲಕ ಔಚಿತ್ಯವನ್ನು ಪಾಲಿಸುತ್ತ ಪ್ರಶಾಂತವಾದ ನದಿಯಂತೆ ಪ್ರವಹಿಸುವ ಅವರ ಗದ್ಯಶೈಲಿ ನಮ್ಮನ್ನು ಮಂತ್ರಮುಗ್ಧರನ್ನಾಗಿಸುತ್ತದೆ. ಇವರು ಕತೆ ಕಾದಂಬರಿ ಬರೆದರೆ ಹೇಗಿದ್ದೀತು ಎಂಬ ಕುತೂಹಲವನ್ನು ಮೀಟುತ್ತದೆ. ಓದಲು ಕೂತರೆ ಮುಗಿಸಿಯೆ ಏಳು ಎಂಬಂತೆ ಒತ್ತಾಯಿಸುತ್ತದೆ ಅವರ ಸುಭಗ ಶೈಲಿ. ಪ್ರವಾಸದ ಪ್ರಕ್ರಿಯೆ ಆಳವಾದ ಸಾಂಸ್ಕೃತಿಕ ಮಂಥನಕ್ಕೆ ನಮ್ಮನ್ನ ಕರೆದೊಯ್ಯಬಲ್ಲದು ಎಂಬುದನ್ನೂ ತುಂಬ ಸಹಜವಾಗಿಯೆ ಮನವರಿಕೆ ಮಾಡಿಸುತ್ತದೆ ಈ ಗದ್ಯಶೈಲಿ. ಜಿಎಸ್‌ಎಸ್ ಅವರ ಭಾಷೆಯಂತೂ ಎಳೆನೀರಿನಷ್ಟು ತಿಳಿಯಾದದ್ದು, ಸಿಹಿಯಾದದ್ದು.

ಈ ಎಲ್ಲ ಕಾರಣಗಳಿಂದಾಗಿ ಜಿಎಸ್‌ಎಸ್ ಅವರ ಈ ನಾಲ್ಕು ಪ್ರವಾಸ ಗದ್ಯದ ಕೃತಿಗಳು ಕನ್ನಡಕ್ಕೆ ಅತ್ಯುತ್ತಮ ಕೊಡುಗೆಗಳಾಗಿವೆ. ಅಲ್ಲದೆ ಕನ್ನಡದಲ್ಲಿ ಫಲವತ್ತಾಗಿ ಫಸಲು ನೀಡುತ್ತಿರುವ ಪ್ರವಾಸ ಸಾಹಿತ್ಯ ಪ್ರಕಾರದಲ್ಲಿ ಜಿಎಸ್‌ಎಸ್ ಅವರಿಗೆ ಒಂದು ವಿಶಿಷ್ಟವಾದ ಸ್ಥಾನವನ್ನು ಗಳಿಸಿಕೊಟ್ಟಿವೆ. ಕನ್ನಡದ ಅತ್ಯುತ್ತಮ ಪ್ರವಾಸ ಸಾಹಿತ್ಯಕಾರರಲ್ಲಿ ಜಿಎಸ್‌ಎಸ್ ಅವರೂ ಒಬ್ಬರು ಎಂಬುದರಲ್ಲಿ ಎರಡು ಮಾತಿಲ್ಲ. ದೇಹಕ್ಕೆ ಆಗುವ ವಯಸ್ಸಿನ ಜಡತೆ ಮನಸ್ಸಿಗೆ ಅಂಟಲು ಸುತರಾಂ ಬಿಡದ ಜಿಎಸ್‌ಎಸ್ ಅವರ ಜೀವಕುತೂಹಲ ಹಾಗು ಜೀವನಶ್ರದ್ಧೆ ಅವರಿಂದ ಇನ್ನಷ್ಟು ಪ್ರವಾಸಕಥನಗಳನ್ನು ಬರೆಸಲೆಂದು ಆಶಿಸೋಣ

■

# ಜಿಎಸ್‌ಎಸ್ ಆತ್ಮಕಥೆ: 'ಚತುರಂಗ'

ಡಾ|| ಶ್ರೀಕಂಠ ಕೂಡಿಗೆ

ಆಧುನಿಕ ಕನ್ನಡ ಸಾಹಿತ್ಯವನ್ನು ಕವಿತೆ, ವಿಮರ್ಶೆ, ತೌಲನಿಕ ಕಾವ್ಯಮೀಮಾಂಸೆಯ ಮೂಲಕ ಗಟ್ಟಿಗೊಳಿಸಿದ ಮಹತ್ವದ ಲೇಖಕರಲ್ಲಿ ಡಾ. ಜಿ.ಎಸ್. ಶಿವರುದ್ರಪ್ಪನವರು ಪ್ರಮುಖರು. ಕಾವ್ಯವನ್ನೇ ತಮ್ಮ ಅಭಿವ್ಯಕ್ತಿಯ ಪ್ರಧಾನ ಮಾಧ್ಯಮವನ್ನಾಗಿ ಮಾಡಿಕೊಂಡ ಅವರು ಸುಮಾರು ನಾಲ್ಕು ದಶಕಗಳಿಂದ ಕವಿತೆಗಳನ್ನು ಬರೆಯುತ್ತಾ ಬಂದಿದ್ದಾರೆ. 'ಸಾಮಗಾನ'ದಿಂದ ಮೊದಲ್ಗೊಂಡು 'ಚಕ್ರಗತಿ'ಯವರೆಗೆ ಹನ್ನೆರಡು ಸಂಕಲನಗಳಲ್ಲಿ ಪ್ರಕಟಗೊಂಡ ಐನೂರಕ್ಕೂ ಮಿಕ್ಕ ಕವಿತೆಗಳಲ್ಲಿ ಶಿವರುದ್ರಪ್ಪನವರ ಕಾವ್ಯವಿಶಿಷ್ಟತೆ, ಪ್ರಯೋಗಗಳ ಮಾದರಿಗಳು ಸಿಗುತ್ತವೆ. ನವೋದಯದಿಂದ ಪ್ರಭಾವಿತರಾದ ಅವರ ಕವಿತೆಗಳು ಅಲ್ಲಿಯೇ ವಿರಮಿಸದೆ ಹಾಗೂ ಕನ್ನಡ ಕಾವ್ಯಪರಂಪರೆಯ ಪ್ರಧಾನ ಸ್ರೋತವನ್ನು ನಿರಾಕರಿಸದೆ ಗುಣಾತ್ಮಕವಾದುದನ್ನು ಆಲಂಗಿಸಿಕೊಳ್ಳುವ ಧೋರಣೆಯನ್ನೊಳಗೊಂಡಿವೆ. ಪ್ರಧಾನ ಕಾವ್ಯಮಾರ್ಗದ ಸಹ ಚಲನೆಯೊಂದಿಗೆ ಪರಸ್ಪರ ಮುಖಾಮುಖಿಯಾಗುವ, ಪ್ರತಿಕ್ರಿಯಾತ್ಮಕ ಧಾಟಿಯೂ ಅವರ ಕವಿತೆಗಳಲ್ಲಿವೆ. ಜೀವ ಚೈತನ್ಯರೂಪಿಯಾದ ಪ್ರಕೃತಿ ಹಾಗೂ ಮಾನವಕೇಂದ್ರಿತ ಸಮಾಜದ ಶೃತಿ, ಲಯಗಳನ್ನು ಪ್ರಸನ್ನ ಜೀವನೋತ್ಸಾಹದಲ್ಲಿ ಪರಿಭಾವಿಸುವಂತೆ ಸಾತ್ವಿಕ ಕ್ರೋಧ, ವಿಷಾದ ವ್ಯಂಗ್ಯದ ನೆಲೆಗಳು ಅವರ ಕವಿತೆಗಳಲ್ಲಿ ಕಾಣಿಸುತ್ತವೆ. ಹಂತ ಹಂತವಾಗಿ ಜೀವನದ ಅರ್ಥಶೋಧದ ಕಡೆಗೆ, ನಿಷ್ಕಳಂಕಿತ ಮೌಲ್ಯದ ಕಡೆಗೆ ಮುಖಮಾಡುತ್ತಾ ಗೋಡೆಗಳು ಎದ್ದುನಿಂತ ಮಾನವ ಸಂಬಂಧಗಳ ನಡುವೆ ಪ್ರೀತಿಯ ಸೇತುವೆಕಟ್ಟುವ ಪ್ರಬುದ್ಧ ಭಾವ ಒಟ್ಟು ಕವಿತೆಗಳ ಸ್ಥಾಯಿಯಾಗಿದೆ. ಮಾನವ ಸ್ನೇಹ, ಔದಾರ್ಯ, ಕ್ಷುಲ್ಲಕತೆಗಳನ್ನು ನಿರ್ಲಿಪ್ತವಾಗಿ ಉಪಮೆ ರೂಪಕ ಸಂಕೇತಾರ್ಥಗಳಲ್ಲಿ, ಪುರಾಣ ಪ್ರತೀಕಗಳಲ್ಲಿ ಧ್ವಾನಿತ ಅರ್ಥವನ್ನು ಸಂವಹನಿಸುವ ಕ್ರಿಯೆ ಕವಿತೆಗಳದ್ದಾದರೆ ಅದನ್ನು ಮೂರ್ತಚಹರೆಯಲ್ಲಿ, ಆತ್ಮಕಥನಾತ್ಮಕ ಗದ್ಯರೂಪದಲ್ಲಿಟ್ಟ ಪ್ರಯತ್ನವೇ ಅವರ 'ಚತುರಂಗ'. ಕವಿತೆಗಳಲ್ಲಿನ ಧ್ವಾನಿತ ಅರ್ಥಕ್ಕೆ ಬರೆದ ವಾಚ್ಯಗದ್ಯರೂಪದ ವ್ಯಾಖ್ಯಾನಗಳಾಗಿ *ಚತುರಂಗ*ದ ಕೆಲವು ಭಾಗಗಳು ಇವೆ. ಅಂತೆಯೇ ಕವಿಯ ಅಮೂರ್ತ ಕಾವ್ಯಕಲ್ಪನೆಗಳನ್ನು ಅರ್ಥೈಸಿಕೊಳ್ಳಲು, ಕಾವ್ಯ ಸಂಸ್ಕಾರ-ಪ್ರೇರಣೆಗಳನ್ನು ಗುರುತಿಸಿಕೊಳ್ಳಲು ಈ ಬರಹ ಹಿನ್ನೆಲೆಯಾಗಿ ನಿಲ್ಲುತ್ತದೆ.

*ಚತುರಂಗ* (ಚತುರ್+ಅಂಗ) ನಾಲ್ಕು ಉಪವಿಭಾಗಗಳಲ್ಲಿರುವ ಜಿ.ಎಸ್. ಶಿವರುದ್ರಪ್ಪನವರ ಅಸಮಗ್ರ ಆತ್ಮಕಥೆ. 'ಎಳೆಯಂದಿನ ಬೆಳಕು', 'ಉದ್ಯೋಗಪರ್ವ', 'ಕಾವ್ಯಲಾಪ', 'ಬಿಡಿ ನೆನಪಿನ ದೀಪಗಳು' ಎಂಬ ಭಾಗಗಳು ಈ ಪುಸ್ತಕದಲ್ಲಿ ಇರುವುದರಿಂದ 'ಚತುರಂಗ' ಅನ್ವರ್ಥವಾದ ಹೆಸರಾಗಿರುವಂತೆ ಬದುಕು ಒಂದು ಚತುರಂಗದಾಟ, ಅದರಲ್ಲಿ ವ್ಯಕ್ತಿ ಒಂದು ಪಗಡೆಕಾಯಿ ಎನ್ನುವ ರೂಪಕದ ಅರ್ಥವನ್ನು ಲೇಖಕರು ಅನುಸಂಧಿಸಿದ್ದಾರೆ. 'ಅಸಮಗ್ರ ಆತ್ಮಕಥೆ' ಎನ್ನುವುದು ಒಂದು ಪ್ರಜ್ಞಾಪೂರ್ವಕ ಹೇಳಿಕೆಯೇ ಆಗಿದೆ. ಈ ಕುರಿತು ಲೇಖಕರು ಅನಿಸಿಕೆ ಹೀಗಿದೆ: "ನನ್ನನ್ನು ಕುರಿತು ನಾನು ನಿಸ್ಸಂಕೋಚವಾಗಿ ಹೇಳಿಕೊಳ್ಳಲಾಗದ ಅನೇಕ ನಿರ್ಬಂಧಗಳಲ್ಲಿ—ಅವು ವೈಯಕ್ತಿಕವಾಗಿರ ಬಹುದು, ಸಾಮಾಜಿಕವಾಗಿರಬಹುದು—ನಾನು ಹಾಗೂ ನನ್ನಂಥವರು ಬದುಕುತ್ತಿದ್ದೇವೆ ಎನ್ನುವ ಕಾರಣದಿಂದ ಮತ್ತು ಒಬ್ಬ ಸೃಜನಶೀಲ ಲೇಖಕ ವಾಸ್ತವವಾಗಿ ತನ್ನ ಬರಹಗಳಲ್ಲೆ ತನ್ನ ನಿಜವಾದ ಆತ್ಮಕತೆಯನ್ನು ಬರೆದುಕೊಂಡಿರುತ್ತಾನೆ ಎಂದು ನಾನು ತಿಳಿದುಕೊಂಡಿರು ವುದರಿಂದ." ಹಾಗೆ ನೋಡಿದರೆ ನಿಷ್ಠುರ ಸತ್ಯಶೋಧನೆ ಎಂದುಕೊಳ್ಳುವ ಎಷ್ಟೊ ದೊಡ್ಡವರ ಆತ್ಮಕಥೆಗಳಲ್ಲೂ ಇಂಥ ನಿರ್ಬಂಧಗಳು ಇರುತ್ತವೆ. ಈ ಅರ್ಥದಲ್ಲಿ ಆತ್ಮಕಥೆಗಳು ಎಷ್ಟೇ ಪರಿಪೂರ್ಣವೆಂದರೂ ಅವು ಅಸಮಗ್ರವೆ. ಕಾವ್ಯಾತ್ಮಕ ಅನುಸಂಧಾನದಲ್ಲಿ ಪರಿಣಾಮಕಾರಿಯಾಗಿ ಉಳಿಯಬಹುದಾದ ಆತ್ಮಕಥೆಗೆ ವಾಚ್ಯತೆಯ ಗದ್ಯರೂಪ ಎಷ್ಟು ಸಾರ್ಥಕ ಎನ್ನುವ ಪ್ರಶ್ನೆಯನ್ನು ಲೇಖಕರೇ ಎದುರುಗೊಳ್ಳುತ್ತಾ ಹಾಗೆ ಬರೆಯಬೇಕಾಗಿ ಬಂದದ್ದಕ್ಕೆ ಹೊರಗಿನ ಕಾರಣಗಳನ್ನು ಮುಕ್ತವಾಗಿಯೇ ಬಹಿರಂಗಪಡಿಸಿದ್ದಾರೆ. ಆತ್ಮಕಥಾ ಭಾಗವಾಗಿ ಗೌರವ ಗ್ರಂಥಗಳಲ್ಲಿ ಅನಿವಾರ್ಯವಾಗಿ ಬರೆಯಬೇಕಾಗಿ ಬಂದದ್ದರ ಬಗ್ಗೆ ಲೇಖಕರಿಗೆ ಸಾಕಷ್ಟು ತಳಮಳವಿದೆ. ಈ ತಳಮಳದ ಹಿಂದೆ ಆತ್ಮಕಥೆ ಪ್ರಶಂಸೆ ಯಾಗಬಾರದೆಂಬ, ವ್ಯಕ್ತಿಪ್ರತಿಷ್ಠೆಯ ಜಾಹಿರಾತಾಗಬಾರದೆಂಬ ಸ್ವವಿಮರ್ಶೆಯ ತುಡಿತ ಇದೆ. ಉತ್ತಮಿಕೆಯ 'ಅಹಂ' ತಲೆಯೆತ್ತಿ ಬರವಣಿಗೆ ಅದರಲ್ಲಿ ಮುಳುಗಿತು ಎನ್ನುವ ಭಾವನೆ ಬರುವ ಹೊತ್ತಿಗೆ ಅದು ಮುಕ್ತಸ್ನೇಹದ, ತಾನು ಜವಾಬ್ದಾರನಲ್ಲದೆ ಅನ್ಯರಿಂದ ನಿಯಂತ್ರಿಸಲ್ಪಡುವ ಸನ್ನಿವೇಶದಿಂದ ಉದ್ಭವವಾಗಿದ್ದೆಂಬ ಮುಕ್ತಶೈಲಿಗೆ ತಿರುಗುವುದು ಆರೋಗ್ಯವಂತ ಬರವಣಿಗೆಗೆ ಸಾಕ್ಷಿಯಾಗಿದೆ.

ಮನುಷ್ಯ ಬದುಕನ್ನು ನಿಯಂತ್ರಿಸುತ್ತೇನೆಂದರೂ ಅದನ್ನು ಮೀರಿ ಬದುಕನ್ನು ನಿರ್ದೇಶಿಸುವ ಪ್ರಾಕೃತಿಕ ಅಗೋಚರ ಸೂತ್ರಗಳು ಕೆಲಸಮಾಡುವುದನ್ನು ಈ ಕೃತಿ ಒಪ್ಪುತ್ತದೆ. ಈ ಧೋರಣೆ ನವೋದಯ ಕಾವ್ಯಮಾರ್ಗದಿಂದ ಪಡೆದ ಹಿರಿಯ ಬಾಳಿಯಾದರೂ ಅದರಿಂದಲೇ ಜೀವನ ಸಾಗುತ್ತದೆಂಬ ಅಂಧಶ್ರದ್ಧೆಯ ಬರಹವಾಗಿ ರೂಪು ಪಡೆಯುವುದಿಲ್ಲ. ನಾವು ನಂಬುವ ಸತ್ಯ ಆ ಕಾಲದ್ದು ಮಾತ್ರವಾಗಿದ್ದು, ಅನುಭವ ಬದುಕು ಮಾಗುತ್ತಾ ಬಂದಂತೆಲ್ಲಾ ಹಿಂದೆ ನಂಬಿದ್ದಕ್ಕಿಂತ ಬೇರೆ ಸತ್ಯ ಇರಬಹುದೆಂಬ ಸಾಪೇಕ್ಷ ನಿಲುವಿನಲ್ಲಿ ಲೇಖಕರ ಸಂವೇದನೆ ಬದುಕನ್ನು ಪರಿಶೀಲಿಸುತ್ತದೆ. ಇದು ಬರಹಗಾರರ ಬೌದ್ಧಿಕ

ಸಂವೇದನೆಯ ವಿಕಾಸಶೀಲತೆಯಾಗಿ ಮಾತ್ರ ಉಳಿಯದೆ ತಾನು ಒಪ್ಪಿ ಬರೆಯುವ ನಂಬಿಕೆಯಾಗಿಯೂ ಕೆಲಸ ಮಾಡುತ್ತದೆ. ಜಿಎಸ್‌ಎಸ್ ಅವರ ಕಾವ್ಯಸೃಷ್ಟಿಯಲ್ಲೂ ಈ ಸತ್ಯ ಕೆಲಸ ಮಾಡಿರುವಂತೆ ಬದುಕಿನಲ್ಲೂ ಆಗಿದೆ. ಹಾಗಾಗಿ ಅವರು ಬರೆಯುತ್ತಾರೆ.

"ಬದುಕಿನ ಚೆಲುವು-ಒಲವುಗಳು, ನಿಜವಾಗಿಯೂ ಉಳಿಯತಕ್ಕವು. ಬದುಕಿನ ದುಃಖ ಕ್ರೌರ್ಯ ಇತ್ಯಾದಿಗಳನ್ನು ಒಪ್ಪಿಕೊಂಡೂ, ಅದನ್ನು ಮೀರಿ ದಾಟಲು ನೆರವಾಗತಕ್ಕವು ಎಂಬ ಆಲೋಚನೆಗಳು ನನ್ನನ್ನು ಈ ಕಾಲದ 'ಚಂಡೆಮದ್ದಳೆ'ಯ ಅಬ್ಬರದ ನಡುವೆಯೂ ಒಂದು ನೆಲೆಗೆ ನಿಲ್ಲಿಸಿದ್ದವು. ಅತಿಯಾದ ಭಾವುಕತೆಯಾಗಲೀ, ಆದರ್ಶವಾಗಲೀ, ಕೇವಲ ದೊಡ್ಡ ದೊಡ್ಡ ಮಾತುಗಳಾಗಲಿ ಎಷ್ಟೊಂದು ಪೊಳ್ಳು ಎಂದು ಅನ್ನಿಸತೊಡಗಿತ್ತು; ದೇವರು, ಧರ್ಮ, ವಿಧಿ, ಕರ್ಮ ಇತ್ಯಾದಿಗಳ ಬಗ್ಗೆ ತಲೆಕೆಡಿಸಿಕೊಳ್ಳದೆ ವಾಸ್ತವವನ್ನು ಯಥಾವತ್ತಾಗಿ ಒಪ್ಪಿಕೊಳ್ಳುವ, ಗ್ರಹಿಸುವ ಹಾಗೂ ಎದುರಿಸುವ ಧೈರ್ಯವನ್ನು ಮೈಗೂಡಿಸಿಕೊಳ್ಳುವುದು, ಬದುಕಿನ ಅನುಭವಗಳನ್ನು ಶೋಧಿಸುತ್ತಾ ಅರಿವಿನ ಪರಿಧಿಯನ್ನು ವಿಸ್ತರಿಸುವುದು ಇವೇ ನಿಜವಾದ ಜೀವನ ಮೌಲ್ಯಗಳಾಗಬೇಕೆಂಬ ಎಚ್ಚರ ನನ್ನನ್ನು ಆವರಿಸತೊಡಗಿತು".

ಮನುಷ್ಯನ ಇಚ್ಛೆಯನ್ನು ಮೀರಿ ಸಂಭವಿಸಬಹುದಾದ ವಿಸ್ಮಯಗಳಿಗೆ ಅವರ ಕಾವ್ಯಮುಖ ಮಾಡಿರುವಂತೆ, ಬದುಕಿನಲ್ಲೂ ಇಂಥವು ಅಸಂಭವವಲ್ಲವೆಂದು ಸಾರುತ್ತವೆ. ಶಾಲಾ ಅಧ್ಯಾಪಕರಾಗಿದ್ದ ತಂದೆ ಹಾಗೂ ತಾಯಿಯ ಜೊತೆ ತುಂಗಾನದಿಯ ಮರಳು ಹಾಸಿಗೆ ಹೋಗಿದ್ದು, ಎರಡೂವರೆ ವರ್ಷದ ಮಗುವಾಗಿದ್ದ ಅವರು ನೀರುಪಾಲಾಗಬೇಕಿದ್ದು, ತಾಯಿಯ ಸಕಾಲಿಕ ಎಚ್ಚರದಿಂದ ಪಾರಾದದ್ದಾಗಲಿ, ಬೆಳೆದು ದೊಡ್ಡವರಾದ ಮೇಲೆ ಕಾಶಿಯ ದಶಾಶ್ವಮೇಧ ಘಾಟಿನಲ್ಲಿ ಗೆಳೆಯರೊಂದಿಗೆ ನೀರು ಪಾಲಾಗುತ್ತಿದ್ದಾಗ ವ್ಯಕ್ತಿಯೊಬ್ಬನ ಅನಿರೀಕ್ಷಿತ ಆಗಮನದಿಂದ ಪಾರಾಗಿ ಉಳಿದದ್ದಾಗಲಿ ಮೇಲಿನ ನಂಬಿಕೆಯನ್ನು ಗಟ್ಟಿಗೊಳಿಸುತ್ತವೆ. ಇಂಥ ನಂಬಿಕೆ 'ಸಾವಿಗೂ ಬದುಕಿಗೂ ಇರುವ ಅಂತರ ಕೇವಲ ಕೂದಲೆಳೆಯಷ್ಟು ಮಾತ್ರದ್ದು. ನಾವು ಬದುಕಿರುವುದೂ ಕೂಡಾ ಒಂದು ಆಕಸ್ಮಿಕವೊ ಏನೊ' ಎಂಬ ಅನಿಸಿಕೆಗೆ ಎಡೆಮಾಡಿಕೊಡುತ್ತದೆ.

ಪ್ರಕೃತಿಯನ್ನು ಭಯ, ವಿಸ್ಮಯದಿಂದ ಕಾಣುವ, ಅದನ್ನು ಭಾವಗಮ್ಯವನ್ನಾಗಿಸಿಕೊಳ್ಳುವ ಅವಕಾಶ ಬಾಲ್ಯದಿಂದಲೇ ಲೇಖಕರಿಗೆ ಒದಗಿ ಬಂದಿರುವಂತಿದೆ. ಸಾವಿನ ಪರಿವಿಲ್ಲದ ಎಳೆಯಂದಿನ ಮುಗ್ಧ ನದಿಯ ಆಕರ್ಷಣೆಯಿಂದ ಮೊದಲ್ಗೊಂಡು ದಿನ ಬೆಳಗಾದರೆ ಬಿಂದಿಗೆ ಗಡಿಗೆಗಳ ಸಮೇತ ಹೊಳೆಯ ನೀರಿಗೆ ಹೋಗುವವರ, ಬಿಂದಿಗೆಯ ಮೇಲೆ ಬಿಂದಿಗೆ ಕಿರುಬಿಂದಿಗೆಯನ್ನಿರಿಸಿಕೊಂಡು ನೀರಿನ ತೇರಿನಂತೆ ಚಲಿಸುವ ಹೆಂಗಸರ, ಅಡ್ಡೆಗಳಲ್ಲಿ ಬಿಂದಿಗೆಗಳನ್ನಿರಿಸಿಕೊಂಡು ಜೀಕುತ್ತಾ ಬರುವ ಗಂಡಸರ, ಹೋಟೆಲುಗಳಿಗೆ ಹಂಡೆ ಡ್ರಮ್ಮುಗಳಲ್ಲಿ ಹೊಳೆಯ ನೀರನ್ನು ಸಾಗಿಸುವ ಎತ್ತಿನಗಾಡಿಗಳ ಸಾಲು ಮೆರವಣಿಗೆ ಕವಿ ಮನೋವ್ಯಾಪಾರಕ್ಕೆ 'ನೀರಿನ ಮೆರವಣಿಗೆ'ಯಾಗಿ ಕಾಣಿಸುತ್ತದೆ. 'ದಿನದಿನದ ಸರಳ ಸಾಧಾರಣದ ಬದುಕಿನ' ಚಿತ್ರಣಗಳಲ್ಲದೆ ಮಳೆಗಾಲದಲ್ಲಿ ತನ್ನೆಲ್ಲಾ ಅಬ್ಬರದೊಂದಿಗೆ

ಹರಿದುಬಂದ ತುಂಗಭದ್ರೆಯ ಕೆಂಪು ನೀರಿನ ಪ್ರವಾಹ ರುದ್ರಭಯಂಕರ ಚಿತ್ರವಾಗಿ ಪಡಿಮೂಡುತ್ತದೆ. ಚಿಕ್ಕಂದಿನಲ್ಲಿಯೆ ತಾಯಪ್ರೇಮದಿಂದ ವಂಚಿತವಾದ ವಿಷಾದ ಮತ್ತು ಆಕೆಯ ಮಸಕಾದ ದೈಹಿಕ ನೆನಪು ಬೆಳೆಯುತ್ತಾ 'ಕಂಡ ಕಂಡ ಹೆಣ್ಣುಮೊಗದಿ ತಾಯಮುಖವನರಸಿದೆ' ಎಂಬ ಭಾವಕ್ಕೆ ಬಂದು ಮುಟ್ಟುತ್ತದೆ. ಎಳೆಯಂದಿನಲ್ಲಿ ಮನೆಗೆ ಬೆಂಕಿ ಬಿದ್ದು ತಾಯಿ ರಕ್ಷಿಸಿದ ಕಥೆಯನ್ನು ಅಜ್ಜಿಯಿಂದ ಕೇಳಿ ತಳೆಯುವ ಕೃತಜ್ಞತಾಭಾವ ಹಾಗೂ ಬಾಲ್ಯದ ನೆನವರಿಕೆ ಮುಂದೆ ಕವಿಯ ಭಾವ ಲೋಕದಲ್ಲಿ ಹೀಗೆ ಮೈಪಡೆಯುತ್ತದೆ:

**'ಮಲ್ಲಿಗೆಯ ಮಳೆಗರೆವ ಕಣ್ಣು ಎರಡೇ ಎರಡು**
**ಮೇಲ್ ಮುಗಿಲಲ್ಲಿ ಕೆಳಗೆ ಹಸುರು ಸೆರಗಿನ ಮೆತ್ತೆ**
**ಈ ನಡುವೆ ಬಾಯಿಟ್ಟು ಸೀಪಿದಾಗೆಲ್ಲ ಹಾಲನು ಸುರಿವ**
**ಚಂದ್ರಕುಂಭಗಳೆರಡು**
**ಎಂದು ಯಾವಾಗಲೂ ಗಕ್ಕನೆಯ ನಿಂತು ಕೈಕೊಡದ ನಲ್ಲಿ**
**ತುಟಿಯ ಬಟ್ಟಲಿನಲ್ಲಿ'**

—ಹೀಗೆ ಶಿವರುದ್ರಪ್ಪನವರ ಆತ್ಮಕಥೆಯ ವಿವರಕ್ಕೂ ಆನಂತರ ಅವರ ಕವಿತೆಗಳು ಬೆಳೆದು ಬಂದ ಭಾವಕೋಶಕ್ಕೂ ಅವಿನಾಭಾವ ಸಂಬಂಧವನ್ನು ಗುರುತಿಸಲು ಬರುವಂತಿದೆ.

ಮಲೆನಾಡಿನ ಸೆರಗಿನ ಊರುಗಳಿಂದ ಹಿಡಿದು ಬಯಲುನಾಡಿನ ಹಳ್ಳಿಗಳವರೆಗೆ, ಹಳ್ಳಿಯಿಂದ ನಾಗರಿಕತೆಯ ತುತ್ತತುದಿಯ ಪಟ್ಟಣಗಳವರೆಗೆ ಪಡೆದ ಅನುಭವಗಳು, ಜೀವನ ಚಿತ್ರಗಳು, ಗ್ರಹಿಕೆಯ ವಿಧಾನಗಳು ನೂರುಸ್ವರ ನೂರುತೆರನಾಗಿ ಅವರ ಮನೋಲೋಕವನ್ನು ಪ್ರವೇಶಿಸಿವೆ. ಶಾಲಾಮಾಸ್ತರರಾಗಿದ್ದ ಶಿವರುದ್ರಪ್ಪನವರ ತಂದೆಯವರ ವರ್ಗಾವಣೆಯೂ ಈ ಲೇಖಕರ ಅನುಭವ ವೈವಿಧ್ಯದ ಗ್ರಹಿಕೆಗೆ ಅನುಕೂಲಕರವಾಗಿ ಒದಗಿ ಬಂದಂತಿದೆ. 'ಕೋಟೆಹಾಳು' ಎಂಬ ಊರಿನ ಸುತ್ತಲಿನ ನಿಸರ್ಗದ ಸೊಗಸು, ಹೊಸದುರ್ಗದ ಬೆಲಗೂರಿನಂಥ ತೆಂಗಿನ ಸೀಮೆಯ ಆಕರ್ಷಣೆ, ರಾಮಗಿರಿಯಲ್ಲಿದ್ದಾಗ ಹುಟ್ಟಿದ ಬಯಲಾಟದ ಹುಚ್ಚು, ಕೊಟ್ಟೂರಪ್ಪನವರ 'ದಾನಶೂರ ಕರ್ಣ', 'ಗಯನ ಚರಿತ್ರೆ', 'ಭೀಷ್ಮ ವಿಜಯ'ದಂಥ ಗ್ರಾಮಫೋನು ರೆಕಾರ್ಡ್‌ಗಳು ಬಾಲ್ಯದ ನೆನಪಾಗಿ ಮನದಾಳದಲ್ಲಿ ಕುಳಿತುಕೊಂಡು ವ್ಯಕ್ತಿಯ ಬದುಕಿನ ಮೇಲೆ ಬೀರುವ ಪ್ರಭಾವಗಳ ಸ್ವರೂಪವನ್ನು ಸುಲಭವಾಗಿ ವರ್ಣಿಸಲು ಆಗದಷ್ಟು ಸಂಕೀರ್ಣವೆನ್ನುವಂತೆ ನಿರೂಪಿಸಲ್ಪಟ್ಟಿವೆ. ಅದರಲ್ಲೂ ನೇಕಾರರ ಮಗ್ಗ, ಕುಂಬಾರಚಕ್ರದ ಮಣ್ಣು ಬಾಲ್ಯದಲ್ಲಿ ಆಕರ್ಷಣೆಯ ಕೇಂದ್ರವಾಗಿದ್ದುವೆಂದು ಅವರು ಬರೆದುಕೊಳ್ಳುತ್ತಾರೆ. "ಮಗ್ಗದಲ್ಲಿ ಹುಸಿದ ದಾರ, ಉಳಿಯಾಡುವ ಕ್ರಮದಿಂದ ಬಟ್ಟೆಯಾಗುವ ಆ ಬೆರಗು, ಕುಂಬಾರನ ಚಕ್ರದ ನಡುವಣ ಮಣ್ಣು ಕುಂಬಾರನ ಬೆರಳಿನ ಸ್ಪರ್ಶದಿಂದ ಬಗೆಬಗೆಯಾಗಿ ರೂಪುತಾಳುವ ಮೋಡಿ ಈ ಎರಡೂ ಕವಿತೆ ಹುಟ್ಟುವುದು ಹೇಗೆ ಎಂಬುದನ್ನು ನನಗೆ ತಿಳಿಸಿಕೊಟ್ಟಿವೆ" ಎನ್ನುವಷ್ಟರಮಟ್ಟಿಗೆ ಪ್ರಭಾವದ ನೆಲೆಗಳನ್ನು 'ಚತುರಂಗ'ದ ಬರವಣಿಗೆ ಗುರುತಿಸಿ ಕೊಡುತ್ತದೆ.

ಮಧ್ಯಮವರ್ಗದ ಕುಟುಂಬದ ಯುವಕನೊಬ್ಬ ಉನ್ನತ ವಿದ್ಯಾಭ್ಯಾಸ ಮಾಡಬೇಕೆಂಬ ಹಂಬಲವಿಟ್ಟುಕೊಂಡಾಗ ಎದುರಾಗುವ ಸಾಂಸಾರಿಕ ಹಪಾಹಪಿಗಳೆಲ್ಲಾ ಪ್ರಾತಿನಿಧಿಕವಾಗುವಂತೆ 'ಉದ್ಯೋಗ ಪರ್ವ' ದಾಖಲಿಸುತ್ತದೆ. ಮಗ ಕೆಲಸಕ್ಕೆ ಸೇರಿ ತುಂಬು ಸಂಸಾರಕ್ಕೆ ನೆರವಾಗಲಿ ಎಂಬ ತಂದೆಯ ಅಪೇಕ್ಷೆಗೆ ವಿರುದ್ಧವಾಗಿ ಇಂಟರ್‌ಮೀಡಿಯೆಟ್‌ಗೆ ಸೇರಿದ ಮಗ 'ಕ್ವಿಟ್ ಇಂಡಿಯಾ' ಚಳುವಳಿಯಿಂದಾಗಿ ಓದು ಸ್ಥಗಿತಗೊಳಿಸಬೇಕಾಗಿ ಬಂದದ್ದು, ನಡುನಡುವೆ ಕೆಲಸಕ್ಕೆ ಅರ್ಜಿ ಹಾಕಿ ಹತಾಶನಾಗಬೇಕಾದ ಪರಿಸ್ಥಿತಿ, ನಡುವೆ 'ರೇಷನ್ ಗುಮಾಸ್ತ'ನಾಗಿ ಹೆಸರು, ಹಣ ಸಂಪಾದಿಸಿ ಮೈಸೂರಿಗೆ ಬಂದು ಬಿ.ಎ. ಆನರ್ಸ್‌ಗೆ ಸೇರಿದ್ದು ಕಾಲಾನುಕ್ರಮ ದಾಖಲೆಯಾಗಿ ನಿಂತಿದೆ. ಇಸವಿವಾರು ದಾಖಲೆಗಳ ನಡುವೆಯೂ ರೇಷನ್ ಗುಮಾಸ್ತ ರಾಗಿದ್ದಾಗ ಕಂಡ ಜನತೆಯ ಬವಣೆ, ಲೇಖಕರ ಮಾನಸಿಕ ತಾಕಲಾಟ 'ಚಕ್ರವ್ಯೂಹ'ಎಂಬ ಕಾದಂಬರಿಯಾಗಿ ರೂಪುಗೊಂಡ ಕುತೂಹಲದ ಮಾಹಿತಿಯೂ ಇಲ್ಲಿ ಸಿಗುತ್ತದೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ 'ಮೇಜರ್ ಕವಿ'ಯೆಂದು ಗುರುತಿಸಿಕೊಂಡವರೊಬ್ಬರ 'ಕಾದಂಬರಿ' ಹೇಗಿದ್ದಿತೆಂಬ ಕುತೂಹಲ ಹುಟ್ಟಿದರೂ ಅದು ಹಸ್ತಪ್ರತಿಯಲ್ಲೆ ಕಳೆದುಹೋಯಿತೆಂಬ ಸಂಗತಿ ನಿರಾಶೆ ತರುತ್ತದೆ.

'ಕನ್ನಡ ಆನರ್ಸ್‌ಗೆ ಯಾಕಯ್ಯ ಸೇರುತ್ತೀಯ... ಬೇರೆ ಯಾವುದಾದರೂ ವಿಷಯವನ್ನು ತಗೊ, ನಾಳೆ ನಿನಗೆ ಒಳ್ಳೆಯದಾಗಬಹುದು' ಎಂದು ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಗಳು ಉಪದೇಶಿಸಿದರೂ ಪಟ್ಟು ಹಿಡಿದು ಅದಕ್ಕೆ ಪ್ರವೇಶ ಪಡೆದದ್ದು; ಇದರಿಂದಾಗಿ ಕುವೆಂಪು ಅವರ ಸಾನಿಧ್ಯದಲ್ಲಿ ಕೂತು ಪಾಠ ಕೇಳುವ ಅವಕಾಶ ದೊರೆತದ್ದನ್ನು ಒಂದು ಅಪೂರ್ವ ಯೋಗ ವೆಂದು ಶಿವರುದ್ರಪ್ಪನವರು ಭಾವಿಸುತ್ತಾರೆ. ಇದನ್ನೊಂದು ಭಾವನಾತ್ಮಕ ಸಂಬಂಧವೆಂದು ಸುಲಭವಾಗಿ ತಳ್ಳಿಹಾಕಬಹುದು. ಆದರೆ ಒಂದು ತಲೆಮಾರಿನ ಗುರು-ಶಿಷ್ಯರ ನಡುವಿನ ಆದರ್ಶ ಸಂಬಂಧವನ್ನು ಇದು ನೆನಪಿಸುವಂತಿದೆ. ಇಂಥ ಔದಾರ್ಯವನ್ನು, ಅಂತಃಕರಣವನ್ನು ಗುಣಪಕ್ಷಪಾತವನ್ನು ಪ್ರೊ. ತೀ.ನಂ.ಶ್ರೀ., ಪ್ರೊ. ಶ್ರೀಮಾಲಿಯವರಲ್ಲಿ ಕಂಡದ್ದನ್ನು ಬರವಣಿಗೆ ದಾಖಲಿಸುತ್ತದೆ. ಆದರ್ಶ ಅಧ್ಯಾಪಕರು ಆದರ್ಶ ವಿದ್ಯಾರ್ಥಿಗಳನ್ನು ರೂಪಿಸುತ್ತಾರೆ ಎನ್ನುವುದು ಕೇವಲ ಆದರ್ಶದ ಮಾತಾಗದೆ ಅದು ಕ್ರಿಯಾಶೀಲ ವಾಸ್ತವವಾದದ್ದನ್ನು ಕುವೆಂಪು-ಶಿವರುದ್ರಪ್ಪನವರ ಸಂಬಂಧ ಸೂಚಿಸುವಂತಿದೆ. ತಮ್ಮ ಅಧ್ಯಾಪನದ ಮೊದಲ ದಿನದ ಪಾಠದ ವೈಖರಿಯನ್ನು ಶಿವರುದ್ರಪ್ಪನವರು ವರ್ಣಿಸಿರುವ ಬಗೆಯಿದು:

"ತಸ್ಮೈಶ್ರೀ ಗುರುವೇ ನಮಃ ಎಂದು ಕುವೆಂಪು ಅವರನ್ನು ನೆನೆದೆ. ಮರುದಿನ ಮೊದಲಪಾಠ ಮಾಡಬೇಕಾದದ್ದು ಸೀನಿಯರ್ ಇಂಟರ್ ತರಗತಿಗೆ, ಕುವೆಂಪು ಅವರ 'ಚಿತ್ರಾಂಗದಾ' ಕಾವ್ಯವನ್ನು ಕುರಿತು. ಕುವೆಂಪು ಅವರು ಮೂರು ವರ್ಷ ಮಾಡಿದ ತರಗತಿಯ ಪಾಠದ ಬತ್ತಳಿಕೆ-ಬಿಲ್ಲು-ಖಡ್ಗ-ತೋಮರಗಳಿಂದ ಸಿದ್ಧವಾಗಿ, ಸೂಟು-ಬೂಟು

ಧರಿಸಿ ತರಗತಿಗೆ ಪ್ರವೇಶ ಮಾಡಿ ಒಂದು ಗಂಟೆ ಭಯಂಕರ ಭಾಷಣ ಮಾಡಿದೆ. ನನಗೇ ತಿಳಿಯದಂಥ ದಪ್ಪ ದಪ್ಪ ಪದಪುಂಜಗಳು ಆ ವಿದ್ಯಾರ್ಥಿಗಳ ತಲೆಗೇ ಹೋಗದ ಕಾವ್ಯಮೀಮಾಂಸೆಯ ಪಾರಿಭಾಷಿಕ ಪದಗಳು, ನಡುನಡುವೆ ಮಹಾಛಂದಸ್ಸು, ಮಹೋಪಮೆ, ಮಹತ್‌ಪ್ರತಿಭೆ ಇಂಥ ಸಂಗತಿಗಳು ಇತ್ಯಾದಿಗಳಿಂದ ಕೂಡಿದ ನನ್ನ ಮೊದಲ ಪಾಠಕ್ಕೆ ಬಲಿಯಾದ ಸೀನಿಯರ್ ಇಂಟರ್‌ಮೀಡಿಯೇಟ್‌ನ ವಿದ್ಯಾರ್ಥಿಗಳು ಹಿಂದುಮುಂದು ಏನೊಂದೂ ತಿಳಿಯದೆ ಸ್ತಂಭೀಭೂತರಾದರು. ಮಾತಾಡಿದರೆ, ಅರ್ಥವಾಗದಂತೆ ಮಾತನಾಡಬಹುದೆಂಬ ಸತ್ಯ ಸಾಕ್ಷಾತ್ಕಾರವಾಯಿತು." ಅವರು ಮುಂದುವರಿದು ನಾಲ್ಕು ದಶಕಗಳ ದೂರ ಅಂತರದಲ್ಲಿ ನಿಂತು ಈಗ ಅದನ್ನು ನೆನೆದರೆ ನನಗೇ ನಗು ಬರುತ್ತದೆ ಎನ್ನುವಲ್ಲಿ ಶಿವರುದ್ರಪ್ಪನವರ ಮಾನಸಿಕ ಬೆಳವಣಿಗೆ, ಸ್ವವಿಮರ್ಶೆಯ ಧಾಟಿಯೊಂದಿಗೆ ಬರವಣಿಗೆಯ ಅನನ್ಯತೆಯ ಗುಣವನ್ನು ಗುರುತಿಸಲು ಬರುತ್ತದೆ. 'ಶ್ರೀ ಕುವೆಂಪು ಅವರಿಗೆ' ಕವಿತೆ ಪದ್ಯರೂಪದ ಇಂಥ ನುಡಿಗೌರವವೇ ಆಗಿರುವುದನ್ನು ಗಮನಿಸಬಹುದು.

ಶಿವರುದ್ರಪ್ಪನವರು ತಮ್ಮ ಆತ್ಮಕಥೆಯಲ್ಲಿ ತಮಗಿದ್ದ ಶೈಕ್ಷಣಿಕ ಸಾಹಿತ್ಯಿಕ ಆಸಕ್ತಿಯನ್ನು, ಅದರ ಉದ್ದೀಪನದಲ್ಲಿ ಕುವೆಂಪು, ತೀನಂಶ್ರೀ, ತ.ಸು. ಶಾಮರಾಯ ಮುಂತಾದ ಹಿರಿಯರು ವಹಿಸಿದ ಪಾತ್ರವನ್ನು ಸ್ಮರಿಸಿದ್ದಾರೆ. ಸಂದರ್ಶನಕ್ಕೆ ಹೋಗದಿದ್ದರೂ ಉಸ್ಮಾನಿಯಾ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ರೀಡರ್ ಹುದ್ದೆಗೆ ಆಯ್ಕೆಯಾದದ್ದರ ಹಿನ್ನೆಲೆಯಲ್ಲಿ ತೀ.ನಂ.ಶ್ರೀಕಂಠಯ್ಯ ವಹಿಸಿದ ಪಾತ್ರವನ್ನು, ಅದೇ ಹುದ್ದೆಗಾಗಿ ಅರ್ಜಿ ಸಲ್ಲಿಸಿ ಆಯ್ಕೆಯ ಭರವಸೆ ಇಟ್ಟುಕೊಂಡ ಗೆಳೆಯರಿಗೆ ಆದ ಹತಾಶೆಯನ್ನು ಮುಕ್ತವಾಗಿ ಉಲ್ಲೇಖಿಸಿದ್ದಾರೆ. ಈ ಮುಕ್ತತೆ ಎಲ್ಲಿಯವರೆಗೆ ಬೆಳೆಯುತ್ತದೆಂದರೆ, ಘಟನೆಯನ್ನು ಸಾದ್ಯಂತವಾಗಿ ಗೆಳೆಯರಿಗೆ ವಿವರಿಸುವವರೆಗೆ. ಮೈಸೂರು ವಿಶ್ವವಿದ್ಯಾನಿಲಯಕ್ಕೆ ಮತ್ತೆ ಬಾರದಂತೆ ನೋಡಿಕೊಂಡ, ಒಂದೇ ವಾರದಲ್ಲಿ ಎದುರಾಳಿ ಅಭ್ಯರ್ಥಿಗೆ ಡಿ.ಲಿಟ್. ಸಿಗುವಂತೆ ನೋಡಿಕೊಂಡ ವಿಭಾಗ ಮುಖ್ಯಸ್ಥರ ಅಶೈಕ್ಷಣಿಕ ಆಸಕ್ತಿಗಳ ಬಗ್ಗೆಯೂ ಸಾತ್ವಿಕ ಅತೃಪ್ತಿಯನ್ನು ಲೇಖಕರು ವ್ಯಕ್ತಪಡಿಸಿದ್ದಾರೆ. ವಿಶ್ವವಿದ್ಯಾನಿಲಯಗಳ ವಿಭಾಗಗಳಲ್ಲಿನ ಇಂಥ ಕ್ಷುದ್ರ ರಾಜಕಾರಣಕ್ಕೆ ತೆರೆ ಬೀಳುವುದು ಮೌಲ್ಯಪ್ರಜ್ಞೆಯುಳ್ಳ, ಧೈರ್ಯಶಾಲಿಗಳಾದ ವ್ಯಕ್ತಿಗಳು ವಿಶ್ವವಿದ್ಯಾನಿಲಯಗಳ ಕುಲಪತಿಗಳಾದಾಗ ಮಾತ್ರ ಎನ್ನುವ ಧೋರಣೆ ಅವರದು. ತಮಗೆ ಬೇಕಾದವರನ್ನು ಪ್ರಾಧ್ಯಾಪಕರನ್ನಾಗಿಸುವಾಗ, ಬೇಡವಾದವರನ್ನು ತಿರಸ್ಕರಿಸುವಾಗ, ವಿದ್ವಾಂಸರೆನ್ನಿಸಿಕೊಂಡವರು ಸಂದರ್ಶನ ಕಾಲದಲ್ಲಿ ಕೇಳುವ ಪ್ರಶ್ನೆಯ ಕ್ಷುಲ್ಲಕತೆಯನ್ನು ಕಂಡು ಬೆಚ್ಚಿದ್ದಾರೆ. "ಬಚ್ಚಿಟ್ಟುಕೊಂಡು ಬದುಕುವುದು ನನಗಿಷ್ಟವಿಲ್ಲ; ಹಾಗಂತ ಎಲ್ಲವನ್ನು ಬಿಚ್ಚಿ ಹರಾಜಿಗಿಡುತ್ತೇನೆಂದು ಇದರರ್ಥವಲ್ಲ" ಎಂಬ 'ನಿಲುವು'ವಿಗನುಗುಣವಾಗಿ ಆತ್ಮಚರಿತ್ರೆಯ ನಡೆ ಇದೆ.

ಮೊದಮೊದಲು ಕಥಾ ಸಾಹಿತ್ಯದ ಪ್ರಭಾವಕ್ಕೆ ಒಳಗಾದರೂ ಕವಿತೆಯನ್ನೇ ಏಕೆ ಬರೆದರು ಎಂಬುದಕ್ಕೆ ಅವರಲ್ಲಿ ಉತ್ತರವಿಲ್ಲ. ಶ್ರೀಕುವೆಂಪು ಅವರೇ ನನ್ನ ಕಾವ್ಯಾಸಕ್ತಿ

ಹಾಗೂ ಕಾವ್ಯನಿರ್ಮಿತಿಯ ಪ್ರಥಮಸ್ಫೂರ್ತಿ. ಇಂಥ ಕಾವ್ಯಾಭಿರುಚಿಗೆ ನೀರೆರೆದು ಬೆಳೆಸಿದವರು ಹೈಸ್ಕೂಲಿನಲ್ಲಿ ತಮಗೆ ಗಣಿತದ ಮೇಷ್ಟ್ರಾಗಿದ್ದ ರೇವಣ್ಣನೆಂಬುವರು ಎಂದು ಅವರು ಸ್ಮೃತಿಗೆ ತಂದುಕೊಳ್ಳುತ್ತಾರೆ. ಸ್ವಭಾವತಃ ಸಂಕೋಚ ಪ್ರವೃತ್ತಿಯ ಅವರನ್ನು ದೊಡ್ಡ ಚೇತನಗಳಾದ ಜಿ.ಪಿ. ರಾಜರತ್ನಂ, ತ.ಸು. ಶಾಮರಾಯ, ಕುವೆಂಪು, ಮಾಸ್ತಿ ಅಂಥವರ ಹತ್ತಿರ ತಂದುದು ಅವರ ಕವಿತೆಗಳೇ. ಲೌಕಿಕವಾಗಿ ಕವಿತೆ ತಮ್ಮನ್ನು ಕಾಪಾಡಿತು ಎಂತಲೇ ಅವರು ನಂಬುತ್ತಾರೆ. ಕವಿತೆಗಳಿಂದಾಗಿ 'ಜೀವನ', 'ಪ್ರಬುದ್ಧ ಕರ್ನಾಟಕ'ದಂಥ ಪತ್ರಿಕೆಗಳ ಸಂಪರ್ಕ ಬಂತು. ವಾರಕ್ಕೆ ಒಂದು ದಿನ ಶಿವರುದ್ರಪ್ಪನವರ ಕವಿತೆ ಕೇಳಿ ಮೆಚ್ಚುತ್ತಿದ್ದವರಲ್ಲಿ ತ.ಸು. ಶಾಮರಾಯರು ಒಬ್ಬರು. 'ಎದೆ ತುಂಬಿ ಹಾಡಿದೆನು ಅಂದು ನಾನು...' ಎಂಬ ಜನಪ್ರಿಯ ಪದ್ಯ ಅವರನ್ನು ಕುರಿತದ್ದ ಆಗಿದೆ. ಬೆಳದಿಂಗಳ ವರ್ಣನೆ ಇದ್ದ ಬಹುಮಾನಿತ ಕವಿತೆಯೊಂದರ ಮೂಲಕ ಕುವೆಂಪು ಕಣ್ಣಿಗೆ ಬಿದ್ದರು. ಅದನ್ನು ಓದಿ ನೋಡಿದ ಕುವೆಂಪು 'ಇದೇನಿದು ಬೆಳದಿಂಗಳ ವರ್ಣನೆ, ಒಳ್ಳೆ ಪ್ರಖರವಾದ ನಡುಹಗಲಿನ ಅನುಭವದ ಹಾಗೆ ಇದೆಯಲ್ಲ' ಅಂದರಂತೆ. ಬಹುಮಾನ ತಂದುಕೊಟ್ಟ ಕವಿತೆ ಹೀಗೆ ಕೈಕೊಟ್ಟರೂ ಉಳಿದ ಒಳ್ಳೆಯ ಪದ್ಯಗಳನ್ನು ಕುವೆಂಪು ಮೆಚ್ಚಿ ಪ್ರೋತ್ಸಾಹಿಸಿದರು. ತ.ಸು. ಶಾಮರಾಯರ ಆತ್ಮೀಯತೆಯಿಂದಾಗಿ ಅವರ 'ಸಾಮಗಾನ' ತ.ವೆಂ. ಸ್ಮಾರಕ ಗ್ರಂಥಮಾಲೆಯಲ್ಲಿ ಪ್ರಕಟಗೊಂಡಿತು. 'ಸಾಮಗಾನ'ದ ಮೇಲೆ ಬಂದ ಪಕ್ಷಪಾತದ ಪತ್ರಿಕಾ ವಿಮರ್ಶೆಗೆ ಎಚ್.ಎಸ್. ಬಿಳಿಗಿರಿ ಪದ್ಯ ರೂಪದಲ್ಲಿ ಬರೆದ ಪ್ರತಿಕ್ರಿಯೆ 'ಕಾಮ್ರೇಡ್ ವಿಮರ್ಶಕ'. ಆ ವಿಮರ್ಶೆಯ ಧೋರಣೆ ತಮಗೆ ಅನುಕೂಲಕರವೇ ಆಗಿದ್ದರೂ ವಸ್ತುನಿಷ್ಠತೆಯ ಪಾತಳಿಯ ಮೇಲೆ ಬಿಳಿಗಿರಿ, ಗೆಳೆಯರ ಪರವಾಗಿ ವಿಮರ್ಶೆಯ ಪಕ್ಷಪಾತವನ್ನು ಖಂಡಿಸಿದ್ದರು. 'ಅಂಥ ಆರೋಗ್ಯಕರ ಪ್ರವೃತ್ತಿಯನ್ನು ಇವತ್ತು ಎಲ್ಲಿ ತರೋಣ' ಎನ್ನುತ್ತಾರೆ ಲೇಖಕರು.

ಕವಿತೆ ಹುಟ್ಟಿಕೊಳ್ಳುವ ವಿಸ್ಮಯ ವಿವರಕ್ಕೆ ಸಿಲುಕದ್ದೆಂದೇ ಶಿವರುದ್ರಪ್ಪ ನಂಬುತ್ತಾರೆ. ಅದು ಯಾವಾಗ ಬಂದು ಬಾಗಿಲು ಬಡಿಯುವುದೋ ನನಗೆ ತಿಳಿಯದು. ಹಾಗಾಗಿ ಕವಿತೆ ಕಾಲಬದ್ಧವಾದ ಕ್ರಿಯೆಯಲ್ಲ; ಕಾಲಾತೀತದಲ್ಲಿ ಸಂಭವಿಸುವ ಒಂದು ವಿಸ್ಮಯ ಎಂದು ಅವರು ನಂಬುತ್ತಾರೆ. 'ಲಲನೆಯರ ಬೆನ್ನಿನೆಡೆ ಹಾವಿನೊಲು ಜೋಲ್ವ ಜಡೆ' ಎಂಬ ಸಾಲನ್ನೊಳಗೊಂಡ 'ಕನಸಿನಿಂದ ನನಸಿಗೆ' ಎಂಬ ರಚನೆ; 'ಮಬ್ಬಿನಿಂದ ಮಬ್ಬಿಗೆ' ಮುಂತಾದ ಪದ್ಯಗಳು ಈ ಬಗೆಯವು. 'ಬಿಡಿ ನೆನಪಿನ ದೀಪಗಳು' ವಿಭಾಗದ 'ಕಾನ್ವೋಕೇಷನ್ ಗುಬ್ಬಚ್ಚಿ', 'ಕರಗದ ಅನುಭವ', 'ಹಿರಿಯೂರಿನಲ್ಲಿ ಒಂದು ದಿನ', 'ಸಾಯಿಬಾಬಾ ಮತ್ತು ನಾನು', 'ಸನ್ನಿವೇಶವಿಲ್ಲದ ಕುನ್ನಿ' ಬೇರೆ ಬೇರೆ ಕಾರಣಗಳಿಗಾಗಿ ಮುಖ್ಯವಾಗುತ್ತವೆ. ಇವು ನಿರುದ್ದಿಶ್ಯ ದೃಷ್ಟಿಕೋನದ ಬಿಡಿಬರಹಗಳಂತೆ ಕಂಡರೂ ಸಾಮಾಜಿಕ ದೃಷ್ಟಿಕೋನ, ವ್ಯಕ್ತಿ ಸ್ವಂತಿಕೆಯ ಗಟ್ಟಿತನವನ್ನು ಕಂಡುಕೊಳ್ಳುವುದರ ಕಡೆಗೆ ಓದುಗನನ್ನು ಪ್ರೇರೇಪಿಸುವಂತಿವೆ. ಕಾವ್ಯ ಕಟ್ಟುವಿಕೆಯ ಕ್ರಿಯೆಗೆ ಇವು ಒಂದು ಬಗೆಯ

ತಾತ್ವಿಕ ಆಯಾಮವನ್ನೊದಗಿಸುತ್ತಿರುವುದರಿಂದ ಇಲ್ಲಿನ ವಿಚಾರಗಳನ್ನು ಪ್ರತ್ಯೇಕಿಸಿ ಶಿವರುದ್ರಪ್ಪನವರ ಕಾವ್ಯ ಇಲ್ಲವೇ ಆತ್ಮಚರಿತ್ರೆಯನ್ನು ಓದುವುದು ಕಷ್ಟದ ಮಾತೇ ಎನಿಸುತ್ತದೆ.

ಸಾಹಿತ್ಯ ಜೀವನಪ್ರೀತಿಯ ವಿಸ್ತರಣೆ ಮಾತ್ರವಲ್ಲ, ಮಾನವೀಯ ಸಂಬಂಧಗಳ ವಿಸ್ತರಣೆ ಕೂಡ ಆಗಿದೆಯೆಂದು ಲೇಖಕರು ನಂಬುವುದರಿಂದ 'ಚತುರಂಗ'ದಲ್ಲಿ ಪ್ರಧಾನವಾಗಿ ನಮ್ಮನ್ನು ತಟ್ಟುವುದು ಈ ಗುಣವೇ. 'ಪ್ರೀತಿ ಇಲ್ಲದ ಮೇಲೆ' ಎಂಬ ಅವರ ಕವನದ ಆಶಯವೂ ಇದೇ ಆಗಿದೆಯಲ್ಲವೆ?

*(ಮೂಲ: ಧ್ಯಾನ)*



# ತೆಂಗಿನ ಮರ

ಎಚ್. ದುಂಡಿರಾಜ್

ಮರಗಳಲ್ಲಿ
ತೆಂಗಿನ ಮರ
ಕವಿಗಳಲ್ಲಿ ಇವರು
ಅದೇ ಥರ
ಎತ್ತರ,
ಸರಳ, ನೇರ.

ನೆಲದ ಸಾರವನ್ನೆಲ್ಲ ಒಬ್ಬರೆ
ಹೊಟ್ಟೆ ಬಾಕನಂತೆ ಹೀರಿ
ಅಡ್ಡಾದಿಡ್ಡಿ ಬೆಳೆದು
ಎಲ್ಲ ಕಡೆಗೂ ಗೆಲ್ಲು
ಚಾಚಿದವರಲ್ಲ.

ಗಾಳಿ, ಬೆಳಕು
ತಾವಷ್ಟೆ ಕುಡಿದು
ಬೇರೆ ಕುಡಿ ಚಿಗುರದಂತೆ
ನೆರಳು ರಾಚಿದವರಲ್ಲ.

ಬೆಳೆಯುವಂತೆ ತೆಂಗಿನ
ತೋಟದಲ್ಲಿ ಬಾಳೆ,
ಕೋಕೋ, ಅಡಿಕೆ, ವೀಳ್ಯದೆಲೆ
ಬೆಳೆಸಿದರು ನೂರಾರು
ಸಾಹಿತಿಗಳನ್ನು ತಮ್ಮ
ಜೊತೆ ಜೊತೆಯಲ್ಲೆ.

ಕೆಂಗೇರಿಯ ಬೆಂಗಾಡಿನಲ್ಲೂ
ಮೂಡಿಸಿದರು
ಮಲೆನಾಡ ಫಸಲು.

ನವೋದಯ, ನವ್ಯ, ನವ್ಯೋತ್ತರ
ಎಲ್ಲವನ್ನೂ ತೂಗಿ ಅಳೆದು
ವಿಮರ್ಶೆಯ ನಿಕಷಕ್ಕೆ ಎಳೆದು
ಎಲ್ಲೂ ನಿಲ್ಲದೆ
ಬೆಳೆದರು ಮುಗಿಲೆತ್ತರ.

ರಕ್ಷಿತ ಅರಣ್ಯದ
ತೇಗ, ಬೀಟೆ, ಶ್ರೀಗಂಧ
ಚಂದನದ ಒಣ ಗಾಂಭೀರ್ಯ
ಮೆರೆಸಿದವರಲ್ಲ.

ಆರಿಸಿದರು
ನಮ್ಮ ನಿಮ್ಮ ಮನೆಯಂಗಳ.

ಎದೆ ತುಂಬಿ
ಹಾಡಿದರು.
ನೀಡಿದರು
ಗೊನೆ ಗೊನೆ ಎಳೆ ನೀರು

ಸಾಹಿತ್ಯ ಲೋಕದ
ಕಲ್ಪ ವೃಕ್ಷ
ಕವಿ, ವಿಮರ್ಶಕ ಶ್ರೇಷ್ಠ
ಪ್ರಾಧ್ಯಾಪಕ ಮಾತ್ರವಲ್ಲ,
ಆಡಳಿತದಲ್ಲೂ ದಕ್ಷ
(ಮಾಜಿಯಾದರೂ ಮರೆತು ಹೋಗದ
ಅಕಾಡೆಮಿ ಅಧ್ಯಕ್ಷ!)

ಕಟಕಿ, ಟೀಕೆ, ಕೀಟಗಳ
ಕಾಟಕ್ಕೆ ಬಾಡಿದವರಲ್ಲ.
ಪ್ರಶಸ್ತಿ, ಪ್ರಚಾರ
ಕೃತಕ ಗೊಬ್ಬರ
ಬೇಡಿದವರಲ್ಲ
ಮೂಡಿಬಂದಿದೆ ತಾನಾಗಿ
ತೆಂಗಿಗೆ ಈಗ
ಪಂಪ ಪ್ರಶಸ್ತಿಯ ಗರಿ!

* * *

ಅಭಿನಂದನೆಗಳು, ಸಾರ್
ಬರೆಯುತ್ತಲೇ ಇರಿ.
ರೋಗಗ್ರಸ್ತ ಸಮಾಜಕ್ಕೆ
ಬೇಕು ಎಳೆ ನೀರು
ನೀವು, ನಿಮ್ಮಂಥವರು.

■

# ಜಂಗಮ ಜನಾರ್ಧನ

ಸತ್ಯನಾರಾಯಣರಾವ್ ಅಣತಿ

ವಚನಾಗ್ನಿದಿವ್ಯದಲಿ ಪುಟಗೊಂಡ
ವಿದ್ಯೆ ವಿನಯ ವಿವೇಕಕ್ಕೆ
ಬುದ್ಧಿ ಭಾವದ ಪಾಕ, ನಿಮಗೆ
ಪ್ರೀತಿಯೆಂಬುದೇ ನಾಕ

ನೀವಿಳಿದ ಆಳಕ್ಕೆ ಇಳಿದವರು
ಅಪರೂಪ, ಜೀವಜಲವನ್ನೆತ್ತಿ
ತಂದು ಅಂಗಳದ ಗಿಡಕ್ಕೆ ಎರೆದು
ನಂದನವ ನಿರ್ಮಿಸುವ ಸಾಹಸಿಗರು

ಕಿತ್ತು ಕಳೆ ನಳನಳಿಸುವಂತೆಸಗುವ
ಕಾಯಕದ ಕಸುಬಿನವರು
ಜಗದ ಜಾತ್ರೆಯಲಿ ದೇಸಿಗರ ದುಗುಡ
ದುಮ್ಮಾನ, ನೆರೆವಾಸಿಗರ ಕಣ್ಣೀರು

ಖಾಸಗಿಯೆಂದೇ ಒರಸ ಹೊರಟವರು
ಆಡಿದ ಮಾತು ಕಡೆದು ಕೃತಿಯಾಗಿ
ಸಹಜ ಪ್ರಕೃತಿಯ ರೂಪ ಶಿವರುದ್ರ
ಭದ್ರನೂ ಆದ ಆತ್ಮೀಯರೇ

ಬೋಧಿಸತ್ವನ ಪ್ರೀತಿ ಶರಣತ್ವ ರೀತಿ
ಧಾತು ಮೈವುಂಡ ಮಾನಿಸರೇ
ಅಕ್ಕರದಲಂಪಿನ ಗಾನಗೋಷ್ಠಿಯಲಿ
ನಿರ್ಮಲಚಿತ್ತ ಜಂಗಮ ಜನಾರ್ದನ

ನೀವು ತಂದ ಬಳುವಳಿ ತಾಮ್ರ
ಹಿತ್ತಾಳೆ ಬೆಳ್ಳಿ ಬಂಗಾರಕ್ಕೆ ಬೆಸೆದು
ಮನ್ವಂತರದ ಮಿಶ್ರಲೋಹದ ಕೊಂಡಿ
ವಿದ್ಯುತ್ ಲೇಪನದ ಹೊಳಪಿಟ್ಟಿರಿ

ನೆಲ ಮಳೆನೀರುಮಿಂದು ಅರಳುವೆದೆ
ಭಾವದಲಿ ನಭದ ನಿತ್ಯಾರತಿಯ ನಕ್ಷತ್ರಗಳು
ತಂದು ದೀಪಮಾಲೆಯ ಹಚ್ಚಿ
ತೇಲಿಬಿಟ್ಟಿರಿ ಜನಮನದ ರಸ ಸರೋವರದಲ್ಲಿ

ಹರಿದು ಅಂತಕರಣ ಹೊಂಬೆಳಕು
ಚಿಲಿಪಿಲಿಯ ನಾದದ ಜ್ಯೋತಿ
ತೊಳೆದು ಕಿಲ್ಬಿಷವ ಜಗವು ಜಗಮಗಿಸಲೆಂದು
ಸುಯಿಗುಡುವ ತಂಗಾಳಿ ಜಂಗಮವು ಮೈದಾಳಿ.



# ಪ್ರೀತಿ ಇಲ್ಲದ ಮೇಲೆ

ಎಸ್. ವಿ. ಪ್ರಭಾವತಿ

ಪ್ರೀತಿ ಇಲ್ಲದ ಮೇಲೆ
ಹೂವು ಅರಳುವುದಿರಲಿ ಸಾರ್
ಗಿಡ ಹುಟ್ಟೀತು ಹೇಗೆ
ಮೊಳಕೆಯೊಡೆದೀತು ಹೇಗೆ
ಚಂದ್ರನ ಬೆಳದಿಂಗಳಂತೆ ತಂಪಾದ
ನಿಮ್ಮ ವಾತ್ಸಲ್ಯ ದೊರಕೀತು ಹೇಗೆ?

ಆಗಾಗ್ಗೆ ಶಿವ, ತಾನು ಬರಲಾಗದಿದ್ದುದಕ್ಕೆಂದೇ
ತನ್ನ ಪ್ರತಿರೂಪವಾಗಿ ನಿಮ್ಮಂಥವರನ್ನು, ನಿಮ್ಮನ್ನು
ಕಳಿಸಬೇಕೆಂದು ಅವನಿಗೆ ಹೊಳೆದೀತು ಹೇಗೆ?

ಬತ್ತಿ ಹೋಗುತ್ತಿರುವ ಮಾನವೀಯತೆಯ ಸೆಲೆಯನ್ನು
ಮತ್ತೆ ಚಿಮ್ಮಿಸ ಬಯಸುವ ನಿಮ್ಮ ಒಲುಮೆ
ಅರ್ಥವಾದೀತು ಹೇಗೆ?

ಮಗುವಿಗೆ ತಾಯಿ ಮಮತೆ ದೊರತಂತೆ
ನಾವೆಲ್ಲಾ ನಿಮ್ಮ ವಾತ್ಸಲ್ಯಧಾರೆಯಲಿ ಮಿಂದೇವು ಹೇಗೆ?
(ಪ್ರಶಸ್ತಿ ಗರಿಗೆದರಿದರೂ ಮುಖ ಮಗುವಿನ ಹಾಗೆ)

ಸಧ್ಯ ಹೇಗೆ ಎಂದು ಪ್ರಶ್ನಿಸುವುದನು ಬಿಟ್ಟು
ನಿಮ್ಮ ಮಂದಹಾಸದ ಮುಖ ನೋಡುತ್ತಾ
ಬದುಕೋಣ ಸಾವಿರ ಕಾಲ, ಹೀಗೆ

ನಿಮ್ಮ ಅಸ್ಖಲಿತ ವಾಣಿಯ ಕಿವಿಯ ಗುಹಾಂತರ-
ದಲಿ ಕೇಳುತ್ತಾ ಒರತೆ ಬತ್ತದ ಹಾಗೆ

ಬದುಕೇ ನಿನಗೆ ಅನಂತ ವಂದನೆ
ನಮ್ಮ ಗುರುಗಳಿರಲಿ ಹೀಗೆ ಹೀಗೆ.....

# ಕಾರ್ತೀಕದ ಬೆಳಕು

ಟಿ. ಎಸ್. ನಾಗರಾಜ ಶೆಟ್ಟಿ

ಆಳನೋಟದ ಕನ್ನಡಕ
ತಿಳಿವು ತುಂಬಿದ ಮೂಗು
ತಿಳಿಸಿ ಹೇಳುವ ತವಕ
ದುಂಡು ಮುಖ

ಸ್ವಭಾವ
'ಅರ್ಣವಂಬೋಲತಿ ಗಭೀರಂ'
ಭಾವ ಹೊಮ್ಮಿಸುವ
ನಗೆಯ ಚಿಮ್ಮಿಸುವ ಸುಧೀರಂ

ಪಂಪನ ನಾಲ್ಕು ಸಾಲಿನಲಿ
ಭಗವದ್ಗೀತೆಯ ಶೋಧ
ಕೃಷ್ಣ ಪಾತ್ರದ
ಲೌಕಿಕತೆಯ ಬೋಧ

ಹರ ಕರುಣೋದಯದಂತೆ
ನವೋದಯ
ಕಾವ್ಯ ರಸ ಧ್ವನಿಗಳ
ಪರಿಶೀಲನ, ಅನುರಣನ

ಕಾರ್ತೀಕದ ಬೆಳಕು
ನನ್ನ ನಿನ್ನ ನಡುವೆ
ಗೋಡೆಗಳ ಕೆಡಹುವ
ಪ್ರೀತಿಯ ಸೆಳಕು

ತುಂಬು ಜುಬ್ಬದ ನಿಲುವು
ಸರಳ ಉಡುಪಿನ ಒಲವು
ತಿರುಳು ಸೂಸುವ
ವಾಗ್ವೈಖರಿ

ಮೆಲು ಮಾತಿನ ನಗೆ ಲಾಸ್ಯದ
ಪಾಠ ವೈಖರಿ
ನಿಷ್ಠುರ ಅಭಿಪ್ರಾಯ
ಸಕ್ರಿಯ ಸತತ ಪ್ರಾಯ

ಉತ್ತಮ ಕಾವ್ಯದ ಪ್ರತೀಕ್ಷೆ
ಕನ್ನಡ ಸಾಹಿತ್ಯ ಸಮೀಕ್ಷೆ
ಬಾಳಿನಲ್ಲಿ
ಭಾವದಲ್ಲಿ
ಬೋಧೆಯಲ್ಲಿ
ಬರೆಹದಲ್ಲಿ
ಬರವಿಲ್ಲದ ಸೌಂದರ್ಯ ಸಮೀಕ್ಷೆ

ಬಸವ ಭಾವದಿಂದ
ಹರಿಹರನ ಹಾದು
ಹರಿಶ್ಚಂದ್ರನ ದಾಟಿ
ದಾಸರನ್ನು ಮೀಟಿ
ಆಧುನಿಕತೆಗೆ ಧುಮ್ಮಿಕ್ಕಿದ
ಚೇತನಕ್ಕೆ ಮತ್ತಾರು ಸಾಟಿ?
ಹಾದಿಯುದ್ದಕು
'ತನ್ನತನದ್ದೇ ಧಾಟಿ'

ಈ ಚೇತನಕೆ
ಚಿರನೂತನಕೆ
ಭಾವಾರ್ಥ ಮಂಥನಕೆ
ಕಾವ್ಯಾರ್ಥ ಚಿಂತನಕೆ
ನಮನ
ನೂರು ನೂರು ನಮನ.

■

# ನವೋದಯದ ನಲವು: ಜಿಎಸ್‌ಎಸ್

ಸವಿತಾ ನಾಗಭೂಷಣ

ನವಿರಾದ ಭಾವದಲೆಗಳ
ಸೀಳುತ್ತಾ ಮುನ್ನುಗ್ಗುತ್ತಿತ್ತು
ನವ್ಯದ ಹಡಗು.

ಆಹಾ! ಏನು ಬಿಂಕ, ಬೆಡಗು, ಬಿನ್ನಾಣ
ಕೋಡುಗಲ್ಲಿನ ಮೇಲೆ
ಕಡಲ ಹಕ್ಕಿಗಳಂತೆ ಕೂತು ನೋಡಿದೆವು.

ಕಾರಿರುಳು-
'ಕರಿಯ ನಭದ ಕಣ್ಗಳಂತೆ
ಅಭಯದೊಂದು ರೂಹಿನಂತೆ
ತೇಲಿಬಿಟ್ಟ ದೀಪದಂತೆ
ನೂರು ತಾರೆ ಬೆಳಕ ಬೀರಲು
ಪುಟ್ಟ ದೋಣಿಯಲಿ ಕೂತು
ರಾತ್ರಿ-ಹಗಲು ರಾಕ್ಷಸ ಅಲೆಗಳನ್ನು ತಳ್ಳುತ್ತಾ
ಹರಸಾಹಸದಿಂದ ದಡ ಸೇರಿದೆವು.

ಮುಸ್ಸಂಜೆ-
ಆಗಸದಲ್ಲಿ ಬೆಳ್ಳಕ್ಕಿಗಳ ಸಾಲು
'ದೇವರ ರುಜು';
ಪರವಶತೆಯಿಂದ ನೋಡಿದೆವು.
ಕಣಿವೆಯ ಮುದುಕ
ಕೈಮರವಾದ; ಮುನ್ನಡೆದೆವು.
'ಮೂಡಲ ಮನೆಯಲ್ಲಿ ಮುತ್ತಿನ ನೀರು

ಗಿಡಗಂಟೆಗಳ ಕೊರಳಲ್ಲಿ ಹಕ್ಕಿಗಳ ಹಾಡು'
ತಲೆದೂಗಿದೆವು.

ಶಾನುಭೋಗರ ಮಗಳು
ಕಾಲಿಗೆ ನೀರಿತ್ತು ಕೈತುತ್ತು ನೀಡಿದಳು;
'ಎನಿತು ಜನ್ಮದಲಿ ಎನಿತು ಜೀವರಿಗೆ
ಎನಿತು ನಾವು ಋಣಿಯೋ' ತಲೆಬಾಗಿದೆವು.

'ಹಾದಿಯ ತುಂಬಾ
ನಗುತ್ತಿತ್ತು ಏಳುಸುತ್ತಿನ ಮಲ್ಲಿಗೆ
ಹಚ್ಚನೆ ಹಸುರ ಗಿಡದಿಂದೆಂತು
ಮೂಡಿತ್ತೊ ಬೆಳ್ಳಗೆ'
–ಅನತಿ ದೂರದಲ್ಲೇ ಕಲ್ಲು ಬಂಡೆಯನ್ನೇರಿ
ಅದಾರೋ... ಯಾರವರು, ಯಾರು?
ಎದೆತುಂಬಿ ಹಾಡುತ್ತಿದ್ದರು.

ಹಮ್ಮು-ಬಿಮ್ಮು ಸೋಕದ ಹಾಡು
ನೊಂದ ಜೀವರಿಗೆ ತಂಪನೀಯುವ ಹಾಡು
ಪ್ರೀತಿ-ಸ್ನೇಹಗಳ ಪಸರಿಸುವ ಹಾಡು
ಎಲ್ಲೋ ಅಳುವ ಮಗುವನೂ ಸಂತೈಸುವ ಹಾಡು
ನವ-ನವೀನ ಭಾವದ ಹಾಡು.

ಹಾಡಿನ ಹಾಡಿಯಲಿ ಬೀಡುಬಿಟ್ಟು
ಹಾಡಿಗೆ ನಮ್ಮನ್ನೇ ಕೊಟ್ಟು ಕೊಂಡೆವು
ನೂರು ಭಾವದ ಬಾವಿ ಮೊಗೆ ಮೊಗೆದು
ಸಿಹಿನೀರ ಕುಡಿದೆವು.

ಕಡಲನೀಜುವೆನೆಂಬ ಮರುಳ ಹಡಗು
ತನಗೆ ತಾ ಹೊರೆಯಾಗಿ ತಾನೆ ಮುಳುಗುತ್ತಿತ್ತು...

ಅಲೆಯ ಮೇಲೊಂದು ತಾವರೆಯ ಎಲೆ
ಎಲೆಯ ಮೇಲೊಂದು ಪುಟ್ಟ ಹಣತೆ
ತೇಲುತ್ತಿತ್ತು ತನ್ನ ಪಾಡಿಗೆ ತಾನೇ
ನೀಲ ಮೌನದಲ್ಲಿ..... ■

# ನಿಮ್ಮ ಹಾದಿಯಲ್ಲಿ

ಎಚ್. ಎಲ್. ಪುಷ್ಪ

ತೋಳ ತೊಟ್ಟಿಲ ತೂಗಿ ತೊನೆವ
ಈ ಹೆಜ್ಜಾಲ ನೆಲ ತಾಗಿದಲ್ಲೆಲ್ಲ
ಟಿಸಿಲು ಮತ್ತೆ ಆಕಾಶದೆಡೆಗೆ ರಭಸದ ಚಿಗಿತ
ನೆಲ ತಾಗಿದಲ್ಲೆಲ್ಲ ಬಿತ್ತುವ, ಮೊಳೆವ
ನಿರಂತರ ಕಾರ್ಯ ಇದರ ಒಡಲಲ್ಲೇ.

ಎಷ್ಟೊಂದು ತರತರದ ಹಕ್ಕಿಗಳು
ಹಾಡುತ್ತಾ ನೆರಳನರಸಿ ಬಂದವು ಇಲ್ಲಿಗೆ
ತಮ್ಮ ಕಥೆ ವ್ಯಥೆಗಳ ಹಾಡಾಗಿಸಿ
ವಿಶ್ರಮಿಸಿದವು ಅರೆಗಳಿಗೆ
ಬಣ್ಣಬಣ್ಣದ ರೆಕ್ಕೆಪುಕ್ಕಗಳ ಹಕ್ಕಿಗಳು
ತಾಯೊಡಲ ಬೆಚ್ಚನೆ ಕಾವಿನಲ್ಲಿ ಅಡಗಿದವು
ಬಿರುಗಾಳಿ, ಮಳೆ, ಬಿಸಿಲಿಗೆ ಅಂಜಿ
ಕಣ್ತೆರೆದು ಕಲಿತವು ಹಾರುವುದರ ಜೊತೆಗೇ
ಹಾಡುವುದು ಕೂಡ.

ಬಿತ್ತಿದವರೆಲ್ಲ ಬಂಗಾರ ಬೆಳೆಯುವುದಿಲ್ಲ
ನೆಲದೊಡಲ ಗುಟ್ಟಿನಂತೆ ಕಸ, ಕಡ್ಡಿ, ಕಾಳು
ಸಿಕ್ಕಷ್ಟು ಗಾಳಿ, ನೀರು ಬಿಸಿಲ ಹೀರಿದ
ಸಹಜ ಕೃಷಿಯ ಹರಿಕಾರ.

ಈ ಮರಕ್ಕೆ ನಿರಂತರ ಸೃಷ್ಟಿಯ ಆಸೆ
ತನ್ನ ಬೇರು ಸಡಿಲಗೊಳ್ಳುತ್ತಿದ್ದರೂ
ಮತ್ತೆ ಮತ್ತೆ ಹೊಸ ಬೇರುಗಳ ನೆಲದಾಳಕ್ಕೆ ಇಳಿಸಿ

ಬಿಗಿದುಕೊಳ್ಳುತ್ತದೆ ತನ್ನನ್ನು ನೆಲದೊಡಲಿಗೆ
ಅಲ್ಲೊಂದು ಇಲ್ಲೊಂದು ಮಾವು, ಬೇವು, ಹೊಂಗೆ
ತಲೆಯೆತ್ತಿದವು ಸಿಹಿ ಕಹಿಯ ಸೂಸಿ
ಮರಕ್ಕೊ ನಿಶ್ಚಿಂತೆ ಬೆಳೆಯಲಿ ಅವು
ನೀಡಲಿ ತನ್ನಂತೆ ನೆಳಲು, ಆಶ್ರಯ
ಬರುವ ಹೋಗುವ ಹಾದಿಹೋಕರಿಗೆ.

ಎಷ್ಟೋ ವರ್ಷಗಳಿಂದ ಕಂಡ
ಸೂರ್ಯ, ಚಂದ್ರರ ಚೆಲುವು ಮಾಸದಿದೆ
ಹಾಡುವ ಕೊರಳು ಹಾಡುತ್ತಲಿದೆ ಸೋಲದೆ
ನೀ ಕೊಟ್ಟೆ ಇದ, ತೆಗೆದುಕೋ ಎಂಬ ನಿರ್ಲಿಪ್ತತನ.

ನೀ ಬರುವ ಮುನ್ನ ಹಾದಿಯಿರಲಿಲ್ಲವೆಂದಲ್ಲ
ಹಲವು ಪಂಥ, ಹಲವು ಮತಗಳ ನಡುವೆ
ಜಾತಿಯಿಲ್ಲದ ಅಜಾತನ ಹಾದಿ ತೆರೆದಿತ್ತು
ಕೋಟೆ ಕಟ್ಟಿಕೊಳ್ಳಬಹುದು ಸುತ್ತ
ದಂಡು ದಳವಾಯಿಗಳ ನೇಮಿಸಬಹುದು
ಗಾಳಿ ಬೆಳಕು ಬಾರದ ಹಾಗೆ ಕಾವಲಿಗೆಂದು
ಜನ ಕೇಳುತ್ತಾರೆ "ಯಾಕೆ ಇವರಿಗೆ ಕಾವಲು,
ಯಾಕೆ ಇವರಿಗೆ ಗೋಡೆ.
ಗೋಡೆಯೊಡೆಯದವನು ದೊರೆಯಲ್ಲ, ಕವಿಯಲ್ಲ
ಅವನು ನಮ್ಮನ್ನು ಮುಟ್ಟುವುದಿಲ್ಲವೆಂದು."

ಗುರುವೇ ನೀವು ತೋರಿದ ಹಾದಿ
ಹಾದಿಯಲ್ಲದ ಹಾದಿ
ಬೆಳಕು ತೋರುವ ದೀವಿಗೆಗೆ ಆಕಾರವಿರಲಿಲ್ಲ
ಬರಿಯ ಬೆಳಕಿತ್ತು
ಮೊಟ್ಟೆಯೊಡೆದು ಹೊರಬಂದ
ಮರಿಹಕ್ಕಿಯ ಕೊರಲಿನಲಿ ತವಕವಿತ್ತು
ಹಿಡಿಗೆ ಸಿಗದ ಆಕಾಶದೆಡೆಗೆ ನೀವು
ನಿಮ್ಮೊಂದಿಗೆ ನೂರಾರು ಹಾಡುವ ಹಕ್ಕಿಗಳು

■

# 'ಅರಕ್ಷಿತ' ಕಾವ್ಯ

ಕೀರ್ತಿನಾಥ ಕುರ್ತಕೋಟಿ

**ಜಿ.** ಎಸ್. ಶಿವರುದ್ರಪ್ಪ ಪಂಡಿತರೂ ಹೌದು, ಕವಿಗಳೂ ಹೌದು. ಅವರ 'ಕಾವ್ಯಾರ್ಥ ಚಿಂತನ'ದಂಥ ಗ್ರಂಥಗಳು ಅವರ ಹರವಾದ ಮತ್ತು ಆಳವಾದ ಪಾಂಡಿತ್ಯಕ್ಕೆ ಸಾಕ್ಷಿಯಾಗಿವೆ. ಜೊತೆಗೆ ಅವರು ಹನ್ನೊಂದು ಕವನ ಸಂಕಲನಗಳನ್ನು ಪ್ರಕಟಿಸಿರುವ ಕವಿಯೂ ಹೌದು. ಆದರೆ ಕಾವ್ಯ ಮತ್ತು ಪಾಂಡಿತ್ಯಗಳು ಒಂದು ಇನ್ನೊಂದರ ಮೇಲೆ ಪ್ರಭಾವ ಬೀರದಂತೆ ಒಂದು ಸಮತೂಕದಿಂದ ಅವರು ಕಾವ್ಯರಚನೆಯನ್ನು ಮುಂದುವರಿಸಿ ಕೊಂಡು ಹೋಗಿದ್ದಾರೆ. ಪಾಂಡಿತ್ಯದ ಬೆಂಬಲವಿರುವ ಕವಿ ತನ್ನ ಕಾವ್ಯದ ಕುಂದುಕೊರತೆಗಳನ್ನು ತನ್ನ ವಿದ್ವತ್ತೆಯಿಂದ ತಾತ್ಕಾಲಿಕವಾಗಿಯಾದರೂ ಮುಚ್ಚಿಕೊಂಡು ಹೋಗಬಹುದು. ಆದರೆ ಶಿವರುದ್ರಪ್ಪನವರ ಕವಿತೆ ಕಾವ್ಯವಾಗಿಯೇ, ಅಂದರೆ ಅರಕ್ಷಿತವಾಗಿಯೇ ಬೆಳೆದು ಬಂದಿದೆ. ಅವರ ಕಾವ್ಯ ಹೊಸಗನ್ನಡ ಕಾವ್ಯದ ಬೆಳವಣಿಗೆಯಲ್ಲಿ ಪ್ರಮುಖವಾದ ಬದಲಾವಣೆಗಳಿಗೆ ತನ್ನನ್ನು ಒಡ್ಡಿಕೊಂಡು ತನ್ನ ಸ್ವರೂಪವನ್ನು ಉಳಿಸಿಕೊಂಡು ಬಂದಿದೆ. ಪ್ರಾರಂಭದಲ್ಲಿ ಅವರ ಕಾವ್ಯ ಕುವೆಂಪು ಅವರ ಪ್ರಭಾವದಲ್ಲಿ ನುಡಿಗಲಿತುಕೊಂಡು ಕ್ರಮೇಣ ತನ್ನ ಪಡೆನುಡಿಯನ್ನು ನಿರ್ಮಿಸಿಕೊಂಡಿತು, ಮುಂದೆ ಅದೇ ಜಾಡಿನಲ್ಲಿ ತನ್ನ ಪರಿಣತಿಯನ್ನೂ ಕಂಡುಕೊಂಡಿತು.

ಎಲ್ಲ ಕಾವ್ಯವೂ ತನ್ನ ಹಿಂದಿನ ಕಾವ್ಯದಿಂದಲೇ ಭಾಷೆಯನ್ನು ಕಲಿಯುವ ಅಗತ್ಯ ಬಂದೇ ಬರುತ್ತದೆ. 'ತೆರೆದ ದಾರಿ' ಸಂಕಲನದಲ್ಲಿ 'ಆದಿಕವಿಗೆ' ಎಂಬ ಕವನವೊಂದನ್ನು ಶಿವರುದ್ರಪ್ಪನವರು ಬರೆದಿದ್ದಾರೆ. ಮೊದಲ ಬಾರಿಗೆ ಸೂರ್ಯೋದಯವನ್ನು ಕಂಡು, ಮೊದಲ ಬಾರಿಗೆ ಕೋಗಿಲೆಯ ಸುಸ್ವರವನ್ನಾಲಿಸಿ, ಮೊಟ್ಟಮೊದಲಿನ ಚಲುವಿಗೆ ಎದೆಯನ್ನು ಬೆಸೆದು ಅದರೊಡನೆ ಮಧುರ ಸಂಬಂಧವನ್ನು ಬೆಳೆಸಿಕೊಂಡ ಈ ಆದಿಕವಿ ವಾಲ್ಮೀಕಿಗೂ ಮೊದಲನೆಯವನು. ಅವನ ಹೆಸರು ಗೊತ್ತಿಲ್ಲದಿರುವುದೇ ಒಂದು ಅನುಕೂಲ. ನಮ್ಮ ಹೊಸ ಕಾವ್ಯದ ಅಂತರಂಗದಲ್ಲಿಯ ಒಂದು ತುಡಿತ ಇಲ್ಲಿ ಪ್ರಕಟವಾಗಿದೆ. ಹೊಸದಾಗ ಬೇಕಾದರೆ ಅಪರಿಚಿತವಾಗಿರುವ ಮೂಲಕ್ಕೆ ಹೋಗುವುದು. ನವೋದಯ ಕಾವ್ಯದ ಬೆಳವಣಿಗೆಯ ಉತ್ಕರ್ಷದಲ್ಲಿ ಹುಟ್ಟಿದ ನೀರಡಿಕೆ ಇದಾಗಿದೆ. ಇದು ಹೊಸ ಕವಿಗಳನ್ನೆಲ್ಲ ಕಾಡುವ ಸ್ವೋಪಜ್ಞತೆಯ ಹಂಬಲ. ಅಡಿಗರ 'ಭಾವತರಂಗ'ದ ಮೊದಲ ಕವಿತೆಯಲ್ಲಿಯ ಹಂಬಲವೂ ಈ ಬಗೆಯದಾಗಿದೆ. ಇದರ ಜೊತೆಗೇ ಸಮಕಾಲೀನತೆಗೆ ಬದ್ಧವಾಗುವ ಗುಣ ಕೂಡ ಈ ಸ್ವೋಪಜ್ಞತೆಯೊಡನೆ ಸಂಬಂಧವನ್ನಿಟ್ಟುಕೊಂಡಿದೆ. ಇಂದ್ರಿಯಾನುಭವದಂತೆ

ಸಮಕಾಲೀನತೆಯ ದರ್ಶನ ಕೂಡ ಹೊಸದಾಗಿರುವಂಥದು. ಮೊಟ್ಟ ಮೊದಲನೆ ಬಾರಿ ಹೆಳವ ಭಾಷೆಗೆ ಗರುಡಗರಿ ಮೂಡಿಸಿದ ಮೋಡಿಕಾರನಾಗಬೇಕಾದರೆ ಸಮಕಾಲೀನತೆಯನ್ನು ತಾನೇ ಶೋಧಿಸಬೇಕು. ಸಮಕಾಲೀನತೆಯ ನೆನಪುಗಳು, ಆದರ್ಶ, ಕನಸುಗಳು ಮತ್ತು ಅದರ ವಾಸ್ತವ ನೈತಿಕತೆಯನ್ನು ಪ್ರಶ್ನಿಸುತ್ತ ಮುನ್ನಡೆಯುವದು ಆಧುನಿಕ ಕಾವ್ಯದ ಪ್ರಯತ್ನವಾಗಿದೆ. ಶಿವರುದ್ರಪ್ಪನವರ ಕಾವ್ಯ ಕೂಡ ಈ ಮಾತಿಗೆ ಅಪವಾದವಾಗಿಲ್ಲ. ಇವರ ಕಾವ್ಯದ ನಿಸರ್ಗ ಪ್ರೀತಿ ಕೂಡ ಈ ಮನೋಭಾವದ ಸ್ವಾಭಾವಿಕವಾದ ಪ್ರತಿಕ್ರಿಯೆಯಾಗುತ್ತದೆ. ನಿಸರ್ಗಕ್ಕೆ ಹಿಂದಿನ ನೆನಪುಗಳಾಗಲಿ ಭವಿಷ್ಯದ ಕನಸುಗಳಾಗಲಿ ಇರುವುದಿಲ್ಲ ಎಂಬ ನಂಬಿಕೆ ಇಲ್ಲಿದೆ. ನಿಸರ್ಗ ವರ್ತಮಾನಕ್ಕೆ ಬದ್ಧವಾಗಿರುವಂಥದ್ದು. ಕವಿಯ ಮನೋಧರ್ಮ ನಿಸರ್ಗದಂತೆ ನಿತ್ಯನೂತನವಾಗಿರಬೇಕೆಂಬ ಆಶಯ ಇಲ್ಲಿದೆ.

ಶಿವರುದ್ರರಪ್ಪನವರ 'ಕಾಡಿನಲ್ಲಿ ಕತ್ತಲು' ಎಂಬ ಒಳ್ಳೆಯ ಕವಿತೆಯನ್ನು ಇಲ್ಲಿ ಉದಾಹರಣೆಯಾಗಿ ನೋಡಬಹುದು. ಈ ಕವಿತೆಯ ವಸ್ತು ಸಮಕಾಲೀನವಾದದ್ದೇ. ಶೋಷಣೆಯನ್ನು ಶೋಷಣೆಯೆಂದು ಗುರುತಿಸಿದಾಗ ಆ ಶೋಷಣೆಯ ಕ್ರಿಯೆಗೆ ಒಂದು ಅಪೂರ್ವವಾದ ಅರ್ಥ ಬಂದು ಬಿಡುತ್ತದೆ. ದನಕಾಯುವ ಹುಡುಗನೊಬ್ಬ, ಕಾಡಿನ ಕತ್ತಲಲ್ಲಿ ಒಂದು ಮರದ ಕೆಳಗೆ ಕುಳಿತು, ಕಳೆದು ಹೋದ ದನಗಳು ತಿರುಗಿ ಬಂದರೂ ಬರಬಹುದೆಂಬ ನಿರೀಕ್ಷೆಯಿಂದ ಕಾಯುತ್ತ ಕುಳಿತಿದ್ದಾನೆ. ದನಗಳು ಬರದಿದ್ದರೆ ಅವನು ತಿರುಗಿ ಹೋಗುವಂತಿಲ್ಲ. ಒಂದು ವೇಳೆ ಹೋದರೆ 'ಮನೆಯಲ್ಲಿ ಒಡೇರು ಒದೀತಾರೆ'. ದನಗಳ ಒಡೆಯ ಅವನ 'ಒಡೇರೂ' ಹೌದು. ಹುಡುಗನಿಗೆ ಕಾಡಿನ ಭಯವಿಲ್ಲ, ಕತ್ತಲೆಯ ಭಯವಿಲ್ಲ. ಆದರೆ ಕಡ್ಡಿ ಕಾಲಿನ ಚಿಂದಿಉಟ್ಟ ಹುಡುಗನಿಗೆ ಒಡೆಯರ ಭಯವಿದೆ. ಏಟು ತಪ್ಪಿಸಿಕೊಳ್ಳಲು ಹುಡುಗ ಇಲ್ಲಿಯೇ ಕೂತರೆ ಕಾಡಿನಲ್ಲಿ ಕತ್ತಲೆ ಇಳಿಯುವದು ತಪ್ಪುವದಿಲ್ಲ. 'ಕಪ್ಪೆಗಳ ವಟವಟ ಚಿಕ್ಕೆಗಳ ಮಿಣಮಿಣ ಯಾವದೂ ನಿಲ್ಲುವದಿಲ್ಲ'. ಬಡವರನ್ನು, ಅಸಹಾಯಕರನ್ನು ಶೋಷಿಸುವ ಕ್ರೂರ ವ್ಯವಸ್ಥೆಯ ಚಿತ್ರ ಇಲ್ಲಿದೆ.

ಪ್ರಶ್ನೆ ಇರುವದು ಈ ಚಿತ್ರ, ಕಾವ್ಯದಲ್ಲಿ ಹೇಗೆ ಮಾರ್ಪಾಡು ಹೊಂದುತ್ತದೆ ಎನ್ನುವದು. ಈ ಕವಿತೆಯ ಹಿಂದಿನ ಮನೋಭಾವ ಅತ್ಯಂತ ಪ್ರಾಮಾಣಿಕವಾಗಿದೆ ಎನ್ನುವದರಲ್ಲಿ ಸಂಶಯವೇ ಇಲ್ಲ. ಆದರೂ ಇದೇ ಮನೋಭಾವದ ಎಷ್ಟೋ ಕವಿತೆಗಳು ಕಾವ್ಯವಾಗುವದಿಲ್ಲ. ಅನುಭವ ಕಾವ್ಯವಾಗಿ ರೂಪಾಂತರವನ್ನು ಪಡೆಯುವ ಪ್ರಕ್ರಿಯೆಯನ್ನು ಇಲ್ಲಿ ಕಾಣಬಹುದು. ಕವಿತೆಯ ಕೊನೆಯ ಸಾಲುಗಳು ಹೀಗಿವೆ.

.................... ಈ ಕತ್ತಲೆಯ ಒಳಗೆಲ್ಲೋ
ಕಾದಿದ್ದಾನೆ ಒಡೆಯ,
ಕೈಯಲ್ಲಿ ಚಾವಟ ಹಿಡಿದು, ಹೀಗೆಯೇ
ಇಂಥ ಕಡ್ಡಿ ಕಾಲಿನ, ಜೋಲು ಮೋರೆಯ
ಹಾಲುಗಣ್ಣಿನ ಮೈಯ ಚರ್ಮವ ಸುಲಿಯುತ್ತ
ಈ ದಟ್ಟಗಾಡಿನ ಕತ್ತಲಿಗೆ ಕೆಂಗಣ್ಣು ಹಾಯಿಸುತ್ತ.

ಇಲ್ಲಿಯ ಒಡೆಯ ಮತ್ತು ಹುಡುಗ ಇವರಿಬ್ಬರೂ 'ದಟ್ಟಗಾಡಿನ ಕತ್ತಲೆ'ಯಂತೆಯೇ ಕಾಲದೇಶಗಳ ನಿರ್ದಿಷ್ಟತೆಯನ್ನು ದಾಟಿರುವ ಚಿತ್ರಗಳು. ಕಣ್ಣಿಗೆ ಕಂಡದ್ದು, ಮನಸ್ಸಿಗೆ ನಾಟಿದ್ದು, ಬುದ್ಧಿಗೆ ಹೊಳೆದದ್ದು. ಈ ಎಲ್ಲ ಅನುಭವ ಕವಿಗೆ ಹೃದಯದ ಭಾವನೆ ಆಗಬೇಕು. ನೋಟ, ಅಭಿಪ್ರಾಯ, ದೃಷ್ಟಿಕೋನ ಇವುಗಳಿಂದ ಕಾವ್ಯ ಹುಟ್ಟುವದಿಲ್ಲ. ಕತ್ತಲೆಯ ಒಳಗೆಲ್ಲೋ ಚಾವಟಿ ಹಿಡಿದು ಕಾಯುತ್ತಿರುವ ಒಡೆಯ ಮತ್ತು ಹಾಲುಕಣ್ಣಿನ ಮೈಯಹುಡುಗ ಇವರಿಬ್ಬರೂ ಕ್ರೂರ ವ್ಯವಸ್ಥೆಯ ಚಿತ್ರಗಳಾಗಿ ಒಬ್ಬರನ್ನೊಬ್ಬರು ಹುಡುಕುತ್ತಿದ್ದಾರೆ. ಶೋಷಣೆಯ ವಿರುದ್ಧ ದನಿ ಎತ್ತುವದು ಈ ಕವಿತೆಯ ಪ್ರಥಮ ಉದ್ದೇಶವಾಗಿದೆ. ಆದರೆ ಈ ಉದ್ದೇಶ ಕಾವ್ಯದ ಮೂಲಕವಾಗಿಯೇ ಈಡೇರಬೇಕು. ಕವಿತೆ ಕಾವ್ಯವಾಗಬೇಕು, ವ್ಯವಸ್ಥೆಯ ಕ್ರೌರ್ಯ ಎಲ್ಲಿದ್ದರೂ ಅದರ ವಿರುದ್ದ ದನಿ ಎತ್ತುವ ಸಾಮರ್ಥ್ಯ ಕಾವ್ಯಕ್ಕಿರಬೇಕು. ಕಾವ್ಯ ವ್ಯವಸ್ಥೆಯನ್ನು ಗುರುತಿಸಬೇಕು, ಅದು ಯಾವ ರೂಪದಲ್ಲಿದ್ದರೂ ಗುರುತಿಸಬೇಕು. ಅದಕ್ಕಾಗಿ ಕಾವ್ಯ ಹೃದಯ ಪರಿವರ್ತನೆಯಲ್ಲಿ ನಂಬಿಕೆಯನ್ನು ಇಟ್ಟುಕೊಂಡಿರುತ್ತದೆ. ಕಾವ್ಯ ಜಗತ್ತನ್ನು ನೋಡುವವದೇ ಹೃದಯದ ಮೂಲಕವಾಗಿ.

ಸಮಕಾಲೀನತೆಗೆ ಬದ್ಧವಾದ ಕಾವ್ಯದಲ್ಲಿ ಈ ಬಗೆಯ ಆಳವಾದ ಹೃದಯವಂತಿಕೆ ದೊರಕುವದು ಅಪರೂಪವಾಗಿದೆ. ಶಿವರುದ್ರಪ್ಪನವರ ಕವಿತೆಗಳೆಲ್ಲವೂ ಈ ರೀತಿಯವಲ್ಲ. ಸಮಕಾಲೀನತೆಯ ಬಗ್ಗೆ ನಮ್ಮ ಬೇಕು ಬೇಡಗಳು, ಅಭಿಪ್ರಾಯಗಳು, ಪೂರ್ವಗ್ರಹಗಳು ಹೃದಯವಂತಿಕೆಗೆ ಅಡ್ಡ ಬರುತ್ತವೆ. ಅಲ್ಲದೆ ಸಮಕಾಲೀನ ಜಗತ್ತಿನಲ್ಲಿಯ ನಿರಂತರ ಬದಲಾವಣೆಗಳು ಕಾವ್ಯಚಿತ್ರಣದ ಸ್ಥಿರತೆಗೆ ಅಡ್ಡಿಯಾಗುತ್ತವೆ. ಎಲ್ಲಕ್ಕಿಂತ ಹೆಚ್ಚಾಗಿ ಕವಿಯ ಪ್ರಜ್ಞೆ ಅವಸರದಿಂದ ಕೆಲಸ ಮಾಡುವಾಗ ಅದು ತನ್ನ ಮೇಗರೆಯಿಂದ ಯಾಂತ್ರಿಕವಾಗಿ ಕೆಲಸ ಮಾಡತೊಡಗುತ್ತದೆ. ಸಮಕಾಲೀನತೆಯ ಚಿತ್ರ ಸ್ಪಷ್ಟವಾದರೂ ಅದು ಆಳವಾಗುವುದಿಲ್ಲ. ಶಿವರುದ್ರಪ್ಪನವರ ಒಂದು ಕವಿತೆಯಲ್ಲಿ ಈ ಮಾತಿಗೆ ವಿವರಣೆ ದೊರೆಯಬಹುದು. 'ಕನಸಿನಿಂದ ನನಸಿಗೆ' ಎಂಬ ಕವಿತೆ. ಕನಸಿನಲ್ಲಿ ಕವಿಗೆ ಒಂದು ಕವಿತೆಯ ಸಾಲು ದೊರೆಯುತ್ತದೆ. 'ಚಂದ್ರಜೇಡ ಬಲೆ ನೇಯುತ್ತಿತ್ತು ಬೆಳದಿಂಗಳ ನೂಲಿನಲಿ' ಎನ್ನುವುದೇ ಈ ಸಾಲು. ತನ್ನ ಸಂದರ್ಭದಿಂದ ತಪ್ಪಿಸಿಕೊಂಡು ಬಂದ ಸಾಲು ಇದು. ಇದರ ಇನ್ನೊಂದು ಚರಣ ಎಲ್ಲಿ ಎಂದು ಕವಿತೆ ಚಿಂತಿಸಿದಾಗ 'ಚಿಕ್ಕೆಗಳಿಬ್ಬನಿ ಮಿರುಮಿರುಗುತಿರಲು ಅಲ್ಲಲ್ಲಿಯೇ ಜಾಲದಲಿ' ಎಂದು ಇನ್ನೊಂದು ಸಾಲು ತೇಲಿ ಬರುತ್ತಿದೆ. ಹೀಗೆಯೇ ಹುಡುಕುತ್ತ ಹೋದಾಗ ಇನ್ನೆರಡು ಸಾಲು ದೊರೆಯುತ್ತವೆ. 'ಮರ ಮರದ ಕೆಳಗೆ ಗೆರೆ ಬರೆದ ನೆರಳ ಸಂಶಯದ ಮೋಡಿಯಲ್ಲಿ / ಇನ್ನು ಯಾವುದಕೆ ಹೊಂಚುತಿರುವದೋ ಇಂಥ ಮಾಟದಲ್ಲಿ' ಇವು ಇನ್ನೆರಡು ಸಾಲುಗಳು. ಇವು ನಾಲ್ಕೂ ಕೂಡಿಕೊಂಡು ಒಂದು ಸುಂದರವಾದ ಕವಿತೆಯಾಗುತ್ತದೆ. ಆದರೆ ಈ ನಾಲ್ಕು ಸಾಲುಗಳು ಶಿವರುದ್ರಪ್ಪ ಬರೆದಿರುವ ಕವಿತೆಯ ಭಾಗವಾಗುತ್ತವೆ. ಈ ಸಾಲುಗಳನ್ನು ಬಿಟ್ಟರೆ ಉಳಿದ ಸಾಲುಗಳನ್ನು ಪ್ರಜ್ಞಾಪೂರ್ವಕವಾಗಿ ಬರೆಯಲಾಗಿದೆ. ಕನಸಿನಲ್ಲಿ ದೊರೆತ ಸಾಲುಗಳನ್ನು ಉಳಿದ ಸಾಲುಗಳು ಕಾವ್ಯತಂತ್ರದಲ್ಲಿ

ಅನುವಾದ ಮಾಡುತ್ತವೆ. ಆದರೆ ಕನಸಿನಲ್ಲಿ ನನಸಿಗೆ ಬಂದ ಸಾಲುಗಳು ತಮ್ಮ ನಿಗೂಢತೆಯನ್ನು ಉಳಿಸಿಕೊಂಡಿವೆ. ಚಂದ್ರ ಜೇಡವಾಗಿ ಬೆಳದಿಂಗಳ ಬಲೆಯನ್ನು ನೇಯುವ ಈ ವ್ಯಾಪಾರ ಯಾವುದಕ್ಕೆ ಹೊಂಚು ಹಾಕುತ್ತಿದೆಯೋ ಗೊತ್ತಾಗುವದಿಲ್ಲ. ಅರ್ಥವಾಗುವ ಸಾಲುಗಳ ಬಲದಿಂದ ಈ ಕವಿತೆಯ ರಹಸ್ಯವನ್ನು ಅರಿಯಬೇಕು ನಿಜ. ಆದರೂ ಚಂದ್ರ ಮತ್ತು ಜೇಡ ಉಪಮೇಯ ಮತ್ತು ಉಪಮಾನವಾಗುವ ವ್ಯಾಪಾರ ಗೂಢವಾಗಿಯೇ ಉಳಿಯುತ್ತದೆ. 'ಮರಮರದ ಕೆಳಗೆ ಗೆರೆ ಬರೆದ ನೆರಳ ಸಂಶಯದ ಮೋಡಿ' ಇರುವದು ಬಹುಶಃ ಇದಕ್ಕಾಗಿಯೇ ಎಂದು ಕಾಣುತ್ತದೆ. ಪ್ರಜ್ಞೆ ತನ್ನ ಬೆಳಕಿನ ಕೈಗೆ ದೊರೆಯದ್ದನ್ನು ಇಲ್ಲಿ ಮಾತಿನ ಮೂಲಕ ಹುಡುಕತೊಡಗಿದೆ. ಜೇಡ, ಚಂದ್ರ, ಇಬ್ಬನಿ, ಜಾಲ, ನೆರಳು, ಸಂಶಯ, ಮಾಟ ಇವೆಲ್ಲ ಬುದ್ಧಿಯ ಅಳವಿಗೆ ಮೀರಿದ ಸಂಗತಿಗಳಾಗಿವೆ. ಆದರೆ ಕಾವ್ಯ ಹುಟ್ಟಿ ಬರುವ ಜಗತ್ತು ಈ ಅಪ್ರಜ್ಞೆಯಲ್ಲಿದೆ.

ಶಿವರುದ್ರಪ್ಪನವರ ಸಮಗ್ರ ಕಾವ್ಯದಲ್ಲಿ ಈ ಬಗೆಯ ಬೇರೊಂದು ಕವಿತೆ ಇಲ್ಲ. ಅವರ ಕಾವ್ಯಪ್ರಜ್ಞೆ ಲೋಕವ್ಯವಹಾರದಲ್ಲಿಯ ಅಸಂಬದ್ಧತೆಯನ್ನು, ವೈರುಧ್ಯಗಳನ್ನು ಹಿಡಿಯಬಲ್ಲದು. ಮೋಡಿಕಾರ ತನ್ನ ಮೋಡಿಯಿಂದ ನಾಣ್ಯಗಳನ್ನು ಹುಟ್ಟಿಸಬಲ್ಲ. ಆದರೆ ಅವನು ಸ್ವತಃ ಕೇಳುವದು ಭಿಕ್ಷೆ. ಬೀದಿ ಬದಿಯ ಜೋಯಿಸ ತನ್ನ ಭವಿಷ್ಯವನ್ನು ತಾನೇ ತಿಳಿಯದವ. ಇಂಥ ಹಲವಾರು ಅಸಂಬದ್ಧತೆಗಳನ್ನು ಅವರ ಕಾವ್ಯ ವಿಡಂಬಿಸುತ್ತದೆ. ವಿಡಂಬನೆಗೆ ಯಾವಾಗಲೂ ಧ್ವನ್ಯರ್ಥವಿರುವದಿಲ್ಲ. ಶಿವರುದ್ರಪ್ಪನವರ ನಿಸರ್ಗ ಕವಿತೆಗಳಲ್ಲಿ ವಿಡಂಬನೆ ಇರುವದಿಲ್ಲ ನಿಜ. ಆದರೂ ಅಲ್ಲಿ ಕೂಡ ಧ್ವನ್ಯರ್ಥವಿಲ್ಲ. ಅಲ್ಲಿ ಪ್ರತಿಮೆಗಳು ಪ್ರತೀಕಗಳಾಗುವದಿಲ್ಲ. ನಿಸರ್ಗದಲ್ಲಿ ಮಾನವೀಯ ಸಂಘರ್ಷವಿಲ್ಲ. ಅದರಂತೆ ಮನುಷ್ಯ ಲೋಕದ ನೈತಿಕ ದ್ವಂದ್ವಗಳಿಲ್ಲ, ಕ್ಷುದ್ರತನ ಮತ್ತು ಕ್ರೌರ್ಯಗಳೂ ಇಲ್ಲ. ಮನುಷ್ಯನ ಇತಿಹಾಸದ ಸಂಕುಲತೆಯನ್ನೆಲ್ಲ ಶಿವರುದ್ರಪ್ಪನವರ ಕಾವ್ಯ ಬಲ್ಲದು. ಬೌದ್ಧಿಕತೆಯಿಂದ ಪ್ರೇರಿತವಾದ ನೈತಿಕತೆಯಲ್ಲಿ ಈ ಕಾವ್ಯಕ್ಕೆ ನಂಬಿಕೆಯಿದೆ. ಮಹಾಲಿಂಗಂನಂಥ ಅಲೌಕಿಕ ಪ್ರತಿಭೆಯ ಕಲಾವಿದನ ಕೊಳಲಗಾನವನ್ನು ಕೇಳಿದಾಗ ಮಾತ್ರ ಈ ನಂಬಿಕೆಗೂ ಮೀರಿದ ಒಂದು ಲೋಕ ಗೋಚರಿಸುತ್ತದೆ.

ಶಿವರುದ್ರಪ್ಪನವರ 'ಪ್ರತಿಭೆ-ಪಾಂಡಿತ್ಯ' ಎಂಬ ಕವಿತೆಯಲ್ಲಿ ಪ್ರತಿಭೆಯ ವಿಸ್ಮಯಲೋಕದ ದರ್ಶನವಿದೆ. ನಳ ಋತುಪರ್ಣ ರಾಜನಲ್ಲಿ ಸಾರಥಿಯಾಗಿದ್ದಾನೆ. ದಮಯಂತಿ ನಳನನ್ನು ಹುಡುಕಿ ತೆಗೆಯಲು ಸ್ವಯಂವರದ ಏರ್ಪಾಡು ಮಾಡಿದ್ದಾಳೆ. ಅಯೋಧ್ಯೆಯ ಋತುಪರ್ಣ ಆ ಸ್ವಯಂವರಕ್ಕೆ ಹೊರಡುವ ಸಿದ್ಧತೆಯಲ್ಲಿದ್ದಾನೆ. ರಥಕ್ಕೆ ಹೂಡಿದ್ದ ಸೊರಗಿದ ಕುದುರೆಗಳನ್ನು ನೋಡಿ ಹೊತ್ತಿಗೆ ಸರಿಯಾಗಿ ಮುಟ್ಟಬಹುದೇ ಎಂದು ನಳನನ್ನು ಕೇಳುತ್ತಾನೆ. ನಳನ ಪ್ರತಿಭೆಯ ಕಣ್ಣುಗಳು ಮಿಂಚುತ್ತವೆ. ರಥ ಗಾಳಿಯಲ್ಲಿ ವೇಗವಾಗಿ ಹೋಗತೊಡಗುತ್ತದೆ. ಋತುಪರ್ಣ ಅದನ್ನು ನೋಡಿ ಬೆರಗಾಗುತ್ತಾನೆ. ಅಶ್ವಹೃದಯದ ವಿದ್ಯೆ ಬಲ್ಲವನು ಎಂದು ನಳನನ್ನು ಹೊಗಳುತ್ತಾನೆ. ತನಗೂ ಒಂದು ವಿದ್ಯೆ ಗೊತ್ತಿದೆ ಎಂದು ಹೇಳಿ ಒಂದು ವಿಶಾಲ

ವೃಕ್ಷದ ಎಲೆಗಳನ್ನೆಲ್ಲ ಸರಿಯಾಗಿ ಎಣಿಸಿ ಹೇಳುತ್ತಾನೆ. ಅದನ್ನು ಕಂಡು ನಳನೂ ಮೆಚ್ಚುತ್ತಾನೆ. ಆದರೆ ಕವಿತೆಯ ಪ್ರಕಾರ ನಳನಲ್ಲಿ ಪ್ರತಿಭೆ ಇದ್ದರೆ ಋತುಪರ್ಣನಲ್ಲಿ ಪಾಂಡಿತ್ಯವಿದೆ. ಒಂದು ಗಿಡದಲ್ಲಿ ಎಲೆಗಳೆಷ್ಟು ಎಂದು ತಪ್ಪದಂತೆ ಹೇಳುವ ವಿದ್ಯೆ ಸಾಮಾನ್ಯವೇನಲ್ಲ. ಆದರೆ ಅದರಿಂದ ಪ್ರಯೋಜನವೇನೂ ಇಲ್ಲ. ಜಗತ್ತನ್ನು, ಜಗತ್ತಿನ ವ್ಯಾಪಾರಗಳನ್ನು ಅಂಕಿ ಸಂಖ್ಯೆಗಳಿಂದ ಅಳೆಯಬಹುದು. ಪ್ರಮೇಯ ಮತ್ತು ಪ್ರಮಾಣಗಳಿಂದ ಒಂದು ಶಾಸ್ತ್ರವನ್ನು ನಿರ್ಮಾಣ ಮಾಡಬಹುದು. ಆದರೆ ಹೊಸ ಸೃಷ್ಟಿ ಬೇಕಾದರೆ ಪ್ರತಿಭೆ ಕೆಲಸ ಮಾಡಬೇಕು. ಋತುಪರ್ಣನ ವಿದ್ಯೆಗೆ ಕಾರ್ಯಶಕ್ತಿಯಿಲ್ಲ. ಅವನದು ಕೇವಲ ತಿಳುವಳಿಕೆ. ಅಲ್ಲದೆ ಅವನ ಬುದ್ಧಿಶಕ್ತಿ ವೇಗದಿಂದ ಕೆಲಸ ಮಾಡಬಲ್ಲದು. ಆದರೆ ಬಡಕಲಾದ ಕುದುರೆಗಳಿಂದ ಹೂಡಿದ ರಥವನ್ನು ಆಕಾಶದಲ್ಲಿ ನಡೆಸುವ ಶಕ್ತಿ ಪ್ರತಿಭೆಗೆ ಇದೆ. ಶಿವರುದ್ರಪ್ಪನವರು ಈ ಕವಿತೆಯ ಮೂಲಕವಾಗಿ ಈ ಎರಡರ ನಡುವಿನ ಅಂತರವನ್ನು ಮರೆಯಲಾಗದಂತೆ ನಿರೂಪಿಸಿದ್ದಾರೆ.

ಶಿವರುದ್ರಪ್ಪನವರ ಕಾವ್ಯಸೃಷ್ಟಿ ಅಷ್ಟೊಂದು ಹರವಾದದ್ದಲ್ಲ. ಅಲ್ಲದೆ ಈ ಕವಿತೆಗಳಲ್ಲಿ ಕಾವ್ಯವಸ್ತುವಿನ ಕೊರತೆಯೂ ಇದೆ. ಆದರೆ ಮೊದಲಿನಿಂದ ಕೊನೆಯವರೆಗೆ ಅವರ ಕಾವ್ಯದ ಭಾಷೆ, ಈಗಾಗಲೇ ವಿಮರ್ಶಕರು ಹೇಳಿರುವಂತೆ ಪ್ರಸನ್ನವಾಗಿದೆ. ಅವರ ಶೈಲಿಯ ಪ್ರಸನ್ನತೆ ತಿಳಿನೀರಿನ ಪ್ರಸನ್ನತೆ. ತಳದಲ್ಲಿನ ಮರಳು, ಕಲ್ಲುಗಳು ಕಾಣುವಷ್ಟು ಅದು ಪ್ರಸನ್ನ ಮತ್ತು ಪಾರದರ್ಶಕವಾಗಿದೆ. ಆದರೆ ಈ ಪ್ರಸನ್ನತೆಯಲ್ಲಿ ಕಾಣುವದೆಲ್ಲ ಸುತ್ತಲಿನ ಜಗತ್ತಿನ ಪ್ರತಿಮಾಲೋಕ.

(ಮೂಲ: 'ನೂರು ಮರ ನೂರು ಸ್ವರ')



# ನೆಲಮುಗಿಲ ತುಯ್ದಾಟ, ಹೊಸ ಹುಟ್ಟು

ಡಾ॥ ಬಿ. ಎಸ್. ಸುಮಿತ್ರಾಬಾಯಿ

**ಈ** ನೆಲದ ಬದುಕನ್ನು ತುಂಬು ಪ್ರೀತಿಯಿಂದ ಬಗಲಿಗೆತ್ತಿಕೊಂಡಿದ್ದರೂ ಈ ಮಣ್ಣಿನಲ್ಲೇ ತನ್ನನ್ನು ಕಳೆದುಕೊಳ್ಳದಂಥ ಎಚ್ಚರದಿಂದ ಕಾವ್ಯವನ್ನು ಕಟ್ಟಿಕೊಡುತ್ತಾ ಬಂದ ಜಿ.ಎಸ್. ಶಿವರುದ್ರಪ್ಪನವರು ಒಂದು ರೀತಿ ಪುರಾತನರೂ ನೂತನರೂ ಆದ ಕವಿ. ಇಹದಲ್ಲಿ ಬೇರು ಬಿಟ್ಟು, ನಿರಂತರವಾಗಿ ಆ ಇಹದ ಮಿತಿಗಳಂತೆ ಬೆಳೆಯಬೇಕೆನ್ನುವ ಹಂಬಲ ಜಿಎಸ್‌ಎಸ್ ಕಾವ್ಯದ ಬಹುಮುಖ್ಯ ಪ್ರೇರಕ ನೆಲೆಗಳಲ್ಲಿ ಒಂದು. ಆರಂಭಕಾಲದಿಂದ ಹಿಡಿದು ಇಂದಿನವರೆಗೂ ಈ ರೀತಿಯ ಅತೀತ ನೆಲೆಯೊಂದಕ್ಕಾಗಿ ಹುಡುಕಾಡುವ ಯತ್ನ ಜಿಎಸ್‌ಎಸ್ ಕಾವ್ಯದಲ್ಲಿ ಅಂತರ್ವಾಹಿನಿಯಾಗಿ ಹರಿದು ಬಂದಿರುವುದನ್ನು ಕಾಣಬಹುದು ಈ ಹುಡುಕಾಟಕ್ಕೆ ಹಲವು ಆಯಾಮಗಳು ಇಲ್ಲಿ ಕಾಣಸಿಗುತ್ತವೆ.

1) ನೆಲದ ಬದುಕಿನ 'ಮರ್ತ್ಯ'ತೆಗೆ ಬೇಸರಿಸುವ ಜೀವವೊಂದು 'ಅಮರ'ತೆಗೆ, 'ಅಮೃತ'ತ್ವದ ಸೇಚನೆಗೆ ಸದಾ ಹಂಬಲಿಸುತ್ತಿರುವುದು.

2) ಪ್ರಕೃತಿಯ ದೈವೀ ಸೌಂದರ್ಯದಲ್ಲಿ ಮುಳುಗಿ ರಸಾಸ್ವಾದಮಾಡಿ ಆನಂದ ಅನುಭವಿಸಿದ ಕವಿ ಮತ್ತೆ ಮತ್ತೆ ಅಂಥ ಆನಂದಾನುಭೂತಿಗಾಗಿ ಹಾತೊರೆಯುವುದು.

3) ಈ ಆನಂದಾನುಭೂತಿಯ ಸ್ಮೃತಿಯಿಂದ ಹುಟ್ಟುವ ಕವಿತೆ ಕಟ್ಟಿದ ಅನುಭವದಿಂದ ಪ್ರೇರಿತನಾಗಿ ಮತ್ತೆ ಮತ್ತೆ ಅದೇ ಸ್ಫೂರ್ತಿಯಾಗಿ, ಆವೇಶಕ್ಕಾಗಿ ಕಾಯುತ್ತಿರುವುದು.

4) ಬದುಕಿನ ಹಳತು ಕಳೆದು ಹೊಸತು ಆವಿಷ್ಕರಿಸಲೆಂಬ ಹಾರೈಕೆ. ಇತ್ಯಾದಿ

ತೋರಿಕೆಗೆ ಈ ಮೂರೂ ಬೇರೆ ಬೇರೆಯಂತೆ ಅನ್ನಿಸಬಹುದು. ಆದರೆ ಸೂಕ್ಷ್ಮವಾಗಿ ಪರಿಶೀಲಸಿದರೆ ತನ್ನನ್ನು, ತನ್ನ ಮಿತಿಯನ್ನು, ತನ್ನೊಳಗಿನ ಕೊರತೆಯನ್ನು ಮೀರಬೇಕೆಂಬ ಉತ್ಕಟ ಬಯಕೆಯೇ ಈ ಎಲ್ಲದಕ್ಕೂ ಮೂಲದಲ್ಲಿದೆ ಎಂಬುದು ಅರಿವಾಗುತ್ತದೆ. ಇಹದಲ್ಲಿನ ಬೇನೆ, ಬೇಗುದಿ, ಸಂಕಟ, ಸಾವು, ನಶ್ವರತೆಗಳೆಲ್ಲವನ್ನೂ ಮೀರಬಯಸುವ ಆಧ್ಯಾತ್ಮಿಕ ತುಡಿತವೇ ಹೀಗೆ ಬೇರೆ ಬೇರೆ ರೂಪಗಳಲ್ಲಿ ಜಿಎಸ್‌ಎಸ್ ಕಾವ್ಯದಲ್ಲಿ ಪ್ರಕಟಗೊಳ್ಳುತ್ತದೆ ಎಂದು ನನ್ನ ಭಾವನೆ. ಆದ್ದರಿಂದ ಈ ಎಲ್ಲ ಬಗೆಯ ತುಯ್ದಾಟಗಳನ್ನೂ ಒಟ್ಟಾಗಿ 'ನೆಲ-ಮುಗಿಲಿನ ತುಯ್ದಾಟ' ಎಂದು ಕರೆಯಲು ನಾನು ಅಪೇಕ್ಷಿಸುತ್ತೇನೆ. ಈ ಕಿರು ಲೇಖನದಲ್ಲಿ ಈ ತುಯ್ದಾಟ ಜಿಎಸ್‌ಎಸ್ ಕಾವ್ಯದ ಬೇರೆ ಬೇರೆ ಹಂತಗಳಲ್ಲಿ ಹೇಗೆ

ವಿಭಿನ್ನರೂಪಗಳನ್ನು ತಳೆಯುತ್ತ ಬದಲಾಗುತ್ತದೆ ಮತ್ತು ಬೆಳೆಯುತ್ತದೆ ಎನ್ನುವುದನ್ನು ವಿವೇಚಿಸಲು ಯತ್ನಿಸುತ್ತೇನೆ.

ಆಕಾಶ / ಮುಗಿಲು / ಮೇಲಿನ ಬೆಳಕು / ಸಗ್ಗದೊಲವು ಮುಂತಾದ ರೂಪದಲ್ಲಿ ಈ ಕವಿ ಮರ್ತ್ಯತೆಗೆ ಅತೀತವಾದ, ದಿವ್ಯವಾದ, ಸ್ವತಂತ್ರವಾದ, ಸಂಪೂರ್ಣವೂ ಆದ ಚೈತನ್ಯದ ನೆಲೆಯೊಂದನ್ನು ಭಾವಿಸುತ್ತಾರೆ. ಇದಕ್ಕೆ ಭಿನ್ನವಾಗಿ ಸದಾ ಜಂಜಡಗಳಲ್ಲೇ ಮುಳುಗಿ ಈ ಮಹಾಚೈತನ್ಯದ ಅನುಗ್ರಹಕ್ಕೆ ತೆರೆದುಕೊಳ್ಳಲಾರದೆ ತೊಳಲುವ ಮಾನವನ ನೆಲೆ ಇದೆ. ಇದು ನೆಲದ ನೆಲೆ. ಇದರಲ್ಲಿ ಕೊರತೆಯಿದೆ; ಆ ಕೊರತೆಯನ್ನು ಮೀರಿ ಪೂರ್ಣವಾಗಬೇಕೆಂಬ ಹಂಬಲ ಇದೆ. ಹೀಗೆ 'ಮುಗಿಲು' ಮತ್ತು 'ನೆಲ'ದ ನೆಲೆಗಳು ಜಿಎಸ್‌ಎಸ್ ಕಾವ್ಯವನ್ನು ಮುನ್ನಡೆಸುವ ಎರಡು ವಿಭಿನ್ನ ನೆಲೆಗಳು. ಆದರೆ ಇವು ಪರಸ್ಪರ ವಿರುದ್ಧವಾದ, ಸದಾ ಸಂಘರ್ಷದಲ್ಲಿರುವ ದ್ವಂದ್ವ ನೆಲೆಗಳಂತೆ ತೋರುವುದಿಲ್ಲ. ಬದಲಾಗಿ 'ನೆಲ'ದ ನೆಲೆಗೆ ಸದಾ ಯಾಚನೆ / ಮೊರೆ / ಪ್ರಾರ್ಥನೆ / ಹಂಬಲ / ಹಾತೊರೆವ ಭಾವದ್ರವ್ಯವು ಪ್ರಧಾನವಾಗಿ ಇಲ್ಲಿ ಕಾಣಿಸಿಕೊಳ್ಳುತ್ತದೆ. ಮತ್ತು ಮುಗಿಲ ನೆಲೆಯು ಸದಾ ಈ ಪ್ರಾರ್ಥನೆಗೆ ಓಗೊಡಬಲ್ಲ, ಕೆಲವು ಸಲ ಪ್ರಾರ್ಥನೆ ಇಲ್ಲದಿದ್ದರೂ ತಾನೇ ಒಲಿದು ಅನುಗ್ರಹಿಸಬಲ್ಲ ಬಯಕೆಯನ್ನು ಪೂರೈಸಬಲ್ಲ ಶಕ್ತಿಯ ನೆಲೆಯಾಗುತ್ತದೆ. ಇವುಗಳ ನಡುವೆ ಯಾವುದೋ ವಿವರಿಸಲಾಗದಂಥ ಸೆಳೆತ, ಆಕರ್ಷಣೆ, ತುಯ್ದಾಟವೊಂದು ಕೆಲಸ ಮಾಡುತ್ತಿದೆ. ಅದರ ಮೂಲಕವಾಗಿ ಪರಸ್ಪರ ಒಂದು ಸಮನ್ವಿತ ನೆಲೆಗಾಗಿ ಈ ಭಿನ್ನ ನೆಲೆಗಳು ಹೊಯ್ದಾಡುವಂತೆ ಭಾಸವಾಗುತ್ತದೆ.

ಆರಂಭದ ಹಂತದಲ್ಲಿ ಮರ್ತ್ಯದ ಬದುಕು ಒಟ್ಟಾರೆಯಾಗಿ 'ಜಗದ ಜಂಜಡ / ಬರಿಯ ಮಣ್ಣಿನ ಗಡಿಬಿಡಿ'ಯಾಗಿ ಕಂಡ ಹೊತ್ತಿನಲ್ಲಿ ಪ್ರಕೃತಿಯಲ್ಲಿ ಕವಿ ಈ ಮಿತಿಯನ್ನು ಮೀರುವ ಸಾಧ್ಯತೆಯೊಂದನ್ನು ಕಂಡುಕೊಳ್ಳುತ್ತಾರೆ. ದಿನದಿನದ ಬದುಕಿನ ಬವಣೆ, ಸಂಕಟವನ್ನು ತೊಳೆಯಬಲ್ಲ ಮತ್ತು ನಿರ್ವ್ಯಾಜ ಪ್ರೇಮದ ಧಾರೆಯನ್ನು ಹರಿಸಿ, ಮಾನವನಿಗೆ ಹೊಸ ಚೇತನವನ್ನು ನೀಡಬಲ್ಲ ಪಾವನಶಕ್ತಿ ಹಾಗೂ 'ಮಾತೆ'ಯಾಗಿ ಪ್ರಕೃತಿ ಕವಿಗೆ ಗೋಚರಿಸುತ್ತಾಳೆ. ಈ ಮಾತೆಯ ಒಲವು ಸೌಂದರ್ಯದ ರಸದ ಧಾರೆಯಾಗಿ ತನ್ನೆಡೆಗೆ ಹರಿದು ಬರುವುದನ್ನು ಕುಡಿಯುವ ಶಿಶು—ಕವಿ, 'ಹೊಸಬಾಳಿನ, ಹೊಸ ಮುಗುಳಿನ / ಹಳೆ ಕೊಳೆಯನು ತೊಳೆದು / ಚೆಲುವಾಗಿಸಿ ಕಣ್ ಬಿಡಿಸಲು' ಸಿದ್ಧವಾದ 'ಗಗನಾಮೃತ ಬಿಂದು' ಈ ಪ್ರಕೃತಿಯ ಸೊಬಗು. 'ಸುಂದರ ಶಿವನ ದರ್ಶನ' ಮಾಡಿಸಬಲ್ಲ 'ಭವ್ಯಗುಡಿ'; 'ಅಮೃತ ಸೇಚನ'ಮಾಡಿಸಿ 'ದಿನದಿನದ ಕೊಳೆಯ ತೊಳೆವುದು' ಈಕೆಯ ಸಾಮರ್ಥ್ಯ. 'ಪ್ರಕೃತಿ ಮಾತೆಯ ಸ್ತನ್ಯಪಾನದಿ / ಪುಷ್ಟಿಗೊಳಿಸುವು'ದೇ ಶಿಶುವಾದ ಕವಿಚೇತನವ ನಿತ್ಯದ ಹಂಬಲ. ಈ ಪ್ರಕೃತಿ 'ಭುವಿಯ ಲೋಕಕೆ ದಿನವು ದಿನವೂ ಇಳಿದಿ'ರುವ 'ಸಗ್ಗದೊಲವು'. ಈ ಇಳಿದು ಬರುವಿಕೆ ಆಕೆಯ ಸ್ವತಂತ್ರ ಇಚ್ಛೆಯ ಕ್ರಿಯೆ. *(ಪ್ರಕೃತಿ ಪೂಜೆ: ಸಾಮಗಾನ)*

ಈ ಲೋಕದ ಬದುಕಿನ ಕೊರತೆಗಳು, ಅದರ ಸತ್ವಹೀನತೆ, ಬೇಗೆ ಸಂಕಟಗಳು ಅಸಹನೀಯವೆನಿಸಿದಾಗೆಲ್ಲ ಕವಿಯು ಮೇಲಿನ ಲೋಕವೊಂದರಿಂದ ಬರಬಹುದಾದ ಒಲವಿನ ಸೇಚನಕ್ಕೆ, ಬೆಳಕಿನ ಧಾರೆಗೆ ಮತ್ತೆ ಮತ್ತೆ ಹಂಬಲಿಸುತ್ತಾರೆ. ಇಲ್ಲಿ ಒಂದು ಕುತೂಹಲದ ಸಂಗತಿಯಿದೆ. ಈ ಬದುಕು ಎಷ್ಟೇ ದುರ್ಭರವೆನಿಸಲಿ, ನೋಯಿಸಲಿ, ಇದರ ಗೊಡವೆಯೇ ಬೇಡ ಎಂಬ ಭಾವ ಎಲ್ಲಿಯೂ ಇಲ್ಲ. ಹಾಗೆಯೇ ಪರಲೋಕಕ್ಕೆ ಪಲಾಯನ ಮಾಡುವ ರೀತಿಯ 'ಮೋಕ್ಷ'ದ ಹಂಬಲವೂ ಇದಲ್ಲ. ಬದಲಾಗಿ ಇಹದಿಂದ ಪಾರುಮಾಡುವುದಕ್ಕಿಂತಲೂ ಇಲ್ಲಿಯ ಬದುಕಿನಲ್ಲಿರುವ ಕೆಡುಕನ್ನು, ಅಹಿತಕರ, ಅನಿಷ್ಟದ ಅಂಶಗಳನ್ನು ನಿವಾರಿಸಿ, ಬದುಕನ್ನು ಹಸನುಮಾಡುವುದಕ್ಕಾಗಿ ದೈವಿಕವಾದ ನಿರಾಕಾರವಾದ ಒಂದು ಅನುಗ್ರಹ ಬೇಕೆನ್ನುವ ಆಶಯ ಇಲ್ಲಿ ಕಾಣಿಸುತ್ತದೆ. ಮಾನವನ ಒಳಗಿರುವ ಅಂತಃಕರಣಕ್ಕೆ ಚೈತನ್ಯ ತುಂಬುವುದಕ್ಕೆ ಮೇಲಿರುವ ಅತಿಮಾನುಷ ಶಕ್ತಿಯಿಂದ ಒಲವು ಚೆಲುವುಗಳ ಮೂಲಕ ಆಗಬಹುದಾದ ಅನುಗ್ರಹದ ಹಂಬಲವಿದು. ಹರಿದುಬಂದ ಈ ದಿವ್ಯಬೆಳಕು / ಆನಂದದ ಧಾರೆಯಲ್ಲಿ ಮಿಂದು, ಅದರಿಂದ ಹೊಳೆದ ಸತ್ಯದ ಬೆಳಕಿನಲ್ಲಿ ಸುತ್ತಲಿನ ಬದುಕನ್ನು ಬೆಳಗಿಸುವುದೇ ಕವಿಯ ಹಾಡಾಗಿದೆ. ಈ ರೀತಿ 'ಹಾಡುವುದು ಅನಿವಾರ್ಯ ಕರ್ಮ ನನಗೆ' ಎನ್ನುವಲ್ಲಿ ಅದೊಂದು ಕಾಯಕವೇ ಆಗುತ್ತದೆ. ಈ ನೆಲದ ಬದುಕಿನ ನಶ್ವರಾತಿನಶ್ವರ ಅನುಭವಗಳನ್ನು ಭಾವದಲ್ಲಿ ಕಟ್ಟಿಕೊಡುವ ಈ ಕಾಯಕಕ್ಕೆ ತೆತ್ತುಕೊಳ್ಳುತ್ತಾ ಕವಿ ಹೇಳುತ್ತಾರೆ *'ನಾನು ಬರೆಯುತ್ತೇನೆ / ಖುಷಿಗೆ, ನೋವಿಗೆ / ರೊಚ್ಚಿಗೆ ಮತ್ತು ಹುಚ್ಚಿಗೆ / ಅಥವಾ ನಂದಿಸಲಾರದ ಕಿಚ್ಚಿಗೆ'*. ಹೀಗೆನ್ನುವಾಗ ಕವನಕ್ರಿಯೆಯೇ ಒಂದು ಅತೀತನೆಲೆ ಅಥವಾ ಬಿಡುಗಡೆಯ ಸಾಧ್ಯತೆಯನ್ನು ಒದಗಿಸಬಹುದಾದ್ದು. ಆದ್ದರಿಂದಲೇ ಬದುಕಿಗೆ ವಿಮುಖವಾಗಿಬಿಡಬಹುದಾದ ರೀತಿಯ ಆಧ್ಯಾತ್ಮಿಕ ಉತ್ಕಟತೆ ಅಥವಾ ಅವಧೂತತತ್ವಕ್ಕೆ ಜಿಎಸ್‌ಎಸ್ ಕವಿತೆಗಳಲ್ಲಿ ಎಡೆಯಿಲ್ಲವಾಗುತ್ತದೆ. ಹೀಗೆ ಬದುಕಿನ ಬಗೆಗಿನ ಅಚಲ ಪ್ರೀತಿ ಕವಿಯನ್ನು ನೆಲಕ್ಕೆ ಕಟ್ಟಿಹಾಕಿದಂತೆ ಕಂಡರೆ, ಈ ಮರ್ತ್ಯದ ಕೊರತೆಗಳ ಅರಿವು, ಇದಕ್ಕಿಂತ ಮೇಲಿನ ಮುಗಿಲಿನ, ನಕ್ಷತ್ರಗಳ, ಬೆಳಕಿನ ಲೋಕದತ್ತ ಹಂಬಲವನ್ನು ಹುಟ್ಟಿಸುತ್ತದೆ.

ನೆಲ-ಮುಗಿಲಿನ ಈ ತಾತ್ವಿಕ ಹೊಯ್ದಾಟ ಜಿಎಸ್‌ಎಸ್ ಕವಿತೆಗಳ ಅವಶ್ಯಕ ಅಂಗವಾಗಿರುವುದಕ್ಕೆ ನೂರಾರು ಉದಾಹರಣೆಗಳನ್ನು ನೀಡಬಹುದು. ಮೊದಲಿಗೆ ಶ್ರದ್ಧೆಯೊಂದೇ ಈ ರೀತಿ ಅತೀತದತ್ತ ಮುನ್ನಡೆಸಬಲ್ಲ ಶಕ್ತಿಯಾಗಿ ಕವಿಗೆ ಕಂಡಿದೆ.

*'ಕಿರಿಯೊಲವಿನೀ ಮಡುವ / ದಾಟಿ ಮುನ್ನಡೆವುದೇ / ಸಿಕ್ಕುವುದು ಮುಂದೊಮ್ಮೆ ಹಿರಿಯ ಕಡಲು / ಮೇಲೆ ಬೆಳಕಿನ ಬೆರಳು / ದಾರಿ ತೋರುತಲಿರಲು / ಯಾತ್ರೆ ಸಾರ್ಥಕವಮ ಶ್ರದ್ಧೆಯಿರಲು'. (ಪಯಣ: ದೇವಶಿಲ್ಪ)*

ಆದರೆ ಈ ರೀತಿ ಒಳಿತಿನ ಬಗೆಗಿನ ಮಾನವನ ಶ್ರದ್ಧೆಯಷ್ಟೇ ಬದುಕನ್ನು ಹಸನು ಮಾಡೀತು ಎಂಬ ಸರಳ ನಂಬಿಕೆಗೆ ಪೆಟ್ಟುಕೊಡುವಂತೆ, ಲೋಕದ ಜೀವನ ಪ್ರಕ್ರಿಯೆಯಲ್ಲಿ

'ಪ್ರಾಕೃತಿಕ', ಆದ್ದರಿಂದ ಪ್ರಶ್ನಿಸಲು ಬಾರದಂಥ ಕೆಡುಕಿನ ಅಂಶವೂ ವಾಸ್ತವವೇ ಎನ್ನುವುದರ ಅರಿವು ನಂತರ ಬೆಳೆಯುತ್ತದೆ. ಈ ಅರಿವು ಬೆಳೆದಂತೆಲ್ಲ ಮರ್ತ್ಯದ ಬದುಕಿನ ಗಾಢವಾದ ನೋವು ಆತಂಕಗಳು ಜಿಎಸ್‌ಎಸ್ ಕಾವ್ಯದಲ್ಲಿ ಢಾಳಾಗಿ ಅಭಿವ್ಯಕ್ತಿ ಪಡೆದುಕೊಳ್ಳುತ್ತವೆ. 'ತಂತುಕೃತಿ' ಎಂಬ ಕವಿತೆಯು ಈ ಬೆಳವಣಿಗೆಗೆ ಉತ್ತಮ ಉದಾಹರಣೆ. 'ಚಕ್ರಾಕಾರದ ಬಲೆಯ ಮಧ್ಯದಲಿ / ಚಕ್ರವರ್ತಿಯೊಲು ಠೀವಿಯಲಿ/ ಕುಳಿತಿ'ದ್ದ 'ಕೃತಿಶಿಲ್ಪಿ' ಎಂದು ಅಭಿಮಾನ ಹುಟ್ಟಿಸುವಂತಿದ್ದ 'ಕ್ರಿಮಿಶಿಲ್ಪಿ' ಸೃಷ್ಟಿಸಿದ್ದ ತಂತುಕೃತಿಯ ಸೂಕ್ಷ್ಮ ಸೌಂದರ್ಯ ಕಂಡು ಕವಿ ಬೆರಗಾಗಿದ್ದಾನೆ: 'ಏನು ನೂಲುಗಳು, ಏನು ಬಂಧನ; / ಎಂಥ ಸೂಕ್ಷ್ಮಕಲೆ, ಎನಿತು ಮೋಹನ' ಈ ರೀತಿಯ ಮುಗ್ಧ ಆಶ್ಚರ್ಯಕ್ಕೆ ಹೆಚ್ಚು ಅವಕಾಶವಿಲ್ಲ. ಏಕೆಂದರೆ ಆ ಕ್ಷಣದಲ್ಲೇ 'ಆ ವಿಕಾಟಾಕೃತಿ / ವಕ್ರಾಕಾರದ ಬಾಹುಗಳೆತ್ತಿ' ಬಲೆಯ ಮೂಲೆಯೊಂದರಲ್ಲಿ ಸಿಕ್ಕು 'ಒದ್ದಾಡುವ ಹುಳುವೊಂದನ್ನು' ತನ್ನ 'ಸುಂದರ ಸೊಬಗಿನ ಬಲೆಯಲ್ಲಿ / ಯಮ ಬಂಧನದ ನೂಲಿನಲಿ' ಬಿಗಿಯಲು ತೊಡಗುತ್ತದೆ. 'ಸಾವು ಬದುಕಿನ ಹೋರಾಟದ ಕ್ರೌರ್ಯ' ತಾನು ಅದುವರೆಗೆ ಸವಿದಿದ್ದ ಸೌಂದರ್ಯದ ಶಿಲ್ಪದ ಮೂಲಕವೇ ಹುಟ್ಟಿದ್ದರ ಅರಿವಿನಿಂದ ಕವಿಯ ಮನದಲ್ಲಿದ್ದ ಚೆಲುವಿನ ಕಲ್ಪನೆ 'ಒಡೆದು ಚೂರಾಯಿತು'. ಆದರೆ ಪ್ರಕೃತಿ ಮಾತ್ರ ಈ ಪರಿವೆ ಇಲ್ಲದಂತೆ ನಿರ್ಲಿಪ್ತವಾಗಿ ತನ್ನ 'ಹಕ್ಕಿಯುಲಿ','ಬಿಸಿಲ ಹರಡು'ಗಳನ್ನು ಮುಂದುವರೆಸುತ್ತದೆ.

ಸತ್ಯವು 'ಶಿವ' ಮಾತ್ರವೇ ಅಲ್ಲ; ಅದರಲ್ಲಿ 'ರುದ್ರ'ವೂ ಅಷ್ಟೇ ಅನಿವಾರ್ಯ, ಅಷ್ಟೇ ಪ್ರಬಲ ಜಾಗದಲ್ಲಿದೆ ಎಂಬ ಈ ಅರಿವು ಜಿ.ಎಸ್. ಶಿವರುದ್ರಪ್ಪನವರ ಕಾವ್ಯದ ಬೆಳವಣಿಗೆಯಲ್ಲಿ ಬಹುಮುಖ್ಯವಾದ ಪಾತ್ರವನ್ನು ನಿರ್ವಹಿಸುತ್ತದೆ. ಈ ಅರಿವಿನೊಂದಿಗೆ ಬದುಕನ್ನೂ ಚೆಲುವನ್ನೂ ಕುರಿತಂತೆ ಕವಿಯ ಪರಿಪ್ರೇಕ್ಷ್ಯೆ ಕೂಡ ಬದಲಾಗುತ್ತದೆ. ಈ ಬದಲಾವಣೆ ದಿಢೀರನೆ ಪ್ರತ್ಯಕ್ಷ ಆಗದೆ, ನಿಧಾನವಾಗಿ ಒಳತೋಟಿ ಮತ್ತು ತಾಕಲಾಟಗಳ ಮೂಲಕವೇ ಜಿಎಸ್‌ಎಸ್ ಕವಿತೆಗಳಲ್ಲಿ ಪ್ರಕಟವಾಗುವುದು ಗಮನಾರ್ಹ. ಕವಿಯ ದೃಷ್ಟಿಕೋನ ಬದಲಾಗಬಯಸಿಯೂ, ಅಪ್ರಜ್ಞಾತ್ಮಕ ಸೆಳೆತವೊಂದು ಇನ್ನೂ ಹಳೆಯ ನಂಬಿಕೆಯತ್ತಲೇ ಸಾಗುವಂತೆ ಮಾಡಿರುವುದುಂಟು. 'ಸಂಕ್ರಾಂತಿ' ಕವಿತೆಯತ್ತ ನೋಡಬಹುದು.

ಈ ಕವಿತೆಯ ಆರಂಭಕ್ಕೆ ಸೂರ್ಯಾಸ್ತದ ಚಿತ್ರವಿದೆ. ಆದರೆ ಅದು ಮಾಮೂಲಿ ಸಂಜೆಯಲ್ಲ. ಅದು 'ಕತ್ತಲ ಕಣಿವೆಯೊಳುರುಳುತ ನರಳುವ' ಸಂಜೆ. ಅದರ ಮಬ್ಬುಗತ್ತಲಲ್ಲಿ ಎದುರಿನ ಆಲದ ಮರ ಕೂಡ 'ಭೀತಿಯ ಭೂತವು ಜಡೆಯ ಬಿಚ್ಚಿದೊಲು' ಕಾಣಿಸುತ್ತದೆ. ಆ ಮರದಲ್ಲಿರುವ ಬಾವಲಿಗಳು 'ಕೊಂಬೆ ಕೊಂಬೆಯಲಿ ದುರ್ಮಂತ್ರದವೊಲು' ಯಾವುದೋ ಕೆಡುಕನು ಆಹ್ವಾನಿಸುವಂತೆ ತೋರುತ್ತವೆ. ಈ ಅನಿರ್ದಿಷ್ಟ, ಅಸ್ಪಷ್ಟ ಭೀತಿಭಾವ ಎಷ್ಟು ಬಲವಾಗಿದೆ ಎಂದರೆ ಅದರಿಂದ ಕವಿಗೆ 'ಮನ ಸಡುಗಿತು' ಎನಿಸುತ್ತದೆ. ಆದರೆ ಇರುಳಿನ ಆಗಮನದ ಜೊತೆಗೆ ಹೊಂದಿಕೊಂಡ ಈ ಮುಸ್ಸಂಜೆಯ ರಹಸ್ಯಾತ್ಮಕ, ಅತೀಂದ್ರಿಯ ನೆಲೆಯ ಭೀತಿಯ ಮೂಲದ ಶೋಧನೆ ಕವಿಗೆ ಮುಖ್ಯವಲ್ಲ. ಬದಲಾಗಿ ಈ 'ಭೀತಿ'ಯನ್ನು

ಇಲ್ಲವಾಗಿಸಿಬಿಡುವಂಥ ಬೆಳಕೊಂದರ ನಿರೀಕ್ಷೆ ಕವಿಗೆ ಮುಖ್ಯ. ಆದ್ದರಿಂದಲೇ ಕತ್ತಲನ್ನೂ ಅದರ ಭಯಾನಕತೆಯನ್ನೂ ಒಟ್ಟಿಗೇ ನಿವಾರಿಸಿಬಿಟ್ಟ 'ತಿಂಗಳ ಕೃಪೆ'ಯಲ್ಲಿ ಅವರು ಮಿಂದು ಧನ್ಯರಾಗುತ್ತಾರೆ. ಆಗ ಮೊದಲು ಭೀಕರವಾಗಿ ಮನ ನಡುಗಿಸಿದ್ದ ಬಾವಲಿಗಳೂ ಬೇರೆಯಾಗಿ ಕಾಣಿಸುತ್ತವೆ:

**'ಬೆಳಕಿನ ಹೂವಿನ ಬಂಡನು ಆಶಿಸಿ / ಹೊರಟವೋ ಕತ್ತಲ ದುಂಬಿಗಳು'.**

**'ತೇಲುವ ಅಮೃತದ ಕುಂಭದ ಬಯಕೆಗೆ / ದಾನವರೆಸೆದಾ ಬಾಣಗಳೋ'**

ಎಂಬ ಕಾಲ್ಪನಿಕ ವಿವರಣೆಯಲ್ಲಿ ಕವಿ ತನ್ನೊಳಗಿನ ಭೀತಿಗೆ ಉತ್ತರ ಕಂಡುಕೊಂಡರೂ ನಿಜವಾಗಿ ಕವಿತೆಯ ಈ ಭಾಗ ಓದುಗರ ಮನದಲ್ಲಿ ಹುಟ್ಟಿಸಿದ ಸಮಸ್ಯೆಯ ಭಾವನೆಯನ್ನು ನಿವಾರಿಸುತ್ತದೆ ಎನ್ನುವುದರಲ್ಲಿ ನನಗೆ ಅನುಮಾನವಿದೆ. ಅಂದರೆ ಕೆಡುಕನ್ನು ಕುರಿತು ಹುಟ್ಟಿದ ಭೀತಿಗೆ ಕಲ್ಪನೆಯ ವಿವರಣೆಯಷ್ಟೇ ಇಲ್ಲಿ ದಕ್ಕುತ್ತದೆ, ಹೊರತು ಅದರ ಪರಿಹಾರವಲ್ಲ.

ಈ ಸಂದಿಗ್ಧತೆಯ ಅಂಶ ಕವಿಯ ಒಂದು ಮುಖ್ಯ ಒಳತೋಟಿಯತ್ತ ನಮ್ಮನ್ನು ಕರೆದೊಯ್ಯಬಲ್ಲದು. ಜಿಎಸ್‌ಎಸ್ ಮುಖ್ಯವಾಗಿ ಮುಖಾಮುಖಿಯಾಗುವುದು, ಆಗಬೇಕಾಗಿದ್ದುದು ಸ್ವಾತಂತ್ರ್ಯ ದಕ್ಕಿದರೂ ಜನರ ಬದುಕಿನಲ್ಲಿ ಯಾವ ಹೊಸತೂ ಮೂಡದೆ ಹೋದಂಥ ಯುಗಧರ್ಮಕ್ಕೆ. ಆ ಕಾಲಕ್ಕೆ ಸಹಜವಾಗಿಯೇ ನವೋದಯದ ದಿಗ್ಗಜ ಕವಿಗಳು ಇಟ್ಟುಕೊಂಡಿದ್ದ ನಂಬಿಕೆ—'ಸೂರ್ಯೋದಯ ಚಂದ್ರೋದಯ ದೇವರದಯ ಕಾಣೋ!' ಎಂಬಂಥ ಶ್ರದ್ಧೆ ಮರವೆ ಆಗಿತ್ತು. ಸ್ವರ್ಗ-ಭೂಮಿಗಳ ನಡುವೆ ಕವಿ ಭಾವನಾತ್ಮಕವಾಗಿ ಕಲ್ಪಿಸಿಕೊಂಡಿದ್ದ ಅನುಗ್ರಹದ ಸೇತುವೆ ಕುಸಿದ ಈ ಕಾಲದಲ್ಲಿ ಉಳಿದಿರುವುದು ಭವಿಷ್ಯ ಬದುಕನ್ನು ಕುರಿತ ತೀವ್ರವಾದ ಆತಂಕ. ಈಗಲೂ ಸೂರ್ಯನ ಉದಯವಿದೆ. ಆದರೆ ಅದು ಹೊಸ ಬದುಕಿನ ಸಂಕೇತವಾಗದು:

**ಮೂಡು ಬೆಳಕಿನ ಹೆಡೆಯ ತೆರೆಯಿತು**
**ಕೆರಳಿದಿರುಳಿನ ನಾಗರ!**
**ಕತ್ತಲೆಯ ಕದ ತೆರೆದು ತೋರುವು-**
**ದಾವ ನೋವಿನ ಸಾಗರ?**
**ಯಾವ ಮುಳ್ಳಿನ ಹಾದಿ ತೆರೆವುದೊ**
**ಮುಂದಾವ ಭೀತಿಯ ಕಂದರ?**
**ಇರುಳ ನೆಮ್ಮದಿ ಹೊದಿಕೆ ಹರಿಯಿತು**
**ಈ ಬಾನು ಬೆಂಕಿಯ ಹಂದರ**

*(ಒಂದು ಕ್ಷಣ: ದೇವಶಿಲ್ಪ)*

ಹಗಲಿನ ಬರವು ನವ ಚೈತನ್ಯದ ಬರುವಿಕೆಗೆ ಬಾಗಿಲು ತೆರೆದಿದ್ದಂಥ ಕಾಲ ಮುಗಿದಿದೆ. ಮಾತ್ರವಲ್ಲ, ಹಿಂದೊಮ್ಮೆ 'ಮನೆಯ ಬಾಗಿಲ ಹೊರಗೆ ಸುಡುವ ಬೇಸಿಗೆ ಬಿಸಿಲು / ಮನ ಚಿಂತೆಗಳ ಹುತ್ತ / ಮೇಲೆ ಬೆವರಿನ ಜಳಕ' ವಿದ್ದರೂ 'ಮನೆಯ ಹೊಸಿಲಿಗೆ

ಬಂದ/ರಿದೆ ಒಳಗೆ ಸಂಸಾರ ವೃಕ್ಷದ ನೆಳಲು' *(ಒಳಗೆ: ಚೆಲುವು-ಒಲವು)* ಎಂಬ ನೆಮ್ಮದಿಗೊಂದು ನೆಲೆಯಾಗಿದ್ದ 'ಮನೆ' ಕೂಡ ಈಗ ಬದಲಾಗಿ ಹೋಗಿದೆ. ಈಗ ಮನೆಯ ಒಳಹೊಕ್ಕರೆ 'ಅಸ್ಥಿಪಂಜರದಂಥ' ಮೇಲ್ಛಾವಣಿಯಿಂದ ಇಳಿದು ಬರುತ್ತದೆ *'ಬಿಸಿಲು ಕೋಲಿನ ಪ್ರೇತ' 'ಮನೆಯ ತುಂಬಾ ಧೂಳು / ಬೇಸರದ ಬೂದಿ/ಗದ್ದಲೋ ಗೆದ್ದಲು / ಕಾಲಿಡಲು ಎಲ್ಲೆಲ್ಲು/ ಇಲ್ಲವೋ ಹಾದಿ'* ಎನ್ನುವಂಥ ದುರವಸ್ಥೆ. ಬಿರುಗಾಳಿಗೆ ಸಿಕ್ಕು, ಯಾವ ಕ್ಷಣಕ್ಕಾದರೂ ಉರುಳಬಹುದಾದ 'ಮನೆ' ಇದಾಗಿದೆ. *'ಇಲ್ಲ, ಬಿಡುಗಡೆಯಿಲ್ಲ / ಅರೆನೆಳಲು ಬೆಳಕುಗಳ / ವಿಕಾರದಪಶಕುನ / ಅಗ್ನಿ ಕುಂಡದಲಿ / ಬೇಯಬೇಕೇ ಇನ್ನು?'* ಎಂಬ ಭಯಂಕರತೆ ಭವಿಷ್ಯದ್ದಾಗಿದೆ. *(ಕಾರಣಿಕ: ದೇವಶಿಲ್ಪ)*

ಈ ತೀವ್ರ ನಿರಾಶೆಯ ಉತ್ಕಟ ಭಾವ, ಬದುಕಿನಲ್ಲಿ ನಿರೀಕ್ಷಿಸಿದ್ದ ಹೊಸತನ ಬಾರದೆ ಹೋದ ಹೊತ್ತಿನಲ್ಲಿ ಸ್ವಾತಂತ್ರ್ಯೋತ್ತರ ಭಾರತೀಯ ಸಂವೇದನೆಗಳಲ್ಲಿ ದಟ್ಟವಾಗಿ ಕಾಣಿಸಿಕೊಂಡಿದ್ದ ಹತಾಶೆಗೆ ಹಿಡಿದ ಕನ್ನಡಿ ಎನ್ನಬಹುದು. ಶಂಕೆ, ಅನುಮಾನ, ವ್ಯಂಗ್ಯ ವಿಡಂಬನೆಗಳು ಬದುಕಿನ ತೀರಾ ವಾಸ್ತವ ರೂಪಗಳನ್ನು ಚಿತ್ರಿಸಲು ಕವಿಗೆ ಆಗ ಸಾಧನಗಳಾದವು. ಬದುಕು ಮತ್ತು ಚೆಲುವುಗಳನ್ನು ಕುರಿತಂತೆ ಬೆಳೆದಿದ್ದ ಹಳೆಯ ನಂಬಿಕೆಗಳನ್ನು 'ಸುಕುಮಾರ'ವೆಂದು ಜರಿದು, ಅವು ವರ್ತಮಾನದ ನಿಜವನ್ನು ಕಾವ್ಯದಲ್ಲಿ ಹಿಡಿದಿಡಲು ಯೋಗ್ಯವಾಗಲಾರವೆಂದು ನವ್ಯಕಾವ್ಯ ಪಂಥವು ಅವುಗಳನ್ನು ಬದಿಗೊತ್ತಿದ್ದು ಇದೀಗ ಇತಿಹಾಸ. ಆದರೆ ಕಳೆದ ಹಾದಿ, ಎದುರಾದ ಹಾದಿಗಳಲ್ಲಿ ಯಾವುದು ಸ್ವಂತದ್ದು, ಯಾವುದು ತನ್ನ ಸಂವೇದನೆಗೆ ಪರಕೀಯವಾದದ್ದು ಎಂಬುದರ ಬಗ್ಗೆ ಜಿಎಸ್ಎಸ್ ತುಂಬ ತೀವ್ರವಾದ ತಾಕಲಾಟಕ್ಕೆ ಒಳಗಾದದ್ದಕ್ಕೆ ಅವರ 'ದೀಪದ ಹೆಜ್ಜೆ' 'ತೆರೆದ ದಾರಿ', 'ಕಾರ್ತೀಕ', 'ಅನಾವರಣ', 'ಗೋಡೆ' ಮುಂತಾದ ಸಂಕಲನಗಳಲ್ಲಿ ವಿಪುಲವಾದ ಉದಾಹರಣೆಗಳಿವೆ.

ತಮ್ಮ ಸಮಕಾಲದಲ್ಲಿ ಸುತ್ತಲಿನ ಕಾವ್ಯ ಪರಿಸರದಲ್ಲಿ ಏರ್ಪಟ್ಟ ತೀವ್ರವಾದ ಆಘಾತಕರ ಬದಲಾವಣೆಗಳಿಗೆ, ಏರಿಳಿತಗಳಿಗೆ ಜಿಎಸ್ಎಸ್ ಪ್ರತಿಕ್ರಿಯೆ ಏನು ಎಂಬುದೂ ಬೇರೊಂದು ಕುತೂಹಲಕರ ಅಧ್ಯಯನಕ್ಕೆ ವಸ್ತುವಾಗಬಲ್ಲದು. ಆದರೆ ಅದಕ್ಕಿಂತಲೂ ಆಗ ಕವಿ ತಮ್ಮೊಳಗಿನ ತಾತ್ವಿಕತೆಯ ದೃಷ್ಟಿಯಿಂದ ತೀವ್ರವಾದ ಹೊಯ್ದಾಟಗಳಿಗೆ ಮತ್ತು ಕವನಕ್ರಿಯೆಯ ಬಿಕ್ಕಟ್ಟುಗಳಿಗೆ ಯಾವ ರೀತಿಯಲ್ಲಿ ಪರಿಹಾರವನ್ನು ಕಂಡುಕೊಳ್ಳಲು ಯತ್ನಿಸುತ್ತಾರೆ? ಯಾವ ಕ್ರಮ ಮತ್ತು ವಿಧಾನಗಳಿಂದ ಆ ಪರಿಸ್ಥಿತಿಯ ಕ್ಲಿಷ್ಟತೆಯನ್ನು ಮೀರಿ ಬೆಳೆಯಲು ಹವಣಿಸುತ್ತಾರೆ ಎನ್ನುವುದು ಹೆಚ್ಚು ಮಹತ್ವದ್ದೆಂದು ನನಗೆ ತೋರುತ್ತದೆ. ಈ ಪ್ರಶ್ನೆ ಕೂಡ ತುಂಬ ವ್ಯಾಪಕವಾದ ಸಂಶೋಧನೆಗೆ ಮತ್ತು ಚರ್ಚೆಗೆ ಅರ್ಹವಾದದ್ದು. ಆದರೆ ಈ ಚಿಕ್ಕ ಲೇಖನದ ಚೌಕಟ್ಟಿನಲ್ಲಿ ಅದಕ್ಕೆ ಅವಕಾಶ ಇಲ್ಲ. ಆದ್ದರಿಂದ, ಆ ಬಗ್ಗೆ ನನ್ನ ವಿಚಾರಗಳನ್ನು ಮಾತ್ರ ಇಲ್ಲಿ ಸೂಚಿಸಲು ಯತ್ನಿಸುತ್ತೇನೆ.

ನನಗೆ ಕಾಣಿಸುವಂತೆ ಅರವತ್ತರ ದಶಕದ ಸಂಕಲನಗಳಲ್ಲಿ ಕೂಡ ಜಿಎಸ್ಎಸ್

'ಬೆಳಕನ್ನೂ', ಅದು ಬಂದು ದಾರಿತೋರಿಸೀತು ಎಂಬ ಆಶೆಯನ್ನೂ ಕುರಿತ ಶ್ರದ್ಧೆಯನ್ನು ಪೂರ್ತಿ ಬಿಟ್ಟುಕೊಟ್ಟಿಲ್ಲ 'ಗೋಡೆ'ಯಂಥ ಸಂಕಲನ ಎದುರಿಗಿದ್ದೂ ಈ ಮಾತನ್ನು ಹೇಳಬೇಕಾಗುತ್ತದೆ. ಆದರೆ ನಿಧಾನವಾಗಿ ಈ 'ಆಶೆ' ಭರವಸೆಯ ಬೇರಿನ ನೆಲೆ ಬಿಟ್ಟು ಹಾರೈಕೆಯಾಗುತ್ತ ಸಾಗುವಂತೆ ತೋರುತ್ತದೆ.

**ಹೊರಗೆ ಮಳೆ, ಗುಡುಗು, ಮಿಂಚು;**
**ಹಾಳು ವಿದ್ಯುದ್ದೀಪ ಹೋಯ್ತು ಮತ್ತೆ'**
**ಸುತ್ತ ಭೋರೆಂಬ ದಂಡಕಾರಣ್ಯ-**
**ಎಲ್ಲಿ ದಾರಿ?**
**ತಡಕು ಬೆಂಕೀಕಡ್ಡಿ ಪೊಟ್ಟಣವ; ಗೀಚು;**
**ಹೊತ್ತಿಸಯ್ಯಾ ಮತ್ತೆ ಹಳೆಯ ಹಣತೆ**

*(ಮಳೆಯ ರಾತ್ರಿಯ ಒಂದು ಕ್ಷಣ: ಕಾರ್ತೀಕ)*

**ಈ ಮಳೆಗಾಳಿ ತಗ್ಗಿ, ವಾತಾವರಣ ಹದವಾಗಿ**
**ತಿಂಗಳು ಹಬ್ಬ ತಬ್ಬಿಕೊಳ್ಳಲಿ ನಿನ್ನ ಮುಗ್ಧಹಾಸು**

*(ನೀನಿದ್ದಾಗ-ನೀನಿರದಾಗ: ಕಾರ್ತೀಕ)*

**ಕಾಡು ಬೇಗೆಗೆ ಸುಟ್ಟು ಕರುಕಾದ ಬೆಟ್ಟದ ಮುಡಿಗೆ**
**ಮಳೆಹೊಯ್ದು ಮತ್ತೆ ಹೊಸ ಹಸಿರು ಮೂಡುವುದು**

*(ಅನ್ಯಾಯ: ತೆರೆದ ದಾರಿ)*

**ಈ ಸುಡುವ ನೆಲಮುಗಿಲುಗಳ ನಡೂಮಧ್ಯೆ**
**ಮರಮರದ ಹಾಸುಗೆಯಲ್ಲಿ ಮಂದಹಾಸದ ನಿದ್ದೆ'**

*(ಚೈತ್ರ ಮುಖ: ತೆರೆದ ದಾರಿ)*

**ಸುತ್ತ ಉರಿವ ದೀಪಗಳಿಗೆ**
**ಹೊಸ ಬತ್ತಿಯ, ತೈಲವ,**
**ಹೊಸ ಗಾಡಿಗೆ ಹೊಸ ಗಾಲಿಯ-**
**ಹೊಸ ಕುದುರೆಯ ಜೋಡಿಯ**

*(ಹೊಸ ವರ್ಷದ ಕೊಡುಗೆ: ಗೋಡೆ)*

ಆದರೆ 'ಕಾಡಿನ ಕತ್ತಲಲ್ಲಿ', 'ಪ್ರೀತಿಯಿಲ್ಲದ ಮೇಲೆ' ಮತ್ತು ನಂತರದ ಕವಿತೆಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ, ಮೇಲಿನ 'ಉಡುಗಣವೇಷ್ಟಿತ, ಚಂದ್ರ ಸುಶೋಭಿತ ದಿವ್ಯಾಂಬರ ಸಂಚಾರಿ'ಯ ನೆಲೆಯೊಂದಕ್ಕಾಗಿ ಸದಾ ಇದ್ದ ಭಕ್ತಿ, ಆರಾಧನಾಭಾವ ಬದಲಾಗುತ್ತಾ ಸಾಗಿ 'ಕಣ್ಣೀರಿನಲಿ ಮಣ್ಣಧೂಳಿನಲಿ ಹೊರಳುತ್ತಿರುವವರ ಸಹಚಾರಿ' ಆಗುವ ನೆಲೆಯತ್ತ ಕವಿ ಒಲಿದಿದ್ದನ್ನು ಕಾಣಬಹುದು. ಅಂದರೆ ಮಾನವನ ಬದುಕಿನ ನೆಲೆ ಈಗ 'ಮರ್ತ್ಯ'ತೆಗಾಗಿ

ತ್ಯಾಜ್ಯವೆನಿಸದು. ಬದಲಾಗಿ ಮಾನವಾತಿ ಮಾನವರ ಸಾಮಾನ್ಯಾತಿಸಾಮಾನ್ಯ ಬದುಕಿನ ಬವಣೆ, ತೊಳಲಾಟ ಸಂಕಟಗಳೇ ಕಾವ್ಯದ ಕೇಂದ್ರನೆಲೆಯಾಗುತ್ತದೆ. 'ಪರ'ದತ್ತ ಮುಖವೆತ್ತಿ ಹಲುಬುವಿಕೆ ಹೆಚ್ಚು ಕಡಿಮೆ ಮಾಯವೇ ಆದಂತೆ ತೋರುತ್ತದೆ. ಸಗ್ಗದ ಒಲವು, ಕವಿಯ ವ್ಯಕ್ತಿತ್ವದ ಆಚೆಗಿನ ಅನುಗ್ರಹವಾಗಿ ಹಿಂದೆ ಕಂಡಿದ್ದರೆ, ಕವಿಯ ಹೃದಯದಲ್ಲೇ ಈಗ ಆ ಒಲವಿನ ಒರತೆಯಿರುವುದರ ಅರಿವು ಪಕ್ವವಾಗುತ್ತ ಸಾಗಿದೆ. ಈ ಸ್ಥಿತಿಯಲ್ಲಿ ನೆಲ-ಮುಗಿಲು-ಎರಡಕ್ಕೂ ಮಾನವ ಹೃದಯವೇ ಜಾಗವಾಗುತ್ತದೆ.

*'ದೀಪವಿರದ ದಾರಿಯಲ್ಲಿ / ತಡವರಿಸುವ ನುಡಿಗಳಿ'ಗೆ, 'ಬಾಯಿಲ್ಲದ ಮೌನದಲಿ/ ಅಲೆಯುತ್ತಿರುವ ದನಿಗಳಿ'ಗೆ, 'ಬಿರುಬಿಸಿಲಿನ ತುಳಿತದಲ್ಲಿ / ಸೊರಗಿ ಹೋದ ಮಿಡಿಗಳಿ'ಗೆ, 'ಬಿರುಗಾಳಿಗೆ ಗರಿಯುದುರಿದ / ಹೊಂಗನಸಿನ ಮರಿಗಳಿ'ಗೆ ಕರೆದು ಕರೆದು ಕವಿ ಹೇಳುತ್ತಾರೆ: 'ಉಸಿರನಿಡುವೆ / ಹೆಸರ ಕೊಡುವೆ / ಬನ್ನಿ ನನ್ನ ಹೃದಯಕೆ'* ('ಬನ್ನಿ ನನ್ನ ಹೃದಯಕೆ')

ಈ ಹೊಸದಾದ ಪರಮಾನುಕಂಪದ ನೆಲೆಯಲ್ಲಿ ನೆಲ-ಮುಗಿಲಿನ ಪರಸ್ಪರ ವಿರುದ್ಧವಾದ ಕರೆಗಳಿಂದ ವಿಚಲಿತವಾಗಿರದ, ತನ್ನದೇ ನೆಲೆಯೊಂದನ್ನು ಕಂಡುಕೊಂಡ ಸುಭದ್ರವಾದ ಆತ್ಮವಿಶ್ವಾಸದಿಂದ ಮಾನವ ಕುಲದ ಮೂಲಪುರಷ ಮನು ಕವಿಯ ಮನದಾಳದಿಂದ ಹೇಳುತ್ತಾನೆ: *"ನಾನೊಲ್ಲೆ / ಇರುವ ಈ ಎಲ್ಲವನ್ನೂ ನಿರ್ನಾಮಗೊಳಿಸಿ/ ನಾಳಿನ ದಿವಸ ನಾನು ನನ್ನ ಪರಿವಾರ / ಉಳಿದು ಬದುಕುವ ಭಾಗ್ಯ ನನಗೆ ಬೇಡ / ನೀ ವರ್ಣಿಸಿದ ವಾಸ್ತವದ ಒಂದಂಶ / ನಾನೂ ಕೂಡ / ಕೊಚ್ಚಲಿ ಬಿಡು ನನ್ನನನ್ನೂ ಸೇರಿಸಿಕೊಂಡು / ಈ ಮಹಾ ಪ್ರವಾಹ / ನನಗಿಲ್ಲ ನಾನೊಬ್ಬನೇ ಬದುಕುವ ದಾಹ / ನಾಳೆ ಬೆಳೆದೀತು ಹೊಸ ಮಣ್ಣನಲ್ಲಿ ಬೇರೂರಿ / ನನ್ನಲ್ಲಿರುವ ಒಳಿತೇನಾದರೂ/ ಕೊಂಬೆ-ರಂಬೆಗೆ ಪುಟಿದ ಹೊಸ ಹೂವು-ಚಿಗುರು'.* ('ಹೊಸ ಹುಟ್ಟು')



# ಪ್ರೀತಿಯ ಸಾನಿಧ್ಯ......

ವಿಷ್ಣು ನಾಯ್ಕ

**ಕ**ವಿ ಜಿಎಸ್‌ಎಸ್ ಅವರ ಕವನಗಳ ಸಹವಾಸದಲ್ಲಿರುವುದೆಂದರೆ, ಕವಿತೆಯ ಪರಮ ಗುರಿಯ ಸುಖದ ಸಹವಾಸದಲ್ಲಿ ಇದ್ದಂತೆ. 1951ರಲ್ಲಿ ಬಂದ 'ಸಾಮಗಾನ'ದಿಂದ ಮೊದಲಾಗಿ 1999ರಲ್ಲಿ ಪ್ರಕಟವಾದ 'ವ್ಯಕ್ತಮಧ್ಯ'ದವರೆಗಿನ 13 ಸಂಕಲನಗಳಲ್ಲೂ ಅವರು ಒಬ್ಬ ಸಹಜ ಕವಿಯಾಗಿ ನಮ್ಮ ಮುಂದೆ ನಿಲ್ಲುತ್ತಾರೆಯೇ ವಿನಃ ಯಾವುದೋ ಒಂದು ಪೂರ್ವಸಿದ್ಧಾಂತದ ವಾರಸುದಾರರಂತೆ ಅಲ್ಲ. ಅದನ್ನು ಹೀಗೂ ಹೇಳಬಹುದು— ತನ್ನೊಳಗೆ ತುಂಬಿಕೊಂಡ ಯಾವುದೋ ನಂಬಿಕೆಯ ಪರವಾಗಿ ವಕಾಲತ್ತು ನಡೆಸುವುದಕ್ಕಾಗಿ ಅವರು ತಮ್ಮ ಸೃಜನ ಶಕ್ತಿಯನ್ನು ದುಡಿಸಿಕೊಂಡವರಲ್ಲ. ಲೋಕ ಅಹುದಹುದೆಂಬ ರೀತಿಯಲ್ಲಿ ಕಾಂತಾಸಮ್ಮಿತದ ಸೆರಗು ಹಿಡಿದು ಬರವಣಿಗೆಯನ್ನು ನಡೆಸಿಕೊಂಡು ಬಂದ ಹೊಸಗನ್ನಡ ಕಾವ್ಯಪರಂಪರೆಯ ಕೆಲವೇ ಕೆಲವು ಮುಖ್ಯರಲ್ಲಿ ಜಿಎಸ್‌ಎಸ್ ಒಬ್ಬರು.

'ನಾನು ಬರೆಯುತ್ತೇನೆ
ಸುಮ್ಮನಿರಲಾರದ್ದಕ್ಕೆ
ನನ್ನ ವೇದನೆ ಸಂವೇದನೆಗಳನ್ನು
ಕ್ರಿಯೆ ಪ್ರಕ್ರಿಯೆಯಗಳನ್ನು ದಾಖಲು ಮಾಡುವುದಕ್ಕೆ

*     *     *     *

ನಾನು ಬರೆಯುತ್ತೇನೆ
ನನ್ನನ್ನು ನಾನು ಕಂಡುಕೊಳ್ಳುವುದಕ್ಕೆ

*     *     *     *

ನಾನು ಬರೆಯುತ್ತೇನೆ
ಖುಷಿಗೆ, ನೋವಿಗೆ
ರೊಚ್ಚಿಗೆ ಮತ್ತು ಹುಚ್ಚಿಗೆ
ಅಥವಾ ನಂದಿಸಲಾರದ ಕಿಚ್ಚಿಗೆ

ಶಿವರುದ್ರಪ್ಪ 'ಸುಮ್ಮನಿರಲಾರದ್ದಕ್ಕೆ' ಬರೆದವರು. ತಮ್ಮ ವೇದನೆ, ಸಂವೇದನೆಗಳನ್ನು ದಾಖಲೆ ಮಾಡುವುದಕ್ಕೆ ಬರೆದವರು. ತನ್ನನ್ನು ತಾನು ಕಂಡುಕೊಳ್ಳುವುದಕ್ಕಾಗಿಯೂ ಬರೆದವರು. ಖುಷಿಗಾಗಿ, ನೋವಿಗಾಗಿಯೂ ಬರೆದವರು. ಆದರೆ ರೊಚ್ಚಿಗೆ ಮತ್ತು ನಂದಿಸಲಾರದ ಕಿಚ್ಚಿಗೆ ಬರೆದಿದ್ದೇನೆ ಎಂದು ಅವರು ತಮ್ಮ ಕವನದಲ್ಲಿ ಹೇಳಿಕೊಂಡರೂ ಅಂಥ ಅನುಭವ ಸಹೃದಯ ಓದುಗರಿಗೆ ಅಷ್ಟಾಗಿ ಆದಂತಿಲ್ಲ.

ಜಿಎಸ್‌ಎಸ್ ಪ್ರೀತಿಯಿಂದ ಪ್ರೀತಿಗಾಗಿ ಬದುಕಿದ ಕವಿ. ಬರೆದ ಕವಿ. ಆ ಪ್ರೀತಿಯ ಬಣ್ಣ ಬೆಳ್ಳಗೆ. ಬಿಳಿ ಬಣ್ಣದಲ್ಲಿ ಏಳು ಬಣ್ಣಗಳು ಸೇರಿಕೊಂಡಿರುವಂತೆ ಇವರ ಪ್ರೀತಿಯ ಮಾತಿನಲ್ಲೂ ಕೂಡ. ಅದು ಅನುರಾಗವಾಗಿ, ಒಲವಾಗಿ, ವಾತ್ಸಲ್ಯವಾಗಿ, ಮಮತೆಯಾಗಿ, ಮೋಹವಾಗಿ, ನಸುಮುನಿಸಾಗಿ, ಅಕ್ಕರೆಯ ಸಕ್ಕರೆಯಾಗಿ—ಹೀಗೆ ಒಂದೊಂದು ಕಡೆ ಒಂದೊಂದು ಎಳೆಯಾಗಿ ಅನುಭವಕ್ಕೆ ಸಿಗುತ್ತದೆ. 'ಪ್ರೀತಿಯಿಲ್ಲದೆ ಮೇಲೆ—ಹೂವು ಅರಳೀತು ಹೇಗೆ? ಮೋಡ ಕಟ್ಟೀತು ಹೇಗೆ? ಹನಿಯೊಡೆದು ಕೆಳಗಿಳಿದು ನೆಲಕ್ಕೆ ಹಸಿರು ಮೂಡೀತು ಹೇಗೆ?' ಎನ್ನುವ ಪ್ರಶ್ನೆಗಳಲ್ಲಿ ಈ ಎಲ್ಲವೂ ಒಳದನಿಯಾಗಿ ನಿಂತಿವೆ.

ಜಿಎಸ್‌ಎಸ್ ನೆಲದ ಕವಿ. ನೆಲ-ಮುಗಿಲುಗಳ ಬಗ್ಗೆ ಅಲ್ಲಲ್ಲಿ ಇವರು ಹಾಡುತ್ತಾರೆ. ಅದು ಬೇರೆ ಬೇರೆ ಪ್ರತಿಮಾ ಸೃಷ್ಟಿಗಾಗಿ. ಆದರೆ ನಿಲುಮೆಯಲ್ಲಿ ಇವರು ಮುಖ್ಯವಾಗಿ ನೆಲದ ಕವಿಯೇ. 'ಸ್ವರ್ಗ'ಕ್ಕೆ ಎಂಬ ಇವರ ಒಂದೇ ಕವನ ಸಾಕು—ಈ ಮಾತಿಗೆ ಸಮರ್ಥನೆಯಾಗಿ. ಅಲ್ಲಿ (ಸ್ವರ್ಗದಲ್ಲಿ) ಹಸಿವಾಗುವುದೇ ಇಲ್ಲ, ಬಾಯಾರಿಕೆಯೂ ಇಲ್ಲ. ಇಂಥ ಹಸಿವಿರದ, ತೃಷೆಯಿರದ ಬದುಕು ಬದುಕೇ ಅಲ್ಲ ಎಂಬ ಖಚಿತ ನಿಲುವು ಈ ಕವಿಯದು. 'ಸಗ್ಗವನೇರಲು ಬಯಸುವುದೇತಕೆ? ಅಂದದ ಚೆಂದದ ಭೂಮಿಗೆ ಬಂದು' ಎಂದು ಹಾಡಿದ ನಮ್ಮ ಕರಾವಳಿ ಕರ್ನಾಟಕದ ವರಕವಿ ದಿನಕರ ದೇಸಾಯಿಯ ನಿಲುವಿಗೆ ಬಹು ಹತ್ತಿರವಾದ ಸ್ವಭಾವ ಈ ಕವನದ ಸಾಲುಗಳಲ್ಲಿವೆ.

ಈ ಭೂಮಿಯ ಮೇಲೆ ಬೆಳೆದ, ಅರಳಿದ ನಿಸರ್ಗವನ್ನು ಪೂರ್ಣ ಮನಸ್ಸಿನಿಂದ ಅನುಭವಿಸಿ ಆನಂದ ಪಡೆದ ಕವಿ ಈತ. ಹಾಗೆ ನೋಡಿದರೆ ಜಿಎಸ್‌ಎಸ್ ಆಗಲಿ, ನಮ್ಮ ಕಣವಿಯವರಾಗಲಿ ತಮ್ಮ ಕಾವ್ಯಕೃಷಿಯ ಆರಂಭದ ದಿನಗಳಲ್ಲಿ ನಿಸರ್ಗ ಚೆಲುವಿನ ಆರಾಧನೆಗೇ ವಿಶೇಷ ಒತ್ತು ನೀಡಿದವರು. ಜಿಎಸ್‌ಎಸ್ ಅವರು ಚೆಲುವನ್ನು ಆರಾಧಿಸುವ ಮತ್ತು ವ್ಯಾಖ್ಯಾನಿಸುವ ಬಗೆಗೆ ಒಂದು ಉತ್ಕೃಷ್ಟ ಉದಾಹರಣೆಯಾಗಿ ಅವರ 'ಮಲ್ಲಿಗೆ' ಎಂಬ ಕವನ ನಮ್ಮ ಎದುರಿಗಿದೆ.

'ನೋಡು ಇದೊ ಇಲ್ಲರಳಿ ನಗುತಿದೆ
ಏಳು ಸುತ್ತಿನ ಮಲ್ಲಿಗೆ
ಇಷ್ಟು ಹಚ್ಚನೆ ಹಸುರ ಗಿಡದಿಂ-
ದೆಂತು ಮೂಡಿತೋ ಬೆಳ್ಳಗೆ!'

ಆರಂಭದ ಎರಡು ಸಾಲಿನಲ್ಲಿ ಹೇಳಿಕೊಳ್ಳುವಂಥ ಕಾವ್ಯಾಂಶವೇನೂ ಇಲ್ಲ. ಮುಂದಿನ ಎರಡು ಸಾಲುಗಳು ಕವಿಯ ಒಳನೋಟಕ್ಕೆ ಸಾಕ್ಷಿಯಾಗಿವೆ. ಆ ನಂತರ ಬರುವ ಎಲ್ಲ ನುಡಿಗಳು ತಮ್ಮ ನವೀನ ಕಲ್ಪನೆಯಿಂದ ಭಾವನಿರ್ಭರತೆಯಿಂದ ಪರಸ್ಪರ ಸ್ಪರ್ಧೆಗೆ ನಿಂತಂತಿವೆ.

ಕವಿಗೆ ಗಿಡದಲ್ಲಿರುವ ಒಂದೇ ಒಂದು ಮಲ್ಲಿಗೆ ಹೂವು ಮುಂದೆ ನೂರಾರು ಹೂವುಗಳನ್ನು ಅರಳಿಸುವ ಮುನ್ಸೂಚನೆಯಾಗಿ ಕಂಡಿದೆ. ಅದಕ್ಕೆ ಉಪಮೆಯಾಗಿ ನಭದಲ್ಲಿ ನೂರು ತಾರೆಗಳರಳುವ ಮೊದಲು ಕಾಣಿಸಿಕೊಳ್ಳುವ 'ಬೆಳ್ಳಿ'ಯನ್ನು ಕವಿ ಬಳಸಿಕೊಳ್ಳುತ್ತಾನೆ.

ಅರಳಿ ನಿಂತ ಒಂದು ಹೂವು ಎಷ್ಟೆಲ್ಲ ಬಗೆಯಲ್ಲಿ ಒಬ್ಬ ಕವಿಯ ಮನಸ್ಸನ್ನು ತಟ್ಟಬಹುದು ಎಂಬ ಅದ್ಭುತವನ್ನೂ ಕೂಡ ಈ ಕವನ ತೋರಿಸಿದೆ. ಒಂದೆಡೆ ಅರಳಿನಿಂತ ಈ ಮಲ್ಲಿಗೆ ಸತ್ವಶೀಲನ ಧ್ಯಾನಮೌನವೇ ಅರಳಿ ಬಂದಂತೆ ಕಂಡರೆ, ಇನ್ನೊಂದು ಕಡೆ ಒಲವು ತುಂಬಿದ ಮುಗುದೆಯ ಎದೆಯಿಂದ ಒಗೆದ ನಲ್ನುಡಿಯಂತೆ ತೋರಿದೆ. ಒಮ್ಮೆ ಕವಿಯ ಮನದಿಂದ ಮೆಲ್ಲನೆ ಉದಿಸಿ ಅರಳಿ ಬರುವ ಕಲ್ಪನೆಯಾಗಿ ಕಂಡರೆ, ಇನ್ನೊಮ್ಮೆ ಮೊಗ್ಗಿನಲ್ಲಿ ಮಲಗಿದ್ದ ಈ ಚೆಲುವು ಈಗ ತಾನೆ ಕಣ್ಣು ತೆರೆದಂತೆ ಕಾಣುತ್ತಿದೆ. ಈ ಮಲ್ಲಿಗೆಯ ದಳಗಳನ್ನು ಹಸುಳೆ ಕಾಣುವ ಕನಸಿಗೆ ಅನ್ವಯಿಸುವ ಕವಿಕಲ್ಪನೆಯಂತೂ ಅಪೂರ್ವವಾದದ್ದು. ಇದರ ಕಂಪನ್ನು ಮಹಾತ್ಮರ ಮನಸ್ಸಿಗೆ ಹೋಲಿಸಿದ್ದೂ ಕೂಡ.

'ಸೌಂದರ್ಯ ಎಂದರೇನು?' ಎಂಬ ವಿಶ್ಲೇಷಣೆಗೆ ತೊಡಗಿದ್ದ ಡಿ.ವಿ.ಜಿ. ಅವರು, ಮನಸ್ಸನ್ನು ತಟ್ಟನೆ ಹಿಡಿದು ನಿಲ್ಲಿಸಿ, ಕರಗಿಸಿ ತಿರುಗಿಸುವ ಶಕ್ತಿಯೇ ಸೌಂದರ್ಯ ಎಂಬುದಾಗಿ ಒಂದೆಡೆ ಬರೆದದ್ದನ್ನು ಓದಿದ ನೆನಪು (ಬಹುಶಃ 'ಜೀವನ ಸೌಂದರ್ಯ ಮತ್ತು ಸಾಹಿತ್ಯ' ಗ್ರಂಥದಲ್ಲಿರಬೇಕು). ಆಗತಾನೆ ಅರಳಿ ನಿಂತ ಮಲ್ಲಿಗೆಯ ಚೆಲುವಿನ ಬಗ್ಗೆ ಜಿಎಸ್ಎಸ್ ಹೇಳುವ,

**'ಹರಿವ ಮನವನು ಹಿಡಿದು ಒಂದೆಡೆ**
**ನಿಲಿಸಿ ತೊಳದಿದೆ ಹೂವಿದು**
**ಚೆಲುವು ಬಾಳನು ಹಸನುಗೊಳಿಸುವ**
**ಅಚ್ಚರಿಯ ಪರಿ ಎಂಥದು!'**

ಎಂಬ ನುಡಿಯೂ ಕೂಡ ಅದೇ ಆಶಯಕ್ಕೆ ಹತ್ತಿರದ್ದು. ಇಲ್ಲಿಯ ಸೌಂದರ್ಯ ಮನಸ್ಸನ್ನು ಹಿಡಿದು ನಿಲ್ಲಿಸುವುದಷ್ಟೇ ಅಲ್ಲ, ಪನ್ನೀರಿನಿಂದ ತೊಳೆದು ಸ್ವಚ್ಛಗೊಳಿಸಿದೆ ಕೂಡ.

ನಿಸರ್ಗದ ವಿಸ್ಮಯಗಳಿಗೆ ದನಿಕೊಡುವ ಇವರ ಕಾವ್ಯಕಸುವಿಗೆ ದಾಖಲೆಯಾಗಿರುವ ಈ ಸಾಲುಗಳನ್ನು ನೋಡಿ:

**'ಯಾರು ಕೊಟ್ಟರೂ ಬಾನಿಗೊಂದು ಬಂಗಾರದ ಮೆಡಲು!'**

*(ಒಂದು ಚಿತ್ರ)*

'ಸಂಜೆ ಬಾನಿನಂಚಿನಲ್ಲಿ
ಬಿದ್ದ ಬಿದಿಗೆ ಚಂದಿರ
ಶಚೀ ತೀರ್ಥದಾಳದಲ್ಲಿ
ಶಕುಂತಲೆಯ ಉಂಗುರ' (ಶಕುಂತಲ ಸಂಧ್ಯೆ)

'ಬಂದ ಮಂದಾನಿಲದ ಮಿದುಬೆರಳು ನೇವರಿಸಿತ್ತು
ಕಾತರದಿ ಕಾಯುತಿಹ ತರುಲತೆಯ ತಲೆನವಿರ
ಬಲು ನಲ್ಮೆಯಿಂದ......' (ಒಂದು ಬೆಳಗು)

ಇಂಥ ಬಹಳಷ್ಟು ಸಾಲುಗಳನ್ನು ದಾಖಲಿಸುತ್ತ ಹೋಗಬಹುದು. ನಿಸರ್ಗದ ತಂಪು ಮುಖದ ಜೊತೆಗೆ ಉರಿಮುಖವನ್ನು ಈ ಕವಿ ತೆರೆದು ತೋರಬಲ್ಲ. 'ಬೇಸಿಗೆಯ ಇರುಳು' ಈ ಮಾತಿಗೊಂದು ತಕ್ಕ ಉದಾಹರಣೆಯಾಗಬಹುದು.

'ಜ್ವರ ಬಂದವರೊಲು ಪರಿತಪಿಸುತ್ತಿವೆ
ಸುತ್ತಲೂ ತರುಮರ ಸಂಸಾರ
ನಕ್ಷತ್ರಾಗ್ನಿಯ ಚಿತೆಯೊಳು ನಡೆದಿದೆ
ಗಾಳಿಯ ಶವಸಂಸ್ಕಾರ.'

ಹೆಣ್ಣಿನ ಕುರಿತು ಬರೆದ ಜಿಎಸ್ಎಸ್ ಕವನಗಳು ಅನನ್ಯ ಎನ್ನುವಂತಿವೆ. 'ಸ್ತ್ರೀ' ಎಂಬ ಒಂದು ಪುಟ್ಟ ಕವನವೇ ಸಾಕು ಇವರ ಸ್ತ್ರೀ ಸಂವೇದನೆಯ ಅಸಲೀ ಗುಣಕ್ಕೆ. ಹೆಣ್ಣು ಅಸಾಮಾನ್ಯಳು ಎಂಬುದನ್ನು ಮುಕ್ತವಾಗಿ ಒಪ್ಪಿಕೊಳ್ಳುವ ಕವಿ ಈತ. ಅಸಾಮಾನ್ಯಳೆಂದರೆ, ಅದು ಹೇಗೆ? ಏಕೆ? ಅಂದರೆ ಅವಳು,

'ಆಕಾಶದ ನೀಲಿಯಲ್ಲಿ
ಚಂದ್ರ-ತಾರೆ ತೊಟ್ಟಿಲಲ್ಲಿ
ಬೆಳಕನಿಟ್ಟು ತೂಗಿದಾಕೆ-

ಹಸುರನುಟ್ಟ ಬೆಟ್ಟಗಳಲಿ
ಮೊಲೆಯ ಹಾಲನಿಳಿಸಿ
ಬಯಲ ಹಸುರ ನಗಿಸಿದಾಕೆ-

ಮರ ಗಿಡ ಹೂ ಮುಂಗುರಳನು
ತಂಗಾಳಿಯ ಬೆರಳ ಸವರಿ
ಹಕ್ಕಿಗಿಲಕ ಹಿಡಿಸಿದಾಕೆ-

ಮನೆಮನೆಯಲಿ ದೀಪ ಮುಡಿಸಿ
ಹೊತ್ತು ಹೊತ್ತಿಗನ್ನ ಉಣಿಸಿ
ತಂದೆ-ಮಗುವ ತಬ್ಬಿದಾಕೆ'

ಮುಂದುವರಿದು ಕವಿ ಕೇಳುತ್ತಾನೆ, 'ನಿನಗೆ ಬೇರೆ ಹೆಸರು ಬೇಕೆ, ಸ್ತ್ರೀ ಅಂದರೆ ಅಷ್ಟೆ ಸಾಕೆ?'

ನಿಸರ್ಗ ಮತ್ತು ಹೆಣ್ಣಿನ ಕುರಿತ ಇಲ್ಲಿಯ ಭಾವಸಮನ್ವಯ ಅನನ್ಯವಾಗಿದೆ:

**ಇವಳು ಹಿಗ್ಗಿನ ಬುಗ್ಗೆ, ಋತು ವಸಂತನ ಲಗ್ಗೆ**
**ನಮ್ಮ ಮನೆಗೆ!**
**....................**
**ಹೊರಗೆ ಮಂಜರಲೇನು? ಒಳಗೆ ನಿತ್ಯವೂ ಇವಳ**
**ನಗೆಮಲ್ಲಿಗೆ**
**........................**
**ಚಂದನದ ಗೊಂಬೆಗೂ ಜೀವ ತುಂಬುವ ಚದುರೆ**
**ಸೃಷ್ಟಿಮಾತೆ**
**ಎಲ್ಲರಿಗೂ ತಾಯಾಗಿ ಲಾಲಿ ಹಾಡುವಳಿವಳು**
**ಲೋಕಮಾತೆ**

*(ನಗೆ ಮಲ್ಲಿಗೆ)*

ಹೆಣ್ಣಿನ ಪ್ರೀತಿ, ಅರ್ಪಿಸಿಕೊಳ್ಳುವಿಕೆ, ಸಂಯಮ, ತ್ಯಾಗಗಳೆಲ್ಲವನ್ನೂ ಕಣ್ಣೆದುರು ಕಟ್ಟುವ ಸಾಲುಗಳಿವು.

ಜಡೆ ಜಿಎಸ್‌ಎಸ್ ಅವರ ಅತ್ಯುತ್ಕೃಷ್ಟ ಕವನಗಳಲ್ಲಿ ಒಂದೆಂದುಕೊಂಡವನು ನಾನು. ಲಲನೆಯರ ಬೆನ್ನಿನೆಡೆ ಹಾವಿನೊಲು ಜೋಲುವ ಜಡೆಯನ್ನು ಎಷ್ಟೊಂದು ದೃಷ್ಟಿ ವೈವಿಧ್ಯಗಳೊಂದಿಗೆ ಈ ಕವಿ ಅರ್ಥೈಸುತ್ತಾ ಹೊರಟಿದ್ದಾರೆ ಎಂಬುದನ್ನು ಓದಿಯೇ ಅನುಭವಿಸಬೇಕು. ವೈಯಕ್ತಿಕ ನೆಲೆಯನ್ನು ಮೀರಿ ವಿಶ್ವವ್ಯಾಪಿಯಾಗಿ ಹರಡಿಕೊಳ್ಳುವ ಈ ಜಡೆಯ ಮೋಡಿ ಮತ್ತು ಮಹತಿಯನ್ನು ಅದ್ಭುತವಾಗಿ ವರ್ಣಿಸಲಾಗಿದೆ.

**'ಕಾಳಿಂದಿಯಂತಿಳಿದು, ಕೊರಳೆಡೆಗೆ ಕವಲೊಡೆದು**
**ಅತ್ತಿತ್ತ ಹರಿದ ಜಡೆ'**

ಕವಿಗೆ ಬೇಳ್‌ಕೊಂಡಿಯಂತ ಜಡೆಯಾಗಿಯೂ ಕಾಣುತ್ತದೆ

**'ಕುರುಕುಲ ಜೀವಾಕರ್ಷಣ ಪರಿಣತ-ಆ**
**ಪಾಂಚಾಲಿಯ ಜಡೆ**
**ಸೀತೆಯ ಕಣ್ಣೀರೊಳು ಮಿಂದ ಜಡೆ'**

ಇವನ್ನೆಲ್ಲ ನೆನೆಯುತ್ತ ಕವಿ ಉದ್ಗರಿಸುತ್ತಾನೆ—'ಓ ಓ ಈ ಜಡೆಗೆಲ್ಲಿ ಕಡೆ!' ಕವಿ ಕಲ್ಪನೆ ಗರಿಬಿಚ್ಚಿ ಆಕಾಶದುದ್ದಕ್ಕೂ ಹರಡಿಕೊಳ್ಳತೊಡಗುತ್ತದೆ. ಆಗ ಅವನಿಗೆ 'ಒಮ್ಮೊಮ್ಮೆ ಮುಗಿಲಲ್ಲಿ ತೇಲುತ್ತ ಬರುವಂಥ ಬೆಳಕ್ಕಿಗಳ ಜಡೆ' ಕಣ್ಣಿಗೆ ಕಟ್ಟುತ್ತದೆ. 'ಶ್ರೇಣಿ ಶ್ರೇಣಿಗಳಾಗಿ

ಹರಿದಿರುವ ಗಿರಿಯ ಜಡೆ' ಕಾಣಿಸುತ್ತದೆ. 'ಮುಂಗಾರು ಮೋಡಗಳು ದಿಕ್ಕು ದಿಕ್ಕಿಗೆ ಬಿಚ್ಚಿ ಹರಡಿರುವ ಮಳೆಯ ಜಡೆ' ಎದುರಾಗುತ್ತವೆ. 'ಚಂದ್ರಚೂಡನ, ವ್ಯೋಮಕೇಶನ ವಿಶ್ವವನ್ನೇ ವ್ಯಾಪಿಸುತ ತುಂಬಿರುವ ಜಡೆ' ಭಾಸವಾಗುತ್ತದೆ. ಇಷ್ಟೆಲ್ಲ ಜಡೆಯ ಅದ್ಭುತ ರಮ್ಯ ವಿನ್ಯಾಸಗಳೆಲ್ಲ ಕಣ್ಣೆದುರು ಇದ್ದರೂ, 'ಜಡೆಯಾಚೆ ತಿರುಗಿಸಿದ ತಾಯ ಮುಖ ಮಾತ್ರ ಇಂದಿಗೂ ಕಾಣದಲ್ಲ!' ಎಂಬ ಆತಂಕ ಈ ಕವಿಯದಾಗಿದೆ.

ಜಿಎಸ್‌ಎಸ್ ಎಂದೂ ಸಿನಿಕರಂತೆ ತಮ್ಮ ಕಾವ್ಯದಲ್ಲಿ ಮಾತಾಡುವುದಿಲ್ಲ. ಗೊಣಗಾಟ ಇಲ್ಲ. ಏನಿದ್ದರೂ ನೇರ. ಕವಿ ಅಂದೂ ಇಂದೂ ಆಶಾವಾದಿಯಾಗಿಯೇ, ಬರಬಿದ್ದ ನೆಲದಲ್ಲಿ ನಿಂತೇ ಭರವಸೆಯ ಮಳೆಗಾಗಿ ಹಂಬಲಿಸುತ್ತಾರೆ. 'ಕತ್ತಲನು ಗೆದ್ದು ನಿಲ್ಲುತ್ತೇನೆಂಬ ಜಿದ್ದನಿಂದಲ್ಲವಾದರೂ ಬೆಳಕು ಹರಿಯದೆ ಇದ್ದೀತೆ' ಎಂಬ ಆಶಾವಾದಿತನದಿಂದ 'ಹಣತೆ' ಹಚ್ಚಲು ಹೊರಡುತ್ತಾರೆ. ನನ್ನ ಹಣತೆ ಎಂಬ ಇವರ ಕವಿತೆಯಲ್ಲಿಯ ಕೊನೆಯ ಸಾಲು ಗಳು ಮಾರ್ಮಿಕವಾಗಿವೆ.

**ಆದರೂ ಹಣತೆ ಹಚ್ಚುತ್ತೇನೆ ನಾನೂ**
**ಕತ್ತಲೆಯನು ದಾಟುತ್ತೇನೆಂಬ ಭ್ರಮೆಯಿಂದಲ್ಲ**
**ಇರುವಷ್ಟು ಹೊತ್ತು ನಿನ್ನ ಮುಖ ನಾನು, ನನ್ನ ಮುಖ ನೀನು**
**ನೋಡಬಹುದೆಂಬ ಒಂದೇ ಒಂದು ಆಶೆಯಿಂದ.**

ಕೊನೆಯದಾಗಿ ಇತ್ತೀಚಿನ ಸಂಕಲನ 'ವ್ಯಕ್ತಮಧ್ಯ'ದ ಕುರಿತು ಎರಡು ಮಾತು: ಈ ಸಂಕಲನದಲ್ಲೂ ಕೂಡ ಬೆಳಕಿನ ಹಂಬಲವಿದೆ. ನಡೆದು ಬಂದ ದಾರಿಯ ಅವಲೋಕನವಿದೆ. ನಾಳೆಯ ಚಿಂತನೆಯಿದೆ. ವರ್ತಮಾನವನ್ನು ಕೆಣಕಿ ಕೇಳುವ ಪ್ರಶ್ನೆಗಳಿವೆ.

ಕಾವ್ಯಾರ್ಥ ಚಿಂತನೆಗೆ ಮೀಸಲಾದ ಜಿಎಸ್‌ಎಸ್ ಅನೇಕ ಕವನಗಳನ್ನು ನಾವು ಹಾದು ಬಂದಿದ್ದೇವೆ. 'ಕಾವ್ಯ ಕೃಪೆ', 'ಕಾವ್ಯ ಮಾರ್ಗ', 'ಹಳೆಯ ಹಾಡು', 'ಕವಿಯ ಮನಸು', 'ಪ್ರಕೃತಿ ಕವಿ' 'ಕಾವ್ಯಕ್ಕೆ ನಮನ', 'ಕವಿ ಕಾವ್ಯಕೆ' 'ಈ ಕವಿತೆ', 'ಕವಿ-ಕಿವಿ'—ಹೀಗೆ ಪಟ್ಟಿ ಬೆಳೆಯಬಹುದು. 'ವ್ಯಕ್ತಮಧ್ಯ'ದಲ್ಲಿ ಬಂದಿರುವ ಕವಿತೆಯಲ್ಲಿ ಬರುವ ಕೆಲವು ಸಾಲುಗಳನ್ನೂ ನೋಡೋಣ:

**ವಯಸ್ಸಾಗುವುದು ಕವಿಗೆ**
**ಕವಿತೆಗಳಿಗಲ್ಲ**

* * * *

**ಆಡುತ್ತವೆ ಕವಿತೆಗಳು**
**ಕವಿಯ ಸುತ್ತ ಅವರಿವರ ಜೊತೆಯಲ್ಲಿ**

* * * *

**ಸದಾ ಹೊಚ್ಚ ಹೊಸದಾಗುತ್ತ**
**........................................**
**ಹಾಡುತ್ತವೆ ಕವಿತೆಗಳು**
**ವಿಮರ್ಶಕರ ತಲೆಗಳಲ್ಲಿ**

*       *       *       *

**ಬೆಳೆಯುತ್ತವೆ ನಿಜವಾದ ಕವಿತೆಗಳು**
**ಸದಾ ಪ್ರಬುದ್ಧರ ಮನಸಿನಲ್ಲಿ**
**ಅನೇಕಾರ್ಥಗಳ ಹೊಳೆಯಿಸುತ್ತ**
**ಅಪ್ಸರೆಯರ ಸೊಬಗಲ್ಲಿ**
**ಒಂದೇ ಸಮನೆ ರೆಕ್ಕೆ ಬಿಚ್ಚಿ ಹಾರುತ್ತವೆ**
**ಮುಗಿಯದ ಬಯಲಲ್ಲಿ**

ಕವಿತೆ ಕವಿಯನ್ನು ಮೀರಿ ನಿಂತದ್ದು. ವಿಮರ್ಶಕನ ಆಚೆಗೂ ನಿಲ್ಲಬಲ್ಲದ್ದು. ಅದರ ವ್ಯಾಪ್ತಿ ಮುಗಿಯದ ಬಯಲು. ಅದು ಮನಸ್ಸಿನಿಂದ ಮನಸ್ಸಿಗೆ ಬೇರೆಯಾಗುತ್ತದೆ. ಪ್ರಬುದ್ಧರ ಮನಸ್ಸಿನಲ್ಲಿ ಬೆಳೆಯುತ್ತಲೂ ಇರುತ್ತದೆ ಎನ್ನುತ್ತಾರೆ ಜಿಎಸ್‌ಎಸ್.

ಈ ಸಂಕಲನದ 'ನಟ್ಟಿರುಳಲ್ಲಿ' ಎಂಬ ಕವನದಲ್ಲಿ ಬರುವ

**'ಬೆರಳನು ಕೊಟ್ಟು ದೊಡ್ಡವನಾದ ಅವನು,**
**ಕೇಳಿ ಕೀಳಾದೆ ನಾನು'**

ಎಂಬ ತೀರ್ಮಾನಕ್ಕೆ ಬರುವ ಚಿಂತಾಮಗ್ನ ದ್ರೋಣನ ಮಾತು ಕವಿಯ ಎಚ್ಚರದ ಮನಸ್ಸಿಗೆ ನಿದರ್ಶನವೆನ್ನಬೇಕು. ಸ್ಥಾವರಕ್ಕಳಿವುಂಟು ಎಂಬ ಪದ್ಯ ಮರ್ಮಸ್ಪರ್ಶಿಯಾದ ಕೆಲವು ಪ್ರಶ್ನೆಗಳನ್ನು ಎತ್ತುತ್ತದೆ. ಬಸವಣ್ಣನ ಕಾಲದ ನಂತರ ಕೂಡಲಸಂಗ ಪಾಚಿಗಟ್ಟಿ ನಾರುತ್ತಿರುವ ಸ್ಥಿತಿಯ ಮೇಲೆ ಬೆಳಕು ಚೆಲ್ಲಲಾಗಿದೆ. 'ಮರದೊಳಗಿನೆಚ್ಚರದ ಗಂಟೆಯೂ ಮೂಕ!' ಎಂಬ ವಿಡಂಬನೆಯಂತೂ ಮರ್ಮಬೇಧಿ.

ಕವಿ ಕಣವಿ ಕುರಿತ, 'ನಿಮ್ಮ ಹಾಗೇ ನಿಮ್ಮ ಕವಿತೆ' ಒಂದು ಅತ್ಯುತ್ತಮ ನುಡಿಚಿತ್ರ. ಈ ಸಂಕಲನದ ಕುರಿತೇ ಒಂದು ಪ್ರತ್ಯೇಕ ಲೇಖನ ಬೇಕು. ತನ್ನ ಸಮಕಾಲೀನ ಈ ಸಂಕಲನದಲ್ಲಿ ಕವಿ ಚೌಪದಿಗಳ ಚೌಕಟ್ಟನ್ನು ದಾಟಿಸಿ ಮೊದಲ ನುಡಿಯ ಕೊನೆಯ ಪದವು ಮುಂದಿನ ನುಡಿಗೆ ಅನಿವಾರ್ಯ ಕೊಂಡಿಯಾಗಿ ಸಲ್ಲುವಂತೆ ಹೊಸ ಪ್ರಯೋಗವನ್ನು ಮಾಡಿದ್ದಾರೆ. ಕವಿ ಎಕ್ಕುಂಡಿಯವರ ಕಥನ-ಕವನಗಳಲ್ಲಿ ಒಂದು ನುಡಿಯಿಂದ ಇನ್ನೊಂದು ನುಡಿಗೆ ಶಬ್ದ ಸಂಬಂಧವನ್ನು ಹೊಸೆಯುವ ಪ್ರಯೋಗಗಳು ಅಲ್ಲಲ್ಲಿ ನಾವು ಕಾಣುತ್ತಿದ್ದುದುಂಟು. ಆದರೆ ಈ ಕವಿಯೇ ಹೇಳುವಂತೆ ಮುಕ್ತವಾಗಿ ಮುನ್ನಡೆಯುವ ಒಂದು ರಚನಾ

ವಿಶೇಷವಾಗಿ ಸಂಕಲನದ ಎಲ್ಲ ಕವನಗಳಲ್ಲಿ ಕಾಣಿಸಿಕೊಳ್ಳುವ ನುಡಿಚೌಕಟ್ಟನ್ನು ದಾಟಿ ನಿಲ್ಲುವ ಇಷ್ಟು ದೊಡ್ಡ ಪ್ರಯೋಗ ನಾವು ಕಾಣುವುದು ಈ ಸಂಕಲನದಲ್ಲಿಯೇ ಸರಿ.

ಹಾಗೆ ನೋಡಿದರೆ ಈ ನೆಲದ ಯಾವ ಕವಿಯೂ ಸಂಪೂರ್ಣ ಶ್ರೇಷ್ಠನಲ್ಲ ಮತ್ತು ಒಬ್ಬ ಕವಿಯ ಎಲ್ಲ ಕೃತಿಗಳು ಶ್ರೇಷ್ಠವಾಗಿರಲು ಸಾಧ್ಯವಿಲ್ಲ. ಕವಿ ಜಿಎಸ್‌ಎಸ್ ಕೂಡ ಈ ಮಾತಿಗೆ ಹೊರತಲ್ಲ. ಆದರೆ ಈ ಲೇಖನದ ಆರಂಭದಲ್ಲಿ ನಾನು ಹೇಳಿದಂತೆ ಈ ಕವಿಯ ಕವನಗಳ ಸಹವಾಸದಿಂದಾಗಿ ನಾವು ಪುಷ್ಕಳ ಆನಂದವನ್ನು ಅನುಭವಿಸುತ್ತೇವೆ. ಬುದ್ಧಿ-ಭಾವಗಳ ವಿದ್ಯುದಾಲಿಂಗನದಿಂದ ಹೊರಹೊಮ್ಮುವ ಬೆಳಕಿನ ಸುಖವನ್ನು ಅನುಭವಿಸುತ್ತೇವೆ. ಹರಿತ ಮತಿಯಾದ ಒಬ್ಬ ಸಹಜ ಕವಿಯ ಸಾನಿಧ್ಯ ಸುಖದಲ್ಲಿದ್ದು ಖುಷಿಪಡುತ್ತೇವೆ.



# ಎದೆತುಂಬಿ ಹಾಡಿದ ಕವಿ

ಕೆ. ಪಿ. ನಟರಾಜ

**ದೂ**ರದ ಏಕಾಂತದ ಮನುಷ್ಯನೊಬ್ಬನ ಬಳಿಗೆ ಕವಿತೆಯು ತಂದಿಡುವ ಸಂಪದವೆಂತಹದು? ಅದು ವರಕವಿ ಬೇಂದ್ರೆಯವರು ಹೇಳುವ 'ಅರ್ಥವಿಲ್ಲ ಸ್ವಾರ್ಥವಿಲ್ಲ ಬರಿಯ ಭಾವಗೀತ'. ಶುದ್ಧ ಭಾವಗೀತೆಯ ಸೌಂದರ್ಯಾಭಿಜ್ಞ ವಿವೇಕದ ಧ್ವನಿ. ಅದು ವೃಕ್ಷಸಂಪತ್ತಿನ ಮೇಲೆ ಬಿದ್ದ ಮಳೆಯಂತೆ. ಹರಡಿದ ಬಿಸಿಲಿನಂತೆ ಆಹ್ಲಾದದ ನೋಟ.

ಜಿಎಸ್ಎಸ್ ರವರ 'ಎದೆತುಂಬಿ ಹಾಡಿದೆನು' ಕವಿತೆ ಹಾಡಾಗಿ ಅನುರಣಿಸಲು ಆರಂಭಿಸಿ ದಶಕಗಳೇ ಮುಗಿದುಹೋದವು. ನಂತರದ ಪೀಳಿಗೆಗಳ ಸ್ಮೃತಿಕೋಶವನ್ನು ಸೇರಿಹೋಗಿರುವ ಈ ಹಾಡು ಕೇಳುಗನನ್ನು ಪೂರ್ವಜನ್ಮದ ನೆನಪುಗಳಿಗೆ ಕರೆದುಕೊಂಡು ಹೋಗುವಂತಹ ಅನುಭವ ನೀಡುತ್ತದೆ. ಅವರ *ಉಡುಗಣವೇಷ್ಠಿತ*, ಎಲ್ಲೋ ಹುಡುಕಿದೆ ಇಲ್ಲದ ದೇವರ ಇತ್ಯಾದಿ ಕವಿತೆಗಳು ಕನ್ನಡ ಓದುಗನ, ಶ್ರೋತೃವಿನ ಕರಣಗಳಲ್ಲಿ ಹೊಸಬಗೆಯ ಭಾವುಕ, ವೈಚಾರಿಕ ಸ್ಪಂದನಕ್ಕೆ ಭಾವಗೀತಾತ್ಮಕ ಸ್ಪಂದನಕ್ಕೆ- ಕಾರಣವಾಗಿವೆ.

ಜಿಎಸ್ಎಸ್ ತಮ್ಮ ಕವಿತೆಗಳ ಮೂಲಕ ಕನ್ನಡ ಕಾವ್ಯ ಸಮಾಜದಲ್ಲಿ ಕ್ರಿಯಾಶೀಲ ಸ್ಪಂದನೆಯನ್ನು ಉದ್ದೀಪಿಸಿದ ಕವಿ. ಈ ಮೊದಲೇ ತಮ್ಮ ಕಾವ್ಯ ಪ್ರಸ್ಥಾನದ ಮುಖೇಣವೇ ಸಾಮಾಜಿಕ ಬದಲಾವಣೆಯ ಪ್ರಜಾತಂತ್ರೀಯ ಸಂಘರ್ಷಕ್ಕೆ ಕುವೆಂಪು ನಾಂದಿ ಹಾಡಿದ್ದರು. ಜಿಎಸ್ಎಸ್ ಕುವೆಂಪುರವರ ಮಾರ್ಗದಲ್ಲಿ ದಿಟ್ಟ ಹೆಜ್ಜೆ ಇಟ್ಟು ನಡೆದ ಕವಿ.

ಜಿಎಸ್ಎಸ್ ಅನೇಕ ಬಗೆಗಳಲ್ಲಿ ಆಧುನಿಕ ಸಾಹಿತಿ.

ಅವರು ಬೆಂಬಲಿಸಿ ನಿಲ್ಲುವ ವೈಚಾರಿಕತೆ ಹಾಗೂ ಜಾತ್ಯಾತೀತತೆ, ಕನ್ನಡ ಪರ ನಿಲುವು, ಕನ್ನಡದ ಎಲ್ಲ ಕಾವ್ಯಪಂಥಗಳೊಡನೆ ಅನುಸಂಧಾನವಿಟ್ಟುಕೊಳ್ಳಬಲ್ಲ ವಿಮರ್ಶಾ ಪ್ರತಿಭೆ, ಅವರ ಕಣ್ಣಮುಂದೆಯೇ ಅರಳಿದ ನವ್ಯ, ಬಂಡಾಯ, ದಲಿತ ಹಾಗೂ ಸ್ತ್ರೀ ಸಂವೇದನೆಗಳಿಗೆ ಅವರು ನೀಡಿದ ಸಂವೇದನಾಶೀಲ ಆಧುನಿಕ ಪ್ರತಿಕ್ರಿಯೆ ಈ ಮುಂತಾದ ಕಾರಣಗಳಿಗಾಗಿ ಅವರು ಹೊಸಕಾಲದಲ್ಲೂ ಸಲ್ಲಬಲ್ಲ ಆಧುನಿಕ ಪ್ರಜ್ಞೆಯ ಲೇಖಕರಾಗಿದ್ದಾರೆ. ಹೊಸ ಪೀಳಿಗೆಯನ್ನೂ ಆಕರ್ಷಿಸಬಲ್ಲ ಚೈತನ್ಯ ಪಡೆದವರಾಗಿದ್ದಾರೆ.

ಇವೆಲ್ಲವುಗಳ ನಡುವೆ ಕನ್ನಡ ಕಾವ್ಯಸಮಾಜದ ರಸಾಭಿಜ್ಞ ಪರಿಸರವು ತನ್ನ ಅಭಿರುಚಿಯನ್ನು ಕಾಪಾಡಿಕೊಳ್ಳುವ ಸಲುವಾಗಿ ನಿಷ್ಠುರ ನಿಲುವನ್ನೂ ಅಪರೂಪಕ್ಕೆ

ತೆಗೆದುಕೊಂಡದ್ದಿದೆ. ಎಲ್ಲವೂ ಸರಿಯಾಗಿದ್ದಾಗ, ಅಬಾಧಿತವಾಗಿದ್ದಾಗ ಲಂಕೇಶ್‌ರವರ ವಿಮರ್ಶೆ ಜಿಎಸ್‌ಎಸ್ ಕವಿತೆಯನ್ನು ಎದುರುಗೊಂಡಿತ್ತು. ಅವರ ಕಟುವಿಮರ್ಶೆಗೆ ಜಿಎಸ್‌ಎಸ್ ಅಸಹನೆಗೊಂಡದ್ದನ್ನು ನೋಡಿದೆವು. ಚಂಚಲ ಆದರೆ ಸೌಂದರ್ಯಭಿಜ್ಞ ಪ್ರತಿಭೆಯ ಲಂಕೇಶ್ ಜಿಎಸ್‌ಎಸ್‌ರ 'ಕೃಷ್ಣಶಕ್ತಿ' ಕವಿತೆಯ ತೇಜಸ್ಸನ್ನು ಅನುಭವಿಸಿ ಬರೆದಿದ್ದರು. ನಮ್ಮಂತಹ ಕಡುಕುತೂಹಲಿಗಳು ಅವರ 'ಕೃಷ್ಣಶಕ್ತಿ' ಕವನವನ್ನು ಮತ್ತೆ ಮತ್ತೆ ಓದಿಕೊಂಡೆವು.

ಸ್ಫೋಟಕ ಪ್ರತಿಭೆಯ ಲಂಕೇಶ್ ಕಾಲವಶವಾಗಿದ್ದಾರೆ. ಈಗ ಜಿಎಸ್‌ಎಸ್ ಕಾವ್ಯ ಸಂಪುಟವನ್ನು ತೆರೆದು ಕಣ್ಣುಹಾಯಿಸಿದರೆ... ಅಲ್ಲಿ ಸಿದ್ಧಗಂಗಾಮಠದ ಸ್ವಾಮೀಜಿಗಳನ್ನು ಕುರಿತ ಕವನವಿದೆ... ಕಿರಿಕಿರಿ ಹುಟ್ಟಿಸುವ ಕವನ...! ಲಂಕೇಶ್‌ರವರ ಸ್ಫೋಟದ ಕಾರಣಗಳು ಇಂಥವೇ ಇರಬೇಕು.

ಹೀಗೆ ರಸಭಂಗದ ವಿಲಕ್ಷಣ ಒತ್ತಡಗಳನ್ನು ಅನುಭವಿಸುವ ಕವಿ ಮತ್ತು ಓದುಗ ಮತ್ತೆ ಸಂಪರ್ಕದ ಸೇತುಬಂಧಕ್ಕಾಗಿ ಕಾಯಬೇಕಾಗುತ್ತದೆ. ಪುನರ್ಜನ್ಮಕ್ಕಾಗಿ ಹಾತೊರೆಯ ಬೇಕಾಗುತ್ತದೆ.

1947ರ ಸ್ವಾತಂತ್ರ್ಯಪೂರ್ವ ವರ್ಷಗಳಿಂದಲೇ ಬರೆಯಲಾರಂಭಿಸಿದ ಜಿಎಸ್‌ಎಸ್ ಅಷ್ಟೊತ್ತಿಗಾಗಲೇ ಆರಂಭವಾಗಿದ್ದ ಕನ್ನಡ ಸಾಹಿತ್ಯದ ನವೋದಯದ ಮುಂಬೆಳಗಿನ ರೋಮಾಂಚನದ ನಡುವೆ ಇದ್ದರು. ಇಪ್ಪತ್ತನೆ ಶತಮಾನದ ಮೊದಲರ್ಧ ಮುಗಿದಿತ್ತು. ಗಾಂಧೀಜಿಯವರ ಹತ್ಯೆಯಾಗಿತ್ತು. ಹರ್ಷವೋ ವಿಷಾದವೋ ಎನ್ನುವಂಥ ಸ್ಥಿತಿಯಲ್ಲಿ ಅದ್ದಿದಂತೆ ಕನ್ನಡದಲ್ಲಿ ಆಗ ಕುವೆಂಪು, ಬೇಂದ್ರೆ, ಮಧುರಚೆನ್ನ ಮುಂತಾದ ಶ್ರೇಷ್ಠಕವಿಗಳು ತಮ್ಮ ವಿಶಿಷ್ಟ ಸಾಹಿತ್ಯ ಯೋಗದಲ್ಲಿದ್ದರು.

ಕನ್ನಡ ಅನುಭವವು ಮತ್ತೊಮ್ಮೆ ತನ್ನ ಅಭಿವ್ಯಕ್ತಿಯ ಸಕಲ ಸಾಧ್ಯತೆಗಳಿಗೆ ಕನ್ನಡ ಭಾಷೆಯನ್ನು ಹುರಿಗೊಳಿಸುತ್ತಿತ್ತು. ತನ್ನ ಚಿರಂತನ ಸ್ಮೃತಿಯ ಭಂಡಾರಕ್ಕೆ ಹೊಸ ಸಾಹಸಗಳ ಸೇರ್ಪಡೆಯ ಸಂಭ್ರಮದಲ್ಲಿತ್ತು.

ಆಗ ಬರೆಯತೊಡಗಿದವರು ಜಿಎಸ್‌ಎಸ್.

ಆಗ ಬರೆಯುಲು ತೊಡಗಿದ ಜಿಎಸ್‌ಎಸ್‌ರವರು ಕಳೆದ ಐವತ್ತು ವರ್ಷಗಳ ಸುದೀರ್ಘ ಅವಧಿಯಲ್ಲಿ ತಮ್ಮ ಕಾವ್ಯ ಪ್ರಣಾಳಿಕೆಯನ್ನು ಬದಲಿಸಿದಂತಿಲ್ಲ.

ಮೂಲಭೂತವಾಗಿ ಭೌತಿಕ ಜಗತ್ತಿನ ಮೂರ್ತ ಚರಾಚರಗಳ; ಬಣ್ಣ ರೂಪ ಸ್ವನಗಳ ಗಾಳಿ ಬೆಳಕು ಹಗಲು ರಾತ್ರಿಗಳ ನಡುವೆ ಕಣ್ತೆರೆದು, ಕಿವಿದೆರೆದು ಧ್ಯಾನಿಸಿದ ಕವಿಯಾಗಿರುವಂತೆಯೇ ಸುತ್ತಣ ರಾಜಕೀಯ, ಸಾಮಾಜಿಕ ವೈಪರೀತ್ಯಗಳನ್ನು ಕಂಡು ಕ್ರೋಧದಿಂದ ಪ್ರತಿಕ್ರಿಯಿಸಿದ Activist ಧೋರಣೆಯ ಕವಿಯೂ ಆಗಿದ್ದಾರೆ.

ಸ್ವತಃ ತಮ್ಮನ್ನು ಕುವೆಂಪು ಪರಂಪರೆಯ ಕವಿಯೆಂದು ಗುರುತಿಸಿಕೊಳ್ಳುವ ಜಿಎಸ್‌ಎಸ್

ಕುವೆಂಪುರವರಂತೆ ನಿಸರ್ಗದ ಆರಾಧಕರಾಗಿದ್ದಾರೆ. ಈ ಕ್ಷಣದ ಸಂವೇದನೆಯನ್ನು ಅದರ ಸೀಮಿತಾರ್ಥ, ಸ್ಥೂಲಾರ್ಥದಲ್ಲಿ ಪ್ರತಿಷ್ಠಾಪಿಸದೆ ಕಾಲಾಂತರದ ಕ್ಷಿತಿಜಗಳೆಡೆಗೆ ವಿಸ್ತರಿಸುವಲ್ಲಿಯೂ ಜಿಎಸ್‌ಎಸ್ ಕುವೆಂಪುರವರ ಹತ್ತಿರದಲ್ಲಿಯೇ ಕಂಡುಬರುತ್ತಾರೆ.

ಕುವೆಂಪುರವರ ಸರಳತೆ, ಮುಗ್ಧ ವಿಸ್ಮಿತ ಭಾವ ಹಾಗೂ ಆತ್ಮಪ್ರತ್ಯಯಗಳನ್ನೂ ಜಿಎಸ್‌ಎಸ್ ಪಡೆದವರಾಗಿದ್ದಾರೆ.

ವರಕವಿ ಬೇಂದ್ರೆಯವರಂತೆ ಅಭಿವ್ಯಕ್ತಿಯ ಸಹಜ ದೇಸೀ ರೂಪಾಂತರಗಳಿಗೆ ಒಲಿದಿರದ ಜಿಎಸ್‌ಎಸ್ ಇಲ್ಲಿಯೂ ಕೂಡ ತಮ್ಮ ಕಾವ್ಯಗುರು ಕುವೆಂಪುವಂತೆ ಕವಿತೆಯ ನಿರ್ಮಿತಿಯೊಂದು ಸಾಂಸ್ಕೃತಿಕ ಘಟನೆಯೆಂಬ ಮಹತ್ವಾಕಾಂಕ್ಷೆಯಲ್ಲಿ ಸನ್ನದ್ಧರಾಗುತ್ತಾರೆ. ದೇಸೀ ಗಾರುಡಿಗರಾದ ಬೇಂದ್ರೆ ಅನಾಮಿಕ ಜೋಗಿಯಂತೆ, ತಾಕ್ಷಣಿಕ ಲೀಲಾ ವಿನೋದಿಯಂತೆ ಅಚ್ಚ ಕನ್ನಡದ ಭಾಷಾಬಂಧದಲ್ಲಿ ಸಂವೇದನೆಯ ಸಕಲ ಶಕ್ತಿಯನ್ನೂ ಬಸಿದು ಹಗುರಾದರೆ ಬೇರೊಂದು ಪಥದ ಸಾಧಕದಂತಿರುವ ಕುವೆಂಪು, ಕಾಲಜ್ಞಾನಿಯ ಎಚ್ಚರದಲ್ಲಿ ಕನ್ನಡ ಸಂಸ್ಕೃತಗಳ ದ್ವಿಮಾನ ಬೀಸುಗಳಲ್ಲಿ ಈ ನೆಲದ, ಈ ಕ್ಷಣದ, ಈ ದೇಹದ ತೀವ್ರಾನುಭೂತಿಗೆ ರೂಪು ನೀಡಿದ ಕವಿಯಾಗಿದ್ದಾರೆ.

ಜಿಎಸ್‌ಎಸ್ ಕುವೆಂಪು ಪರಂಪರೆಯ ಕವಿ. ಈ ಮಹತ್ವದ ಪರಂಪರೆಯನ್ನು ಆಧುನಿಕದ ಹೊಸ್ತಿಲವರೆಗೂ ತಂದ ಕವಿ.

ಜಿಎಸ್‌ಎಸ್ ಕವಿತೆಗಳ ವಿಶ್ಲೇಷಣೆಯು ತೋರುವಂತೆ ಅವರ ಕಾವ್ಯದ ಮೂರು ಮುಖ್ಯ ಆಕರ್ಷಕ ಅಂಶಗಳೆಂದರೆ, ಮೊದಲನೆಯದು ಅವರ ಕವಿತೆಯ ಮುಗ್ಧ ಕಿಶೋರಗುಣ. ಎರಡನೆಯದು ಸೂಕ್ಷ್ಮ ನೋವು ಮತ್ತು ವಿಷಾದದ ಜನ್ಮಜಾತವೆನ್ನಿಸುವ ಸಂಕೀರ್ಣ ಸ್ವನ ಹಾಗೂ ಮೂರನೆಯದು ಲೌಕಿಕ ಹಾಗೂ ಲೋಕಾತೀತ ಊಹನೆಗಳಲ್ಲಿ ಧ್ಯಾನಸ್ಥವಾಗುವ ಪರವಶತೆ.

ಈ ಅಂಶಗಳು ಜಿಎಸ್‌ಎಸ್ ಕಾವ್ಯಭಿತ್ತಿಯಲ್ಲಿ ಬೇರೆ ಬೇರೆ ಪ್ರಮಾಣದ ತೀವ್ರತೆಯಲ್ಲಿ, ಪ್ರೌಢಿಮೆಯಲ್ಲಿ ವಿನ್ಯಾಸಗೊಂಡಿವೆ.

'ಮಂಜಿನಲೀಲೆ'ಯಂತಹ ಮೊದಲ ಕವಿತೆಯಿಂದ ಹಿಡಿದು 'ಹಿಮಾಲಯದ ಸ್ಮೃತಿಸಂಪುಟ'ದ ತನಕ ದೃಷ್ಟಿಹಾಯಿಸಿದರೆ ಜಿಎಸ್‌ಎಸ್‌ರವರ ಸಫಲ ಕವಿತೆಗಳೆಲ್ಲವುಗಳಲ್ಲೂ ಅವರೊಳಗಿನ ಮುಗ್ಧ ಕಿಶೋರನ ತನ್ಮಯ ಲಾಸ್ಯವನ್ನು ನೋಡಬಹುದಾಗಿದೆ. ತನ್ನ ವಿಸ್ಮಿತ ನಯನಗಳನ್ನು ತೆರೆದು ಲೋಕಾನುಸಂಧಾನದಲ್ಲಿ ತೊಡಗಿರುವ ನೋಟ ಮತ್ತು ಅವರ 'ಕೃಷ್ಣಶಕ್ತಿ' ಕವನದಲ್ಲಿನ ಕೃಷ್ಣಶಕ್ತಿಯ ವಿಕಾಸದಂತೆಯೇ ಇಲ್ಲಿನ ಮುಗ್ಧತೆಯು ತನ್ನ ವಿಕಾಸಶೀಲ ಚೈತನ್ಯದಿಂದಾಗಿ ಪಡೆಯುವ ಪ್ರೌಢ ಸಾಧ್ಯತೆಗಳು ಗಮನಾರ್ಹವಾಗಿವೆ.

ಉದಾಹರಣೆಗಾಗಿ ಅವರ ಹಿಮಾಲಯದ ಸ್ಮೃತಿಸಂಪುಟ ಕವಿತೆಯನ್ನು ನೋಡಬಹುದು:

**ಕನಸು ಮನಸುಗಳಲ್ಲಿ ಥಟ್ಟನೆ ಎದ್ದು**
**ಸದಾ ಕರೆಯುತ್ತಿರುವ ಗಿರಿಶಿಖರ ಪಂಕ್ತಿಗಳೆ**

ಎಂದು ಮೊದಲಾಗುವ ಕವಿತೆ ತುಂಬುತೊರೆಯಂತೆ ಭೋರ್ಗರೆಯುತ್ತದೆ. ಆ ಭೋರ್ಗರೆತವನ್ನೂ ಓದುಗ ಅನುಭವಿಸಬಹುದಾಗಿದೆ. ಭರತಖಂಡ ಉತ್ತರದ ಹಿಮಾಲಯದ ಗಿರಿಶಿಖರಗಳನ್ನು ಹಠಾತ್ತನೆ ಎದುರುನಿಲ್ಲಿಸುವ ಶಕ್ತಿಪಡೆದಿರುವ ಕವಿತೆ ಅಲ್ಲಿನ ದುರ್ಗಮ ಕಗ್ಗಾಡು ಕಣಿವೆಗಳ ಹರಜಟಾಮಂಡಲದೊಳಗೆ ಗಂಗೆಯ ಸೆಳವಿನಂತೆ ನುಗ್ಗುತ್ತದೆ.

ಶಿವನ ತಾಂಡವ ನೃತ್ಯದ ಅಂಶಗಳನ್ನು ಪಡೆದಂತಿರುವ ಕವಿತೆಯ ಕ್ರಮಣದ ಗತಿ ನಿಸರ್ಗದ ಶಕ್ತಿಗಳಿಗೆ ಸರಿಸಮನಾಗಿದೆ. ಪೂರ್ವಭವಗಳ ಸೆಳೆತದಂತಿರುವ ಹಿಮಾಲಯದ ಗಿರಿ ಶಿಖರಗಳ ಸ್ಮೃತಿ ಇಲ್ಲಿ ಅಖಂಡ ಸ್ವರೂಪಿಯಾಗಿದೆ. ಅಲ್ಲಿನ:

**ಮುಡಿಯೆತ್ತಿ ನಿಂತ ಗುಡಿಗೋಪುರಗಳು**
**ಭೈರವನ ಪಾತಾಳದಾಕಳಿಕೆಗಳು**
**ಕಿಕ್ಕಿರಿದ ಹೆಮ್ಮರದ ರೋಮರಾಜಿಯ ಮೈಯ**
**ಪ್ರಪ್ರಾಚೀನ ಪೆಡಂಭೂತ ಸಂತಾನ**
**ತತ್ತರಿಸುವೆತ್ತರದ ಬೃಹದಾಕಾರದ ವಿಸ್ತಾರ**
**ರಸ್ತಾವ್ಯಸ್ತ ನಿರ್ಲಕ್ಷ್ಯ ದೃಶ್ಯಾಭಿವ್ಯಕ್ತಿಗಳು**
**ಬಹುವರ್ಣಗಳಿಂದ ಶೋಭಿಸುವ 'ದಿಶಿದೇವತಾತ್ಮ ತೇಜಶ್ಶರೀರಿಗಳು'**
**ಕಣಿವೆಯೊಳಗುಟ್ಟುಗಳಿಗಿಟ್ಟ ಕದೆಗೋಲಂತೆ ಭೋರಿಡುವ ನೀರುಗಳು**
**ನದೀಜಲೋಲ್ಲಾಸ ನಿರ್ಘೋಷಗಳು**

ಎಲ್ಲವೂ ಹಿಮಾಲಯದ ಆಕರ್ಷಣೆಯ ಪ್ರಪ್ರಾಚೀನ ಸೆಳೆತದಂತಿದೆ. ಹಿಮಾಲಯದ ಮಾಂತ್ರಿಕ ಕರೆ ಇಲ್ಲಿ ಕನ್ನಡ ಸಂಸ್ಕೃತಿಗಳ ದ್ವಿಮಾನ ಬೀಸುಗಳಲ್ಲಿ ಶರೀರಧಾರಣೆ ಮಾಡಿದೆ.

ಹಿಮಾಲಯಕ್ಕೂ ಭರತಖಂಡಕ್ಕೂ ಇರುವ ಅಭಿನ್ನವಾದ ಅನಾದಿ ಸಂಬಂಧದ ಧ್ಯಾನದಂತಿರುವ ಕವಿತೆ ಹಿಮಾಲಯದ ಊಹಾತೀತ ಗಾತ್ರದ, ದುರ್ಗಮ ಗಿರಿಶಿಖರ ಮಾಲೆಯನ್ನು ತನ್ನ ಕಲೆಯ ತೆಕ್ಕೆಯಲ್ಲಿ ತೆಗೆದುಕೊಂಡ ಹೊಸಕಾಲದ ಹಾಡಿನಂತಿದೆ.

'ಜಗನ್ನಾಥ'ನ ವಿಸ್ಮಯಾವಹ ಮಾಂತ್ರಿಕ ಆವಾಹನೆಯ ಗರ್ಭದಲ್ಲಿಯೂ ಕವಿಯ ಸೌಂದರ್ಯಾಭಿಜ್ಞ ಮುಗ್ಧತೆಯೇ ಪ್ರೌಢ ವಿಕಾಸವನ್ನು ಪಡೆದುಕೊಂಡಿರುವ ಅಂಶವನ್ನು ಗಮನಿಸಿದರೆ, ಜಿಎಸ್‌ಎಸ್ ಕವಿತೆಯ ಅಂತರಂಗವೂ ಕೂಡ ತನ್ನ ಅತ್ಯುನ್ನತ ಕ್ಷಣಗಳಲ್ಲಿ ಕೃಷ್ಣಶಕ್ತಿಯ ವಿಕಾಸಶೀಲ ಗುಣವನ್ನು ಹೊಂದಿರುವುದು ಕಂಡುಬರುತ್ತದೆ.

ಜಿಎಸ್‌ಎಸ್‌ರವರ ಆರಂಭದ ಕವಿತೆಗಳಲ್ಲಿ ಒಂದಾದ 'ಜಡೆ' ಕವಿತೆಯು ಅವರ ಮನ್ನಣೆ ಪಡೆದ ಕವಿತೆಗಳಲ್ಲಿ ಒಂದು. ಅಲ್ಲಿ ಮೊದಲಾಗುವ ಕವಿತಾಸಂವೇದನೆಯಲ್ಲಿ ಪ್ರಥಮದ ಸರಳ, ಪಾರದರ್ಶಕ, ಲವಲವಿಕೆಯ ತರತರದ ಜಡೆಗಳ ನೋಟಗಳೆ

ಸ್ತ್ರೀರೂಪದ ಸಾನಿಧ್ಯದಲ್ಲಿ ಕಣ್ಣಾಮುಚ್ಚಾಲೆಯಾಡುವ ಸೌಂದರ್ಯಾಭಿಜ್ಞತೆಯು ಸಮ್ಮೋಹಿನಿಯಲ್ಲಿ ಹಂತ ಹಂತವಾಗಿ ಸುಷುಪ್ತಿಗೆ ಜಾರುವಂತೆ ಸ್ವಪ್ನದ, ಸೌಂದರ್ಯಾವಹ ಶಬ್ದಗಳಲ್ಲಿ ಮುಂದುವರಿಯುತ್ತ ಪ್ರಕೃತಿಯ ವಿಸ್ತೃತ ಬೆಡಗಿನೆದುರು ತರ್ಕಿಸುವ ತಾತ್ವಿಕನ ಏಕಾಂತವನ್ನು ನಿರೂಪಿಸುತ್ತದೆ.

ಮೇಲಿನ ಕೆಲ ಕವನಗಳನ್ನು ಒಳಗೊಂಡು ಜಿಎಸ್ಎಸ್‌ರವರ ಇನ್ನಿತರ ಸಫಲ ಕವನಗಳು ತಮ್ಮ ವಿಶಾಲ ವ್ಯಾಪ್ತಿ, ಅನುಭವದ ತೀವ್ರತೆ ಮತ್ತು ಸೌಂದರ್ಯಾಭಿಜ್ಞತೆಯಲ್ಲಿ ಶ್ರೇಷ್ಠ ಸಮಾಜವಾದಿ ಕವಿತೆಗಳ ರೂಪರಚನೆಯನ್ನು ಪಡೆಯುತ್ತಿರುತ್ತವೆ ಮತ್ತು ಅಖಂಡತೆಯ ಧ್ಯಾನದ ಪರಿಯನ್ನೂ ಸೂಸುತ್ತಿರುತ್ತವೆ.

ಆದರೆ ಜಿಎಸ್ಎಸ್ ಕಾವ್ಯದ ಅಂತರಂಗದಲ್ಲಿ ಪ್ರವೃತ್ತವಾಗುವ ಮುಗ್ಧತೆಯು, ಏಕಾಗ್ರ ಸಂವೇದಕ ಶಕ್ತಿಯು ಎಲ್ಲ ಕಾಲಗಳಲ್ಲಿಯೂ ಇವರ ಕೈಹಿಡಿದು ನಡೆಸಿದಂತಿಲ್ಲ. ನಾವು ಎದುರುಗೊಳ್ಳುವ ಅನೇಕ ಸರಳ ಸಾಧಾರಣ ಕವನಗಳು ಅಚ್ಚರಿ ಹುಟ್ಟಿಸುವಂತಿವೆ. ಅಥವಾ ಮಹತ್ವದ ಕಾಣ್ಕೆಗಾಗಿ ಈ ಕವಿ ನಡೆಸಿರಬಹುದಾದ ಪ್ರಾಥಮಿಕ ಸಂವೇದನೆಗಳ ವಿಧ್ಯುಕ್ತ ಆಚರಣೆಯ ಪ್ರತೀಕಗಳಂತಿವೆ.

ಎರಡನೆಯದಾಗಿ ಜಿಎಸ್ಎಸ್ ಕವಿತೆಗಳ ಅಂತರಂಗದಲ್ಲಿ ಸ್ಥಾಯಿಯಾಗಿ ಅಭೇದ ಸ್ಥಿತಿಯಲ್ಲೆಂಬಂತೆ ಅಂತಸ್ಥಗೊಂಡಿರುವ ನೋವು ಮತ್ತು ವಿಷಾದದ ಸ್ವನ. ಇದು ಎಲ್ಲರೂ ಬಲ್ಲಂತೆ ಜಿಎಸ್ಎಸ್‌ರವರಲ್ಲಿ ನಾವು ಕಾಣುವ 'ಲೋಕ-ಮುಖಾಮುಖಿ'ಯ ತೀವ್ರ ಆಸಕ್ತಿಯ ಮೂಲಪ್ರವೃತ್ತಿಯಲ್ಲಿ ನೆಲೆಯಾಗಿದೆ.

ಕೆಲ ವಿಮರ್ಶಕರು ಜಿಎಸ್ಎಸ್ ಕಾವ್ಯಕ್ಕೆ 'ಪ್ರಸನ್ನ'ತೆಯ ಗುಣವನ್ನು ಆರೋಪಿಸಿದ್ದಾರೆ. ಅವರ ಕಾವ್ಯದ ಸೂಕ್ಷ್ಮಗ್ರಹಿಕೆಯು ತೋರುವಂತೆ ಅವರ ಕವಿತೆ ಮೂಲಭೂತವಾಗಿ ಲೋಕದ ವೈಲಕ್ಷಣಗಳೆದುರು ಅಸಹನೆಯಿಂದ ಸಿಡಿದ ಕವಿತೆ.

ಡಿ.ಆರ್. ನಾಗರಾಜ ಅವರು ಕರೆಯುವಂತೆ ಜಿಎಸ್ಎಸ್ ಅವರ ಕವಿತೆ ಚಾರಿತ್ರ್ಯದ ಅಭಿವ್ಯಕ್ತಿಯಾಗಿದೆ. 'ಕವಿತೆಯು ಚಾರಿತ್ರ್ಯದ ಅಭಿವ್ಯಕ್ತಿ' ಎಂಬ ಕವಿತೆಯ ವ್ಯಾಖ್ಯಾನವೊಂದನ್ನು ಪ್ರಸ್ತಾಪಿಸುತ್ತ ಡಿ.ಆರ್., ಜಿಎಸ್ಎಸ್ ಕವಿತೆಗೆ ಇದನ್ನು ಅನ್ವಯಿಸಿನೋಡುತ್ತಾರೆ. ವ್ಯಕ್ತಿ ಮತ್ತು ಸಮಷ್ಟಿಯ ಚಾರಿತ್ರ್ಯದ ಬಗೆಗೆ ಜಿಎಸ್ಎಸ್‌ಗಿರುವ ಅನಾದಿ ಎಂಬಂಥ ಬದ್ಧತೆಯು ಡಿ.ಆರ್. ರವರು ಗುರುತಿಸುವಂತೆ ಒಂದು ಬಗೆಯ ಸಾತ್ವಿಕ ಅಸಹನೆ ಮತ್ತು ಸಂದೇಹದ ಮೇಲೆಯೇ ನಡೆದು ಚಾರಿತ್ರ್ಯವನ್ನು ಕನಸಿದ ಕವಿತೆಯಾಗಿದೆ.

ನಮ್ಮ ಬಹುಸಂಖ್ಯಾತ ವಂಚಿತ ಸಮೂಹದ ಜನ್ಮಜಾತ ನೋವು ಮತ್ತು ವಿಷಾದಗಳ ಭಾವಸ್ತರದಲ್ಲಿ ಆಳವಾಗಿ ನೆಟ್ಟಂತಿರುರ ಜಿ.ಎಸ್.ಎಸ್. ಅವರ ಅನೇಕ ಕವನಗಳು ಸಾತ್ವಿಕ ಕ್ರೋಧವನ್ನು ತಮ್ಮದೇ ಕ್ರಮದಲ್ಲಿ ಹೊರಗೆಡಹುತ್ತವೆ.

ಉದಾಹರಣೆಗೆ ಅವರ 'ದುಃಸ್ವಪ್ನ' ಕವನವನ್ನು ಗಮನಿಸಬಹುದಾಗಿದೆ.

ಕಂಡೆ
ಎಂತೆಂಥವರು ಏನೇನೋ ಆದದ್ದ ಕಂಡೆ
......................
ಇಂದ್ರನೈರಾವತಕ್ಕೆ ತೊಣಚ ಹತ್ತಿ
ಬೀದಿ ನಾಯಾಗಿ ಬೂದಿಯಲ್ಲಿ ಹೊರಳಾಡಿದ್ದ ಕಂಡೆ

ನಿಗಿ ನಿಗಿ ಉರಿದ ಉಜ್ವಲ ಮಾತೆಲ್ಲ
ಬರಿ ಬೂದಿಯಾಗಿ ತೆಪ್ಪಗಾದದ್ದ ಕಂಡೆ

ಕೊಳಕುಮಂಡಲಕ್ಕೆ ಏಳು ಹೆಡೆ ಮೂಡಿ
ಮಾನಸ ಸರೋವರದಲ್ಲಿ ಜಲಕ್ರೀಡೆಯಾಡಿದ್ದ ಕಂಡೆ.
......................
ದೊಡ್ಡ ಪೀಠಗಳ ಮೇಲೆ ಸಣ್ಣ ಜನ
ಇಲಿ ಹೆಗ್ಗಣಗಳಾಗಿ ಹರಿದಾಡಿದ್ದ ಕಂಡೆ.....

ಕಂಡೆ... ಕಂಡೆ ಎಂಬ ಶಬ್ದವು ಪುನಾರಾವರ್ತನ ಗತಿಯಲ್ಲಿ ಹೊರಹಾಕುತ್ತಿರುವ ಸಾತ್ವಿಕ ಕ್ರೋಧದ ತೀವ್ರತೆಯು ಘಾತಿಸುವಂತಿದೆ.

'ದುಃಸ್ವಪ್ನ'ದಂಥ ಕೆಲವು ಕವನಗಳ ಸಫಲತೆಯನ್ನು ನಿರ್ಧರಿಸಿರುವುದು ಬಹುಶಃ ಅವುಗಳ ನಿರ್ಮಿತಿಯ ಹಿಂದಿರುವ ಸಂವೇದನೆಯ ತೀವ್ರತೆ. ಹೀಗಾಗಿ ಇಲ್ಲಿ ಕಲೆ ಖಂಡನೆಗಳೆರಡೂ ಸಾವಯವ ಬಂಧದಲ್ಲಿ ಬೆಸಿದಿವೆ. ಅದು ಹಾಗಿಲ್ಲದ ಕಡೆ ಜಿಎಸ್‌ಎಸ್ ರವರ ಈ ಮಾದರಿಯ ಕವನಗಳು ತಮ್ಮ ಸಿಟ್ಟು ಮತ್ತು ವ್ಯಂಗ್ಯವನ್ನು ಹನಿಹನಿಯಾಗಿ ಪ್ರಕಟಿಸುತ್ತ ಮುಜುಗರ ಉಂಟುಮಾಡುತ್ತವೆ.

ಜಿಎಸ್‌ಎಸ್ ಕವಿತೆಯ ಮೂರನೆಯ ಆಯಾಮವೆಂದು ಗ್ರಹಿಸಿದ ಲೌಕಿಕ ಮತ್ತು ಲೋಕಾತೀತ ಊಹನೆಯು ಅವರ ಕವಿತೆಯ ಮಾರ್ದವದ ಅಂಶಗಳನ್ನು ಒಳಗೊಳ್ಳುತ್ತದೆ.

ಅವರ ಅಂತರಂಗದ ಟೀಕಾಕಾರನು ತನ್ನ ಅಸಹನೆ ಮತ್ತು ಕ್ರೋಧಗಳಿಂದ ಬಿಡಿಸಿಕೊಂಡು ಹೊರಬಂದು ಕನಸಿದ ಪ್ರಶಾಂತ ಆಗಸದಂತೆ ಈ ಕವಿತೆಗಳಿವೆ. ಅವರ ಆರಂಭದ ಸಂಗ್ರಹಗಳಲ್ಲೇ ನಾವು ಕಂಡುಕೊಂಡಂತೆ ಮುಗ್ಧ ಕಿಶೋರನಂತೆ, ತರುಣ ತಪಸ್ವಿಯೊಬ್ಬನು ಅವರ ಕಾವ್ಯದ ಅಂತರಂಗಗಳಲ್ಲಿ ನೆಲೆಸಿ ಸಂವೇದಿಸಿದ್ದಾನೆ. ಆತನ ಪ್ರಶಾಂತ ಕಾಣ್ಕೆಯೇ ಅವರ ಕೆಲವು ಮುಖ್ಯ ಕವನಗಳಲ್ಲಿ ಫಲಿಸಿದೆ.

ಜಿಎಸ್‌ಎಸ್‌ರವರ ಜಡೆ, ಕಾಲನಟ, ಹಳೆಯ ಹಾಡು, ಅಲ್ಲಿ-ಇಲ್ಲಿ, ಕವಿಯ ಮನಸು, ಕೃಷ್ಣಶಕ್ತಿ ಮುಂತಾದ ಕವನಗಳಲ್ಲಿ ಈ ತರುಣ ತಪಸ್ವಿಯ ಕಲಾವಂತ ಹೃದಯದ ಸ್ಪಂದನಗಳನ್ನರಿಯಬಹುದಾಗಿದೆ.

ಈ ಚೈತನ್ಯದ ಮುಖ್ಯ ಚಹರೆಗಳೆಂದರೆ ಇಲ್ಲಿ ನಮ್ಮ ಅನುಭವಕ್ಕೆ ಬರುವ ದೃಢತೆ ಮತ್ತು ಒಂದು ಬಗೆಯ ಆಧ್ಯಾತ್ಮಿಕ ಸ್ತಿಮಿತ. ಒಂದು ಸ್ಥಿರ ಪ್ರೌಢ ನಿಲುವಿನಲ್ಲಿ ನೆಲೆಸಿ ಲೋಕನಿಷ್ಠ ಮತ್ತು ಲೋಕಾತೀತ ಅನುಭವಗಳನ್ನು ಏಕಾಗ್ರವಾಗಿ ಧ್ಯಾನಿಸುವ ರೀತಿ. ಇಂಥ ನಿಲುವಿನಿಂದಲೂ ಜಿ.ಎಸ್.ಎಸ್. ತಮ್ಮ ಕಾವ್ಯಯೋಗದ ಸಾಧನೆ ನಡೆಸಿರುವಂತಿದೆ. ಅವರ *ಕಾರಣಿಕ*, *ಹುಟ್ಟಿದಹಬ್ಬ*, *ಮಬ್ಬಿನಿಂದ ಮಬ್ಬಿಗೆ*, *ಶಕ್ತಿಯಕೊಡು*, *ಹುಟ್ಟಿದ ಹಬ್ಬ*, *ಪ್ರತಿಭೆ-ಪಾಂಡಿತ್ಯ* ಮುಂತಾದ ಕವನಗಳನ್ನು ಈ ನೆಲೆಯಿಂದ ಭಾವಿಸಿ ನೋಡಬಹುದಾಗಿದೆ. ಕೊನೆಯದಾಗಿ ಜಿಎಸ್ಎಸ್ ಕವಿತೆಯ ಪ್ರಾಮಾಣಿಕತೆ. ಇಲ್ಲಿ ಕಾವ್ಯಸಂವೇದನೆಯು ತನ್ನ ವಿಷದೀಕರಣದ ಮುಖ್ಯ ಹಂಬಲವೆಂಬಂತೆ ತನ್ನ ರಚನಾ ಕ್ರಮದಲ್ಲಿ ಸಾಧಿಸುವ ಪಾರದರ್ಶಕತೆ. ಅನಗತ್ಯ ಸಂಕೀರ್ಣತೆ ಅಥವಾ ಇದರಿಂದಾಗಬಹುದಾದ ಗೊಂದಲದಿಂದ ಬಹುದೂರ ಉಳಿಯುವ ಜಿಎಸ್ಎಸ್ ಕವಿತೆ ತನ್ನ ಪ್ರಾಮಾಣಿಕ ಸ್ವರೂಪ ಮತ್ತು ನಿಲುವಿನಲ್ಲಿ ಓದುಗನನ್ನು ಎದುರುಗೊಳ್ಳುತ್ತದೆ. ಇದರಿಂದಲೇ ಜಿಎಸ್ಎಸ್ ಸಂಪುಟದಲ್ಲಿ ಅವರ ಸರಳ ಕವನಗಳು ಸರಳವೇ ಆಗಿ ಕಂಡರೆ ಅವರ ಸಂಕೀರ್ಣ ಕವನಗಳು ಸಂಕೀರ್ಣ ರೂಪ ಮತ್ತು ಸಹಜತೆಯಲ್ಲಿ ಎದುರಾಗುತ್ತವೆ.

ಆತ್ಮ ಅಥವಾ ಪರವಂಚನೆಯಿಂದ ಬಹುದೂರ ಉಳಿದಂತಿರುವ ಜಿಎಸ್ಎಸ್ ಅವರ ಕವನಗಳು ಓದುಗನನ್ನು ತಮ್ಮ ಪಾರದರ್ಶಿಕ ನಿಲುವಿನಲ್ಲಿ ಎದುರುನೋಡುವಂತಿವೆ.



# ಹಳೆಬೇರಿನಲ್ಲಿ ಹೊಸಚಿಗುರು

ಶಂಕರ ಕಟಗಿ

**ಕ**ನ್ನಡ ನವೋದಯ ಕಾವ್ಯದ ಆಧ್ಯಾತ್ಮಿಕ ನೆಲೆಯಿಂದ ಬಿಡಿಸಿಕೊಂಡು, ತನ್ನ ಕಾವ್ಯ ರಚನೆಗೆ ಪ್ರಸಾದ ಗುಣವನ್ನೇ ಪ್ರಧಾನವಾಗಿಸಿಕೊಂಡ ವಿಶಿಷ್ಟ ಕವಿಗಳಲ್ಲಿ ಜಿ. ಎಸ್. ಶಿವರುದ್ರಪ್ಪನವರೂ ಒಬ್ಬರು. ಸ್ವತಂತ್ರ ಭಾರತದ ಸಾಮಾಜಿಕ ಸ್ಥಿತಿಗತಿಯಲ್ಲಿ ಇವರ ಕಾವ್ಯ ಕ್ರಿಯೆಯಾಗಿರುವುದು ಗಮನಾರ್ಹ. ವಾಸ್ತವಿಕತೆಗೆ ತನ್ನನ್ನು ಒಡ್ಡಿಕೊಳ್ಳುವ, ಸಾಮಾಜಿಕ ಹೊಸ ಆಯಾಮಗಳನ್ನು ಕಾವ್ಯ ಶರೀರದಲ್ಲಿ 'ಅರ್ಥ'ವಾಗಿಸುವ ಹಿಕಮತ್ತು ಶಿವರುದ್ರಪ್ಪ ಅವರಿಗೆ ಮುಖ್ಯವಾಗುತ್ತದೆ. ಇದು ಇವರ ಕಾವ್ಯ ನಂಬಿಕೆಯೂ ಕೂಡ. ಈ 'ನಂಬಿಕೆ' ಕಾವ್ಯ ಚಿಂತನವೂ ಆಗುತ್ತದೆ. ಇವರ ಕಾವ್ಯ ಕಲ್ಪನೆ ಪ್ರತಿಮೆಯಾಗಿ, ಉಪಮೆಯಾಗಿ, ಸಂಕೇತವಾಗಿ ಹಾಗೂ ರೂಪಕವಾಗಿ ರೂಪಾಂತರಗೊಂಡು ಕಾವ್ಯ ಶರೀರದಲ್ಲಿ ಹೊಸ ಮಾರ್ಪಾಟು ಆಗುತ್ತದೆ. ಕವಿಯ ಸಾಮಾಜಿಕ ಅರಿವು ತನ್ನ ಆತ್ಮ ವಿಮರ್ಶೆಗೂ, ಖಚಿತ ನಿರ್ಧಾರಕ್ಕೂ ಬುನಾದಿಯನ್ನು ಹಾಕಿಕೊಡುತ್ತದೆ.

ಚಕಿತಗೊಳಿಸುವ ನಿಸರ್ಗಪ್ರೀತಿ, ಕಾಲ ಚಿಂತನೆಯೊಂದಿಗೆ ಹರವುಗೊಳ್ಳುವ ಶಿವರುದ್ರಪ್ಪನವರ ಕಾವ್ಯಾಭ್ಯಾಸದಲ್ಲಿ ನನಗೆ ಎಡೆಯಾಗಿ ಎದುರುಗಡೆ ಇದ್ದುದು ಅವರ ಮಾನವತಾವಾದವು. ಅಂದರೆ ಕಾವ್ಯದ ಸೌಂದರ್ಯಾನುಭವದೊಳಗೇ ಒಂಟಿತನವನ್ನು ಅನುಭವಿಸುವ ಸಾಮಾನ್ಯ ಮನುಷ್ಯ ಹಾಗೂ ಅವನ ಆಶಾವಾದ. ಈ ಸಾಮಾಜಿಕ ಜೀವನ ತುಡಿತವೂ ಮನುಷ್ಯಚಿಂತನೆಗೆ ಹಚ್ಚುತ್ತದೆ. ಇದು ಜಿಎಸ್‌ಎಸ್ ಕಾವ್ಯದ ತಾತ್ವಿಕ ನೆಲೆ ಎಂದು ನನಗೆ ಅನ್ನಿಸಿದೆ. ಈ ಅಂಶ ಉದಾರ ಗುಣವಾಗಿ ಕಂಡರೂ ನವೋದಯ ಕಾವ್ಯ ಕಲ್ಪನೆಯಿಂದ ಬಿಡಿಸಿಕೊಂಡು ಎಡಪರವಾದ ಸೈದ್ಧಾಂತಿಕ ನಿಲುವನ್ನು ಸೃಷ್ಟಿ ಮಾಡುತ್ತದೆ. ಜಿಎಸ್‌ಎಸ್ ಎಡಪಂಥೀಯರು ಅಲ್ಲ ಎಂಬ ಕಾರಣಕ್ಕಾಗಿ ಸಮಾಜವಾದಿ ಮಾನವೀಯ ನಿಲುವುಗಳು ಕವಿಗೆ ಇರುವುದಿಲ್ಲವೆಂದು ಹೇಳಲಿಕ್ಕಾಗದು. ಭಗ್ನಗೊಂಡ ಬದುಕಿನ ತೀವ್ರ ಬಿಕ್ಕಟ್ಟಿನಲ್ಲಿಯೇ ಬೆಳಕಿನ ಅನುಭವವನ್ನು ಕಾವ್ಯ ಪಡೆಯುತ್ತದೆ. ಈ ಬೆರಗಿನ ಪ್ರಯೋಗಶೀಲತೆ ಸದಾ ಅಪ್ಯಾಯಮಾನವಾಗುವಂತಹದ್ದು. ಸಾಮಾಜಿಕ ಕಳಕಳಿ ಇರುವ ಕವಿಗೆ ಐಡೆಂಟಿಟಿ ದೊರಕುವುದೇ ಜೀವನ ಪರ ಕಾವ್ಯ ರಚನಾಕ್ರಮದಲ್ಲಿ. ಈ ಕಾರಣದಿಂದಾಗಿಯೇ

ಜಿಎಸ್‌ಎಸ್ ಕಾವ್ಯದ ಸಾಮಾನ್ಯ ಮನುಷ್ಯನ ಅನುಭವಕ್ಕೆ ಮತ್ತು ಅವನ ಆಶಾವಾದಕ್ಕೆ ನಾನು ಒತ್ತುಕೊಡುತ್ತಿರುವುದು.

ಜಿ.ಎಸ್.ಎಸ್. ಅವರ ಮೊದಲ ಕಾವ್ಯ ಸಂಗ್ರಹ 'ಸಾಮಗಾನ' (1951)ದಿಂದ ತೀರ ಇತ್ತೀಚಿನ ಸಂಕಲನ 'ವ್ಯಕ್ತಮಧ್ಯ' (1999)ದ ವರೆಗೂ ಕವಿ ಕಾಲಚಿಂತನ ಮಾಡುತ್ತ ಮನುಷ್ಯನ ಅಸ್ತಿತ್ವವನ್ನು ಹುಡುಕುತ್ತಾರೆ. ಇಂದಿನ ಬದುಕಿನ ಸ್ವರೂಪವನ್ನೇ ವ್ಯಕ್ತಮಧ್ಯವೆಂದು ಗ್ರಹಿಸುತ್ತಾರೆ. ಕಾವ್ಯ ಕಟ್ಟಡ ನಿರ್ಮಿಸುವ, ಅರ್ಥಮಾಡಿಕೊಳ್ಳುವ ಕ್ರಮ ಪ್ರಾಯೋಗಿಕ ವಾಗಿರುತ್ತದೆ. ಇದರಿಂದಾಗಿ ಕಾವ್ಯ ಶರೀರ ಹೊಸ ರೀತಿಯ ಓದುಗಾರಿಕೆಗೆ ಒಡ್ಡಿಕೊಳ್ಳುತ್ತದೆ. ಈ ಕಾವ್ಯಕರ್ಮ ಮಾನವೀಯ ಮೌಲ್ಯ ಅರಿಯುವ, ಧ್ಯಾನಿಸುವ ವಿಚಿತ್ರ ಸಂಕಟದ ಹಾದಿಯಾಗುತ್ತದೆ. ಸಾಮಾಜಿಕ (ಮನುಷ್ಯನ) ದರ್ಶನವನ್ನು ಕಾವ್ಯದಲ್ಲಿ ನೀಡುವ ಪರಿ ಕೂಡ ಇದಾಗುತ್ತದೆ. ಚೆಲವು-ಒಲವಿನ ಲೋಕರುಚಿ, ನಂಬಿಕೆಯ ಪರೀಕ್ಷೆ ಎಂಬುದನ್ನು ಮರೆವ ಹಾಗಿಲ್ಲ. ಒಟ್ಟು ಕಾವ್ಯದ ಒತ್ತಾಸೆಯು ಹಳೇ ಬೇರಿನಲ್ಲಿ ಹೊಸ ಚಿಗುರು ಕಾಣುವ ಹಂಬಲವು:

**ಹಾಡು ಹಳೆಯದಾದರೇನು**
**ಭಾವ ನವನವೀನ**
..............................
**ಹಳೆಯ ಹಾಡ ಹಾಡು ಮತ್ತೆ**
**ಆದನೆ ಕೇಳಿ ತಣಿಯುವೆ**
**ಹಳೆಯ ಹಾಡಿನಿಂದ ಹೊಸತು**
**ಜೀವನವನೆ ಕಟ್ಟುವೆ** *(ಹಳೆಯ ಹಾಡು)*

ಜೀವನ ವಲಯವನ್ನು ಕಾವ್ಯ ರಚನಾ ಸಾಧನವನ್ನಾಗಿ ಮಾಡಿಕೊಂಡು, ಇಂದ್ರಿಯಗಮ್ಯ ತಾತ್ವಿಕತೆಯನ್ನು ಅಭಿವ್ಯಕ್ತಿಸುವ ವಿಶಿಷ್ಟ ನಡೆ ಶಿವರುದ್ರಪ್ಪನವರದು. ಅಲ್ಲದೇ—

**ಎಲ್ಲ ಕೇಳಲಿ ಎಂದು ನಾನು ಹಾಡುವುದಿಲ್ಲ**
**ಹಾಡುವುದು ಅನಿವಾರ್ಯ ಕರ್ಮ ನನಗೆ** *(ತೃಪ್ತಿ)*

ಎಂದು 'ಸಾಮಗಾನ'ದ ಮೂಲಕ ಎದೆ ತುಂಬಿ ಹಾಡುತ್ತಾರೆ. ಸಾಮಾಜಿಕ ಬದ್ಧತೆಯನ್ನು ಪ್ರಕಟಪಡಿಸುತ್ತಾರೆ. 'ಸಾಮಗಾನ' (1951), 'ಚೆಲವು-ಒಲವು' (1953), 'ದೇವಶಿಲ್ಪ' (1956) ಮೊದಲ ಈ ಮೂರು ಕವನ ಸಂಕಲನಗಳ ಮೂಲಕ ಭಾವಗೀತಾತ್ಮಕ ಕಾವ್ಯ ಕ್ರಿಯಾಶೀಲಗೊಂಡು ಸಾಮಾಜಿಕ ನಿಲುವನ್ನು, ಸೌಂದರ್ಯಾನುಭವವನ್ನು, ವಿಷಾದವನ್ನು ಒಟ್ಟಿಗೆ ಕಟ್ಟಿಕೊಡಲಾಗಿದೆ. ನವೋದಯ ಕಾವ್ಯಕ್ಕಿಂತ ಭಿನ್ನವಾದ ನೆಲೆಯಲ್ಲಿ ಕಾವ್ಯ ಓದನ್ನು ಒದಗಿಸಲಾಗಿದೆ. ಇಂಥ ಜೀವನ ಪರ ತಾತ್ವಿಕ ಚಿಂತನೆ ಆ ಕಾಲದಲ್ಲಿ ಜಿಎಸ್‌ಎಸ್ ಅವರಿಗೆ ಮಾತ್ರ ಸಾಧ್ಯವಾಯಿತು. (ಅಡಿಗರ ಕಾವ್ಯದಲ್ಲಿ ದೊರಕದಿರುವ ಕಾವ್ಯಾನುಭವ

ವಲಯವಿದು.) ಒಂದು ರೀತಿಯಲ್ಲಿ ಇದು ನವೋದಯ ಕಾವ್ಯದ ಮುಂದುವರೆದ ಜೀವನ ಸತ್ವಾಂಶವೆನ್ನಬಹುದೇನೋ. ಮೆಲುಧ್ವನಿಯಲ್ಲಿಯೇ, ಕಾವ್ಯಾನುಭವದ ಬಿಕ್ಕಟ್ಟನ್ನು ವ್ಯಕ್ತಪಡಿಸುವ ಕ್ರಿಯೆಯಿಂದಾಗಿಯೇ ಭಾವಗೀತೆಗಳು ಗುಂಗು ಹಿಡಿಸುತ್ತವೆ. 'ನೆಲದ ಕರೆ', 'ಹಳೆಯ ಹಾಡು', 'ಶಾಕುಂತಲ ಸಂಧ್ಯೆ', 'ಜಡೆ', 'ಒಂದು ಕ್ಷಣ'—ಮೊದಲಾದವು ವಾಸ್ತವದ ವೇದನೆಯಲ್ಲಿಯೇ ಹಗುರವಾದ ಭಾವನೆಗಳನ್ನು ಹರವುತ್ತವೆ. ಈ ಕವಿತೆಗಳ ಚೆಲವು ಮನಸ್ಸನ್ನು ಉನ್ನತೀಕರಿಸುವ ಅನುಭವವಾಗುತ್ತದೆ.

*ದೀಪದ ಹೆಜ್ಜೆ (1959), ಕಾರ್ತಿಕ (1961), ಅನಾವರಣ (1963), ತೆರೆದ ದಾರಿ (1966)*—ಕವನ ಸಂಕಲನಗಳು ಪ್ರಕಟವಾಗುವ ಹೊತ್ತಿಗೆ ಶಿವರುದ್ರಪ್ಪನವರಿಗೆ ಕಾವ್ಯ ಪ್ರಬುದ್ಧತೆ ಲಭ್ಯವಾಗಿತ್ತು. ಕಾವ್ಯಶಿಲ್ಪದಿಂದಾಗಿ ಅನುಭವ ಪೂರ್ಣತೆ ಬಂದಿತ್ತು. ಸಂಘರ್ಷದ ಮಧ್ಯವೂ ಜೀವನ ಶ್ರದ್ಧೆಯನ್ನು ಹೊಳವು ಹಾಕಿದ್ದು ಈ ಸಂಕಲನಗಳಲ್ಲಿ. ಸಮಕಾಲೀನ ಜೀವನದ ಮೂಲಭೂತ ಶ್ರದ್ಧೆಯಲ್ಲಿಯೇ ಸಾತ್ವಿಕ ವಿನಯವನ್ನೂ ಸೃಜನಗೊಳಿಸಲಾಗಿದೆ. ಕಾವ್ಯದ ಹೊಸ ನಡಿಗೆ ಪ್ರಾರಂಭವಾಗುವುದೇ 1959 ರಿಂದ 1966 ರ ಕಾಲಾವಧಿಯಲ್ಲಿ. 'ಸಂಜೆ ದಾರಿ', 'ಗಡಿಯಾರದಡಿಯಲ್ಲಿ', 'ಅನಾವರಣ', 'ಹುಟ್ಟಿದ ಹಬ್ಬ', 'ಮಬ್ಬಿನಿಂದ ಮಬ್ಬಿಗೆ', 'ಕನಸಿನಿಂದ ಕನಸಿಗೆ', 'ಶಾಕುಂತಳದ ಐದನೇ ಅಂಕ', 'ರೈಲು ಬರುತಿದೆ', 'ವಿಫಲ', 'ಮುಂಬೈ ಜಾತಕ' ಕವಿತೆಗಳಲ್ಲಿ ಪ್ರಕಟಗೊಳ್ಳುವ ನಿಟ್ಟುಸಿರು, ಆಕ್ರಂದನ, ಮೌನ ಮುಂತಾದ ವಿಷಾದದ ಗ್ರಹಿಕೆಯಲ್ಲಿ ಸಾಮಾನ್ಯ ಮನುಷ್ಯನ ಸಂಕಟಗಳೇ ಮುಖ್ಯವಾಗುತ್ತವೆ. ಸೃಜನಶೀಲತೆಯ ಬಿಕ್ಕಟ್ಟಿನ ಪರಿಜ್ಞಾನವಿರುವ ಕವಿಯು ತನ್ನನ್ನು ಪುನರುಜ್ಜೀವನಗೊಳಿಸಿಕೊಂಡ ಗತಿ ಇದಾಗಿದೆ.

**'ಹುಟ್ಟಿದ್ದು: ಆಸ್ಪತ್ರೆಯಲ್ಲಿ**
**ಬೆಳೆದದ್ದು: ಬಸ್ಸು ಟ್ರಾಂ ಕಾರು ಟ್ಯಾಕ್ಸಿ ಎಲೆಕ್ಟ್ರಿಕ್ ಟ್ರೇನುಗಳಲ್ಲಿ**
**ಕುಡಿದದ್ದು: ಕಾಣದೆಮ್ಮೆಯ ಕೆಚ್ಚಲು ಕರೆದು ಕಳುಹಿಸಿದ ಬಾಟ್ಲಿಯ ಹಾಲು,**
**ಗ್ರೈಪ್‌ಸಿರಪ್, ಹಾರ್ಲಿಕ್ಸ್, ಇತ್ಯಾದಿ.'**

*(ಮುಂಬೈ ಜಾತಕ)*

'ಮುಂಬೈ ಜಾತಕ' ಕವನದಲ್ಲಿ ಮನುಷ್ಯನ ಸ್ವಾಭಾವಿಕ ನಿಯಂತ್ರಣವನ್ನು, ಸೂಕ್ಷ್ಮ ಮಾನವೀಯ ಸಂಬಂಧವನ್ನು ಆಧುನೀಕರಣ ಮತ್ತು ನಗರೀಕೃತ ಸಂಸ್ಕೃತಿ ಕಿತ್ತುಕೊಳ್ಳುವ ಚಿತ್ರಣವಿದೆ. ಮನುಷ್ಯ ಯಂತ್ರವಾಗಿ, ತನ್ನ ಆಂತರಿಕ ಭಾವನೆಗಳ ಕಳೆದುಕೊಳ್ಳುವ ಗ್ರಹಿಕೆ ಮೂಡುತ್ತದೆ.

**ಕೈ ಹಿಡಿದು ಸರಪಳಿಯ ಜಗ್ಗುತಿದೆ ಕರಿನಾಯಿ**
**ಹೊಳೆ ಹೊಳೆವ ಕೆಂಗಣ್ಣು ಜೋಲ್ವ ನಾಲಿಗೆ ಬಾಯಿ**
**ಸಂಜೆ ಮುಗಿಲಿನ ಕೆಳಗೆ**
**ದೂರ ದೂರದವರೆಗೆ.....!** *(ಸಂಜೆದಾರಿ)*

ಈ ಸಾಲುಗಳಲ್ಲಿ ವ್ಯಕ್ತಿ ತನ್ನ ವೃತ್ತಿ ಜೀವನದ ಅವಧಿಯಲ್ಲಿ ನೀಗಿಸಬಹುದಾಗಿದ್ದ ಕಾರ್ಯವನ್ನು ಮಾಡದಿರುವುದಕ್ಕಾಗಿ ವಿಷಾದ ಪಡುತ್ತಾನೆ.

*ಗೋಡೆ (1972), ಕಾಡಿನ ಕತ್ತಲಲ್ಲಿ (1981), ಪ್ರೀತಿ ಇಲ್ಲದ ಮೇಲೆ (1982)* ಸಂಕಲನಗಳು ಪ್ರಕಟವಾದದ್ದು ನವ್ಯಕಾವ್ಯದ ಕಾಲಾವಧಿಯಲ್ಲಿ. (1979 ರಲ್ಲಿ ದಲಿತ ಬಂಡಾಯದ ಕಾವ್ಯ ಮನೋಧರ್ಮ ಪ್ರಕಟವಾಗಿತ್ತು.) ಅದು ಪ್ರತಿಮಾತ್ಮಕ ಕಾವ್ಯ ಹೊಳವುಗೊಂಡು ಅಡಿಗರು ಉತ್ತುಂಗಕ್ಕೇರಿದ ಕಾಲವಾಗಿತ್ತು. ಆದರೆ ಶಿವರುದ್ರಪ್ಪ ಅವರು ಸಾಮಾನ್ಯ ಬದುಕಿನ ನೆಲೆಯನ್ನು ವೈಯಕ್ತಿಕ ಮಟ್ಟದ ಅಲ್ಲೋಲಕಲ್ಲೋಲವನ್ನು, ವರ್ತಮಾನದ ಅಸಹಾಕತೆಯನ್ನೂ ಕುತೂಹಲಕಾರಿಯಾಗಿ ಚಿತ್ರಿಸಿದರು. 'ವ್ಯರ್ಥ', 'ನನ್ನ ನಿನ್ನ ನಡುವೆ', 'ಗೋಡೆ', 'ಇನ್ನೆಂದು ಬೆಳಗು ನಿಮಗೆ?', 'ವಸಂತ ಮೂಡುವುದೆಂದಿಗೆ?', 'ದುಃಸ್ವಪ್ನ', 'ಪ್ರೀತಿ ಇಲ್ಲದ ಮೇಲೆ', 'ಎಲ್ಲೋ ಮಗು ಅಳುತಾ ಇದೆ' ಮುಂತಾದ ಕವನಗಳು ಸರಳ ಭಾವಗೀತಾತ್ಮಕ ಶೈಲಿಯಲ್ಲಿ ಈ ದೇಶದ ಸಾಮಾನ್ಯ ಮನುಷ್ಯನ ಪರಿಸ್ಥಿತಿಯನ್ನು, ವಿಮೋಚನೆಯ ಆಶಯಗಳನ್ನು ಮಗ್ಗ ಹೂಡುತ್ತವೆ.

'ಹುತ್ತಗಳ ಸುತ್ತ ಬೆತ್ತಲೆ ನಿಂತು
ಹಾಲು ತುಪ್ಪವನೆರೆವ ಸರ್ಪಾರಾಧಕರ ಕಂಡೆ
ಹಠಕ್ಕಾಗಿ ಮಠಕಟ್ಟಿ ಜಗದ್ಗುರುಗಳಾದ
ಸಾಹಿತಿಗಳ ಕಂಡೆ'

*(ದುಃಸ್ವಪ್ನ)*

ಜಿಎಸ್ಎಸ್‌ರ ಕಾವ್ಯ ಜೀವನದ ಹೊಸ ಘಟ್ಟ ನೀಡಿದ ಕವಿತೆ ಸಾಲುಗಳು ಇವು. ವಿಲಕ್ಷಣವಾದ, ನೋವು ನಿಗಿನಿಗಿಗೊಂಡು ಹುತ್ತಗಟ್ಟುತ್ತದೆ.

ಈ ನೆರಳ ನಡುವೆ
ನೆರಳಾಗಿ ಕೂತವನನ್ನು
ಯಾಕೋ ಇಲ್ಲಿ ಕೂತಿದ್ದೀಯಾ?
ಅಂದೆ.
ಹೆದರಿ, ಮೇಲೆದ್ದ, ಕಡ್ಡಿಕಾಲಿನ ಮೇಲೆ
ಹರಕು ಚಿಂದಿಯ, ಜೋಲು ಮೋರೆಯ
ಕೆದರಿದ ತಲೆಯ ಕೆಳಗೆ ಗಾಬರಿಕಣ್ಣು;
ಅಳು ಬೆರೆತ ಮಾತು:
ದನ ಬರಲಿಲ್ಲ, ಮನೆಯಲ್ಲಿ
ಒಡೇರು ಒದೀತಾರೆ.... ಅದಕ್ಕೆ, ಇಲ್ಲಿ....

*(ಕಾಡಿನ ಕತ್ತಲಲ್ಲಿ )*

—ಕವಿ ಹಿಡಿದಿಟ್ಟ ಈ ನೋವನ್ನು ಹೇಳುವ ಬದಲು ಮೌನವಾಗಿ ಅನುಭವಿಸುವುದೇ ಮೇಲು. ಈ ದೇಶದ ವಾಸ್ತವಿಕತೆಯ ಸವಾಲುಗಳು ಇವು.

ನಾನೂ ನೀನೂ ಬಹುಕಾಲದಿಂದ ನೀರೆರೆದು ಬೆಳೆಸಿದ
ಹೂವಿನ ತೋಟ ಸೀದು ಹೊಗೆಯಾಡುತ್ತದೆ
ಹೊಗೆಯಲ್ಲಿ ಉಸಿರುಕಟ್ಟಿಕೊಂಡು
ನಾನು ಮತ್ತು ನೀನು
ಗೋಡೆ ಎರಡೂ ಬದಿಗೆ
ನರಳಿ ಹೊರಳುತ್ತದೆ.... *(ಗೋಡೆ)*

—ಕಂಡ ಕನಸಿನ ಹೂವಿನ ತೋಟ ಸುಟ್ಟು ಹೊಗೆಯಾಡುವುದನ್ನು ಗೋಡೆ ಹೊರಳಿ ನಾಶವಾಗುವುದನ್ನು 'ಗೋಡೆ' ಕವಿತೆ ಉಸಿರು ಬಿಗಿ ಹಿಡಿದುಕೊಂಡೇ ಉಸುರುತ್ತದೆ.

ಪ್ರೀತಿ ಇಲ್ಲದ ಮೇಲೆ
ದಕ್ಷಿಣಾಫ್ರಿಕಾದ ಕಗ್ಗತ್ತಲಿಗೆ
ಬೆಳಕು ಮೂಡೀತು ಹೇಗೆ?
ಸೆರೆಮನೆಯ ಕಂಬಿಯ ನಡುವೆ
ಕಮರುವ ಕನಸು ಕೊನರೀತು ಹೇಗೆ?
ಬಿಳಿ ಜನರ ಕರಾಳ ಕಪ್ಪು ಹೃದಯಕೆ
ಕ್ರಿಸ್ತನ ಕರಣೆ ಅರ್ಥವಾದೀತು ಹೇಗೆ

*(ಪ್ರೀತಿ ಇಲ್ಲದ ಮೇಲೆ)*

ಎಲ್ಲೋ ಮಗು ಅಳುತಾ ಇದೆ
ಒಂದೇ ಸವನೆ-
ಕೈಗೆಟುಕದ ರೊಟ್ಟಿಯ ಚೂರಾಗಿದೆ ಚಂದಿರ
ಬಾನಿನ ತಟ್ಟೆಯಲಿ
ಹಸಿವಿನ ತುನಕುಗಳಂದದಿ ಚಿಕ್ಕೆಗಳುರಿಯುತ್ತಿವೆ
ಶೂನ್ಯದ ಹೊಟ್ಟೆಯಲಿ
ಸೊಕ್ಕಿದ ತೇಗಿನ ತೆರ ಝುಗಝುಗಿಸಿವೆ
ನಗರದ ಬೆಳಕಿನ ವಿಸ್ತಾರ

*(ಎಲ್ಲೋ ಮಗು ಅಳುತಾ ಇದೆ)*

ಮೇಲಿನ ಎರಡು ಕವಿತೆಗಳ ಪಾದಗಳು ಪ್ರೀತಿ ಇಲ್ಲದ ಸ್ಥಿತಿಯನ್ನು ನಿರರ್ಥಕವೆಂದು ಸಾರುತ್ತವೆ. ಮನುಷ್ಯನ ಅಳುವು ಇಡೀ ವರ್ತಮಾನವನ್ನೇ ಆವರಿಸಿರುವುದನ್ನು ಮನೋಜ್ಞವಾಗಿ ಹೇಳುತ್ತವೆ. 'ಎಲ್ಲೋ ಮಗು ಅಳುತಾ ಇದೆ' ಕವನದ ಸಾಲುಗಳಲ್ಲಿ ಮಗುವಿನ ಅಳು ವೈಯಕ್ತಿಕ ಮತ್ತು ಸಾಮಾಜಿಕ ದ್ವಂದ್ವವನ್ನು ದಾಟಿ ಚರಿತ್ರೆಗೆ ಜೋಡಿಸಿಕೊಳ್ಳುತ್ತದೆ.

'ಚಕ್ರಗತಿ' (1992), 'ವ್ಯಕ್ತಮಧ್ಯ' (1999) ಸಂಕಲನಗಳ ಮೂಲಕ ಜಿಎಸ್‌ಎಸ್ ಕಾವ್ಯ ಕೌಶಲದ ಸ್ಪಷ್ಟ ಸೂಚನೆಗಳನ್ನು ನೀಡುತ್ತಾರೆ. ('ತೀರ್ಥವಾಣಿ'-1960-ಅನುವಾದ ಕವಿತೆ ಸಂಕಲನ) ಕಾಲಗತಿಯಲ್ಲಿ ಕೊರಡಿನಿಂದ ಮತ್ತೆ ಚಿಗಿಯುವ ಕಾತುರ ಎದ್ದು ಕಾಣುತ್ತದೆ. ಕನ್ನಡ ಕಾವ್ಯದಲ್ಲಿಯೇ ಹೊಸತನಕ್ಕೆ ಪ್ರತೀಕವಾಗಿ ಕಾವ್ಯಕರ್ಮಕ್ಕೆ ಕೈಹಾಕಿದ್ದಾರೆ.

**ಯುಗ ಯುಗಗಳ ಯಾತನೆಯೇ**
**ಮೂರ್ತೀಭವಿಸಿದ ಮಗುವೇ,**
**ನಿನಗೆಲ್ಲಿದೆ ನೆಲೆ ತಲೆ ಇಡಲು**
**ಎಲ್ಲಿದೆ ತಬ್ಬಿಕೊಂಡು ಸಂತೈಸುವ ಮಡಿಲು?**

*(ನಿನಗೆಲ್ಲಿದೆ ಹೊರದಾರಿ?)*

—ದಿಕ್ಕು ದೆಸೆ ಇಲ್ಲದ ಮಗುವಿನ (ಮನುಷ್ಯನ) ನೆಲೆ ಹುಡುಕುವುದರೊಂದಿಗೆ 'ಚಕ್ರಗತಿ' ಕಾಲವನ್ನು-ಚರಿತ್ರೆಯನ್ನು ಪರಿಶೋಧಿಸುತ್ತದೆ.

'ವ್ಯಕ್ತಮಧ್ಯ' ಕವನ ಸಂಕಲನ, ಕಾವ್ಯದ ಪ್ರಯೋಗಶೀಲತೆಯನ್ನು ಹಾಗೂ ಕನ್ನಡ ಕಾವ್ಯ ಇನ್ನೂ ಗಟ್ಟಿ ನೆಲೆಕಾಣದ ಅನುಮಾನವನ್ನೂ ಬಿಚ್ಚಿಕೊಳ್ಳುತ್ತದೆ. ವಿಷಯ ವೈವಿಧ್ಯತೆಯಿಂದ, ರಚನೆಯ ಕುಶಲತೆಯಿಂದ ಈ ಸಂಕಲನ ಗಮನಸೆಳೆಯುತ್ತದೆ. ವರ್ತಮಾನದಲ್ಲಿ ಸಾಮಾನ್ಯವಾಗಿ ನಿಂತು ಭೂತ, ಸ್ಮರಣೆ ಹಾಗೂ ಭವಿಷ್ಯದ ನೆಲೆಯನ್ನು ಕವಿ ಹುಡುಕುತ್ತಾರೆ. ಅಷ್ಟೇ ಅಲ್ಲ ಕಾವ್ಯಮಂಡಿಗೆ ಮಾಡುವ ದೃಷ್ಟಿಯಿಂದ run on stanza patternನ್ನು ಪ್ರಯೋಗಿಸಿದ್ದಾರೆ. ಈ ಪ್ರಯೋಗ 'ಚಕ್ರಗತಿ' ಸಂಕಲನದಿಂದಲೂ ಮುಂದುವರೆದಿರುವುದನ್ನು ಮರೆವಂತಿಲ್ಲ. ಆಡುಮಾತಿನ ಸ್ವಚ್ಛಂದವನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಮುಕ್ತಬಂಧದ ರಚನೆಯ ವಿಶಿಷ್ಟ ವಿಧಾನದ ಕಾವ್ಯ ಪ್ರಯೋಗವಿದೆ. 'ಸಾಮಾನ್ಯವಾಗಿ ಹೊಸಗನ್ನಡ ಕವಿತೆಯಲ್ಲಿ ಮಾತ್ರ ಬಂಧಗಳು ಚತುಷ್ಪದಿಗಳ ಕಟ್ಟಡದಿಂದಾಗಿದ್ದು, ಆ ಚತುಷ್ಪದಿಗಳು ಒಂದೊಂದು ಪ್ರತ್ಯೇಕ ಮತ್ತು ಸಂಪೂರ್ಣ ಅರ್ಥ ಘಟಕಗಳಾಗಿವೆ' ಎಂದು ಟಿ.ವಿ. ವೆಂಕಟಾಚಲಶಾಸ್ತ್ರಿಗಳು ಅಭಿಪ್ರಾಯಪಡುತ್ತಾರೆ.

ಉದಾ: **ಪಂಪನ ಬನವಾಸಿಯೂ, ಕುವೆಂಪುವಿನ ಕುಪ್ಪಳಿಯೂ**
**ಅಕ್ಕಪಕ್ಕದಲ್ಲೇ ಇದ್ದಾವೆ ಅನ್ನುವುದೊಂದು**
**ಆಶ್ಚರ್ಯವೇನಲ್ಲ, ಆ ಪಂಪನೂ ಅಂದು**
**ದೂರದರಿಕೇಸರಿಯ ರಾಜ್ಯವೈಭವದ ಮಧ್ಯೆ ಬದುಕಿಯೂ**

**ಈ ಬನವಾಸಿಗಾಗಿ ಉತ್ಕಟವಾದ ಹಂಬಲದ ಹಾಡು**
**ಕಟ್ಟಿದ್ದು, ಕುವೆಂಪು ಮೈಸೂರಲ್ಲಿ ಕುಪ್ಪಳಿಯ**
**ಕಾಡಿಗೆದೆತೆರೆದು ಕೂತದ್ದು, ಎರಡೂ ಹೃದಯ-**
**ದೊಳಮಿಡಿತವೊಂದೇ ಎನ್ನಲು ಸಾಕ್ಷಿ. ನಾವೋ ಈ ಬರಡು**
**ಕಾಂಕ್ರೀಟು ಕಾಡುಗಳ ಮಧ್ಯೆ ಬದುಕುತ್ತ ಯಾವುದಕ್ಕೂ**

**ಸ್ಪಂದಿಸದಿರುವ ಕೊರಡಾಗಿ ಬಿದ್ದಿದ್ದೇವೆ**
**ಕಳ್ಳು ಬಳ್ಳಿಯ ನಂಟು ಹರಿದುಕೊಂಡಿದ್ದೇವೆ**
**ನಮ್ಮ ಪರಿಸರದಿಂದ ಕೊರಗುತ್ತಿದ್ದೇವೆ. ಹೀಗೆ ತುಕ್ಕು**
**ಹಿಡಿಯುತ್ತ.**

*(ಸ್ಪಂದನ)*

—ನಗರೀಕರಣದ ಬದುಕು ವಿಚಿತ್ರ ತಾಪದೊಳಗಿದ್ದುದನ್ನೂ, ಈ ಹಿಂದಿನ ಉತ್ಕಟವಾದ ನಿಸರ್ಗಪ್ರೇಮ ಮರೆಯುತ್ತಿರುವುದನ್ನೂ ಕಂಡು ಈ ಮನುಷ್ಯರನ್ನು ಪ್ರೀತಿಸುವುದು ಹೇಗೆ ಎಂದು ಕವಿ ವಿಷಾದಿಸುತ್ತಾರೆ.

ಕಾವ್ಯ ರಚನೆಯಲ್ಲಿ ಎಂದೂ ಅಂತರ್ಮುಖಿಯಾಗದೇ ಸದಾ ಹೊಸ ನಂಬಿಕೆಯ ಸಾಧ್ಯತೆಗಳನ್ನು ಹುಡುಕುತ್ತ, ಮನುಷ್ಯನ (ಸಮಾಜದ) ಅವನತಿ ಬಗ್ಗೆ ಕವಿ ಚಿಂತಿಸುತ್ತಾರೆ. ಆಶಯಗಳನ್ನು ಹಕ್ಕಿಗಳ ಕೊರಳಿಗೆ, ನಿಸರ್ಗದ ಮಡಿಲಿಗೆ ಇಡುವ ಕಾವ್ಯಕರ್ಮ ನಿಜವಾಗಲೂ ಕುತೂಹಲ ಹುಟ್ಟಿಸುತ್ತದೆ. ಮುಂದೆಯೂ ಶಿವರುದ್ರಪ್ಪನವರ ಕಾವ್ಯದ ರಚನಾ ಹಾದಿ ಕುತೂಹಲಕಾರಿಯಾಗಿರುವುದೇನೋ... ಒಟ್ಟಿನಲ್ಲಿ ಸುಟ್ಟ ಬದುಕಿನ ಬೂದಿಯಲ್ಲಿಯೇ ಮರುಹುಟ್ಟು ಪಡೆವ ಫೀನಿಕ್ಸ್ ಪಕ್ಷಿಯ ಹಾಗೆ ಜಿಎಸ್ಎಸ್ ಕಾವ್ಯ ಬೀದಿ....



# ಜಾಗೃತಿ, ಚಿಂತನೆಗಳ ಕಾವ್ಯ

ಎ. ರಘುರಾಂ

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕಾವ್ಯವನ್ನು ಪ್ರಧಾನ ಅಭಿವ್ಯಕ್ತಿಯನ್ನಾಗಿ ಸ್ವೀಕರಿಸಿದವರು ಡಾ॥ ಜಿ.ಎಸ್. ಶಿವರುದ್ರಪ್ಪನವರು. ತಮ್ಮದೇ ಆದ ಧೋರಣೆ ಮತ್ತು ಪ್ರಯೋಗಗಳಿಂದ ವಿಶಿಷ್ಟ ಕವಿಯಾಗಿ ಕಾಣಿಸಿಕೊಂಡಿದ್ದಾರೆ. ಇವರು 'ಸಾಮಗಾನ'ದಿಂದ 'ವ್ಯಕ್ತಮಧ್ಯ'ದವರೆಗೂ ಸುಮಾರು ಐದು ದಶಕಗಳ ಕಾಲ ಕಾವ್ಯ ಸೃಷ್ಟಿ ಮಾಡುತ್ತ (1951 ರಿಂದ 2000) ಬಂದುದು ಇವರ ಸೃಜನಶೀಲ ಪ್ರವೃತ್ತಿಯನ್ನು ಎತ್ತಿ ತೋರಿಸುತ್ತದೆ. ನವೋದಯ ಕಾವ್ಯದ ಇಳಿಹಂತದಲ್ಲಿ ಕಾಣಿಸಿಕೊಂಡ ಕವಿ ನವೋದಯದ ಎಲ್ಲ ಸತ್ವವನ್ನು ಕರಗತಮಾಡಿಕೊಂಡು ಕಾವ್ಯ ಪ್ರವೇಶ ಮಾಡಿದರು. ನವೋದಯದ ಎಲ್ಲಾ ಗುಣಗಳನ್ನು ಇವರ ಕಾವ್ಯದಲ್ಲಿ ಕಾಣಬಹುದು. ವಿಶೇಷವೇನೆಂದರೆ, ನವೋದಯದ ಕಾಲಘಟ್ಟದಲ್ಲಿ ಪ್ರವೇಶ ಮಾಡಿ ಸಮಕಾಲೀನ ಸಂದರ್ಭದಲ್ಲಿಯೂ ಕಾವ್ಯ ರಚಿಸುತ್ತಿರುವುದು ಬೆರಗನ್ನು ಹುಟ್ಟಿಸುತ್ತದೆ. ನವೋದಯ, ನವ್ಯ, ನವ್ಯೋತ್ತರವೆನ್ನದೇ ಎಲ್ಲಾ ಕಾಲದಲ್ಲಿ ಕಾವ್ಯ ನಿರಂತರತೆಯನ್ನು ಕಾಯ್ದುಕೊಳ್ಳುವುದು ಸಾಮಾನ್ಯವಾದ ಮಾತೇನಲ್ಲ. ಎಲ್ಲೋ ಐದಾರು ಕವನ ಸಂಕಲನ ಪ್ರಕಟವಾಗುವ ವೇಳೆಗೆ ಇಡೀ ಕಾವ್ಯಶಕ್ತಿ ಕುಗ್ಗಿಹೋಗಿ ಸತ್ವ ತೀರಿತೆಂದು ಕಾವ್ಯಲೋಕದಿಂದ ಕಾಣೆಯಾಗುವ ಕವಿಗಳನ್ನು ನೋಡಿದಾಗ ಇವರ ನಿರಂತರ ಕಾವ್ಯಸೃಜನೆ ಆಶ್ಚರ್ಯ ಮತ್ತು ಕುತೂಹಲಗಳನ್ನು ಒಟ್ಟಿಗೇ ಉಂಟುಮಾಡುತ್ತದೆ. ಇದಕ್ಕೆ ಕಾರಣಗಳಿಲ್ಲದಿಲ್ಲ. ಅಪಾರವಾದ ಜೀವನಶ್ರದ್ಧೆ ಮತ್ತು ಪ್ರೀತಿ, ಚಿಂತನಶೀಲ ಮನಸ್ಸು, ಸಾಮಾಜಿಕ ಜಾಗೃತಿ, ಪ್ರಕೃತಿ ಪ್ರೇಮ, ಯಾವುದೇ ಸಿದ್ಧಾಂತಗಳಿರಲಿ ಅಲ್ಲಿಂದ ಅಮೂಲ್ಯವಾದುದನ್ನು ಸ್ವೀಕರಿಸುವ ಮನಸ್ಸು— ಇವೆಲ್ಲ ಚಿಂತನೆಗಳು ಇವರ ಕಾವ್ಯದ ಗಟ್ಟಿತನಕ್ಕೆ ತಳಹದಿಯನ್ನು ಒದಗಿಸಿವೆ.

ಕಾವ್ಯಕ್ರಿಯೆ ಸುಲಭವಾದದ್ದೆಂದು ಎಂದೂ ಭಾವಿಸಿರದ ಕವಿ, ಕಾವ್ಯ ಭಾವಗೀತಾತ್ಮಕತೆಯನ್ನು ಹೊಂದಿ ಜಾಗೃತಿಯನ್ನುಂಟುಮಾಡುವ ವಿಶೇಷ ಗುಣ ಹೊಂದಿದ್ದು ಎಂದು ಭಾವಿಸಿದವರು. ಈ ಕಾರಣದಿಂದಲೇ ಜಿಎಸ್‌ಎಸ್ ಅವರ ಕಾವ್ಯ ಸಾಮಾಜಿಕ ಎಚ್ಚರ ಮೂಡಿಸಲು ಗಟ್ಟಿ ವೈಚಾರಿಕತೆಯನ್ನು ರೂಢಿಸಿಕೊಂಡಿದೆ. ಕವಿತೆಗೆ ಒಂದು ನಿರ್ದಿಷ್ಟವಾದ ಚೌಕಟ್ಟು ಇರುವುದು ನಿಜ. ಆ ಸೀಮಿತ ಚೌಕಟ್ಟಿನೊಳಗೇ ಜನಪರ ನಿಲುವುಗಳನ್ನಿಟ್ಟುಕೊಂಡು ಸಾಮಾಜಿಕ ವೈರುಧ್ಯಗಳನ್ನು ಗಹನವಾಗಿ ವಿಚಾರ ಮಾಡುವ ಪ್ರಯತ್ನ ಮತ್ತು ವಿಶಿಷ್ಟವಾಗಿರುವ

ಕಾವ್ಯ ಮಾಧ್ಯಮದ ಸಂಯಮವನ್ನು ಉಳಿಸಿಕೊಂಡು ಸಾಮಾಜಿಕ ಸಂವಹನಕ್ಕೆ ದಾರಿ ಮಾಡಿಕೊಡುವ ಕಾವ್ಯ ರಚಿಸುವ ಬಯಕೆ ಇವರದಾಗಿದೆ. ಮೌಲ್ಯಗಳ ಮುಖಾಮುಖಿಯಲ್ಲಿ ತನ್ಮಯತೆಯನ್ನು ಮಾಯಗೊಳಿಸದೇ ಸಾಮಾಜಿಕ ಸಮತೋಲನವನ್ನು ಕಾಯ್ದುಕೊಳ್ಳುವ ವಿಶೇಷತೆ ಇವರ ಕಾವ್ಯದಲ್ಲಿ ಕಂಡು ಬರುತ್ತದೆ. ಅರ್ಥ ಶ್ರೀಮಂತಿಕೆ, ಭಾವ ಶ್ರೀಮಂತಿಕೆಯ ಜೊತೆಗೆ ವೈಚಾರಿಕತೆ ಪ್ರಣಾಳಿಕೆಯಾಗದೆ, ಕಾವ್ಯದ ಭಾವದೊಳಗೆ ಬೆರೆತುಹೋಗುವ ಗುಣ ವಿಶೇಷತೆಯನ್ನು ಇವರ ಕಾವ್ಯದಲ್ಲಿ ಕಾಣಬಹುದು. ಎಲ್ಲಿ ತಾತ್ವಿಕತೆ ಎಲ್ಲೆ ಮೀರುತ್ತದೋ ಅಲ್ಲಿ ಕಾವ್ಯತ್ವ ಮಾಯವಾಗುವ ಅಪಾಯವಿದೆ. ಯಾವುದನ್ನೂ ಸಂಯಮದಿಂದ ನಿರ್ವಹಿಸುವ, ಸಮತೂಕವನ್ನು ಸಾಧಿಸುವ ಕಾರಣದಿಂದಲೇ ಇವರನ್ನು 'ಸಮನ್ವಯ ಕವಿ' ಎಂದು ಕರೆಯಲು ಕಾರಣವಾಗಿರಬಹುದು.

ಕವಿ ತನ್ನ ಆಂತರಿಕ ಸಂವೇದನೆಗಳನ್ನು ಹೊರಹಾಕುವಾಗ ಬರೀ ವಿಚಾರವೇ ಪ್ರಧಾನವಾಗಿ ರಸವಿಲ್ಲದ ಎಷ್ಟೋ ಸನ್ನಿವೇಶಗಳನ್ನು ಆಧುನಿಕ ಕಾವ್ಯದಲ್ಲಿ ಕಾಣುತ್ತೇವೆ. ವೈಚಾರಿಕತೆ ರಸತೀವ್ರತೆಯೊಳಗೆ ಲೀನವಾಗದೇ ಹೋದರೆ ಅದು ಜಾಳುಜಾಳಾಗಿ ಶಕ್ತಿಶಾಲಿ ಕಾವ್ಯ ಲಭ್ಯವಾಗದೇ ಹೋಗಬಹುದು. ಆಗ ಕವಿಯ ಪ್ರಣಾಳಿಕೆಗಳಷ್ಟೇ ಪ್ರಕಟವಾಗಿ ಕವಿಯ ಕಾವ್ಯಶಕ್ತಿಯ ಬಗ್ಗೆ ಅನುಮಾನಗಳು ಹುಟ್ಟಲಾರಂಭಿಸುತ್ತವೆ. ಸಾಮಾಜಿಕ ವಿಶಿಷ್ಟ ಸಂದರ್ಭಗಳನ್ನು ಕಾವ್ಯಕ್ಕೆ ತರುವಾಗ ಕಾವ್ಯಲೋಕದ ಗಂಭೀರತೆಯೊಳಗೆ ಸೊಗಸನ್ನು ಕಟ್ಟಿಕೊಡುವ ಶಕ್ತಿ ಜಿಎಸ್ಎಸ್ ಅವರಲ್ಲಿದೆ. ಈ ಎಲ್ಲ ಕಾರಣಗಳಿಂದ ಇವರ ಕಾವ್ಯ ಆ ಹೊತ್ತಿನಿಂದ ಈ ಹೊತ್ತಿನವರೆಗೂ ನಿರಂತರತೆಯನ್ನು ಸಾಧಿಸಲು ಸಾಧ್ಯವಾಯಿತು. ಇವರ ಕಾವ್ಯದ ಮತ್ತೊಂದು ಗುಣವೆಂದರೆ ಸಂಕ್ಷಿಪ್ತತೆ. ಸರಳ ಸಂಕ್ಷಿಪ್ತ ರಚನೆಗಳು ಇಲ್ಲಿ ಹೇರಳವಾಗಿವೆ.

ಸಮಾಜ ವಿಜ್ಞಾನದ ಅನೇಕ ಕುತೂಹಲಗಳು, ಧರ್ಮ, ಸಾಮಾಜಿಕ ನಂಬಿಕೆಗಳು, ಬಾಲ್ಯ ಜೀವನದ ನೆನಪುಗಳು, ಪ್ರಕೃತಿ ಪ್ರೇಮ, ಮಾನವ ಪ್ರೀತಿ, ಬದುಕಿನ ಬಗೆಗಿನ ಅದಮ್ಯ ಆಕಾಂಕ್ಷೆ, ಪುರಾಣ ಸಂಗತಿಗಳು, ಉದಾತ್ತ ವ್ಯಕ್ತಿಗಳ ಜೀವನಶ್ರದ್ಧೆ ಇತ್ಯಾದಿ ಅನೇಕ ಸಂಗತಿಗಳು ಇವರ ಕಾವ್ಯಕ್ಕೆ ವಸ್ತುವಾಗುತ್ತವೆ. ಕಾವ್ಯಶಿಲ್ಪದಲ್ಲಿ ಈ ಎಲ್ಲ ವಿಷಯಗಳು ಕವಿಯ ಮೂಲ ಸಂವೇದನೆಯೊಳಗೆ ಅರಳಿ ನಿಲ್ಲುತ್ತವೆ. ಸಾಮಾಜಿಕ, ಸಾಂಸ್ಕೃತಿಕ, ಅಧ್ಯಾತ್ಮಿಕ, ಭಾವಗೀತಾತ್ಮಕ ನೆಲೆಗಳನ್ನು ಕೂಡ ಬಿಟ್ಟುಕೊಡದೆ ಇವರ ಕಾವ್ಯ ಭಾಷಿಕ ನೆಲೆಯಲ್ಲಿ ಹೃದ್ಯವಾಗಿ ಹೂವಿನಂತೆ ಅರಳುವುದನ್ನು ಗಮನಿಸುತ್ತೇವೆ. ಇವರ ಕಾವ್ಯ, ವಸ್ತು ವೈವಿಧ್ಯತೆಯನ್ನು ಒಳಗೊಂಡುದು ಮತ್ತು ವೈಚಾರಿಕತೆಯಿಂದ ಗಟ್ಟಿತನದ್ದೂ ಆಗಿ ಕಾಣುತ್ತದೆ. ಸಾಮಾಜಿಕ ಸಮಸ್ಯೆಗಳು, ತತ್ವಗಳ ಪ್ರತಿಪಾದನೆ, ನೈತಿಕ ಮೌಲ್ಯಗಳು, ಆರೋಗ್ಯಕಾರಿ ಸಾಮಾಜಿಕ ಸಮಸ್ತ ಅಂಶಗಳು ವೈಚಾರಿಕತೆ ಎನ್ನುವ ಶಬ್ದದಲ್ಲಿ ಬಂದುಬಿಡುತ್ತವೆ. ಬರೀ ವೈಚಾರಿಕತೆಯೊಂದೇ ಕಾವ್ಯವಾಗಲಾರದು. ಹೀಗಾಗಿಯೇ ಸಾಹಿತ್ಯದಲ್ಲಿ 'ಬದ್ಧತೆ' ಎಂಬ ಶಬ್ದ ಪ್ರಯೋಗವಾಗುವುದು. ಬದ್ಧತೆಗೊಳಪಟ್ಟು ಬದ್ಧತೆಯನ್ನು ಮೀರಿ ನಿಲ್ಲುವ ವ್ಯಕ್ತಿತ್ವ

ಕಾವ್ಯದ ಮಟ್ಟದಲ್ಲಂತೂ ಗಂಭೀರವಾದುದು. ಇದನ್ನು ಕಾಯ್ದುಕೊಂಡು ಹಂತ ಹಂತ ಮೇಲೇರುವ ವ್ಯಕ್ತಿ ಕಾವ್ಯದಲ್ಲಿ ಶ್ರೇಷ್ಠತೆಯನ್ನು ಸಾಧಿಸಲು ಸಾಧ್ಯ. ವೈಚಾರಿಕತೆ ಅನುಭವದ ಮೂಲಕ ಕಾವ್ಯದಲ್ಲಿ ಅಭಿವ್ಯಕ್ತಗೊಳ್ಳುತ್ತದೆ. ವಸ್ತುವೊಂದನ್ನು ಕವಿ ಸ್ವೀಕರಿಸುವ ವಿಧಾನ, ಅನುಭವದ ಮೂಸೆಯಲ್ಲಿ ಕಟ್ಟುವ ಕ್ರಮ ಇವೆಲ್ಲವೂ ಕೂಡ ತಂತ್ರ ಎಂಬ ಶಬ್ದದಲ್ಲಿ ಬಂಧಿಯಾಗಿಬಿಡುತ್ತದೆ. ಒಟ್ಟು ಸಂದರ್ಭದಲ್ಲಿ ವೈಚಾರಿಕತೆಯನ್ನು ಅನುಭವ ಪ್ರತಿನಿಧಿಸುತ್ತದೆ. ವೈಚಾರಿಕತೆ ಪ್ರತಿಪಾದಿಸಲು ಕಾವ್ಯದಲ್ಲಿ ಅಲಂಕಾರ, ಪ್ರತಿಮೆ, ಸಂಕೇತಗಳು ಬರುವುದುಂಟು. ಹಳಗನ್ನಡ ಕಾವ್ಯದಲ್ಲಿ ಬರುವ ಅಲಂಕಾರಗಳು ಕಾವ್ಯದ ಬಾಹ್ಯ ಮತ್ತು ಆಂತರಿಕ ಶಿಸ್ತಾಗಿ ಒಂದೆಡೆ ಕಾಣಿಸಿದರೆ ಕಾವ್ಯದ ವೈಚಾರಿಕತೆಯನ್ನು ಬಳಸಲು ಪೂರಕವಾಗಿಯೂ ಕಾಣುತ್ತೇವೆ. ಶಿವರುದ್ರಪ್ಪನವರು “ಶಾರದೆ” ಕವನವನ್ನು ಅಲಂಕಾರಿಕ ಭಾಷೆಯಲ್ಲಿ ಹೀಗೆ ವರ್ಣಿಸುತ್ತಾರೆ:

**ಶ್ರಾವಣಾ ಬಂತು ಶ್ರಾವಣಾ**
**ಇವಳು ಉಸಿರಾಡಿದರೆ ಹಸಿರು, ಮಾತಾಡಿದರೆ ಜುಳುಜುಳು,**
**ಹೆಜ್ಜೆ ಇಟ್ಟರೆ ಹೂವು, ತುರುಬಿನ ತುಂಬ ಮಲ್ಲಿಗೆ ಮೋಡ.**

ಹೀಗೆ ಪ್ರಕೃತಿಯ ಚೆಲುವಿನಲ್ಲಿ ಶಾರದೆಯ ಚೈತನ್ಯಶೀಲ ಬದುಕನ್ನು ಅಲಂಕಾರಿಕ ಭಾಷೆಯಲ್ಲಿ ವರ್ಣಿಸುತ್ತಾರೆ.

ಅಲಂಕಾರಕ್ಕಾಗಿ ಇನ್ನೊಂದು ಉದಾ. “ತೆಂಗು” ಕವಿತೆ:

**“ಮನೆಗಳಲ್ಲಿ ಮಹಡಿ ಮನೆ ಹೇಗೋ ಹಾಗೆ,**
**ಮರಗಳಲ್ಲಿ ಇದು ಮಹಡಿ ಮರ**
**ಉದ್ದನೆಯ ಮೊರಡು ದಿಂಡಿನ ಒಳಗೆ**
**ಮೇಲಕ್ಕೆ ನೀರೇರಿಸುವ ಪಂಪು ಕಾಣದು”**

ಇಲ್ಲಿ ತೆಂಗಿನ ಸೃಷ್ಟಿ ವೈಚಿತ್ರ್ಯದ ಅಚ್ಚರಿಯೊಂದಿಗೆ ತೆಂಗನ್ನು ಮತ್ತೊಂದಕ್ಕೆ ಉಪಮಾಲಂಕಾರವಾಗಿ ಸಮಾನಾರ್ಥವಾಗಿ ಕವಿ ದುಡಿಸಿಕೊಳ್ಳುತ್ತಾರೆ. ಮನೆಗೆ—ಸಾಮಾನ್ಯ ಮನೆಗಳು, ಮಹಡಿ ಮನೆಗೆ—ಬೆಳೆದು ನಿಂತ ತೆಂಗಿನಮರವನ್ನು ಉಪಮೆಯಾಗಿ ಕೊಡುತ್ತಾರೆ. ತೆಂಗು ಹೇಗೆ ಎತ್ತರ ಬೆಳೆದು ಭೂಮಿಯಿಂದ ಸಂಪರ್ಕವಿದ್ದು, ಎಟುಕ ದಂತಿರುತ್ತದೆಯೋ ಹಾಗೆ ಮನೆ ಭೂಮಿಯಿಂದ ಸಹಜ ಸಂಪರ್ಕ ಹೊಂದಿದ್ದರೆ, ಮಹಡಿ ಮನೆ ಭೂಮಿಯ ಸಂಪರ್ಕದಿಂದ ದೂರ ಉಳಿಯುವ ಕ್ರಮ. ತೆಂಗಿನಂತೆ ಮಹಡಿಯ ಸಂಪರ್ಕ ಕಷ್ಟವಾದುದು. ಎಲ್ಲ ರೀತಿಯಿಂದಲೂ ಬದುಕಿನ ಲೆಕ್ಕಾಚಾರ ದೂರವಾದುದು ಎಂಬುದನ್ನು ತೆಂಗಿನ ಮರದ ಮೂಲಕ ಮಹಲಿನ ವಿಡಂಬನೆ ಮಾಡಿರುವುದನ್ನು ಕಾಣುತ್ತೇವೆ.

ಕಾವ್ಯದಲ್ಲಿ ನಿತ್ಯ ಸಂಗತಿಗಳು ಅನುಭವದ ಕುಲುಮೆಯಲ್ಲಿ ಭಾವನಾತ್ಮಕತೆಯ ಪರಿವೇಷವನ್ನು ತೊಟ್ಟು ಕಲಾತ್ಮಕವಾಗಿ ಅರಳಬೇಕಾಗುತ್ತದೆ. ಇಂತಹ ಭಾವನೆಗಳಿಗೆ

ತಂತ್ರ, ಭಾಷೆ, ರಸ, ಸ್ವೋಪಜ್ಞತೆ ಇತ್ಯಾದಿ ಪೂರಕವಾಗುವ ಅಂಶಗಳು ಕಾವ್ಯವಾಗುವೆಡೆಯಲ್ಲಿ ಬಹುಮುಖ್ಯ ಸ್ಥಾನವನ್ನು ಪಡೆಯುತ್ತವೆ. ವಸ್ತುವೊಂದು ಭಾವಾಭಿವ್ಯಕ್ತಿಯ ಸಮರ್ಥ ಮಾಧ್ಯಮವನ್ನು ಆಶ್ರಯಿಸಿದಾಗ ಮಾತ್ರ ಕವಿ ಮನಸ್ಸಿನ ಮೂಲ ಉದ್ದೇಶ ನೆರವೇರಲು ಸಾಧ್ಯ. ಅಂದರೆ ಬಹು ದೊಡ್ಡ ವಸ್ತುವೊಂದನ್ನು ಸಣ್ಣ ಸಾನೆಟ್‌ನಲ್ಲಿ ಹೇಳಲು ಸಾಧ್ಯವಾಗುವುದಿಲ್ಲ. ಅದಕ್ಕೆ ಕಥನ ಕವನ, ಖಂಡಕಾವ್ಯ, ಮಹಾಕಾವ್ಯದಂತಹ ಮಾಧ್ಯಮವೇ ಬೇಕಾಗುತ್ತದೆ. ವೈಚಾರಿಕತೆ ಕಾವ್ಯದ ಮೇಲ್ಮೆಯನ್ನು ತೀರ್ಮಾನಿಸುವ ಅಂಶಗಳಲ್ಲಿ ಒಂದಾಗಿದೆ. ಉದಾತ್ತ ಆಶಯಗಳನ್ನು ಇಟ್ಟುಕೊಂಡು ರಚನೆಯಾದಂತಹ ಕಾವ್ಯ ಹೊಸದೊಂದು ದೃಷ್ಟಿಕೋನವನ್ನು ಓದುಗನಲ್ಲಿ ಹುಟ್ಟಿಸಬೇಕು. ಒಬ್ಬ, ಮತ್ತೊಬ್ಬ ಕವಿಗೂ ವ್ಯತ್ಯಾಸ ಗುರುತಿಸಲು ಈ ತೆರನಾದ ಅಂಶಗಳೇ ಕಾರಣವಾಗುತ್ತವೆ. ಕವಿಯೊಬ್ಬ ಹೇಗೆ ಕಾವ್ಯ ಕಟ್ಟಬಲ್ಲ ಎಂಬ ಕುತೂಹಲದೊಂದಿಗೆ ಆರಂಭವಾದ ಚರ್ಚೆ ಕವಿಯೊಬ್ಬನ ದೃಷ್ಟಿಕೋನದಲ್ಲಿ ಸಾಮಾಜಿಕ, ವೈಯಕ್ತಿಕ ವಾಂಛೆಗಳು ಹೇಗೆ ಕಲಾತ್ಮಕತೆಯಲ್ಲಿ ಅರಳಿ ಸೊಗಸುಗಾರಿಕೆಯನ್ನು ಪಡೆಯುತ್ತವೆ ಎಂಬುದು ಬಹುಮುಖ್ಯ ಅಂಶ.

ಶಿವರುದ್ರಪ್ಪನವರ ಆರಂಭಿಕ ಕಾವ್ಯ, ಸೌಂದರ್ಯದ ಪ್ರಜ್ಞೆಯೊಂದನ್ನು ಕೇಂದ್ರ ಮಾಡಿಕೊಂಡು ರಚನೆಯಾದಂತೆ ಕಾಣುತ್ತದೆ. ಇದಕ್ಕೆ ನವೋದಯದ 'ರಮ್ಯತೆ' ಬಹುಮುಖ್ಯ ಪ್ರೇರಣೆಯಾದಂತಿದೆ. ಆನಂತರದ ಕಾವ್ಯ ಭಾವಗೀತವಾಗಿ, ಸಾಮಾಜಿಕ ಶ್ರದ್ಧೆಯಾಗಿ ತಾತ್ವಿಕತೆಯ ಮೇಲ್ಮೆಯನ್ನು ಪಡೆಯುತ್ತದೆ. ಇವರ ಕಾವ್ಯದ ವೈಚಾರಿಕತೆ ಗಂಭೀರ ಸ್ವರೂಪದ್ದು. ಕವಿಯ ಸಾಮಾನ್ಯ ಕಾಳಜಿಗಳೆಂಥವು ಎಂಬುದನ್ನು ಅರಿಯಲು ಅವರ ಎರಡು ಮುಖ್ಯ ಪದ್ಯಗಳನ್ನು ಗಮನಿಸಿ ಮುಂದುವರಿಯಬೇಕಾಗುತ್ತದೆ. ಆ ಕವಿತೆಗಳೆಂದರೆ 'ನಾನೇಕೆ ಬರೆಯುತ್ತೇನೆ', 'ನಾನು ಬರೆಯುತ್ತೇನೆ'. ಮೊದಲ ಕವಿತೆಯಲ್ಲಿ

> ನಾನು ಬರೆಯುತ್ತೇನೆ
> ನನ್ನನ್ನು ನಾನು ಕಂಡುಕೊಳ್ಳುವುದಕ್ಕೆ,
> ಮತ್ತೆ ಕಾಣಿಸುವುದಕ್ಕೆ,
> ನಿಮ್ಮೊಂದಿಗೆ ಸಂವಾದಿಸುವುದಕ್ಕೆ,
>
> ನಾನು ಬರೆಯುತ್ತೇನೆ
> ಖುಷಿಗೆ, ನೋವಿಗೆ
> ರೊಚ್ಚಿಗೆ ಮತ್ತು ಹುಚ್ಚಿಗೆ
> ಅಥವಾ ನಂದಿಸಲಾರದ ಕಿಚ್ಚಿಗೆ.

ಕಾವ್ಯ ಸೃಷ್ಟಿ ಯಾವ ಸಂದರ್ಭದಲ್ಲಾಗುತ್ತದೆ, ಕಾವ್ಯ ಪ್ರಯೋಜನ ಯಾವ ತೆರನಾದದ್ದು ಎಂಬ ಸೂಕ್ಷ್ಮಗಳು ಈ ಕವಿತೆಯಲ್ಲಿವೆ. ಕವಿಗೆ ತನ್ನನ್ನು ತಾನು ಅರಿತುಕೊಳ್ಳಲಿಕ್ಕೆ ಮತ್ತು ಸಾಮಾಜಿಕ ಸಂವಾದಕ್ಕೆ ಕಾವ್ಯ ಮುಖ್ಯವಾಗುತ್ತದೆ. ಇವರು 'ನಾನು ಬರೆಯುತ್ತೇನೆ' ಎಂಬ ಇನ್ನೊಂದು ಕವನದಲ್ಲಿ ಹೀಗೆ ಹೇಳುತ್ತಾರೆ.

**'ನಾನು ಬರೆಯುತ್ತೇನೆ**
**ನೆಲದಾಳದಲ್ಲಿ ಮಲಗಿರುವ ಮೂಳೆಗಳ**
**ನಿಟ್ಟುಸಿರನ್ನು ಕುರಿತು,**
**ನಾನು ಬರೆಯುತ್ತೇನೆ**
**ಶತಮಾನಗಳ ಕತ್ತಲನ್ನೊಡೆದು**
**ಮೆತ್ತಗೆ ತಲೆಯೆತ್ತುವ ಮೊಳಕೆಗಳನ್ನು ಕುರಿತು.**

ಇವರ ಕಾವ್ಯವನ್ನು ಸೌಮ್ಯ ಕೋಮಲ ಭಾವಗೀತಾತ್ಮಕ ಪರಿಮಿತ ಚೌಕಟ್ಟಿನಲ್ಲಷ್ಟೇ ನೋಡುವವರು ಇನ್ನಷ್ಟು ವೈವಿಧ್ಯತೆಗಳ ವಿಸ್ತಾರವನ್ನು ಗಮನಿಸಬೇಕಾಗುತ್ತದೆ. ಕಾವ್ಯ ಕೆದಕುವ, ಕೆಣಕುವುದರ ಮೂಲಕ ಹೊಸದೊಂದನ್ನು ಓದುಗರಿಗೆ ಕೊಡುವ ಉದ್ದೇಶ ಇಲ್ಲಿದೆ. ಪ್ರಖರ ವೈಚಾರಿಕತೆ ಮತ್ತು ಭಾವಗೀತಾತ್ಮಕತೆ ಶ್ರೇಷ್ಠತೆಯನ್ನು ಪಡೆಯುವುದು ಇಲ್ಲಿಯೇ. 'ಸಾಮಗಾನ'ದ ರಚನೆಗಳನ್ನು ಗಮನಿಸಿದರೆ ಕುವೆಂಪು, ಪುತಿನ ಮೊದಲಾದ ನವೋದಯ ಕವಿಗಳು ಪ್ರೇರಣೆಯಾದಂತೆ ತೋರುತ್ತದೆ.

**ಪ್ರಕೃತಿಯಂತೆ ಕವಿಯ ಮನಸು**
**ವಿಪುಲ ರೂಪಧಾರಿಣಿ**
**ಬೊಮ್ಮನೆಡೆಯ ಕನಸಿನಂತೆ**
**ಕೋಟ ಕಲ್ಪಗಾಮಿನಿ**

ಎಂಬ ಸಾಲುಗಳು ನವೋದಯದ ದಟ್ಟ ಪ್ರಭಾವವನ್ನು ತೋರಿಸುತ್ತವೆ. ಆರಂಭದ *ಸಾಮಗಾನ, ದೇವಶಿಲ್ಪ, ದೀಪದ ಹೆಜ್ಜೆ, ಕಾರ್ತಿಕ, ಚೆಲುವು-ಒಲವು*ಗಳ ಅನೇಕ ರಚನೆಗಳು ನವೋದಯದ ಪ್ರಭಾವವನ್ನು ಉಳಿಸಿಕೊಂಡಿವೆ. ಸೌಂದರ್ಯಾತ್ಮಕ ನೆಲೆಗಳನ್ನು ಉಳಿಸಿಕೊಂಡೇ ಕಾವ್ಯ ಮುನ್ನಡೆದಿದೆ. ಪ್ರಕೃತಿ ಪ್ರೇಮದ ಬಗ್ಗೆ ಅನೇಕ ಕವಿತೆಗಳಿವೆ.

'ಮಾಘಜಿನ' ಎಂಬ ಪದ್ಯದ ಸಾಲುಗಳು ಹೀಗಿವೆ—

**ಮೊದಲು ಬಡುಸಹಿತ ಎಲ್ಲವನು ಕಿತ್ತೆಸೆದ,**
**ಬಿತ್ತು ಕಾಲಡಿಯಲ್ಲಿ ತರಗೆಲೆಯ ಮೊತ್ತ,**
**ಸುತ್ತ ಬೆಳೆಯಿತು ಮೌನಗಳ ಹುತ್ತ.**

'ಪ್ರಕೃತಿ' ಹೊಸ ಚೈತನ್ಯಕ್ಕೆ ಅಣಿಯಾಗುತ್ತ 'ಜಿನ'ನಂತೆ ಕಾಣುವ ಪರಿ ಅನನ್ಯವಾದುದು.

'ಕಂಪ್ಲೇಂಟು' ಎಂಬ ಕವಿತೆಯಲ್ಲಿ—

**ಕ್ಯೂ ನಿಂತು ಚೈತ್ರನಿಗಾಗಿ ಕಾಯುತ್ತಿದ್ದೇವೆ ನಾವೆಲ್ಲ,**
**ಬಂದನೇ ಹಿಡಿದು ಬಣ್ಣ ಬಣ್ಣಗಳ ಬಕೆಟ್ಟನು?**
**ಓ, ಬಂದ ಗಾಳಿಯ ಕುಂಚವನ್ನದ್ದಿ ಬಣ್ಣದಲಿ**
**ಆಗಲೇ ಬಳಿದಿದ್ದಾನೆ ಹಲವು ಮರಗಳನು!**

ಎಂದು 'ವಸಂತ' ಮುನ್ಸಿಪಲ್ ಕಂಟ್ರಾಕ್ಟರ್ ಇದ್ದಂತೆ; ಏಕಿಷ್ಟು ತಡಮಾಡಿದ ಎಂದು ಕೇಳುವವರೇ ಇಲ್ಲ, ತನಿಖೆ ಮಾಡುವವರಿಲ್ಲ, ಅಲ್ಲೊಮ್ಮೆ ಇಲ್ಲೊಮ್ಮೆ ಬಣ್ಣ ಬಳಿಯುವ ಇವ ಯಾವಾಗ ಪೂರ್ಣಗೊಳಿಸುತ್ತಾನೋ ಎಂದು ಪ್ರಶ್ನಿಸುತ್ತಾರೆ. ಪ್ರಕೃತಿಯನ್ನು ನಮ್ಮ ಸನಿಹದ ಸನ್ನಿವೇಶವೊಂದಕ್ಕೆ ಹೋಲಿಸಿ ವಿಡಂಬನಾತ್ಮಕ ದೃಷ್ಟಿಯಲ್ಲಿ ಪ್ರಕೃತಿಯನ್ನು ಕೇಂದ್ರವಾಗಿಟ್ಟುಕೊಂಡು ನಮ್ಮ ಅವ್ಯವಸ್ಥೆಯನ್ನೂ ಅದರೊಳಗೇ ಸೇರಿಸಿ ವಿಡಂಬಿಸುವ ಕ್ರಮವನ್ನು ಕಾಣುತ್ತೇವೆ. ಪ್ರಕೃತಿ ಮತ್ತು ಮಾನವ ವಿಕೃತಿಗಳೆರಡನ್ನೂ ಏಕ ಕಾಲಕ್ಕೆ ಕಾವ್ಯದಲ್ಲಿ ಸೇರಿಸುತ್ತಾರೆ. ಕೆಲವು ಗೇಯತೆಯನ್ನು ಹೊಂದಿ ಭಾವಗೀತೆಗಳಾಗಿದ್ದರೆ ಮತ್ತೆ ಕೆಲವು ವಿಡಂಬನೆಯಲ್ಲಿ ವಾಚ್ಯವಾಗಿ ಗೀತ ಗುಣ ಕಳೆದುಕೊಂಡಿವೆ. ಭಾವಗೀತೆಗೆ ಉತ್ತಮ ಸಂಗೀತ ಸಹಚರ್ಯ ಹೊಂದಿಸುವ ಗುಣ ಸಹಜವಾಗೇ ಕವಿಗೆ ಸಿದ್ಧಿಸಿದೆ. 'ಮಲ್ಲಿಗೆ' ಎನ್ನುವ ಕವನವನ್ನು ಗಮನಿಸಬಹುದು.

**ನೋಡು ಇದೊ ಇಲ್ಲರಳಿ ನಗುತಿದೆ**
**ಏಳು ಸುತ್ತಿನ ಮಲ್ಲಿಗೆ**
**ಇಷ್ಟು ಹಚ್ಚನೆ ಹಸುರ ಗಿಡದಿಂ**
**ದೆಂತು ಮೂಡಿತೋ ಬೆಳ್ಳಗೆ!**

ಅದ್ಭುತ ಬೆರಗಿನಲ್ಲಿ 'ಮಲ್ಲಿಗೆ' ಅರಳುವ ಪರಿಗೆ ಕವಿ ವಿಸ್ಮಯರಾಗಿದ್ದಾರೆ. ನವೋದಯದ ಕಲ್ಪನಾ ಪ್ರಧಾನತೆ, ಧ್ಯಾನಸ್ಥ ಗುಣ, ಗೇಯಪ್ರಧಾನತೆ ಸಹಜವಾಗಿಯೇ ಕಾವ್ಯಕ್ಕೆ ಬಂದಿದೆ. ಇಡೀ ಪದ್ಯದಲ್ಲಿ

**ಒಲವು ತುಂಬಿದ ಮುಗುದೆಯೆದೆಯಿಂ**
**ದೊಗೆದ ನಲ್ನುಡಿಯಂತಿದೆ**

ಎಂದು ಮಲ್ಲಿಗೆ ಅರಳಿದ್ದನ್ನು ವರ್ಣಿಸುತ್ತಾರೆ. ಈ ಸಾಲುಗಳು ಪು.ತಿ. ನರಸಿಂಹಚಾರ್ ಅವರ 'ನನ್ನ ಹಾಡು' ಕವಿತೆಯ ಸಾಲುಗಳನ್ನು ನೆನಪಿಸುತ್ತದೆ; ಅಲ್ಲಿನ ನಲ್ನುಡಿ ಇಲ್ಲಿ ಗೀತವಾಗಿದೆ.

**ಮುಗುದೆಯೊಡಲ ಪ್ರೇಮದಂತೆ**
**ಹುದುಗಿದೆನ್ನ ಗೀತವು**

ವೈಚಾರಿಕ ಕವಿತೆಗಳಿಗೆ ಕುವೆಂಪು, ಭಾವಗೀತಾತ್ಮಕತೆಗೆ ಪು.ತಿ.ನ., ಬೇಂದ್ರೆಯವರ ಕಾವ್ಯಶಕ್ತಿಯ ಪ್ರಭಾವವಾಗಿದೆ. ಪ್ರಭಾವವಿದ್ದರೂ ಆ ಪ್ರಭಾವಗಳನ್ನೊಳಗೊಂಡೂ ಸ್ವೋಪಜ್ಞತೆಯನ್ನು ಕವಿ ಸಾಧಿಸಿದ್ದಾರೆ. ಬಹುಶಃ 'ಸಮನ್ವಯ ಕವಿ' ಎಂಬ ಹೆಸರಿನಿಂದ ಕರೆಯಲ್ಪಡಲು ಅವರ ಕಾವ್ಯ ಮನೋಧರ್ಮವೇ ಕಾರಣವಾಗಿದೆ ಎಂದು 'ದೀಪದ ಹೆಜ್ಜೆ' ಸಂಕಲನದ 'ಹಿನ್ನುಡಿ' ಪದ್ಯದ ಸಾಲುಗಳನ್ನು ಗಮನಿಸಿದರೆ ತಿಳಿಯುತ್ತದೆ.

ಅದೂ ಬೇಕು ಇದೂ ಬೇಕು
ಎಲ್ಲವೂ ಬೇಕು ಎನಗೆ
ದಾರಿ ನೂರಾರಿವೆ ಬೆಳಕಿನರಮನೆಗೆ

ಬೇಡ ನನಗೆ ಸಿದ್ಧಾಂತಗಳ ರಾದ್ಧಾಂತ
ನನಗಿಲ್ಲ ಇದೇ ಸರಿ ಇಷ್ಟೇ ಸರಿ ಎನುವ ಪಂತ
ನಾ ಬಲ್ಲೆ ಇವು ಎಲ್ಲ ಏರುವೆಯ
ಒಂದೊಂದೆ ಹಂತ?

ಇಲ್ಲಿ ಜಿ.ಎಸ್.ಎಸ್. ಅವರು ಬೆಳಕಿನರಮನೆಗೆ ದಾರಿಗಳು ನೂರಾರಿವೆ, ಯಾವ ಸಿದ್ಧಾಂತಕ್ಕೂ ಬದ್ಧರಾಗದೆ ದಾಹ ಪರಿಹಾರಕ್ಕೆ ಎಲ್ಲಿಂದ ಸಿಹಿ ನೀರು ಪಡೆದರೇನು? ಎಂಬ ನಿಲುವನ್ನು ವ್ಯಕ್ತಪಡಿಸುತ್ತಾರೆ.

ಕಾವ್ಯ ಬರೀ ಶಬ್ದ ಸೇರಿಸುವ ಕ್ರಿಯೆಯಲ್ಲ
ಬರೀ ಪದಕ್ಕೆ ಪದ ಜತೆಗಿದ್ದ ಮಾತ್ರಕ್ಕೆ ಪದ್ಯವಾದೀತು ಹೇಗೆ?

ಎಂದು ಕಾವ್ಯದಲ್ಲಿ ಶಬ್ದದ ಗಹನತೆ ಎಷ್ಟು ಎಂಬುದನ್ನು ಪ್ರಸ್ತಾಪಿಸುತ್ತಾರೆ. ಓದುಗರ ಪ್ರಜ್ಞೆಯನ್ನು ಎಚ್ಚರಗೊಳಿಸುವ ಪರಿಣಾಮ ಈ ಕಾವ್ಯಕ್ಕಿದೆ. ಇವರ 'ಸ್ವರ್ಗ' ಎನ್ನುವ ಕವಿತೆ ನಮ್ಮ ಪುರಾಣಗಳು ಸೃಷ್ಟಿಸಿದ ಸ್ವರ್ಗದ ಬಗ್ಗೆ ಸ್ವರ್ಗಾಧಿಪತಿಯ ಬಗ್ಗೆ ವಿಕರ್ಷಣೆಯನ್ನು ಹುಟ್ಟಿಸುತ್ತದೆ.

ದೇವೇಂದ್ರನಾಡಿದಾಟಕ್ಕೆ ಲೆಕ್ಕವೇ ಇಲ್ಲ
ನಿತ್ಯ ಸೌಭಾಗ್ಯವತಿಯರಾದ
ಪ್ಸರೆಯರನ್ನು ಅವನು ಬಳಸಿದ ರೀತಿ
ಗೌರವಾಸ್ಪದವಲ್ಲ

ಇದುವರೆವಿಗೂ ಕಣ್ಣುಮುಚ್ಚಿ ಸ್ವರ್ಗವೇ ultimate reality ಎನ್ನುವಂತೆ ನಮ್ಮನ್ನು ಮೋಸಗೊಳಿಸದ ಬಗ್ಗೆ ಕವಿಗೆ ಅಸಹನೆ ಇದೆ. ಮೂಲಭೂತ ನಂಬಿಕೆಗಳನ್ನು ಪ್ರಶ್ನಿಸುವುದು, ಹೊಸದೊಂದನ್ನು ಆಲೋಚಿಸುವಂತೆ ಮಾಡುವ ಕ್ರಮ ಇಲ್ಲಿದೆ.

ಬಡತನ, ಕೂಲಿ ಕಾರ್ಮಿಕರ ಬದುಕಿನ ಅನೇಕ ಸನ್ನಿವೇಶಗಳು ಇಲ್ಲಿ ಕಾವ್ಯವಾಗಿದೆ. "ಮನೆಕಟ್ಟುವ ಮಂದಿ" ಕವಿತೆಯ ಪ್ರಾರಂಭದ ಸಾಲುಗಳು ಹೀಗಿವೆ.

ಅವರಿವರಿಗಾಗಿ ಮನೆ ಕಟ್ಟುತ್ತಾ
ಸವೆದು ಹೋಗುತ್ತಿರುವ ಈ ಜನಕೆ
ಅನ್ನಿಸುವುದಿಲ್ಲವೆ, ತಮಗೂ ಒಂದು
ಚಿಕ್ಕ, ತೀರಾ ಚಿಕ್ಕದೇ ಆದಂಥ
ಮನೆ ಇಲ್ಲವೆಂದು?

ಇಲ್ಲಿ ಗದ್ಯ-ವಾಚ್ಯತೆಗಳೇ ಕಂಡುಬರುವುದನ್ನು ಗಮನಿಸಬಹುದು. ಉತ್ತಮ ರಚನೆಗಳ ನಡುವೆಯೂ ಅಲ್ಲಲ್ಲಿ 'ಏಕೋ ಹೀಗಾಗುವುದುಂಟು ಅವಸರದ ರಚನೆಗಳೇನೋ' ಎಂಬ ಅನುಮಾನ ಹುಟ್ಟಿಸುತ್ತದೆ.

ಶಿವರುದ್ರಪ್ಪನವರ ಸಮಗ್ರ ಕಾವ್ಯವನ್ನು ಅಧ್ಯಯನ ಮಾಡಿದಾಗ ವಸ್ತು ವೈವಿಧ್ಯತೆ ಬಹಳ ಮುಖ್ಯ ಅಂಶವಾಗಿ ಗೋಚರಿಸುತ್ತದೆ. ಅವರ ಕಾವ್ಯ ಒಂದು ರೀತಿಯ ಜಾಗೃತಿ ಚಿಂತನಗಳನ್ನು ಮೂಡಿಸುವ ಇರಾದೆಯನ್ನು ಪ್ರಕಟಿಸುತ್ತದೆ. ಶಿವರುದ್ರಪ್ಪನವರು ಕಾವ್ಯಕ್ರಿಯೆಯನ್ನು ಗಂಭೀರವಾಗಿ ತೆಗೆದುಕೊಂಡವರು. ಎಲ್ಲಿ ಗಂಭೀರತೆ ಇರುವುದೋ ಅಲ್ಲಿ ಸಹಜವಾಗಿ ಜವಾಬ್ದಾರಿಯುತ ಕಾವ್ಯ ಸೃಷ್ಟಿಯಾಗುತ್ತದೆ. ಸಮಕಾಲೀನತೆಯ ಸಂದರ್ಭದ ಅನೇಕ ಸನ್ನಿವೇಶಗಳನ್ನು ಕಟ್ಟುತ್ತ, ಮೌಲ್ಯ ಶೋಧನೆಗಾಗಿ ಹೊರಡುವ ರೀತಿ ಇವರ ಕಾವ್ಯದ ಮುಖ್ಯ ಕಾಳಜಿಯಾಗಿದೆ. ಸಮಕಾಲೀನ ಸಂದರ್ಭದಲ್ಲಿ ಇವರ ಕಾವ್ಯ ತತ್ವದ ವಿಭಿನ್ನತೆಗಳೊಳಗೆ ಹೊಸಗನ್ನಡ ಕಾವ್ಯಲೋಕಕ್ಕೆ ಇವರು ಕಟ್ಟಿಕೊಟ್ಟಿರುವ ಗುಣಾತ್ಮಕತೆಯನ್ನು ಪರಿಶೀಲಿಸುವ ಅಗತ್ಯವಿದೆ. ಒಟ್ಟಂದದಲ್ಲಿ ಆಧುನಿಕ ಕನ್ನಡ ಕಾವ್ಯದಲ್ಲಿ ಶಿವರುದ್ರಪ್ಪನವರ ಕಾವ್ಯಕ್ಕೆ ಹಾಸು ಮತ್ತು ಬೀಸು ಎರಡೂ ಇರುವುದನ್ನು ಕಾಣುತ್ತೇವೆ.



# ಕತ್ತಲ ದಾರಿಯಲ್ಲೊಂದು ಹಣತೆ

ಸ. ಉಷಾ

**ಜಿ.**ಎಸ್. ಶಿವರುದ್ರಪ್ಪನವರು ನಾನು ತುಂಬ ಮೆಚ್ಚುವ ಗೌರವಿಸುವ ಕವಿಗಳಲ್ಲಿ ಒಬ್ಬರು. ಅವರ ಕಾವ್ಯ ಮೊದಲು ನನ್ನನ್ನು ತಟ್ಟಿದ್ದು ತನ್ನ ಗೇಯತೆಯ ಮೂಲಕ. ಅರವತ್ತರ ದಶಕದಲ್ಲಿ ನಾನು ಮಾಧ್ಯಮಿಕ ಶಾಲೆಯ ವಿದ್ಯಾರ್ಥಿನಿಯಾಗಿದ್ದಾಗ ನನ್ನ ಸುತ್ತ ಇದ್ದ ಸಾಂಸ್ಕೃತಿಕ ಮತ್ತು ಶೈಕ್ಷಣಿಕ ವಾತಾವರಣದಲ್ಲಿ ಜಿಎಸ್‌ಎಸ್ ಬರೆದ ಕವಿತೆಗಳ ಮಾಧುರ್ಯ ಗೀತವಾಗಿ ತೇಲಿಬರುತ್ತಿತ್ತು. ನನ್ನ ಮತ್ತು ನನ್ನ ವಾರಿಗೆಯ ಹುಡುಗಿಯರ ಮನಸ್ಸಿನ ಮೇಲೆ ಒಂದು ಪ್ರಸನ್ನತೆಯ ಮುದ್ರೆಯೊತ್ತಿತ್ತು.

ಐವತ್ತೊಂದರಲ್ಲಿ ಮೊದಲ ಕವನಸಂಕಲನ ತಂದು 2001ರಲ್ಲೂ ಬರೆಯುತ್ತಿರುವ ಈ ಹಿರಿಯ ಕವಿಯ ಕಾವ್ಯ ನಡೆದುಬಂದ ದಾರಿ ಚಳುವಳಿಗಳಿಗೆ, ಪಂಥಗಳಿಗೆ, ಗುಂಪುಗಳಿಗೆ ಅಂಟಿಕೊಳ್ಳದೆಯೂ ಸಮಕಾಲೀನ ಚಿಂತನಗಳಿಗೆ ಪ್ರತಿಕ್ರಿಯಿಸುತ್ತ, ಬೆಳೆದು ಬಂದ ಕನ್ನಡ ಕಾವ್ಯದ ದಾರಿಯೂ ಆಗಿದೆ. ಆಧುನಿಕ ಕನ್ನಡ ಕಾವ್ಯದ ಬೆಳವಣಿಗೆಯ ದೃಷ್ಟಿಯಿಂದ ಸಹ ಜಿಎಸ್‌ಎಸ್ ಕಾವ್ಯದ ಅಧ್ಯಯನ ಕುತೂಹಲಕರ ಮತ್ತು ಮೌಲಿಕ.

ಜಿಎಸ್‌ಎಸ್ ಕಾವ್ಯದ ಮೂಲಶ್ರುತಿ ಪ್ರಸನ್ನತೆ. ಆದರೆ ಈ ಪ್ರಸನ್ನತೆ ಬದುಕಿನ ಕುರೂಪಗಳನ್ನು ನಿರ್ಲಕ್ಷಿಸಿ ಚೆಲುವಿನ ಆರಾಧನೆಯಲ್ಲೋ ಆಧ್ಯಾತ್ಮದ ಹಗಲುಗನಸಿನಲ್ಲೋ ಮುಳುಗುವ ಭೋಳೆತನದ ಪ್ರಸನ್ನತೆಯಿಲ್ಲ. ಜಗತ್ತಿನಲ್ಲಿರುವ ಕ್ರೌರ್ಯ, ಕುರೂಪಗಳಿಗೆ ಪ್ರತಿಕ್ರಿಯಿಸಿಯೂ ಸ್ಥಾಯಿಯಾಗಿ ಉಳಿಯುವ ಪ್ರಸನ್ನತೆ. ಹಲವು ತಳಮಳಗಳ ಸಂಚಾರಿ ಭಾವಗಳ ನಡುವೆ ಪ್ರಸನ್ನತೆಯ ಶ್ರುತಿಹಿಡಿದ ಸ್ಥಾಯಿಭಾವ ಜಿಎಸ್‌ಎಸ್ ಕವಿತೆಯಲ್ಲಿ ನಾನು ಗುರ್ತಿಸಿದ ಒಂದು ದೊಡ್ಡಶಕ್ತಿ.

ಜಿಎಸ್‌ಎಸ್ ಕಾವ್ಯ ನಡೆದುಬಂದ ದಾರಿಯನ್ನು ಕುರಿತು; ನವೋದಯ, ನವ್ಯ, ಬಂಡಾಯ ಚಳುವಳಿಗಳು ಜಿಎಸ್‌ಎಸ್ ಕಾವ್ಯದ ಮೇಲೆ ಬೀರಿದ ಪ್ರಭಾವ ಕುರಿತು ಈಗಾಗಲೇ ಕನ್ನಡ ಸಾಹಿತ್ಯದಲ್ಲಿ ಸಾಕಷ್ಟು ಚರ್ಚೆ ನಡೆದಿದೆ.

*ಸಾಮಗಾನ*, *ಚೆಲುವು-ಒಲವು*, *ದೇವಶಿಲ್ಪ*ಗಳಲ್ಲಿ ಗೇಯತೆ ಪ್ರಕೃತಿ ಪ್ರೀತಿಗಳಿವೆ. ಕಾವ್ಯದ ಮೂಲಕ ಲಭಿಸುವ ಜಗದೊಲವಿನ ನಂಟನ್ನು ಕುರಿತು ಜಿಎಸ್‌ಎಸ್ ಕಾವ್ಯ ಹಾಡಿದೆ. ಕೆಲವು ಕಡೆ ಸ್ಪಷ್ಟವಾಗಿ ಕುವೆಂಪು ಭಾಷೆ ಮತ್ತು ವಿಚಾರಗಳ ಪ್ರಭಾವವಿದೆ.

ಅದಕ್ಕೆ ಸಮಾನಾಂತರವಾಗಿ ತೀರಾ ಸರಳ ಸುಂದರ ಭಾಷೆಯ "ಎದೆತುಂಬಿ ಹಾಡಿದೆನು ಅಂದು ನಾನು" ತರಹದ ವಿಶಿಷ್ಟ ಜಿಎಸ್‌ಎಸ್ ಛಾಪಿನ ಕವಿತೆಗಳೂ ಇವೆ. "ಬೆಳಕು ಒಳಬರಲೆಂದು ತೆರೆದ ಕಿಟಕಿಗಳಿಂದ ಧೂಳನೂ ತೂರುವುದು ಯಾರ ಆನಂದ? ಬೆಳಕನಿತ್ತವನೇ ಧೂಳನೂ ತೂರುವುದೇ" ಎಂದು ಕವಿ ತನ್ನ ಸುತ್ತಲ ಪ್ರಪಂಚಕ್ಕೆ ಪ್ರತಿಕ್ರಿಯಿಸುತ್ತಾರೆ.

ಪ್ರಕೃತಿಯನ್ನೂ ಚೆಲುವನ್ನೂ ಕುರಿತು ಪ್ರಸನ್ನತೆಯಿಂದ ಹಾಡಿದ ಈ ಕವಿಯ ಕಾವ್ಯ ನಿಧಾನವಾಗಿ ಸಮಾಜಮುಖಿಯಾಗುತ್ತ ಹೋಗಿದೆ. *ದೀಪದ ಹೆಜ್ಜೆ, ಕಾರ್ತೀಕ*ಗಳಲ್ಲಿ ಸಮಾಜದ ಅನಪೇಕ್ಷಿತ ಕೆಡುಕುಗಳನ್ನು ಅವಸ್ಥಾಂತರಗಳನ್ನು ಗಮನಿಸಿ ಕವಿ ತಲ್ಲಣಗೊಂಡಿದ್ದಾರೆ. ಈ ಸಂಕಲನಗಳಲ್ಲಿ ಆ ಕಾಲದಲ್ಲಿ ಜ್ವಲಿಸುತ್ತಿದ್ದ ನವ್ಯ ಮನೋಧರ್ಮದ ಪ್ರಭಾವ ಕವಿಯ ಮೇಲಾಗಿರುವುದನ್ನು ಗುರ್ತಿಸಬಹುದು. *ಅನಾವರಣ, ತೆರೆದ ದಾರಿ*ಗಳಲ್ಲಿ ವೈಯಕ್ತಿಕ ಸಂಬಂಧಗಳ ಶೋಧನೆ ಜಿಎಸ್‌ಎಸ್ ಕಾವ್ಯದ ಒಂದು ಮುಖ್ಯ ಕಾಳಜಿಯಾಗಿ ಅನಾವರಣಗೊಂಡಿದೆ. ಇಲ್ಲಿ ಕಾವ್ಯದ ಭಾಷೆಗೂ ಒಂದು ಹೊಸ ತೀವ್ರತೆ ಪ್ರಾಪ್ತವಾಗಿದೆ. ಪ್ರಕೃತಿ ಕೂಡ ಈವರೆಗೆ ಚಿತ್ರಿತವಾಗಿರುವುದಕ್ಕಿಂತ ಭಿನ್ನವಾಗಿ ಚಿತ್ರಿತವಾಗಿದೆ:

**"ಬರುಗಾಳಿ ಚಾಟಿಯೇಟಿಗೆ ಕೆರಳಿ ನರಳಿ**
**ಮಳೆಹನಿಯ ಪಂಜರದಲ್ಲಿ ಅಬ್ಬರಿಸಿ ಹೊಯ್ದಾಡುತ್ತ**
**ತಲೆಗೆದರಿ ನಿಂತ ಗಿಡಮರ"**

*(ತೆರದ ದಾರಿ)*

'ಗೋಡೆ' ಸಂಕಲನ, ಹೆಸರಿಗೆ ಗೋಡೆಯಾದರೂ ಗೋಡೆಗಳನ್ನು ಒಡೆಯುವ ಆಶಯವನ್ನು ಹೊತ್ತಿದೆ. ಜಿಎಸ್‌ಎಸ್ ಕಾವ್ಯ 'ಕಾಡಿನ ಕತ್ತಲಲ್ಲೂ ಹೊಸ ಹಸಿರು ನಂಬುಗೆಯ ನೆಯ್ಯಬೇಕು' ಎಂಬ ಆಶಯದೊಡನೆ ಹೊರಟಿರುವಂಥದು. ಹಾಗೇ 'ನೂರಾರು ಹಾಲುಬಿಳಿ ಕೊರಳಿನ ಸುತ್ತ ಕಂಸನ ಬೆರಳಿನೊತ್ತು'ಗಳನ್ನು ಗುರುತಿಸುವ ಎಚ್ಚರವನ್ನುಳ್ಳದ್ದು.

ಜಿಎಸ್‌ಎಸ್ ಕವಿತೆ ಕಾಲದಿಂದ ಕಾಲಕ್ಕೆ ನವೋದಯ, ನವ್ಯ, ಬಂಡಾಯ ಚಳುವಳಿಗಳ ಆಶಯಗಳಿಗೆ ಇತ್ಯಾತ್ಮಕವಾಗಿ ಸ್ಪಂದಿಸಿರುವಂತೆ ಸ್ತ್ರೀವಾದದ ಆಶಯಗಳಿಗೂ ಸ್ಪಂದಿಸಿದೆ. ಅವರ ಹಲವು ಕವಿತೆಗಳಲ್ಲಿ ಈ ಸ್ಪಂದನವನ್ನು ಕಾಣಬಹುದು.

1956ರಷ್ಟು ಹಿಂದೆಯೇ

**"ನಗುವ ಅಳುವ ಕವಿತೆಗಿಂತ**
**ಬರೆವ ಕವಿತೆ ದೊಡ್ಡದೆ,**
**ಆ ಕವಿತೆಗೆ ಭ್ರಾಂತರಾಗಿ**
**ಈ ಕವಿತೆಯ ಮರೆವರೆ?"**

*(ದೇವಶಿಲ್ಪ)*

ಎಂದು ಮನೆಯೊಳಗಿರುವ ಗೃಹಿಣಿಯ ಕೈಯಲ್ಲಿ ಪ್ರಶ್ನೆ ಕೇಳಿಸಿರುವ ಕವಿ, ಪುರಾಣದ ಶಕುಂತಲೆ, ದ್ರೌಪದಿ, ಇತಿಹಾಸದ ಮಹದೇವಿಯಕ್ಕ ಎಲ್ಲ ಕಾಲದ ತಾಯಿಯರುಗಳನ್ನು ಚಿತ್ರಿಸಿರುವಲ್ಲಿ ಹೆಣ್ಣನ್ನು ಕುರಿತ ಆರೋಗ್ಯಕರ ನಿಲುವು ಕಾಣುತ್ತದೆ. "ಚಕ್ರಗತಿ" ಸಂಕಲನದ ಕೆಲವು ಕವಿತೆಗಳಲ್ಲಿ ಈ ನಿಲುವು ವಾಚ್ಯವಾಗಿಯೇ ವ್ಯಕ್ತವಾಗಿದೆ. *(ದಾಟಿ ಬಾ ನಿರ್ಭಯದ ನಿಲುವಿಗೆ)* ನವ್ಯದ ಭಾಷೆ ಬಂಧ ಶಿಲ್ಪಗಳನ್ನು ಒಗ್ಗಿಸಿಕೊಂಡಿರುವ 'ಮುಂಬೈ ಜಾತಕದಂಥ ಪದ್ಯದಲ್ಲೂ ಸಹ ಜಿಎಸ್ಎಸ್ ಚಿತ್ರಿಸುವ ತಾಯಿ—"ಇರುವ ಒಂದಿಂಚು ಕೋಣೆಯಲ್ಲೇ ಹೊರಲೋಕವನು ಪರಿಚಯಿಸಿ ಎಚ್ಚರಿಕೆ ಕೊಟ್ಟವಳು".

ಸ್ವತಂತ್ರ ರಚನೆಗಳಲ್ಲಿ ಗೇಯತೆ, ಭಾಷೆಯ ಮಾಧುರ್ಯ, ಸಮಕಾಲೀನ ಸಾಹಿತ್ಯದ ಒಲವುಗಳು, ಬೇರೆ ಬೇರೆ ಚಳುವಳಿಗಳು ಎಲ್ಲಕ್ಕೆ ಸ್ಪಂದಿಸುತ್ತಾ ಬೆಳೆದ ಜಿಎಸ್ಎಸ್ ಒಳ್ಳೆಯ ಅನುವಾದಕಾರರು ಎಂಬುದು ಹೆಚ್ಚು ಪ್ರಚಾರಕ್ಕೆ ಬಾರದ ವಿಷಯ. ೧೯೬೦ರಷ್ಟು ಹಿಂದೆಯೇ ಪ್ರಕಟವಾದ 'ತೀರ್ಥವಾಣಿ'ಯಲ್ಲಿರುವ ಹಲವು ಗೀತೆಗಳು ತಮ್ಮ ಜೀವಂತಿಕೆ, ಮಾಧುರ್ಯ, ತುಂಟತನಗಳಿಂದ ಜನಮನವನ್ನು ತಟ್ಟಿವೆ. ಹಾಡುಗಾರರ ಬಾಯಲ್ಲಿ ಜನಪ್ರಿಯವಾಗಿವೆ. 'ಹೌದೇನೇ ಉಮಾ ಹೌದೇನೇ'ನಲ್ಲಿಯ ಉಮೆಯ ತಾಯಿ, 'ಕೇಳಿರೇ ಸಖಿ ಕೇಳಿರೇ'ಯಲ್ಲಿಯ ಮಧುರಭಾವೋನ್ಮತ್ತ ರಾಧೆ 'ನನ್ನಾ ಮಾಧವನನ್ನು ಕೊಡು ಮಾಧವಿ ನನಗೆ' ಎಂಬಲ್ಲಿಯ ಆರ್ತ ಪ್ರಣಯಿನಿ, ಇವರೆಲ್ಲ ಪರಭಾಷೆಯವರೆನ್ನಿಸುವುದಿಲ್ಲ. ಇಲ್ಲಿಯ ಅನೇಕ ಗೇಯ ಗೀತೆಗಳು ಕನ್ನಡದವೇ ಎಂಬಂತೆ ಭಾಸವಾಗುತ್ತವೆ.

ಭಾರತೀಯವಲ್ಲದ ಭಾಷೆಗಳಿಂದಲೂ ಹಲವು ಗಂಭೀರ ಕವಿತೆಗಳ ಅನುವಾದವನ್ನು ಜಿಎಸ್ಎಸ್ ಮಾಡಿದ್ದಾರೆ. ವಿಯಟ್ನಾಂ ಕವಿತೆಗಳು, ಹಿಬ್ರೂ ಹಾಡುಗಳು, ಥಾಯ್ ಕವಿತೆಗಳು, ಆಂಡೋನಿನ್ ಬಾರ್ಜೋಸಿಕ್ ಕವಿತೆಗಳು, ಜಾಂಗ್ ಜೆಮಿನ್ ಕವಿತೆಗಳು, ವಿಲ್‌ಫ್ರೆಡ್ ಗಿಬ್ಸನ್ ಕವಿತೆಗಳು ಹೀಗೆ ಹೇಳುತ್ತಾ ಹೋದರೆ ಪಟ್ಟಿ ಬೆಳೆಯುತ್ತದೆ.

ಜಿಎಸ್ಎಸ್ ಅನುವಾದಿಸಿದ ಕವಿತೆಗಳಲ್ಲಿ ನನಗೆ ಅತ್ಯಂತ ಪ್ರಿಯವಾದುದು ಸನಂತ ತಂತ್ರಿಯರ ಅಸ್ಸಾಮೀ ಕವಿತೆ *'ನೀವೆಲ್ಲಾದರೂ ನನ್ನ ತಾಯನ್ನು ಕಂಡರೆ'* ಎಂಬುದು.

> **"ಅವಳೇನಾದರೂ ಅಕಸ್ಮಾತ್ತಾಗಿ ನಿಮಗೆ ಸಿಕ್ಕರೆ**
> **ದಯಮಾಡಿ ಕರೆದುಕೊಳ್ಳಿ-ನಿಮ್ಮ ತಾಯಿಯ ಹಾಗೆ"**

ಎಂಬ ಆರ್ತಹೃದಯದ ಪ್ರೀತಿಯ ಕರೆಯನ್ನು ಕನ್ನಡ ಓದುಗರಿಗೆ ತಲುಪಿಸಿರುವ ಜಿಎಸ್ಎಸ್ ಅವರ ಅನುವಾದ ಸಹ ಪ್ರೀತಿಯಿಂದ ಓದಿ ಮೆಲುಕು ಹಾಕುವಂಥದು.

ಜಿಎಸ್ಎಸ್ ಸಾಹಿತ್ಯದ ಒಂದು ಮುಖ್ಯ ಆಯಾಮ ಕಾವ್ಯವಾದರೆ ಅಷ್ಟೇ ಮುಖ್ಯವಾದ ಇನ್ನೊಂದು ಆಯಾಮ ವಿಮರ್ಶೆ ಮತ್ತು ಕಾವ್ಯಮೀಮಾಂಸೆ. ಇಪ್ಪತ್ತು ವರ್ಷಗಳಿಗೂ ಹೆಚ್ಚುಕಾಲ ಕಾವ್ಯಮೀಮಾಂಸೆ ಮತ್ತು ಸಾಹಿತ್ಯ ವಿಮರ್ಶೆಯನ್ನು ಬೋಧಿಸುತ್ತಾ ಬಂದಿರುವ ನನಗೆ ಕನ್ನಡ ಕಾವ್ಯಮೀಮಾಂಸೆಗೆ-ಸಾಹಿತ್ಯ ವಿಮರ್ಶೆಗೆ ಜಿಎಸ್ಎಸ್ ಕೊಡುಗೆ

ಒಂದು ಪ್ರತ್ಯೇಕ ಗಂಭೀರ ಅಧ್ಯಯನಕ್ಕೆ ವಸ್ತುವಾಗುತ್ತದೆಂಬ ಅರಿವೂ, ಆ ಕುರಿತು ಬರೆಯಬೇಕೆಂಬ ಆಸೆಯೂ ಆಗಾಗ ಕಾಡುತ್ತದೆ.

ವ್ಯಕ್ತಿಯಾಗಿ ಜಿಎಸ್ಎಸ್ ನಿರಂತರ ಹೋರಾಟಗಾರರು. ಬೆಂಗಳೂರು ವಿಶ್ವ ವಿದ್ಯಾನಿಲಯದಲ್ಲಿ ವಿಭಾಗದ ಮುಖ್ಯಸ್ಥರಾಗಿ, ರಾಜ್ಯ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ, ಬೇರೆಬೇರೆ ಸಾಹಿತ್ಯಿಕ ಸಮಿತಿಗಳ ಸದಸ್ಯರಾಗಿ ಅವರು ಕಾರ್ಯನಿರ್ವಹಿಸಿದವರು. ಅವರ ಕಾರ್ಯನಿರ್ವಹಣಾ ವಿಧಾನದ ಬಗ್ಗೆ, ವ್ಯಕ್ತಿತ್ವದ ಘನತೆಯ ಬಗ್ಗೆ ಒಡಕು ಮಾತುಗಳು ಕೇಳಿಬರಲಿಲ್ಲ. ವ್ಯವಸ್ಥೆ ಜಡ್ಡುಗಟ್ಟಿದಾಗ ಅದನ್ನು ಟೀಕಿಸಲು ಪ್ರತಿಭಟಿಸಲು ಅವರು ಹಿಂಜರಿಯಲಿಲ್ಲ.

"ನಿಂದಂತು ನೀತಿನಿಪುಣ ಯದಿ ವಾ ಸ್ತುವಂತು
ಸಮಾವಿಷತು ಲಕ್ಷ್ಮೀ ಗಚ್ಛತು ವಾ ಯಥೇಚ್ಛಮ್
ನ ಪ್ರವಿಚಲಂತಿ ಧೀರಾಃ ಸತ್ಯಾತ್ಪಥೇನ"

ಎಂಬ ಭರ್ತೃಹರಿಯ ಮಾತಿನಂತೆ ಸತ್ಯದ ಪಥದಿಂದ ಚಲಿಸದೆ ಇರುವ ಜಿಎಸ್ಎಸ್ ಬದುಕು ಬರಹಗಳು ನಮಗೆಲ್ಲ ಕತ್ತಲ ದಾರಿಯಲ್ಲೊಂದು ಹಣತೆ.



# 'ಶಬರಿ ಪ್ರತಿಭೆ'ಯ ಕವಿ

ಎಂ. ಆರ್. ಕಮಲ

ಆಧುನಿಕ ಕನ್ನಡ ಕಾವ್ಯದ ಮೂರು ತಲೆಮಾರುಗಳ ತಳಮಳ, ಹೊಸತರ ಹುಡುಕಾಟ, ಎಲ್ಲ ಮಾರ್ಗಗಳ ಕಲಾವಂತಿಕೆಗೆ ಅತ್ಯಂತ ಮುಗ್ಧತೆಯಿಂದ ತೆರೆದುಕೊಳ್ಳುವ ಮುಕ್ತಮನಸ್ಸು—ಇವೆಲ್ಲವನ್ನೂ ಒಟ್ಟಿಗೆ ಪ್ರತಿನಿಧಿಸುವ ಜಿಎಸ್‌ಎಸ್ ನಮ್ಮ ಕಾಲಮಾನ ಕಂಡ ಸೂಕ್ಷ್ಮ ಕವಿಚೇತನ. ಸ್ವತಃ ಕುವೆಂಪು ಅವರ ಕಲಾಸೃಷ್ಟಿಯ ಅಗಾಧತೆಯನ್ನು ಬೆರಗಿನಿಂದ ನೋಡುತ್ತ ತಮ್ಮ ಕಾವ್ಯದ ಭಿತ್ತಿಯನ್ನು ಬೆಳಗಿಕೊಂಡ ಅವರದ್ದು 'ಶಬರಿ ಪ್ರತಿಭೆ' ಎಂದು ನನಗೆ ಯಾವಾಗಲೂ ಅನ್ನಿಸುತ್ತದೆ. ನನ್ನಲ್ಲಿ ಮೂಡಿದ ಸಾಹಿತ್ಯ ಆಸಕ್ತಿಗೆ, ಕಾವ್ಯ ರಚನೆಯ ಒಲವಿಗೆ ನನ್ನ ವಿದ್ಯಾಗುರುಗಳಾದ ಜಿಎಸ್‌ಎಸ್ ಅವರ ಪಾಲೂ ಇದೆ ಎಂದೇ ನನಗನ್ನಿಸಿದೆ.

ತಾನು ಆರಾಧಿಸುವ ಶ್ರೀರಾಮನಿಗೆ ಅತ್ಯುತ್ಕೃಷ್ಟ ಫಲವನ್ನೇ ನೀಡಬೇಕೆಂಬ ಹಂಬಲದಿಂದ ಶಬರಿ ರುಚಿ ನೋಡಿ ಕೊಟ್ಟ ಫಲಗಳಂತೆ ಜಿಎಸ್‌ಎಸ್ ಅವರ ಕಾವ್ಯಕೃಷಿ. ತಮ್ಮ ಸುತ್ತಮುತ್ತಲಿನ ಸಮಾಜದ ಭ್ರಷ್ಟತೆ, ಡಾಂಭಿಕತೆ, ಆದರ್ಶಹೀನ ಸಂಸ್ಕೃತಿ—ಇವೆಲ್ಲವನ್ನು ಕಂಡ ಅವರ ಕವಿ ಮನಸ್ಸು ಪ್ರತಿಕ್ರಿಯಿಸುವುದು ಸಿನಿಕತನದಿಂದಲ್ಲ, ಇದು ಕೂಡ ಸರಿ ಹೋದೀತು ಎಂಬ ಆಶಾಭಾವನೆಯ ನೆಲೆಯಿಂದ. ಹಾಗೆಂದೇ ಅವರು ಎಲ್ಲ ಕಾವ್ಯ ಹೆದ್ದಾರಿಗಳಲ್ಲೂ ತಮ್ಮ ಹೆಜ್ಜೆಯೂರಿ, ಹೊಸ ಕವಿತೆಗೆಂದೇ ಇನ್ನೊಂದು ಮಾರ್ಗವನ್ನು ಸೃಷ್ಟಿಸಬಲ್ಲರು. ಜಿಎಸ್‌ಎಸ್ ಅವರ ವಿಶಿಷ್ಟ ಮಾರ್ಗದಿಂದ ಪ್ರೇರಣೆ, ಸ್ಫೂರ್ತಿ ಪಡೆದ ಕವಿಗಳ ಸಂಖ್ಯೆ ಕಡಿಮೆಯೇನಲ್ಲ. ಹಾಗೆಯೇ ಬಂಡಾಯ, ದಲಿತ ಇವೆರಡೂ ಮಾರ್ಗಕ್ಕೆ ಸೇರದ ಅಪ್ಪಟ ಕಾವ್ಯಪಂಥ ಅವರ ಸಿದ್ಧಾಂತದಿಂದ ಪಡೆದಿದ್ದ ಅಪಾರ. ನಾನು ಎಂ.ಎ. ಓದುವ ಕಾಲದಲ್ಲಿ ಜಿಎಸ್‌ಎಸ್ ಅವರ ವಿಚಾರ, ಕಾವ್ಯ ಚಿಂತನೆಯಿಂದ ಹೊಸ ಅರಿವು ಪಡೆದು ಪ್ರಗತಿಪರ ಚಳುವಳಿಗಳು ಮೊಳಕೆಯೊಡೆಯಲು ಆರಂಭಿಸಿದ್ದನ್ನು ನಾನು ಕಣ್ಣಾರೆ ಕಂಡಿರುವೆ.

ಅವರದು ಯಾವತ್ತೂ ಮಾರ್ಗದರ್ಶಿ ಕಾವ್ಯ. ಕವಿಯ ದಿನನಿತ್ಯದ ಅನುಭವ ಕವಿತೆಯ ಮೂಲಕ ಸಾಕ್ಷಾತ್ಕಾರಗೊಂಡು ತನ್ನ ಮುಂದಿರುವ ಯುವ ಜನಾಂಗದ ಅರಿವನ್ನು ವಿಸ್ತರಿಸುವ ಕ್ಷಿತಿಜದಂತೆ ಅವರ ಕಾವ್ಯ ಕೆಲಸ ಮಾಡುತ್ತ ಬಂದಿದೆ. ತಾವು ಕಡಿದಾದ ಹಾದಿ

ಸವೆಸಿ ಮುಂದಿನ ಕಾವ್ಯ ಹೇಗಿರಬೇಕು ಎನ್ನುವುದನ್ನು ಯುವ ಕವಿಗಳಿಗೆ ತೋರಿಸಬಲ್ಲ ಶ್ರದ್ಧೆ, ಆ ಪಯಣದಲ್ಲಿನ ಏಳು ಬೀಳು ಸ್ವೀಕರಿಸುವ ಸವಾಲಿನ ಮನೋಭಾವವನ್ನು ಅವರ ಕವಿತೆಗಳು ತೋರಿಸುತ್ತವೆ. ಹಣ್ಣನ್ನು ನೋಡಿ ಹುಳುಕಿದ್ದರೆ ತೆಗೆದು ಹಾಕಿ ಅತ್ಯುತ್ತಮವಾದುದನ್ನು ಹೆಕ್ಕಿ ಕೊಡುವ ತಾಯಿಯ ಪಾತ್ರವನ್ನು ಅವರ ಕಾವ್ಯ, ಕವಿ ಮನಸ್ಸು ಮಾಡುತ್ತಲೇ ಬಂದಿದೆ.

ತೀರ ಇತ್ತೀಚಿನ ಸಂದರ್ಶನವೊಂದರಲ್ಲಿ ತಮ್ಮದು ಚೈತ್ರ ಪ್ರತಿಭೆ ಎಂದು ಜಿಎಸ್ಎಸ್ ಅವರು ವಿನೋದದ ಧಾಟಿಯಲ್ಲಿ ಗುರುತಿಸಿಕೊಂಡಿದ್ದಾರೆ. ಆದರೆ ಅದು ಸಾರ್ಥಕ ಉಪಮೆ. ಮತ್ತೆ ಮತ್ತೆ ಹೊಸದಾಗಿ ಮೈದಳೆಯುವ, ತನ್ನ ಬೆರಗು ಸೊಬಗಿನ ಮೂಲಕ ಪ್ರತಿ ಸಲವೂ ಹೊಚ್ಚ ಹೊಸತೆಂಬಂತೆ ಅನಾವರಣಗೊಳ್ಳುವ ಚೈತ್ರದ ಸಂಕೇತ ಅವರ ಇಡೀ ಕಾವ್ಯ ಬದುಕಿಗೆ ತುಂಬ ಚೆನ್ನಾಗಿ ಹೊಂದುತ್ತದೆ. ಪ್ರತಿಸಲವೂ ಇದು ಹೊಸತು ಎಂಬ ಭಾವನೆ ಕಲ್ಪಿಸುವ ಚೈತ್ರ ಪ್ರತಿಭೆಯ ಸಾಧನೆ ಹಿರಿದು.

ಈವರೆಗೆ 13 ಸಂಗ್ರಹಗಳನ್ನು ಪ್ರಕಟಿಸಿರುವ ಜಿಎಸ್ಎಸ್ ತಮ್ಮ ಈಚಿನ ಸಂಕಲನ ವ್ಯಕ್ತಮಧ್ಯ ಸಂಕಲನದಲ್ಲಿ ಚಿಕ್ಕ ಮನನಯೋಗ್ಯ ಮುನ್ನುಡಿಯನ್ನು ಬರೆದಿದ್ದಾರೆ. ದತ್ತವಾದ 'ವ್ಯಕ್ತಮಧ್ಯ'ದ ಬದುಕನ್ನು ಗ್ರಹಿಸಿದ ಹಾಗೂ ಅರ್ಥಮಾಡಿಕೊಂಡ ಕ್ರಮವನ್ನು ಈ ಕವಿತೆಗಳು ಅಭಿವ್ಯಕ್ತ ಪಡಿಸುತ್ತವೆ ಎಂದಿರುವ ಅವರು, ಯುವ ಕವಿಗಳು ಕಾವ್ಯ ಕಟ್ಟುವ ಕಲೆಯನ್ನು ತೆಳುವಾಗಿ ತೆಗೆದುಕೊಳ್ಳುತ್ತಿರುವುದಕ್ಕೆ ವಿಷಾದ ವ್ಯಕ್ತಪಡಿಸಿದ್ದಾರೆ.

ಇಡೀ ಸಂಕಲನ ಹೊಸಬಗೆಯ ಪ್ರಯೋಗದಿಂದ ಕಂಗೊಳಿಸುತ್ತದೆ. ಭವಿಷ್ಯದ ಕವಿಗಳು ಅನುಸರಿಸಬಹುದಾದ 'ಪದ್ಯ ಬಂಧ'ವೊಂದನ್ನು ಅವರಿಲ್ಲಿ ನಿರ್ಮಿಸಿಕೊಟ್ಟಿದ್ದಾರೆ. ನಲ್ವತ್ತು ಕವಿತೆಗಳ ಸಂಗ್ರಹ ವಸ್ತು ವೈವಿಧ್ಯದಿಂದ, ಕವನ ಕಟ್ಟುವ ಕುಸುರಿತನದಿಂದ, ದಿಕ್ಸೂಚಿಯಾಗಿ ನಿಲ್ಲಬಲ್ಲ ಸಾಮರ್ಥ್ಯದಿಂದ ತನ್ನಷ್ಟಕ್ಕೆ ತಾನೇ ಮಹತ್ವ ಪಡೆಯುತ್ತದೆ. ಇಲ್ಲಿನ ಪ್ರಯೋಗಶೀಲತೆ ಕೇವಲ ಶುಷ್ಕ ಪ್ರತಿಭೆಯ ತೋರಿಕೆಯಾಗದೆ ತನ್ನ ಜವಾಬ್ದಾರಿಯನ್ನು ಅತಿ ಜಾಗರೂಕತೆಯಿಂದ ಮುಂದಿನ ಕವಿಗಳಿಗೆ ದಾರಿ ರೂಪಿಸಬಲ್ಲ ಊರುಗೋಲಾಗಲಿ ಎಂಬ ಸದಾಶಯದಿಂದ ರೂಪುಗೊಂಡ ಕೃತಿಯಾಗಿದೆ.

ತಮ್ಮ ಎಂದಿನ ಒಲವಿನ ವಿಷಯಗಳಾದ ಮನುಷ್ಯ ಪ್ರಪಂಚ, ಸೃಷ್ಟಿಯ ವಿಸ್ಮಯತೆ, ಪ್ರಕೃತಿಯ ಅಗಾಧತೆ, ಸಮಾಜ—ಇವನ್ನೇ ಈ ಸಂಗ್ರಹದಲ್ಲಿ ಇನ್ನಷ್ಟು ವಿಸ್ತರಿಸಿದ್ದಾರೆ.

ಸೃಜನಶೀಲತೆಯ ಹೊಸ ಮಗ್ಗಲುಗಳಿಗೆ ಚಕಿತಗೊಳ್ಳುವ ಕವಿ, ಅಂತಃಸತ್ವವಿರುವ ಕವಿತೆ ಬೆಳೆಯುವುದು 'ಪ್ರಬುದ್ಧರ ಮನಸ್ಸಿನಲ್ಲಿ'-ರೆಕ್ಕೆ ಬಿಚ್ಚಿ ಹಾರುವುದು 'ಮುಗಿಯದ ಬಯಲಿನಲ್ಲಿ' ಎಂದು ಅತ್ಯುತ್ತಮ ಕವಿತೆ ವಿಸ್ತರಿಸಿಕೊಳ್ಳಬಹುದಾದ ಪರಿಧಿಯನ್ನು ಸೂಚಿಸುತ್ತಾರೆ. ಈ ಸಂಗ್ರಹದ 'ಪೂರ್ಣಾನದಿಯ ಮೊಸಳೆ' ಎಂಬ ಕವಿತೆ ತನ್ನ ಅನುಭಾವಿ ಸಾರದಿಂದ, ಸಶಕ್ತ ಕಥನದಿಂದ ಅತ್ಯಂತ ಯಶಸ್ವೀ ಕವಿತೆಯಾಗಿದೆ. ಕಾಲ್ನಡಿಗೆಯಲ್ಲಿ ದೇಶಾದ್ಯಂತ ಓಡಾಡಿ ಅದ್ವೈತ ಸಿದ್ಧಾಂತವನ್ನು ಬಿತ್ತಿದ ಶಂಕರನ ನೆನಪು, ಪೂರ್ಣಾನದಿ,

ಹೊಳೆವ ಬಿಸಿಲು, ಬಾಲ ಶಂಕರನನ್ನು ಹಿಡಿದೆಳೆದಿದ್ದ ಮೊಸಳೆ ಇಂಥ ವಿವರಗಳು ಕಣ್ಣಿಗೆ ಕಟ್ಟಿ ಮೈ ಜುಮ್ಮೆನ್ನಿಸುವಂತೆ ಮಾಡುತ್ತದೆ. ಓದಿದಾಗ ಒಟ್ಟು ಕವಿತೆ ನೀಡುವ ಅನುಭವ ಅನೇಕ ದಿನಗಳ ಕಾಲ ಗುಂಗು ಹಿಡಿಸಿತ್ತು. 'ನಿಜವಾಗಿಯೂ ನಾವೆಲ್ಲ ಮೊಸಳೆಯೊಂದರ ಬಾಯೊಳಗೆ ಇದ್ದೇವೆ. ಎಂದಿನಿಂದಲೊ ಏನೋ, ನಮಗೆ ಬಿಡುಗಡೆಯಿಲ್ಲ' ಎಂಬ ಸಾಲು ಬಹುವಾಗಿ ನನ್ನ ಕಾಡಿದೆ.

2001ರ ಯುಗಾದಿ ಸುಧಾ ಸಂಚಿಕೆಯಲ್ಲಿ ಪ್ರಕಟವಾದ ಅವರ 'ನಮ್ಮ ದೇವರು' ಎನ್ನುವ ಕವಿತೆ 'ವ್ಯಕ್ತಮಧ್ಯ' ಸಂಕಲನದ ಆಶಯವನ್ನು ಮುಂದುವರಿಸುವ ಪ್ರಯೋಗವಾಗಿದೆ. ದೇವರು ಬೇಕಾಗಿರುವುದು ಯಾರಿಗೆ ಎಂಬ ಅತ್ಯಂತ ಸರಳ ಪ್ರಶ್ನೆಗೆ ಉತ್ತರ ಎಂಬಂತೆ ಆರಂಭವಾಗುವ ಈ ಕವಿತೆ ಸೃಷ್ಟಿ, ಸ್ಥಿತಿ, ಅವಕಾಶ, ಸ್ಥಾವರ, ಜಂಗಮ, ಆಡಂಬರ, ಅನುಭಾವ, ಸಾಧನೆ, ಸಾಕ್ಷಾತ್ಕಾರಗಳು ಜಗತ್ತನ್ನೇ ತೆರೆದಿಡುತ್ತದೆ. ಸಾರ್ಥಕ ಕವಿತೆ ಹೇಳಬಹುದಾದದ್ದೆಲ್ಲವನ್ನು ಜಿಎಸ್‌ಎಸ್ ಅವರ ಇಂಥ ಯಶಸ್ವಿ ಕವಿತೆಗಳು ಅನಾವರಣ ಗೊಳಿಸುತ್ತವೆ.

ಜಿಎಸ್‌ಎಸ್ ಅಂಥ ಹಿರಿಯ ಕವಿಗಳನ್ನು ವಿಮರ್ಶಿಸುವ ಎದೆಗಾರಿಕೆ ನನಗಿಲ್ಲ. ಆದರೆ ನನ್ನಂಥ ಅನೇಕರಿಗೆ ಅವರು ದಾರಿ ಸೃಷ್ಟಿಸುವ, ಸ್ಫೂರ್ತಿ ತುಂಬುವ ಚೇತನವಾಗಿದ್ದಾರೆ ಎಂದು ಯಾವ ಅಳುಕಿಲ್ಲದೆ ಹೇಳಬಲ್ಲೆ.



# ಕವಿತೆಗಳಲ್ಲಿ ಕಾವ್ಯಮೀಮಾಂಸೆ

ಡಾ|| ಜಿ. ಎಂ. ಹೆಗಡೆ

**ಹೊ**ಸಗನ್ನಡ ಸಾಹಿತ್ಯದಲ್ಲಿ ಜಿ.ಎಸ್. ಶಿವರುದ್ರಪ್ಪನವರದು ವಿಶಿಷ್ಟವಾದ ವ್ಯಕ್ತಿತ್ವ. ಅವರು ಪ್ರಖ್ಯಾತ ಕವಿಗಳೂ ವಿಮರ್ಶಕರೂ ಆಗಿದ್ದಾರೆ. ಕಾವ್ಯ ಮತ್ತು ವಿಮರ್ಶನ ಕ್ರಿಯೆಗಳೆರಡೂ ಒಂದೇ ಪ್ರತಿಭೆಯ ಮೂಲದಿಂದ ಪ್ರಚುರಗೊಂಡಿರುವದು ಅವರ ವ್ಯಕ್ತಿತ್ವದ ವಿಶಿಷ್ಟತೆಯಾಗಿದೆ. ವಿಮರ್ಶೆಯೆನ್ನುವದು ಕವಿಯಲ್ಲೇ ಇರತಕ್ಕ ಲಕ್ಷಣವೆಂದೂ ಕವಿ ವಿಮರ್ಶಕನೂ ಆದಾಗ ಅವನ ಸಾಹಿತ್ಯ ಸಹಜವಾಗಿಯೇ ಶ್ರೇಷ್ಠವಾಗುತ್ತದೆಂದೂ ಹೊಸಗನ್ನಡದ ಹಿರಿಯ ಲೇಖಕರಾಗಿದ್ದ ಮಾಸ್ತಿಯವರು ಒಂದೆಡೆ ಹೇಳಿದ್ದಾರೆ.[1] ಇದಕ್ಕೆ ಉತ್ತಮ ನಿದರ್ಶನವೇ ಶಿವರುದ್ರಪ್ಪನವರು. ಶಿವರುದ್ರಪ್ಪನವರು ಕಾವ್ಯಕೃಷಿಗೆ ತೊಡಗಿ ಐದು ದಶಕಗಳೇ ಕಳೆದು ಹೋಗಿವೆ. ಈ ಸುದೀರ್ಘವಾದ ಅವಧಿಯಲ್ಲಿ ಅವರ ಕಾವ್ಯಪ್ರತಿಭೆ ನಿರಂತರವಾಗಿ ಬತ್ತದ ತೊರೆಯಾಗಿ ಹರಿದಿರುವದು ಕನ್ನಡದ ಭಾಗ್ಯವೆಂದೇ ಹೇಳಬೇಕು.

ಶಿವರುದ್ರಪ್ಪನವರು ಕಾವ್ಯೋದ್ಯೋಗದ ಆರಂಭದಿಂದಲೂ ಕಾವ್ಯರಚನೆ ಹಾಗೂ ಕಾವ್ಯಮೀಮಾಂಸೆಗೆ ಸಂಬಂಧಿಸಿದಂತೆ ತಮ್ಮ ಚಿಂತನೆಗಳನ್ನು ಕವಿತೆಗಳ ಮೂಲಕ ಅಭಿವ್ಯಕ್ತಿಸುತ್ತ ಬಂದಿರುವದೊಂದು ವಿಶೇಷ. ಅವರ ಕವಿತಾ ಸಂಕಲನಗಳನ್ನು ಗಮನಿಸುತ್ತ ಹೋದರೆ ಅನೇಕ ಕವನಗಳಲ್ಲಿ ಕಾವ್ಯಮೀಮಾಂಸೆಯ ದರ್ಶನ ನಮಗಾಗುತ್ತದೆ; ತಮ್ಮ ಸಾಹಿತ್ಯಜೀವನದುದ್ದಕ್ಕೂ ಶಿವರುದ್ರಪ್ಪನವರು ಕಾವ್ಯ ಮತ್ತು ವಿಮರ್ಶೆಗಳೆರಡನ್ನೂ ಸೃಜಿಸುತ್ತ, ಆ ಕುರಿತು ಆಲೋಚಿಸುತ್ತ ಬಂದಿರುವದು ಕಾಣುತ್ತದೆ. 'ಸಮಗ್ರಕಾವ್ಯ' ಹಾಗೂ ಅವರ 'ವಿಮರ್ಶೆಯ ಪೂರ್ವ ಪಶ್ಚಿಮ', 'ಕಾವ್ಯಾರ್ಥಚಿಂತನ' ಗ್ರಂಥಗಳು, 'ಸೌಂದರ್ಯ ಸಮೀಕ್ಷೆ'ಯಂಥ ಮಹಾಪ್ರಬಂಧ ಈ ದಿಶೆಯಲ್ಲಿ ಗಮನಾರ್ಹ ಕೃತಿಗಳು. ಶಿವರುದ್ರಪ್ಪನವರ ವಿಮರ್ಶೆಯಲ್ಲಿ ಕವಿ ಮನೋಧರ್ಮವನ್ನೂ ಕಾವ್ಯದಲ್ಲಿ ವಿಮರ್ಶನ ವಿಚಾರಗಳನ್ನೂ ಅಧ್ಯಯನ ಮಾಡಬೇಕಾದ ಅಗತ್ಯವಿದೆ. ಶಿವರುದ್ರಪ್ಪನವರ ಕವಿತೆಗಳಲ್ಲಿ ಕಾವ್ಯ ಮೀಮಾಂಸೆಯ ಚಿಂತನೆಗಳನ್ನು ಅನುಸಂಧಾನ ಮಾಡುವದು ಈ ಪ್ರಬಂಧದ ಉದ್ದೇಶ.

ಕನ್ನಡ ಕಾವ್ಯದ ವಿವಿಧ ಪರಂಪರೆಗಳಲ್ಲಿ ನಿರಂತರವಾಗಿ ಕಾವ್ಯರಚನೆಯನ್ನು ಶಿವರುದ್ರಪ್ಪನವರು ಮಾಡುತ್ತ ಬಂದಿದ್ದಾರೆ. ಬದುಕನ್ನು, ಪ್ರಕೃತಿಯನ್ನು ತೆರೆದ ಕಣ್ಣಿನಿಂದ

ನೋಡುವ ಈ ಕವಿ ಯಾವುದೇ ಬದ್ಧತೆಗೆ ತಮ್ಮನ್ನು ಅರ್ಪಿಸಿಕೊಂಡವರಲ್ಲ. ನವೋದಯ, ನವ್ಯ, ಸಮನ್ವಯ ಕಾವ್ಯಮಾರ್ಗಗಳಲ್ಲಿ ಅವರ ಕಾವ್ಯ ಸಾವಿರಾರು ದೃಷ್ಟಿದರ್ಶನಗಳನ್ನು ಚೆಲ್ಲಿ ಮುನ್ನಡೆದಿದೆ. ಆದ್ದರಿಂದ ಶಿವರುದ್ರಪ್ಪನವರ ಕವಿತೆಗಳಲ್ಲಿಯ ಕಾವ್ಯಮೀಮಾಂಸಾ ವಿಚಾರಗಳನ್ನು ನೋಡುವಾಗ ಕಾವ್ಯದ ಬಗೆಗಿನ ಸಮಗ್ರದೃಷ್ಟಿಯನ್ನಿಟ್ಟುಕೊಳ್ಳಬೇಕಾದುದು ಬಹಳ ಅವಶ್ಯಕ.

ಕವಿಜೀವನದ ಆರಂಭದಲ್ಲಿ ಎಂದರೆ ಶಿವರುದ್ರಪ್ಪನವರ ಮೊದಲ ಕವಿತಾ ಸಂಕಲನ 'ಸಾಮಗಾನ'ದ ಕವಿತೆಗಳಲ್ಲಿ ಕಾವ್ಯ ಹಾಗೂ ಅದರ ಸೃಷ್ಟಿಕ್ರಿಯೆಯ ಕುರಿತು ಕವಿ ಚಿಂತನೆ ನಡೆಸಿರುವದು ಕಂಡುಬರುತ್ತದೆ. 'ಕಾವ್ಯಕೃಪೆ'[2] ಎಂಬ ಕವಿತೆಯು ಕವಿಯ ಅಂತರಂಗ ಕಾವ್ಯಾಗಮನಕ್ಕಾಗಿ ಸತತವಾಗಿ ಪುಟಿಯುತ್ತಿರುವದನ್ನು ತಿಳಿಸುತ್ತದೆ. ಪ್ರತಿಯೊಬ್ಬ ಕವಿಗೂ ಕಾವ್ಯಸಂಸಾರದಲ್ಲಿ ಪ್ರವೇಶಿಸಿದೊಡನೆಯೇ ಅನಂತಲೋಕದ ದರ್ಶನವಾಗುತ್ತದೆ. 'ಕಾವ್ಯಕೃಪೆ' ಪಡೆದು ಕೃತಾರ್ಥನಾಗಬೇಕೆಂಬ ಹಂಬಲ ಬಲವತ್ತರವಾಗುತ್ತದೆ. "ಹೃದಯಾಂತರಾಳದಲ್ಲಿ ಹೊಮ್ಮುವ ನೋವನ್ನು, ಶ್ರೀಮಂತವಾದ ಅನುಭವಸಾರವನ್ನು ಸಾಂತವಾದ ಭಾಷೆಯಲ್ಲಿ ಪ್ರಕಟಿಸುವ ಕವಿಕಾರ್ಯ ಬಹುದೊಡ್ಡದು. ಜಗದ ಶ್ರೀಮಂತಿಕೆಯನ್ನು ಅಂತರಂಗದ ಅನಂತ ಧೀಮಂತಲೋಕದಲ್ಲಿ ತನ್ನದಾಗಿಸುತ್ತ ಸಾಗುವ ಕವಿಯ ಕಾರ್ಯ, ಲೋಕಸಂಗತಿಯನ್ನು ಮಿಡಿಯುತ್ತದೆ. ಅದಕ್ಕಾಗಿಯೇ ಒಳದನಿಯನ್ನು ಪ್ರತಿಮಿಸುವ ಕಾವ್ಯಕೃಪೆಗೆ ಕವಿಹೃದಯ ಸದಾಮಣಿಯುವದೆಂ"ದು ಶಿವರುದ್ರಪ್ಪನವರು ಅಭಿವ್ಯಕ್ತಿಸಿದ್ದಾರೆ.

ಕಾವ್ಯವನ್ನು ಬರೆಯಲು ಹೊರಟ ಕವಿಗೆ 'ಕಾವ್ಯಮಾರ್ಗ'ದ ಶೋಧನೆಯ ವಿಚಾರ ಬರುವದು ಸಹಜ. ತಾನು ಯಾವ ರೀತಿಯಲ್ಲಿ ಮುನ್ನಡಿಯಿಡಬೇಕೆಂಬ ಸಂದರ್ಭದಲ್ಲಿ ಶಿವರುದ್ರಪ್ಪ 'ಕಾವ್ಯಮಾರ್ಗ'[3] ಎಂಬ ಕವಿತೆಯಲ್ಲಿ ಹೀಗೆ ಹೇಳುತ್ತಾರೆ: "ಕಾವ್ಯವೆನ್ನುವದು ನಿತ್ಯನಿರಂತರ, ನಿತ್ಯನೂತನವಾದುದು. ಕಾವ್ಯವು ಯಾವುದೇ ಕೃತಕ ಕಟ್ಟುಪಾಡಿಗೆ ಒಳಗಾಗಿ ಉಳಿಯಬಾರದು. ಕವಿಗೆ ತನ್ನ ದನಿ ಎತ್ತರಿಸಲು, ಹಾಡಲು ಸ್ವಾತಂತ್ರ್ಯವಿರಬೇಕು. ಗಿರಿಯಲ್ಲಿ ಹುಟ್ಟಿದ ನದಿಗೆ ಹರಿಯುವಾಗ ಯಾವ ಭೂಗೋಳಶಾಸ್ತ್ರದ ಅರಿವೂ ಇರುವದಿಲ್ಲ. ಅದು ತನ್ನ ಮಾರ್ಗವನ್ನು ಕಂಡುಕೊಂಡು ಕಡಲು ಸೇರುತ್ತದೆ. ಅದಕ್ಕೆ ಕೈಮರದ ನೆರವು ಬೇಡ. ಆದ್ದರಿಂದ ಕಾವ್ಯನದಿಗೆ ಯಾವುದೇ ಶಾಸ್ತ್ರಮಾರ್ಗದ ಕಟ್ಟುಕಟ್ಟಳೆ ಇಲ್ಲದೆ ಸಹಜವಾಗಿ ಪ್ರವಾಹದೋಪಾದಿಯಲ್ಲಿ ಹರಿಯಬೇಕು" ಎಂದು ಹೇಳುವಲ್ಲಿ ಶಿವರುದ್ರಪ್ಪನವರು ಕವಿಯ ಸ್ವಾತಂತ್ರ್ಯ ಮತ್ತು ಕಾವ್ಯಸ್ಫೂರ್ತಿಯ ಪ್ರಕಾಶನಕ್ಕೆ ಹೆಚ್ಚು ಒತ್ತು ಕೊಟ್ಟಿದ್ದಾರೆ.

ಕವಿಗೆ ತನ್ನ ಹಾಡು ಹಳೆಯದೆಂಬ ಭಾವನೆ ಸಲ್ಲದು. 'ಹಳೆಯ ಹಾಡು'[4] ಎಂಬ ಪ್ರಸಿದ್ಧ ಕವಿತೆ ಇದನ್ನು ಚೆನ್ನಾಗಿ ಪ್ರತಿಮಿಸುತ್ತದೆ. "ಹಾಡು ಹಳೆಯದಾದರೇನು, ಭಾವ ನವನವೀನ, ಎದೆಯ ಭಾವ ಹೊಮ್ಮುವದಕೆ ಭಾಷೆ ಒಂದು ಸಾಧನ." ಜೀವನವನ್ನು ಕಟ್ಟುವದಕ್ಕೆ ಕಾವ್ಯ ಒಂದು ಸಾಧನ. ಕವಿಯ ಹೃದಯದಿಂದ ತುಂಬಿ ಬಂದ ಹಾಡನ್ನು

ಕೇಳುವ ತೆರೆದ ಹೃದಯ ಸಹೃದಯನಿಗಿದೆ. ಹಮ್ಮು ಬಿಮ್ಮುಗ್ರಳಿಲ್ಲದೆ ಹೃದಯ ತೆರೆದು ಹಾಡುವದು ಹಾಗೂ ಹಾಡಿನಲ್ಲಿ ಮನವು ಲೀನವಾಗುವಂತೆ ಕವಿ ಸದಾ ತಪಿಸಬೇಕೆಂದು, ತನ್ನ ಮನವು ಆ ರೀತಿ ಆಶಿಸುವದಾಗಿ ಶಿವರುದ್ರಪ್ಪನವರು ಹೇಳಿದ್ದಾರೆ.

'ಕವಿಯ ಮನಸು'[5] ಎಂಬ ಕವಿತೆಯಲ್ಲಿ ಕವಿಯ ಅಂತರಂಗವನ್ನು ಶಿವರುದ್ರಪ್ಪನವರು ತೆರೆದಿಟ್ಟಿದ್ದಾರೆ. ಪ್ರಕೃತಿಲೋಕದಂತೆ ಕವಿಯ ಮನಸ್ಸು ವಿಪುಲ ರೂಪಧಾರಿಣಿ. ಬ್ರಹ್ಮನು ಕಂಡ ಕನಸಿನಂತೆ ಕೋಟಿಕಲ್ಪನೆಗಳ ಗುಪ್ತಗಾಮಿನಿಯಾಗಿದೆ. ಕವಿಯ ಮನಸ್ಸು ಕಡಲಿನಂತೆ ವಿಸ್ತಾರ, ಆಳ ಹಾಗೂ ರತ್ನಗರ್ಭಧಾರಿಣಿಯಾಗಿದೆ. ಕಡಲಿನ ನೀರೆಲ್ಲಾ ಉಪ್ಪಾದರೂ ಅದರ ಒಡಲಲ್ಲಿ ಮುತ್ತುರತ್ನಗಳ ಅಮೋಘ ಭಂಡಾರವೇ ಅಡಗಿರುತ್ತದೆ. ಯುಗಯುಗಗಳ ನಶ್ವರವನ್ನು ಶಾಶ್ವತಗೊಳಿಸುವ ಕೆಲಸ ಕವಿಯದಾಗಿದೆ. ಕವಿಯ ಮನಸ್ಸು ಆಕಾಶದಂತೆ. ಮೋಡಗಳು ಇಳೆಗೆ ಮಳೆ ತರುವಂತೆ ಕವಿ ಭಾವಮೇಘಗಳ ಮೂಲಕ ಕಾವ್ಯಮಳೆ ಸುರಿಸಿ ಸಹೃದಯನ ಮನವನ್ನು ಹಸಿರಾಗಿಸುತ್ತಾನೆ. ಬೆಂದ ಭೂಮಿಯ ಹಸುರಿನೆಡೆಗೆ ರುಚಿರ ವರ್ಷರೂಪಕ್ಕೆ ತರುವ ಮಳೆಯಂತೆ ಕಾವ್ಯವೂ ನೊಂದವರ ಹೃದಯದ ದನಿಯಾಗಲಿದೆ. ಹೀಗೆ ಕವಿಯ ಮನಸ್ಸು ಪ್ರಕೃತಿ, ಕಡಲು, ಆಕಾಶದ ವಿಸ್ತಾರಕ್ಕೆ ಹಬ್ಬಿನಿಲ್ಲುವ ಭಾವನೆಗಳನ್ನು ಶಿವರುದ್ರಪ್ಪನವರು ಸೆರೆಹಿಡಿದ ರೀತಿ ಅಸ್ವಾದ್ಯವಾಗಿದೆ.

'ತೃಪ್ತಿ'[6] ಎಂಬ ಕವಿತೆಯಲ್ಲಿ ಶಿವರುದ್ರಪ್ಪನವರು ಕವಿಯಾದವನ ಬಾಳಿನ ಗಂತವ್ಯವನ್ನು ಪ್ರಚುರಪಡಿಸಿದ್ದಾರೆ. ಕವಿ ಎದೆ ತುಂಬಿ ಹಾಡುವದು ಸಹೃದಯನ ಮನಃಸಂತೋಷಕ್ಕಾಗಿ. ರಸಿಕರ ಆನಂದವೇ ಕವಿಗೆ ತೃಪ್ತಿ. ಆದ್ದರಿಂದ ಹಾಡುವ ಹಕ್ಕಿಗೆ ಬೇರೆ ಬಿರುದು ಸನ್ಮಾನ ಬೇಕಿಲ್ಲ. ಎಲ್ಲರೂ ಕೇಳಲೆಂದು ಕವಿ ಹಾಡುವದಿಲ್ಲ. ಆದರೆ ಹಾಡುವದು ಅಂದರೆ ಕಾವ್ಯರಚನೆಯ್ನನ್ನು ಮಾಡುವದು ಕವಿಗೆ ಅನಿವಾರ್ಯವಾದ ಕರ್ಮ. ಯಾರು ಕಿವಿ ಮುಚ್ಚಿದರೂ ಕವಿಗೆ ಚಿಂತೆಯಿಲ್ಲ. ಕವಿ ತನ್ನ ಕೆಲಸ ಎಡಬಿಡದೆ ಮಾಡುತ್ತಿರುತ್ತಾನೆ. ಹಕ್ಕಿ ಹಾಡಿಕೊಳ್ಳುವಂತೆ, ಮಾಡುವ ತನ್ನ ಕರ್ತವ್ಯದಲ್ಲಿ ತೃಪ್ತಿಯನ್ನು ಸಾಧಿಸುವ ಬಗೆಯನ್ನು ಶಿವರುದ್ರಪ್ಪನವರು ಹೇಳಿರುವದು ಭಾರತೀಯ ಕಾವ್ಯಮೀಮಾಂಸೆಯಲ್ಲಿ ಹೇಳಿದ 'ಕಾವ್ಯಂ ಸಹೃದಯಂ ಆನಂದಾಯ' ಹಾಗೂ 'ಕಾವ್ಯಂ ಸ್ವಾಂತ ಸುಖಾಯ' ಎಂಬುದನ್ನು ಸ್ಮರಣೆಗೆ ತಂದುಕೊಡುತ್ತದೆ.

ಶಿವರುದ್ರಪ್ಪನವರ ಎರಡನೆಯ ಕವಿತಾಸಂಕಲನ 'ಚೆಲುವು ಒಲವು'. ಇದರಲ್ಲಿ ನಿಸರ್ಗದ ಸೌಂದರ್ಯೋಪಾಸನೆಗೆ ಕವಿ ತೊಡಗಿರುವದು ಕಾಣುತ್ತದೆ. ಇದರಲ್ಲಿ ಬರುವ 'ಪ್ರಕೃತಿ-ಕವಿ'[7]ಯೆಂಬ ಕವಿತೆಯಲ್ಲಿ ಕವಿಗೂ ನಿಸರ್ಗಕ್ಕೂ ಇರುವ ಸಂಬಂಧವನ್ನು ಮಾರ್ಮಿಕವಾಗಿ ಹೇಳಲಾಗಿದೆ. ಶಿವನ ಜಡೆಯಿಂದ ಗಂಗೆ ಭೂಮಿಗೆ ಇಳಿದು ಬಂದಂತೆ ಪ್ರಕೃತಿ ಕವಿಯ ಹತ್ತಿರ ಬಂದಿದೆ. ಆದ್ದರಿಂದ ಕವಿಯ ತೃಪ್ತಿ, ಸಂತಸ ಹೆಚ್ಚಿದೆ. ನಿಸರ್ಗದ ನೂರಾರು ಭಾವಗಳು ಕಾವ್ಯರೂಪ ಪಡೆದಿವೆ. ಹೂ ಹಣ್ಣು, ಚಿಗುರು, ಋತುಗಾನದಲ್ಲಿ ನೂರು ಬಗೆಯ ಅಚ್ಚರಿಗಳ ರಸಕೋಶ ನಿರ್ಮಿಸಿದೆ. ಹಕ್ಕಿಗೊರಲಿನಲ್ಲಿ ಪ್ರಕೃತಿ ವಿವಿಧ

ಮಧುರ ರಾಗವಾಗಿ ಹೊಮ್ಮಿದೆ. ಗಾಳಿಯೊಡನೆ ವಿಶ್ವವನೆ ಸುತ್ತಿ ಸುಳಿಯುವಂತಾಗಿದೆ. ನಿಸರ್ಗಲೋಕದ ಸೌಂದರ್ಯಾರಾಧನೆ ಕವಿಯ ಮೂಲಕ ಬೆಳಗುವಂತಾಗಿದೆ. ಹೀಗೆ ಶಿವರುದ್ರಪ್ಪನವರು ಕವಿಯಾದವನು ನಿಸರ್ಗ ಸೌಂದರ್ಯಾರಾಧನೆಯಿಂದ ಹೆಚ್ಚಿನ ಅನುಭೂತಿ ಪಡೆದುಕೊಳ್ಳಬೇಕೆಂದು ಕರೆಕೊಟ್ಟಿದ್ದಾರೆ. ಕವಿಯಾದವನಿಗೆ ನಿಸರ್ಗದ ಅವಿನಾಭಾವಿಯಾದ ನಂಟು ಇರಲೇಬೇಕೆಂಬ ಅವರ ಆಶಯ ಗಮನಾರ್ಹ.

'ಚೆಲುವು ಒಲವು' ಕವಿತಾ ಸಂಕಲನದ ಕೊನೆಯಲ್ಲಿ ಶಿವರುದ್ರಪ್ಪನವರು 'ಕಾವ್ಯಕೆ ನಮನ'[8] ಎಂಬ ಕವಿತೆಯಲ್ಲಿ ಕಾವ್ಯದ ಅನಂತ ವೈಭವಕ್ಕೆ ಶರಣು ಹೇಳಿದ್ದಾರೆ. ಕಾವ್ಯವು ಸ್ಫೂರ್ತಿಯ ಆವೇಶದ ಫಲ. ಕನಸು ನನಸಾದಂತೆ ಕಾವ್ಯಸ್ಫೂರ್ತಿ ಚಿಮ್ಮಿದೆ. ಮಂದಾರದ ಸುಗಂಧ ಹರಡಿದಂತೆ ಆನಂದದ ಸೌಂದರ್ಯ ಬಿಂದು, ಕಾವ್ಯದ ಮೂಲಕ ಬಂದಿಳಿದಿದೆ. ಕಾವ್ಯದಿಂದಾಗಿಯೇ ಕವಿ ಜಗದೊಲವನ್ನು ಪಡೆಯುತ್ತಾನೆ. ಅದಕ್ಕಾಗಿಯೇ ಕಾವ್ಯಕ್ಕೆ ನಮನ.

ಶಿವರುದ್ರಪ್ಪನವರು ಮೂರನೆಯ ಕವಿತಾ ಸಂಕಲನ 'ದೇವಶಿಲ್ಪ'. ಕನ್ನಡನಾಡು, ನುಡಿ, ಸಾಂಸ್ಕೃತಿಕ ಪರಂಪರೆಯ ವೈಭವವನ್ನು ಪ್ರತಿಮಿಸುವ ಈ ಸಂಕಲನದ 'ಕವಿ ಕಾವ್ಯಕ್ಕೆ'[9] ಎಂಬ ಕವಿತೆಯಲ್ಲಿ ಶಿವರುದ್ರಪ್ಪನವರು ಹೇಳುವ ವಿಚಾರಗಳಿವು: 'ಕವಿಗೂ ಸಹೃದಯನಿಗೂ ಇರುವ ಸಂಬಂಧದಂತೆ ಕವಿಗೂ-ಕಾವ್ಯಕ್ಕೂ ಇರುವ ಸಂಬಂಧ ಅವ್ಯಾಜವಾದುದು. ಅದು ಬಲ್ಬು ಸ್ವಿಚ್ಚುಗಳಿದ್ದಂತೆ. ಈ ನಂಟು ಇರದಿದ್ದರೆ ಕವಿಯ ವ್ಯಕ್ತಿತ್ವ ಬರಿ ಗಾಜಿನ ಬುರುಡೆಯಂತಾಗುತ್ತದೆ. ಅಂದರೆ ಕವಿಗೂ-ಕಾವ್ಯಕ್ಕೂ ಮೀರಿದ ಒಂದು ಮೂಲಶಕ್ತಿ ಒಳಗೆ ನಿಂತು ಬೆಳಕನ್ನು ನಿರ್ಮಿಸುತ್ತದೆ. ಅಲ್ಲದಿದ್ದರೆ ಬಾಳು ಬರಿ ಶೂನ್ಯವೆನ್ನಬಹುದು. ದೈವಾಯತ್ತವಾದ ಪ್ರತಿಭೆ ಕವಿ-ಕಾವ್ಯಗಳ ನಂಟಿಗೆ ಕಾರಣವಾಗುತ್ತದೆ. ಈ ಪ್ರತಿಭೆ ಬೆಳಕಿದ್ದಂತೆ. ಇದರಿಂದಲೇ ಕಾವ್ಯದ ಸೃಜನಕ್ರಿಯೆ ನಿರಂತರವಾಗುತ್ತದೆ'ಯೆಂದು ಶಿವರುದ್ರಪ್ಪನವರು ಮಾರ್ಮಿಕವಾಗಿ ಹೇಳಿದ್ದಾರೆ.

'ಕವಿತೆ'[10] ಕುರಿತ ಶಿವರುದ್ರಪ್ಪನವರ ಚಿಂತನೆ ಆಕರ್ಷಕವಾದುದು. ಕಾವ್ಯ, ಸ್ಫೂರ್ತಿಯ ಫಲ. ಈ ಕಾವ್ಯಸ್ಫೂರ್ತಿ (Inspiration) ಸದಾ ಚಂಚಲೆಯೆಂಬುದು ಕವಿಯ ಭಾವ. ತಾನು ಹೃದಯ ತೆರೆದು ಬರೆಯಲಾರ. ಮಿಂಚಿನ ಕ್ಷಣಗಳನ್ನು ಹಿಡಿದಿಡಲಾಗುವದಿಲ್ಲ. ಬೂದಿಯಲ್ಲಿ ಬಿದ್ದ ಕಿಡಿಗಳನ್ನು ಹುಡುಕಲಾಗುವದಿಲ್ಲ. ಆದ್ದರಿಂದ ಕವಿಗೆ ಯಾರ ಕೃಪೆಯೂ ಬೇಕಿಲ್ಲ. ಯಾರ ಹಂಗಿಗೂ ಪಕ್ಕಾಗುವದು ಬೇಡ. ಯಾಕೆಂದರೆ ಈ ಕಾವ್ಯಸ್ಫೂರ್ತಿ ಚಂಚಲೆ. ಹಾಗಿದ್ದರೆ 'ಕವಿತೆ ಬರೆಯುವುದು ಹೇಗೆ?'[11] ಎಂಬುದರ ಜಿಜ್ಞಾಸೆಯೂ ಶಿವರುದ್ರಪ್ಪನವರನ್ನು ಕಾಡದೇ ಇಲ್ಲ. ಕವಿತೆ ಬರೆಯುವುದು ಬಹು ಸುಲಭ. ಈ ಕಾಲದಲ್ಲಿ ಇದರಿಂದ ಲಾಭವಿದೆ. ಕವಿತೆ ಬರೆಯುವುದು ಹೇಗೆ? ಐದು ರೂಪಾಯಿ ಮನಿಯಾರ್ಡರ್ ಮಾಡಿದರೆ ಎಲ್ಲ ಸುಲಭೋಪಾಯ ಸಾಮಗ್ರಿಗಳು ಉಪಲಬ್ಧ. ಸೂರ್ಯೋದಯದ ದರ್ಶನಕ್ಕೆ ಕವಿ ಕಾದು ಕುಳಿತುಕೊಳ್ಳಬೇಕಿಲ್ಲ. ಕವಿಗೆ ಬಚ್ಚಲು ಮನೆಯ ರೊಚ್ಚೆ, ಬೀದಿ ಸದ್ದು-ಹಾಡಲು, ಕವಿತೆ ಬರೆಯಲು ತೊಡಕನ್ನುಂಟುಮಾಡಲಾರದು. ಕವಿಯಾದವನು

ಸೂರ್ಯೋದಯ, ಸೂರ್ಯಾಸ್ತಕ್ಕಾಗಿ ಕಾದು ಕುಳಿತು ಬರೆಯದೆ, ಜನಸಾಮಾನ್ಯರ ಧ್ವನಿಗೆ ಸ್ಪಂದಿಸಬೇಕು. ಕಾವ್ಯವೆನ್ನುವುದು ಜನಸಾಮಾನ್ಯರ ನಿಜದನಿಯಾದಾಗ ಮಾತ್ರ ಅದರ ಆಶಯ ಪರಿಪೂರ್ಣವಾಗುವದೆಂಬ ಶಿವರುದ್ರಪ್ಪನವರ ವಿಚಾರಕ್ಕೆ ಎರಡು ಮಾತುಗಳಿಲ್ಲ.

'ಈ ಕವಿತೆ'[12]ಯಲ್ಲಿ ಶಿವರುದ್ರಪ್ಪನವರು ಕಾವ್ಯದಲ್ಲಿ ಯಾವ ಸತ್ವ ಶ್ರೀಮಂತಿಕೆ ಇರಬೇಕೆಂಬ ಜಿಜ್ಞಾಸೆಯನ್ನು ಯುವ ಕವಿಗಳಿಗೆ ಕಿವಿಮಾತಿನ ರೂಪದಲ್ಲಿ ಹೇಳಿದ್ದಾರೆ. 'ಈ ಕವಿತೆ ಯಾವಳೋ ಹೆಣ್ಣ ಕಣ್ಣ ಬೆಳಕಿನ ಕಿರಣ ತಾಗಿ ಪುಟಿದದ್ದಲ್ಲ. ಪ್ರಣಯಾಲಾಪಗಳ ಬಳ್ಳಿಯನು ತಬ್ಬಿ ಹಬ್ಬಿದ್ದಲ್ಲ. ಯೌವ್ವನೋತ್ತತ್ತ ವಿಕೃತ ಭ್ರಮೆಗಳಿಗೆ ಕೋಡಂಗಿ ವೇಷವನ್ನು ಕಟ್ಟಿ ಕುಣಿಸಿದ್ದಲ್ಲ. ಬೆಟ್ಟದಿಂದ ಅಕಸ್ಮಾತ್ತಾಗಿ ಸುರಿದ ತಡಸಲು ಇದಲ್ಲ.... ಬಾವಿಯ ತೋಡಿ ಯಾತವ ಹೊಡೆದ ತಂದದ್ದು ಈ ರಾಗ'. ಇದು ಅನುಭವದ ಪರಿಪಾಕವೆಂದೂ, ಕಾವ್ಯ ಅನುಭವದ ಪರಿಪಾಕವಾಗಿ ಮೂಡಿಬಂದಾಗ ಮಾತ್ರ ಅದರ ಆಶಯ ಸಾರ್ಥಕವೆಂಬ ಕವಿಯ ವಿಚಾರವು ಎಲ್ಲ ಮಾರ್ಗ, ಪಂಥದ ಕವಿಗಳಿಗೆ ದಾರಿದೀಪವಾಗಿದೆ.

'ಕವಿ-ಕಿವಿ'[13] ಎಂಬ ಕವಿತೆಯಲ್ಲಿ ಶಿವರುದ್ರಪ್ಪನವರು ಆಧುನಿಕ ಕವಿಯ ಬಯಕೆಯನ್ನು ಪ್ರಕಟಿಸಿದ ರೀತಿ ಆಪ್ಯಾಯಮಾನ.

"ಈ ಮನೆಯಲ್ಲಿ ನನಗೆ ಒಂದಿಷ್ಟು ಜಾಗ ಕೊಡಿ
ನಾನು ಒಬ್ಬ ಕವಿ. ನನಗೆ ಬೇಕಾದದ್ದು ಹೃದಯವಿರುವಂಥ
ಐದೋ ಆರೋ ಕಿವಿ. ನಾನು ನೆಲ ಅಗೆದು
ಶೋಧಿಸುವ ಸಂಶೋಧಕನಲ್ಲ. ಇತಿಹಾಸದ
ಚಿನ್ನದ ಗೆರೆಯ ಹಾಳು ಕಪಾಟಿನ ತಾಳೆಗರಿ ಶೋಧಿಸಿ
ಹುಡುಕಿ ಹೇಳಲಾರೆ. ನನಗೆ ಬೇಕಾದದ್ದು ಹೃದಯವಿರುವಂಥ
ಕಿವಿ, ಅದಕ್ಕಿಂತ ದೊಡ್ಡದು ಇನ್ನಿಲ್ಲ."

ಇದು ಎಲ್ಲ ಕವಿಗಳ ಆಶಯವೂ ಆಗಿರಬೇಕೆಂದು ಹೇಳಿದ ಶಿವರುದ್ರಪ್ಪನವರು ಕವಿಗೆ ಸಹೃದಯ ಸಿಗದಿದ್ದರೆ ಅವನ ಕಾವ್ಯ ಅವನಲ್ಲೇ ಉಳಿಯುತ್ತದೆ; ಕಾವ್ಯ ಸಹೃದಯನ ಮೂಲಕವೇ ಸಾರ್ಥಕ್ಯ ಪಡೆಯಬೇಕೆಂಬುದನ್ನು ವಿದಿತಪಡಿಸಿದ್ದಾರೆ.

ಶಿವರುದ್ರಪ್ಪನವರು ಸ್ವತಃ ಕವಿಯಾಗಿ ಯಾವ ಉದ್ದೇಶಕ್ಕಾಗಿ ತಾವು ಕಾವ್ಯರಚನೆ ಮಾಡುವದಾಗಿ ತಮ್ಮ ಅಂತರಂಗವನ್ನೇ ತೆರೆದಿಟ್ಟು, 'ನಾನೇಕೆ ಬರೆಯುತ್ತೇನೆ'[14] ಎಂಬ ಕವಿತೆಯಲ್ಲಿ ಪ್ರಕಟಿಸಿದ್ದಾರೆ—

"ನಾನು ಬರೆಯುತ್ತೇನೆ, ಸುಮ್ಮನಿರಲಾರದ್ದಕ್ಕೆ,
ನನ್ನ ಸಂವೇದನೆ ಕ್ರಿಯೆ, ಪ್ರತಿಕ್ರಿಯೆಗಳನ್ನು ದಾಖಲಿಸುವದಕ್ಕೆ,
ನಿಂತನೀರಾಗದೆ ಮುಂದಕ್ಕೆ ಹರಿಯುವದಕ್ಕೆ,
ಎಲ್ಲರ ಜತೆ ಬೆರೆಯುವದಕ್ಕೆ,

ನಾನು ಬರೆಯುತ್ತೇನೆ
ನನ್ನನ್ನು ಕಂಡುಕೊಳ್ಳುವದಕ್ಕೆ, ಕಾಣಿಸುವದಕ್ಕೆ,
ನಿಮ್ಮೊಂದಿಗೆ ಸಂವಾದಿಸುವದಕ್ಕೆ
ನಾನು ಬರೆಯುತ್ತೇನೆ; ಖುಷಿಗೆ, ನೋವಿಗೆ, ರೊಚ್ಚಿಗೆ
ಅಥವಾ ನಂದಿಸಲಾರದ ಕಿಚ್ಚಿಗೆ"

ಹೀಗೆ ಕವಿ ಕಾವ್ಯಲೋಕವನ್ನು ನಿರ್ಮಾಣಮಾಡುವ ಹಿನ್ನೆಲೆಯಲ್ಲಿ ಅದರ ವಿವಿಧೋದ್ದೇಶಗಳನ್ನು ಶಿವರುದ್ರಪ್ಪನವರು ಬಹು ವಸ್ತುನಿಷ್ಠವಾಗಿ ಇಲ್ಲಿ ಹೇಳಿದ್ದಾರೆ. 'ಸ್ಫೂರ್ತಿಪ್ರತಿಭೆ'[15] ಎಂಬ ಎರಡು ಸಾಲಿನ ಕವಿತೆಯಲ್ಲಿ ಅವೆರಡರ ಸಾವಯವ ಸಂಬಂಧದಿಂದ ಉಂಟಾಗುವ ಕಾವ್ಯದ ಅಮೃತಧಾರೆಯನ್ನು ಸುಂದರ ಪ್ರತಿಮೆಯ ಮೂಲಕ ಅಭಿವ್ಯಕ್ತಿಸಿದ್ದಾರೆ: "ಸ್ಫೂರ್ತಿಯ ಕರು ಬಾಯಿಕ್ಕಲು ಪ್ರತಿಭೆಯ ಕೆಚ್ಚಲಿಗೆ। ಶಬ್ದಾರ್ಥದ ಹಾಲಿಳಿವುದು ಕವಿಪಾತ್ರೆಯ ಒಳಗೆ." ಸ್ಫೂರ್ತಿಯನ್ನು ಕರುವಿಗೂ ಪ್ರತಿಭೆಯನ್ನು ಕೆಚ್ಚಲಿಗೂ ಪ್ರತಿಮಿಸಿ ಕಾವ್ಯಧಾರೆ ಹಾಲಿನ ಅಮೃತಸಿಂಚನದಂತೆ ಸುರಿಯುವುದನ್ನು ಮನೋಜ್ಞವಾಗಿ ಬಣ್ಣಿಸಲಾಗಿದೆ. ಹಾಗೆಯೇ 'ಪ್ರತಿಭೆ-ಪಾಂಡಿತ್ಯ'[16] ಎಂಬ ಕವಿತೆಯಲ್ಲಿ ಅವೆರಡರ ಸಂಬಂಧದ ಮೂಲಕ ಕಾವ್ಯ ಸಾಧಿಸುವ ಉತ್ಕೃಷ್ಟತೆಯನ್ನು ಶಿವರುದ್ರಪ್ಪನವರು ವರ್ಣಿಸಿದ್ದಾರೆ. ಋತುಪರ್ಣ ಮಹಾರಾಜನನ್ನು ಕಾರ್ಕೋಟಕನ ವಿಷಹಿಡಿದ ನಳ(ಬಾಹುಕ) ಒಂದೇ ಸುಳಿಯಲ್ಲಿ ಸ್ವಯಂವರಕ್ಕೆ ಸಾಗಿಸಿದ್ದು ಮಿಂಚಿನಪ್ರತಿಭೆ. ನಳನ ಈ ಅಶ್ವವಿದ್ಯೆ ಋತುಪರ್ಣನನ್ನು ಮೆಚ್ಚಿಸಿತು. ಆತನು ತನ್ನ ಪಾಂಡಿತ್ಯ ಪ್ರದರ್ಶಿಸಲು ಶಾಖೋಪಶಾಖೆಗಳಲ್ಲಿ ಚಾಚಿರುವ ಮರದಲ್ಲಿ ಎಲೆಗಳೆಷ್ಟೆಂಬುದನ್ನು ಕ್ಷಣಾರ್ಧದಲ್ಲಿ ಹೇಳಬಲ್ಲೆ ಎಂದು ಮರದ ಎಲೆಗಳ ಸಂಖ್ಯೆ ಎಂಬತ್ತು ಸಹಸ್ರ ಲಕ್ಷದ ಮೇಲೆ ನಾನೂರುತೊಂಬತ್ತು ಎಂದ. ಋತುಪರ್ಣನ ಪಾಂಡಿತ್ಯಕ್ಕೆ ಬಾಹುಕ ತಲೆದೂಗಿದ. ಹೀಗೆ ಪ್ರತಿಭೆ ಪಾಂಡಿತ್ಯಗಳೆರಡೂ ನಳ-ಋತುಪರ್ಣರ ಸಂಬಂಧದಂತೆ ವಿಶಿಷ್ಟ ಶಕ್ತಿವಿಶೇಷಗಳಾಗಿವೆ. ಅವೆರಡೂ ಸಹೃದಯನನ್ನು ಸದಾ ಬೆರಗುಗೊಳಿಸುತ್ತಿರುತ್ತವೆಂಬುದರಲ್ಲಿ ಸಂದೇಹವಿಲ್ಲ.

ಕವಿಜೀವನದ ಅಂತರಂಗದ ವ್ಯಥೆಯ ಕಥೆಯ ಅಭಿವ್ಯಕ್ತಿ 'ಯಾವ ಹಾಡ ಹಾಡಲಿ?'[17] ಕವಿತೆಯಲ್ಲಿ ಮೂಡಿಬಂದಿದೆ. 'ಬರಿಮಾತಿನ ಜಾಲದಲ್ಲಿ, ಶೋಷಣೆಗಳ ಶೂಲದಲ್ಲಿ, ವಂಚನೆಗಳ ಸಂಚಿನಲ್ಲಿ, ಹಸಿದಹೊಟ್ಟೆ ನರಳುವಲ್ಲಿ ಯಾವ ಹಾಡ ಹಾಡಲಿ?' ಎಂಬ ಕಾವ್ಯಪ್ರಶ್ನೆ ಅವನನ್ನು ಅಂತರ್ಮುಖಿಯಾಗಿಸಿದ್ದನ್ನು ನಿವೇದಿಸುತ್ತದೆ. ಸಮಕಾಲೀನ ಸಾಮಾಜಿಕ ಸನ್ನಿವೇಶ ಕಾವ್ಯದ ಸಾಂಸ್ಕೃತಿಕ ಅಭಿವ್ಯಕ್ತಿಗೆ ಆವರಣವನ್ನು ನಿರ್ಮಿಸುವ ಪರಿಸ್ಥಿತಿಯಿಲ್ಲವೆಂಬ ಶಿವರುದ್ರಪ್ಪನವರ ಅಭಿಮತವು ಎಲ್ಲ ಕವಿಗಳೂ ಎದುರಿಸುವ ಸಮಸ್ಯೆಯಾಗಿದೆ ಎಂಬುದು ಗಮನಾರ್ಹ.

ಕವಿ ತನ್ನ ಆಂತರಿಕ ನೋವನ್ನು ನುಂಗಿ, ಸಾಮಾಜಿಕ ಸ್ಪಂದನಕ್ಕೆ ವಾಣಿಯಾಗಿ ನಿಲ್ಲಬೇಕೆಂಬ ಅಗತ್ಯವನ್ನು ಶಿವರುದ್ರಪ್ಪನವರು ಒತ್ತಿ ಹೇಳುತ್ತ ಬಂದಿದ್ದಾರೆ. 'ಬನ್ನಿ ನನ್ನ

ಹೃದಯಕೆ'[18] ಎಂಬ ಕವಿತೆಯು ಸಾಮಾಜಿಕನನ್ನು ಕವಿಯ ಅಂತರಂಗಕ್ಕೆ ಕರೆತಂದು ಅವನ ಮೂಕವೇದನೆಯ ಮಿಡಿತವನ್ನು ಶೃತಿಗೊಳಿಸುವ ವಿಧಾನ, ಇಂದಿನ ಸಮಕಾಲೀನ ಸಂದರ್ಭದಲ್ಲಿ ಅತ್ಯಗತ್ಯವಾಗಿ ಮಾಡಬೇಕಾದ ಕಾರ್ಯವೆಂದು ಶಿವರುದ್ರಪ್ಪನವರು ವಿದಿತಪಡಿಸಿರುವದು ಪ್ರಚಲಿತ ಸನ್ನಿವೇಶದಲ್ಲಿ ಇತರ ಕವಿಗಳಿಗೆ ಮಾರ್ಗದರ್ಶಕವಾಗಿದೆ.

ಶಿವರುದ್ರಪ್ಪನವರು ಭಾರತೀಯ ಕಾವ್ಯಮೀಮಾಂಸೆಯ ತತ್ವಗಳ ನೆಲೆಯಲ್ಲಿ ಕಾವ್ಯಶೋಧ ನಡೆಸಿರುವರಾದರೂ ಪಾಶ್ಚಾತ್ಯ ವಿಚಾರ, ಚಿಂತನೆಗಳನ್ನು ಅವರು ಪಡೆಯದೇ ಇಲ್ಲ. ಭಾವಲೋಕದ ವಿಹಾರಿಗಳಾಗಿದ್ದ ಕವಿ ಸಾಮಾಜಿಕ ಸ್ಪಂದನಕ್ಕೆ ಮುಖಮಾಡಿ ನಿಂತುದು ಕನ್ನಡ ಕಾವ್ಯ ನಡೆದು ಬಂದ ದಾರಿಯ ಪ್ರತೀಕವೇ ಸರಿ. ಅವರ ಸಮಗ್ರಕಾವ್ಯದ ಅನ್ವೇಷಣೆಯಲ್ಲಿ ಕಾವ್ಯಕರ್ಮಕ್ರಿಯೆಯ ವ್ಯಾಪಕ ಚಿಂತನೆ ಸಾಗುತ್ತ ಬಂದುದನ್ನು ನಾವು ಕಂಡು ಬೆರಗಾಗುತ್ತೇವೆ. ಜೀವನವನ್ನು ಪ್ರೀತಿಸಿದಂತೆ ಕಾವ್ಯವನ್ನು ಸದಾ ಪ್ರೀತಿಸುತ್ತ ಬಂದ ಶಿವರುದ್ರಪ್ಪನವರ ಕವಿಪ್ರತಿಭೆ ಕನ್ನಡ ಕಾವ್ಯಮೀಮಾಂಸೆಯ ಕವನಗಳಿಗೆ ವಿಶಿಷ್ಟ ಕೊಡುಗೆಯನ್ನು ನೀಡಿದೆ. ಆದರ ಬಗ್ಗೆ ಹೆಚ್ಚಿನ ಚರ್ಚೆ ನಡೆಯಬೇಕಾದುದು ಅವಶ್ಯಕ.

*(ಮೂಲ: ಸಾಹಿತ್ಯ ಮತ್ತು ಸಹೃದಯತೆ)*

■

---

**ಅಡಿಟಿಪ್ಪಣಿಗಳು**

1. ನೋಡಿ: ಶ್ರೀನಿವಾಸ: ಸಾಹಿತ್ಯದಲ್ಲಿ ವಿಮರ್ಶೆಯ ಕಾರ್ಯ-ವಿಮರ್ಶೆ-1
2. 'ಸಾಮಗಾನ', ಸಮಗ್ರ ಕಾವ್ಯ - ಪುಟ: 26-27.
3. 'ಸಾಮಗಾನ', ಸಮಗ್ರ ಕಾವ್ಯ - ಪುಟ: 56.
4. 'ಸಾಮಗಾನ', ಸಮಗ್ರ ಕಾವ್ಯ - ಪುಟ: 57.
5. 'ಸಾಮಗಾನ', ಸಮಗ್ರ ಕಾವ್ಯ - ಪುಟ: 61.
6. 'ಸಾಮಗಾನ', ಸಮಗ್ರ ಕಾವ್ಯ - ಪುಟ: 62.
7. 'ಚೆಲುವು ಒಲವು', ಸಮಗ್ರ ಕಾವ್ಯ - ಪುಟ: 69, 70, 71, 72.
8. 'ಚೆಲುವು ಒಲವು', ಸಮಗ್ರ ಕಾವ್ಯ - ಪುಟ: 107.
9. 'ದೇವಶಿಲ್ಪ', ಸಮಗ್ರ ಕಾವ್ಯ - ಪುಟ: 123.
10. 'ಕಾರ್ತೀಕ', ಸಮಗ್ರ ಕಾವ್ಯ - ಪುಟ: 249.
11. 'ಅನಾವರಣ', ಸಮಗ್ರ ಕಾವ್ಯ - ಪುಟ: 280, 281 ಮತ್ತು 283.
12. 'ಅನಾವರಣ', ಸಮಗ್ರ ಕಾವ್ಯ - ಪುಟ: 291.
13. 'ಅನಾವರಣ', ಸಮಗ್ರ ಕಾವ್ಯ - ಪುಟ: 313-314.
14. 'ಕಾಡಿನ ಕತ್ತಲಲ್ಲಿ', ಸಮಗ್ರ ಕಾವ್ಯ - ಪುಟ: 450.
15. 'ತೆರೆದದಾರಿ', ಸಮಗ್ರ ಕಾವ್ಯ - ಪುಟ: 349.
16. 'ಪ್ರೀತಿ ಇಲ್ಲದ ಮೇಲೆ', ಸಮಗ್ರ ಕಾವ್ಯ - ಪುಟ: 467.
17. 'ಪ್ರೀತಿ ಇಲ್ಲದ ಮೇಲೆ', ಸಮಗ್ರ ಕಾವ್ಯ - ಪುಟ: 456.
18. 'ಪ್ರೀತಿ ಇಲ್ಲದ ಮೇಲೆ', ಸಮಗ್ರ ಕಾವ್ಯ - ಪುಟ: 466.

# ಮಾಧುರ್ಯದ ಮೋಡಿ

ಎಚ್. ಆರ್. ಲೀಲಾವತಿ

ಕೋಟಿಜನ್ಮ ವಿಕಾಸನ
ನಮ್ಮ ಇಂದಿನ ಜೀವನ
ತನುವಿಕಾಸನ ಮನವಿಕಾಸನ
ಮನುಜಬದ್ಧಿ ವಿಕಾಸನ.... (ಜಿ.ಎಸ್.ಎಸ್)

ನಿಜ ವಿಕಾಸವೇ ಜೀವನಧರ್ಮ. ಮಾನವನ ತನು, ಮನ, ಬುದ್ಧಿ ವಿಕಾರದೊಂದಿಗೆ ಕಲೆ, ಸಾಹಿತ್ಯ, ಸಂಸ್ಕೃತಿಯ ವಿಕಾಸವೂ ಹೊಸ ಹೊಸ ದಿಗಂತದತ್ತ ಚಾಚಿ ವಿಸ್ತಾರಗೊಂಡಿತು. ಇದರಿಂದಾಗಿ ಕಲೆ ಸಾಹಿತ್ಯದ ಎಲ್ಲ ಪ್ರಕಾರಗಳಿಗೂ ಹೊಸ ಹೊಸ ರಂಗು, ರೂಪರೇಶೆಗಳು ಮೂಡಿ ನಿತ್ಯ ವಿಕಸನದತ್ತ ಹೆಜ್ಜೆ ಹಾಕುತ್ತಿದೆ. ಹಾಗಾಗಿ ಮನುಷ್ಯನ ಮಾನಸಿಕ ಭಾವಾಭಿವ್ಯಕ್ತಿಗೆ ಹಲವಾರು ಸೋಪಾನಗಳುಂಟೆಂದಾಯ್ತು. ಸ್ವರಗಳ ಮಾಧ್ಯಮದಲ್ಲಿ ಅಭಿವ್ಯಕ್ತವಾಗುವ ರಸಾನುಭವ ಸಂಗೀತವೆನಿಸುತ್ತದೆ. ಭಾಷಾ ಮಾಧ್ಯಮದಲ್ಲಿ ಅಭಿವ್ಯಕ್ತವಾಗುವ ರಸಾನುಭವ ಸಾಹಿತ್ಯವೆಂದೆನಿಸುತ್ತದೆ. ಸಂಗೀತ ಮಾನಸಿಕ ಆನಂದಾನುಭೂತಿಯನ್ನೂ ಸಾಹಿತ್ಯ ಬೌದ್ಧಿಕ ಆನಂದಾನುಭೂತಿಯನ್ನು ತರುವಂತಹುದು. ಸಂಗೀತ ಧ್ವನಿಯ ಮೂಲಕ ಅಂದರೆ ನಾದದ ಮೂಲಕ ಮನಸ್ಸಿನ ಭಾವೋದ್ವೇಗಗಳನ್ನು ಪ್ರಕಟಪಡಿಸುವ ದಿವ್ಯಕಲೆಯಾದರೆ, ಸಾಹಿತ್ಯ ಮಾತಿನ ಮೂಲಕ ಅಂದರೆ ಭಾಷೆಯ ಮೂಲಕ ಬೌದ್ಧಿಕ ಚಾತುರ್ಯದಿಂದ ಇಂಗಿತಗಳನ್ನು ಹೊರಹೊಮ್ಮಿಸುವಂತಹುದು. ಕಾವ್ಯ, ನಾದಗಳ ಸಮ್ಮಿಲನ ಹಾಲಿನಲ್ಲಿ ಜೇನು ಬೆರೆತಂತೆ. ಕಾವ್ಯದಿಂದ ನಾದ ಅಂದರೆ ಸಂಗೀತದ ಸೊಗಸು, ಸೊಬಗು ಹೆಚ್ಚುವುದು ಎಷ್ಟು ನಿಜವೋ ನಾದದಿಂದ ಅಂದರೆ ಸಂಗೀತದಿಂದ ಕಾವ್ಯದ ಸೊಗಡು, ರಮ್ಯತೆ ಹೆಚ್ಚುವುದೂ ಅಷ್ಟೇ ನಿಜ. ಹಾಗಾಗಿ ಕಾವ್ಯ ಹಾಗೂ ಸಂಗೀತಕ್ಕೆ ಒಂದು ರೀತಿಯ ನಿಕಟ ಬಾಂಧವ್ಯವಿದೆ. ಒಂದಕ್ಕೊಂದು ಪರಿಪೋಷಕವಾಗಿದೆ. ಕಾವ್ಯಗಾಯನದ ಸಾರಾಂಶ: ಮಧುರ ಕವಿತೆಗಳನ್ನು ಅರ್ಥ, ಭಾವ, ರಸ ಪರಿಪೋಷಣೆಗೆ ತಕ್ಕಂತಹ ರಾಗದ ಉಡುಗೆತೊಡುಗೆಗಳಿಂದ ಅಲಂಕರಿಸಿದರೆ ಒಂದು ಸುಂದರ ಯಕ್ಷಲೋಕ ಸೃಷ್ಟಿಯಾಗುತ್ತದೆ. ಆಲೌಕಿಕಾನಂದದ ದರ್ಶನವಾಗುತ್ತದೆ.

**ಸಾಹಿತ್ಯ ಚ ಸಂಗೀತಂ ಚ ಸರಸ್ವತ್ಯಾಂ ಸ್ತನದ್ವಯಂ**
**ಏಕಮಾಪಾತ ಮಧುರಂ ಅನ್ಯದಾಲೋಚನಾಮೃತಂ**

ಎಂಬ ಮಾತು ಸಂಗೀತಕ್ಕೂ ಸಾಹಿತ್ಯಕ್ಕೂ ಇರುವ ಮಧುರ ಬಾಂಧವ್ಯವನ್ನು ನಿಚ್ಚಳವಾಗಿ ತಿಳಿಸುತ್ತದೆ. ಅಂದರೆ ಬುದ್ಧಿಗಮ್ಯವಾದ ಸಾಹಿತ್ಯ ಮನದಾಳಕ್ಕೆ ಇಳಿಯಲು ಸಂಗೀತ ಸಹಕಾರಿಯಾಗುತ್ತದೆ. ಪೂರಕವಾಗುತ್ತದೆ. ಅಂದರೆ ಕಾವ್ಯಗಾಯನದಲ್ಲಿ ಕಾವ್ಯಕ್ಕೇ ಮಹತ್ವವಿದ್ದರೂ ಸವಿಯಾದ ದನಿ ಹಾಗೂ ಭಾವಪೂರ್ಣ ಆಕರ್ಷಕ ಧಾಟಿಗಳಿಲ್ಲದಿದ್ದರೆ ಕಾವ್ಯಗಾಯನ ಕಳೆಕಟ್ಟಲು ಸಾಧ್ಯವೇ ಇಲ್ಲ.

ಕನ್ನಡ ಸಾಹಿತ್ಯ ಪರಂಪರೆಯ ಕುರಿತು ಹೇಳುವಾಗ ಹಳೆಗನ್ನಡ, ನಡುಗನ್ನಡ ಹಾಗೂ ಆಧುನಿಕ ಕನ್ನಡದ ವಿಭಿನ್ನತೆಗಳನ್ನು ಗಮನಿಸಬೇಕಾಗುತ್ತದೆ. ಅದರ ಜೊತೆಗೆ ಸಾಹಿತ್ಯದಲ್ಲಿ ಕೂಡ ಎರಡು ಬಗೆಯಿದೆ—ಒಂದು ಸಾಮಾನ್ಯ ಸಾಹಿತ್ಯ, ಮತ್ತೊಂದು ಲಲಿತಸಾಹಿತ್ಯ. ಸಂಗೀತಕ್ಕೆ ಅಳವಡಿಸುವಂಥ ಸಾಹಿತ್ಯ ಲಲಿತಸಾಹಿತ್ಯ. ಪಂಪ, ರನ್ನ, ಜನ್ನ, ಕುಮಾರವ್ಯಾಸ, ಲಕ್ಷ್ಮೀಶ, ಹರಿಹರ ಮುಂತಾದವರು ದ್ವಿಪದಿ, ತ್ರಿಪದಿ, ಚೌಪದಿ, ಷಟ್ಪದಿ ಇತ್ಯಾದಿಗಳಲ್ಲಿ ರಚಿಸಿದ ಮಹಾಕಾವ್ಯಗಳು ಕಾವ್ಯವಾಚನ ಪರಂಪರೆಗೆ ನಾಂದಿಹಾಡಿತು. ಇದು ಮುಖ್ಯವಾಗಿ ವಾಚನ ಕಲೆಯಾದ್ದರಿಂದ ಇಲ್ಲಿ ಕಾವ್ಯವನ್ನು ರಾಗವಾಗ ಓದುವ ಪರಿಪಾಠವಾಯ್ತು. ಇಲ್ಲಿ ತಾಳಬದ್ಧವಾಗಿ ವಾಚಿಸುವ ರೂಢಿ ಇಲ್ಲದಿದ್ದರೂ ಕಾವ್ಯದ ಧ್ವನಿಯನ್ನು ಮೆರೆಸುವಂತೆ ವಾಚಿಸಬೇಕಾಗುತ್ತದೆ. ಇಲ್ಲಿ ಕಂದಪದ್ಯ, ಸೀಸಪದ್ಯ, ರಗಳೆ, ವೃತ್ತ, ಸಾಂಗತ್ಯಗಳ ಛಂದಸ್ಸಿನ ಕಾವ್ಯಗಳೂ ಉಂಟು. ಹಳೆಗನ್ನಡ ನಡುಗನ್ನಡದ ಮಾರ್ಗ ಹಿಡಿದಾಗ ಶೈಲಿಯ ಭಿನ್ನತೆಯೂ ಉಂಟಾಯ್ತು. ನಂತರದ ಮಾರ್ಗ ಆಧುನಿಕ ಕಾವ್ಯ ಸಾಹಿತ್ಯ. ಇವೇ ಕವಿಮನದ ಮೂಸೆಯಿಂದ ಚಿಮ್ಮುವ ಭಾವಲಹರಿಗಳು. ಅಂದರೆ ಕವಿತೆ ಅಥವಾ ಕವನಗಳು. ಇವುಗಳನ್ನು ನಾವಿಂದು ಭಾವಗೀತೆಗಳೆಂದು ಕರೆಯುತ್ತೇವೆ. ಇಂಥ ಈ ಕಾವ್ಯದ ಬೆಳವಣಿಗೆಯಲ್ಲಿ ಅನೇಕ ಕವಿಗಳ ಕೊಡುಗೆ ಇದೆ. ಈ ಕಾವ್ಯದ ಪರಂಪರೆಯನ್ನು ಆ ಕವಿಪರಂಪರೆ ಅತ್ಯಂತ ಶ್ರೀಮಂತವಾಗಿಸಿದೆ. ಮಾನವ ಸಹಜವಾದ ವೈವಿಧ್ಯಮಯ ಭಾವನೆಗಳನ್ನು ಕಾವ್ಯದ ಮೂಲಕ ಹೊರಹೊಮ್ಮಿಸದ ಈ ಕವಿಗಳು ನಿಜಕ್ಕೂ ಸಾಹಿತ್ಯರತ್ನಗಳೇ. ಅಥವಾ ಕಾವ್ಯರತ್ನಗಳು ಎಂದರೆ ಹೆಚ್ಚು ಸರಿಯಾದೀತೇನೋ. ಇಂಥ ಈ ಭಾವಪೂರ್ಣವಾದ ಕವಿತೆಗಳನ್ನು ಹಾಡುವವರು ಭಾವಗೀತಾ ಗಾಯಕರು ಅಥವಾ ಸುಗಮ ಸಂಗೀತಗಾರರು. ಸುಗಮ ಸಂಗೀತಗಾರರಿಗೆ ಕವಿಗಳ ಕಾವ್ಯಗಳೇ ಆಧಾರಧನ. ಕವಿತೆ ಇಲ್ಲದೆ ಸುಗಮ ಸಂಗೀತಗಾರರಿಲ್ಲ. ಕವಿತೆ ಇಲ್ಲದೆ ಭಾವಗೀತೆಯ ಗಾಯಕ / ಗಾಯಕಿಯರೆಲ್ಲಿ?

ನಾನು ಸಾಮಾನ್ಯವಾಗಿ ಎಲ್ಲ ಕವಿಗಳ ಕವನಗಳಿಗೂ ರಾಗ ಸಂಯೋಜನೆ ಮಾಡಿದ್ದೇನೆ. ಹಾಡಿದ್ದೇನೆ. ಆದರೆ ಬೇಂದ್ರೆ, ಕುವೆಂಪು, ಕೆಎಸ್‌ನ ಹಾಗೂ ಜಿಎಸ್‌ಎಸ್ ರವರ ಕವನಗಳನ್ನು ಬಹಳಷ್ಟು ಹಾಡಿದ್ದೇನೆ. ರಾಗ ಸಂಯೋಜಿಸಿದ್ದೇನೆ. ನನಗೆ

ಬೇಂದ್ರೆಯವರ ಜಾನಪದ ಸೊಗಸು, ಕೆಎಸ್‌ನರವರ ಸಾಂಸಾರಿಕ ಚಿತ್ರಣ, ಅಡಿಗರ ದಿಟ್ಟತನದ ದನಿ, ಕುವೆಂಪುರವರ ಸೌಂದರ್ಯಾರಾಧನೆ, ಜಿಎಸ್‌ಎಸ್‌ರವರ ಮಾಧುರ್ಯದ ಮೋಡಿ ಜೀವನಪ್ರೇಮ ನನಗೆ ತುಂಬ ಮೆಚ್ಚುಗೆ ಹಾಗೂ ಇಷ್ಟ.

ಜಿಎಸ್‌ಎಸ್‌ರವರ ಕವಿತೆಗಳು ಹಾಡಲು ತುಂಬ ಚೆಂದ. "ನೂರುಮರ ನೂರುಸ್ವರ, ಒಂದೊಂದು ಅತಿಮಧುರ" ಎಂಬ ಬೇಂದ್ರೆಯವರ ಕವಿವಾಣಿಯಂತೆ ಜಿಎಸ್‌ಎಸ್‌ರವರ ಕವನದ ಭಾವ ಯಾವುದೇ ಇರಲಿ, ಒಂದೊಂದೂ ಕಬ್ಬಿನ ಜಲ್ಲೆಯಂತೆ ಜಗಿದಷ್ಟೂ ಮಧುರ. ಜಿಎಸ್‌ಎಸ್‌ರವರ ಕವನಗಳು ಭಾವೋನ್ನತ್ಯದಲ್ಲಿ, ರಸಾನುಭೂತಿಯಲ್ಲಿ, ವಿಚಾರವೈವಿಧ್ಯತೆಯಲ್ಲಿ ಉತ್ಕೃಷ್ಟ ಕವನಗಳು. ಹಾಡಲು ಚೆಲುವಾದ ಲಲಿತ ಪದಬಂಧಗಳು, ಲಾಲಿತ್ಯ ಇವರ ಕಾವ್ಯ ವಿಶೇಷ.

"ವಿಶಾಲ ಪಥದಲಿ ಜೀವನ ರಥದಲಿ
ನಿನ್ನಯ ಕರುಣೆಯ ಸಾರಥ್ಯದಲಿ...."

"ಸಂಜೆ ಬಾನಿನಂಚಿನಲ್ಲಿ
ಬಿದ್ದ ಬಿದಿಗೆ ಚಂದಿರ
ಶಚೀತೀರ್ಥದಾಳದಲ್ಲಿ
ಶಕುಂತಲೆಯ ಉಂಗುರ..."

"ಎಲ್ಲೋ ಹುಡುಕಿದೆ ಇಲ್ಲದ ದೇವರ
ಕಲ್ಲುಮಣ್ಣುಗಳ ಗುಡಿಯೊಳಗೆ..."

"ಯಾವುದೀ ಪ್ರವಾಹವು
ಮನೆಮನಗಳ ಕೊಚ್ಚಿಕೊರೆದು
ಭುಸುಗುಡುತ್ತ ಧಾವಿಸುತಿದೆ..."

"ಮೂಡುವನದೋ ಈ ಹೊಸವರುಷದ ರವಿ
ಹೊಂಗಿರಣಗ ನವರಂಗಿನಲಿ..."

"ಯಾರು ಈ ಗಾರುಡಿಗಾ
ಕದಂಬ ವನದಲಿ ಕುಳಿತು..."

ಮೇಲಿನ ಯಾವ ಸಾಲುಗಳನ್ನು ನೋಡಿದರೂ ಅಲ್ಲಿ ಕಾಣುವುದು ಸರಳತೆ ಹಾಗೂ ವಸ್ತುವೈವಿಧ್ಯತೆ. ಹಾಗಾಗಿ ನೇರ ನಮ್ಮ ಹೃದಯ ತಟ್ಟುವ ಕವಿತೆಗಳಾಗಿ ರಾಗದ ಕವಚಕ್ಕೆ ಸುಂದರ ವಸ್ತುಗಳಾಗುತ್ತವೆ. ಈ ಕವನಗಳನ್ನು ರಾಗಸಂಯೋಜಿಸಿ ಹಾಡಿದಾಗ ಕವನ ಬರಿಯ ಲಲಿತಪದಬಂಧಗಳ ಮೋಡಿಯಾಗುಳಿಯದೆ ಸುಂದರ ಚಿತ್ರಗಳಾಗಿ ನಮ್ಮ

ಕಣ್ಮುಂದೆ ಸುಳಿಯುತ್ತವೆ. ಹಾಗಾಗಿ ನನಗೆ ಇವರ ಕವನಗಳೊಡನೆ ಅನುಬಂಧ ಹೆಚ್ಚು. ಸರಳತೆಯೇ ಸೌಂದರ್ಯದ ಗುಟ್ಟೆನ್ನುವುದರಲ್ಲಿ ಎರಡು ಮಾತಿಲ್ಲ.

ನಾನು ಆಕಾಶವಾಣಿಯಲ್ಲಿ ಹಾಡಲು ಪ್ರಾರಂಭಮಾಡಿ ಅರ್ಧ ಶತಮಾನ ಉರುಳಿದೆ. ಲೆಕ್ಕವಿಲ್ಲದಷ್ಟು ಕವನಗಳನ್ನು ಹಾಡಿಸಿ ಪ್ರಸಾರ ಮಾಡಿದೆ ಆಕಾಶವಾಣಿ. ಅಂಥ ಪ್ರಸರಣ ದಲ್ಲಿ ಹಲಕೆಲವು ಮಧುರ ನೆನಪುಗಳೂ ಉಂಟು. ಆ ನೆನಪಿನ ಚಿಪ್ಪಿನೊಂದೆಡೆದು ಬಂದ ಒಂದು ಆಣಿಮುತ್ತು ಜಿಎಸ್‌ಎಸ್‌ರವರ

**ಉಡುಗಣವೇಷ್ಟಿತ, ಚಂದ್ರಸುಶೋಭಿತ**
**ದಿವ್ಯಾಂಬರ ಸಂಚಾರಿ**
**ಕಣ್ಣೀರಿನಲಿ, ಮಣ್ಣಧೂಳಿನಲಿ**
**ಹೊರಳುತ್ತಿರುವವರ ಸಹಚಾರಿ....**

ಅರವತ್ತರ ದಶಕದಲ್ಲಿ ಹಾಡಿದ ಈ ಗೀತೆ ಈ ಕ್ಷಣವೂ ಜೀವಂತವಾದ ಒಂದು ಕವಿತೆ ಹಾಗೂ ಭಾವಗೀತೆಯಾಗುಳಿದಿದೆ ಜನಮನದ ಹೃದಯದಂಗಳದಲ್ಲಿ. ಈ ಕ್ಷಣಕ್ಕೂ ನಾನೆಲ್ಲಿ ಹೋದರೂ "ಲೀಲಾವತಿ, ಉಡುಗಣವೇಷ್ಟಿತ ಹಾಡಿ" ಎಂದೇ ಕೇಳುವುದು. ಲೀಲಾವತಿಯೆಂದರೆ ಉಡುಗಣವೇಷ್ಟಿತ, ಉಡುಗಣವೇಷ್ಟಿತ ಎಂದರೆ ಲೀಲಾವತಿ ಎಂಬಷ್ಟು ಆ ಕವನ ನನ್ನ ಉಸಿರಲ್ಲಿ ಉಸಿರಾಗಿ ಬೆರೆತುಬಿಟ್ಟಿದೆ. ಪ್ರಾಯಶಃ ಹಾಗಾಗಿ ಜಿಎಸ್‌ಎಸ್‌ರವರ ಈ ಕವನ ನನ್ನ ಕಂಠದಲ್ಲಿ ಚರಿತ್ರೆಯ ಪುಟಗಳಲ್ಲಿ ಸೇರಿಬಿಟ್ಟಿದೆ ಎನ್ನುವುದು ನನಗೆ ಗಾಯಕಿಯಾಗಿ ಹೆಮ್ಮೆಯ ಸಂಗತಿ.

ಇಲ್ಲಿ ಜಿಎಸ್‌ಎಸ್‌ರವರ ಇನ್ನೊಂದು ಕವನ ನೆನಪಾಗುತ್ತಿದೆ.

**ಪ್ರೀತಿ ಇಲ್ಲದ ಮೇಲೆ-**
**ಹೂವು ಅರಳೀತು ಹೇಗೆ?**
**ಮೋಡ ಕಟ್ಟೀತು ಹೇಗೆ?**
**ಹನಿಯೊಡೆದು ಕೆಳಗಿಳಿದು**
**ನೆಲಕ್ಕೆ ಹಸಿರು ಮೂಡೀತು ಹೇಗೆ?...**

ಈ ವ್ಯಾಖ್ಯಾನವನ್ನೇ ಅರ್ಥೈಸುತ್ತ ಈ ಮಾತನ್ನು ಹೇಳಬಹುದೆಂದೆನಿಸುತ್ತದೆ—ನವೋದಯ ಕವಿಗಳಿಲ್ಲದ ಮೇಲೆ, ಸುಗಮಸಂಗೀತ ಹುಟ್ಟೀತು ಹೇಗೆ? ಆನಂದ ಉಕ್ಕೀತು ಹೇಗೆ? ನೆಮ್ಮದಿಯು ದೊರಕೀತು ಹೇಗೆ? ಇದು ಎಷ್ಟು ಸತ್ಯವೋ ಹಾಗೆಯೇ ಗಾಯಕರು ಹಾಡದ ಮೇಲೆ, ಕವನಗಳು ತುಟಿಗಳಲಿ ನಲಿದೀತು ಹೇಗೆ? ಆನಂದ ಉಕ್ಕೀತು ಹೇಗೆ? ನೆಮ್ಮದಿಯು ದೊರಕೀತು ಹೇಗೆ? ಎಂಬ ಮಾತೂ ಅಷ್ಟೇ ಸತ್ಯ. ಕಾರಣ ಅವು ಪರಸ್ಪರ ಪೂರಕ. ಕಾವ್ಯ ಹಾಗೂ ಗಾಯನ ಕೂಡಿಯೇ ಕಾವ್ಯಗಾಯನವಾಗುವುದು.

ಇನ್ನು ಜಿಎಸ್‌ಎಸ್‌ರವರ ಬಗ್ಗೆಯೇ ಹೇಳುವಾಗ ನವೋದಯ ಕಾವ್ಯಕ್ಷೇತ್ರದ ಒಂದು ಉಜ್ವಲ ತಾರೆ ಇವರು ಎನ್ನಬಹುದು.

ಇವರ ಕವನಗಳು ಸುಗಮ ಸಂಗೀತಗಾರಳಾದ ನನಗೆ ಅತ್ಯಂತ ಪ್ರಿಯ. ಇವರ ಕವನಗಳನ್ನು ಹಾಡದ ಸುಗಮಸಂಗೀತಗಾರರಿಲ್ಲ. ರಾಗ ಸಂಯೋಜನೆ ಮಾಡದ ನಿರ್ದೇಶಕರಿಲ್ಲ. ಯಾರು ಹಾಡಲಿ, ಹಾಡದಿರಲಿ ಅದರ ಗೊಡವೆ ಈ ಕವಿಗಿಲ್ಲ. ಅವರ ಕೈಂಕರ್ಯ ಎದೆತುಂಬಿ, ಮನತುಂಬಿ, ತನುತುಂಬಿ ಹಾಡುವದಷ್ಟೆ.

**ಎದೆತುಂಬ ಹಾಡಿದೆನು**
**ಅಂದು ನಾನು....**
**....................**
**ಎಲ್ಲ ಕೇಳಲಿ ಎಂದು**
**ನಾನು ಹಾಡುವುದಿಲ್ಲ**
**ಹಾಡುವುದೆ ಅನಿವಾರ್ಯ**
**ಕರ್ಮ ನನಗೆ....**

ಜಿಎಸ್‌ಎಸ್ ಕವನಗಳ ಕರ್ಮಯೋಗಿ. ನನ್ನ ಗೌರವಾನ್ವಿತ ಗುರು ಜಿಎಸ್‌ಎಸ್ ರವರಿಗೆ ಕೋಟಿ ನಮನ.



# ವಿನಯದ ಧ್ವನಿ

ಶಿವಮೊಗ್ಗ ಸುಬ್ಬಣ್ಣ

ನಾಡಿನ ಅತ್ಯಂತ ಪ್ರಮುಖ ಕವಿಗಳಲ್ಲೊಬ್ಬರಾದ ಡಾ. ಜಿ.ಎಸ್. ಶಿವರುದ್ರಪ್ಪನವರು, ಒಬ್ಬ ಕವಿಯಾಗಿ, ವ್ಯಕ್ತಿಯಾಗಿ ನನಗೆ ಬಹಳ ಪ್ರೀತಿ ಗೌರವಗಳಿಗೆ ಪಾತ್ರರಾದವರು. ಕಾವ್ಯದಲ್ಲಿ, ಅತ್ಯಂತ ಸಂಕೀರ್ಣವಾದ ಸಂಗತಿಗಳು ನನಗೆ ಅರ್ಥವಾಗುವುದು ಕಷ್ಟ. ಪ್ರಕೃತಿ ಸೌಂದರ್ಯವನ್ನು ವರ್ಣಿಸುವ, ಜೀವನದಲ್ಲಿ ಅಧ್ಯಾತ್ಮದ ದೃಷ್ಟಿಯನ್ನು ಸೂಚಿಸುವ, ಕೀರ್ತಿಯ ಶಿಖರದಲ್ಲಿದ್ದಾಗಲೂ, ವಿನಯವನ್ನು ಧ್ವನಿಸುವ ಗೀತೆಗಳು ನನಗೆ ಪ್ರಿಯವಾಗುತ್ತವೆ. ಜಿಎಸ್‌ಎಸ್‌ರವರ ಕಾವ್ಯದಲ್ಲಿ ಪ್ರಕೃತಿಪ್ರೇಮ, ಜೀವನಪ್ರೀತಿ, ಅಧ್ಯಾತ್ಮ ಮತ್ತು ವ್ಯಕ್ತಿತ್ವದ ಬೆಳವಣಿಗೆಗೆ ಅವಶ್ಯಕವಾದ 'ವಿನಯ' ಸ್ಥಾಯೀಭಾವವಾಗಿದೆ ಎಂದು ನನ್ನ ತಿಳುವಳಿಕೆ. ಈ ಲೋಕವ್ಯವಹಾರದಲ್ಲಿ ಒಬ್ಬ ವ್ಯಕ್ತಿ ತನ್ನನ್ನು ತೊಡಗಿಸಿಕೊಂಡರೆ, ಲೋಕವೇ ವ್ಯಕ್ತಿಯ ಅಹಂಕಾರವನ್ನು ಮಣಿಸಿ ವಿನಯವಂತನನ್ನಾಗಿ ಮಾಡುತ್ತದೆ ಎಂದು ಧ್ವನಿಸುವ ಈ ಸಾಲುಗಳನ್ನು ಉದಾಹರಿಸುತ್ತೇನೆ.

**ಕ್ಷಣಕ್ಷಣಕೂ ನನ್ನ ಹಮ್ಮನರೆಯುವ**
**ಲೋಕತಂತ್ರಗಳೆ ನಮೋ ನಮೋ**
**ನನ್ನಲ್ಪತೆಯನು ತೋರುತ ಮರೆಯುವ**
**ಬೆಳೆವ ತೇಜಗಳೇ ನಮೋ ನಮೋ**
**ಬೆಳಕಿನ ಬೆಲೆಯನ್ನೆತ್ತಿ ತೋರುವೊಲು**
**ಕವಿವ ಕತ್ತಲಗೆ ನಮೋ ನಮೋ**
**ಶೋಕಪಾಪಭಯ ತಲ್ಲಣದಲ್ಲಿಯು**
**ಗೆಲ್ಲುವ ಸಹನೆಗೆ ನಮೋ ನಮೋ**

ಜೀವನ ಆನಂದಮಯವಾಗಿರಬೇಕಾದರೆ ವ್ಯಕ್ತಿ ವ್ಯಕ್ತಿಗಳ ಸಂಬಂಧ ಚೆನ್ನಾಗಿರಬೇಕಾಗುತ್ತದೆ. ಗಂಡಹೆಂಡಿರ ಸಂಬಂಧ, ಅಣ್ಣ ತಮ್ಮ ಅಕ್ಕ ತಂಗಿಯರ ಸಂಬಂಧ ಈ ಎಲ್ಲ ಸಂಬಂಧಕ್ಕೂ ಅಡ್ಡಿಯಾಗುವುದು, ಎಲ್ಲ ವ್ಯಕ್ತಿಗಳ ಸ್ವಭಾವದ ಅಂಗವಾದ "ಅಹಂ" ಅಥವಾ "ಈಗೋ" (ego).

ಹತ್ತಿರವಿದ್ದರೂ ದೂರ ನಿಲ್ಲುವೆವು
ನಮ್ಮ ಅಹಮಿನ್ನ ಕೋಟೆಯಲಿ
ಎಷ್ಟುಕಷ್ಟವೋ ಹೊಂದಿಕೆ ಎಂಬುದು
ನಾಲ್ಕುದಿನದ ಈ ಬದುಕಿನಲಿ

ಈ ಮೇಲಿನ ಸಾಲುಗಳು ಮನುಷ್ಯ ಸಂಬಂಧಗಳಿಗೆ ಮಾರಕವಾದ 'ಅಹಂ' ಬಗ್ಗೆ ಧ್ವನಿಸುತ್ತದೆ. ನಿಜವಾದ ಕವಿಯು ದಂತಗೋಪುರದಲ್ಲಿರದೆ ತನ್ನ ಸುತ್ತಲಿನ ಜನಜೀವನದ ಬಗ್ಗೆ ತೆರೆದುಕೊಂಡಿರಬೇಕಾಗುತ್ತದೆ. ಸಮಾಜದಲ್ಲಿ ಆವರಿಸಿರುವ ವಂಚನೆ, ಮೋಸ, ಕನಸುಗಳು ಸೀಯುತ್ತಿರುವ ಚಿತ್ರವನ್ನು ಜಿ.ಎಸ್.ಎಸ್ ಹೀಗೆ ನೀಡುತ್ತಾರೆ—

ಯಾವ ಹಾಡ ಹಾಡಲಿ?
ಯಾವ ಹಾಡಿನಿಂದ ನಿಮಗೆ ನೆಮ್ಮದಿಯನು ನೀಡಲಿ?
ಸುತ್ತಮುತ್ತ ಮನೆಮಠಗಳು
ಹೊತ್ತಿಕೊಂಡು ಉರಿಯುವಲ್ಲಿ
ಸೋತು ಮೂಕವಾದ ಬದುಕು
ನಿಟ್ಟುಸಿರೊಳು ತೇಲುವಲ್ಲಿ

ಬರಿ ಮಾತಿನ ಜಾಲದಲ್ಲಿ
ಶೋಷಣೆಗಳ ಶೂಲದಲ್ಲಿ
ವಂಚನೆಗಳ ಸಂಚಿನಲ್ಲಿ
ಹಸಿದ ಹೊಟ್ಟೆ ನರಳುವಲ್ಲಿ

ಬೆಳಕಿಲ್ಲದ ದಾರಿಯಲ್ಲಿ
ಪಾಳುಗುಡಿಯ ಸಾಲಿನಲ್ಲಿ
ಬರುಗಾಳಿಯ ಬೀಡಿನಲ್ಲಿ
ಕುರುಡು ಪಯಣ ಸಾಗುವಲ್ಲಿ?

ಸೂಕ್ಷ್ಮಮನಸ್ಸಿನ ಎಲ್ಲ ಗಾಯಕರ ಪ್ರಶ್ನೆಯೂ ಇದೇ ಆಗಿದೆಯೇನೋ!

■

# ಬತ್ತದ ನೆನಪುಗಳು

**ಡಾ|| ಎಸ್. ವಿದ್ಯಾಶಂಕರ**

ನಾನು ಡಾ. ಜಿ.ಎಸ್.ಶಿವರುದ್ರಪ್ಪನವರನ್ನು ಮೊದಲಿಗೆ ನೋಡಿದ್ದು 1962ರಲ್ಲಿ ಮೈಸೂರಿನಲ್ಲಿ ನಾನು ಮಹಾರಾಜಾ ಕಾಲೇಜಿನಲ್ಲಿ ಬಿ.ಎ. ಪದವಿ ತರಗತಿಯ ವಿದ್ಯಾರ್ಥಿಯಾಗಿದ್ದಾಗ. ನಾನು ಮಹಾರಾಜಾ ಕಾಲೇಜನ್ನು ಪ್ರವೇಶಿಸುವ ವೇಳೆಗೆ ಸ್ನಾತಕೋತ್ತರ ತರಗತಿಗಳು ಮಾನಸಗಂಗೋತ್ರಿಗೆ ಆದಾಗತಾನೇ ಸ್ಥಳಾಂತರಗೊಂಡಿದ್ದವು. ಹೀಗಾಗಿ ನನಗೆ ಡಾ. ಜಿ.ಎಸ್. ಶಿವರುದ್ರಪ್ಪನವರ ಶಿಷ್ಯನಾಗುವ ಭಾಗ್ಯ ದೊರೆಯಲಿಲ್ಲ. ಅವರನ್ನು ದೂರದಲ್ಲಿ ಸಭೆ ಸಮಾರಂಭದಲ್ಲಿ ನೋಡಿದ್ದೆ; ಅವರು ಷಾಪಸಂದ್‌ನಲ್ಲಿ ಮನೆಗೆ ಅಗತ್ಯವಿದ್ದ ಸಾಮಾನುಗಳನ್ನು ತೆಗೆದುಕೊಂಡು ಹೋಗುತ್ತಿದ್ದುದನ್ನು ನೋಡಿದ್ದೆ. ಶುದ್ಧ ಬಿಳಿಪು ಜುಬ್ಬ, ಮಲ್‌ಮಲ್ ಕಚ್ಚೆ, ಕ್ಲೋಸ್ ಕಾಲರ್ ಕೋಟು, ತೀರಾ ಎತ್ತರವೂ ಅಲ್ಲದ, ಕುಳ್ಳೂ ಅಲ್ಲದ ನಿಲುವು, ಮಧ್ಯಕ್ಕೆ ಬಾಚಿದ ಕೂದಲು, ಏನನ್ನೋ ಹುಡುಕುತ್ತಿರುವ ಕಣ್ಣುಗಳು, ಶಾಂತ ಮುಖಮುದ್ರೆಗೆ ಒಪ್ಪುವ ಚಿನ್ನದ ಫ್ರೇಮಿನ ಕನ್ನಡಕ, ಎಣ್ಣೆಗೆಂಪು ಬಣ್ಣ, ಯಾರೊಂದಿಗೂ ಸುಲಭವಾಗಿ ಮಾತಿಗೆ ಸಿಕ್ಕದ ಗಾಂಭೀರ್ಯ, ಕಡ್ಡಿ ಮುರಿದಂತೆ ಎಷ್ಟು ಬೇಕೋ ಅಷ್ಟೇ ಮಾತು, ತುಟಿಯಂಚಿನಲ್ಲಿ ಎಂದೂ ಕಾಣದ ಮಂದಹಾಸ, ಯಾರಿಗೂ ಬಾಗದ ವ್ಯಕ್ತಿತ್ವವೆನ್ನುವಂತೆ ಬಾಗದೆ ನಡೆಯುವ ನಡೆ, ಆಗಾಗ ಕಚ್ಚೆ ಸರಿಪಡಿಸಿಕೊಳ್ಳುತ್ತ, ಕಚ್ಚೆಯ ಪದರುಗಳ ಮಡಿಕೆಯನ್ನು ತಿದ್ದಿ ತೀಡಿಕೊಳ್ಳುವಲ್ಲಿ ಶುಭ್ರತೆಯ ಸಾಕಾರ, ಕಾಲಿಗೆ ಬೆಲ್ಟ್ ಚಪ್ಪಲಿ. ಆಗ ಮೈ ಕೈ ತುಂಬಿಕೊಂಡು ಸೇಬು ಕೆನ್ನೆಗಳು ಮಿಂಚು ಮಿಂಚುತ್ತಿದ್ದವು. ಸದಾ ಶುಭ್ರವಾಗಿರುತ್ತಿದ್ದ ಕನ್ನಡಕದ ಫ್ರೇಮಿನೊಳಗೆ ಎರಡು ಹೊಳೆವ ಕಣ್ಣುಗಳು. ಇದು ನಾನು 62ರಲ್ಲಿ ಕಂಡ ಕವಿ-ವಿಮರ್ಶಕ ಡಾ. ಜಿ.ಎಸ್. ಶಿವರುದ್ರಪ್ಪನವರ ಚಿತ್ರ.

ಅವರು ಉಸ್ಮಾನಿಯಾ ವಿಶ್ವವಿದ್ಯಾಲಯಕ್ಕೆ ಗೌರವ ಪ್ರಾಧ್ಯಾಪಕರಾಗಿ ಹೊರಟಾಗ ನಾನು ಮತ್ತು ನನ್ನ ಗೆಳೆಯರು—ಮುಖ್ಯವಾಗಿ ಶ್ರೀ ಬಿ. ವೀರಭದ್ರಯ್ಯ—ಡಾ. ಜಿ.ಎಸ್. ಶಿವರುದ್ರಪ್ಪನವರನ್ನು ನಮ್ಮ ಬೆಟ್ಟದಪುರದ ಹಾಸ್ಟಲ್‌ಗೆ ಒಂದು ಸಂಜೆ ಕರೆದುಕೊಂಡು ಬಂದು ಸನ್ಮಾನಿಸಿ ಒಂದು ಒಳ್ಳೆಯ ಊಟ ಹಾಕಿ ಬೀಳ್ಕೊಟ್ಟೆವು. ಆತ್ಮೀಯತೆಗೆ ಬಿಚ್ಚಿಕೊಳ್ಳುವ ಅವರ ಮೃದು ಮನಸ್ಸಿನ ಪರಿಚಯ ಆಗ ನನಗಾಯಿತು. "ಸಾರ್, ನೀವು ಹೈದರಾಬಾದಿಗೆ ಹೋಗಬಾರದಿತ್ತು; ನಿಮ್ಮ ಭಡ್ತಿಯನ್ನು ತಪ್ಪಿಸಿ ಬೇರೊಬ್ಬರಿಗೆ ಕೊಡುವ

ಹುನ್ನಾರವಿದೆಯೆಂದು ಕೇಳಿರುವೆವು" ಎಂಬ ಅಧಿಕಪ್ರಸಂಗಿಯ ಮಾತನ್ನು ನಾನು, ಬಿ. ವೀರಭದ್ರಯ್ಯ ಆಡಿದೆವು. ಶಿವರುದ್ರಪ್ಪನವರ ಮುಖಭಾವದಲ್ಲಿ ಅಪ್ರಸನ್ನತೆ ಕಾಣಿಸಿತು. "ನೋಡಿ, ನೀವು ವಿದ್ಯಾರ್ಥಿಗಳು, ನಿಮಗೆ ಇವೆಲ್ಲ ಅರ್ಥವಾಗುವುದಿಲ್ಲ. ನಿಮ್ಮ ಓದಿನ ಕಡೆ ಗಮನಕೊಡಿ" ಎಂದು ನುಡಿದು ಮೌನವಾಗಿಬಿಟ್ಟರು. ಬಹುಶಃ ಆ ಮಾತು ಕಠಿಣವಾಯಿತು ಎಂದು ಅವರಿಗೆ ಅನ್ನಿಸಿತೋ ಏನೋ. ಮರುಕ್ಷಣದಲ್ಲೇ ಆತ್ಮೀಯವಾಗಿ ನಗುತ್ತಾ "ನಮಗೆ ಅನುಭವ ಬರಬೇಕಾದರೆ ನಾಲ್ಕಾರು ಕಡೆ ಸುತ್ತಾಡಿ ಬರಬೇಕು. ಅಲ್ಲಿ ಕನ್ನಡ ವಿಭಾಗ ಬೆಳೆಯಬೇಕು. ತೆಲುಗು ಪರಿಸರದಲ್ಲಿ ಕನ್ನಡದ ಕಂಪನ್ನು ಬೀರಬೇಕು. ನಾನೇನೂ ಶಾಶ್ವತವಾಗಿ ಅಲ್ಲಿರುವವನಲ್ಲ, ಮತ್ತೆ ಬಂದೇ ಬರುತ್ತೇನೆ. ಇರಲಿ ಬಿಡಿ, ನೀವು ಚಿಂತಿಸಬೇಡಿ." ತಬ್ಬಿಬ್ಬಾಗಿದ್ದ ನಮಗೆ ಆಗ ಸಮಾಧಾನವಾಯಿತು.

ಡಾ. ಜಿ.ಎಸ್. ಶಿವರುದ್ರಪ್ಪನವರ ವ್ಯಕ್ತಿತ್ವದ ಮುಖ್ಯಗುಣ: ಸರಳತೆ, ಸಜ್ಜನಿಕೆ, ಸಾಹಿತ್ಯದ ಬಗೆಗಿನ ನೈಜವಾದ ಕಳಕಳಿ. ಅವರು ಉಸ್ಮಾನಿಯಾ ವಿಶ್ವವಿದ್ಯಾಲಯಕ್ಕೆ ಹೋದರು. ಅಲ್ಲಿ ಜೊತೆಯಾದ ವಿಭಾಗದ ಸಹೋದ್ಯೋಗಿಗಳು ಡಾ. ರಾಮಚಂದ್ರರಾವ್ ಹಾಗೂ ಡಾ. ಟಿ.ವಿ. ವೆಂಕಟಾಚಲಶಾಸ್ತ್ರಿಯವರು ಸಾಹಿತ್ಯಪ್ರಿಯರು. ಸಾಹಿತ್ಯಕ ವಾತಾವರಣ ಮೂಡಿಸಲು ಇದಕ್ಕಿಂತ ಬೇಕೇ, ಶಿವರುದ್ರಪ್ಪನವರಿಗೆ? ರಜೆಯ ದಿನಗಳಲ್ಲಿ ಪಂಪಭಾರತದ ಪ್ರತಿಯೊಂದು ಪದ್ಯಗಳನ್ನು ಓದುವ, ಅದರಲ್ಲಿನ ಕ್ಲಿಷ್ಟ ಸಮಸ್ಯೆಗಳ ಬಗೆಗೆ ಚರ್ಚಿಸುವ ಒಂದು ಸಹೃದಯ ಗೋಷ್ಠಿ ಹುಟ್ಟಿಕೊಂಡಿತು. ಉಸ್ಮಾನಿಯಾ ವಿಶ್ವವಿದ್ಯಾಲಯದ ಕನ್ನಡ ವಿಭಾಗ ಹೊರನಾಡಿನ ಒಂದು ಪುಟ್ಟ ವಿಭಾಗ (Minor department). ಸ್ನಾತಕೋತ್ತರ ವಿದ್ಯಾರ್ಥಿಗಳ ಸಂಖ್ಯೆಯೂ ಕಡಿಮೆ. ಇರುವ ಸೀಮಿತ ಅವಕಾಶಗಳನ್ನೇ ಬಳಸಿಕೊಂಡು ಅಲ್ಲಿ ಜಿ.ಎಸ್.ಎಸ್ ಕೆಲಸ ಮಾಡಿದರು.

ನಾನು 1966ರ ಜುಲೈ ತಿಂಗಳಲ್ಲಿ ಬೆಂಗಳೂರಿನ ಬಸವನಗುಡಿಯ ನ್ಯಾಷನಲ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕನಾಗಿ ನೇಮಕಗೊಂಡೆ. ಆಗ ನ್ಯಾಷನಲ್ ಕಾಲೇಜು ಬೆಂಗಳೂರು ವಿಶ್ವವಿದ್ಯಾಲಯದ ಪ್ರತಿಷ್ಠಿತ ಪ್ರೀಯೂನಿವರ್ಸಿಟಿ ಹಾಗೂ ಪದವಿ ಕಾಲೇಜು. ಅಲ್ಲಿ ವಿದ್ಯಾರ್ಥಿಗಳಿಗೆ ಪ್ರವೇಶ ಪಡೆಯುವುದು ಒಂದು ಹೆಮ್ಮೆಯ ವಿಷಯವಾಗಿದ್ದರೆ, ಬೋಧಕನಾಗಿ ಕೆಲಸ ಮಾಡುವುದು ಸಾಮಾಜಿಕ ಪ್ರತಿಷ್ಠೆಯ ವಿಷಯವಾಗಿದ್ದಿತು. ನಾನು ಅದೃಷ್ಟವಂತ! ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗಕ್ಕೆ ಮುಖ್ಯಸ್ಥರಾಗಿ ಡಾ. ರಂ.ಶ್ರೀ. ಮುಗಳಿ ನೇಮಕಗೊಂಡರು. ಆಗ ಕನ್ನಡ ವಿಭಾಗವಿದ್ದುದು ಒಂದು ಪುಟ್ಟ ಕೊಠಡಿಯಲ್ಲಿ (ಸೆಂಟ್ರಲ್ ಕಾಲೇಜಿನ ಪ್ರಿನ್ಸಿಪಾಲರ ಆಫೀಸ್ ಕಟ್ಟಡದಲ್ಲಿ). ಕಟ್ಟಡದ ಮುಂಭಾಗದಲ್ಲಿ ಇಂಗ್ಲಿಷ್ ವಿಭಾಗವಿದ್ದಿತು. ಪ್ರೊ. ಭರತರಾಜಸಿಂಗ್ ಅದರ ಮುಖ್ಯಸ್ಥರು. ಎಲ್.ಎಸ್. ಶೇಷಗಿರಿರಾವ್, ಪಿ. ಲಂಕೇಶ್, ವಿಮಲಾ ರಾಮರಾವ್, ಡಾ. ರಾಮಸ್ವಾಮಿ, ಬಿ. ಚಂದ್ರಶೇಖರ್ ಮೊದಲಾದವರಿದ್ದರು. ಗ್ರೀಕ್ ಟ್ರ್ಯಾಜಿಡಿಗಳ ಬಗೆಗೆ ಎಲ್. ಎಸ್. ಶೇಷಗಿರಿರಾಯರ ಉಪನ್ಯಾಸಗಳು, ಡಾ. ರಾಮಸ್ವಾಮಿಯವರ ಶೇಕ್ಸ್‌ಪಿಯರ್‌ನ ನಾಟಕಗಳ

ಬಗೆಗಿನ ಉಪನ್ಯಾಸಗಳು, ಬಿ.ಚಂದ್ರಶೇಖರ್‌ರವರ ರಂಗಚಟುವಟಿಕೆಗಳು, ಪಿ. ಲಂಕೇಶ್‌ರವರು ಹೊಸ ಅಲೆಯ ಕಥೆ, ಕಾದಂಬರಿ, ನಾಟಕಗಳು ನನ್ನನ್ನು ಹೊಸ ಜಗತ್ತಿಗೆ ಪರಿಚಯಿಸುತ್ತಿದ್ದವು. ಸಂಸ್ಕೃತ ವಿಭಾಗದ ಅಯ್ಯಂಗಾರ್‌ರವರು ಹಳತು ಹೊಸತರ ಮಧ್ಯೆ ಸೇತುವೆಯಾಗಿ ನನ್ನನ್ನು ಆಕರ್ಷಿಸುತ್ತಿದ್ದರು. ಅವರು ಕಾಳಿದಾಸ, ಭಾಸ ಮೊದಲಾದವರ ಕೃತಿಗಳನ್ನು ಪಠ್ಯವಿಲ್ಲದೆ ನೆನಪಿನ ಶಕ್ತಿಯಿಂದ ಹೇಳುತ್ತಿದ್ದುದು ನನಗೆ ಅದ್ಭುತವಾಗಿ ಕಂಡುಬಂದರೆ, ಅವರ ಅವ್ಯಾಜಸ್ನೇಹ, ವಯಸ್ಸಿನಲ್ಲಿ ಹಿರಿಯರಾದರೂ ನನ್ನಂತಹ ಕಿರಿಯನೊಂದಿಗೆ ನಡೆದುಕೊಳ್ಳುತ್ತಿದ್ದ ರೀತಿ, ವಿನೋದಪ್ರಿಯತೆ, ಕ್ಯಾಂಟೀನಿಗೆ ಕರೆದುಕೊಂಡು ಹೋಗಿ ತಾವೇ ಹಣಕೊಟ್ಟು ಮಸಾಲೆದೋಸೆ ಸಮಾರಾಧನೆ ಮಾಡಿಸುತ್ತಿದ್ದ ಔದಾರ್ಯ ಇಂದಿಗೂ ನೆನಪಿನಲ್ಲಿ ಉಳಿದಿದೆ. ಸೂಟು, ಟೈ ಹಾಕಿಕೊಂಡು ಒಂದು ಹಳೆಯ ಕಾರಿನಲ್ಲಿ ವಿಭಾಗಕ್ಕೆ ಆಗಾಗ್ಗೆ ಬಂದು ಹರಟೆ ಹೊಡೆಯುತ್ತಿದ್ದ ಲಂಕೇಶ್ ಪ್ರಜಾವಾಣಿಯಲ್ಲಿ ಪ್ರಕಟವಾಗುತ್ತಿದ್ದ ನನ್ನ ಕಥೆಗಳನ್ನು ಓದಿ, ವಿಮರ್ಶಿಸಿ, 'ಬರೀತಾ ಇದ್ರೆ ಕೈ ಪಳಗುತ್ತಾ ಹೋಗುತ್ತೆ. ಬರಿಯೋದನ್ನ ಬಿಡಬೇಡಿ' ಎಂದು ಪ್ರೋತ್ಸಾಹಿಸುತ್ತಿದ್ದುದು ನನ್ನ ನೆನಪಿನಲ್ಲಿ ಇನ್ನೂ ಹಸಿರಾಗಿದೆ. ರಾಜರತ್ನಂರವರು ಸಂದರ್ಶಕ ಪ್ರಾಧ್ಯಾಪಕರಾಗಿ ಬಂದು ಹೋಗುತ್ತಿದ್ದರು. ವಿ. ಸೀತಾರಾಮಯ್ಯನವರು ಆಗಾಗ ಬಂದು ಉಪನ್ಯಾಸ ನೀಡುತ್ತಿದ್ದರು. ಪಂಪಭಾರತವನ್ನು ಇಂಗ್ಲಿಷ್‌ನಲ್ಲಿ ಪಾಠಮಾಡಿದ ಅವರ ನೆನಪು ಇನ್ನೂ ಮಾಸಿಲ್ಲ.

ನಾನು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗಕ್ಕೆ ಬಂದುದು ಒಂದು ಯೋಗಾಯೋಗ. ಡಾ. ರಂ.ಶ್ರೀ ಮುಗಳಿಯವರು ನನ್ನ ಪಿಎಚ್‌ಡಿ ಮಾರ್ಗದರ್ಶಕರಾಗಿದ್ದರು. ನನ್ನನ್ನು ಒಂದು ದಿನ ಡಾ. ರಂ.ಶ್ರೀ ಮುಗಳಿಯವರು "ಪೋಸ್ಟ್ ಗ್ರ್ಯಾಜುಯೇಟ್ ರಿಸರ್ಚ್ ಅಸಿಸ್ಟೆಂಟ್ ಪೋಸ್ಟ್‌ಗಳನ್ನು ತುಂಬಲಿದ್ದೇವೆ; ನೀವೂ ಅಪ್ಲೈ ಮಾಡಿ. ನಿಮಗೆ ಇಲ್ಲಿ ಪಿಎಚ್.ಡಿ ಸಂಶೋಧನೆ ನಡೆಸಲು ಒಳ್ಳೆಯ ವಾತಾವರಣವಿದೆ" ಎಂದರು. ನಾನು ಅಪ್ಲೈ ಮಾಡಿದೆ, ಆಯ್ಕೆಯೂ ಆದೆ. ನನ್ನ ಮಾರ್ಗದರ್ಶಿಗಳು ನನಗೆ ಸ್ನಾತಕೋತ್ತರ ತರಗತಿಗಳಲ್ಲಿ ಹಾಗೂ ಆನರ್ಸ್ ತರಗತಿಗಳಲ್ಲಿ ಪಾಠ ಮಾಡಲು ಅವಕಾಶ ಕಲ್ಪಿಸಿಕೊಟ್ಟರು. ನನಗಿಂತ ಮೊದಲು ಎನ್.ಎಸ್. ಲಕ್ಷ್ಮೀನಾರಾಯಣಭಟ್ಟ, ಕೆ. ಮರುಳಸಿದ್ಧಪ್ಪ, ಹು.ಕಾ.ಜಯದೇವ್ ಕನ್ನಡ ವಿಭಾಗದಲ್ಲಿ ಅಧ್ಯಾಪಕರಾಗಿ ನೇಮಕಗೊಂಡಿದ್ದರು. ಡಾ. ಕೆ.ಎಂ. ಕೃಷ್ಣರಾವ್ ಅಲೋಕೇಟಿವ್ ಆಗಿ ಕನ್ನಡ ವಿಭಾಗಕ್ಕೆ ಅಧ್ಯಾಪಕರಾಗಿ ಬಂದರು; ಆ ಮೊದಲೆ ಎಸ್.ಆರ್. ಮಳಗಿಯವರೂ ಬಂದಿದ್ದರು. ಡಾ. ಜಿ.ಎಸ್.ಶಿವರುದ್ರಪ್ಪನವರು ರೀಡರ್ ಆಗಿ ನೇಮಕಗೊಂಡು ಕನ್ನಡ ವಿಭಾಗಕ್ಕೆ ಬಂದರು. ಸ್ವಲ್ಪ ಕಾಲದಲ್ಲೇ ಡಾ. ಎಂ. ಚಿದಾನಂದಮೂರ್ತಿಯವರು ರೀಡರ್ ಆಗಿಯೂ, ಹಂಪ ನಾಗರಾಜಯ್ಯನವರು ಅಧ್ಯಾಪಕರಾಗಿಯೂ ನೇಮಕಗೊಂಡು ಕನ್ನಡ ವಿಭಾಗಕ್ಕೆ ಸೇರ್ಪಡೆಯಾದರು.

ಶಿವರುದ್ರಪ್ಪನವರು ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರಾದ ಕೂಡಲೇ ಕನ್ನಡ ವಿಭಾಗವನ್ನು ಕನ್ನಡ ಅಧ್ಯಯನ ಕೇಂದ್ರವೆಂದು ಪುನರ್ ನಾಮಕರಣ ಮಾಡಿದರು.

ಮೈಸೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗವು ಕನ್ನಡ ಅಧ್ಯಯನ ಸಂಸ್ಥೆಯಾದಂತೆ ರಾಜಧಾನಿ ಬೆಂಗಳೂರಿನಲ್ಲಿ ಸ್ಥಾಪಿತವಾಗಿರುವ ವಿಶ್ವವಿದ್ಯಾಲಯದ ಕನ್ನಡಪರ ಚಟುವಟಿಕೆಗಳ ಕೇಂದ್ರವಾಗಬೇಕೆಂಬ ಹಿನ್ನೆಲೆಯಲ್ಲಿ ಆ ಹೆಸರನ್ನಿಟ್ಟರು. ಅವರು ಮಾಡಿದ ಮತ್ತೊಂದು ಕೆಲಸ, ಜಾನಪದ ತಜ್ಞರಾಗಿ ಕವಿ ನಾಟಕಕಾರರಾಗಿ ಹೆಸರು ಮಾಡಿಯೂ ಗುರುತಿಸಲ್ಪಡದ ಚಂದ್ರಶೇಖರ ಕಂಬಾರರನ್ನು ಸಾಗರದ ಲಾಲಬಹದ್ದೂರ್ ಕಾಲೇಜಿನಿಂದ ಕರೆಯಿಸಿಕೊಂಡು ತಾತ್ಕಾಲಿಕ ಅಧ್ಯಾಪಕರಾಗಿ ನೇಮಕ ಮಾಡಿಸಿದುದು. ಕನ್ನಡ ಅಧ್ಯಯನ ಕೇಂದ್ರದಲ್ಲಿ ಪೋಸ್ಟ್ ಗ್ರ್ಯಾಜ್ಯುಯೇಟ್ ರಿಸರ್ಚ್ ಅಸಿಸ್ಟೆಂಟಾಗಿ ನೇಮಕವಾಗಿದ್ದ ನನ್ನನ್ನು ಆ ಹುದ್ದೆಯ ಅವಧಿ ಮುಗಿಯಿತೆಂದು ಮನೆಗೆ ಕಳುಹಿಸುವ ತೀರ್ಮಾನ ವಿಶ್ವವಿದ್ಯಾಲಯ ತೆಗೆದುಕೊಂಡಿತು. ಇದ್ದ ಒಂದು ಪರ್ಮನೆಂಟ್ ಹುದ್ದೆಯನ್ನು ಬಿಟ್ಟು ಬಂದ ನನ್ನ ಸ್ಥಿತಿ ತ್ರಿಶಂಕು ಸ್ಥಿತಿಯಾಯಿತು. ವಿವಾಹವಾಗಿ ಸಂಸಾರ ಹೂಡಿದ್ದ ನನಗೆ ನಾಳಿನ ಚಿಂತೆ ವಿಶೇಷವಾಗಿ ಕಾಡತೊಡಗಿತು. ನಾನು ಜಿಎಸ್ಎಸ್ ಅವರಲ್ಲಿ ನನ್ನ ಕಷ್ಟ ಹೇಳಿಕೊಂಡೆ. ಅಂತಃಕರಣ ಕದಡಿದ ಅವರು ನನ್ನನ್ನು ಹಂಗಾಮಿ ಅಧ್ಯಾಪಕನಾಗಿ ನೇಮಕ ಮಾಡಲು ಕುಲಸಚಿವರಿಗೆ ಶಿಫಾರಸು ಮಾಡಿದರು. ಅಷ್ಟೇ ಅಲ್ಲ, ಕುಲಪತಿಗಳ ಜೊತೆ ಮಾತನಾಡಿ ಆದೇಶವನ್ನೂ ಹೊರಡಿಸಿದರು. ನಾನು ತಾತ್ಕಾಲಿಕವಾಗಿ ಆ ಅನಿರೀಕ್ಷಿತ ಆಪತ್ತಿನಿಂದ ಪಾರಾದೆ. ಮುಂದೆ ಕೆಲವೇ ದಿನಗಳಲ್ಲಿ ರೀಡರ್ ಹಾಗೂ ಅಧ್ಯಾಪಕರ ನೇಮಕಾತಿ ಮಾಡುವಾಗ ನನಗೊಬ್ಬನಿಗೇ ಪಿಎಚ್.ಡಿ ಹಾಗೂ ಸಂಶೋಧನ ಲೇಖನಗಳ ಬೆಂಬಲವಿದ್ದರೂ ನಾನು ರೀಡರ್ ಹುದ್ದೆಗೆ ಅರ್ಜಿ ಹಾಕದೆ ಪೂರ್ಣಾವಧಿ ಲೆಕ್ಚರರ್ ಹುದ್ದೆಗೆ ಮಾತ್ರ ಅರ್ಜಿ ಹಾಕಿದೆ. ಎನ್.ಎಸ್. ಲಕ್ಷ್ಮೀನಾರಾಯಣಭಟ್ಟ, ಮರುಳಸಿದ್ಧಪ್ಪ, ಹು.ಕಾ. ಜಯದೇವ್, ಹಂಪ ನಾಗರಾಜಯ್ಯ ರೀಡರ್ ಆಗಿ ನೇಮಕಗೊಂಡರು. ಚಂದ್ರಶೇಖರ ಕಂಬಾರ, ನಾನು, ಸಿ. ವೀರಣ್ಣ, ಕೆ.ಪಿ. ಭಟ್, ಕೀ.ರಂ. ನಾಗರಾಜ್, ಬರಗೂರು ರಾಮಚಂದ್ರಪ್ಪ ಕ್ರಮವಾಗಿ ಅಧ್ಯಾಪಕರಾಗಿ ನೇಮಕಗೊಂಡೆವು. ರೀಡರ್ ನೇಮಕಾತಿಯಲ್ಲಿ ತಮ್ಮ ಹೆಸರನ್ನು ಸೇರಿಸದಿದ್ದರೆ ರಕ್ತಪಾತ ವಾಗುತ್ತದೆಂದು ಬಹಿರಂಗವಾಗಿ ಹೇಳಿಕೊಂಡು ತಿರುಗಾಡುತ್ತಿದ್ದ ಒಂದು ಗುಂಪಿನ ಜನ ಶಿವರುದ್ರಪ್ಪನವರನ್ನು ಹೆದರಿಸಿದ್ದೂ ಉಂಟು. ಈ ವಿವರಗಳನ್ನು ದಾಖಲಿಸುತ್ತಿರುವುದರ ಕಾರಣವಿಷ್ಟೆ: ಶಿವರುದ್ರಪ್ಪನವರಂತಹ ಕನಸುಗಳನ್ನು ಮನಸ್ಸಿನಲ್ಲಿ ತುಂಬಿಕೊಂಡವರು ವಾಸ್ತವತೆಯ ನಿಷ್ಠೂರವನ್ನು ಮೈಮೇಲೆ ಹಾಕಿಕೊಳ್ಳಬೇಕಾದ ದುರಂತ. ಒಳ್ಳೆಯ ಸಂಘಟನಕಾರರಿಗೆ ಇಂತಹ ಸಂದಿಗ್ಧಗಳನ್ನು ಸಹೋದ್ಯೋಗಿಗಳಿಂದಲೇ ಎದುರಿಸಬೇಕಾಗಿ ಬಂದುದು ಬೇಸರದ ಸಂಗತಿ.

ಜಿಎಸ್ಎಸ್ ಅವರಿಗೆ ಬಹಳ ಪ್ರಿಯವಾದುದು ವಿಚಾರಗೋಷ್ಠಿಗಳು. ಅವರು ಬೆಂಗಳೂರು ವಿಶ್ವವಿದ್ಯಾಲಯದ ವ್ಯಾಪ್ತಿಗೆ ಬರುವ ಕನ್ನಡ ಅಧ್ಯಾಪಕರುಗಳನ್ನು ತಿಂಗಳಲ್ಲಿ ಒಂದು ಬಿಡುವಿನ ದಿನ ಸೆಂಟ್ರಲ್ ಕಾಲೇಜಿನ ಕೆಮಿಸ್ಟ್ರಿ ಹಾಲ್‌ನಲ್ಲಿ ಸಭೆ ಸೇರಿಸಿ ಒಬ್ಬರು ಪ್ರಬಂಧ ಮಂಡಿಸಿ ನಂತರ ಆ ವಿಷಯದ ಪೃಥಕ್ಕರಣೆ ನಡೆಸುವ ಒಂದು ಪ್ರಯೋಗ

ನಡೆಸಿದರು. ಈ ಪ್ರಬಂಧಗಳನ್ನು 'ಅಧ್ಯಯನ' ಎಂದು ಪುಸ್ತಕ ರೂಪದಲ್ಲಿ ಪ್ರಕಟಿಸಿದರು. ಕನ್ನಡ ಅಧ್ಯಯನ ಕೇಂದ್ರ ಜ್ಞಾನಭಾರತಿಗೆ ಸ್ಥಳಾಂತರಗೊಂಡದ್ದರಿಂದ ಇದನ್ನು ಮುಂದುವರಿಸಲಾಗಲಿಲ್ಲವೆಂದು ತೋರುತ್ತದೆ. ಶಿವರುದ್ರಪ್ಪನವರ ಸಂಘಟನೆ ಹಾಗೂ ವ್ಯವಸ್ಥಿತ ಸಾಹಿತ್ಯಕ ಚರ್ಚೆಗೆ ಅವರು ವರ್ಷವರ್ಷವೂ ನಡೆಸುತ್ತಿದ್ದ ವಿಚಾರ ಸಂಕಿರಣಗಳು ಸಾಕ್ಷಿ. ನಾಡಿನ ಖ್ಯಾತ ಚಿಂತಕರನ್ನು ಒಂದೆಡೆ ಮೂರು ದಿವಸ ಸೇರಿಸಿ ಹಲವು ಗೋಷ್ಠಿಗಳಲ್ಲಿ ವಿಷಯದ ಚರ್ಚೆ ನಡೆಸುತ್ತಿದ್ದುದು ಮರೆಯಲಾಗದ ಅನುಭವ. *ಪಂಪ: ಒಂದು ಅಧ್ಯಯನ, ಕುವೆಂಪು: ಒಂದು ಅಧ್ಯಯನ, ಮಾಸ್ತಿ: ಒಂದು ಅಧ್ಯಯನ, ಕಾರಂತ: ಒಂದು ಅಧ್ಯಯನ, ವಿಮರ್ಶೆ ಕವಲು ದಾರಿಯಲ್ಲಿ, ದಶವಾರ್ಷಿಕ ಚಿಂತನೆ*—ಹೀಗೆ ಪ್ರಮುಖ ಕವಿಗಳನ್ನು ಕುರಿತಂತೆ, ವಿಮರ್ಶೆಯನ್ನು ಕುರಿತಂತೆ ಅವರು ನಡೆಸಿದ ವಿಚಾರ ಸಂಕಿರಣಗಳಲ್ಲಿ ಯುವ ಬರಹಗಾರರನ್ನು ಗುರುತಿಸಿ, ಪ್ರತಿಭಾವಂತ ಹಿರಿಯ ಸಾಹಿತಿ-ಕವಿ-ವಿಮರ್ಶಕರ ಜೊತೆಗೂಡಿಸಿ ನಡೆಸುತ್ತಿದ್ದ ಚರ್ಚೆಯ ಕಾವು ಪತ್ರಿಕೆಗಳ ಮೂಲಕ ನಾಡಿನಾದ್ಯಂತ ಹರಡಿಬಿಡುತ್ತಿತ್ತು. ಬೆಂಗಳೂರಿನ ಸಾಹಿತ್ಯ ಪ್ರಿಯರಿಗಂತೂ ಈ ವಿಚಾರ ಸಂಕಿರಣಗಳು ಮಹತ್ವದ ಸಾಹಿತ್ಯಕ ಚರ್ಚೆಯ ವೇದಿಕೆಯಾಗಿ ಸಂಭಾವಿತವಾಗಿದ್ದುವು. ವಿಚಾರ ಸಂಕಿರಣಕ್ಕೆ ವಿಷಯದ ಆಯ್ಕೆಯಲ್ಲಿ ಹಾಗೂ ಗೋಷ್ಠಿಯ ಪ್ರಬಂಧಕಾರರ ಆಯ್ಕೆಯಲ್ಲಿ ಶಿವರುದ್ರಪ್ಪನವರ ವಿದ್ವದ್‌ಪಕ್ಷಪಾತ ಗಮನಾರ್ಹವಾಗಿರುತ್ತಿತ್ತು. ಗೋಷ್ಠಿಗಳಲ್ಲಿ ಚರ್ಚೆಯ ಕಾವು ಏರಿ ಒಮ್ಮೊಮ್ಮೆ ಗಂಭೀರ ವಾತಾವರಣ ನಿರ್ಮಾಣವಾದರೂ ಅದನ್ನು ವಿಪರೀತಕ್ಕೊಯ್ಯದೆ ಒಂದು ಹದಕ್ಕೆ ಸೂತ್ರಧಾರರಾದ ಶಿವರುದ್ರಪ್ಪನವರು ತರುತ್ತಿದ್ದರು. ವಿಚಾರ ಸಂಕಿರಣದ ಕೊನೆಯ ಭಾಗವಾದ ಕವಿಗೋಷ್ಠಿಗೆ ಜನ ಕಿಕ್ಕಿರಿದು ಸೇರುತ್ತಿದ್ದರು. ಪ್ರಸಿದ್ಧ ಕವಿಗಳ ಕಾವ್ಯವಾಚನವನ್ನು ಕೇಳಲು ಕಾತುರರಾದ ಶ್ರೋತೃವರ್ಗದ ಆಸಕ್ತಿ ಕಂಡಾಗ ಕಾವ್ಯಕ್ಕೆ ಮುಪ್ಪಿಲ್ಲವೆನ್ನಿಸುತ್ತಿತ್ತು. ವಿಚಾರ ಸಂಕಿರಣದಲ್ಲಿ ಮಂಡಿತವಾದ ಪ್ರಬಂಧಗಳು ಮುಂದಿನ ವರ್ಷದ ವಿಚಾರಗೋಷ್ಠಿಯಲ್ಲಿ ಸಂಕಲನವಾಗಿ ಬಿಡುಗಡೆಗೊಳ್ಳಲು ನಡೆಸುತ್ತಿದ್ದ ವ್ಯವಸ್ಥೆ ಮಹತ್ವದ್ದು. ಸಾಹಿತ್ಯಕ ಚರ್ಚೆ ಗಾಳಿಯಲ್ಲಷ್ಟೇ ತೇಲಿ ಹೋಗಿ ಜನ ಅವನ್ನು ಮರೆತುಬಿಡಬಾರದು, ಅವು ಲಿಖಿತರೂಪದಲ್ಲಿ ಪ್ರಕಟವಾದರೆ ಭಿನ್ನ ಸ್ತರದ ಆಲೋಚನೆಗಳು ದಾಖಲಾಗುವ ಮೂಲಕ ಸಾಹಿತ್ಯದ ಇತಿಹಾಸವನ್ನು ಪುನರಾಚಿಸುವಲ್ಲಿ ಮಹತ್ವದ ಪಾತ್ರ ವಹಿಸಬಹುದೆಂಬ ಸದುದ್ದೇಶವೂ ಇಲ್ಲಿ ಇರುವಂತಿದೆ. ವಿಚಾರ ಸಂಕಿರಣಗಳ ಪೂರ್ವಭಾವಿ ಸಿದ್ಧತೆಯಲ್ಲಿ ತಮ್ಮ ಸಹೋದ್ಯೋಗಿಗಳ ಸಲಹೆಯನ್ನು ಪಡೆದು ಅವರೆಲ್ಲರೂ ಅದರಲ್ಲಿ ಒಂದಲ್ಲಾ ಒಂದು ವಿಧದಲ್ಲಿ ಪಾಲ್ಗೊಳ್ಳುವಂತೆ ಮಾಡುತ್ತ ಜಿ.ಎಸ್.ಎಸ್ ತನ್ನ ಕಾರ್ಯಭಾರವನ್ನು ಹಗುರ ಮಾಡಿಕೊಳ್ಳುತ್ತಿದ್ದರು.

ಜನಸಾಮಾನ್ಯರಿಗಾಗಿ ಸಾಹಿತ್ಯ ಚರಿತ್ರೆಯನ್ನು ಹತ್ತು ಸಂಪುಟಗಳಲ್ಲಿ ಹೊರತರುವ ಅವರ ಕಾರ್ಯಯೋಜನೆ ಜನಪ್ರಿಯವಾಯಿತು. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯನ್ನು ಆರು ಸಂಪುಟಗಳಲ್ಲಿ ಹೊರತರುವ ಅವರ ಮಹತ್ವದ ಯೋಜನೆ ಡಾ. ರಂ.ಶ್ರೀ

ಮುಗಳಿಯವರ ನೇತೃತ್ವದಲ್ಲಿ ಜಾರಿಗೆ ಬಂದದ್ದು ಜಿ.ಎಸ್.ಎಸ್ ರವರ ಕಾರ್ಯತತ್ಪರತೆಗೆ ಒಂದು ಒಳ್ಳೆಯ ಉದಾಹರಣೆ. ಜಿ.ಎಸ್.ಎಸ್ ಅವರಿಗೆ ಪ್ರಿಯವಾದದ್ದು ಸಾಹಿತ್ಯ ವಿಮರ್ಶೆ. ಕೃತಿ ಪರಿಚಯವಷ್ಟೆ ಸಾಹಿತ್ಯ ಚರಿತ್ರೆಯ ಗುರಿಯಾಗಬಾರದು, ಅದು ವಿಮರ್ಶೆಯ ಒಳನೋಟಗಳನ್ನೂ ಒಳಗೊಳ್ಳಬೇಕೆಂಬುದು ಅವರ ಉದ್ದೇಶ. ಮೈಸೂರು ವಿಶ್ವವಿದ್ಯಾಲಯ ಹೊರತಂದ ಸಾಹಿತ್ಯ ಚರಿತ್ರೆ ಸಂಪುಟಗಳಲ್ಲಿ ಸಾಮಗ್ರಿಮುಖಿ ವಿವೇಚನೆಯಾದರೆ, ಬೆಂಗಳೂರು ವಿಶ್ವವಿದ್ಯಾಲಯದ ಸಾಹಿತ್ಯ ಚರಿತ್ರೆಯ ಸಂಪುಟಗಳಲ್ಲಿ ವಿಮರ್ಶೆಯ ಒಳಮುಖೀ ವಿಶ್ಲೇಷಣೆ ಪ್ರಧಾನವಾಗುತ್ತದೆ. 'ಸಾಹಿತ್ಯವಾರ್ಷಿಕ'ವೆನ್ನುವ ಉಪಯುಕ್ತ ಯೋಜನೆಯೊಂದನ್ನು ಡಾ. ಜಿಎಸ್ಎಸ್ ನಿಯೋಜಿಸಿದರು. ಒಂದು ವರ್ಷದಲ್ಲಿ ಹೊರಬರುವ ಬೇರೆ ಬೇರೆ ಸಾಹಿತ್ಯ ಪ್ರಕಾರಗಳ ಕೃತಿಗಳ ಬಗೆಗೆ ಒಂದೆಡೆ ಮಾಹಿತಿ ದೊರಕಿಸಿಕೊಡುವ ಈ ಯೋಜನೆ ಮಹತ್ವದ್ದು. ವಿಭಾಗದ ಅಧ್ಯಾಪಕರುಗಳಿಂದ 'ವಾರ್ಷಿಕ'ಕ್ಕೆ ಲೇಖನಗಳನ್ನು ಬರೆಯಿಸುವ, ನಿಶ್ಚಿತ ಕಾಲಾವಧಿಯಲ್ಲಿ ಪ್ರಕಟಿಸುವ ಯೋಜನೆ ಡಾ. ಜಿಎಸ್ಎಸ್ ಅವರದ್ದು. ಇದು ಬಹಳ ಕಷ್ಟಸಾಧ್ಯವಾದ ಜವಾಬ್ದಾರಿ. ಮೊದಲಿಗೆ, ವಿಶ್ವವಿದ್ಯಾಲಯದ ಗ್ರಂಥಭಂಡಾರದ ಸಹಕಾರ ಪಡೆದು ಆಯಾ ವರ್ಷದಲ್ಲಿ ಪ್ರಕಟವಾದ ಎಲ್ಲ ಕೃತಿಗಳನ್ನು ಕಲೆಹಾಕುವುದು; ಕೃತಿಗಳ ಬಗೆಗೆ ಒಂದು ವಿಹಂಗಮ ನೋಟ (survey) ಪರಿಚಯಾತ್ಮಕವಾಗಿ, ಸಾಧ್ಯವಾದರೆ ವಸ್ತುನಿಷ್ಠ ವಿಮರ್ಶೆ ಕೊಡುವುದೆಂದು ತೀರ್ಮಾನಿಸಲಾಯಿತು. ವರ್ಷದಲ್ಲಿ ಪ್ರಕಟವಾಗುವ ಎಲ್ಲ ಪುಸ್ತಕಗಳನ್ನು ಆಯಾ ವರ್ಷದ ಒಳಗೇ ಕಲೆಹಾಕುವುದು ಗ್ರಂಥಾಲಯದವರಿಗೂ ತಾಂತ್ರಿಕವಾಗಿ ಕಷ್ಟವೆನಿಸಿತು. ಉಪ ಗ್ರಂಥಪಾಲಕರಾದ—ಸಾಹಿತ್ಯದ ಬಗೆಗೆ ನಿಜವಾದ ಕಳಕಳಿಯಿದ್ದ—ಶ್ರೀ ವೆಂಕಟರಮಣಯ್ಯನವರಿಂದ ಗರಿಷ್ಠ ಪ್ರಮಾಣದ ನೆರವು ದೊರೆಯಿತು. ಒಮ್ಮೊಮ್ಮೆ ಡಾ. ಜಿಎಸ್ಎಸ್ ತಮಗೆ ಲೇಖಕ / ಪ್ರಕಾಶಕರಿಂದ ಬಂದ ಪುಸ್ತಕಗಳನ್ನು ಕೊಡುತ್ತಿದ್ದರು. ಆಯಾ ಪ್ರಕಾರಗಳ ಬಗೆಗೆ ಬರೆಯಲು ಸಮರ್ಥರಾದವರಿಂದಲೇ ಬರೆಯಿಸುತ್ತಿದ್ದರು. ಹೀಗಾಗಿ ನಾವೂ ಈ ಯೋಜನೆಯಲ್ಲಿ ಅವಿಭಾಜ್ಯ ಭಾಗವಾದೆವು. ಸಾಧ್ಯವಾದರೆ, ಸಾಹಿತ್ಯ ಭಂಡಾರ, ಸ್ವಪ್ನಾ ಬುಕ್ ಹೌಸ್, ಗೀತಾ ಬುಕ್ ಏಜೆನ್ಸಿ ಮೊದಲಾದ ಕನ್ನಡ ಪುಸ್ತಕ ಮಾರಾಟ ಮಳಿಗೆಗಳಿಗೆ ಹೋಗಿ ಮಾಹಿತಿ ಪಡೆದುಬಂದು ಕೊರತೆಗಳನ್ನು ನೀಗಿಸಿಕೊಳ್ಳುತ್ತಿದ್ದೆವು. ಬೇರೆ ಬೇರೆ ಕಾರ್ಯಗಳ ಒತ್ತಡದಲ್ಲಿ ನಿಗದಿತ ವೇಳೆಯಲ್ಲಿ ನಮ್ಮ ನಮ್ಮ ಲೇಖನ ಬರೆದು ಮುಗಿಸದಿದ್ದಾಗ ಡಾ. ಜಿಎಸ್ಎಸ್ ಮೇಲಿಂದ ಮೇಲೆ ನೆನಪಿಸುತ್ತಿದ್ದರು; ಒಮ್ಮೊಮ್ಮೆ ಅವರ ಅಸಹನೆ ಮುಖಭಾವದಲ್ಲಿ ವ್ಯಕ್ತವಾಗುತ್ತಿದ್ದಿತು; ತೀರಾ ಗಂಭೀರವಾಗಿ ತಮ್ಮ ಮುನಿಸನ್ನು ಪ್ರಕಟಪಡಿಸುತ್ತಿದ್ದರು. ಸೇವೆಯಿಂದ ನಿವೃತ್ತರಾಗುವವರೆವಿಗೂ ತಪ್ಪದೆ 'ಸಾಹಿತ್ಯ ವಾರ್ಷಿಕ' ಹೊರತಂದರು. ಮುಂದೆ ಅಧಿಕಾರಕ್ಕೆ ಬಂದವರು ಇದರಲ್ಲಿ ಆಸಕ್ತಿಯನ್ನು ತೀವ್ರವಾಗಿ ತೋರದೆ ಇದ್ದದ್ದರಿಂದ ಈ ಯೋಜನೆ ನಿಂತುಹೋಯಿತು.

ನಾನು ಡಾ. ಜಿಎಸ್ಎಸ್‌ರವರಲ್ಲಿ ಕಂಡದ್ದು ಯಾವುದೇ ಕೆಲಸ ವಹಿಸಿಕೊಂಡಾಗ

ಅವರು ತೋರುತ್ತಿದ್ದ ಅರ್ಪಣಾ ಮನೋಭಾವ. ಈ involvement ಅವರನ್ನು ಸದಾ ಕಾರ್ಯಚಟುವಟಿಕೆಯಲ್ಲಿ ಮಗ್ನರಾಗುವಂತೆ ಮಾಡುತ್ತಿದ್ದಿತು. ಈ ಒತ್ತಡದಲ್ಲಿ ಅವರು ತಮ್ಮ ಓದು, ಬರವಣಿಗೆಗಳಲ್ಲಿ ಎಂದೂ ನಿರಾಸಕ್ತಿ ತಾಳಲಿಲ್ಲ. ಆಡಳಿತದ ಹೊಣೆ ಹೊತ್ತ ಅನೇಕ ಮಂದಿ ಸಾಹಿತಿಗಳು ತಮ್ಮ ಸೃಜನಕ್ರಿಯೆಗೆ ಪೂರ್ಣವಿರಾಮ ಹಾಕಿದುದನ್ನು ನಾನು ನೋಡಿರುವೆ. ಡಾ. ಜಿಎಸ್ಎಸ್ ಸಮಯವನ್ನು ಹೊಂದಿಸಿಕೊಂಡು ಎರಡನ್ನೂ ನಿರಾಯಾಸವಾಗಿ ನಿರ್ವಹಿಸುತ್ತಿದ್ದರು. ಅವರದು ಬತ್ತದ ಉತ್ಸಾಹ. ಯಾವುದೇ ಉಪನ್ಯಾಸವಿರಲಿ, ಪೂರ್ವಸಿದ್ಧತೆಯಿಲ್ಲದೆ, ವಿಷಯದ ಬಗೆಗೆ ಟಿಪ್ಪಣಿ ಮಾಡಿಕೊಳ್ಳದೆ ಹೋಗುತ್ತಿರಲಿಲ್ಲ. ಅವರ ಉಪನ್ಯಾಸ ವಿಶಿಷ್ಟವಾಗುತ್ತಿದ್ದುದು ಅದರ ವಿಷಯ ವಿಶ್ಲೇಷಣೆಯಲ್ಲಿ. ಒಳನೋಟಗಳನ್ನು ಕೊಡುವ ಮೂಲಕ ಗಂಭೀರವೂ ವಿದ್ವತ್ಪೂರ್ಣವೂ ಆಗಿರುತ್ತಿದ್ದ ಅವರ ಉಪನ್ಯಾಸಗಳು ಸಾಹಿತ್ಯಾಸಕ್ತರಿಗೆ ಪ್ರಿಯವಾಗುತ್ತಿದ್ದುವು. ಅವರ ಬಹಿರಂಗದ ವೇಷಭೂಷಣಗಳಲ್ಲಿ ಕಾಣುವ ಅಚ್ಚುಗಟ್ಟು, ಶುಚಿತ್ವ, ಒಪ್ಪ ಓರಣ, ಶಿಸ್ತು, ಸದಭಿರುಚಿ ಅವರ ಮಾತು-ಕೃತಿಗಳಲ್ಲೂ ವ್ಯಕ್ತವಾಗುತ್ತಿದ್ದಿತು. ಅವರು ಸುಲಭವಾಗಿ ಬೇಗನೆ ಮಾತಿಗೆ ಬೇರೆಯವರ ಜೊತೆ ಬೆರೆಯುತ್ತಿರಲಿಲ್ಲ. ಆತ್ಮೀಯತೆ ಬೆಳೆದಂತೆ ಅವರ ವ್ಯಕ್ತಿತ್ವದಲ್ಲಿನ ಬಿಗಿ ಸಡಿಲುತ್ತಿದ್ದಿತು. ಆತ್ಮೀಯರೊಂದಿಗೆ ಇದ್ದಕ್ಕಿದ್ದ ಹಾಗೆ ಗಾಂಭೀರ್ಯ ತೋರಿದರೆ, ಅವರು ಮುನಿಸುಗೊಂಡಿದ್ದಾರೆ ಎಂಬ ಅರ್ಥ. ಮತ್ತೆ ಹಳೆಯ ಸ್ಥಿತಿಗೆ ಬರಲು ಕೆಲವು ಕಾಲ ಬೇಕಾಗುತ್ತಿತ್ತು. ಆ ತಪ್ಪುಗ್ರಹಿಕೆಯ ಮಂಜು ಕರಗಿಬಿಟ್ಟರೆ ಅವರು ಮತ್ತೆ ಮೃದುವಾಗುತ್ತಿದ್ದರು; ಸ್ನೇಹದ ಸಿಂಚನವಾಗುತ್ತಿತ್ತು; ಮತ್ತೆ ಹಳೆಯ ಅಂತಃಕರಣದ ಮಾತು, ವರ್ತನೆ. ವಿಭಾಗದ ನಾವು ಕೆಲವರು ಅವರ ಮನೆಗೆ ಹೋದಾಗ ಶ್ರೀಮತಿ ರುದ್ರಾಣಿಯವರು ನೀಡುತ್ತಿದ್ದ ಆತಿಥ್ಯ, ಡಾ. ಜಿಎಸ್ಎಸ್ ತೋರುತ್ತಿದ್ದ ಆತ್ಮೀಯತೆ ಮರೆಯಲಾಗದ್ದು. ಅವರು ಉಪಹಾರ, ಊಟಗಳಲ್ಲಿ ಪ್ರಕಟಿಸುತ್ತಿದ್ದ ಶುಚಿ, ರುಚಿ, ಆಸಕ್ತಿ ಅವರ ಸುಸಂಸ್ಕೃತಿಗೆ ಇನ್ನೊಂದು ಹೆಸರು. ಸೆಂಟ್ರಲ್ ಕಾಲೇಜಿನಲ್ಲಿದ್ದಾಗ ಅವರು ತಮ್ಮ ಸ್ಟ್ಯಾಂಡರ್ಡ್ ಕಾರ್‌ನಲ್ಲಿ ನಮ್ಮನ್ನೆಲ್ಲ ಕರೆದುಕೊಂಡು ಹೋಗಿ ಗುಂಡಪ್ಪನ ಹೋಟೆಲ್‌ನಲ್ಲೋ, ಸರಸ್ವತಿ ಲಾಡ್ಜ್‌ನಲ್ಲೊ ತಿಂಡಿ ಕೊಡಿಸುತ್ತಿದ್ದರು. ಆಗ ಅವರ ಸಡಗರ, ಉತ್ಸಾಹ, ಮಾತಿನ ಲಹರಿ ಟಿಪಿಕಲ್ ಆಗಿರುತ್ತಿತ್ತು. ಬೇರೊಬ್ಬರ ಬಗ್ಗೆ ಅವರು ನೇರವಾಗಿ ಟೀಕಿಸಿದ್ದನ್ನು ನಾನು ಕೇಳಿಲ್ಲ.

ನಾನು, ಅವರಿಗೆ ಐವತ್ತು ವರ್ಷ ತುಂಬಿದಾಗ ಪ್ರೊ. ಆರ್. ರಾಚಪ್ಪ, ಪ್ರೊ. ಕ.ವೆಂ. ರಾಜಗೋಪಾಲ್‌ರೊಡನೆ ಸೇರಿ ಒಂದು ಅಭಿನಂದನ ಗ್ರಂಥ ಹೊರತಂದೆವು. 'ಸ್ನೇಹ ಕಾರ್ತೀಕ'ವೆಂಬ ಹೆಸರಿನ ಆ ಕೃತಿ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯಲ್ಲಿ ಪ್ರಕಟವಾಯಿತು. ನಾನು ಹಾಗೂ ಪ್ರೊ. ಆರ್. ರಾಚಪ್ಪ ಇದಕ್ಕಾಗಿ ವಿಶೇಷವಾಗಿ ಶ್ರಮಿಸಿದೆವು. ಇದು ಇಂದಿಗೂ ಒಳ್ಳೆಯ ಅಭಿನಂದನ ಗ್ರಂಥವೆಂದು ಮಿತ್ರರು ನೆನಪಿಸಿಕೊಳ್ಳುವುದನ್ನು ಕೇಳಿದ್ದೇನೆ. ಪ್ರಕಾಶಕರೊಡನೆ ಒಪ್ಪಂದ ಮಾಡಿಕೊಂಡು ಅವರಿಂದ 'ಸ್ನೇಹ ಕಾರ್ತೀಕ'ದ ಕೆಲವು ಪ್ರತಿಗಳನ್ನು ಪಡೆದೆ. ಅವನ್ನು ಬೆಂಗಳೂರಿನ ಸುತ್ತಮುತ್ತಲಿನ

ಕಾಲೇಜುಗಳ ಗ್ರಂಥಾಲಯಕ್ಕೆ ಪೂರೈಸಿ ಅದರಿಂದ ಬಂದ ಹಣದಿಂದ ಡಾ. ಜಿ.ಎಸ್. ಶಿವರುದ್ರಪ್ಪ ಅಭಿನಂದನ ಸಮಿತಿಯ ಹೆಸರಿನಲ್ಲಿ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಎಂ.ಎ. ಪಠ್ಯದಲ್ಲಿನ ಕಾವ್ಯಮೀಮಾಂಸೆ ಪತ್ರಿಕೆಯಲ್ಲಿ ಅತ್ಯಂತ ಹೆಚ್ಚಿನ ಅಂಕಗಳನ್ನು ಪಡೆದ ವಿದ್ಯಾರ್ಥಿಗೆ ಚಿನ್ನದ ಪದಕವನ್ನು ಕಾನ್ವೊಕೇಶನ್‌ನಲ್ಲಿ ಕೊಡಲು ಒಂದು ದತ್ತಿ ಸ್ಥಾಪಿಸಿದೆವು. ಇದು ಕಳೆದ ಹತ್ತು ವರ್ಷಗಳಿಂದ ನಿರಂತರವಾಗಿ ನಡೆದುಬರುತ್ತಿದೆ.

ಡಾ. ಜಿಎಸ್‌ಎಸ್‌ರವರ *ಸಮಗ್ರ ಕಾವ್ಯ* ಹೊರತರುವ ಒಂದು ದೊಡ್ಡ ಯೋಜನೆ ನನ್ನಲ್ಲಿ ಬಂದಿತು. ಅದನ್ನು ಡಾ. ಜಿಎಸ್‌ಎಸ್ ಅವರಲ್ಲಿ ಹೇಳಿದಾಗ ಮೊದಲಿಗೆ ಸಮ್ಮಿಶ್ರ ಪ್ರತಿಕ್ರಿಯೆ ಅವರಿಂದ ಬಂದಿತು. ಈ ಸಾಹಸದಲ್ಲಿ ನಾನೆಲ್ಲಿ ನಷ್ಟ ಅನುಭವಿಸುವೆನೋ ಎನ್ನುವ ಆತಂಕ ಅವರದು; ಅದನ್ನು ಮಾತಿನಲ್ಲಿ ಹೇಳಿಯೂಬಿಟ್ಟರು. ನಾನು ಸಮಗ್ರಕಾವ್ಯ ತರಲೇಬೇಕೆಂದು ನಿಶ್ಚಯದ ಸ್ಥಿತಿಯಲ್ಲಿದ್ದುದರಿಂದ ನನ್ನ ಉತ್ಸಾಹಕ್ಕೆ ಅವರು ಮಣಿದರು. ನನ್ನ ನಿರೀಕ್ಷೆ ಮೀರಿ ಆ ಪುಸ್ತಕ ಬೇಗನೆ ಖರ್ಚಾಯಿತು. ನಾನು ಆ ಪ್ರಕಟಣೆಗೆಂದು ಮೈಸೂರು ಬ್ಯಾಂಕ್‌ನಲ್ಲಿ ಮಾಡಿದ್ದ ಸಾಲ ತುಂಬಲು ಸಾಧ್ಯವಾಯಿತು. ಸಮಗ್ರಕಾವ್ಯದ ಎರಡನೆಯ ಆವೃತ್ತಿಯನ್ನೂ ಹೊರತಂದೆನು. ಅದೂ ಒಂದೆರಡು ವರ್ಷಗಳಲ್ಲಿ ಮುಗಿದುದು ಡಾ. ಜಿಎಸ್‌ಎಸ್ ಜನಪ್ರಿಯತೆಗೆ ಸಾಕ್ಷಿಯೊದಗಿಸಿತು. ನಾನು ಡಾ. ಜಿಎಸ್‌ಎಸ್‌ರವರ 'ಕಾವ್ಯಾರ್ಥ ಚಿಂತನ', 'ಸಮಗ್ರ ಗದ್ಯ-2', ಹೊರತಂದಿರುವೆನು. 'ಕಾವ್ಯಾರ್ಥ ಚಿಂತನ' ಇಂದಿಗೂ ಬೇಡಿಕೆಯಿರುವ ಕೃತಿ. ನಾನು ಪ್ರಕಾಶನರಂಗದಲ್ಲಿ ಇಂದು ಹೆಸರು ಮಾಡಿರುವುದು ಡಾ. ಜಿಎಸ್‌ಎಸ್‌ರವರ ನಿರ್ಮಲಾಂತಃಕರಣದ ಪ್ರೋತ್ಸಾಹದಿಂದ. ಯಾವ ಮುಹೂರ್ತದಲ್ಲಿ ನನಗೆ ಅವರು ಆಶೀರ್ವದಿಸಿದರೊ ನಾನು ಕಾಣೆ, ಸುಮಾರು ನಲವತ್ತು ಕೃತಿಗಳನ್ನು ಹೊರತಂದಿರುವೆನು. ಎಲ್ಲವೂ ನನಗೆ ಪ್ರಸಿದ್ಧಿಯನ್ನು ತಂದುಕೊಟ್ಟಿವೆ. ಡಾ. ಜಿ.ಎಸ್. ಆಮೂರ, ಶ್ರೀ ಚನ್ನವೀರ ಕಣವಿ, ಡಾ. ದೇಸಾಯಿ, ಡಾ. ಗಿರಡ್ಡಿ ಗೋವಿಂದರಾಜ, ಸಾರಾ ಅಬೂಬಕ್ಕರ್, ಶ್ರೀಮತಿ ಶಾಂತಾದೇವಿ ಕಣವಿ, ಡಾ. ಎಂ. ಚಿದಾನಂದಮೂರ್ತಿ, ಡಾ.ಎಂ.ಎಂ. ಕಲಬುರ್ಗಿ, ಡಾ. ತೀ.ನಂ. ಶಂಕರನಾರಾಯಣ, ಡಾ. ಕಾಳೇಗೌಡ ನಾಗವಾರ ಇವರೇ ಮೊದಲಾದ ವಿದ್ವಾಂಸ ಬಳಗ ನನ್ನ ಪ್ರಕಾಶನಕ್ಕೆ ಹೆಸರು ತಂದುಕೊಟ್ಟಿರುವರು; ಗೌರವ ತಂದುಕೊಟ್ಟಿರುವರು.

ಮೊದಲಿನಿಂದಲೂ ಡಾ. ಜಿಎಸ್‌ಎಸ್ ಅವರೊಡನೆ ನನಗೆ ಮಧುರವಾದ ಸಂಬಂಧ. ನಾನು ಒಂದು ಒಳ್ಳೆಯ ಲೇಖನ ಬರೆದಾಗ ಓದಿ ಮೆಚ್ಚುಗೆ ಸೂಚಿಸುತ್ತಿದ್ದರು. ನಾನು 1966-68ರ ಅವಧಿಯಲ್ಲಿ ಸೃಜನಶೀಲ ಸಾಹಿತ್ಯದ ಕಡೆಗೆ ಹೊರಳುತ್ತಿದ್ದವನು ಡಾ. ಜಿಎಸ್‌ಎಸ್ ಹಾಗೂ ಡಾ. ಎಂ. ಚಿದಾನಂದಮೂರ್ತಿಯವರ ಪ್ರೋತ್ಸಾಹ-ಬೆಂಬಲದಿಂದಾಗಿ ಸಂಶೋಧನೆಯ ಕಡೆಗೆ ಹೊರಳಿದೆ. ನಾನೇನಾದರೂ ಒಂದಿಷ್ಟು ಒಳ್ಳೆಯ ಕೆಲಸ ಮಾಡಿದ್ದರೆ, ಅದು ಈ ಇಬ್ಬರು ಹಿರಿಯರಿಂದಾಗಿ. ನನಗೆ ಕನ್ನಡ ಅಧ್ಯಯನ ಕೇಂದ್ರದಲ್ಲಿ ಸ್ವಾತಂತ್ರ್ಯದ ಜೊತೆಗೆ ಬರವಣಿಗೆಗೆ ಸಾಕಷ್ಟು ಸಮಯ ಹಾಗೂ ಒಳ್ಳೆಯ ಸಾಹಿತ್ಯಕ

ಪರಿಸರ ಲಭ್ಯವಾಯಿತು. ನನಗೆ ಶಾಂತಿ ಸಮಾಧಾನ ಈ ಪರಿಸರದಲ್ಲಿ ದೊರೆತದ್ದರಿಂದ ನಾನೆಂದೂ ಬದುಕಿನಲ್ಲಿ ಸದಾ ಕೊರಗುವ ಒಂದು ವರ್ಗಕ್ಕೆ ಸೇರಲಿಲ್ಲ. ನನಗೆ ಪಾಠ ಮಾಡುವುದರಿಂದ ದೊರೆತಷ್ಟೇ ತೃಪ್ತಿ ಒಂದು ಸಂಶೋಧನ ಲೇಖನ ಬರೆಯುವುದರಲ್ಲೂ ಸಿಗುತ್ತಿತ್ತು. ನನ್ನ ಬರವಣಿಗೆಗೆ 'ಸಾಧನೆ' ತ್ರೈಮಾಸಿಕದಲ್ಲಿ ಅವಕಾಶವನ್ನು ಕಲ್ಪಿಸಿ ಪ್ರೋತ್ಸಾಹಿಸುತ್ತಿದ್ದರು ಡಾ. ಜಿಎಸ್ಎಸ್.

ಡಾ. ಜಿ.ಎಸ್.ಎಸ್ ಒಳ್ಳೆಯ ಪ್ರಾಧ್ಯಾಪಕರು, ಆಡಳಿತಗಾರರು, ಪ್ರಸಿದ್ಧ ಲೇಖಕರು. ಅವರು ಯೋಜಿಸಿದ ಕಾರ್ಯ ಕೂಡಲೇ ಆಗಿಬಿಡಬೇಕು. ಅದಕ್ಕಾಗಿ ಅವರು ನಮ್ಮ ಮೇಲೆ ಹೇರುತ್ತಿದ್ದ ಒತ್ತಡ ಸಾತ್ವಿಕವಾದುದು. ಹೀಗಾಗಿ ಒಮ್ಮೊಮ್ಮೆ ಮನಸ್ತಾಪವಾಗುತ್ತಿದ್ದಿತು. ಯಾರೋ ಆಗದವರು ನಮ್ಮ ವಿಶ್ವಾಸದ ನಡುವೆ ಬಿರುಕು ಮೂಡಿಸುತ್ತಿದ್ದರು. ಆದರೆ ನಮ್ಮ ವಿಶ್ವಾಸ ತಾತ್ವಿಕವಾಗಿ ಗಟ್ಟಿಯಾದದ್ದರಿಂದ ಬಹಳ ದಿವಸ ಇಂತಹ ಆಟ ನಡೆಯುತ್ತಿರಲಿಲ್ಲ. ನಾವು ಮತ್ತೆ ಹತ್ತಿರ ಬರುತ್ತಿದ್ದೆವು.

ಏನೇ ಇರಲಿ, ಡಾ. ಜಿ.ಎಸ್. ಶಿವರುದ್ರಪ್ಪನವರು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಶಿಲ್ಪಿಗಳು. ಇಲ್ಲಿನ ಸಾಹಿತ್ತಿಕ ಚಟುವಟಿಕೆಗಳ ಮೂಲಕ ಇಡೀ ಕರ್ನಾಟಕ ಹಾಗೂ ಹೊರನಾಡಿನ ಸಾಹಿತ್ಯಾಸಕ್ತರು, ವಿದ್ವಾಂಸರು ಸಂಪರ್ಕ ಬೆಳೆಸುವಂತಾಯಿತು. ವಿಶ್ವವಿದ್ಯಾಲಯದ ಘನತೆ ಹೆಚ್ಚಿತು. ಇಲ್ಲಿ ನಡೆದ ವಿಚಾರ ಸಂಕಿರಣಗಳು ನವೋದಯ-ನವ್ಯ-ನವ್ಯೋತ್ತರ ಸಾಹಿತ್ಯ ಚಟುವಟಿಕೆಗಳ ಕ್ರಿಯಾತ್ಮಕ ಜಿಜ್ಞಾಸೆ ನಡೆಸಿದುವು. ಇದರ ಫಲವಾದ ಪ್ರಕಟಣೆಗಳು ಹೊಸಗನ್ನಡ ಸಾಹಿತ್ಯ ಚರಿತ್ರೆಗೆ ಅಧಿಕೃತ ಮೂಲ ಸಾಮಗ್ರಿಗಳನ್ನು ಒದಗಿಸಿವೆ; ಒಂದರ್ಥದಲ್ಲಿ ಅವು ಹೊಸಗನ್ನಡ ಸಾಹಿತ್ಯ ಚರಿತ್ರೆಗಳೇ. ಯುವ ಪ್ರತಿಭೆಗಳನ್ನು ಗುರುತಿಸುವ, ಮೆಚ್ಚಿ ಪ್ರೋತ್ಸಾಹಿಸುವ, ಅವರಲ್ಲಿ ಬರವಣಿಗೆಯ ಭರವಸೆ ಮೂಡಿಸುವ, ತಮ್ಮ 'ಗುರು'ತ್ವದಿಂದ ಅನೇಕ ಮಂದಿ ಯುವ ವಿದ್ವಾಂಸರನ್ನು ಸೃಷ್ಟಿಸಿದ, ಸೃಜನಾತ್ಮಕ ಪರಿಸರವನ್ನು ನಿರ್ಮಿಸಿದ, ಆ ಪರಿಸರದಲ್ಲಿ ಪುಟಿಯುವ ಉತ್ಸಾಹದಿಂದ ಕಾರ್ಯೋನ್ಮುಖರಾದ ಡಾ. ಜಿಎಸ್ಎಸ್ ಅವರಿಗೆ ದಣಿವೆಂಬುದೇ ಇಲ್ಲ—ಇಂದಿಗೂ—ಆ ಜೀವಂತಿಕೆಯ ಲಕ್ಷಣ ಅವರಿಗೆ ಮುಪ್ಪನ್ನು ಮರೆಯುವಂತೆ ಮಾಡಿದೆ.

■

# ಕನ್ನಡ ಬದುಕನ್ನು ಕಟ್ಟುವುದರಲ್ಲಿ ತೊಡಗಿದವರು

ಡಾ॥ ಪಿ. ವಿ. ನಾರಾಯಣ

**ಕ**ನ್ನಡ ಕೇವಲ ಒಂದು ಭಾಷೆಯಲ್ಲ; ಅದೊಂದು ಜೀವನ ವಿಧಾನ. ಹಿಂದೆಯೂ ಕನ್ನಡ ಎಂಬುದು ದೇಶವಾಚಿ ಮತ್ತು ಭಾಷಾವಾಚಿಯಾಗಿ ಬಳಕೆಯಲ್ಲಿತ್ತು. ಆ ಭಾಷೆಯನ್ನಾಡುವ ಸಮುದಾಯದ ಬದುಕಿನ ಎಲ್ಲ ಅಂಶಗಳನ್ನೂ ಒಳಗೊಂಡದ್ದೇ ಕನ್ನಡ. ಹಾಗಾಗಿ, ಕನ್ನಡ ಕಟ್ಟುವ ಕೆಲಸವೆಂದರೆ, ಕನ್ನಡದ ಸಮಷ್ಟಿ ಬದುಕನ್ನು ಯಾವ ಅಂಶದಲ್ಲಾದರೂ ಸರಿ, ಶ್ರೀಮಂತಗೊಳಿಸುವ ಕೆಲಸ ಎಂದರ್ಥ. ಜಿಎಸ್ಎಸ್ ಅವರೇ ತಮ್ಮದ್ದೊಂದು ಕವನದಲ್ಲಿ ('ತೇರನೆಳೆವರು ನಾವು') ಕನ್ನಡ ಬದುಕನ್ನು ತೇರಿಗೆ ಹೋಲಿಸಿದ್ದಾರೆ. ಆ ಕವನದಲ್ಲಿ "ಓ ಎಳೆಯಿರೋ ಕನ್ನಡದ ತೇರ, ನೀವು ನಿಂತಿರುವಂಥ ನೆಲೆಗಳಿಂದ" ಎಂದು ಕವಿ ಕರೆ ಕೊಡುತ್ತಾರೆ. ಎಂದರೆ, ಕನ್ನಡದ ಕೆಲಸವೆಂಬುದು ಇಂಥ ಸ್ವರೂಪದ್ದೇ ಎಂದು ನಿಗದಿಪಡಿಸಿ ಹೇಳುವಂತಿಲ್ಲ. ಆ ದೃಷ್ಟಿಯಿಂದ ನೋಡಿದರೆ, ಜಿಎಸ್ಎಸ್ ಅವರದು ಬಹುಮುಖಿಯಾದ ಕನ್ನಡದ ಕೆಲಸ.

ಉಪಜೀವನದ ಸಾಧನವೆಂದೋ, ನಿರ್ವಾಹವಿಲ್ಲವೆಂದೋ, ಅಥವಾ ಬೇರೇನೂ ತಲೆಗೆ ಹತ್ತದ ಕಾರಣದಿಂದಲೋ ಕನ್ನಡದ ಮೇಷ್ಟರಾಗಿರುವವರು ಅನೇಕರಿರಬಹುದು. ಆದರೆ ಜಿಎಸ್ಎಸ್ ಅವರು ಒಲಿದು ಆದದ್ದು ಕನ್ನಡ ಕಲಿಸುವ ಕೆಲಸವನ್ನು. ಅವರ ಭಾವುಕ ಮನಸ್ಸು ಕವನವನ್ನು ನಿರ್ಮಿಸುವಷ್ಟು ಸಹಜ ಶ್ರದ್ಧೆಯಿಂದಲೇ ಕಲಿಸುವ ಕೆಲಸವನ್ನೂ ಮಾಡಿತು. ಅದಕ್ಕೇ ಅವರು ಬಹುಮಂದಿಗೆ ನೆಚ್ಚಿನ ಗುರುಗಳು. ಅವರು ಮಾಡುತ್ತಿದ್ದ ಕಾವ್ಯಮೀಮಾಂಸೆಯ ಪಾಠವೆಂದರೆ, ವಿದ್ಯಾರ್ಥಿಗಳಿಗೆ ತೇಲು ಲೋಕ; ಬೇರೊಂದು ಪ್ರಪಂಚದಲ್ಲಿರುವಂತಹ ಅನುಭವ. ನಿರರ್ಗಳವಾಗಿ, ತಮ್ಮ ವಿಸ್ತಾರ ಓದಿನಿಂದ ಹೆಕ್ಕಿ ತೆಗೆದ ನಿದರ್ಶನಗಳ ಮೂಲಕ ಕಾವ್ಯದ ಸ್ವರೂಪವನ್ನು, ವಿವಿಧ ಕಾವ್ಯ ಪರಿಕರಗಳ ಸ್ವರೂಪವನ್ನು ವಿವರಿಸುತ್ತ ತಮ್ಮದೇ ಅನುಭವವಲಯಕ್ಕೆ ವಿದ್ಯಾರ್ಥಿಗಳನ್ನೂ ಸೆಳೆದೊಯ್ಯುವ ಮಾಂತ್ರಿಕತೆ ಅವರ ಪ್ರವಚನದ್ದು. ಕಾವ್ಯಗಳನ್ನು ಪಾಠಮಾಡುವ ವೈಖರಿಯೂ ಅಂಥದೇ—ಕಾವ್ಯದಾಳಕ್ಕೆ ಇಳಿದು ಒಳನೋಟಗಳಿಂದ ಕೂಡಿದ ವಿಶ್ಲೇಷಣೆಗೆ ಅವರು ಹೆಸರಾದವರು.

ಜಿಎಸ್‌ಎಸ್ ಅವರು ಬೇರೆ ಬೇರೆ ವಿಶ್ವವಿದ್ಯಾಲಯಗಳಲ್ಲಿ ಉನ್ನತ ತರಗತಿಗಳವರೆಗೆ ಪಾಠ ಹೇಳಿದವರು. ಪಾಠದ ಜೊತೆಗೆ ಕನ್ನಡದ ಕೆಚ್ಚನ್ನು ತುಂಬಿದವರು; ಕನ್ನಡ ಕೆಲಸದ ಪರಿಯನ್ನು ಮನಗಾಣಿಸಿದವರು. ಬೆಂಗಳೂರು ವಿಶ್ವವಿದ್ಯಾಲಯವು ಸ್ಥಾಪಿತವಾದ ಕೆಲವು ವರ್ಷಗಳಲ್ಲಿಯೇ ಅದರ ಕನ್ನಡ ಅಧ್ಯಯನ ಕೇಂದ್ರದ ಮುಖ್ಯಸ್ಥರಾಗಿ ಅಕ್ಷರಶಃ ಅದನ್ನು ಕಟ್ಟಿದವರು. ತಮ್ಮ ನೈಜ ಕಳಕಳಿಯಿಂದ, ಆಗಬೇಕಾದ ಕೆಲಸದ ಸ್ವರೂಪದ ಖಚಿತ ತಿಳಿವಳಿಕೆಯಿಂದ ಕನ್ನಡ ಅಧ್ಯಯನ ಕೇಂದ್ರಕ್ಕೆ ಭದ್ರ ಬುನಾದಿ ಹಾಕಿದವರು. ಅವರು ಕೇಂದ್ರದ ನಿರ್ದೇಶಕರಾಗಿ ಸಂಘಟಿಸಿದ ಹತ್ತಾರು ವಿಚಾರ ಸಂಕಿರಣಗಳ ಮೂಲಕ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ವಿಮರ್ಶೆಯು ಬೆಳೆಯಬೇಕಾದ ಸ್ವರೂಪವನ್ನು, ತುಳಿಯಬೇಕಾದ ಹಾದಿಯನ್ನು ಖಚಿತಪಡಿಸಿದರು. ಪ್ರತಿ ವಿಚಾರ ಸಂಕಿರಣದಲ್ಲಿ ಮಂಡಿತವಾದ ಪ್ರಬಂಧಗಳನ್ನು, ನಡೆದ ಚರ್ಚೆಯ ಜೊತೆಯಲ್ಲಿ ವಿಶ್ವವಿದ್ಯಾಲಯವೇ ಪ್ರಕಟಿಸುವಂತೆ ಮಾಡಿರುವುದರಿಂದ ಅವರು ಆಗ ಮಾಡಿದ ಕೆಲಸ ಇಂದಿಗೂ ಕಾಣಿಸುತ್ತಿದೆ. ಅವರ ವಿದ್ವತ್ತು ಸಾಹಿತ್ಯದ ಎಲ್ಲ ಕಾಲಗಳ, ಎಲ್ಲ ಪ್ರಕಾರಗಳ ವಿಶಿಷ್ಟತೆಯನ್ನು ಗುರುತಿಸುವ ಸೂಕ್ಷ್ಮತೆಯನ್ನು ಹೊಂದಿದ್ದರಿಂದಾಗಿ, ವಿಚಾರ ಸಂಕಿರಣದ ವಿಷಯಗಳ ವ್ಯಾಪ್ತಿಯು ವಿಸ್ತಾರವಾಗಿರುವುದನ್ನು ಗಮನಿಸಬಹುದು. ಹಳೆಗನ್ನಡದ ವಿವಿಧ ಸಾಹಿತ್ಯ ಪ್ರಕಾರಗಳು, ಕವಿಗಳು, ವಿವಿಧ ಸಾಹಿತ್ಯಕ ಚಳುವಳಿಗಳು, ಆಧುನಿಕ ಕನ್ನಡ ಸಾಹಿತ್ಯದ ವಿವಿಧಾಂಶಗಳು—ಇವುಗಳ ಬಗ್ಗೆ ಮುಕ್ತ ಚರ್ಚೆಗೆ ಅವಕಾಶ ಒದಗಿಸಿ, ವಿಮರ್ಶೆಯ ಪರಿಧಿಯನ್ನು ಹಿಗ್ಗಿಸಿದ್ದಷ್ಟೇ ಅಲ್ಲ, ಭಿನ್ನಾಭಿಪ್ರಾಯಗಳ ನಡುವೆಯೂ ವಿಮರ್ಶಕರು ಹೊಂದಿರಬೇಕಾದ ಸೌಜನ್ಯಕ್ಕೆ, ವಿವಿಧ ನೆಲೆಯ ವಿಮರ್ಶಕನ್ನು ಒಂದೆಡೆ ಸೇರಿಸುವುದರ ಮೂಲಕ, ತಕ್ಕ ಭೂಮಿಕೆಯೊದಗಿಸಿದರು. ಜಿಎಸ್‌ಎಸ್ ಅವರು ಬೆಂಗಳೂರು ವಿಶ್ವವಿದ್ಯಾಲಯದ ನಿರ್ದೇಶಕರಗಿದ್ದಷ್ಟು ಕಾಲವೂ ವರ್ಷೇ ವರ್ಷೇ ನಿಯತವಾಗಿ ಈ ವಿಚಾರ ಸಂಕಿರಣಗಳನ್ನು ನಡೆಸಿ ಒಂದು ಪರಂಪರೆಯನ್ನೂ, ದಾಖಲೆಯನ್ನೂ ಅವರು ನಿರ್ಮಿಸಿದರು. ಬೇರೆ ಯಾವ ವಿಶ್ವವಿದ್ಯಾಲಯದಲ್ಲಾಗಲೀ, ಬೆಂಗಳೂರು ವಿಶ್ವವಿದ್ಯಾಲಯದಲ್ಲೇ ಅವರ ನಿವೃತ್ತಿಯ ನಂತರವಾಗಲೀ ಇದು ನಿಯತವಾಗಿ ವ್ಯವಸ್ಥಿತವಾಗಿ ನಡೆದುಕೊಂಡು ಬರಲಿಲ್ಲವೆಂಬ ಅಂಶವು ಜಿಎಸ್‌ಎಸ್ ಅವರ ಸಂಘಟನಾ ಸಾಮರ್ಥ್ಯಕ್ಕಷ್ಟೇ ಸಾಕ್ಷಿಯಾಗದೆ, ಅವರ ಕರ್ತೃತ್ವಶಕ್ತಿ, ಛಲವಂತಿಕೆ ಮತ್ತು ಸ್ಪಷ್ಟ ಚಿಂತನೆಗೆ ನಿದರ್ಶವಾಗಿದೆ.

ಇದಲ್ಲದೆ, ಅವರು 'ಸಾಹಿತ್ಯ ವಾರ್ಷಿಕ'ವೆಂಬ ಯೋಜನೆಯನ್ನು ಕನ್ನಡ ಅಧ್ಯಯನ ಕೇಂದ್ರದಲ್ಲಿ ಅಳವಡಿಸಿದರು. ಪ್ರತಿ ವರ್ಷವೂ ಕನ್ನಡದಲ್ಲಿ ಸಾವಿರಾರು ಪುಸ್ತಕಗಳು ಪ್ರಕಟಗೊಳ್ಳುತ್ತವೆ. ಅವುಗಳಲ್ಲಿ ಎಷ್ಟೋ ಹೊಸಬರಿಂದ ಸೃಷ್ಟಿತವಾದ ಗಟ್ಟಿ ಕಾಳುಗಳಿರಬಹುದು. ಅದನ್ನ ಗಮನಿಸಿ ಅವಕ್ಕೆ ಸಲ್ಲಬೇಕಾದ ವಿಮರ್ಶಾ ಗೌರವವನ್ನು ನೀಡುವ ಒಂದು ಅವಕಾಶವಿದು. ವಿವಿಧ ಸಾಹಿತ್ಯ ಪ್ರಕಾರಗಳಲ್ಲಿನ ಆಯಾ ವರ್ಷ ಪ್ರಕಟವಾದ ಪುಸ್ತಕಗಳನ್ನು ವರ್ಗೀಕರಿಸಿ ತಮ್ಮ ಇಲಾಖೆಯ ಅಧ್ಯಾಪಕರಿಂದ ಅವುಗಳ ಬಗ್ಗೆ ವಿಮರ್ಶಾತ್ಮಕ ಲೇಖನಗಳನ್ನು

ಬರೆಸಿ, "ಸಾಹಿತ್ಯ ವಾರ್ಷಿಕ" ಎಂಬ ಹೆಸರಿನಲ್ಲಿ ಅವನ್ನೆಲ್ಲ ಸಂಕಲಿಸಿ ಪ್ರಕಟಿಸಿದ್ದರಿಂದ ಪುಸ್ತಕಗಳಿಗೆ ಅಂದಂದಿಗೆ ಸಲ್ಲಬೇಕಾದ ಗಮನವು ಸಲ್ಲುವಂತಾಯಿತು. ಈ ಯೋಜನೆಯೂ ಅವರಿದ್ದಷ್ಟು ಕಾಲವೂ ನಿಯಮಿತವಾಗಿ ನಡೆದುಕೊಂಡು ಬಂದಿತು. ವಿವಿಧ ಮನೋಭಾವದಿಂದ ಕೂಡಿದ ತಮ್ಮ ಇಲಾಖೆಯ ಅಧ್ಯಾಪಕರಿಂದಲೇ ಈ ಕೆಲಸ ಮಾಡಿಸಿದುದು ಹೊರ ನೋಟಕ್ಕೆ ಸಾಧಾರಣವೆನಿಸಬಹುದಾದರೂ, ಅಧ್ಯಾಪಕರು ಜಿಎಸ್‌ಎಸ್ ಅವರೊಡನೆ ಸಹಕರಿಸಿದ್ದಕ್ಕೆ ಕಾರಣ ಅವರ ಮೇಲೆ ಅಧ್ಯಾಪಕರಿಗಿದ್ದ ಗೌರವ ಮತ್ತು ಅವರು ಯೋಜಿಸಿದ ಕೆಲಸ ಎಷ್ಟು ಮುಖ್ಯವೆಂಬ ಮನವರಿಕೆ.

ಸಮಗ್ರ ಸಾಹಿತ್ಯ ಚರಿತ್ರೆಯ ಯೋಜನೆ ಅವರು ನಿರ್ದೇಶಕರಾಗಿದ್ದಾಗ ನಿರ್ವಹಿಸಿದ ಮತ್ತೊಂದು ಮಹತ್ತರ ಕೆಲಸ. ಇಡೀ ಕನ್ನಡ ಸಾಹಿತ್ಯವನ್ನು ಅಂಗುಲ ಅಂಗುಲವಾಗಿ ವಿಮರ್ಶೆಗೆ ಒಳಪಡಿಸಿ, ಆಯಾ ಕಾಲದ ಭಾರತೀಯ ಹಾಗೂ ಜಾಗತಿಕ ನೆಲೆಯಲ್ಲಿ ತೂಗಿನೋಡುವ ಆ ಕೆಲಸವೂ ಕನ್ನಡ ಸಾಹಿತ್ಯ ಚರಿತ್ರೆಯನ್ನು ಪರಿಭಾವಿಸಬೇಕಾದ ಬಗೆಯನ್ನು ವಿಸ್ತರಿಸಿತು. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯೂ ಸಮಗ್ರ ಸಾಹಿತ್ಯ ಚರಿತ್ರೆಯ ಕೆಲಸಕ್ಕೆ ಕೈ ಹಾಕಿದರೂ, ಅಲ್ಲಿನ ಲೇಖನಗಳನ್ನು ರಚಿಸಿದವರು ಅಲ್ಲಿ ಅಧ್ಯಾಪಕರುಗಳಾದರೆ, ಬೆಂಗಳೂರು ವಿಶ್ವವಿದ್ಯಾಲಯದ ಈ ಕೆಲಸದಲ್ಲಿ ಕನ್ನಡನಾಡಿನ ವಿವಿಧ ಪ್ರದೇಶಗಳ ನೂರಾರು ಮಂದಿ ವಿದ್ವಾಂಸರು ಕೈಜೋಡಿಸಿರುವುದು ಅದಕ್ಕೆ ಹೆಚ್ಚು ವ್ಯಾಪಕತೆಯನ್ನು ಒದಗಿಸಿದೆ.

ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ ಕನ್ನಡ ಎಂ.ಎ. ತರಗತಿಗಳ ಪಠ್ಯವಸ್ತುವನ್ನು ಹೊಸ ಅಗತ್ಯಗಳಿಗೆ ತಕ್ಕಂತೆ ಪರಿಷ್ಕರಿಸಿದರು. ಜಿಎಸ್‌ಎಸ್ ಅವರಿಗೆ ತೌಲನಿಕ ಅಧ್ಯಯನದಲ್ಲಿ ವಿಶೇಷ ಆಸಕ್ತಿಯಾದ್ದರಿಂದ ಕನ್ನಡ ಎಂ.ಎ. ವಿದ್ಯಾರ್ಥಿಗಳೂ ಪಾಶ್ಚಾತ್ಯ ಹಾಗೂ ಇತರ ಭಾರತೀಯ ಭಾಷೆಗಳ ಸಾಹಿತ್ಯದ ಜೊತೆ ತಮ್ಮ ಸಾಹಿತ್ಯವನ್ನು ತುಲನಾತ್ಮಕವಾಗಿ ಓದುವ ಅವಕಾಶವನ್ನು ಒದಗಿಸಿಕೊಟ್ಟರು. ಅದಕ್ಕೆ ಅನುಗುಣವಾಗಿ ತಾವೇ ತೌಲನಿಕ ಸಾಹಿತ್ಯಕ್ಕೆ ಬೇಕಾದ ಹಲವಾರು ಕೃತಿಗಳ ರಚನೆಯನ್ನು ಮಾಡಿದುದಲ್ಲದೆ, ಇತರರನ್ನೂ ಅದಕ್ಕೆ ಪ್ರೇರಿಸಿದರು. ಸ್ನಾತಕ ವಿದ್ಯಾರ್ಥಿಗಳಿಗೆ ಬೇಕಾದ ಪಠ್ಯಪುಸ್ತಕಗಳನ್ನು ನಿರ್ಮಿಸಲು ತಕ್ಕ ಸನ್ನಿವೇಶವನ್ನು ನಿರ್ಮಾಣ ಮಾಡಿದರು. 'ಸಾಧನೆ' ಎಂಬ ತ್ರೈಮಾಸಿಕವನ್ನು ಪ್ರಾರಂಭಿಸಿ, ಅದು ನಿಜವಾದ ಅರ್ಥದಲ್ಲಿ ನಿಯತಕಾಲಿಕವಾಗುವಂತೆ ನೋಡಿಕೊಂಡರು. ಅದು ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳನ್ನಲ್ಲದೆ, ಇತರ ಜ್ಞಾನಶಾಖೆಗಳಿಗೆ ಸಂಬಂಧಿಸಿದ ಲೇಖನಗಳನ್ನೂ ಪ್ರಕಟಿಸಿ ಕನ್ನಡ ಭಾಷೆಯು ಎಲ್ಲ ಶಿಸ್ತುಗಳ ಅಭಿವ್ಯಕ್ತಿಗೆ ಸಜ್ಜುಗೊಳ್ಳುವ ಹಾಗೆ ಮಾಡುವುದಲ್ಲಿ ತಮ್ಮ ಪಾಲಿನ ಕರ್ತವ್ಯವನ್ನು ನಿರ್ವಹಿಸಿದರು. ಆ ಪತ್ರಿಕೆಯು ವಿಶೇಷ ಸಂದರ್ಭಗಳಿಗೆ ಸ್ಪಂದಿಸಿ ವಿಶೇಷ ಸಂಚಿಕೆಗಳನ್ನು ಹೊರತಂದಿತು. ಅವರು ತಮ್ಮ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಪದವಿಗಾಗಿ ಅಧ್ಯಯನ ಮಾಡಿದವರಿಗೆ ಸೂಚಿಸಿರುವ ಅಧ್ಯಯನ ವಿಷಯಗಳನ್ನು ಗಮನಿಸಿದರೆ, ಅವರ ದೃಷ್ಟಿಯ

ಪರಿಚಯವಾಗುತ್ತದೆ. ಅವರ ಅನೇಕ ಶಿಷ್ಯರುಗಳು ಇಂದು ಕನ್ನಡದ ಉತ್ತಮ ವಿಮರ್ಶಕರಾಗಿರುವುದರಲ್ಲಿ ಜಿಎಸ್‌ಎಸ್ ಅವರ ಪಾಲೂ ಇದೆ.

ಜಿಎಸ್‌ಎಸ್ ಅವರು ನಿವೃತ್ತಿಯ ನಂತರ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದರು. ಎಲ್ಲಿದ್ದರೂ ಯೋಜನಾಬದ್ಧ ಕೆಲಸಕ್ಕೆ ಹೆಸರಾದ ಅವರು ಇಲ್ಲಿಯೂ ಒಂದು ದೊಡ್ಡ ಯೋಜನೆಯನ್ನು ಕೈಗೆತ್ತಿಕೊಂಡರು. ಅದೆಂದರೆ "ಭಾರತೀಯ ಸಾಹಿತ್ಯ ಸಮೀಕ್ಷೆ" ಎಂಬ ಎರಡು ಬೃಹತ್ ಸಂಪುಟಗಳ ಪ್ರಕಟಣೆ. ಕೇರಳದ ಸಾಹಿತ್ಯ ಅಕಾಡೆಮಿಯು ಇಂಗ್ಲಿಷ್ ಭಾಷೆಯಲ್ಲಿ ಎಲ್ಲ ಭಾರತೀಯ ಭಾಷೆಗಳಲ್ಲಿನ ಸಾಹಿತ್ಯವನ್ನು ವಿವಿಧ ತಜ್ಞ ಲೇಖಕ-ವಿಮರ್ಶಕರಿಂದ ಬರೆಸಿ 'ಕಂಪಾರಿಟಿವ್ ಇಂಡಿಯನ್ ಲಿಟರೇಚರ್' ಎಂಬ ಹೆಸರಿನಲ್ಲಿ ಪ್ರಕಟಿಸಸಿತ್ತು. ಅದನ್ನು ಕನ್ನಡಕ್ಕೆ ತರುವುದು ಸೂಕ್ತವೆಂದು ಭಾವಿಸಿ ಜಿಎಸ್‌ಎಸ್ ಅವರು ಅದರ ಕನ್ನಡ ಭಾಷಾಂತರದ ಯೋಜನೆಯನ್ನು ಅಕಾಡೆಮಿಯ ಮೂಲಕ ಕೈಗೆತ್ತಿಕೊಂಡು ನಿರ್ವಹಿಸಿದರು. ಇದರಲ್ಲಿಯೂ ಕನ್ನಡ ನಾಡಿನ ನೂರಾರು ಮಂದಿ ವಿದ್ವಾಂಸರು ಅನುವಾದಕರಾಗಿದ್ದರು. ಬರಿಯ ಅನುವಾದ ಮಾಡಿಸುವುದಷ್ಟೇ ಅಲ್ಲ, ಅವನ್ನೆಲ್ಲ ಬೇರೆ ಬೇರೆಯವರ ಕೈಲಿ ಪರಿಶೀಲನೆಗೆ ಒಳಪಡಿಸಿ, ಅನುವಾದವು ಹೆಚ್ಚು ನಿಷ್ಕೃಷ್ಟವಾಗುವಂತೆ ನೋಡಿಕೊಂಡರು. ಟಿ.ಎಸ್. ಎಲಿಯಟ್‌ನಂತಹ ಕವಿಯು ಕನ್ನಡ ಸಾಹಿತ್ಯದ ಮೇಲೆ ಬೀರಿರುವ ಪ್ರಭಾವವನ್ನು ಗಮನಿಸಿ, ಆ ಕವಿಯ ಜನ್ಮ ಶತಮಾನವನ್ನು ಅಕಾಡೆಮಿ ಪ್ರಕಟಣೆಗಳ ಮೂಲಕ ಆಚರಿಸುವಂತೆ ನೋಡಿಕೊಂಡರು.

ಸಾಹಿತ್ಯ ಕ್ಷೇತ್ರದಲ್ಲಿ ಆರೋಗ್ಯಕರವಾದ ವಾತಾವರಣವನ್ನು ಉಳಿಸಿಕೊಳ್ಳಲು ಜಿಎಸ್‌ಎಸ್ ಮೊದಲಿನಿಂದಲೂ ಶ್ರಮಿಸಿದ್ದಾರೆ. ಅವರು ಜಾತಿವಿರೋಧಿಗಳು. ಅಭಿವ್ಯಕ್ತಿ ಸ್ವಾತಂತ್ರ್ಯದ ಪ್ರತಿಪಾದಕರು. ಇವಕ್ಕೆ ಧಕ್ಕೆಯೊದಗಿದಾಗಲೆಲ್ಲ ಅವರು ಸ್ಪಷ್ಟವಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಬಹು ಹಿಂದೆ ಜಾತಿವಾದಿಗಳು ಮಾಸ್ತಿಯವರ 'ಚೆನ್ನಬಸವ ನಾಯಕ' ಕೃತಿಯನ್ನು ಇತರ ಭಾರತೀಯ ಭಾಷೆಗಳಿಗೆ ಅನುವಾದಿಸುವ ಯೋಜನೆಗೆ ಅಡ್ಡಗಾಲಾಗಿ ನಿಂತ ಸಂದರ್ಭದಲ್ಲಿ ಜಿಎಸ್‌ಎಸ್ ಪ್ರತಿಭಟಿಸಿದ ಮುಖ್ಯರಲ್ಲಿ ಒಬ್ಬರು. ಹಾಗೆಯೇ ಮಾಸ್ತಿಯವರ 'ಚಿಕವೀರ ರಾಜೇಂದ್ರ' ಕೃತಿಯ ಬಗ್ಗೆ ವಿವಾದವೆದ್ದಾಗಲೂ ಅವರು ಮಾಸ್ತಿಯವನ್ನು ಸಮರ್ಥಿಸಿಕೊಂಡರು. ಈಚೆಗೆ ಎಚ್.ಎಸ್. ಶಿವಪ್ರಕಾಶರ 'ಮಹಾಚೈತ್ರ' ನಾಟಕದ ಬಗ್ಗೆ ಹಾಗೂ ನನ್ನ 'ಧರ್ಮಕಾರಣ' ಕಾದಂಬರಿಯ ಬಗ್ಗೆ ಜಾತ್ಯಂಧರು ಗುಲ್ಲೆಬ್ಬಿಸಿದಾಗ, ಜಿಎಸ್‌ಎಸ್ ಅಭಿವ್ಯಕ್ತಿ ಸ್ವಾತಂತ್ರ್ಯದ ಪರವಾಗಿ ದೃಢವಾಗಿ ನಿಂತರು. ಇತ್ತೀಚೆಗೆ ಜಾತ್ಯಂಧ ಸಂಸ್ಥೆಯೊಂದು ಅವರನ್ನು ಬಹಿಷ್ಕರಿಸುವ ನಿರ್ಣಯವನ್ನು ಮಾಡಿದುದು ಇನ್ನೂ ನಮ್ಮ ಜನ ಈ ವಿಚಾರದಲ್ಲಿ ಎಷ್ಟು ದೂರ ಸಾಗಬೇಕಾಗಿದೆಯೆಂಬುದಕ್ಕೆ ನಿದರ್ಶನ. ಯಾವ ಬೆದರಿಕೆಗಳಿಗೂ ಜಿಎಸ್‌ಎಸ್ ಸೊಪ್ಪು ಹಾಕದೆ ತಮ್ಮ ನಿಲವಿಗೆ ಎಂದೂ ಬದ್ಧರಾಗಿಯೇ ನಿಂತಿದ್ದಾರೆ.

ಕನ್ನಡದ ಬಗ್ಗೆ ಜಿಎಸ್ಎಸ್ ಅವರದು ಅಪ್ಪಟ ನಿಷ್ಠೆ. ಇದು ವೈಜ್ಞಾನಿಕತೆಯ ಬುನಾದಿಯ ಮೇಲೆ ನಿರ್ಮಾಣಗೊಂಡಿರುವಂಥದು. ಕನ್ನಡ ನಾಡಿನಲ್ಲಿ ಕನ್ನಡಕ್ಕೆ ಪರಮೋಚ್ಚ ಸ್ಥಾನ ದೊರೆಯಬೇಕಾದುದನ್ನು ಯಾವ ವಿಚಾರವಂತನೂ ವಿರೋಧಿಸಲಾರ. ಕನ್ನಡದ ಹಿತಾಸಕ್ತಿಗೆ ಧಕ್ಕೆ ಬಂದಂತೆನಿಸಿದಾಗೆಲ್ಲ ಅವರು ತಮ್ಮ ಪ್ರತಿಭಟನೆಯನ್ನು ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ವ್ಯಕ್ತಪಡಿಸಿದ್ದಾರೆ. ನಾನು ಬೆಂಗಳೂರಿನ ಸಾಹಿತಿಗಳ ಕಲಾವಿದರ ಬಳಗ ಹಾಗೂ ಕನ್ನಡ ಶಕ್ತಿ ಕೇಂದ್ರಗಳ ಜೊತೆ ಅವುಗಳ ಸ್ಥಾಪನೆಯ ಕಾಲದಿಂದ ಈಚಿನವರೆಗೆ ನಿಕಟ ಸಂಪರ್ಕವಿರಿಸಿಕೊಂಡಿದ್ದವನು; ಅವುಗಳ ಪದಾಧಿಕಾರಿಯಾಗಿದ್ದವನು. 1982ರಲ್ಲಿ ಗೋಕಾಕ್ ಚಳುವಳಿಯು ನಡೆದಾಗ ಬೆಂಗಳೂರಿನಲ್ಲಿ ಅದರ ಮುಂಚೂಣಿಯಲ್ಲಿದ್ದದ್ದು ಸಾಹಿತಿಗಳ ಕಲಾವಿದರ ಬಳಗ. ಅದು ಹಮ್ಮಿಕೊಂಡ ಎಲ್ಲ ಚಳುವಳಿಗೆ ಜಿಎಸ್ಎಸ್ ತಮ್ಮ ಬೆಂಬಲವನ್ನು ನೀಡಿದ್ದು ಮಾತ್ರವಲ್ಲದೆ, ಹಲವಾರು ಸಂದರ್ಭಗಳಲ್ಲಿ ನೇರವಾದ ಪ್ರತಿಭಟನಾ ಕಾರ್ಯಕ್ರಮಗಳಿಗೆ ಅವರು ಸ್ವತಃ ಬಂದಿದ್ದರು ಕೂಡಾ. ಅವರ ಬಗ್ಗೆ ಬಲ್ಲ ಸರ್ಕಾರವು, ಅವರ ಮತ್ತು ಅವರಂತಹವರ ಮಾತಿಗೆ ಬೆಲೆ ಕೊಟ್ಟು ಅನೇಕ ಸಲಹೆಗಳನ್ನು ಒಪ್ಪಿಕೊಳ್ಳುತ್ತಿತ್ತು. ಹಾಗೆಯೇ ಅನಂತರದ ವರ್ಷಗಳಲ್ಲಿ ಕನ್ನಡ ಶಕ್ತಿ ಕೇಂದ್ರದ ಕಾರ್ಯಕ್ರಮಗಳಲ್ಲೂ ಅವರು ಭಾಗವಹಿಸಿದ್ದಾರೆ. ಜಿಎಸ್ಎಸ್ ಅವರದು ಸ್ವಲ್ಪ ಸಂದಣಿದೂರ ಸ್ವಭಾವ. ಮೆರವಣಿಗೆ-ಧರಣಿಯಂತಹ ಕಾರ್ಯಕ್ರಮಗಳಲ್ಲಿ ಅವರು ಸಾಮಾನ್ಯವಾಗಿ ಸೇರಲಾರರು. ಆದರೆ ಕಾರ್ಯಕ್ರಮದ ಹಿಂದಿನ ನೈಜ ಕಳಕಳಿಗೆ ಓಗೊಡುವ ಅವರು ಕನ್ನಡಕ್ಕಾಗಿ ತಮ್ಮ ವೈಯಕ್ತಿಕ ಇಷ್ಟಾನಿಷ್ಟಗಳನ್ನು ಲೆಕ್ಕಿಸುವುದಿಲ್ಲ. ಈಗಲೂ ಅವರು ಹಾಗೆಯೇ. ಕನ್ನಡವೆಂದರೆ ಕಣ್ಣಲ್ಲಿ ನೀರು ತಂದುಕೊಂಡು ಕಂಠ ಗದ್ಗದಗೊಳಿಸಿಕೊಳ್ಳುವ ಅಥವಾ ಮೈಮೇಲೆ ಬಂದವರಂತೆ ನಡೆದುಕೊಳ್ಳುವ ಸ್ವಭಾವದವರಲ್ಲ ಅವರು. ಅವರ ಕನ್ನಡ ಪ್ರೀತಿಯ ಹಿಂದೆ ವೈಚಾರಿಕ ಹಿನ್ನೆಲೆಯಿರುತ್ತದೆ. ಕನ್ನಡದ ಉದ್ಧಾರವು ಕೇವಲ ಘೋಷಣೆಗಳಿಂದ ಆಗಲಾರದು, ಅದು ಅಭಿಮಾನಪೂರ್ವಕವಾದ ಕ್ರಿಯಾಶೀಲತೆಯಿಂದ ಸಾಧಿತವಾಗುವಂಥದು ಎಂಬುದನ್ನು ದೃಢವಾಗಿ ನಂಬಿದವರು. ಹಾಗಾಗಿ ಅವರ ಕೂಗು ಎಷ್ಟೋ ವೇಳೆ ಗಟ್ಟಿಯಾಗಿರದಿರಬಹುದು, ಆದರೆ ಅದು ಖಚಿತವಾದ್ದು ಎಂಬುವರಲ್ಲಿ ಸಂದೇಹ ಬೇಡ. ಅವರು ಕನ್ನಡದ ಬಗ್ಗೆ ಆಲೋಚಿಸುವ ರೀತಿ ಎಂತಹದು ಎಂಬುವನ್ನು ಅರಿಯಲು ದಾವಣಗೆರೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಅವರು ಮಾಡಿದ ಭಾಷಣವನ್ನು ಓದಬೇಕು. "ಕನ್ನಡವೆಂಬುದು ಕೆಚ್ಚಿಗೆ ನಚ್ಚಿಗೆ / ಆತ್ಮ ಪ್ರತ್ಯಯದಂತಃಸತ್ವಕೆ / ಕನ್ನಡ ಜನಗಣನಾಯಕ ಸ್ಫೂರ್ತಿಗೆ / ಅಧಿದೈವದ ಹೆಸರು" ('ಕನ್ನಡ ರಾಜ್ಯೋದಯ') ಎಂಬ ಸಾಲುಗಳು ಜಿಎಸ್ಎಸ್ ಅವರು ಕನ್ನಡದ ಬಗ್ಗೆ ಇರಿಸಿಕೊಂಡಿರುವ ಭಾವನೆಯನ್ನು ಸಮರ್ಥವಾಗಿ ವಿವರಿಸುತ್ತವೆ.

ಜಿಎಸ್ಎಸ್ ಅವರು ಕನ್ನಡ ಕಟ್ಟುವ ಕೆಲಸವನ್ನು ಹೆಚ್ಚು ಅರ್ಥಪೂರ್ಣವಾಗಿಯೂ ಸದೃಢವಾಗಿಯೂ ಮಾಡಿರುವುದು ತಮ್ಮ ಬರಹಗಳ ಮೂಲಕ. ಅವರು ವಿಶೇಷವಾಗಿ

ಕವಿ ಮತ್ತು ವಿಮರ್ಶಕರೆಂದು ಖ್ಯಾತರಾದವರು. ಅವರ ವಿಮರ್ಶನ ನಿಲವಿನ ಬಗ್ಗೆ ಆಗಲೇ ಗಮನ ಹರಿಸಿದ್ದೇವೆ. ಇನ್ನು ಅವರ ಕಾವ್ಯ. ಯಾವ ಸಾಹಿತ್ಯಕ ಚಳುವಳಿಗಳಿಗೂ ನೇರವಾಗಿ ಸೇರದೆ, ಎಲ್ಲ ಕಡೆಯಿಂದಲೂ ಗುಣಾತ್ಮಕ ಅಂಶಗಳನ್ನು ಸ್ವೀಕರಿಸಿ ತಮ್ಮದೇ ಮಾರ್ಗವನ್ನು ರೂಪಿಸಿಕೊಂಡಿರುವವರು ಅವರು. ಅವರನ್ನು ಸಮನ್ವಯದ ಕವಿ ಎಂದು ಕರೆಯುವುದೂ ಸರಿಯಲ್ಲ. ಕೆಲವು ಚಳುವಳಿಗಳ ನಡುವೆ ನಿಂತು ಎರಡು ಕಡೆಗೂ ಕೈಚಾಚಿ ಅಲ್ಲಿಂದ ಒಂದಷ್ಟು ಇಲ್ಲಿಂದ ಒಂದಷ್ಟು ಸೆಳೆದುಕೊಂಡು ಅವರು ಎಡಬಿಡಂಗಿಯಾಗಿ ನಿಂತವರಲ್ಲ. ಆರ್ಭಟವಿಲ್ಲದ, ಭ್ರಮೆಯಿಲ್ಲದ, ಹುಸಿ ಆದರ್ಶಗಳಿಲ್ಲದ, ಇಹದೂರವಾದ ಆಧ್ಯಾತ್ಮಿಕತೆಗೆ ಜೋತುಬೀಳದ ತಮ್ಮದೇ ಆದ ನಿಲುವುಗಳನ್ನು ಹೊಂದಿದ ಧೋರಣೆಯನ್ನು ಪಡೆದವರು ಅವರು. "ಪ್ರೀತಿಯಿಲ್ಲದ ಮೇಲೆ ಹೂವು ಅರಳೀತು ಹೇಗೆ? ಮೋಡ ಕಟ್ಟೀತು ಹೇಗೆ? ಹನಿಯೊಡೆದು ಕೆಳಗಿಳಿದು ಹಸಿರು ಮೂಡೀತು ಹೇಗೆ?" ('ಪ್ರೀತಿ ಇಲ್ಲದ ಮೇಲೆ') ಎಂದು ಪ್ರಶ್ನಿಸುವ ಅವರ ಮಾತಿನಲ್ಲಿಯೇ ಉತ್ತರವೂ ಅಡಗಿದೆ. ಮಾನವೀಯ ನೆಲೆಯಿಂದ ಮಾತ್ರವೇ ಮಾನವನ ಬದುಕು ಹಸನಾದೀತು ಎಂಬ ಖಚಿತ ನಿಲವು ಅವರದು. ಮೌಲ್ಯಗಳನ್ನು ತಮ್ಮ ಕವನಗಳಲ್ಲಿ ಪ್ರತಿಪಾದಿಸುವುದು ಮಾತ್ರವಲ್ಲದೆ, ಬದುಕು-ಬರಹಗಳ ನಡುವೆ ಕಂದಕವಿಲ್ಲದಂತೆ ಬಾಳುತ್ತಿರುವ ಅವರು ಕನ್ನಡ ಬದುಕನ್ನು ಈ ರೀತಿಯಲ್ಲಿಯೂ ಕಟ್ಟುವುದರಲ್ಲಿ ತೊಡಗಿದ್ದಾರೆ.

■

# ಆ ಪತ್ರಬಂಧು

ಡಾ. ಸುಮತೀಂದ್ರ ನಾಡಿಗ

**ನಾ**ನು ಜಿಎಸ್‌ಎಸ್ ಅವರನ್ನು ನೋಡುವ ಮುಂಚೆ ಶಿವಮೊಗ್ಗದ ಇಂಟರ್ ಮೀಡಿಯೆಟ್ ಕಾಲೇಜಿನಲ್ಲಿ ಓದುತ್ತಿದ್ದಾಗ (1951-53) ನನ್ನ ಕೆಲವು ಕವನಗಳನ್ನು ಇಂಗ್ಲಿಷ್ ಉಪನ್ಯಾಸಕರಾಗಿದ್ದ ಮತ್ತು ಶಿವರುದ್ರಪ್ಪನವರ ಸ್ನೇಹಿತರಾಗಿದ್ದ ಪ್ರಭುಪ್ರಸಾದರು ಅವರಿಗೆ ಕಳಿಸಿಕೊಟ್ಟಿದ್ದರು. ಪ್ರಭುಪ್ರಸಾದರಿಗೆ ಜಿಎಸ್‌ಎಸ್ ಬರೆದ ಪತ್ರದಲ್ಲಿ "ಒಟ್ಟಿನಲ್ಲಿ ಸುಮತೀಂದ್ರರು ನಿಜವಾಗಿಯೂ ಕವಿ" ಎಂದು ಬರೆದದ್ದು ನನ್ನ ನೆನಪು. ಇನ್ನೂ ಕೆಲವು ಹಿತವಾದ ಮಾತುಗಳನ್ನು ಬರೆದಿದ್ದರು. ನಾನು ಅದನ್ನು ಪ್ರತಿ ಮಾಡಿಟ್ಟುಕೊಂಡು, ಹೆಮ್ಮೆಯಿಂದ ಅನೇಕರಿಗೆ ತೋರಿಸಿದ್ದೆ. ಶಿವರುದ್ರಪ್ಪನವರಿಗೆ ಕೃತಜ್ಞತೆಯಿಂದ ಹೇಳಿದ್ದೆ. ಆಗ 22.5.53ರ ಪತ್ರದಲ್ಲಿ, ಮೈಸೂರಿನ ಜಯನಗರ 2815ನೇ ನಂಬರ್ ಮನೆಯಲ್ಲಿದ್ದ ಜಿಎಸ್‌ಎಸ್ ನನಗೆ ಬರೆದ ಮೊದಲ ಪತ್ರದಲ್ಲಿ ಹೀಗೆ ಹೇಳಿದ್ದರು (ಆಗ ತಾನೆ ನನಗೆ ಹದಿನೆಂಟು ವರ್ಷ ತುಂಬಿತ್ತು):

ಪ್ರಿಯ ಸುಮತೀಂದ್ರ,

ನಿಮ್ಮ ಅನಿರೀಕ್ಷಿತ ಕಾಗದ 'ಪ್ರಿಯ ಬಂಧು' ಎಂಬ ಆತ್ಮೀಯ ಸಂಬೋಧನೆಯ ದನಿಯಿಂದ ಬಂದು ನನ್ನೆದೆಯ ಬಾಗಿಲನ್ನು ತಟ್ಟಿತು. ನನ್ನ ಗೆಳೆಯರಾದ ಪ್ರಭುಪ್ರಸಾದರಿಗೆ ನಿಮ್ಮ ಬಗ್ಗೆ ನಾನು ಬರೆದ ಸಹೃದಯನ ಮೆಚ್ಚಿಗೆಯ ಮಾತುಗಳಿಂದ ನಿಮಗೆ ಹರ್ಷವಾಗಿದ್ದರೆ, ನಾನೂ ಆ ಸುಖದಲ್ಲಿ ಭಾಗಿ.

'ಕಾವ್ಯ ಅಹಂ ವಿನಷ್ಟಿಯ ಕಲೆ' ಎಂಬ ಮಾತಿನ ಅರ್ಥ ನಾವು ಬೆಳೆದಂತೆಲ್ಲಾ ಅದು ಬೆಳೆಯುತ್ತದೆ. ನೀವು ಕಳುಹಿಸಿರುವ ಈ ಪದ್ಯಗಳಲ್ಲಿ ಒಂದು ಕಡೆ "ನನ್ನ ತಿದ್ದಿದೆ ಕವಿತೆ, ತಿದ್ದುತಿದೆ ಈಗಲೂ, ಮುಂದೆಯೂ ತಿದ್ದುವುದು, ನೋಡಬೇಕು" ಎಂಬ ಮಾತಿನಲ್ಲಿ ನಿಮಗೆ ಆ ಮಾತು ಕೊಂಚ ಅರ್ಥವಾಗಿದೆ. ನನ್ನ ತಿದ್ದಿದೆ ಕವಿತೆ. ಹೌದು ತಿದ್ದುವುದು ಏನನ್ನು? ನಮ್ಮ ವಕ್ರತೆಯನ್ನು ಅಲ್ಲವೆ? ಆ ವಕ್ರತೆಗಳೇ 'ಅಹಂ' (ಅಹಂಗಿರ) ಇತ್ಯಾದಿ. ಕಾವ್ಯ ಎಂದರೆ ಉತ್ತಮ ಭಾವನೆಗಳ ಚಿಂತನ ಮತ್ತು ಪ್ರಕಾಶನ.... ನಮ್ಮ ಕಾವ್ಯಾಭ್ಯಾಸದಿಂದ ಬೇರೆಯವರಿಗೆ ಒಳ್ಳೆಯದಾಗುತ್ತದೋ ಬಿಡುತ್ತದೋ ಅದು ಬೇರೆ ವಿಚಾರ. ಆದರೆ

ಸಾಹಿತ್ಯದಿಂದ ನಮಗೆ ಮೊದಲು ಒಳಿತಾಗುತ್ತದೆ. ಅದು ನಮ್ಮನ್ನು ತಿದ್ದುತ್ತದೆ....

ನಿಮ್ಮ ಪದ್ಯಗಳಲ್ಲಿ ಒಂದು ದೋಷವಿದೆ. ಮೊದಲೆಲ್ಲಾ ಸರಿ, ಕಡೆಯ ಸಾಲುಗಳು ಬರಿಯ ಉಪದೇಶವಾಕ್ಯಗಳಾಗಿ ನಿಲ್ಲುತ್ತವೆ. ಹಾಗಾಗಬಾರದು... ಕವಿತೆಯಲ್ಲಿ 'ತತ್ವ' ಇದೆ ಎಂಬುದು ಗೊತ್ತೇ ಆಗಬಾರದು, ಕೊಂಚ ಸೂಕ್ಷ್ಮವಾಗಿ ನೋಡಿದರೆ ತತ್ವ ಇರಬೇಕು....

ನಾವೆಲ್ಲಾ ಕ್ಷೇಮ, ನೀವು ಇಲ್ಲಿಗೆ ಬರುವುದು ಯಾವಾಗ? ನಿಮ್ಮ ಕಾಗದ ಬಂದು ಐದಾರು ದಿನವಾಯಿತು. ನಾನೀಗ ಎಂ.ಎ. ಪರೀಕ್ಷೆಯನ್ನೆದುರಿಸಲು ಸಿದ್ಧನಾಗುತ್ತಿದ್ದೇನೆ. ಅದರಿಂದ ನಿಮಗೆ ಬರೆಯುವುದು ತಡವಾಯಿತು. ಮನ್ನಿಸಿ, ಇಂತೀ ವಂದನೆಗಳು, ತಲುಪಿದ್ದಕ್ಕೆ ಬರೆಯಿರಿ.

ನಿಮ್ಮ

**ಜಿ. ಎಸ್. ಶಿವರುದ್ರಪ್ಪ**

ಇದು ಜಿಎಸ್ಎಸ್ ಅವರಿಂದ ನನಗೆ ಬಂದ ಮೊದಲ ಪತ್ರ. ನಾನು ಅವರ ಅನೇಕ ಪತ್ರಗಳನ್ನು ಇಟ್ಟುಕೊಂಡಿದ್ದೇನೆ. ಹಾಗೆಯೇ ಲಂಕೇಶ್, ಚನ್ನಯ್ಯ, ತಿರುಮಲೇಶ, ನಿಸಾರ, ಗಿರಡ್ಡಿ, ಚಂಪಾ, ಶಾಂತಿನಾಥ ದೇಸಾಯಿ, ಯಶವಂತ ಚಿತ್ತಾಲ, ಗಂಗಾಧರ ಚಿತ್ತಾಲ, ಗಿರೀಶಕಾರ್ನಾಡ, ರಾಮಚಂದ್ರ ಶರ್ಮ, ಗೋಪಾಲಕೃಷ್ಣ ಅಡಿಗ, ಎಂ.ಜಿ. ಕೃಷ್ಣಮೂರ್ತಿ, ಜಿ.ಎಸ್. ಆಮೂರ, ಸಿದ್ಧಲಿಂಗ ಪಟ್ಟಣಶೆಟ್ಟಿ, ಪ್ರಭುಪ್ರಸಾದ, ಪ್ರಭುಶಂಕರ, ರಾಮಾನುಜನ್, ಕುರ್ತಕೋಟಿ, ಲಕ್ಷ್ಮಣರಾವ್, ತೇಜಸ್ವಿ, ಆಲನಹಳ್ಳಿ ಇನ್ನೂ ಅನೇಕರ ಪತ್ರಗಳನ್ನು ಜೋಪಾನವಾಗಿ ಇಟ್ಟುಕೊಂಡಿದ್ದೇನೆ. ಮುಂದೆ ಯಾವಾಗಲೋ ಕನ್ನಡ ಸಾಹಿತಿಗಳ ಜೀವನ ಚರಿತ್ರೆಗಳನ್ನು ಬರೆಯುವವರಿಗೆ ಇವು ಆಧಾರಗಳಾಗುತ್ತವೆ ಎಂದು ಈಗ ಅನಿಸುತ್ತದೆ.

ಈ ಲೇಖನದಲ್ಲಿ—ಜಿಎಸ್ಎಸ್ ನೆನಪಿನ ಸಂಚಿಕೆಗೆ ಬರೆಯುತ್ತಿರುವುದರಿಂದ—ಅವರ ಕೆಲವು ಪತ್ರಗಳನ್ನು ಆರಿಸಿ, ಅವರ ನೆನಪನ್ನೂ ಕೆದಕುತ್ತಿದ್ದೇನೆ. ಅವರ 7.12.53ರ ಪತ್ರದಲ್ಲಿ ಕೆಲವು ಸಾಲು ಹೀಗಿವೆ (ಆಗ ನಾನು ಸೆಂಟ್ರಲ್ ಕಾಲೇಜಿನಲ್ಲಿ ಫಸ್ಟ್ ಆನರ್ಸ್ ಓದುತ್ತಿದ್ದೆ):

*"ಗೆಳೆಯ ಸುಮತೀಂದ್ರ—*

.........

ನಮ್ಮ ಜಯಣ್ಣನಿಗೆ ಕಣ್ಣು ವಾಸಿಯಾಯಿತು. ಕಣ್ಣಾದ ಮೇಲೆ ಕಾಲು! ಎಂದರೆ ಸೈಕಲ್ಲಿನ ಚಕ್ರಕ್ಕೆ ಕಾಲು ಸಿಕ್ಕಿಸಿಕೊಂಡು ಗಾಯ ಮಾಡಿಕೊಂಡಿದ್ದಾನೆ. ಕುಂಟುತ್ತಾ ಮನೆಯ ತುಂಬ ಓಡಾಡುತ್ತಿದ್ದಾನೆ."

ಈ ಪತ್ರದಲ್ಲಿ ನಾನು ಬರೆದ ಒಂದು ನೀಳ್ಗವನವನ್ನು ಪ್ರಸ್ತಾಪಿಸಿದ್ದಾರೆ. ಅದು ಯಾವುದೆಂದು ನನಗೇ ನೆನಪಿಲ್ಲ. ನೆನಪಿಗೂ ಬರುತ್ತಿಲ್ಲ. ಅದಾದ ಮೇಲೆ "ನಿಮ್ಮ

ಕಾಲೇಜಿನಲ್ಲಿ ಕಾವ್ಯವಾಚನವಿರಬೇಕಲ್ಲ—ಬಿಳಿಗಿರಿಯವರದು. ನೀವು Secretary ಎಂದ ಮೇಲೆ ಕಾರ್ಯಕ್ರಮಕ್ಕೆ ಕೊರತೆಯೇ?" ಎಂದು ಬರೆದಿದ್ದಾರೆ. ಅದಾದಮೇಲೆ 1.1.1954ರ ಪತ್ರದಲ್ಲಿ ನನ್ನ ನೀಳ್ಗವನದ ಕೆಲವು ಸಾಲುಗಳನ್ನು ಹೇಗೆ ತಿದ್ದಬೇಕೆಂದು ಸೂಚಿಸಿ "ನಾನು ತಿಳಿದಂತೆಯೇ ನೀವು ಬದಲಾಯಿಸಬೇಕೆಂದು ಶಾಸನವೇನೂ ಅಲ್ಲ. ನಿಮ್ಮ ಅಂತರಂಗದ ಅನುಭವವನ್ನು ತಿಳಿದುಕೊಂಡು ಮಾಡಿ" ಎಂದು ಬರೆದಿದ್ದಾರೆ.

ನಾನೇಕೆ ಈ ಕಾಗದಗಳನ್ನಿಟ್ಟುಕೊಂಡೆ ಎಂದು ಈಗ ಅರ್ಥವಾಗುತ್ತಿದೆ. ಇದು ನನ್ನ ಅವರ ಸಂಬಂಧದ ವಿವರಗಳನ್ನು ನೆನಪುಮಾಡುವ ಗತಕಾಲದ ದಾಖಲೆ. ಈ ಪತ್ರಗಳು ನನಗೆ ಒಂದು ಜೀವನದ minute particulars ನ್ನು ತಿಳಿಸುತ್ತವೆ. ಬ್ಲೇಕ್ ಹೇಳುವಂತೆ minutely organised particulars ಕಲೆಯಾಗುತ್ತವೆ ಮತ್ತು ಶಾಸ್ತ್ರವಾಗುತ್ತವೆ. ಜಿಎಸ್ಎಸ್ ಅವರ 8-10-1954ರ ಪತ್ರ ಬೆಂಗಳೂರಿನ ಬಡಗನಾಡು ಸಂಘ ಹಾಸ್ಟೆಲಿನ ವಿಳಾಸಕ್ಕೆ ಬರೆದಿದ್ದರಲ್ಲಿ "ಗೆಳೆಯ ಸುಮತಿ" ಎಂದು ಆರಂಭಿಸುತ್ತಾರೆ. ಶಿವಮೊಗ್ಗದಿಂದ ಬರೆದ ಈ ಪತ್ರದಲ್ಲಿ "ನಿಮ್ಮ ಪತ್ರ ಬಂದಂದು ದುರ್ಗಾಷ್ಟಮಿಯ ಸಂಜೆ. ಕಾಗದ ಸವಿಯುತ್ತಾ circuit house ಕಡೆ ತಿರುಗಾಟಕ್ಕೆ ಹೋದೆ. ದೂರದ ಗಿರಿಪಂಕ್ತಿ ಕಡುನೀಲಿಯಾಗಿ ಕಾಳಿಯಂತೆ ಮಲಗಿತ್ತು. ಅದರ ಮೇಲೆ ಆರಕ್ತವಾದ ಸಂಜೆಯ ಹೊಳಪು. ಎತ್ತಲೂ ತಾನೇ ತಾನಾದ ಬಿತ್ತರದ ಹಸಿರು-ಚೆಲುವಿನ ಎದೆಯುಸಿರು! ನನಗೆ ಶಿವಮೊಗ್ಗ ಅದರ ನಿಸರ್ಗ ರಮ್ಯತೆಯಿಂದಾಗಿ ಬಲುಸೊಗಸು" ಎಂದು ಬರೆದಿದ್ದಾರೆ. ಜಿಎಸ್ಎಸ್ ಕಾವ್ಯದಲ್ಲಿ ಪ್ರಕೃತಿ ಕಂಡ ಹಾಗೆ ಜೀವನದಲ್ಲೂ ಅವರಿಗೆ ಕಾಣಿಸಿದ್ದಕ್ಕೆ ಈ ಸಾಲುಗಳು ಉದಾಹರಣೆಯಾಗಿವೆ. ಇದಾದ ನಂತರ 15.2.1955ರ ಪತ್ರ ಕುತೂಹಲಕರವಾಗಿದೆ. ಅದೂ ಶಿವಮೊಗ್ಗದಿಂದ ಬರೆದಿದ್ದು. ಅದರಲ್ಲಿ ಅಂದಿನ ನನ್ನ ಮನಸ್ಸಿನ ತಾಕಲಾಟವನ್ನು ಕುರಿತು ಹೀಗೆ ಬರೆಯುತ್ತಾರೆ:

"ನಿಮ್ಮ ಕೆಲವು ಭಾವನೆಗಳನ್ನು ಕೇಳಿ ನನಗೆ ನಾಲ್ಕು ಮಾತು ಹೇಳಬೇಕೆನ್ನಿಸಿತು. ನೀವು 'ನನಗೆ ಸರಿಯೆನ್ನಿಸಿದ್ದನ್ನು ಜನರಿಗೆ ಬೇಕಾದ ರೀತಿಯ ಸೋಗಿನಲ್ಲಿ ಬರೆಯಬೇಕೆಂದು ಕಡೆಗೆ ಅನ್ನಿಸಿತು' ಎಂದು ಬರೆದಿದ್ದೀರಿ. ನೀವು ಅಲ್ಲಿ "ನನಗೆ ಸರಿಯೆನ್ನಿಸಿದ್ದನ್ನು" ಎಂದು ಬಳಸಿರುವ ಮಾತು ಸರಿ. ಮೊದಲು ಕಾವ್ಯಸೃಷ್ಟಿಯಾಗುವುದು ತನ್ನ ಭಾವದ ಬಿಡುಗಡೆಗಾಗಿ-ಕವಿಯ ಮನಸ್ಸಿನ ತೃಪ್ತಿಗಾಗಿ. The expression itself is its first aim. ಅಲ್ಲಿ ನಾವು ನಮ್ಮ ಹೃದಯವನ್ನು ಕೇಳಬೇಕು ಅಷ್ಟೆ. 'ಜನತೆಗೆ ಬೇಕಾದ ಸೋಗಿನಲ್ಲಿ' ಏಕೆ? ಏಕೆ ಈ ಸೋಗು? why this market consciousness? ಮೊದಲು ನಾವು ಬರೆಯುವುದು ಕಾವ್ಯವನ್ನು. ಅದು ಜನತೆಗೆ ಬೇಕಾಗುತ್ತದೋ ಇಲ್ಲವೋ ಎಂಬ ಚಿಂತೆ ಮೊದಲೇ ತಲೆಗೆ ಬರಬಾರದು" ಎಂದು ಹೇಳಿದ್ದಾರೆ.

ಹೀಗೆ ನೇರವಾಗಿರಬೇಕು ಎಂದು ನನಗೆ ಬರೆದ ಜಿಎಸ್ಎಸ್ ನೇರವಾಗಿಯೇ ಇದ್ದುಕೊಂಡು ಅವರ ವರ್ತನೆ ಅಥವಾ ಮಾತು ಎಷ್ಟೋ ಸಾರಿ ಒರಟಾಗಿದ್ದು ಅನ್ನಿಸಿದೆ.

ಮರುಕ್ಷಣದಲ್ಲೇ ಅವರು ತಿದ್ದಿಕೊಂಡು ಇನ್ನೊಬ್ಬರ ಬಗ್ಗೆ ಅವರ ಕಾಳಜಿ ಮುಂದಾಗುವುದನ್ನು ನಾನು ನೋಡಿದ್ದೇನೆ. ಇದೇ ಪತ್ರದಲ್ಲಿ "ನಮ್ಮ ಜಯಕುಮಾರ ಈಗ ಮನೆತುಂಬ ಟ್ರೈಸಿಕಲ್ ತುಳಿದು ಗಲಾಟೆ ಮಾಡುತ್ತಿದ್ದಾನೆ. ಜಯಂತಿ ಮುದ್ದು ಮಾತಿನ ಹೊಳೆ ಹರಿಸುತ್ತಿದ್ದಾಳೆ"—ಎಂದು ಬರೆದಿದ್ದಾರೆ. ಈ ನಡುವೆ ನಾನು ಬರೆದ ಕವನಗಳನ್ನು ಅವರಿಗೆ ಕಳಿಸುತ್ತಿದ್ದೆ ಮತ್ತು ಅವರು ಬರೆದ ಕವನಗಳನ್ನು ನನಗೆ ಕಳಿಸುತ್ತಿದ್ದರು. ಅವರು ತಮ್ಮ ಅಭಿಪ್ರಾಯಗಳನ್ನು ನೇರವಾಗಿ ತಿಳಿಸುತ್ತಿದ್ದರು. 19.4.55ರಲ್ಲಿ ಶಿವಮೊಗ್ಗದಿಂದ ಬರೆದ ಪತ್ರದಲ್ಲಿ, ನಾನು ಕಳಿಸಿದ ಕವನಗಳ ಬಗ್ಗೆ ಹೀಗೆ ಬರೆದಿದ್ದಾರೆ—"ಚಿತ್ರಗಳು ಎನ್ನುವ ಕವಿತೆ ತುಂಬ ಚೆಲುವಾಗಿದೆ, ಇನ್ನೆರಡು ಕವಿತೆ ಸುಮಾರಾಗಿವೆ."

1955ರ ಜುಲೈ 31ರ ಪತ್ರದಲ್ಲಿ "ಇನ್ನು ಮೇಲೆ ನೀವು ಕಾವ್ಯ ಬರೆಯುವಾಗ suggestion ಗೆ ಹೆಚ್ಚು ಗಮನಕೊಡಿ. ಆಗ ಪದ್ಯ ರಸವತ್ತಾಗುತ್ತದೆ; ಪರಿಣಾಮಕಾರಿಯಾಗುತ್ತದೆ" ಎಂದು ಬರೆದನಂತರ "ಓ ಮರೆತೇ ಬಿಟ್ಟೆ. ಈ ಕಾಗದ ತಂದವರು ಯಾರು ಗೊತ್ತೆ? ಅವರೂ ನನ್ನ ಪ್ರಿಯ ವಿದ್ಯಾರ್ಥಿಯರಲ್ಲೊಬ್ಬರು. ನಿಮ್ಮ ಕಾಲೇಜಿನಲ್ಲೇ English Hons.ಗೆ ಬಂದಿದ್ದಾರೆ. ತುಂಬ ಒಳ್ಳೆಯ ವಿದ್ಯಾರ್ಥಿ. ಅವರಿಗೂ ಕವಿತೆಯ ಹುಚ್ಚಿದೆ. ಅಲ್ಲಿಗೆ ಸರಿಹೋಯಿತಲ್ಲ (ಒಂದೇ ದೋಣಿಯ ನಾವಿಕರಲ್ಲವೇ ನಾವು!). ನಿಮ್ಮ ಸಲಹೆ, ಸಖ್ಯ ಅವರಿಗೆ ಹಿತ"—ಎಂದು ಬರೆದಿದ್ದಾರೆ. ಈ ಕಾಗದವನ್ನು ಆಗ ತಂದ ಹುಡುಗ ಪಿ. ಲಂಕೇಶಪ್ಪ. ಜಿಎಸ್‌ಎಸ್ ಬರೆದ ಅತ್ಯಂತ ದೀರ್ಘವಾದ ಎಂಟು ಪುಟಗಳ ಈ ಪತ್ರದಲ್ಲಿ ನಾಲ್ಕು ಪುಟಗಳ ತುಂಬ ಅವರ ಕವನಗಳಿವೆ.

ಈ ಪತ್ರವನ್ನು ತಂದ ಎರಡು ತಿಂಗಳಲ್ಲಿ ನಾನು ಮತ್ತು ಲಂಕೇಶ ಹೇಗಿದ್ದೆವೆನ್ನುವುದನ್ನು ಜಿಎಸ್‌ಎಸ್ ಅವರ 14.9.55ರ ಪತ್ರ ತಿಳಿಸುತ್ತದೆ. ಈ ಪತ್ರ ಚಾಮರಾಜಪೇಟೆ 4ನೆಯ ಕ್ರಾಸ್‌ನಲ್ಲಿರುವ ಲಕ್ಷ್ಮೀವಿಲಾಸ ಹೋಟಲ್ ಅಡ್ರೆಸ್ಸಿಗೆ ಬಂದಿತ್ತು. ಆಗ ನಾನು ಮತ್ತು ಲಂಕೇಶ ಒಂದೇ ಕೋಣೆಯನ್ನು ಹಂಚಿಕೊಂಡಿದ್ದೆವು. ಈ ಕಾಗದದ ಇನ್ನೊಂದು ವಿಶೇಷವೆಂದರೆ ಇದು ಇಂಗ್ಲಿಷ್‌ನಲ್ಲಿದೆ. ಜಿಎಸ್‌ಎಸ್ ನನಗೆ ಬರೆದ ಇದೊಂದೇ ಪತ್ರ ಇಂಗ್ಲಿಷ್‌ನಲ್ಲಿರುವುದು. ನನ್ನ ವಿಳಾಸಕ್ಕೆ ನನಗೆ ಮತ್ತು ಲಂಕೇಶನಿಗೆ ಬರೆದ ಪತ್ರ ಹೀಗಿದೆ:

Dear twins,

I am happay to meet you on Saturday morning. I am starting to Bangalore on 16th night and I may reach Bangalore on 17th morning.

Now I can't write anything. Such is my position. I think both of you will exuse me for my "English".

*Yours,*

**G.S. Shivarudrappa**

ಜಿಎಸ್‌ಎಸ್‌ಗೆ ಸಿಟ್ಟು ಬಂದಾಗ ಕೆಲವು ಸಾರಿ ಕತೆ ಹೇಳುತ್ತಾರೆ. ನನಗೆ ಮತ್ತು ಲಂಕೇಶನಿಗೆ ಬರೆದ 3.11.55ರ ಪತ್ರದಲ್ಲಿ ಈ ಕತೆ ಹೇಳಿದ್ದಾರೆ:

ಒಮ್ಮೆ ಸಾರಿಪುತ್ರ ಬುದ್ಧನನ್ನು ಕುರಿತು ಹೇಳಿದ: "ಭಗವಾನ್, ನಿಮ್ಮಂಥವರು ಹಿಂದೆಯೂ ಇರಲಿಲ್ಲ ಮುಂದೆಯೂ ಇರುವುದಿಲ್ಲ."

ಬುದ್ಧ ಮೌನವಾಗಿ, ಪ್ರಶ್ನಿಸಿದ "ಹಾಗೇನು ಸಾರಿಪುತ್ರ... ನೀನು ಹಿಂದಿನ ಬುದ್ಧರನ್ನೆಲ್ಲಾ ನೋಡಿದ್ದೀಯಾ?"

"ಇಲ್ಲ ಭಗವಾನ್"

"ಅವರ ಬಗ್ಗೆ ಪೂರ್ಣವಾಗಿ ತಿಳಿದಿದ್ದೀಯ?"

"ಇಲ್ಲ ಭಗವಾನ್"

"ಮುಂದೆ ಬರುವವರ ವಿಚಾರವೂ ನಿನಗೆ ಗೊತ್ತೆ?"

"ಇಲ್ಲ ಭಗವಾನ್"

"ಹಾಗಾದರೆ ನನ್ನ ಬಗ್ಗೆಯೂ ನಿನಗೆ ಎಲ್ಲಾ ಗೊತ್ತಿದೆಯೋ?"

"ಇಲ್ಲ ಭಗವಾನ್"

"ಹಾಗಾದರೆ ಸಾರಿಪುತ್ರ, ನನ್ನಂಥವರು ಹಿಂದೆಯೂ ಇರಲಿಲ್ಲ. ಮುಂದೆಯೂ ಇರುವುದಿಲ್ಲವೆಂದೆಯಲ್ಲ."

ಸಾರಿಪುತ್ರ ನಾಚಿ ತಲೆಬಾಗಿದನಂತೆ.

ಜಿಎಸ್‌ಎಸ್ ನಮ್ಮಿಬ್ಬರಿಗೆ ಬರೆದ ಪತ್ರಗಳಲ್ಲಿ ಕೆಲವೊಮ್ಮೆ ಒಂದೇ ಪತ್ರದಲ್ಲಿ ಇಬ್ಬರಿಗೂ ಬೇರ ಬೇರೆಯಾಗಿ ಬರೆಯುತ್ತಿದ್ದರು ಅಥವಾ ಇಬ್ಬರನ್ನೂ ಸೇರಿಸಿ "ಒಲವಿನ ಸಾಹಸಿಗಳೆ" "ಪ್ರಿಯ ಮಿತ್ರರೆ" ಎಂದು ಸಂಬೋಧಿಸುತ್ತಿದ್ದರು.

ಒಮ್ಮೊಮ್ಮೆ ಆಕಾಶವಾಣಿ ಕಾರ್ಯಕ್ರಮಕ್ಕೆ ಜಿಎಸ್‌ಎಸ್ ಬಂದು ಹೋಗುತ್ತಿದ್ದರು. ನಾನು ಮತ್ತು ಲಂಕೇಶ್ ಅವರ ಜೊತೆ ಕಾಲ ಕಳೆಯುತ್ತ ಪುಟ್ಟಪ್ಪನವರ ಕಾವ್ಯದ ಬಗ್ಗೆ ಮಾತು ಬಂದಾಗ, ಅಥವಾ ರಮ್ಯ ಕವಿಗಳ ಬಗ್ಗೆ ಮಾತು ಬಂದಾಗ ಜಗಳವಾಡುತ್ತಿದ್ದವು. ಜಿಎಸ್‌ಎಸ್ ನಮ್ಮ ನವ್ಯಪಕ್ಷಪಾತದಿಂದ ಹುಟ್ಟುತ್ತಿದ್ದ ಜಗಳಗಳನ್ನು ಮರೆತು ನಮ್ಮನ್ನು ಪ್ರೀತಿಯಿಂದ ನಡೆಸಿಕೊಂಡಿದ್ದಾರೆ. ಉದಾಹರಣೆಗೆ 1.10.1956 ಜಿಎಸ್‌ಎಸ್ ಬೆಂಗಳೂರಿಗೆ ಬಂದಿದ್ದರು. ಅವತ್ತು ಆಕಾಶವಾಣಿ ಕಾರ್ಯಕ್ರಮವಿತ್ತು. ನಾನು ಮತ್ತು ಲಂಕೇಶ್ ಕುವೆಂಪು ಅವರ 'ಪೆಡ್ಯಾಂಟಿಕ್ ಸ್ಟೈಲ್' (ಸಂಸ್ಕೃತಮಯ ಶೈಲಿ) ಬಗ್ಗೆ ಜಿಎಸ್‌ಎಸ್ ಜೊತೆಗೆ ಚರ್ಚಿಸಿದೆವು.

3.3.1956 ರಂದು ಒಂದು ಆಕಾಶವಾಣಿ ಕವಿ ಮೇಳ ಇತ್ತು. ಅದಕ್ಕೆ ಬರುವ ಮುಂಚೆ ಲಂಕೇಶನಿಗೆ ಜಿಎಸ್‌ಎಸ್ ಬರೆದ ಪತ್ರದಲ್ಲಿ ಲಂಕೇಶನ 'ತಾಜಮಹಲ್' ಎನ್ನುವ ಪದ್ಯವನ್ನು ಕುರಿತು 'ಕಲೆಯ ಬಾಣವನ್ನಿಟ್ಟ ಸಂತಾಪದ ಬಿಲ್ಲಿಗೆ' ಮತ್ತು 'ಯಮುನೆ ನಡೆಯುತಿರಲು ಕಡಲ ಗೋರಿಯಲ್ಲಿಗೆ' ಎನ್ನುವ ಅಭಾಸಪಂಕ್ತಿಗಳ ಹೊರತು "ಉಳಿದಂತೆ

ಪದ್ಯ ಚೆನ್ನಾಗಿದೆ" ಎಂದು ಬರೆದಿದ್ದಾರೆ. ಅದೆ ಕಾಗದದಲ್ಲಿ 'ನಿಮ್ಮನ್ನು ಸುಮತಿಯನ್ನೂ ಕಾಣುವ ಕಾತರ' ಎಂದು ಬರೆದ ಮೇಲೆ "ಮೈಸೂರಿನ ಪ್ರಶಾಂತತೆಯಲ್ಲಿ ಚೈತ್ರದ ಚೆಲವು ದಿನವೂ ದಿನವೂ ನನ್ನನ್ನು ರೋಮಾಂಚನಗೊಳಿಸಿದೆ! ಬೆಳಕೇ ತಳಿರು ತಳಿಗಾಗಿ ಹೊರಟಂತಿವೆ: ಗಿಳಿ, ಕೋಗಿಲೆ ಎಲ್ಲಾ ಬೆಳಗಾದರೆ ಈ ಸುಂದರ ಹಂದರದಲ್ಲಿ ಕುಳಿತು ಮನೆಯ ಮುಂದೇ ದನಿಗೈಯುತ್ತಿವೆ! ನಿತ್ಯ ನವೀನವಾದ ಜಗತ್ತಿನಲ್ಲಿ 'ಪ್ರಗತಿ', 'ಸನಾತನ', 'ನವ್ಯ', 'ರೊಮಾಂಟಿಕ್'—ಇಂಥ ಮಾತಿಗೆಲ್ಲ ಅರ್ಥವೆ ಇಲ್ಲ ಎನ್ನಿಸಿಬಿಟ್ಟಿದೆ!" ಎಂದು ಬರೆದಿದ್ದಾರೆ. ಇದು ಜಿಎಸ್‌ಎಸ್ ಬ್ರ್ಯಾಂಡು. ನಮ್ಮ ನವ್ಯದ ಬ್ರ್ಯಾಂಡಿಗೂ ಅದಕ್ಕೂ ತಿಕ್ಕಾಟ ಇದ್ದೇ ಇತ್ತು.

3.3.1956ರ ಕವಿಮೇಳದಲ್ಲಿ ಶರ್ಮ, ಎಕ್ಕುಂಡಿ, ಜಿಎಸ್‌ಎಸ್, ಶ್ರೀಧರ್, ಸುಮಿತ್ರಾ, ಕಣವಿ ಭಾಗವಹಿಸಿದ್ದರು. ಆವತ್ತು ಬೆಳಿಗ್ಗೆ ಜಿಎಸ್‌ಎಸ್ ಮತ್ತು ಕಣವಿಯವರು ಉಳಿದುಕೊಂಡಿದ್ದ ತಾಜಮಹಲ್ ಹೋಟಲ್ಲಿಗೆ ಹೋದೆ. ಲಂಕೇಶ ಅಲ್ಲಿಗೆ ಸೈಕಲ್ ಹತ್ತಿಬಂದ. ಜಿಎಸ್‌ಎಸ್ ರೂಮಿನ ಕಡೆ ಕಣ್ಣಾಡಿಸುತ್ತ "ಕೊಳಕು ರೂಮು! ನವ್ಯಕವಿತೆ ಬರೆಯಲು ತಕ್ಕದು!" ಎಂದರು. ತುಸು ಹೊತ್ತು ತಡೆದು "ರಾತ್ರಿ ನಿದ್ರೆಯೇ ಇಲ್ಲ! ಕಣವಿಯೂ ನಾನೂ ಒಂದೊಂದು ಸಾಲಿನಂತೆ ಒಂದು ನವ್ಯಕವಿತೆ ಬರೆದುಬಿಟ್ಟೆವು" ಎಂದು ನಕ್ಕರು. ಅಲ್ಲಿಯವರೆಗೂ ಲಂಕೇಶ ಕಣವಿಯವರ 'ಭಾವಜೀವಿ' ಓದುತ್ತ ಸುಮ್ಮನೇ ಕೂತಿದ್ದ. ಜಿಎಸ್‌ಎಸ್ ನಗುನಗುತ್ತ ಲಂಕೇಶನ ಹತ್ತಿರ ಹೋಗಿ "ಏನು ಸಾರ್?" ಎಂದರು. ಲಂಕೇಶನಿಗೆ ನಗು ತಡೆಯಲಿಕ್ಕಾಗಲಿಲ್ಲ. ನಗುತ್ತ, "ಮತ್ತೇನು ಸಾರ್?" ಎಂದ. ಆಮೇಲೆ ಬಸವರಾಜ ಕಟ್ಟೀಮನಿ, ಎಲ್.ಜಿ. ಸುಮಿತ್ರ ಪದ್ಯಗಳ ವಿಷಯ ಮಾತಾಡಿದೆವು. ಹೀಗೆ ನಮಗೆ ಒಂದು ಕಡೆ ರಮ್ಯಪಕ್ಷಪಾತಿ ಜಿಎಸ್‌ಎಸ್ ಅವರ ಸ್ನೇಹ, ಇನ್ನೊಂದು ಕಡೆ ನವ್ಯ ಕವಿ ಶರ್ಮರ ಸ್ನೇಹವಿತ್ತು.

ಇಷ್ಟು ಹೊತ್ತಿಗಾಗಲೆ ನನಗೆ ಮತ್ತು ಲಂಕೇಶನಿಗೆ ಕಾಗದ ಬರೆಯುವಾಗ ನಮ್ಮನ್ನು ಜಿಎಸ್‌ಎಸ್ "ಒಲವಿನ ಸಾಹಸಿಗರೆ.... ಪ್ರಿಯ ಮಿತ್ರರೇ..... ಡಿಯರ್ ಟ್ವಿನ್ಸ್" ಎಂದು ಕರೆಯುತ್ತಿದ್ದರು. ನಾವು ಟ್ವಿನ್ಸ್‌ಗಳೂ ಜಗಳವಾಡುತ್ತಿದ್ದವು. ನಮಗೆ ಆ ಕಡೆ ರಾಜರತ್ನಂ ವಿ.ಸೀ.ಯವರು ಮೇಷ್ಟ್ರುಗಳು. ಇನ್ನೊಂದು ಕಡೆ ಜಿಎಸ್‌ಎಸ್, ವೈಯೆನ್ಕೆ, ಶರ್ಮ, ಅಡಿಗ, ನಿಸಾರ್, ಆಗಾಗ ಕೆಎಸ್. ನರಸಿಂಹಸ್ವಾಮಿಯೂ ಸಿಗುತ್ತಿದ್ದರು. ಅಕ್ಟೋಬರ್ 1956 ಒಂದನೇ ತಾರೀಖು ಜಿಎಸ್‌ಎಸ್ ಬಂದಿದ್ದರು ಅಂತ ಹೇಳಿದ್ದೇನೆ. ತಮ್ಮ ಬಾಲ್ಯದ ದಿನಗಳ ಬಗ್ಗೆ ಅವರು ಮಾತಾಡಿದ್ದರು. ಊಟವಿಲ್ಲದೆ ದಿನಗಳೆದದ್ದು, ಹರಕುಬಟ್ಟೆಯಲ್ಲಿ ಕಾಲಕಳೆದದ್ದು. ಹೀಗೆ ಏನೇನೊ ಹೇಳಿದ್ದರು. ಅವರ ಕತೆಯೋ, ಅವರ ಹತ್ತಿರದವರ ಕತೆಯೋ ನನಗೆ ಮರೆತುಹೋಗಿದೆ. ನಾನು ದಿನಚರಿಗಳನ್ನು ತೀರಾ ವಿವರವಾಗಿ ಬರೆಯದೆ ಹೋದುದರಿಂದ ಎಷ್ಟೋ ವಿಷಯಗಳನ್ನು ಕಳೆದುಕೊಂಡಿದ್ದೇನೆ. ಆದರೆ ತಮಗೆ ನಿರಾಸೆಗೆ ಕಾರಣವಿಲ್ಲ ಅಂತ ಅವರು ಹೇಳಿದ ಒಂದು ಘಟನೆಯನ್ನು ನಾನು ಗುರುತು ಹಾಕಿಟ್ಟಿದ್ದೇನೆ. ಒಮ್ಮೆ

ಸ್ನೇಹಿತರಿಬ್ಬರಿಗೆ ಊಟಕ್ಕೆ ಹೇಳಿದ್ದರಂತೆ. ಮಾತು ಮಾತು ಬೆಳೆಯುತ್ತ ಇಬ್ಬರ ಬದಲು ಐದಾರು ಜನ ಊಟಕ್ಕೆ ಸೇರಿದರಂತೆ. ಮನೆಯಲ್ಲಿ ಸಕ್ಕರೆ ಇರಲಿಲ್ಲ. ಜೇಬಲ್ಲಿ ದುಡ್ಡಿರಲಿಲ್ಲ. ಆದರೆ ಅದೇ ಸಮಯಕ್ಕೆ ಸರಿಯಾಗಿ, ಯಾರೋ ಸಾಲ ತೆಗೆದುಕೊಂಡವರು ಮನಿಆರ್ಡರ್ ಮೂಲಕ ಹಣ ಕಳಿಸಿದ್ದು ಕೈಸೇರಿತಂತೆ. ಇಂಥ ಹಲವು ನಡೆಗಳು ನಂಬಿಕೆಗೆ ಪುಷ್ಟಿ ಕೊಟ್ಟಿವೆ ಎಂದು ಅವರು ಹೇಳಿದರು. ಆಮೇಲೆ ಅವರನ್ನು ನನ್ನ ರೂಮಿಗೆ ಕರೆದುಕೊಂಡು ಹೋಗಿ ಮೆಕ್‌ನೀಸನ 'ಪ್ರೇಯರ್ ಬಿಫೋರ್ ಬರ್ತ್', 'ಬ್ಯಾಗ್ ಪೈಪ್ ಮ್ಯೂಸಿಕ್', ಸಿಟ್‌ವೆಲ್ಲಳ 'ಸ್ಟಿಲ್ ಫಾಲ್ಸ್ ದಿ ರೇನ್' ಮತ್ತು ಆಡೆನ್ನನ 'ಬ್ಯಾಲೆಡ್' ಓದಿದ್ದೆ.

ಆ ದಿನಗಳು ನಾನು ಲಂಕೇಶ್ ಜಗಳವಾಡುತ್ತಿದ್ದ ಕಾಲ. ನಾವು ಮಿಕ್ಕವರ ಜೊತೆಗೆ ಸಾಹಿತ್ಯದ ಬಗ್ಗೆ ಜಗಳವಾಡುತ್ತಿದ್ದ ಕಾಲ. ಲಂಕೇಶ್ 'ಚಿತ್ರಗುಪ್ತ'ದಲ್ಲಿ ಕಾಲಂ ಬರೆಯುತ್ತಿದ್ದ ಕಾಲ. ಕೆ. ನರಸಿಂಹಮೂರ್ತಿಯವರ ವಿಮರ್ಶೆಯನ್ನು ನೊಣದ ಮೀಸೆಯನ್ನು ಎಣಿಸುವ ವಿಮರ್ಶೆ ಎಂದು ಜವರೇಗೌಡರು ಕರೆದದ್ದನ್ನು 'ಚಿತ್ರಗುಪ್ತ'ದ ಕಾಲಂನಲ್ಲಿ ಲಂಕೇಶ್ ಖಂಡಿಸಿ, ಯಾರೋ ಮೂರು ಜನ ಲಂಕೇಶ್‌ನನ್ನು ಹೊಡೆಯಲಿಕ್ಕೆ ಬಂದ ಕಾಲ. ನವ್ಯಕಾವ್ಯ, ನವ್ಯ ವಿಮರ್ಶೆ, ನವ್ಯಕತೆ ರೂಪುಗೊಳ್ಳುತ್ತಿದ್ದ ಕಾಲ. ಅಂಥ ಕಾಲದಲ್ಲಿ ತಮ್ಮ ರೊಮ್ಯಾಂಟಿಕ್ ಮನೋಧರ್ಮದಿಂದ ನಮಗೆ ಹತ್ತಿರವಾದ ಜಿಎಸ್‌ಎಸ್ ಈ ಮೂವತ್ತು ವರ್ಷಗಳಲ್ಲಿ ಅನೇಕ ಸಾಧನೆಗಳಿಗೆ ಹೆಸರಾಗಿದ್ದಾರೆ. ಅವರು ನಮಗೆ ಆಗ ಅರ್ಥವಾಗುತ್ತಿರಲಿಲ್ಲ. ಈಗಲೂ ಅರ್ಥವಾಗಿದ್ದಾರೆ ಅನ್ನುವ ಧೈರ್ಯವಿಲ್ಲ.

ನಲವತ್ತು ವರ್ಷಕ್ಕೂ ಹಿಂದೆ ಜಿಎಸ್‌ಎಸ್ ಮೈಸೂರಿನಲ್ಲಿದ್ದಾಗ, ನಾನು ಬೆಂಗಳೂರಿನಲ್ಲಿ ಬಿ.ಎ. ಆನರ್ಸ್ ಮತ್ತು ಎಂ.ಎ. ಓದುತ್ತಿದ್ದಾಗ ಎಷ್ಟೋ ಸಲ ಮೈಸೂರಿಗೆ ಹೋಗಿ ಜಿಎಸ್‌ಎಸ್ ಮನೆಯಲ್ಲೇ ಇರುತ್ತಿದ್ದೆ. ಆ ಮೇಲೆ ಎಷ್ಟೋ ವರ್ಷ ಅವರಿಗೆ ಪತ್ರಗಳನ್ನು ಬರೆಯುತ್ತಿದ್ದೆ. ನನ್ನ ಹುಡುಗಾಟದ ದಿನಗಳಲ್ಲಿ ನವ್ಯಪಕ್ಷಪಾತಿಯಾಗಿ ಅನೇಕ ಸಲ ಅವರಿಗೆ ಬೇಸರ ಬರುವಂತೆ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿದ್ದೆ. ಆದರೆ ಜಿಎಸ್‌ಎಸ್ ಅದನ್ನೆಲ್ಲಾ ಮರೆತು ಪ್ರೀತಿಯಿಂದ ನಡೆದುಕೊಂಡಿದ್ದಾರೆ. 1980ರಿಂದ ನಾನು ಬೆಂಗಳೂರು ಅಧ್ಯಯನ ಕೇಂದ್ರಪಲ್ಲಿ ಉಪನ್ಯಾಸಕನಾಗಿ ಅವರ ಸಹೋದ್ಯೋಗಿಯಾಗಿದ್ದಾಗ, ಅವರು ನಡೆಸುತ್ತಿದ್ದ ವಿಚಾರ ಸಂಕಿರಣಗಳಿಗೆ ಯಾರೋ ಕೈಕೊಟ್ಟಾಗ ನನ್ನಿಂದ ಪ್ರಬಂಧಗಳನ್ನು ಬರೆಸಿ ಖಾಲಿಬಿದ್ದ ಜಾಗವನ್ನು ಜಿಎಸ್‌ಎಸ್ ಭರ್ತಿಮಾಡುತ್ತಿದ್ದರು. ಆ ರೀತಿಯ ಕೆಲಸ ಏನಾದರೂ ಆಗಬೇಕಿದ್ದರೆ ನಾಡಿಗನಿಂದ ಆ ಕೆಲಸ ಮಾಡಿಸಬಹುದು ಎನ್ನುವ ನಂಬಿಕೆಯನ್ನು ಅವರು ತೋರಿಸಿದ್ದಾರೆ. ನನ್ನನ್ನು ಪ್ರೋತ್ಸಾಹಿಸುತ್ತ ಬಂದಿದ್ದಾರೆ. ಅವರ ಆತ್ಮೀಯರಲ್ಲಿ ನಾನೂ ಒಬ್ಬ ಎನ್ನುವ ಹಾಗೆ ನಡೆದುಕೊಂಡಿದ್ದಾರೆ. ಅವರಿಗೆ ಆಯುರಾರೋಗ್ಯಭಾಗ್ಯ ದೊರಕಲಿ, ಮಹತ್ವದ ಸಾಹಿತ್ಯಸೃಷ್ಟಿ ಅವರಿಂದ ಆಗುತ್ತಲೇ ಇರಲಿ ಎಂದು ಹಾರೈಸುತ್ತೇನೆ.

(ಮೂಲ: 'ಇನ್ನೊಂದು ಸಾಹಿತ್ಯ ಚರಿತ್ರೆ')

■

## ಸಾಹಿತ್ಯ ಸಂಘಟಕರಾಗಿ...

ನಾ. ಡಿಸೋಜ

ಕನ್ನಡ ಕಾವ್ಯ ಸಾಹಿತ್ಯದ ಬಗ್ಗೆ ಆಸಕ್ತಿ ಬೆಳೆಸಿಕೊಂಡ ನಾನು ಶಿವಮೊಗ್ಗೆಯ ಇಂಟರ್‌ಮೀಡಿಯಟ್ ಕಾಲೇಜಿಗೆ ಸೇರಿಕೊಂಡ ಎರಡನೇ ವರ್ಷ ಕನ್ನಡ ಉಪನ್ಯಾಸಕರಾಗಿ ಬಂದವರು ಜಿ.ಎಸ್. ಶಿವರುದ್ರಪ್ಪನವರು. ಸರಳವಾದ ಬಿಳಿ ಉಡುಪು, ದುಂಡನೆಯ ಮುಖ, ಮೆದುವಾದ ಮಾತು. ತುಂಬಾ ಆಕರ್ಷಕವಾದ ರೀತಿಯಲ್ಲಿ ಅವರು ಪಾಠ ಮಾಡುತ್ತಿದ್ದರು. ಮಾಸ್ತಿಯವರ 'ಯಶೋಧರಾ' ನಾಟಕ ಅಂದು ನಮಗೆ ಪಠ್ಯಪುಸ್ತಕವಾಗಿತ್ತು. ಅದನ್ನು ಕಲಿಸುವಾಗಲಂತೂ ಜಿಎಸ್‌ಎಸ್ ಅವರು ತನ್ಮಯರಾಗುತ್ತಿದ್ದರು. ಬೇಂದ್ರೆ, ಪುಟ್ಟಪ್ಪ ಮತ್ತಿತರ ಕವಿಗಳ ಕವಿತೆಗಳ ಸಾಲುಗಳನ್ನು ಉದಾಹರಿಸುತ್ತ, ಬುದ್ಧ, ಅವನ ಹೆಂಡತಿ ಯಶೋಧರೆ, ಶಿಷ್ಯ ಆನಂದ—ಇವರೆಲ್ಲರ ವ್ಯಕ್ತಿತ್ವ ನಮ್ಮ ಮುಂದೆ ಬಂದು ನಿಲ್ಲುವಂತೆ ಮಾಡುತ್ತಿದ್ದರು. ಅವರ ಪಾಠಕ್ಕೆ ನಾನೆಷ್ಟು ಮನಸೋತಿದ್ದೆನೆಂದರೆ ಮೊದಲ ಪರೀಕ್ಷೆಯಲ್ಲಿ ನಾನು ಆ ನಾಟಕದ ಬಗ್ಗೆ ಬರೆದ ಬರಹದ ಪಕ್ಕದಲ್ಲಿ ಜಿಎಸ್‌ಎಸ್ ನುಡಿ ಎಂದು ಬರೆದಿದ್ದೆನು. ತರಗತಿಯಲ್ಲಿ ಅದನ್ನು ಮೆಚ್ಚಿ ನಾಲ್ಕು ಮಾತುಗಳನ್ನು ಹೇಳಿದ ನೆನಪು.

ಅದೇ ಸಮಯದಲ್ಲಿ ಶಿವಮೊಗ್ಗೆಯ ಕರ್ನಾಟಕ ಸಂಘದಲ್ಲಿ ಒಂದು ಸಂಜೆ ಜಿಎಸ್‌ಎಸ್ ಅವರು ತಮ್ಮ ಕವನಗಳ ವಾಚನ ನಡೆಸಿದರು. 'ಜಡೆ' ಎಂಬ ಅವರ ಕವಿತೆ ಅಷ್ಟೊಂದು ಸೊಗಸಾಗಿದೆ ಎಂಬುದು ನನಗೆ ಅಂದು ತಿಳಿಯಿತು. ಆ ಹಿಂದೆ ನಾನು ಆ ಕವಿತೆಯನ್ನು ಓದಿರಲಿಲ್ಲ. ಆದರೂ ಕವಿತೆಯೊಂದನ್ನು ಅದನ್ನು ಬರೆದ ಕವಿಯೇ ಓದಿದಾಗ ಅದಕ್ಕೆ ಬರುವ ಮೆರಗು ಎಂತಹುದು ಎಂಬುದು ಕೂಡ ನನಗೆ ಅಂದೇ ತಿಳಿಯಿತು. ಬೇರೆ ಕವಿಗಳು ಕವಿತೆ ಓದುವಾಗ ಎತ್ತರದ ದನಿಯಲ್ಲಿ ಹಾವಭಾವಗಳೊಡನೆ ನಾಟಕೀಯವಾದ ಒಂದು ಆವರಣ ಸೃಷ್ಟಿಸಿದರೆ, ಜಿಎಸ್‌ಎಸ್ ಅವರು ಈ ಯಾವ ಆಡಂಬರಕ್ಕೂ ಹೋಗದೆ ತಮಗೆ ಸಹಜವಾದ ಮೆಲುದನಿಯಲ್ಲಿ ಕವಿತೆ ಓದಿದ್ದು ನನಗೆ ಸಂತಸ ತಂದಿತ್ತು.

ಇಂಟರ್ ಮೀಡಿಯಟ್ ಪರೀಕ್ಷೆ ಮುಗಿಯಿತು. ನಿರೀಕ್ಷೆಯಂತೆ ನಾನು ಕನ್ನಡದಲ್ಲಿ ಮಾತ್ರ ಉತ್ತೀರ್ಣನಾಗಿ ಬೇರೆ ವಿಷಯಗಳಲ್ಲಿ ಗೋತ ಹೊಡೆದಿದ್ದೆ. ಮುಂದೆ ಓದಲಾಗಲಿಲ್ಲ. ಟೈಪ್‌ರೈಟಿಂಗ್, ಶಾರ್ಟ್‌ಹ್ಯಾಂಡ್ ಮುಗಿಸಿ ಕೆಲಸಕ್ಕೆ ಸೇರಿಕೊಂಡೆ. ಹೊಟ್ಟೆಪಾಡಿಗೆ ಒಂದು ವೃತ್ತಿಯಾಯಿತು. ಹವ್ಯಾಸಕ್ಕೆ ಸಾಹಿತ್ಯವಿತ್ತು. ಕರ್ನಾಟಕದ ರಾಜಧಾನಿ ಬೆಂಗಳೂರಿನಿಂದ

ಸುಮಾರು 380 ಕಿ.ಮೀ. ದೂರದ ಕಾರ್ಗಲ್ಲಿನಲ್ಲಿ (ಜೋಗ ಜಲಪಾತದ ಬಳಿ) ನಾನು ವೃತ್ತಿ ಮಾಡಿಕೊಂಡು ಉಳಿದೆ. ಬೆಂಗಳೂರಿನ ಯಾವ ಸಾಹಿತಿ ಲೇಖಕರ ಪರಿಚಯವೂ ನನಗಿರಲಿಲ್ಲ. ಪತ್ರಿಕಾ ಬಳಗದವರು ಗೊತ್ತಿರಲಿಲ್ಲ. ಸಾಹಿತ್ಯ ಚಳುವಳಿಗಳ ಬಗ್ಗೆ ತಲೆಕೆಡಿಸಿಕೊಳ್ಳಲಿಲ್ಲ. ಪರಿಷತ್ತು ಅಕಾಡೆಮಿಗಳಿಂದ ದೂರವಿದ್ದೆ. ಹಗಲೆಲ್ಲ ಕಛೇರಿ ಕೆಲಸ. ಸಂಜೆ ಓದುಬರಹ ಅಷ್ಟೆ.

1987ರಲ್ಲಿ ಸರಕಾರಿ ಮುದ್ರೆಹೊತ್ತ ಒಂದು ಪತ್ರ ಬಂದಾಗ ನನಗೇನೆ ಅಚ್ಚರಿ. ನಾನು ಸಾಹಿತ್ಯ ಅಕಾಡೆಮಿಯ ಸದಸ್ಯನಾಗಿ ನಾಮಕರಣಗೊಂಡಿದ್ದೆ. ನನ್ನ ಜೊತೆ ಇನ್ನೂ ಹಲವರಿದ್ದರು. ಅಕಾಡೆಮಿ ಅಧ್ಯಕರು ಡಾ. ಜಿಎಸ್‌ಎಸ್. ನನಗೆ ಸಂತಸವಾಯ್ತು. ಅಷ್ಟುಹೊತ್ತಿಗೆ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಮೂಲಕ ಅವರು ಮಾಡಿದ ಕನ್ನಡದ ಕೆಲಸವನ್ನು ನಾನು ಮೆಚ್ಚಿಕೊಂಡಿದ್ದೆ. ಅಕಾಡೆಮಿಗೆ ನಿಜವಾಗಿಯೂ ಗೌರವ ಬರುತ್ತದೆ ಅಂದುಕೊಂಡೆ.

ಮೊದಲ ಸರ್ವಸದಸ್ಯರ ಸಭೆಯಲ್ಲಿ ನಾನು ನನ್ನ ಪರಿಚಯ ಹೇಳಿಕೊಂಡೆ. ಶಿವಮೊಗ್ಗದಲ್ಲಿ ನಾನು ನಿಮ್ಮ ಶಿಷ್ಯನಾಗಿದ್ದೆ ಎಂದೆ. ಹೌದು ಎಂದವರು ನಕ್ಕರು. ಅವರಿಗೆ ಅದೆಷ್ಟು ಜನ ಶಿಷ್ಯರೋ, ಅವರನ್ನೆಲ್ಲ ಅವರು ನೆನಪಿನಲ್ಲಿ ಇರಿಸಿಕೊಳ್ಳಲಾರರು ಅಲ್ಲವೆ?

ಈ ಅಕಾಡೆಮಿಗಳದ್ದು ಒಂದು ವಿಚಿತ್ರ ಕತೆ. ನಿಯಮಗಳ ಪ್ರಕಾರ ಕೆಲವೊಂದು ಕಾರ್ಯಕ್ರಮಗಳನ್ನು ಅದು ನಡೆಸಿಕೊಂಡು ಬರಬೇಕಾಗುತ್ತದೆ. ಪ್ರಶಸ್ತಿ, ಪುಸ್ತಕ ಬಹುಮಾನಗಳನ್ನು ಬಿಡುವಂತಿಲ್ಲ. ವಾರ್ಷಿಕ ಪ್ರಕಟಣೆಗಳನ್ನು ನಿಲ್ಲಿಸುವಂತಿಲ್ಲ. ಸರಕಾರ ಕೊಡುವ ಅನುದಾನದಲ್ಲಿಯೇ ರಿಜಿಸ್ಟ್ರಾರ್ ಹಾಗೂ ಕೆಲ ನೌಕರರ ಸಂಬಳವನ್ನೂ ಕೊಡಬೇಕು. ಫೋನು ಇತ್ಯಾದಿ ಖರ್ಚು. ಸಭಾವೆಚ್ಚ, ಸದಸ್ಯರ ಪ್ರವಾಸ ವೆಚ್ಚ. ಮತ್ತೆ ಹೊಸದಾಗಿ ಯಾವ ಕಾರ್ಯಕ್ರಮಗಳನ್ನೂ ಹಮ್ಮಿಕೊಳ್ಳುವಂತಿಲ್ಲ. ಅನುದಾನ ಎಂದು ಸರಕಾರ ಕೈ ಬಿಗಿಹಿಡಿದು ಕೊಡುವುದು ಕೆಲವೇ ಲಕ್ಷ.

ಮೊದಲ ಸಭೆಯಲ್ಲಿಯೇ ಜಿಎಸ್‌ಎಸ್ ಈ ಕಷ್ಟಗಳನ್ನು ನಿವೇದಿಸಿಕೊಂಡರು. ಹೊಸದಾಗಿ ಏನನ್ನಾದರೂ ಮಾಡಬೇಕು ಎಂದು ಹೋದ ಹೊಸ ಸದಸ್ಯರಿಗೆಲ್ಲ ನಿರಾಶೆ ಯಾಯಿತು. ಸಂಪ್ರದಾಯದಂತೆ ನಡೆದುಕೊಂಡುಬಂದ ಕಾರ್ಯಕ್ರಮಗಳನ್ನು ಮುಂದುವರೆಸಿ ಕೊಂಡು ಹೋಗಲು ನಾವೇ ಏಕೆ ಬೇಕಿತ್ತು ಎಂಬ ಮನೋಭಾವ ಎಲ್ಲರಲ್ಲೂ ಕಂಡುಬಂದಿತು.

ಆದರೂ ನಾನು, ಯಾವುದೇ ಸಂಸ್ಥೆ ಕನ್ನಡ ಸಾಹಿತ್ಯ ಕುರಿತಂತೆ ವಿಚಾರ ಸಂಕಿರಣ, ಕಮ್ಮಟ, ಶಿಬಿರ ಏರ್ಪಡಿಸಿದರೆ ಅಕಾಡೆಮಿ ಆ ಸಂಸ್ಥೆಗೆ ರೂ. 2000 ಸಹಾಯಧನ ನೀಡುತ್ತದೆಂಬ ನಿಯಮಾವಳಿಗೆ ಹೊಸ ಸೇರ್ಪಡೆಯೊಂದನ್ನು ಸೇರಿಸಿದೆ. ಕೊಂಕಣಿ ಕರ್ನಾಟಕದ ಒಂದು ಭಾಷೆಯಾದ್ದರಿಂದ ಕೊಂಕಣಿ ಸಾಹಿತ್ಯದ ಬಗ್ಗೆ ಯಾವುದಾದರೂ ಸಂಸ್ಥೆ ವಿಚಾರಸಂಕಿರಣ ನಡೆಸಿದರೆ ಅದಕ್ಕೂ ಅಕಾಡೆಮಿ ರೂ. 2000 ನೀಡುತ್ತದೆಂಬ

ತಿದ್ದುಪಡಿಯು ಸ್ವೀಕೃತವಾಯಿತು. ವಿಚಿತ್ರವೆಂದರೆ ಮೂರುವರ್ಷಗಳ ಅವಧಿಯಲ್ಲಿ ಯಾವ ಕೊಂಕಣಿ ಸಂಸ್ಥೆಯೂ ಸಹಾಯಧನ ಕೇಳಿಕೊಂಡು ಬರಲಿಲ್ಲ.

ಜಿಎಸ್ಎಸ್ ಅವರು ಪುಸ್ತಕ ಬಹುಮಾನ ನೀಡುವ ವಿಷಯದಲ್ಲಿ ಹಾಗೂ ಪ್ರತಿವರ್ಷ ಐವರು ಲೇಖಕರಿಗೆ ಗೌರವ ಪ್ರಶಸ್ತಿ ನೀಡುವ ವಿಷಯದಲ್ಲಿ ತುಂಬಾ ಗಮನ ಹರಿಸುತ್ತಿದ್ದರು. ಅವರದೊಂದು ಸ್ವಭಾವವೆಂದರೆ ತಮ್ಮ ಮನಸ್ಸಿನಲ್ಲಿ ಏನಿದೆ ಎಂಬುದನ್ನು ಅವರು ಮೊದಲು ಹೇಳುತ್ತಿರಲಿಲ್ಲ. ಮೊದಲಲ್ಲೆ ಸದಸ್ಯರ ಅಭಿಪ್ರಾಯ ಕೇಳಿ ಅನಂತರ ತಮ್ಮ ಮೆದು ಮಾತಿನಲ್ಲಿ ತಮ್ಮ ಮನಸ್ಸಿನಲ್ಲಿರುವುದನ್ನು ಹೇಳಿಬಿಡುತ್ತಿದ್ದರು. ಆ ಮೊದಲು ಏನೇನೋ ಅಭಿಪ್ರಾಯಗಳನ್ನು ಮಂಡಿಸಿದ ಸದಸ್ಯರು ಅಂತಿಮವಾಗಿ ಅಧ್ಯಕ್ಷರ ಅಭಿಪ್ರಾಯಕ್ಕೆ ಮತ ನೀಡುತ್ತಿದ್ದರು. ಪುಸ್ತಕ ಬಹುಮಾನ ಹಾಗು ಪ್ರಶಸ್ತಿ ಪ್ರದಾನ ಸಮಾರಂಭಗಳನ್ನು ಜಿಎಸ್ಎಸ್ ತುಂಬಾ ಅಚ್ಚುಕಟ್ಟಾಗಿ ಏರ್ಪಡಿಸುತ್ತಿದ್ದರು. ಒಂದು ಸಮಾರಂಭ ಮೈಸೂರಿನಲ್ಲಾದರೆ ಮತ್ತೊಂದು ಶಿವಮೊಗ್ಗದಲ್ಲಾಯಿತು. ಮೂರನೆಯದು ಉಡುಪಿಯಲ್ಲಿ.

ನಾನು ಸಾಗರದ 'ಒಡನಾಟ' ಸಂಸ್ಥೆಯ ಅಧ್ಯಕ್ಷನಾಗಿದ್ದರಿಂದ 'ಒಡನಾಟ' ಹಾಗು ಸಾಹಿತ್ಯ ಅಕಾಡೆಮಿ ಎರಡೂ ಸಂಸ್ಥೆಗಳ ಆಶ್ರಯದಲ್ಲಿ ಸಾಗರದಲ್ಲಿ ಒಂದು ಕಾರ್ಯಕ್ರಮ ಏರಿಸಿದೆ. ಕಾರ್ಯಕ್ರಮಕ್ಕೆ ಜಿಎಸ್ಎಸ್ ಅವರೇ ಬಂದರು. ಕೆಳದಿ, ಇಕ್ಕೇರಿಗಳಿಗೆ ಅವರನ್ನು ಕರೆದೊಯ್ದೆ. ಸಂಜೆ ಪುರಸಭೆಯ ಒಳಗೆ ಜಿಎಸ್ಎಸ್ ಅವರ ಉಪನ್ಯಾಸ, ಹೊರಗೆ ಒಂದು ಧಾರ್ಮಿಕ ಉಪನ್ಯಾಸ. ಇದು ನಮಗೆ ಗೊತ್ತಿಲ್ಲದೇ ಆದ ಅಚಾತುರ್ಯ. ಹೊರಗಿನ ಧ್ವನಿವರ್ಧಕ ಜಿಎಸ್ಎಸ್ ಅವರ ಧ್ವನಿಯನ್ನು ಮೂಲೆಗೆ ತಳ್ಳುವಂತೆ ಅಬ್ಬರಿಸಿದಾಗ ಉಪನ್ಯಾಸ ನೀಡುತ್ತಿದ್ದ ಜಿಎಸ್ಎಸ್ "ಏನೂ ಮಾಡುವಂತಿಲ್ಲ... ಹೊರಗೆ ಉಪನ್ಯಾಸ ನೀಡುತ್ತಿರುವವನು ನನ್ನ ಶಿಷ್ಯನಾಗಿದ್ದವ... ಆಗ ತರಗತಿಯಲ್ಲೂ ಹೀಗೆಯೇ ಮಾಡುತ್ತಿದ್ದ" ಎಂದರು. ಆದರೆ ಅಂದಿನ ಅವರ ಉಪನ್ಯಾಸವನ್ನು, ಕವಿತೆಗಳ ವಾಚನವನ್ನು ಸಾಗರದ ಸಾಹಿತ್ಯಾಭಿಮಾನಿಗಳು ಮೆಚ್ಚಿಕೊಂಡರು.

ಈ ಅವಧಿಯಲ್ಲಿಯೇ ಅಕಾಡೆಮಿ ಎರಡು ಮಹತ್ವದ ಗ್ರಂಥಗಳನ್ನು ಪ್ರಕಟಿಸಿತು. ಒಂದು 'ಸಾಲುದೀಪಗಳು'. ಎರಡನೆಯದು ಅನುವಾದ 'ಭಾರತೀಯ ಸಾಹಿತ್ಯ ಸಮೀಕ್ಷೆ'. 'ಸಾಲುದೀಪಗಳು'—ಜಿ.ಎಸ್. ಸಿದ್ಧಲಿಂಗಯ್ಯ, ಎಂ.ಎಚ್. ಕೃಷ್ಣಯ್ಯನವರು ಸಂಪಾದಿಸಿದ ಕೃತಿ. ಬಿ. ವೆಂಕಟಾಚಾರ್ಯರಿಂದ ತೇಜಸ್ವಿಯವರೆಗೆ ಸುಮಾರು 67 ಲೇಖಕರ ಪರಿಚಯ ಈ ಕೃತಿಯಲ್ಲಿದೆ. ನಾಡಿನ ಪ್ರಖ್ಯಾತ ಲೇಖಕರು ಇಲ್ಲಿ ಬರೆದಿದ್ದಾರೆ. ಪ್ರಖ್ಯಾತ ಲೇಖಕರ ಪರಿಚಯದ ಜೊತೆಗೇನೆ ಅವರ ಜೀವನ ಚಿತ್ರಣ, ಕೃತಿ ಪರಿಚಯ, ಅವರ ವಿದ್ಯಾಭ್ಯಾಸ, ಹುದ್ದೆ ಅವರಿಗೆ ದೊರೆತ ಪ್ರಶಸ್ತಿಗಳ ವಿವರ ಕೂಡ ಇಲ್ಲಿ ಲಭ್ಯವಾಗಿದೆ. ಕನ್ನಡ ಸಾಹಿತ್ಯ ಕ್ಷೇತ್ರದ ಬಹುದೊಡ್ಡ ಕೊರತೆಯೊಂದನ್ನು ಈ ಕೃತಿ ನೀಗಿತೆಂದು ಹೇಳಬಹುದು. ಮತ್ತೊಂದು ಮಹತ್ವದ ಕೃತಿ 'ಭಾರತೀಯ ಸಾಹಿತ್ಯ ಸಮೀಕ್ಷೆ'. ಎರಡು ಬೃಹತ್ ಸಂಪುಟಗಳ ಈ ಕೃತಿ ಕೇರಳ ಸಾಹಿತ್ಯ ಅಕಾಡೆಮಿ ಪ್ರಕಟಿಸಿದ 'Compartive Indian

Litreture' ಎಂಬ ಇಂಗ್ಲಿಷ್ ಕೃತಿಯ ಅನುವಾದ. ಭಾರತದ ಪ್ರಮುಖ ಭಾಷೆಗಳ ಪ್ರಾಚೀನತೆ, ಲಕ್ಷಣ, ಈ ಭಾಷೆಗಳಲ್ಲಿ ಪ್ರಕಟವಾದ ಕಾವ್ಯ, ಕತೆ, ಕಾದಂಬರಿ, ನಾಟಕ, ಪ್ರವಾಸಸಾಹಿತ್ಯ ಹೀಗೆ ಬಹುವ್ಯಾಪ್ತಿಯುಳ್ಳ ಗ್ರಂಥ ಇದು. ಭಾರತೀಯ ಭಾಷೆಗಳು ಕಾಲಕಾಲದಲ್ಲಿ ಏನೆಲ್ಲ ಬದಲಾವಣೆಗಳನ್ನು ಪಡೆದವು, ಯಾವೆಲ್ಲ ಪ್ರಭಾವಗಳನ್ನು ಜೀರ್ಣಿಸಿಕೊಂಡವು, ಅವುಗಳಲ್ಲಿ ಕಂಡುಬಂದ ಚಳುವಳಿಗಳ ಪ್ರಭಾವವೇನು ಎಂಬುದನ್ನು ವಿವರವಾಗಿ ಇಲ್ಲಿಯ ಲೇಖನಗಳು ಚರ್ಚೆ ಮಾಡುತ್ತವೆ. ಇಂತಹ ಒಂದು ಕೃತಿಯನ್ನು ಶ್ರೀ ಎಲ್.ಎಸ್. ಶೇಷಗಿರಿರಾವ್ ಸಂಪಾದಿಸಿಕೊಟ್ಟರು. ಅಕಾಡೆಮಿಯ ಉತ್ತಮ ಪ್ರಕಟಣೆಗಳಲ್ಲಿ ಇದೂ ಕೂಡ ಒಂದು.

ಕೊನೆಯ ವರ್ಷ ನಡೆಯುತ್ತಿರಬೇಕಾದರೆ ದಕ್ಷಿಣಕನ್ನಡ ಜಿಲ್ಲೆಗೆ ಹೋದ ಅಧ್ಯಕ್ಷರು ಅಲ್ಲಿ ಪ್ರತಿವರ್ಷ ಪ್ರಕಟವಾಗುವ ತುಳು ಪುಸ್ತಕಕ್ಕೆ ಅಕಾಡೆಮಿ ಬಹುಮಾನ ಕೊಡುತ್ತದೆಂಬ ಮಾತನ್ನು ಹೇಳಿಬಂದರು. ಅಕಾಡೆಮಿ ಸಭೆಯಲ್ಲಿ ಈ ಪ್ರಸ್ತಾವನೆ ಇರಿಸಿ ಇದಕ್ಕೆ ಅನುಮತಿಯನ್ನು ಪಡೆದರು. ನಾನು ತುಳು ಭಾಷೆಯ ಹಾಗೆಯೇ ಕೊಂಕಣಿಯೂ ಕರ್ನಾಟಕದ ಒಂದು ಪ್ರಮುಖ ಭಾಷೆ. ಕೊಂಕಣಿ ಪುಸ್ತಕಕ್ಕೂ ಬಹುಮಾನ ಕೊಡಿ ಎಂದೆ. ನನ್ನ ಬೇಡಿಕೆಗೆ ಅಕಾಡೆಮಿ ಸಭೆಯಲ್ಲಿ ಮನ್ನಣೆ ಸಿಗದೇ ಹೋದಾಗ ನಾನು ಪತ್ರಿಕೆಗಳ ಮೂಲಕ ವಿಷಯವನ್ನು ಜನರ ಗಮನಕ್ಕೆ ತರಬೇಕಾಯಿತು. ಕೊಂಕಣಿ ಗೋವಾದ ರಾಜ್ಯಭಾಷೆಯಾಗಿರುವುದರಿಂದ ಕರ್ನಾಟಕ ಸಾಹಿತ್ಯ ಅಕಾಡೆಮಿ ಈ ಬಗ್ಗೆ ಕ್ರಮ ಕೈಗೊಳ್ಳಬೇಕಾಗಿಲ್ಲವೆಂದು ಅಧ್ಯಕ್ಷರು ಅಭಿಪ್ರಾಯಪಟ್ಟರು. ಗೋವಾದ ಅಕಾಡೆಮಿ ದೇವನಾಗರಿಯಲ್ಲಿ ಬರೆದ ಕೊಂಕಣಿ ಲೇಖಕರನ್ನು ಮಾತ್ರ ಪರಿಗಣಿಸುತ್ತಿತ್ತು. ಅಲ್ಲದೆ ಗೋವಾದ ಅಕಾಡೆಮಿ ಪ್ರಶಸ್ತಿ ಪಡೆಯಲು ಲೇಖಕ ಅಲ್ಲಿ ಹುಟ್ಟಿದವನೇ ಆಗಬೇಕಿತ್ತು. ಕನ್ನಡ ಲಿಪಿಯ ಕೊಂಕಣಿ ಪುಸ್ತಕಗಳನ್ನು, ಕರ್ನಾಟಕದ ಲೇಖಕರನ್ನು ಗೋವಾ ಹತ್ತಿರ ಬಿಟ್ಟುಕೊಳ್ಳುತ್ತಿರಲಿಲ್ಲ. ಈ ಕೆಲ ಅಂಶಗಳನ್ನು ಮುಂದಿರಿಸಿಕೊಂಡು ನಾನು ನನ್ನ ಹಳೆಯ ಪ್ರಸ್ತಾವನೆಗೆ ಜೋತುಬಿದ್ದೆ. ನನ್ನ ಜೊತೆ ಒಂದು ಪ್ರಖ್ಯಾತ ಪತ್ರಿಕೆಯೂ ಸೇರಿಕೊಂಡಿತು. ಕೊಂಕಣಿ ಪುಸ್ತಕಕ್ಕೆ ಬಹುಮಾನ ಕೊಟ್ಟರೆ ನಾಳೆ ತಮಿಳರಿಗೆ, ತೆಲುಗರಿಗೆ ಬಹುಮಾನ ಕೊಡಬೇಕಾಗುತ್ತದೆ ಎಂದು ಕೆಲವು ಖ್ಯಾತ ಸಾಹಿತಿಗಳೂ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದರು. ಕೊನೆಗೂ ಜಿಎಸ್ಎಸ್ ಇರುವ ತನಕ ಕೊಂಕಣಿ ಪುಸ್ತಕಕ್ಕೆ ಬಹುಮಾನ ಕೊಡುವ ಪ್ರಸ್ತಾವನೆಗೆ ಜಯ ದೊರಕಲಿಲ್ಲ. ಅಕಾಡೆಮಿಯ ಕೆಲ ಸದಸ್ಯರು ಕೂಡ ಕೊಂಕಣಿ ಪರವಾಗಿ ಇರಲಿಲ್ಲ. ಆದರೆ ಜಿಎಸ್ಎಸ್ ನಂತರ ಅಧ್ಯಕ್ಷರಾಗಿ ಬಂದ ಬರಗೂರು ರಾಮಚಂದ್ರಪ್ಪನವರು ಕೊಂಕಣಿ ಪುಸ್ತಕಗಳಿಗೆ ಬಹುಮಾನ ಕೊಡುವ ಪರಿಪಾಠವನ್ನು ಆರಂಭಿಸಿದರು. ಈ ಒಂದು ಪ್ರಕರಣವೇ ಮುಂದೆ ಕೊಂಕಣಿ, ತುಳು, ಕೊಡವ ಭಾಷೆಗಳ ಅಕಾಡೆಮಿಗಳ ಹುಟ್ಟಿಗೆ ಕಾರಣವಾಯ್ತು ಎಂಬುದನ್ನು ಕೂಡ ನಾನಿಲ್ಲಿ ಹೇಳಬೇಕಾಗಿದೆ.

ನಾನು ಕೊಂಕಣಿ ಪರವಾಗಿ ನಿಂತದ್ದು, ಪತ್ರಿಕೆಗಳಲ್ಲಿ ಆದ ಚರ್ಚೆಯಿಂದಾಗಿ ಜಿಎಸ್‌ಎಸ್ ಅವರಿಗೆ ಕೊಂಚ ಬೇಸರವಾಯಿತು. ಆದರೆ ಅಕಾಡೆಮಿ ಅವಧಿ ಮುಗಿದ ನಂತರ ಕೆಲವಾರು ಸಭೆ ಸಮಾರಂಭಗಳಲ್ಲಿ ನಾನವರನ್ನು ಭೇಟಿಯಾಗ್ಗಿದೇನೆ. ಅವರು ಅದೇ ಹಿಂದಿನ ಪ್ರೀತಿ ವಿಶ್ವಾಸದಿಂದಲೇ ನನ್ನನ್ನು ಕಂಡಿದ್ದಾರೆ. ನನ್ನೊಡನೆ ಮಾತನಾಡಿದ್ದಾರೆ. ನನಗೂ ಕೂಡ ಜಿ.ಎಸ್.ಎಸ್ ಈಗಲೂ ಪ್ರಿಯರಾಗಿದ್ದಾರೆ. ನಾನು ಅವರ ಒಂದು ಕವಿತೆಯನ್ನು ಸದಾ ಗುಣಗುಣಿಸುತ್ತಿರುತ್ತೇನೆ—

ಹಣತೆ ಹಚ್ಚುತ್ತೇನೆ ನಾನು
ಇರುವ ಕತ್ತಲೆಯನ್ನು
ದೂರ ಅಟ್ಟುತ್ತೇನೆಂಬ ಭ್ರಮೆಯಿಂದಲ್ಲ,
ನನ್ನ ಮುಖ ನೀನು ನಿನ್ನ ಮುಖ ನಾನು
ನೋಡಬಹುದೆಂಬ ಒಂದೇ ಆಸೆಯಿಂದ.

■

## ದಕ್ಷ ಆಡಳಿತಗಾರ

ಎಚ್. ಎಸ್. ಪಾರ್ವತಿ

**ಯಾ**ವುದಾದರೂ ಒಂದು ರಂಗದಲ್ಲಿ ಯಶಸ್ವಿಯಾಗಿ ಕೆಲಸ ಮಾಡಿ 'ಸೈ' ಎನ್ನಿಸಿಕೊಳ್ಳುವುದೇ ಕಷ್ಟ. ಆದರೆ ಕೆಲವು ಪ್ರತಿಭಾವಂತರಿರುತ್ತಾರೆ, ಅವರು ತಾವು ಕೈಗೆತ್ತಿಕೊಂಡ ಕೆಲಸವನ್ನು ಎಷ್ಟೊಂದು ಸಮರ್ಥವಾಗಿ ನಿಭಾಯಿಸುತ್ತಾರೆಂದರೆ, ಈ ಕೆಲಸ ಇವರಿಂದ ಮಾತ್ರ ಸಾಧ್ಯ ಎನ್ನಿಸಿ ಬಿಡುತ್ತದೆ. ಅಂತಹ ವಿರಳರಲ್ಲಿ ಕನ್ನಡದ ಶ್ರೇಷ್ಠ ಕವಿಗಳಲ್ಲೊಬ್ಬರಾದ ಡಾ. ಜಿಎಸ್‌ಎಸ್ ಮುಖ್ಯರು. ಅವರು ಕವಿಯಾಗಿ, ವಿಮರ್ಶಕರಾಗಿ ಸಾಹಿತ್ಯದಲ್ಲಿ ಸವ್ಯಸಾಚಿ ಎನ್ನಿಸಿಕೊಂಡಿರುವಂತೆಯೇ, ಸಮರ್ಥ ಆಡಳಿತಗಾರರಾಗಿಯೂ ತ್ರಿವಿಕ್ರಮನಾಗಿ ಮೂರನೆಯ ಪಾದ ಊರಿದ್ದಾರೆ.

ನನಗೆ ಕವಿಯಾಗಿ ಡಾ. ಶಿವರುದ್ರಪ್ಪನವರ ಪರಿಚಯವಾದದ್ದು ಬಹಳ ವರ್ಷಗಳ ಹಿಂದೆ. ಆಕಾಶವಾಣಿಯಿಂದ ಪ್ರಸಾರವಾಗುತ್ತಿದ್ದ ಅವರ ಭಾವಗೀತೆಗಳು ಅದರಲ್ಲೂ *ಹೌದೇನೇ ಉಮಾ ಹೌದೇನೇ?..... ಎದೆ ತುಂಬಿ ಹಾಡಿದನು... ಉಡುಗಣವೇಷ್ಠಿತ* ಮುಂತಾದವು ಅಂದಿನಷ್ಟೇ ಇಂದೂ ನನಗೆ ಪ್ರಿಯ. ಹಾಗೇ ಅವರ 'ಹಣತೆ', 'ಪ್ರೀತಿ ಇಲ್ಲದ ಮೇಲೆ'ಯಂಥ ಕವಿತೆಗಳು ಸದಾ ನನ್ನ ನೆನಪಿನಲ್ಲಿ ಸುಳಿಯುತ್ತಲೇ ಇರುತ್ತವೆ.

1970ರ ಸುಮಾರಿಗೆ ಡಾ. ಜಿಎಸ್‌ಎಸ್ ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿ ಬೆಂಗಳೂರಿಗೆ ಬಂದ ಮೇಲೆ ನಾನು ಅವರನ್ನು ಮುಖತಃ ಕಂಡದ್ದು. ಆಗ ಅವರು ಪ್ರತಿವರ್ಷ ಅಧ್ಯಯನ ಸಂಸ್ಥೆಯ ವತಿಯಿಂದ ಸೆಂಟ್ರಲ್ ಕಾಲೇಜಿನ ಆವರಣದಲ್ಲಿ ವಿಚಾರಗೋಷ್ಠಿಗಳನ್ನು ಏರ್ಪಡಿಸುತ್ತಿದ್ದರು. ಅದರಲ್ಲಿ ಕಾಲೇಜಿನವರು ಮಾತ್ರವಲ್ಲದೆ ಹೊರಗಿನವರಿಗೂ ಪ್ರವೇಶವಿದ್ದುದು ಒಂದು ವಿಶೇಷ. ಹಿರಿಯರಾದ ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಡಾ. ಶಿವರಾಮ ಕಾರಂತ, ಡಾ. ಶ್ರೀರಂಗರಿಂದ ಹಿಡಿದು ಆಗ ತಾನೇ ಸಾಹಿತ್ಯರಂಗವನ್ನು ಪ್ರವೇಶಿಸುತ್ತಿದ್ದ ಹೊಸಬರೂ ತಮ್ಮ ವಿಚಾರಗಳನ್ನು ಮಂಡಿಸಲು ಈ ಗೋಷ್ಠಿಗಳಲ್ಲಿ ಅವಕಾಶ ಕಲ್ಪಿಸಲಾಗುತ್ತಿತ್ತು. ನಾನು ಹೆಚ್ಚುಕಡಮೆ ಪ್ರತಿವರ್ಷ ಆ ಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದೆ—ಕೆಲವು ವರ್ಷ ವಿಶೇಷ ಆಹ್ವಾನಿತಳಾಗಿ, ಕೆಲವು ವರ್ಷ ಸಾಮಾನ್ಯ ಆಹ್ವಾನಿತಳಾಗಿ. ಆಗ ನನಗೆ ಕನ್ನಡ ನಾಡಿನ ಪ್ರಮುಖ ಬರಹಗಾರರನ್ನು ನೋಡುವ, ಅವರ ಮಾತುಗಳನ್ನು ಕೇಳುವ ಅವಕಾಶ ಸಿಕ್ಕಿತು. ಆಗ

ನವ್ಯ ಚಳುವಳಿ ಮೇಲುಗೈ ಪಡೆದಿದ್ದ ಕಾಲ. ವಿಚಾರಗೋಷ್ಠಿಗಳಲ್ಲಿ ಹಳೆಯ ಹುಲಿಗಳಿಗೂ ನವ್ಯ ಪಂಥದವರಿಗೂ ನಡೆಯುತ್ತಿದ್ದ ಮಾತಿನ ಚಕಮತಿ ನನಗಿನ್ನೂ ನೆನಪಿದೆ. ಈ ಕಾರ್ಯಕ್ರಮಗಳನ್ನೆಲ್ಲ ಅಚ್ಚುಕಟ್ಟಾಗಿ ನಿಭಾಯಿಸುತ್ತಿದ್ದ ಡಾ. ಜಿಎಸ್ಎಸ್, ಆ ಗೋಷ್ಠಿಗಳಲ್ಲಿ ಮಂಡಿತವಾದ ಪ್ರಬಂಧಗಳ ಸಂಕಲನಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುವ ಮೂಲಕ ಕನ್ನಡ ಸಾಹಿತ್ಯ ಚಳುವಳಿಯ ಚರಿತ್ರೆಯನ್ನು ದಾಖಲಿಸುವ ಕೆಲಸ ಮಾಡಿ ಉಪಕಾರ ಮಾಡಿದ್ದಾರೆ.

1987ರಿಂದ ಡಾ. ಜಿ.ಎಸ್. ಶಿವರುದ್ರಪ್ಪನವರು ಕರ್ನಾಟಕ ಸಾಹಿತ್ಯ ಅಕಾಡಮಿಯ ಅಧ್ಯಕ್ಷರಾದರು. ಆಗ ನನ್ನನ್ನೂ ಅಕಾಡಮಿಯ ಸದಸ್ಯಳನ್ನಾಗಿ ಆರಿಸಿಕೊಂಡರು. ಇಲ್ಲಿ ಆರಿಸಿ ಕೊಂಡರು ಎನ್ನುವ ಶಬ್ದವನ್ನು ಉದ್ದೇಶಪೂರ್ವಕವಾಗಿಯೇ ಬಳಸುತ್ತಿದ್ದೇನೆ. ಯಾಕೆಂದರೆ ನಾನು ಸರಕಾರ ನೇಮಿಸಿದ ಸದಸ್ಯೆಯಲ್ಲ; ಅಕಾಡಮಿ ಸಮಿತಿಯ ಮೊದಲ ಸಭೆಯಲ್ಲಿ ಅಧ್ಯಕ್ಷರ ಮತ್ತು ಸದಸ್ಯರ ಮೂಲಕ ನಾಮಕರಣಗೊಂಡವಳು ಎನ್ನುವುದು ನನಗೆ ಅಭಿಮಾನದ ವಿಚಾರ.

ಡಾ. ಜಿಎಸ್ಎಸ್ ಅಧ್ಯಕ್ಷತೆಯಲ್ಲಿ ಅವರ ಅವಧಿಯಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಕೈಗೊಂಡ ಕಾರ್ಯಕ್ರಮಗಳು ಸದಾ ಕಾಲಕ್ಕೂ ಉಳಿದಿರುವಂತಹುದು. ಎಂದಿನಿಂದ ನಡೆದು ಬರುತ್ತಿದ್ದ ವಿಚಾರ ಸಂಕಿರಣ, ಪ್ರಶಸ್ತಿ ಪ್ರದಾನ ಸಮಾರಂಭಗಳು ಮಾತ್ರವಲ್ಲದೆ ತೀರಾ ಉಪಯುಕ್ತವಾದ ಕೆಲಸಗಳನ್ನು ಕೈಗೊಂಡಿದ್ದು, ಕೆಲವು ಕಾರ್ಯಕ್ರಮಗಳಲ್ಲಿ ಬದಲಾವಣೆ ಮಾಡಿದ್ದು, ಜಿಎಸ್ಎಸ್ ಅವರ ವೈಶಿಷ್ಟ್ಯ.

ಭಾರತದ ಎಲ್ಲ ಪ್ರಮುಖ ಭಾಷೆಗಳ ಸಾಹಿತ್ಯದ ಎಲ್ಲ ಪ್ರಕಾರಗಳ ಸಂಕ್ಷಿಪ್ತ ಪರಿಚಯವಿದ್ದ ಭಾರತೀಯ ಸಾಹಿತ್ಯ ಸಮೀಕ್ಷೆ ಒಂದು ಅಪೂರ್ವ ಗ್ರಂಥ. ಕೇರಳ ಸಾಹಿತ್ಯ ಅಕಾಡೆಮಿಯ ವತಿಯಿಂದ ಇಂಗ್ಲೀಷಿನಲ್ಲಿ ಇದನ್ನು ಸಂಪಾದಿಸುವ ಮಹಾ ಸಾಹಸ ಮಾಡಿದವರು ಡಾ. ಕೆ.ಎಂ. ಜಾರ್ಜ್. ಇಂಥದೊಂದು ಗ್ರಂಥ ಕನ್ನಡದಲ್ಲಿ ಬರಬೇಕಾದ ಅಗತ್ಯವನ್ನು ಮನಗಂಡ ಕರ್ನಾಟಕ ಸಾಹಿತ್ಯ ಅಕಾಡೆಮಿ 1982-83ರಲ್ಲೇ ಇದನ್ನು ಕನ್ನಡಕ್ಕೆ ತರುವ ಸಂಕಲ್ಪ ಮಾಡಿತು. ಕೇರಳ ಸಾಹಿತ್ಯ ಅಕಾಡಮಿ ಇದಕ್ಕೆ ಒಪ್ಪಿಗೆ ಕೊಟ್ಟಿದ್ದಲ್ಲದೆ ಪ್ರಕಟನೆಗಾಗಿ ಹತ್ತುಸಾವಿರ ರೂಪಾಯಿಗಳನ್ನೂ ಮುಂಗಡವಾಗಿ ಕೊಟ್ಟಿತ್ತು. ಆದರೆ ಕಾರ್ಯ ಮುಂದುವರಿದಿರಲಿಲ್ಲ.

1987-88ರಲ್ಲಿ ಡಾ. ಶಿವರುದ್ರಪ್ಪನವರು ಅಧ್ಯಕ್ಷರಾದ ಮೇಲೆ ಈ ಗ್ರಂಥವನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಲೇಬೇಕೆಂದು ದೃಢನಿಶ್ಚಯ ಮಾಡಿದರು. ತಾವು ಪ್ರಧಾನ ಸಂಪಾದಕರಾಗಿದ್ದುಕೊಂಡು ಪ್ರೊಫೆಸರ್ ಎಲ್.ಎಸ್. ಶೇಷಗಿರಿರಾಯರನ್ನೂ ಸಂಪಾದಕರನ್ನಾಗಿ ಮಾಡಿದರು. ಆಗ ರಿಜಿಸ್ಟ್ರಾರ್ ಆಗಿದ್ದ ಡಿ.ಕೆ. ಶ್ಯಾಮಸುಂದರ ರಾವ್ ಅವರೂ ಪೂರ್ಣ ಮನಸ್ಸಿನಿಂದ ಈ ಕಾರ್ಯದಲ್ಲಿ ನೆರವಾದರು. ಈ ಮೂರೂ ಜನರ ಶ್ರದ್ಧೆ, ನಿರಂತರ ದುಡಿಮೆಯ ಪರಿಣಾಮವಾಗಿ ಮೂರೇ ವರ್ಷಗಳಲ್ಲಿ (1990) ಎರಡು ಸಂಪುಟಗಳಲ್ಲಿ

ಈ ಬೃಹದ್ಗ್ರಂಥ ಕನ್ನಡದಲ್ಲಿ ಪ್ರಕಟವಾಗಿ ಬಿಡುಗಡೆಯಾಯಿತು. ಈ ಗ್ರಂಥದ ಪುಟ ಸಂಖ್ಯೆ 1960. ಒಟ್ಟು 199 ಲೇಖನಗಳು 102 ಜನ ಲೇಖಕರಿಂದ ಅನುವಾದಿಸಲ್ಪಟ್ಟವು. ಪಾರಿಭಾಷಿಕ ಶಬ್ದಗಳ ಸೂಚಿ, ಮೂಲ ಲೇಖಕರ ಮತ್ತು ಅನುವಾದಕರ ವಿಳಾಸ ಇವುಗಳಿಂದ ಕೂಡಿ ಗ್ರಂಥ ಪರಿಪೂರ್ಣವಾಗಿದೆ. ಇಂಥದೊಂದು ಮೌಲಿಕ ಗ್ರಂಥ ಅವರ ಅಧಿಕಾರದ ಅವಧಿಯಲ್ಲೇ ಪ್ರಕಟವಾಗಲು ಸಾಧ್ಯವಾದುದಕ್ಕೆ ಕಾರಣ ಡಾ. ಜಿ.ಎಸ್. ಶಿವರುದ್ರಪ್ಪನವರ ದೃಢ ಸಂಕಲ್ಪವೇ.

ಇದೇ ರೀತಿ 1984-87ರಲ್ಲಿ ಪ್ರೊಫೆಸರ್ ಕೆ.ಎಸ್. ನಿಸಾರ್ ಅಹಮದ್ ಅವರು ಅಧ್ಯಕ್ಷರಾಗಿದ್ದಾಗ ಹೊಸಗನ್ನಡವನ್ನು ಕಟ್ಟಿ ಬೆಳೆಸಿದ ಲೇಖಕರ ವ್ಯಕ್ತಿತ್ವ ಹಾಗೂ ಸಾಹಿತ್ಯ ಸಾಧನೆಯ ಸಂಕ್ಷಿಪ್ತ ಸಮೀಕ್ಷೆಯನ್ನು ಒಳಗೊಂಡ 'ಸಾಲುದೀಪ' ಎನ್ನುವ ಗ್ರಂಥವನ್ನು ಪ್ರಕಟಿಸುವ ಯೋಜನೆ ಮಾಡಲಾಯಿತು. ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ ಮತ್ತು ಪ್ರೊ. ಎಂ.ಎಚ್. ಕೃಷ್ಣಯ್ಯ ಗ್ರಂಥದ ಸಂಪಾದಕರಾಗಿ ನಿಯುಕ್ತರಾಗಿದ್ದರು. ಆದರೆ ಆ ಕೆಲಸವೂ ಸ್ಥಗಿತಗೊಂಡಿತ್ತು. ಡಾ. ಜಿಎಸ್‌ಎಸ್ ಈ ಕೆಲಸವನ್ನೂ ಮಾಡಿ ಮುಗಿಸಿದರು. ಮೊದಲು ಯೋಚಿಸಲ್ಪಾಗಿದ್ದ 22 ಲೇಖನಗಳ ಜೊತೆ ಇನ್ನೂ 34 ಲೇಖನಗಳನ್ನು ಸೇರಿಸಲಾಯಿತು. ಪರಿಶಿಷ್ಟದಲ್ಲಿ ಸಾಹಿತಿಗಳ ಕಿರು ಪರಿಚಯ ಮತ್ತು ಫೋಟೋ, ಲೇಖಕರ ವಿಳಾಸಗಳಿಂದ ಕೂಡಿದ 384 ಪುಟಗಳ ಈ ಗ್ರಂಥವೂ ಡಾ. ಜಿಎಸ್‌ಎಸ್ ಅವರ ಅಧಿಕಾರಾವಧಿಯಲ್ಲಿ ಪ್ರಕಟವಾದ ಮಹತ್ವದ ಗ್ರಂಥಗಳಲ್ಲೊಂದು.

ಅಕಾಡೆಮಿ ಹಿಂದಿನಿಂದಲೂ, ಆಯ್ದ ಲೇಖಕರನ್ನು ತನ್ನ ಖರ್ಚಿನಲ್ಲಿ ಭಾರತದ ಇತರ ಭಾಷಾವಲಯಕ್ಕೆ ಕಳುಹಿಸುವ, ಆ ಭಾಷೆಯ ಸಾಹಿತ್ಯ ಬಗ್ಗೆ ಪರಿಚಯ ಮಾಡಿಕೊಳ್ಳುವ ಅವಕಾಶ ಕಲ್ಪಿಸಿತ್ತು. ಪ್ರವಾಸ ಹೋಗಿ ಬಂದ ಲೇಖಕರು ಒಂದು ವರದಿಯನ್ನು ಸಿದ್ಧಪಡಿಸಿ ಅಕಾಡಮಿಗೆ ಒಪ್ಪಿಸಿದರೆ ಸಾಕಾಗಿತ್ತು. ಜಿಎಸ್‌ಎಸ್ ಹೀಗೆ ಹೋಗಿ ಬಂದ ಲೇಖಕರಿಂದ ತಮ್ಮ ಅನುಭವ ಕಥನವನ್ನು ಬರೆಸಿ ಪ್ರಕಟಿಸುವ ಮೂಲಕ ಅವರ ಪ್ರವಾಸ ಸಾಹಿತ್ಯದಲ್ಲಿ ದಾಖಲಾಗುವಂತೆ ಮಾಡಿದರು. ಇವುಗಳಲ್ಲದೆ ವಿಚಾರ ಗೋಷ್ಠಿಯಲ್ಲಿ ಮಂಡಿತವಾದ ಪ್ರಬಂಧಗಳ ಸಂಕಲನಗಳನ್ನು ಪ್ರಕಟಿಸುವ ಕೆಲಸವೂ ನಡೆದೇ ಇತ್ತು.

ಡಾ. ಜಿಎಸ್‌ಎಸ್ ತಮ್ಮ ಅಧ್ಯಕ್ಷತೆಯ ಕಾಲದಲ್ಲಿ ಇನ್ನೊಂದು ಮುಖ್ಯ ಕೆಲಸ ಮಾಡಿದರು. ಕರ್ನಾಟಕ ಸಾಹಿತ್ಯ ಅಕಾಡೆಮಿ ಕೊಡುವ ಪ್ರಶಸ್ತಿಗಳ ಸಮಾರಂಭ ಇದುವರೆಗೆ ಸಾಮಾನ್ಯವಾಗಿ ಬೆಂಗಳೂರಿನಲ್ಲೇ ನಡೆಯುತ್ತಿತ್ತು. ಇದರಿಂದ ಬೇರೆ ಪ್ರದೇಶದ ಕನ್ನಡಿಗರಿಗೆ ಇದರ ಸ್ವರೂಪವೇ ತಿಳಿದಿರಲಿಲ್ಲ. ಡಾ. ಜಿಎಸ್‌ಎಸ್ ಈ ಪದ್ಧತಿಯನ್ನು ತಪ್ಪಿಸಿ ಒಂದೊಂದು ವರ್ಷ ಒಂದೊಂದು ಮುಖ್ಯ ನಗರಗಳಲ್ಲಿ ನಡೆಯುವ ವ್ಯವಸ್ಥೆ ಮಾಡಿದರು.

ಮೂರು ಮೂರೂವರೆ ವರ್ಷಗಳ ಅವಧಿಯಲ್ಲಿ ಇಷ್ಟೆಲ್ಲ ಕೆಲಸ ಮಾಡಬೇಕೆಂದರೆ ಅದರ ಹಿಂದೆ ಎಷ್ಟು ದುಡಿಮೆ, ಎಂಥ ಶ್ರದ್ಧೆ ಇರಬೇಕೆಂಬುದನ್ನು ಯಾರಾದರೂ ಕಲ್ಪಿಸಿಕೊಳ್ಳಬಹುದು.

ಡಾ. ಜಿ.ಎಸ್. ಶಿವರುದ್ರಪ್ಪನವರು ತಮ್ಮ ಅಧ್ಯಕ್ಷ ಪದವಿಯನ್ನು ಕೇವಲ ಗೌರವದ ಪದವಿಯೆಂದು ಭಾವಿಸಿ, ಮೀಟಿಂಗ್‌ಗಳಿಗೆ, ಕಾರ್ಯಕ್ರಮಗಳಿಗೆ ಮಾತ್ರ ಹಾಜರಾಗದೆ ಪೂರ್ಣಾವಧಿಯ ನೌಕರನಿಗಿಂತ ಹೆಚ್ಚಾಗಿ, ಪ್ರತಿದಿನ ಅಕಾಡಮಿ ಆಫೀಸಿಗೆ ಹೋಗುತ್ತಿದ್ದರು. ದಿನನಿತ್ಯ ತಾವು ಆರಂಭಿಸಿದ್ದ ಕೆಲಸದ ಮುನ್ನಡೆಯನ್ನು ಪರೀಕ್ಷಿಸುತ್ತಿದ್ದರು. ವಿಚಾರಗೋಷ್ಠಿಗಳ, ಗ್ರಂಥ ಬಿಡುಗಡೆ, ಪ್ರಶಸ್ತಿ ಪ್ರದಾನ ಮುಂತಾದ ಕಾರ್ಯಕ್ರಮಗಳ ವ್ಯವಸ್ಥೆಯ ಬಗ್ಗೆ ರಿಜಿಸ್ಟ್ರಾರ್ ಮತ್ತಿತರ ಜೊತೆ ವಿವರವಾಗಿ ಚರ್ಚಿಸುತ್ತಿದ್ದರು. ಕಾರ್ಯಕ್ರಮ ನಿರೂಪಕರಿಂದ ಹಿಡಿದ ಭಾಷಣಕಾರರು, ಮುಖ್ಯ ಅತಿಥಿಗಳು ಮುಂತಾದವರನ್ನು ವಿಷಯಕ್ಕೆ ತಕ್ಕಹಾಗೆ ಆರಿಸುತ್ತಿದ್ದರು. ಹೀಗಾಗಿ ಕಾರ್ಯಕ್ರಮಗಳಲ್ಲಿ ಒಂದು ಅಚ್ಚುಕಟ್ಟು ಎದ್ದು ಕಾಣುತ್ತಿತ್ತು. ಇಷ್ಟಾದರೂ ಪ್ರಶಸ್ತಿಗಾಗಿ ಸಾಹಿತಿಗಳನ್ನು ಆಯ್ಕೆ ಮಾಡುವಾಗ ಅವರೆಂದೂ ಸದಸ್ಯರ ಮೇಲೆ ಒತ್ತಾಯ ಹೇರಿದ್ದನ್ನು ನಾನು ಕಾಣಲಿಲ್ಲ.

ಡಾ. ಜಿಎಸ್‌ಎಸ್ ಅವರ ಮಾನವೀಯ ಗುಣವನ್ನೂ ನಾನು ಮರೆಯಲಾರೆ. ನಾನು ಅಕಾಡಮಿಯ ಸದಸ್ಯೆಯಾಗಿದ್ದಾಗಲೇ ನನಗೆ ಮೈಸೂರು ಆಕಾಶವಾಣಿ ನಿಲಯಕ್ಕೆ ವರ್ಗವಾಯಿತು. ಅಕಾಡಮಿಯ ಸಭೆಗಳಿಗೆ ಅಲ್ಲಿಂದಲೇ ಹೋಗಿ ಬರುತ್ತಿದ್ದೆ. ಒಮ್ಮೆ ಹಾಸನದಲ್ಲಿ ಸಾಹಿತ್ಯ ಅಕಾಡಮಿ ವತಿಯಿಂದ ಮಹಿಳಾ ಗೋಷ್ಠಿ ನಡೆಯುವುದೆಂದು ತೀರ್ಮಾನವಾಯಿತು. ಸದಸ್ಯೆಯಾಗಿ ಹಾಗೂ ಲೇಖಕಿಯಾಗಿ ನಾನೂ ಈ ಗೋಷ್ಠಿಯಲ್ಲಿ ಭಾಗವಹಿಸಲೇ ಬೇಕಾಗಿತ್ತು. ಆದರೆ ಆಗ ನಿಲಯದ ನಿರ್ದೇಶಕರಾಗಿದ್ದವರು ನನಗೆ ರಜೆ ಕೊಡಲು ಒಪ್ಪಲಿಲ್ಲ. ಅಧ್ಯಕ್ಷರಿಗೆ ನಾನು ಹಾಗೆಂದು ತಿಳಿಸಲೇಬೇಕಾಯಿತು. ಆಗ ಅವರು ನಿರ್ದೇಶಕರಿಗೆ ಕಾಗದ ಬರೆದು ನನಗೆ ಹಾಸನಕ್ಕೆ ಹೋಗಲು ಒಪ್ಪಿಗೆ ಸಿಗುವಂತೆ ಮಾಡಿದರು.

ಜಿಎಸ್‌ಎಸ್ ಅವರ ಮನೆಗೆ ಸಮೀಪವೇ ನಮ್ಮ ಮನೆ. ಅಕಾಡಮಿಯ ಸಮಿತಿಯ ಸಭೆ ಇದ್ದಾಗ ಪ್ರತಿಸಲ ನನ್ನನ್ನು ಅವರು ತಮ್ಮ ಕಾರಿನಲ್ಲೇ ಕರೆದುಕೊಂಡು ಹೋಗುತ್ತಿದ್ದುದನ್ನು ನಾನೆಂದೂ ಮರೆಯಲಾರೆ.

ಡಾ. ಜಿಎಸ್‌ಎಸ್ ಈಗಲೂ ಅನೇಕ ಸಾಹಿತ್ಯಿಕ, ಸಾಂಸ್ಕೃತಿಕ ಸಮಿತಿಗಳಲ್ಲಿ, ಸಂಸ್ಥೆಗಳಲ್ಲಿ ಅಧ್ಯಕ್ಷರಾಗಿ, ಸಲಹೆಗಾರರಾಗಿ ದುಡಿಯುತ್ತಿದ್ದಾರೆ. ತಮ್ಮ ಬರವಣಿಗೆಯಷ್ಟೇ, ಇಂತಹ ಕೆಲಸಗಳು ಮಹತ್ವದೆಂದು ತಿಳಿದಿದ್ದಾರೆ. ಇಂಥ ಸಹೃದಯ, ಪ್ರತಿಭಾವಂತರ ಮಾರ್ಗದರ್ಶನ ಕನ್ನಡಿಗರಿಗೆ ಬಹುಕಾಲ ದೊರೆಯುತ್ತಿರುತ್ತದೆ ಎನ್ನುವುದೇ ನಮ್ಮಂತಹವರ ನಿರೀಕ್ಷೆ, ಹಾರೈಕೆ.

■

# ಬಂಡುಕೋರ ಪ್ರತಿಭೆಯ ಪೋಷಕ

ಪ್ರಸನ್ನ

ನಾನು ಕನ್ನಡ ಎಂ.ಎ. ಓದಲಿಲ್ಲ, ವಿಜ್ಞಾನವನ್ನು ಓದಿದೆ. ಹಾಗಾಗಿ ಸೆಂಟ್ರಲ್ ಕಾಲೇಜಿನಲ್ಲಿ ನಾನು ಕಳೆದ ಐದುವರ್ಷ, ಜಿಎಸ್ಎಸ್ ನನಗೆ ನೇರವಾಗಿ ಪಾಠ ಹೇಳಲಿಲ್ಲ; ಐಚ್ಛಿಕ ಕನ್ನಡವನ್ನು ಕಿರಿಯ ಅಧ್ಯಾಪಕರುಗಳು ನಿರ್ವಹಿಸುತ್ತಿದ್ದರು. ಆದರೆ ತೀರ ಹತ್ತಿರ ಸರಿಯದೆ ಐದೂವರ್ಷ ಜಿಎಸ್ಎಸ್ ಸುತ್ತಮುತ್ತ ಓಡಾಡಿಕೊಂಡಿದ್ದವನು ನಾನು; ಈಗಲೂ ಅಷ್ಟೆ, ಜಿಎಸ್ಎಸ್ ನನಗೆ ಗೌರವಯುತ ಹಿರಿಯರು.

ನನ್ನ ಒಡನಾಟವಿದ್ದದ್ದು ಜಿಎಸ್ಎಸ್ ಅವರ ಬಂಡುಕೋರ ಶಿಷ್ಯಗಣದೊಟ್ಟಿಗೆ. ಬಂಡುಕೋರ ಶಿಷ್ಯಗಣವೆಂಬುದು ಜಿಎಸ್ಎಸ್ ವ್ಯಕ್ತಿತ್ವದ ಬಹುಮುಖ್ಯ ಅಂಶ. ಅವರೇ ಪೋಷಿಸಿಕೊಂಡು ಬಂದ ಅವರ ಪ್ರೀತಿಯ ವಿದ್ಯಾರ್ಥಿಗಳ ಪಡೆಯದು. ಜಿಎಸ್ಎಸ್ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆ ಕಟ್ಟುವ ವೇಳೆಗಾಗಲೇ, ಹಲವು ಘಟಾನುಘಟಿಗಳು ಹಲವು ಕನ್ನಡ ಅಧ್ಯಯನ ಸಂಸ್ಥೆಗಳನ್ನು ಕಟ್ಟಿ ಕೀರ್ತಿವಂತರಾಗಿಯಾಗಿತ್ತು. ಅವರ ಗುರುಗಳೇ ಆದ ಕುವೆಂಪು ಕೀರ್ತಿ ಜಿಎಸ್ಎಸ್ ಕಣ್ಣೆದುರಿಗಿತ್ತು. ಆದರೆ ಒಂದು ಬಂಡುಕೋರ ಪ್ರತಿಭೆ ಪೋಷಣೆಯ ಮಟ್ಟಿಗೆ ಹೇಳುವುದಾದರೆ ಗುರುಗಳನ್ನೂ ಮೀರಿಸಿದ ಹಿರಿಮೆ ಜಿಎಸ್ಎಸ್ ಅವರದ್ದು.

ಆಗಿನ ಬೆಂಗಳೂರೆಂಬುದು (ಎಪ್ಪತ್ತರ ದಶಕದ ಆರಂಭದ ದಿನಗಳು) ಮೈಸೂರು ಧಾರವಾಡಗಳಿಗಿಂತ ಭಿನ್ನವಾದ ನಗರ. ಆಗಿನ ಕರ್ನಾಟಕದಲ್ಲಿ ಯಾವುದಾದರೂ ನಗರವನ್ನು ಅಪ್ಪಟನಗರ ಎನ್ನಬಹುದಾಗಿದ್ದರೆ ಅದು ಬೆಂಗಳೂರನ್ನು ಮಾತ್ರ. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರ ನಗರ ಪ್ರಜ್ಞೆಯನ್ನು ಮೈಗೂಡಿಸಿಕೊಂಡ ಮೊದಲ ಕನ್ನಡ ವಿಭಾಗ ಎಂದರೆ ತಪ್ಪಾಗಲಾರದು. ಅಲ್ಲಿಯವರೆಗೂ ಕನ್ನಡ ವಿಭಾಗಗಳೆಂದರೆ ಪಂಪ ರನ್ನ ಮತ್ತು ಸಾಹಿತ್ಯ ಚರಿತ್ರೆಯ ಪಾಂಡಿತ್ಯ ಪೋಷಣೆಗೆ ಮೀಸಲಾಗಿದ್ದೆಂದೂ ನವ್ಯತೆ ಸಮಕಾಲೀನತೆಗಳೇನಿದ್ದರೂ ಇಂಗ್ಲಿಷ್ ವಿಭಾಗಗಳ ಜವಾಬ್ದಾರಿಯೆಂದೂ ನಂಬಿಕೆ ಮುಂದುವರೆದು ಬಂದಿತ್ತು. ಲಂಕೇಶ್, ಅನಂತಮೂರ್ತಿ, ಚಂಪಾ, ಕೀರ್ತಿನಾಥ ಕುರ್ತಕೋಟಿ, ಎಂ.ಜಿ.ಕೆ. ಇತ್ಯಾದಿ ಎಲ್ಲರೂ ಇಂಗ್ಲಿಷ್ ಅಧ್ಯಾಪಕರುಗಳು ಎಂಬುದನ್ನ ನಾನು ಮತ್ತೆ ನೆನಪಿಸಬೇಕಿಲ್ಲ. ಜಿಎಸ್ಎಸ್ ಕನ್ನಡ ಭಾಷೆಯನ್ನು ಕನ್ನಡ ಅಧ್ಯಯನ ಸಂಸ್ಥೆಗೆ

ಇಡಿಯಾಗಿ ಸೇರಿಸಿದರು. ಇಂದು ಕನ್ನಡ ಅಧ್ಯಯನ ಸಂಸ್ಥೆಗಳಿಗೆ ಪಂಪನೊಟ್ಟಿಗೆ ಶೇಕ್ಸಪಿಯರನ್ನು, ಅಲ್ಲಮನೊಟ್ಟಿಗೆ ಕಾರ್ಲ್‌ಮಾರ್ಕ್ಸ್‌ನನ್ನ ಇಟ್ಟು ನೋಡಬಲ್ಲ ಶಕ್ತಿ ಬಂದಿದ್ದರೆ ಜಿಎಸ್‌ಎಸ್ ಅದಕ್ಕೆ ಬಹುಮುಖ್ಯ ಕಾರಣರು.

ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಹಲವು ಸೆಮಿನಾರುಗಳಲ್ಲಿ ನಾನು ಹಿಂದಿನ ಬೆಂಚುಗಳಲ್ಲಿ ಕೂತದ್ದಿದೆ. ಒಂದೆರಡರಲ್ಲಿ ಜಿಎಸ್‌ಎಸ್ ನನ್ನನ್ನೂ ಹುರಿದುಂಬಿಸಿ ಮಾತನಾಡುವಂತೆ ಪ್ರೇರೇಪಿಸಿದ್ದಿದೆ. ಕುವೆಂಪು ಸೆಮಿನಾರಿನಲ್ಲಿ 'ಕಲ್ಕಿ' ಪದ್ಯವನ್ನು ರಂಗಕೃತಿಯಾಗಿ ಪ್ರದರ್ಶಿಸಿದ್ದು, ಈಗ ಅಷ್ಟೇನೂ ಮಹತ್ವದ ಸಂಗತಿಯಾಗಿ ಕಾಣಿಸುವುದಿಲ್ಲ. ಆದರೆ ಎಪ್ಪತರ ದಶಕದ ಸಾಹಿತ್ಯಾಭ್ಯಾಸ ಕ್ರಮದಲ್ಲಿ ಅಂಥದ್ದನ್ನೆಲ್ಲ ಯೋಚಿಸುವುದು ಕೂಡಾ ಸಾಧ್ಯವಿದ್ದಿದ್ದಿಲ್ಲ. ಕನ್ನಡದಲ್ಲಿ ಸಾಹಿತ್ಯದ ಅಧ್ಯಯನವನ್ನ ಸಮಕಾಲೀನ ಸಂಸ್ಕೃತಿಯ ಅಧ್ಯಯನವನ್ನಾಗಿಸಿದ್ದು ಜಿಎಸ್‌ಎಸ್.

ಅರವತ್ತು ಎಪ್ಪತ್ತರ ದಶಕ ಕನ್ನಡದಲ್ಲಿ ಎಡಪಂಥದ ಉಗಮದ ಕಾಲ. ಹಲವು ಬಂಡಾಯಗಳು ಹುಟ್ಟಿದ್ದು ಆಗಲೇ. ಬೆಂಗಳೂರು ವಿಶ್ವವಿದ್ಯಾಲಯ ಆಗಿನ್ನೂ ಯೌವನಕ್ಕೆ ಬರುತ್ತಿದ್ದ ಯುವಸಂಸ್ಥೆ. ಬೆಂಗಳೂರನ್ನ ಕೇಂದ್ರವಾಗಿಸಿಕೊಂಡು ಬಂದ ಬೂಸಾ ಚಳುವಳಿ, ಬರಹಗಾರರ ಒಕ್ಕೂಟ, ಸಮುದಾಯ, ದಲಿತ ಸಂಘರ್ಷ ಸಮಿತಿ, ಬಂಡಾಯ ಸಾಹಿತ್ಯ ಸಂಘಟನೆ ಇತ್ಯಾದಿ ಎಲ್ಲವೂ ಮೈತಳೆದದ್ದು ಸೆಂಟ್ರಲ್ ಕಾಲೇಜಿನಲ್ಲಿ. ಹೆಚ್ಚಿನ ಚಳುವಳಿಗಳ ಆರಂಭಿಕ ಚರ್ಚೆಗಳಾಗುತ್ತಿದ್ದದ್ದು ಸೆಂಟ್ರಲ್ ಕಾಲೇಜಿನ ಲೈಬ್ರರಿ ಎದುರಿಗಿದ್ದ ಮುರುಕು ಕಲ್ಲುಬೆಂಚಿನ ಮೇಲೆ. ಅಲ್ಲಿ ತಮ್ಮ 'ಸೋಮಾರಿ ಕಟ್ಟೆ'ಯನ್ನು ಸ್ಥಾಪಿಸಿಕೊಂಡಿದ್ದವರು ಅಷ್ಟೇನೂ ಸೋಮಾರಿಗಳಲ್ಲದ ಪ್ರತಿಭಾವಂತರುಗಳು. ಈ ಎಲ್ಲ ಚಳವಳಿಗಳಿಗೂ ಸೌಮ್ಯವಾದಿ ಜಿಎಸ್‌ಎಸ್ ಅವರಿಗೂ ಇದ್ದ ಸಂಬಂಧ ಎಂತಹದು ಎಂದು ನಾನು ಯೋಚಿಸಿದ್ದೇನೆ.

ತನ್ನ ಬಂಡುಕೋರ ಶಿಷ್ಯವೃಂದ ನಾಗರೀಕ ಸಂಹಿತೆಯನ್ನು ಹರಿದು ಹೊರನಡೆಯದಂತೆ ನೋಡಿಕೊಂಡವರು ಜಿಎಸ್‌ಎಸ್. ಸೌಮ್ಯವಾದದ ಶ್ರೀರಕ್ಷೆಯನ್ನು ಯುವಕರಿಗೆ ನೀಡಿ ಯೌವನದ ಬಿಸಿಯನ್ನ ಅವರಿಂದ ಕನ್ನಡ ಅಧ್ಯಯನಕ್ಕೆ ಹಿಂತಿರುಗಿಸುತ್ತಿದ್ದರು ಜಿಎಸ್‌ಎಸ್. ಈಗ ಜಿಎಸ್‌ಎಸ್ ನಿವೃತ್ತರಾಗಿದ್ದಾರೆ, ಆದರೂ ಬಂಡಾಯ ಅವರ ಬೆನ್ನು ಬಿಟ್ಟಂತಿಲ್ಲ. ನಮಗೂ ಜಿಎಸ್‌ಎಸ್ ವಯಸ್ಸಿಗೆ, ಅಷ್ಟೇ ಶಾಂತವಾದ ಸೌಮ್ಯರೀತಿಯಲ್ಲಿ ಬಂಡಾಯಗಾರರಾಗಿ ಉಳಿಯಲಿಕ್ಕೆ ಸಾಧ್ಯವಾಗುವುದಾದರೆ ನಾವುಗಳು ಧನ್ಯವೇ ಸರಿ.

ಜಿಎಸ್‌ಎಸ್ ಕಾವ್ಯದ ಬಗ್ಗೆ, ಅವರ ವಿಮರ್ಶಾಬರಹಗಳ ಬಗ್ಗೆ ನನಗಿಂತ ಸಮರ್ಥವಾಗಿ ಬರೆಯಬಲ್ಲ ಶಿಷ್ಯರು ಸ್ನೇಹಿತರು ಜಿಎಸ್‌ಎಸ್‌ಗಿದ್ದಾರೆ. ಹಾಗಾಗಿ ಅವುಗಳನ್ನು ಇಲ್ಲಿ ಚರ್ಚಿಸದೆ ನನ್ನೆರಡು ಮಾತುಗಳನ್ನು ಮುಗಿಸುತ್ತೇನೆ

■

# ಆತ್ಮೀಯ ಹಿರಿಯ ಚೇತನ

**ಬಿ. ಆರ್. ಲಕ್ಷ್ಮಣರಾವ್**

ಜಿಎಸ್‌ಎಸ್ ಅವರನ್ನು ನಾನು ಮೊಟ್ಟಮೊದಲ ಬಾರಿಗೆ ಮೊಖ್ತಾ ಕಂಡದ್ದು 1965ರಲ್ಲಿ ಎಂದು ನೆನಪು. ಅವರು ಅದೇ ತಾನೇ ಹೈದರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾನಿಲಯ ಬಿಟ್ಟು ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗಕ್ಕೆ ಮುಖ್ಯಸ್ಥರಾಗಿ ಬಂದಿದ್ದರು. ನಾನಾಗ ಬೆಂಗಳೂರಲ್ಲಿ ಬಿ.ಎ. ಓದುತ್ತಿದ್ದೆ. ಅದೊಂದು ದಿನ ಲಂಕೇಶ್ ಜಿಎಸ್‌ಎಸ್ ಅವರನ್ನು ಕಾಣಲು ಹೋಗುವಾಗ ತಮ್ಮ ಪಟ್ಟ ಶಿಷ್ಯನಾದ ನನ್ನನ್ನೂ ಜೊತೆಯಲ್ಲಿ ಕರೆದೊಯ್ದಿದ್ದರು. ಬಿಳಿ ಜುಬ್ಬ, ಕಚ್ಚೆ ಪಂಚೆ ಧರಿಸಿದ್ದ ಜಿಎಸ್‌ಎಸ್ ಅವರ ಕಾವ್ಯ ಅಥವಾ ವಿಮರ್ಶೆಯ ಬಗ್ಗೆ ನನಗೆ ಹೆಚ್ಚಿಗೇನೂ ತಿಳಿದಿರಲಿಲ್ಲ. ಅದು 'ನವ್ಯ'ದ ವಿಜೃಂಭಣೆಯ ಕಾಲವಾದ್ದರಿಂದ, ಜಿಎಸ್‌ಎಸ್ ಅಥವಾ ಕಣವಿ ಇರಲಿ, ಸ್ವತಃ ಕುವೆಂಪು ಕಾವ್ಯದ ಬಗ್ಗೆ ಸಹ ನನ್ನಂಥವರಲ್ಲಿ ಹೆಚ್ಚಿನ ಆಸಕ್ತಿ ಮೂಡಿಸುವ ಮುಕ್ತ ವಾತಾವರಣ ಆಗ ಇರಲಿಲ್ಲ. ತದನಂತರದ ವರ್ಷಗಳಲ್ಲಿ, ಜಿಎಸ್‌ಎಸ್ ಪ್ರತಿ ವರ್ಷ ತಮ್ಮ ಕನ್ನಡ ವಿಭಾಗದ ಮೂಲಕ ಏರ್ಪಡಿಸುತ್ತಿದ್ದ ವಿಚಾರ ಸಂಕಿರಣ ಮತ್ತು ಕವಿಗೋಷ್ಠಿಗಳಲ್ಲಿ ನಾನು ಹಲವು ಸಲ ಭಾಗವಹಿಸಿದ್ದೆ. ಕ್ರಮೇಣ ಜಿಎಸ್‌ಎಸ್ ಅವರ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಮಹತ್ವದ ಅರಿವು ನನಗಾಗಿ, ಅವರಲ್ಲಿ ನನಗೆ ಗೌರವಾದರಗಳು ಹೆಚ್ಚಾದವು.

ಜಿಎಸ್‌ಎಸ್ ವ್ಯಕ್ತಿತ್ವ ನನಗೆ ಹತ್ತಿರಾದದ್ದು, ಆತ್ಮೀಯವಾದದ್ದು ನನ್ನ ಪರಮಾಪ್ತ ಮಿತ್ರ, ಕವಿ ಎಚ್.ಎಸ್. ವೆಂಕಟೇಶಮೂರ್ತಿಯ ಮೂಲಕ. ಮೂರ್ತಿಗೆ ತನ್ನ ಗುರುಗಳಾದ ಜಿಎಸ್‌ಎಸ್ ಅವರ ಬಗ್ಗೆ ಅಪಾರ ಗೌರವ, ಪ್ರೀತಿ. ಅವನ 'ಸಿಂದಾಬಾದನ ಆತ್ಮಕಥೆ' ಕವನ ಸಂಕಲನಕ್ಕೆ ಜಿಎಸ್‌ಎಸ್ ಬರೆದಿರುವ ಸೊಗಸಾದ, ಮೌಲಿಕವಾದ 'ಮುನ್ನುಡಿ' ನಿಜಕ್ಕೂ ಅವರ ಬಗ್ಗೆ ನನ್ನ ಕಣ್ತೆರೆಸಿತು. ಅಲ್ಲಿಂದಾಚೆಗೆ ಅವರ ಕಾವ್ಯ, ವಿಮರ್ಶೆ, ಮೀಮಾಂಸೆಗಳನ್ನು ನಾನು ಮುಕ್ತಮನಸ್ಸಿನಿಂದ ಅಧ್ಯಯನ ಮಾಡಿದೆ. ಅಲ್ಲಿಂದ ಮುಂದೆ 'ಸುಗಮ ಸಂಗೀತ' ಜಿಎಸ್‌ಎಸ್ ಅವರನ್ನು ನನಗೆ ಇನ್ನಷ್ಟು ಹತ್ತಿರವಾಗಿಸಿತು. ಇಂದು ಜಿಎಸ್‌ಎಸ್ ನನ್ನ ಅತ್ಯಂತ ಪ್ರೀತಿಯ, ಗೌರವದ, ಆತ್ಮೀಯ ಹಿರಿಯ ಚೇತನಗಳಲ್ಲಿ ಒಬ್ಬರಾಗಿದ್ದಾರೆ.

ಜಿಎಸ್‌ಎಸ್ ಕವಿಯಾಗಿ ನನಗೆ ಪ್ರಿಯರಾಗಲು ಕಾರಣ, ಅವರ ಮುಕ್ತ ಮನಸ್ಸು

ಮತ್ತು ಪ್ರಬುದ್ಧ ಜೀವನದೃಷ್ಟಿ. ಅವರ ಕಾವ್ಯ ನವೋದಯದಿಂದ ಮೊದಲಾಗಿ ನವ್ಯ, ಬಂಡಾಯ ಮುಂತಾದ ಎಲ್ಲ ಚಳುವಳಿಗಳನ್ನೂ ಹಾದು ಬಂದಿದೆ. ಈ ಎಲ್ಲದಕ್ಕೂ ಅವರು ತೆರೆದ ಮನಸ್ಸಿನಿಂದ ಸ್ಪಂದಿಸಿದ್ದಾರೆ; 'ಸುಗಮ ಸಂಗೀತ'ಕ್ಕೂ ಸಹ. ಆದರೆ ಎಲ್ಲೂ ಅವರು ತಮ್ಮ ಸ್ವಂತಿಕೆ ಮತ್ತು ಅನನ್ಯತೆಯನ್ನು ಬಿಟ್ಟು ಕೊಟ್ಟಿಲ್ಲ. ತಮ್ಮ ನಿಜ ದನಿಯನ್ನು ಕಳೆದು ಕೊಂಡಿಲ್ಲ. ಇಂದಿಗೂ ಸಹ ಅವರು ಹೊಸ ಹೊಸ ಪ್ರಯೋಗಗಳ ಮೂಲಕ ತಮ್ಮ ಕಾವ್ಯದ ಜೀವಂತಿಕೆ ಮತ್ತು ಹೊಳಪು ಮಾಸದಂತೆ ಉಳಿಸಿಕೊಂಡು ಬರುತ್ತಿರುವುದನ್ನು ಕಂಡು ನಾನು ನಿಜಕ್ಕೂ ವಿಸ್ಮಿತನಾಗಿದ್ದೇನೆ.

ಜಿಎಸ್‌ಎಸ್ ಎದೆ ತುಂಬಿ ಹಾಡಿದ ಕವಿ. ಸರಳರೆಂದು ತೋರಿದರೂ ಗಹನವಾದ ಭಾವಗೀತೆ ಮತ್ತು ಭಾವಗೀತಾತ್ಮಕ ಕವಿತೆ ಅವರ ವೈಶಿಷ್ಟ್ಯ. ಹಾಗೆಂದು ತಮ್ಮ ಸುತ್ತಲಿನ ಸಾಮಾಜಿಕ ಪಲ್ಲಟಗಳಿಗೆ ಅವರೆಂದೂ ಕುರುಡಾದವರಲ್ಲ. ಹಲವಾರು ವೈಚಾರಿಕ, ವಿಡಂಬನಾತ್ಮಕ ಕವಿತೆಗಳನ್ನು ಅವರು ರಚಿಸಿದ್ದಾರೆ. ಆದರೆ ಅವುಗಳಲ್ಲಿ ಅಬ್ಬರ, ಆಕ್ರೋಶಗಳಿಲ್ಲ; ವಿಷಾದವಿದೆ, ಅನುಕಂಪವಿದೆ, ಎಲ್ಲಕ್ಕಿಂತ ಮಿಗಿಲಾಗಿ ಆಶಾವಾದವಿದೆ. ಆದ್ದರಿಂದಲೇ ಅವರು 'ಹಣತೆ'ಯ ಕವಿ. ಶತಶತಮಾನಗಳಿಂದಲೂ ಬೆಳಕನ್ನು ಕಬಳಿಸಿ, ಅಟ್ಟಹಾಸ ಮಾಡುತ್ತಿರುವ ಕತ್ತಲಿನೆದುರು ಹತಾಶರಾಗದೆ ಅವರು ತಮ್ಮ ಹಣತೆ ಹಚ್ಚುತ್ತಲೇ ಬಂದಿದ್ದಾರೆ—ಕತ್ತಲನ್ನು ಗೆಲ್ಲಬೇಕೆಂಬ ಹಠದಿಂದಲ್ಲ; ತಾವು ನೆಚ್ಚಿದ ಏಕಮಾತ್ರ ಸತ್ಯವಾದ ಮಾನವೀಯ ಸೌಹಾರ್ದ ಸಂಬಂಧಗಳನ್ನು ಉಳಿಸಲೆಂದು, ಅಂತಃಕರಣ ಬೆಳಗಲೆಂದು. ಹೀಗಾಗಿ ಅವರು ಸಹೃದಯರಿಗೆ ಎಂದೆಂದಿನಿಂದಲೂ ಪ್ರಿಯ ರಾಗಿಯೇ ಉಳಿದು ಬಂದಿದ್ದಾರೆ.

ಹೊರ ನೋಟಕ್ಕೆ ಜಿಎಸ್‌ಎಸ್ ತುಂಬ reserved ಎಂಬಂತೆ ತೋರುತ್ತಾರೆ. ಆದರೆ ಒಮ್ಮೆ ಅವರ ಆತ್ಮೀಯ ವಲಯದೊಳಕ್ಕೆ ಪ್ರವೇಶ ಪಡೆದರೆ, ನಂತರ ಕಾಣುವ ವ್ಯಕ್ತಿಯೇ ಬೇರೆ. ಅಲ್ಲಿರುವುದು ಕೇವಲ ಪರಿಶುದ್ಧ ಸ್ನೇಹ, ಪ್ರೀತಿ ಮತ್ತು ಹೃದಯವಂತಿಕೆ. ಈ ಸಂದರ್ಭದಲ್ಲಿ ಇತ್ತೀಚೆಗೆ ನಡೆದ ಒಂದು ಘಟನೆ ನೆನಪಾಗುತ್ತದೆ. 'ಪಂಪ ಪ್ರಶಸ್ತಿ'ಗೆ ಪಾತ್ರರಾದ ಜಿಎಸ್‌ಎಸ್ ಮತ್ತು ಕಣವಿ ಅವರನ್ನು ನನ್ನೂರಾದ ಚಿಂತಾಮಣಿಯ 'ಗೆಳೆಯರ ಬಳಗ'ದಲ್ಲಿ ಏರ್ಪಡಿಸಿದ್ದ 'ಸಾಹಿತ್ಯ ಸಂವಾದ ಮತ್ತು ಅಭಿನಂದನೆ'ಯ ಕಾರ್ಯಕ್ರಮಕ್ಕೆ ನಾನು ಆಹ್ವಾನಿಸಿದ್ದೆ. ಅಚಾತುರ್ಯದಿಂದ ಈ ಇಬ್ಬರಿಗೂ ನಾನು ಕಾರ್ಯಕ್ರಮದ ದಿನಾಂಕವನ್ನು ತಪ್ಪಾಗಿ ತಿಳಿಸಿಬಿಟ್ಟಿದ್ದೆ. ಆ ದಿನಾಂಕದಂದು ಇಬ್ಬರಿಗೂ ಮೊದಲೇ ಗೊತ್ತಾದ ಬೇರೆ ಬೇರೆ ಕಾರ್ಯಕ್ರಮಗಳಿದ್ದವು. ಜಿಎಸ್‌ಎಸ್ ಕೇಂದ್ರ ಸಾಹಿತ್ಯ ಅಕಾಡೆಮಿಯ ಮುಖ್ಯ ಸಭೆಯೊಂದರಲ್ಲಿ ಪಾಲ್ಗೊಳ್ಳಲು ದೆಹಲಿಗೆ ಹೋಗಬೇಕಿತ್ತು. ಕಣವಿಯವರು ತುಮಕೂರಿನ ಕಾರ್ಯಕ್ರಮವೊಂದರಲ್ಲಿ ಭಾಗವಹಿಸಬೇಕಿತ್ತು. ನನ್ನ ತಪ್ಪಿನ ಅರಿವಾಗಿ, ನಾನು ಇಬ್ಬರಿಗೂ ಫೋನ್ ಮಾಡಿ, ಕ್ಷಮೆ ಯಾಚಿಸಿ, ಚಿಂತಾಮಣಿಯ ಕಾರ್ಯಕ್ರಮಕ್ಕೆ ದಯವಿಟ್ಟು ಬರಬೇಕೆಂದು ಕೋರಿದೆ. ಇಬ್ಬರೂ ಹಿರಿಯರು ನನ್ನ ಮತ್ತು ಚಿಂತಾಮಣಿಯ ಮೇಲಿನ

ಪ್ರೀತಿಯೇ ಕಾರಣವಾಗಿ, ತಮ್ಮ ಅಂದಿನ ಕಾರ್ಯಕ್ರಮಗಳನ್ನು ರದ್ದು ಮಾಡಿ, ನಮ್ಮಲ್ಲಿಗೆ ಬಂದು, ನಮ್ಮ ಕಾರ್ಯಕ್ರಮವನ್ನು ಅತ್ಯಂತ ಯಶಸ್ವಿಯಾಗಿ, ಅವಿಸ್ಮರಣೀಯವಾಗಿ ನಡೆಸಿಕೊಟ್ಟರು. ಇದನ್ನು ನೆನೆದಾಗಲೆಲ್ಲ ನನಗೆ ಈ ಇಬ್ಬರೂ ಹಿರಿಯರ ಬಗ್ಗೆ ಪ್ರೀತಿ ಗೌರವಗಳಿಂದ ಹೃದಯ ತುಂಬಿ ಬರುತ್ತೆ.

ಜಿಎಸ್‌ಎಸ್ ತಮ್ಮ ಮೌಲಿಕ ಕೃತಿಗಳ ಮೂಲಕ ಹಾಗೂ ತಾವು ಸಮರ್ಥವಾಗಿ ನಿರ್ವಹಿಸಿದ ಕನ್ನಡದ ಮಹತ್ವದ ಕೆಲಸಗಳ ಮೂಲಕ ಗಳಿಸಿಕೊಂಡಿರುವ ಸಾಂಸ್ಕೃತಿಕ ಪ್ರಾಮುಖ್ಯತೆ ಎಲ್ಲರೂ ಬಲ್ಲ ಸಂಗತಿ. ಹಾಗೆಯೇ, ಕೋಮು ಸೌಹಾರ್ದತೆಗೆ ಮತ್ತು ಸೃಜನಶೀಲತೆಯ ಸ್ವಾತಂತ್ರ್ಯಕ್ಕೆ ಧಕ್ಕೆ ಬಂದಾಗ ಅವರು ಪ್ರಕಟಿಸಿದ ದಿಟ್ಟ ಪ್ರತಿಭಟನೆ, ಅದಕ್ಕಾಗಿ ಅವರು ಅನುಭವಿಸಬೇಕಾಗಿ ಬಂದ ಮಾನಸಿಕ ಹಿಂಸೆ, ಬೆದರಿಕೆ, ಬಹಿಷ್ಕಾರ ಇತ್ಯಾದಿಗಳೂ ಸಹ ಸರ್ವವಿದಿತ ಸಂಗತಿಗಳೇ. ಇಂಥ ಒಬ್ಬ ಧೀಮಂತ ಕವಿಗೆ ಇದೀಗ ಎಪ್ಪತ್ತೈದು ತುಂಬಿದೆ. ಅವರಿಗೆ ಹೃತ್ಪೂರ್ವಕ ಅಭಿನಂದನೆಗಳು, ಶುಭಾಶಯಗಳು. ಅವರು ಇನ್ನೂ ಬಹುಕಾಲ ನಮ್ಮೊಂದಿಗಿದ್ದು, ನಮಗೆ ಸ್ಫೂರ್ತಿದಾಯಕರಾಗಲಿ. ಅವರು ಹಚ್ಚಿದ 'ಹಣತೆ' ನಾಡಿಗೆ ನಂದಾದೀಪವಾಗಲಿ. ಇದು ಅವರ ಅಭಿಮಾನಿಗಳೆಲ್ಲರ ಹಾರೈಕೆ.

■

# ಎತ್ತಣಿಂದೆತ್ತ ಸಂಬಂಧವಯ್ಯಾ....!

ಡಿ. ಎಸ್. ನಾಗಭೂಷಣ

**ಜಿ**ಎಸ್‌ಎಸ್ ಅವರನ್ನು ನಾನು ಮೊದಲು ನೋಡಿದ್ದು 1967ರಲ್ಲಿ ಎಂದು ತೋರುತ್ತದೆ. ಆಗ ನಾನು ಬೆಂಗಳೂರಿನ ಎಸ್. ನಿಜಲಿಂಗಪ್ಪ ಕಾಲೇಜಿನಲ್ಲಿ ಪ್ರಥಮ ವರ್ಷದ ಬಿ.ಎಸ್‌ಸಿ., ವಿದ್ಯಾರ್ಥಿ. ಅವರ 'ದೀಪದ ಹೆಜ್ಜೆ' ಕವನ ಸಂಕಲನ ನಮಗೆ ಪಠ್ಯವಾಗಿತ್ತು. ನಮ್ಮ ಕಾಲೇಜಿನ ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದ ಶ್ರೀಮತಿ ಶಾಂತಾ ಕಡಗದ್ ಅವರು ಜಿಎಸ್‌ಎಸ್ ಅವರನ್ನು ನಾವು ರಚಿಸಿಕೊಂಡಿದ್ದ ಕರ್ನಾಟಕ ಸಂಘದ ಆಶ್ರಯದಲ್ಲಿ ವಿಶೇಷ ಉಪನ್ಯಾಸಕ್ಕಾಗಿ ಕರೆತಂದಿದ್ದರು. "ಉಡುಗಣ ವೇಷ್ಟಿತ....", "ಹೌದೇನೇ ಉಮಾ..." ಮುಂತಾದ ರೇಡಿಯೋ ಭಾವಗೀತೆಗಳ ಮೂಲಕವೂ, 'ದೀಪದ ಹೆಜ್ಜೆ'ಯ "ಹುಟ್ಟಿದ ಹಬ್ಬ", "ಮಬ್ಬಿನಿಂದ ಮಬ್ಬಿಗೆ", "ಗಡಿಯಾರದಡಿಯಲ್ಲಿ", "ಸಂಜೆದಾರಿ" ಮುಂತಾದ ಹೊಸ ತೆರನ ಕವನಗಳ ಮೂಲಕವೂ ನನ್ನ ಸಾಹಿತ್ಯಿಕ ಕುತೂಹಲ ಕೆರಳಿಸಿದ್ದ ಜಿಎಸ್‌ಎಸ್ ಅಂದು ಚಿನ್ನದ ಬಣ್ಣದ ಕನ್ನಡಕದೊಂದಿಗೆ ಶುಭ್ರಶ್ವೇತವಸ್ತ್ರಧಾರಿಯಾಗಿ ವೇದಿಕೆಯನೇರಿದಾಗ ನನ್ನ ಬದುಕಿನಲ್ಲಿ ಆ ಕ್ಷಣ, ಮುಂದಿನ ವರ್ಷಗಳಲ್ಲಿ ಸ್ಥಾಪಿತವಾಗಲಿದ್ದ ಒಂದು ಹೊಸ, ಅರ್ಥಪೂರ್ಣವಾದ ಹಾಗೂ ಘನವಾದ ಸಂಬಂಧದ ನಾಂದಿಯಾಗಿರುತ್ತದೆ ಎಂಬ ಅರಿವಾದರೂ ಹೇಗಿದ್ದೀತು? ಜಿಎಸ್‌ಎಸ್ ಅಂದು ತಮ್ಮ ಭಾಷಣದ ಮೊದಲು 'ನಾನು ಕನ್ನಡದಲ್ಲಿ ಮಾತಾಡಲೋ ಇಂಗ್ಲೀಷ್‌ನಲ್ಲಿ ಮಾತಾಡಬೇಕೋ?' ಎಂಬ ಪ್ರಶ್ನೆ ಕೇಳಿ ನಮ್ಮನ್ನೆಲ್ಲಾ ಚಕಿತಗೊಳಿಸಿದ್ದೂ ಉಂಟು!

ಅದೇನೇ ಇರಲಿ, ಅಂದು ಜಿಎಸ್‌ಎಸ್ ಅಂದಿನ ಸಮಕಾಲೀನ ಕನ್ನಡ ಕಾವ್ಯ ಕುರಿತಂತೆ, ಔಚಿತ್ಯಪೂರ್ಣವಾದ ಹಿನ್ನೋಟ, ಮುನ್ನೋಟಗಳೊಂದಿಗೆ ಅತ್ಯಂತ ಸರಳವಾಗಿ, ಸ್ಫುಟವಾಗಿ, ಪಾರದರ್ಶಕವಾಗಿ ಮಾತನಾಡಿದರು. ಅದಾಗ ತಾನೇ ಅವರು ಹೈದರಾಬಾದ್-ಮೈಸೂರುಗಳಿಂದ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಬಂದಿದ್ದರೆಂದು ಕಾಣುತ್ತದೆ. ಹೈದರಾಬಾದ್‌ನ ಪರಕೀಯತೆಯ ಹಿನ್ನೆಲೆಯಲ್ಲಿ ಕನ್ನಡ ಒಂದು ಭಾಷೆಯಾಗಿ ಉಂಟುಮಾಡುತ್ತಿದ್ದ ರೋಮಾಂಚನದ ಬಗ್ಗೆಯೂ ಅವರು ಮಾತನಾಡಿದಂತೆ ನೆನಪು. ಜಿಎಸ್‌ಎಸ್ ಅವರ 'ದೀಪದ ಹೆಜ್ಜೆ'ಯ ಕವನಗಳು ಹುಟ್ಟಿಸಿದ್ದ ಕುತೂಹಲದೊಂದಿಗೆ ಅವರ ಈ ವಿಚಾರಪೂರ್ಣವಾದ ಭಾಷಣವೂ ಸೇರಿ ನನ್ನಲ್ಲಿ ಸಾಹಿತ್ಯ ಕುರಿತಂತೆ ಒಂದು

ಹೊಸ ರುಚಿ ಸೃಷ್ಟಿಯಾಯಿತು. ನಾನು ಕೆಲವು ದಿನಗಳ ಕಾಲ ಅವರ ಭಾಷಣದ ಗುಂಗಿನಲ್ಲಿಯೇ ಇದ್ದೆ. ಆವರೆಗೆ ಮೂಲತಃ ವಿಜ್ಞಾನದ ವಿದ್ಯಾರ್ಥಿಯಾಗಿದ್ದ ನಾನು ಆ ದಿನಗಳಲ್ಲಿ ಸಾಹಿತ್ಯದ ವಿದ್ಯಾರ್ಥಿಯಾಗಿ ಮತಾಂತರಗೊಂಡೆ.... ಇದಕ್ಕೆ ಪ್ರೋತ್ಸಾಹವೋ ಎಂಬಂತೆ ನಮಗೆ ತೀನಂಶ್ರೀ ಅವರ ಕಾವ್ಯಮೀಮಾಂಸೆಯ ಆಯ್ದ ಭಾಗಗಳು, ಕಾರಂತರ 'ಆಳ-ನಿರಾಳ' ಎಂಬ ಕಾದಂಬರಿ ಮತ್ತು ಪ್ರಹ್ಲಾದರಾಯರ ಲಲಿತ ಪ್ರಬಂಧಗಳೂ ಮುಂದಿನವರ್ಷ ಪಠ್ಯಗಳಾಗಿ, ನನ್ನನ್ನು ಸಂಪೂರ್ಣ ಸಾಹಿತ್ಯದೆಡೆಗೇ ಸೆಳೆದುಬಿಟ್ಟವು.

ಇದರ ಪರಿಣಾಮವೋ ಎಂಬಂತೆ ನಾನು ಬಿ.ಎಸ್‌ಸಿ.,ಯಲ್ಲಿ ಎಂ.ಎಸ್‌ಸಿ.ಗೆ ಪ್ರವೇಶ ದೊರಕುವಷ್ಟು ಹೆಚ್ಚಿನ ಅಂಕಗಳನ್ನು ಪಡೆಯಲಾಗಲಿಲ್ಲ. ಆದ್ದರಿಂದ ಎಂ.ಎಸ್ಸಿಗೆ ಸೇರಲೇಬೇಕಾದರೆ ಒಂದು ವರ್ಷದ ಆನರ್ಸ್ ಮಾಡಬೇಕಿತ್ತು. ನನ್ನನ್ನು ಸೆಂಟ್ರಲ್ ಕಾಲೇಜಿನಲ್ಲಿ ಗಣಿತಶಾಸ್ತ್ರದ ಒಂದು ವರ್ಷದ ಆನರ್ಸ್‌ಗೆ ಸೇರಿಸಲು ಮನೆಯಲ್ಲಿ ಪ್ರಯತ್ನಗಳು ಆರಂಭವಾದವು. ಆದರೆ ನನಗೆ ಕನ್ನಡ ಎಂ.ಎ. ಸೇರುವ ಆಸೆ. ನನ್ನ ಸೋದರ ಸಂಬಂಧಿ ಡಿ.ವಿ. ರಾಜಶೇಖರ್ ಪಿಯುಸಿಯಲ್ಲಿಯೇ ವಿಜ್ಞಾನಕ್ಕೆ ನಮಸ್ಕಾರ ಹೊಡೆದು ನನ್ನ ಸಲಹೆಯ ಮೇರೆಗೇ ಕನ್ನಡ ಆನರ್ಸ್ ಸೇರಿ, ಎಪ್ಪತ್ತರ ದಶಕದ ಆ ಅಪೂರ್ವ ಸಾಹಿತ್ಯ ಗಂಧಗಾಳಿಯಲ್ಲಿ ಅಮಲೇರಿಸಿಕೊಂಡು ಓಡಾಡುತ್ತ ನನ್ನ ಕಣ್ಣು ಕುಕ್ಕುತ್ತಿದ್ದ! ನನಗೆ ಬಿ.ಎಸ್‌ಸಿ.,ಯಲ್ಲಿ ಎರಡನೇ ಅಧ್ಯಯನ ಭಾಷೆಯಾದ ಕನ್ನಡದಲ್ಲಿ ಪ್ರಥಮ ದರ್ಜೆ ಅಂಕಗಳು ಬಂದಿದ್ದುದರಿಂದ ಕನ್ನಡ ಎಂ.ಎ., ಪ್ರವೇಶಕ್ಕೆ ಪ್ರಯತ್ನಿಸಬಹುದೆಂಬ ಸೂಚನೆಯನ್ನೂ ಆತ ನೀಡಿದ್ದ. ನಾನು ನನ್ನ ತಂದೆ ಮುಂದೆ ನನ್ನ ಅಪೇಕ್ಷೆಯನ್ನು ನಿವೇದಿಸಿದೆ. ನನ್ನ ಬಿ.ಎಸ್‌ಸಿ., ಅಂಕಗಳ ಬಗ್ಗೆ ಕ್ರುದ್ಧರಾಗಿದ್ದರೂ, ಒಂದು ವರ್ಷ ಹೆಚ್ಚುವರಿಯಾಗಿ ಆನರ್ಸ್ ಪದವಿಗಾಗಿ ಓದಬೇಕಲ್ಲ ಎಂಬ ಪರಿಗಣನೆ ಕಾರಣವಾಗಿಯೋ ಏನೋ ಅವರು ನನ್ನನ್ನು ಕರೆದುಕೊಂಡು ನೇರವಾಗಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗಕ್ಕೆ ಬಂದುಬಿಟ್ಟರು. ನಾನೇ ಹೋಗಿ, ಆ ವಿಭಾಗದ ಮುಖ್ಯಸ್ಥರಾಗಿದ್ದ ಜಿಎಸ್‌ಎಸ್ ಅವರನ್ನು ಮಾತನಾಡಿಸಿ ಸೀಟು ಪಡೆಯುತ್ತೇನೆಂದರೂ, ನಿವೃತ್ತ ಶಾಲಾ ಮಾಸ್ತರರಾಗಿದ್ದ ನಮ್ಮ ತಂದೆ ಹಾಗೆಲ್ಲ ಹುಡುಗರು ವಿಭಾಗದ ಮುಖ್ಯಸ್ಥರನ್ನು ನೇರವಾಗಿ ಸಂಪರ್ಕಿಸುವುದು ಮರ್ಯಾದೆಯಲ್ಲ ಎಂದು ವಾದಿಸಿ, ಆಗ ಸೆಂಟ್ರಲ್ ಕಾಲೇಜಿನ ಪ್ರಸನ್ನಕುಮಾರ್ ಬ್ಲಾಕ್‌ನಲ್ಲಿದ್ದ ಕನ್ನಡ ವಿಭಾಗದ ಮುಖ್ಯಸ್ಥರ ಕೊಠಡಿಯನ್ನು ಪ್ರವೇಶಿಸಿಯೇ ಬಿಟ್ಟರು. ನಾನು ಹೊರಗಡೆಯೇ ನಿಂತೆ. ಐದು ನಿಮಿಷಗಳ ಕಾಲ ಅದೇನು ಮಾತುಕತೆ ನಡೆಯಿತೋ, ನಮ್ಮ ತಂದೆ ನನ್ನನ್ನೂ ಒಳಗೆ ಬರಲು ಹೇಳಿದರು. ನಾನು ಜಿಎಸ್‌ಎಸ್ ಮುಂದೆ ಹೋಗಿ ನಿಂತೆ.

ಜಿಎಸ್‌ಎಸ್: ಕನ್ನಡ ಎಂ.ಎ.ಗೆ ಯಾಕೆ ಸೇರಬೇಕ್ರಿ?

ನಾನು: ಬಿ.ಎಸ್‌ಸಿ.,ಯಲ್ಲಿ ಕನ್ನಡದಲ್ಲಿ ಒಳ್ಳೇ ಮಾರ್ಕ್ಸ್ ಬಂದಿದೆ. ಸಾಹಿತ್ಯದಲ್ಲಿ ಆಸಕ್ತಿ ಇದೆ ಸಾರ್.

ಜಿಎಸ್‌ಎಸ್: ಸಾಹಿತ್ಯದಲ್ಲಿ ಆಸಕ್ತಿ ಇದ್ರೆ ಅದನ್ನು ಹಾಗೇ ಮುಂದುವರಿಸಿಕೊಂಡು ಹೋಗಿ. ಕನ್ನಡ ಎಂ.ಎ., ಸೇರಿ ಭವಿಷ್ಯ ಹಾಳು ಮಾಡಿಕೊಳ್ಳಬೇಡಿ.

ನಾನು ಒಂದು ಕ್ಷಣ ಸ್ತಂಭೀಭೂತನಾಗಿ ನಿಂತೆ. ಜಿಎಸ್‌ಎಸ್ ಅವರಿಗೆ ನನ್ನ ಮೌನ ಅರ್ಥವಾಯಿತೆಂದು ಕಾಣುತ್ತದೆ. ಅವರು ವಿವರಿಸಿದರು: 'ಕನ್ನಡ ಎಂ.ಎ. ಮಾಡಿದವರಿಗೆ ಈಗಾಗಲೇ ಕೆಲಸ ಸಿಗುವುದು ಕಷ್ಟವಾಗುತ್ತಿದೆ. ಗಣಿತಶಾಸ್ತ್ರದಲ್ಲೇ ಎಂ.ಎಸ್‌ಸಿ ಮಾಡಿ ಮೊದಲು ಕೆಲಸ ಗಿಟ್ಟಿಸಿಕೊಳ್ಳಿ. ಸಾಹಿತ್ಯಾಸಕ್ತಿಗೆ, ಬರವಣಿಗೆಗೆ ಕನ್ನಡ ಎಂ.ಎ., ಅಗತ್ಯವಿಲ್ಲ. ನಿಜವಾಗಿ ಸಾಹಿತ್ಯಾಸಕ್ತಿ ಇದ್ದರೆ ಕನ್ನಡ ಎಂ.ಎ., ಮಾಡದಿದ್ದರೂ ಅದು ನಿಮ್ಮನ್ನು ಬಿಡುವುದಿಲ್ಲ.'

ಅವರ ಸಂಕ್ಷಿಪ್ತ ಆದರೆ ಖಚಿತವಾದ ಮಾತುಗಳನ್ನು ಕೇಳಿ, ನನಗೂ ಒಳಗೆ ಎಲ್ಲೋ ಅವರು ನನ್ನ ಹಿತ ಬಯಸಿಯೇ ಈ ಮಾತುಗಳನ್ನು ಆಡುತ್ತಿದ್ದಾರೆ ಎಂದೆನ್ನಿಸಿಯೋ ಏನೋ, ನಾನು ನಮ್ಮ ತಂದೆ ಬಂದ ದಾರಿಗೆ ಸುಂಕವಿಲ್ಲವೆಂಬಂತೆ ಮನೆಗೆ ಹಿಂದಿರುಗಿದೆವು. ಗಣಿತಶಾಸ್ತ್ರ ನನ್ನ ಬೆನ್ನು ಬಿದ್ದಿತ್ತು.

ಒಂದು ವರ್ಷದ ಗಣಿತಶಾಸ್ತ್ರದ ಆನರ್ಸ್ ಹಾಗೂ ಎರಡು ವರ್ಷಗಳ ಎಂ.ಎಸ್‌ಸಿ., ವ್ಯಾಸಂಗದ ಸಮಯದಲ್ಲಿ ಸೆಂಟ್ರಲ್ ಕಾಲೇಜ್ ಆವರಣದಲ್ಲಿ ಹಲವಾರು ಬಾರಿ ನಾನು ಜಿಎಸ್‌ಎಸ್ ಅವರನ್ನು ನೋಡುತ್ತಿದ್ದೆ. ಅವರ ನೇತೃತ್ವದಲ್ಲಿ ಬೆಳೆಯುತ್ತಿದ್ದ ಕನ್ನಡ ವಿಭಾಗದಲ್ಲಿನ ಮುಕ್ತ ಸಾಹಿತ್ಯಿಕ ವಾತಾವರಣದ ಸೊಗಡು-ಬೆಡಗುಗಳ ಬಗ್ಗೆ ರಾಜಶೇಖರ ಹಾಗೂ ಅವರ ಗೆಳೆಯರ ಮೂಲಕ ಕೇಳುತ್ತಿದ್ದೆ. ಹಾಗೇ ರಾಜಾಜಿನಗರದಿಂದ ನನ್ನೊಂದಿಗೇ ಬಿ.ಟಿ.ಎಸ್ ಬಸ್ ಹತ್ತಿ ಬರುತ್ತಿದ್ದ ಶ್ರೀ ರಂ.ಶ್ರೀ ಮುಗಳಿ ಹಾಗೂ ಶ್ರೀ ಎಸ್.ಆರ್ ಮಳಗಿ ಅವರ ಮಾತುಕತೆಗಳ ಮೂಲಕ ಕನ್ನಡ ವಿಭಾಗದ ಆಡಳಿತದ ಒಳಸುಳಿಗಳ ಸುಳಿವೂ ಸಿಕ್ಕುತ್ತಿತ್ತು. ಕನ್ನಡ ವಿಭಾಗ ಆಗ ನಿಜವಾದ ಅರ್ಥದಲ್ಲಿ ಸಂಕ್ರಮಣಾವಸ್ಥೆಯಲ್ಲಿ ಇತ್ತು.

ಎಪ್ಪತ್ತರ ದಶಕದ ಆರಂಭದ ವರ್ಷಗಳು ಎಂದರೆ ನವ್ಯಸಾಹಿತ್ಯ ಚಳುವಳಿಯ ಉತ್ಕರ್ಷದ ಕಾಲ. ಸೆಂಟ್ರಲ್ ಕಾಲೇಜ್ ಅದರ ಕೇಂದ್ರ. ಏಕೆಂದರೆ ಈ ಚಳುವಳಿಯ ಆಗಿನ ಸೇನಾಧಿಕಾರಿ ಪಿ. ಲಂಕೇಶ್, ಸೆಂಟ್ರಲ್ ಕಾಲೇಜಿನ ಇಂಗ್ಲಿಷ್ ವಿಭಾಗದ ಉಪನ್ಯಾಸಕರು. ಅವರು ನಶ್ಯ ಬಣ್ಣದ ಸೂಟ್‌ನಲ್ಲಿ ತುಂಟನಗೆ ಬೀರುತ್ತಾ, ಲೈಬ್ರರಿ ಕಟ್ಟಡ ಹಾಗೂ ಇಂಗ್ಲಿಷ್ ವಿಭಾಗವಿದ್ದ ಗಡಿಯಾರದ ಕಟ್ಟಡದವರೆಗೆ ನಾಲ್ಕಾರು ಜನ 'ಶಿಷ್ಯ'ರೊಂದಿಗೆ ಸದಾ ತಾರಾಡುತ್ತಿದ್ದುದು ಈಗ ಒಂದು ತಮಾಷೆಯ ಸಂಗತಿಯೆಂಬಂತೆ ನೆನಪಾಗುತ್ತಿದೆ. ಹಾಗೇ ನುಣ್ಣನೆಯ ಮುಖದ ಯು.ಆರ್. ಅನಂತಮೂರ್ತಿ ಅವರು ಆರತಕ್ಷತೆಯ ಮದುಮಗನಂತೆ ಸೆಂಟ್ರಲ್ ಕಾಲೇಜ್ ಆವರಣದಲ್ಲಿ ಆಗಾಗ್ಗೆ ಕಾಣಿಸಿಕೊಂಡದ್ದೂ ಉಂಟು! 'ಸಂಸ್ಕಾರ', 'ಅಕ್ಷರ ಹೊಸ ಕಾವ್ಯ' ಹಾಗೂ 'ಹಳದಿ ಮೀನು' ಆಗ ಸಾಹಿತ್ಯ ವಲಯದಲ್ಲಿ—ಅದರ ಮುಖ್ಯ ಕಚೇರಿ ಸೆಂಟ್ರಲ್ ಕಾಲೇಜಿನ ಲೈಬ್ರರಿ ಕಟ್ಟಡದ ಮುಂದಿದ್ದ ಮರದ ಕೆಳಗಿನ ಬೆಂಚುಕಲ್ಲು—ಸಾವು ಬದುಕಿನ ಪ್ರಶ್ನೆಗಳಂತೆ ಚರ್ಚೆಯಾಗುತ್ತಿದ್ದವು!

'ಸಾಕ್ಷಿ', 'ಸಂಕ್ರಮಣ' ಈ ಸಾಹಿತ್ಯ ವಲಯದ ವೇದೋಪನಿಷತ್ತುಗಳು! ಇವೆಲ್ಲದರ ಮಧ್ಯೆ ನವ್ಯರಿಂದ ಆಗ್ಗೆ ಸಾರಾಸಗಟು condemn ಗೊಂಡಿದ್ದ ಕುವೆಂಪು ಅವರ ಅಂತರಂಗದ ಶಿಷ್ಯ ಜಿಎಸ್ಎಸ್!

ಇಂತಹ ಜಿಎಸ್ಎಸ್, ಕಾರೋ, ಆಟೋದಿಂದಲೋ ಇಳಿದು ಲೈಬ್ರರಿ ಕಡೆ ಬಂದರೆಂದರೆ, ಆ ಮರದ ಕೆಳಗಿನ ಬೆಂಚುಕಲ್ಲಿನ ಮೇಲೆ ಹಾಗೂ ಸುತ್ತಮುತ್ತ ನೆರೆದಿರುತ್ತಿದ್ದ ಪಿ.ಪಿ. (ಪೋಲಿ ಪಟಾಲಂ) ಬಳಗ ತಮ್ಮ ವಾಗ್ವಾದಗಳನ್ನೆಲ್ಲ ಗಪ್ಪನೆ ನಿಲ್ಲಿಸಿ ಇಡಿಯಾಗಿ ಎದ್ದು ನಿಲ್ಲುತ್ತಿತ್ತು. ಈ ಗೌರವ ಸಮರ್ಪಣೆಯ ನಂತರ ಪುನರಾರಂಭವಾಗುತ್ತಿದ್ದ ಚರ್ಚೆಯಲ್ಲಿ ಜಿಎಸ್ಎಸ್ ಸಾಹಿತ್ಯ ಹಣ್ಣುಗಾಯಿ-ನೀರುಗಾಯಿ ಆಗುತ್ತಿದುದು ಬೇರೆ ವಿಷಯ. ಅದು ಜಿಎಸ್ಎಸ್ ಅವರಿಗೂ ಗೊತ್ತಿಲ್ಲದೇ ಇರುತ್ತಿರಲಿಲ್ಲ. ಅವರ ಶಿಷ್ಯರ ಮರ್ಮ ಅವರಿಗಿಂತ ಹೆಚ್ಚಿಗೆ ಇನ್ಯಾರಿಗೆ ಗೊತ್ತಿರಲು ಸಾಧ್ಯ? ಆದರೆ ಜಿಎಸ್ಎಸ್ ಎಂದೂ ಈ ಬಗ್ಗೆ ಬಹಿರಂಗ ಅಸಮಾಧಾನ ವ್ಯಕ್ತಪಡಿಸಿದ ದಾಖಲೆಗಳಿಲ್ಲ. ಇದಕ್ಕೆ ಮುಖ್ಯಕಾರಣ ಜಿಎಸ್ಎಸ್ ಮೂಲತಃ ಪ್ರಜಾತಂತ್ರವಾದಿಯಾದ ಆಡಳಿತಗಾರರಾಗಿದ್ದುದು. ಆ ಹಿನ್ನೆಲೆಯಲ್ಲೇ ಅಂದಿನ ಒಂದು ರೀತಿಯ ಚಿತ್ರ-ವಿಚಿತ್ರ ಪ್ರತಿಭೆಗಳ, ಅರಾಜಕ, ಬಂಡುಕೋರ ಸಾಹಿತ್ಯ ವಾತಾವರಣಕ್ಕೆ ಒಂದು ಶಿಸ್ತಿನ ಕೇಂದ್ರವಾಗಿ ಜಿಎಸ್ಎಸ್ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರವನ್ನು ಕಟ್ಟಿದರು. ಕರ್ನಾಟಕ ವಿಶ್ವವಿದ್ಯಾಲಯದ್ದು ಕನ್ನಡ ಅಧ್ಯಯನ **ಪೀಠ**; ಮೈಸೂರು ವಿಶ್ವವಿದ್ಯಾಲಯದ್ದು ಕನ್ನಡ ಅಧ್ಯಯ ಸಂಸ್ಥೆ. ಇದು **ಕೇಂದ್ರ**. ಈ ಕೇಂದ್ರದ ಮೂಲಕ ಜಿಎಸ್ಎಸ್ ಪ್ರತಿವರ್ಷ ಆಯೋಜಿಸಿದ ವಿಚಾರ ಸಂಕಿರಣಗಳಿಗೆ ಕರ್ನಾಟಕದ ಎಲ್ಲ ಭಾಗಗಳಿಂದ ಎಲ್ಲ ಸಾಹಿತ್ಯಕ ಹಿನ್ನೆಲೆಗಳ ಪ್ರತಿಭೆಗಳು ಆಗಮಿಸಿದವು. ನಮ್ಮ ಗಣಿತಶಾಸ್ತ್ರದ ವಿಭಾಗದ ಕಟ್ಟಡದಲ್ಲೇ ಇದ್ದ ಸೆನೆಟ್ ಹಾಲ್‌ನಲ್ಲಿ ತುಂಬಿ ತುಳುಕುತ್ತಿದ್ದ ಸಾಹಿತ್ಯ ಪ್ರೇಮಿಗಳ ಸಮ್ಮುಖದಲ್ಲಿ ಇಡೀ ದಿನ ಪ್ರಬಂಧಮಂಡನೆ, ಚರ್ಚೆ, ಜಗಳ, ಊಟ-ಕೂಟಗಳು. ಬೇಂದ್ರೆ, ಮಾಸ್ತಿ, ಅಡಿಗರಂತಹ ಹಿರಿಯರಿಂದ ಹಿಡಿದು ಚಂಪಾ, ಪಟ್ಟಣಶೆಟ್ಟಿ, ಗಿರಡ್ಡಿ, ವೀಣಾ, ತೇಜಸ್ವಿ ಮುಂತಾದ ಆ ಕಾಲದ ಕಿರಿಯ ಸಾಹಿತಿಗಳನ್ನು ನಾವೆಲ್ಲ ಕಣ್ತುಂಬಾ ನೋಡಿದ್ದು ಆಗಲೇ. ಕನ್ನಡ ಸಾಹಿತ್ಯ ವಿಮರ್ಶೆಯ ಸಮೃದ್ಧಿಯ ಬೀಜಗಳು ಬಿತ್ತಲ್ಪಟ್ಟಿದ್ದೂ ಆಗಲೇ. ಈ ವಾರ್ಷಿಕ ಸಾಹಿತ್ಯ ಹಬ್ಬಗಳಲ್ಲಿ ವೇದಿಕೆಯೇರಿ ಭಾಗವಹಿಸಿದವರು ಹತ್ತಾರು ಜನವಾದರೆ, ವೇದಿಕೆಯ ಕೆಳಗೆ ಕೂತೋ ನಿಂತೋ ಭಾಗವಹಿಸಿ, ಆ ಕಾಲದ ಸಾಹಿತ್ಯಿಕ ವಾಗ್ವಾದಗಳಿಗೆ ಅನೈಚ್ಛಿಕವಾಗಿ ಸೆಳೆಯಲ್ಪಟ್ಟು ಈಗಲೂ ಅದರ ಸಿಹಿ ನೆನಪುಗಳಲ್ಲಿ ಸಿಕ್ಕಿ ಹಾಕಿಕೊಂಡು ಪರದಾಡುತ್ತಿರುವವರು ನೂರಾರು, ಸಾವಿರಾರು ಜನ. ಅವರಲ್ಲಿ ನಾನೂ ಒಬ್ಬನೆಂದು ಹೇಳಿಕೊಳ್ಳದಿರಲು ನನಗೆ ಸಂಕೋಚವಾಗುತ್ತದೆ!

ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಅಪೂರ್ವ ವಿದ್ಯಮಾನವಾಗಿ ದಾಖಲಾಗಲು ಅರ್ಹವಾಗಿರುವ ಈ ವಿಚಾರ ಸಂಕಿರಣಗಳ ಆಯೋಜನೆಯ ಹಿಂದೆ,

ಅವು ಉಂಟುಮಾಡಿದ ಪರಿಣಾಮಗಳನ್ನು ಈಗ ಹತ್ತಾರು ವರ್ಷಗಳ ಅಂತರದಲ್ಲಿ ನಿಂತು ಮೌಲ್ಯಮಾಪನ ಮಾಡಿ ನೋಡಿದಾಗ, ಜಿಎಸ್ಎಸ್, ಅವರ ಒಂದು ಅಪೂರ್ವ ಚಾರಿತ್ರಿಕ ಒಳನೋಟದ ಅರಿವಾಗುತ್ತದೆ. ಅವರು ವಿಚಾರ ಸಂಕಿರಣಗಳ ರೂಪದಲ್ಲಿ ಹಳಬರನ್ನೂ ಹೊಸಬರನ್ನೂ ಮುಖಾಮುಖಿಯಾಗಿಸಿದರು. ಈ ಇಬ್ಬರ ಬಗೆಗೂ ಬೇರೆ ಬೇರೆ ಕಾರಣಗಳಿಗಾಗಿ ಸಹಾನುಭೂತಿಯಿದ್ದ ಜಿಎಸ್ಎಸ್ ಈಗ ತಾವು ದೂರ ನಿಂತು ನಿರ್ವಹಿಸಬೇಕಾದ ಅತಿ ಅಗತ್ಯವಾದ ಚಾರಿತ್ರಿಕ ಪಾತ್ರವಿದೆ ಎಂಬುದನ್ನು ಅರಿತು ಈ ಮುಖಾಮುಖಿಯಲ್ಲಿ ಕ್ರಮೇಣ, ನಿಧಾನವಾಗಿ ಮೂಡಿದ ಸಾಹಿತ್ಯದ ಹೊಸ ಸಮತೋಲನ, ಸಾಮರಸ್ಯ ಹಾಗೂ ಶಕ್ತಿಯನ್ನು ಸಮಕಾಲೀನ ಕನ್ನಡ ಸಾಹಿತ್ಯ ಸಂದರ್ಭಕ್ಕೆ ಒದಗಿಸಿಕೊಟ್ಟರು. ಹಳಬರ ಹಠ ಹಾಗೂ ಹೊಸಬರ ಆವೇಶ ಒಂದು ಹದಕ್ಕೆ ಬಂತು. ಈ ಹದ ಸಾಧನೆಯ ಹಿಂದೆ ಒಂದು ಕುಟುಂಬದ ಹಿರಿಮಗನ ಸಂಯಮ, ದಕ್ಷತೆ ಹಾಗೂ ಎಲ್ಲಕ್ಕಿಂತ ಹೆಚ್ಚಿನದಾಗಿ ದೂರದೃಷ್ಟಿಯಿತ್ತು. ಆ ಕಾಲದ ಓರ್ವ ಪ್ರಮುಖ ಸಾಹಿತಿಯಾಗಿದ್ದುಕೊಂಡೂ, ಇಂತಹ ಪ್ರಖರ ಸೃಜನಶೀಲ ಮುಖಾಮುಖಿಗಳಲ್ಲಿ ನೇರವಾಗಿ ಪಾಲ್ಗೊಳ್ಳದೆ ದೂರ ನಿಂತು ಎಲ್ಲವನ್ನೂ, ಎಲ್ಲರನ್ನೂ ನಿರ್ವಹಿಸಿದ ಜಿಎಸ್ಎಸ್ ಅವರ ಈ ಪ್ರಬುದ್ಧತೆಯು ತನ್ನ ಕಾಲದ ಹಿಂದಿನ ಹಾಗೂ ಮುಂದಿನ ಸಾಹಿತ್ಯಿಕ ಪರಿಪ್ರೇಕ್ಷ್ಯಗಳನ್ನು ಯಾವುದೇ ಪೂರ್ವಾಗ್ರಹಗಳಿಲ್ಲದೆ ತನ್ನ ಗ್ರಹಿಕೆಗೆ ತಂದುಕೊಂಡು ಅದನ್ನು ಪರಂಪರೆಯ ದೃಷ್ಟಿಯಿಂದ ಇಡಿಯಾಗಿ ಜೋಡಿಸುವ ಒಂದು ವಿಶಿಷ್ಟ ದ್ರಷ್ಟಾರ ಪ್ರಜ್ಞೆಯ ಫಲ ಎಂದೇ ನನ್ನ ಭಾವನೆ.

—ಇದೆಲ್ಲವೂ ನಾನು ಜಿಎಸ್ಎಸ್ ಅವರೊಂದಿಗೆ ನೇರ ಸಂಪರ್ಕವಿಲ್ಲದ ದಿನಗಳಲ್ಲಿ ದೂರದಿಂದ ನೋಡಿದ್ದು; ಕೇಳಿಸಿಕೊಂಡದ್ದು; ಅದರ ಫಲವಾಗಿ ನನಗೆ ಅನ್ನಿಸಿದ್ದು, ಅಷ್ಟೆ. ಇಲ್ಲಿ ನನ್ನ ಕೆಲವು ನೆನಪುಗಳು ಕಲೆಸಿಕೊಂಡಿರಲೂಬಹುದು; ನನ್ನ ಕೆಲ ತೀರ್ಮಾನಗಳು far fetched ಇದ್ದರೂ ಇರಬಹುದು. ಅವನ್ನು ಬಲ್ಲವರು ಹೇಳಬೇಕು. ಆದರೆ ಮುಂದಿನದೆಲ್ಲವೂ ಸಮೀಪ ದರ್ಶನದಿಂದ ಹೊಮ್ಮಿದ್ದೆಂದು ಮಾತ್ರ ಹೇಳಬಲ್ಲೆ.

೨

1973ರಲ್ಲಿ ಅಂತೂ ನಾನು ಹೊಸ ಸಿನಿಮಾ, ಹೊಸನಾಟಕ ಹಾಗೂ ಹೊಸ ಸಾಹಿತ್ಯಗಳ ಗುಂಗಿನಲ್ಲಿದ್ದುಕೊಂಡೇ ಗಣಿತಶಾಸ್ತ್ರದಲ್ಲಿ ಎಂ.ಎಸ್ಸಿ, ಮುಗಿಸಿದೆ. 1973-74ರಲ್ಲಿ ಸೆಂಟ್ರಲ್ ಕಾಲೇಜಿನಲ್ಲಿಯೇ ಯು.ಜಿ.ಸಿ. ಯೋಜನೆಯೊಂದರಲ್ಲಿ ಸಹಾಯಕನಾಗಿ ಕೆಲವು ತಿಂಗಳು, ನಂತರ ಸಂಶೋಧನಾ ಸಹಾಯಕನಾಗಿ ಕೆಲವು ತಿಂಗಳು ಕಾಲ ತಳ್ಳಿದ ನಂತರ 1975ರಲ್ಲಿ ದೆಹಲಿ ಆಕಾಶವಾಣಿ ಕೇಂದ್ರದ ಕನ್ನಡ ವಾರ್ತಾವಿಭಾಗದಲ್ಲಿ ವಾರ್ತೆಗಳನ್ನು ಸಿದ್ಧಪಡಿಸುವ ಹಾಗೂ ಓದುವ ಆ ಕಾಲದ ಅತ್ಯಂತ ಆಕರ್ಷಕ ಹುದ್ದೆಗೆ ನೇಮಕಗೊಂಡ ಪತ್ರ ಬಂತು. ಅಂತೂ ನಾನು ಗಣಿತಶಾಸ್ತ್ರದಿಂದ ಬಿಡುಗಡೆಗೊಂಡಿದ್ದೆ! ಆದರೆ ವಿಚಿತ್ರವೆಂದರೆ ಸಾವಿರಾರು ಮೈಲುಗಳ ಆ ದೂರದ ದೆಹಲಿಗೆ ಹೋದರೂ

ಜಿಎಸ್‌ಎಸ್ ಪ್ರಭಾವಲಯದಿಂದ ಮಾತ್ರ ಬಿಡುಗಡೆ ಆಗಲಿಲ್ಲ.... ನನ್ನ ಅದೃಷ್ಟವೋ ಎಂಬಂತೆ, ಈ ಆಕಾಶವಾಣಿ ಹುದ್ದೆಯ ಸಂದರ್ಶನಕ್ಕೆ ಸಂಸ್ಕೃತಿ ಪರಿಣತರಾಗಿ ಬಂದಿದ್ದವರಲ್ಲಿ ಒಬ್ಬರಾಗಿದ್ದ ಡಾ॥ ಎಂ. ಚಿದಾನಂದಮೂರ್ತಿ ಅವರು ನನ್ನನ್ನು ಅನಾಮತ್ತಾಗಿ ಎತ್ತಿ ಜಿಎಸ್‌ಎಸ್ ಅವರ ಸಮೀಪವಲಯದಲ್ಲಿಟ್ಟುಬಿಟ್ಟರು.

ಸೆಂಟ್ರಲ್ ಕಾಲೇಜ್ ಆವರಣದಲ್ಲಿ ಜಿಎಸ್‌ಎಸ್ ಅವರನ್ನು ಗಮನಿಸುತ್ತಿದ್ದ ಹಾಗೆಯೇ ನಾನು ಚಿದಾನಂದಮೂರ್ತಿಯವರನ್ನೂ ಗಮನಿಸುತ್ತಾ ಅವರ ಬಗ್ಗೆಯೂ ಓರ್ವ ವಿದ್ಯಾರ್ಥಿಯಾಗಿ ಕುತೂಹಲ-ಗೌರವಗಳನ್ನು ಬೆಳೆಸಿಕೊಂಡಿದ್ದೆ. ಜಿಎಸ್‌ಎಸ್ ಅವರದ್ದು ದೂರದಿಂದ ನೋಡಿದವರಿಗೆ ಒಂದು ರೀತಿಯ ಗತ್ತಿನ ವ್ಯಕ್ತಿತ್ವವಾದರೆ, ಚಿದಾನಂದಮೂರ್ತಿಯವರದ್ದು—ನಾನು ಲೈಬ್ರರಿಯಲ್ಲಿ ನೋಡುತ್ತಿದ್ದಂತೆ—ವಿದ್ಯಾರ್ಥಿ-ಅಧ್ಯಾಪಕರೆನ್ನದೆ ಎಲ್ಲರೊಡನೆ ಆತ್ಮೀಯವಾಗಿ ಬೆರೆಯುತ್ತಿದ್ದ ಸಲಿಗೆಯ ವ್ಯಕ್ತಿತ್ವ. ಅವರು ಆಗ 'ಕಸ್ತೂರಿ'ಯಲ್ಲಿ ಪ್ರಕಟಿಸಿದ್ದ (ವಿದೇಶಿ ನಗ್ನಸುಂದರಿಯ ಚಿತ್ರವಿದ್ದ) 'ನಾನೊಂದು ಕ್ಯಾಲೆಂಡರ್ ಕದ್ದೆ' ಎಂಬ ಲೇಖನ ಅವರ ಆಗಿನ ವ್ಯಕ್ತಿತ್ವಕ್ಕೆ ಕೈಗನ್ನಡಿಯಂತಿದ್ದು ರಸಿಕರ ಚರ್ಚೆಗೆ ವಸ್ತುವಾಗಿತ್ತು. ಹಾಗೇ ಅವರು ಚನ್ನಗಿರಿ ಸಮೀಪದ ಒಂದು ಹಳ್ಳಿಯಲ್ಲಿ ಬನಶಂಕರಿ ಪೆಟ್ಟಿಗೆಯನ್ನು ಮೊದಲ ಬಾರಿಗೆ ತೆರೆದ ಸಾಹಸ ಮಾಡಿದ ಕುತೂಹಲದ ಲೇಖನವೊಂದು ಅದೇ ಕಾಲದಲ್ಲಿ ಅಚ್ಚಾಗಿತ್ತು. ಇವೆಲ್ಲವನ್ನೂ ನಾನು ಸಂದರ್ಶನದಲ್ಲಿ ನಡೆದ ಮುಕ್ತ ಮಾತುಕತೆಯ ಸಂದರ್ಭದಲ್ಲಿ ಪ್ರಸ್ತಾಪ ಮಾಡಿದಾಗ, ಗಣಿತಶಾಸ್ತ್ರದ ಸ್ನಾತಕೋತ್ತರ ವಿದ್ಯಾರ್ಥಿಯಾಗಿದ್ದ ನಾನು ಇದೆಲ್ಲವನ್ನೂ ಗಮನಿಸುತ್ತಿದ್ದುದರ ಬಗ್ಗೆ ಚಿದಾನಂದಮೂರ್ತಿ ಹಾಗೂ ಇತರ ಪರಿಣತರಲ್ಲಿ ಮೆಚ್ಚುಗೆ ಮೂಡಿತೇನೋ, ಎಂಬಂತೆ ನಾನು ಆ ಹುದ್ದೆಗೆ ಆಯ್ಕೆಯಾಗಿದ್ದೆ. ಅಂತೂ ಗಣಿತಶಾಸ್ತ್ರ ಹಾಗೂ ಕನ್ನಡ ಸಾಹಿತ್ಯ ಎರಡೂ ಸೇರಿ ನನಗೆ ಕೆಲಸ ಕೊಡಿಸಿದ್ದವು!

ನಾನು ದೆಹಲಿಗೆ ಹೋಗಿ ಕೆಲಸಕ್ಕೆ ಸೇರಿಕೊಂಡು ವಸತಿ ವ್ಯವಸ್ಥೆ ಮಾಡಿಕೊಂಡ ನಾಲ್ಕಾರು ತಿಂಗಳುಗಳ ನಂತರ ಚಿದಾನಂದಮೂರ್ತಿಯವರಿಂದ ಪತ್ರ ಬಂತು. ಯು.ಜಿ.ಸಿ. ಕೆಲಸದ ನಿಮಿತ್ತ ತಾವು ದೆಹಲಿಗೆ ಬರುತ್ತಿರುವುದಾಗಿಯೂ ಆ ಒಂದೆರಡು ದಿನ ನನ್ನೊಂದಿಗೆ ದೆಹಲಿಯಲ್ಲಿ ಕಾಲ ಕಳೆಯಲು ಇಚ್ಛಿಸಿರುವುದಾಗಿಯೂ ಆ ಪತ್ರದಲ್ಲಿ ತಿಳಿಸಿದ್ದರು. ಕರ್ನಾಟಕದ ಖ್ಯಾತ ವಿದ್ವಾಂಸರೆನಿಸಿಕೊಂಡ ಚಿದಾನಂದಮೂರ್ತಿಯವರು ನನ್ನೊಡನೆ ಎರಡು ದಿನ ಇರುವವರೆಂದರೆ, ನನ್ನ ಅದೃಷ್ಟ, ಉತ್ಸಾಹಕ್ಕೆ ಎಣೆ ಎಲ್ಲಿ? ಅವರು ಬರುವ ದಿನ ನಾನೇ ಪಾಲಂ ವಿಮಾನ ನಿಲ್ದಾಣಕ್ಕೆ ಹೋಗಿ ಬರಮಾಡಿಕೊಂಡೆ. ಅವರೊಡನೆ ಬಂದಿದ್ದ ಹಾಮಾನಾ, ಯುಜಿಸಿ ಏರ್ಪಾಟು ಮಾಡಿದ್ದ ಆತಿಥ್ಯದ ಸ್ಥಳಕ್ಕೆ ತೆರಳಿದರೆಂದು ಕಾಣುತ್ತದೆ. ಚಿದಾನಂದಮೂರ್ತಿಯವರು ಯುಜಿಸಿ ಕೆಲಸದ ಸಮಯದ ಹೊರತಾಗಿ ಎರಡು ದಿನ ನನ್ನೊಡನಿದ್ದರು. ನನ್ನೊಡನೆ ದೆಹಲಿ ಸುತ್ತಾಡಿದರು. ನನ್ನೊಡನೆ, ನಾನು ಸಾಮಾನ್ಯವಾಗಿ ಹೋಗುತ್ತಿದ್ದ ಹೋಟೆಲುಗಳಲ್ಲೇ ಊಟ-ತಿಂಡಿ ಮಾಡಿದರು.

ಏಷ್ಯಾದ ಅತಿ ಉದ್ದನೆಯ ಬೀದಿ ಬದಿಯ ಮಾರುಕಟ್ಟೆ ಎಂದು ಅಂದು ಹೆಸರಾಗಿದ್ದ ಕರೋಲ್‌ಬಾಗ್‌ನ ಅಜಮಲ್‌ಖಾನ್ ರಸ್ತೆಯ ಅಂಗಡಿಗಳಲ್ಲಿ ತಮಗೆ, ತಮ್ಮ ಕುಟುಂಬಕ್ಕೆ ಸೀರೆ, ಸ್ವೆಟರ್, ಶಾಲು ಮುಂತಾದ ವಸ್ತ್ರಗಳನ್ನು ಕೊಂಡರು. ಈ ಮಧ್ಯೆ ನನಗೂ ಉತ್ಸಾಹ ಬಂದು ನಾನೂ ಒಂದು ಉಣ್ಣೆಯ ಕೋಟನ್ನು ಅವರ ಆಯ್ಕೆಯ ಮೇರೆಗೆ ಖರೀದಿಸಿದೆ! ಚಿದಾನಂದಮೂರ್ತಿಯವರು, ಬೆಂಗಳೂರಿಗೆ ಬಂದಾಗ ಖಂಡಿತ ತಮ್ಮ ಮನೆಗೆ ಬಂದು ಆತಿಥ್ಯ ಸ್ವೀಕರಿಸಬೇಕೆಂದು ಆಹ್ವಾನ ನೀಡಿ ಸಂತೋಷದಿಂದ ಬೆಂಗಳೂರು ವಿಮಾನ ಹತ್ತಿದರು.

ಇದಾದ ಆರು ತಿಂಗಳುಗಳ ನಂತರವೋ ಏನೋ, ಚಿದಾನಂದಮೂರ್ತಿಯವರಿಂದ ಮತ್ತೊಂದು ಪತ್ರ ಬಂತು. ಈ ಬಾರಿ ಯು.ಜಿ.ಸಿ. ಕೆಲಸದ ಮೇಲೆ ಡಾ. ಜಿ.ಎಸ್. ಶಿವರುದ್ರಪ್ಪನವರು ಬರುವವರಿದ್ದರು! ಹಿರಿಯರಾದ ಅವರನ್ನು ಎಚ್ಚರಿಕೆಯಿಂದ ನೋಡಿ ಕೊಂಡು ವಾಪಸ್ ಕಳಿಸಿಕೊಡಬೇಕೆಂದು ಮೂರ್ತಿಯವರು ತಿಳಿಸಿದ್ದರು. ನನ್ನ ಆನಂದಕ್ಕೆ ಪಾರವೇ ಇಲ್ಲ! ನಾನು ದೆಹಲಿ ಹುದ್ದೆಗಾಗಿ ಬೆಂಗಳೂರು ಬಿಡುವಾಗ, ಕನ್ನಡ ಸಾಹಿತ್ಯ ಸಂಸ್ಕೃತಿಗಳ ಸಂಪರ್ಕ ಇನ್ನು ಕಡಿದು ಹೋದಂತೆಯೇ ಎಂದು ಬೇಸರಗೊಂಡಿದ್ದೆ. ಆದರೆ ಈಗ ಬೆಂಗಳೂರಿನಲ್ಲಿ ಇದ್ದರೂ ದೊರೆಯದಂತಹ ಹಿರಿಯ, ಪ್ರಖ್ಯಾತ ಸಾಹಿತಿ-ವಿದ್ವಾಂಸರ ಆತ್ಮೀಯ ಒಡನಾಟ ನನ್ನನ್ನು ಹುಡುಕಿಕೊಂಡು ಬರುತ್ತಿದೆ.... ನಿಗದಿಯಾದ ದಿನ ನಾನು ಪಾಲಂಗೆ ಹೋಗಿ ಜಿಎಸ್‌ಎಸ್ ಅವರನ್ನು ಟ್ಯಾಕ್ಸಿಯಲ್ಲಿ ನಮ್ಮ ಮನೆಗೆ ಕರೆತಂದೆ. ಆ ಹೊತ್ತಿಗೆ ನಾನು ಕರೋಲ್ ಬಾಗ್ ಕೊಠಡಿ ಬಿಟ್ಟು ದೂರದ ಬಡಾವಣೆಯೆನಿಸಿದ, 'ಟ್ಯಾಗೋರ್ ಗಾರ್ಡನ್ಸ್'ನಲ್ಲಿ, ನನ್ನೊಡನೆ ಆಕಾಶವಾಣಿಯಲ್ಲೇ ಗುಜರಾತಿ ವಾರ್ತಾವಿಭಾಗ ದಲ್ಲಿ ಕೆಲಸ ಮಾಡುತ್ತಿದ್ದ ದೀಪಕ್ ಧೋಲಕಿಯಾ ಎಂಬ ಗೆಳೆಯನೊಡನೆ ಎರಡು ಕೊಠಡಿಗಳ ಮನೆ ಮಾಡಿದ್ದೆ. ತಿಂಡಿ-ಊಟಗಳನ್ನು ನಾವೇ ಮಾಡಿಕೊಳ್ಳುವ ವ್ಯವಸ್ಥೆ ಕೂಡಾ ಮಾಡಿಕೊಂಡಿದ್ದೆವು. ಜಿಎಸ್‌ಎಸ್ ಬಗ್ಗೆ ನನ್ನ ಗೆಳೆಯನಿಗೆ ಆಗಲೇ ಹೇಳಿದ್ದೆ. ಜಿಎಸ್‌ಎಸ್ ಅವರನ್ನು ನೋಡಿದ ಮೇಲಂತೂ ಆತನ ಗೌರವ ಇಮ್ಮಡಿಯಾಗಿ ಆತ ಅವರ ಉಪಚಾರಕ್ಕೆ ಹಾಲು-ಹಣ್ಣು, ಕಾಫೀ-ಟೀಗಳಿಗಾಗಿ ಲಗುಬಗೆಯಿಂದ ಓಡಾಡಿದ. ಜಿಎಸ್‌ಎಸ್ ಆ ಮನೆಯಲ್ಲಿ ಪರಕೀಯರೆನಿಸಲಿಲ್ಲ—ಆನಂತರ ನೀಡಿದ ನಾಲ್ಕಾರು ಭೇಟಿಗಳಲ್ಲಿ ಈ ಪ್ರೀತಿ ಹೆಚ್ಚುತ್ತಾ ಹೋಯಿತಷ್ಟೆ.

ಜಿಎಸ್‌ಎಸ್ ಅವರನ್ನು ಮೊದಲಬಾರಿಗೆ ನಾನು ಪಾಲಂ ವಿಮಾನ ನಿಲ್ದಾಣದಲ್ಲಿ ಎದುರುಗೊಂಡಾಗ, ಅವರ ಬಗೆಗೆ ನನ್ನಲ್ಲಿ ತುಂಬಿಕೊಂಡಿದ್ದ ಗಾಬರಿ, ಭಯಮಿಶ್ರಿತ ಗೌರವಗಳೆಲ್ಲ ಒಂದು ಕ್ಷಣದಲ್ಲಿ ಮಾಯವಾದವು. ವಿಮಾನ ಇಳಿದು ಬರುತ್ತಿದ್ದ ಗುಂಪಿನೆಡೆಗೆ ನಾನು ಧಾವಿಸುತ್ತಿದ್ದಂತೆಯೇ ಬಹುದಿನಗಳ ಪರಿಚಿತರಂತೆ ಅವರೇ ನನ್ನೆಡೆಗೆ ಬಂದು ಹಸ್ತಲಾಘವನೀಡಿ ಬೆನ್ನಮೇಲೆ ಕೈ ಇಟ್ಟು ಆತ್ಮೀಯ ಮಾತುಗಳನ್ನಾಡಿದರು. ಒಂದು ತಾಸಿನ ಟ್ಯಾಕ್ಸಿ ಪ್ರಯಾಣದಲ್ಲಿ ನನ್ನ ಕೌಟುಂಬಿಕ ಹಿನ್ನೆಲೆ, ವಿದ್ಯಾಭ್ಯಾಸದ ವಿವರಗಳು

ಇತ್ಯಾದಿಗಳನ್ನು ಕೇಳಿ ತಿಳಿದರು. ಆಶ್ಚರ್ಯವೆಂಬಂತೆ ಆಗ 'ತುಷಾರ'ದಲ್ಲಿ ಪ್ರಕಟವಾಗಿದ್ದ ನನ್ನದೊಂದು ಕಥೆಯೋ ಕವನವನ್ನೋ ಕುರಿತು ಮೆಚ್ಚುಗೆಯ ಮಾತುಗಳನ್ನಾಡಿದರು. ಮನೆ ತಲುಪುವ ಹೊತ್ತಿಗೆ ಕನ್ನಡದ ಹಿರಿಯ, ಪ್ರಖ್ಯಾತ, ಗೌರವಾನ್ವಿತ ಕವಿ, ಚಿಂತಕ, ಪ್ರಾಧ್ಯಾಪಕ ಡಾ. ಜಿ.ಎಸ್. ಶಿವರುದ್ರಪ್ಪನವರು ನನ್ನ ಹಿರಿಯ ಗೆಳೆಯರಂತಾಗಿದ್ದರು. ಅವರು ಮುಂದೆ, ದೆಹಲಿಯಲ್ಲಿ ಯಾರು ಸಿಕ್ಕರೂ ನನ್ನನ್ನು 'ನನ್ನ ಗೆಳೆಯ' ಎಂದೇ ಪರಿಚಯಿಸುತ್ತಾ ನನ್ನಲ್ಲಿ ಅನೇಕ ಸಲ ಮುಜುಗರ ಉಂಟುಮಾಡುತ್ತಿದ್ದರು! ದೂರದಿಂದ ನೋಡಿದಾಗ ವಿಶಿಷ್ಟ ಗತ್ತಿನ, ಅಂತರ ಕಾಯ್ದುಕೊಳ್ಳುವ ಗೌರವ ವ್ಯಕ್ತಿತ್ವವಾಗಿ ಕಾಣುತ್ತಿದ್ದ ಜಿಎಸ್‌ಎಸ್, ಮೊದಲ ಭೇಟಿಯಲ್ಲೇ ನನಗೆ ಇಷ್ಟು ಆತ್ಮೀಯರಾಗುವಂತೆ ಮಾಡಿದ್ದು ಏನು ಎಂಬುದು ನನಗಿನ್ನೂ ಒಗಟಾಗಿಯೇ ಉಳಿದಿದೆ. ಜಾತಿಯಲ್ಲಿ ನಂಬಿಕೆ ಇಲ್ಲದ ಜಿಎಸ್‌ಎಸ್‌ಗೆ ನಾನು ಜಾತಿ ಸಂಬಂಧಿಯೂ ಅಲ್ಲ, ಅವರ ಪರಿಚಯದ ಹಿನ್ನಲೆಯಿಂದ ಬಂದವನೂ ಅಲ್ಲ; ವಿದ್ಯಾರ್ಥಿಯೂ ಅಲ್ಲ, ಶಿಷ್ಯನೂ ಅಲ್ಲ. ಅವರ ಗಣನೆಗೆ ಬರುವ ಲೇಖಕನೂ ಆಗಿರಲಿಲ್ಲ. ಈ ಬಗ್ಗೆ ನನ್ನ ಆಶ್ಚರ್ಯ ಹಾಗೇ ಉಳಿದಿದೆ! ಸಾಧ್ಯವಿದ್ದರೆ ಜಿಎಸ್‌ಎಸ್ ಅವರೇ ಪರಿಹರಿಸಬೇಕು...

ಅದಿರಲಿ, ಆನಂತರ ಜಿಎಸ್‌ಎಸ್ ಅನೇಕ ಬಾರಿ ದೆಹಲಿಗೆ ಬಂದರು. ನನಗೆ ಸಂಜೆ duty ಇದ್ದರೆ ನೇರವಾಗಿ ತಾವೇ ಟ್ಯಾಕ್ಸಿ ಮಾಡಿಕೊಂಡು ಮನೆಗೆ ಬಂದುಬಿಡುತ್ತಿದ್ದರು. ರಾತ್ರಿ ಊಟವಾದ ಮೇಲೆ ಒಂದು ಬಾಳೆಹಣ್ಣು ಹಾಗೂ ಬೆಳಗ್ಗೆ ಎದ್ದೊಡನೆ ಒಂದು ಲೋಟ ಕಾಫಿ ಕಡ್ಡಾಯ—ಇವುಗಳನ್ನು ಬಿಟ್ಟರೆ ಅವರ ಊಟ-ತಿಂಡಿ-ವಸತಿ ಬೇಡಿಕೆಗಳು ತೀರಾ ಸಾಮಾನ್ಯ. ಅವರ ಈ ಕಾಫಿ-ಬಾಳೆಹಣ್ಣು ರೂಢಿಯ ಪರಿಚಯವಾಗುವ ಮುನ್ನ ನಾನು ಒಂದಿಷ್ಟು ಪಾಡುಪಟ್ಟದ್ದು ನಿಜ. ಒಮ್ಮೆ ದೆಹಲಿಯ ದಟ್ಟ ಮಂಜುಕವಿದ ನಡು ರಾತ್ರಿಯಲ್ಲಿ ನಾನು ಹಾಗೂ ನನ್ನ ಗೆಳೆಯ ಒಂದು ಕಿಲೋಮೀಟರ್ ದೂರದ ರಜೌರಿ ಗಾರ್ಡನ್ಸ್ ಮಾರುಕಟ್ಟೆಯ ಹಣ್ಣಿನಗಂಡಿಯವನ ಬಾಗಿಲು ಬಡಿದು ಬಾಳೆಹಣ್ಣು ಕೇಳಿ ವಾಚಾಮಗೋಚರ ಬೈಸಿಕೊಂಡದ್ದು; ಬೆಳ್ಳಂಬೆಳಗ್ಗೆ ಕಾಫಿಪುಡಿಗಾಗಿ ಬಡಾವಣೆ ತುಂಬ ಪರದಾಡಿ (ಉತ್ತರಭಾರತೀಯರ ಮನೆಗಳಲ್ಲಿ ಸಾಮಾನ್ಯವಾಗಿ ಕಾಫಿಪುಡಿ ಇರುವುದಿಲ್ಲ) ಯಾವುದೋ ಒಂದು ಮನೆಯ ಮುಂದಿನ ದಕ್ಷಿಣ ಭಾರತೀಯ ಹೆಸರು ನೋಡಿ ಆ ಮನೆಯ ಒಡತಿಯಿಂದ ಕಾಫಿಪುಡಿ ಬೇಡಿದ ಫಜೀತಿ ಇನ್ನೂ 'ರಸ ಘಳಿಗೆ'ಗಳಂತೆ ನನ್ನ ನೆನಪಿನಲ್ಲಿವೆ! ಈ ಎರಡು 'ಕಡ್ಡಾಯ'ಗಳನ್ನು ಬಿಟ್ಟರೆ ಅವರದ್ದು ಸರಳ ಊಟ-ತಿಂಡಿ.

ನಮ್ಮ ಮನೆಯಲ್ಲಿ ನನ್ನ ಗೆಳೆಯ ದೀರ್ಘರಜೆ ಹೋದಾಗ ತಿಂಡಿ-ಊಟಗಳ ವ್ಯವಸ್ಥೆ ಅಮಾನತ್ತುಗೊಳ್ಳುತ್ತಿತ್ತು. ಆಗ ನಾನು ದೆಹಲಿಯ ತುಂಬಿದ ಬಸ್ಸುಗಳಿಗೆ ಜಿಎಸ್‌ಎಸ್ ಅವರನ್ನು ಹತ್ತಿಸಿಕೊಂಡು ಕರೋಲ್‌ಬಾಗ್‌ನ ದಕ್ಷಿಣಭಾರತೀಯ ಹೋಟಲು ಹಾಗೂ ಮೆಸ್‌ಗಳಿಗೆ—ಮೂರನೇ ಮಹಡಿಯಲ್ಲಿದ್ದ ವೈದ್ಯನಾಥನ್ ಮೆಸ್ಸೂ ಸೇರಿದಂತೆ—ಒಯ್ದು ಆ ಸಾಮಾನ್ಯ ಜನಜಂಗುಳಿಯ ನಡುವೆ ಕೂರಿಸಿದ್ದೇನೆ. ಮಧ್ಯಾಹ್ನದ ಹೊತ್ತು ಎಲ್ಲ ತರಹದ

ಜನರಿಂದ ಗಿಜಗುಡುವ ಯು.ಎನ್.ಐ. ಕ್ಯಾಂಟೀನ್ ಎಂಬ ಅರಾಜಕ ತಿಂಡಿಕೇಂದ್ರದಲ್ಲಿ ಅವರನ್ನು ನಿಲ್ಲಿಸಿ ಲೆಮನ್‌ಬಾತ್-ದೋಸೆ-ಕೇಸರಿಬಾತ್‌ಗಳ ತಟ್ಟೆಗಳನ್ನು ಕೈಗಿರಿಸಿದ್ದೇನೆ. ಎಂದೂ ಜಿಎಸ್‌ಎಸ್ ಗೊಣಗಲಿಲ್ಲ. In fact he was thoroughly enjoying everything—including the fully bloomed tree before him, there. ಇಂತಹ ಕ್ಷಣಗಳಲ್ಲಿ ಎಷ್ಟೋ ಬಾರಿ ಜಿಎಸ್‌ಎಸ್ ನನಗೆ ಮಗುವಿನಂತೆ ಕಂಡಿದ್ದಾರೆ. ಹಾಗೇ ಇವರ ವ್ಯಕ್ತಿತ್ವದ ಹೊರ ಆವರಣದಲ್ಲಿ ಕಾಣಬರುತ್ತಿದ್ದ ಗತ್ತು, ತಮ್ಮ ಒಳಗಿನ ಮಗುತನವನ್ನು ರಕ್ಷಿಸಿಕೊಳ್ಳಲೆಂದೇ ಧರಿಸಿಕೊಂಡ ಕವಚ ಎಂದೂ ಎಷ್ಟೋಬಾರಿ ನನಗನ್ನಿಸಿದೆ. ದೆಹಲಿಯಲ್ಲಿ ಇವರನ್ನು ರಸ್ತೆ ದಾಟಿಸುವುದೆಂದರೆ ಮಗುವನ್ನು ರಸ್ತೆ ದಾಟಿಸಿದಂತೆಯೇ—ಕೈಹಿಡಿದು ದಢದಢನೆ ದಾಟಿಸಿದರೇ ಸರಿ, ಇಲ್ಲದಿದ್ದರೆ ರಸ್ತೆ ಖಾಲಿಯಾಗಲೆಂದು ಕಾಯುತ್ತಲೇ ನಿಂತಿರುತ್ತಾರೆ!

ಜಿಎಸ್‌ಎಸ್ ಎಂದೂ ನನ್ನೊಂದಿಗೆ ತಾವು ಬಂದ ಅಧಿಕೃತ ಕೆಲಸಗಳ ವಿವರಗಳ ಬಗ್ಗೆ ಮಾತನಾಡುತ್ತಿರಲಿಲ್ಲ. ನಾನು ಕೇಳಲೂ ಹೋಗುತ್ತಿರಲಿಲ್ಲ. ಒಮ್ಮೆ ಹೀಗಾಯಿತು. ಅವರು ಅಧಿಕೃತ ಕೆಲಸವೆಂದು ಬಂದ ದಿನವೇ ಯು.ಪಿ.ಎಸ್.ಸಿ ಸಂದರ್ಶನವೆಂದು ದೇವನೂರ ಮಹಾದೇವ, ಶ್ರೀಕೃಷ್ಣ ಆಲನಹಳ್ಳಿ ಹಾಗೂ ಇನ್ನೊಂದಿಬ್ಬರು ಗೆಳೆಯರು ಬಂದಿಳಿದರು. ಹೆಚ್ಚಿಗೆ ಮಾತನಾಡದ ಮಹಾದೇವ ಹಾಗೂ ಮಾತೇ ಸರ್ವಸ್ವವಾದ ಕೃಷ್ಣ ಒಂದು ಕೊಠಡಿಯಲ್ಲಿ; ನಾನು ಜಿಎಸ್‌ಎಸ್ ಇನ್ನೊಂದು ಕೊಠಡಿಯಲ್ಲಿ. ಜಿಎಸ್‌ಎಸ್ ಯಾರೊಂದಿಗೂ ಹೆಚ್ಚು ಮಾತಾಡದೆ ಯಾವುದೋ ಪುಸ್ತಕ ಹಿಡಿದುಬಿಟ್ಟರು. ಕೃಷ್ಣ ಕೆದಕಿ, ತಿಣುಕಿ ಏನೇನೋ ಪ್ರಯತ್ನಿಸಿದ, ಜಿಎಸ್‌ಎಸ್ ಬಂದಿರುವ ಉದ್ದೇಶವನ್ನು ತಿಳಿಯಲು. ಜಿಎಸ್‌ಎಸ್ ಯುಜಿಸಿ ಕೆಲಸವೆಂದೇ ಹೇಳುತ್ತಾ ಬಂದರು, ಮಾರನೆಯ ದಿವಸ ಬೆಳಗ್ಗೆ ಆಟೋ ಹತ್ತಿ 'ಯು.ಪಿ.ಎಸ್.ಸಿ. ಕಡೆ ಹೋಗೋಣ' ಎಂದು ನನಗೆ ಸೂಚಿಸುವವರೆಗೆ. ಎಲ್ಲ ಮತ್ತೆ ಸಂಜೆ ಸೇರಿದಾಗ ಜಿಎಸ್‌ಎಸ್ ಎಂದಿನಂತೆ ನಿರಾಳ, ಸಹಜ, ಸರಳ-ಯಾವುದೋ ತಾಂತ್ರಿಕ ಕಾರಣದಿಂದ ಸಂದರ್ಶನದಿಂದಲೇ ವಂಚಿತನಾಗಿದ್ದ ಕೃಷ್ಣನ ಗದ್ದಲದ ನಡುವೆಯೂ! ಮಾರನೆಯ ದಿನ ಕೃಷ್ಣ ಕನಾಟ್ ಸರ್ಕಸ್‌ನ ಯಾವುದಾವುದೋ ಮೂಲೆ ಅಂಗಡಿಗಳಿಗೆ ನನ್ನನ್ನು ನುಗ್ಗಿಸಿಕೊಂಡು ಹೋಗಿ, ತನ್ನ ಕಥೆ-ಕವನ-ಕಾದಂಬರಿಗಳ ಯಾವುದಾವುದೋ ಭಾಷೆಗಳ ಅನುವಾದಗಳನ್ನು ಸಂಗ್ರಹಿಸಿ, ಅವನ್ನು ಯು.ಪಿ.ಎಸ್.ಸಿ. ಆಫೀಸಿಗೆ ಹೇರಿಕೊಂಡು ಹೋಗಿ, ಒಳಗೆ ಪ್ರವೇಶವಿಲ್ಲವೆಂದರೂ ನುಗ್ಗಿ, ಯಾವನೋ ಸೆಕ್ರೆಟರಿ ಮುಂದೆ ಆ ಪುಸ್ತಕಗಳನ್ನು ಕುಕ್ಕಿ 'ಇಂತಹ ಪುಸ್ತಕಗಳ ಲೇಖಕನಿಗೆ ಸಂದರ್ಶನ ನೀಡದ ಯು.ಪಿ.ಎಸ್.ಸಿ. ಇದ್ದರೆಷ್ಟು ಬಿಟ್ಟರೆಷ್ಟು...' ಎಂದು ಕೆಟ್ಟ ಇಂಗ್ಲೀಷ್-ಕನ್ನಡ-ಹಿಂದಿಗಳಲ್ಲಿ ಕೂಗಾಡಿ ಅಲ್ಲಿದ್ದ ಎಲ್ಲರಲ್ಲೂ ಗಾಬರಿ ಹುಟ್ಟಿಸಿ, ತಾನೂ ಗಾಬರಿಯಾದ ಸಂಗತಿಯನ್ನೂ ಇಲ್ಲಿ ಉಲ್ಲೇಖಿಸ ಬಹುದು....

ಜಿಎಸ್‌ಎಸ್ ನನ್ನ ಸಾಹಿತ್ಯಾಭಿರುಚಿ ಬಗ್ಗೆ ಆಸಕ್ತಿ ತೋರಿಸಿದ್ದು ತಮ್ಮ ಎರಡನೆಯದೋ ಮೂರನೆಯದೋ ಭೇಟಿಯಲ್ಲಿ. 'ಸಂಕ್ರಮಣ'ದಲ್ಲಿ ಪ್ರಕಟವಾಗಿದ್ದ 'ದಾಟು' ಕಾದಂಬರಿ ಕುರಿತ ನನ್ನ ಭಯಂಕರ ವಿಮರ್ಶೆಯನ್ನೂ ಅಷ್ಟೇ ಭಯಂಕರವಾಗಿ ಹೊಗಳಿದರು ಜಿಎಸ್‌ಎಸ್ (ಜಿಎಸ್‌ಎಸ್ ವಾಸ್ತವವಾಗಿ ಎಸ್.ಎಲ್. ಭೈರಪ್ಪನವರ ಅಭಿಮಾನಿ ಎಂದು ನಂತರ ಗೊತ್ತಾಯಿತು)! ಆ ಹೊತ್ತಿನಲ್ಲೇ 'ಕಸ್ತೂರಿ'ಯಲ್ಲಿ ಲೋಹಿಯಾ ಕುರಿತು ಪ್ರಕಟವಾಗಿದ್ದ ನನ್ನ ಲೇಖನದ ಬಗ್ಗೆಯೂ ಮೆಚ್ಚುಗೆ ಸೂಚಿಸಿದರು. ಮತ್ತೊಮ್ಮೆ ಬಂದಾಗ 'ಜಾತಿಪದ್ಧತಿ' ಕುರಿತಂತೆ ಮೈಸೂರಿನ ವಿ.ಎಚ್. ಗೌಡರು ಪ್ರಕಾಶಿಸುತ್ತಿದ್ದ "ಸಮನ್ವಯ" ಪತ್ರಿಕೆಯಲ್ಲಿ ಪ್ರಕಟವಾಗಿದ್ದ ನನ್ನ ವಿಶ್ಲೇಷಣೆ (ಅದರ ಪ್ರತಿಯೊಂದನ್ನು ನಾನು ಅವರಿಗೆ ಕಳಿಸಿದ್ದೆನೆಂದು ಕಾಣುತ್ತದೆ) ಬಗ್ಗೆ ಬಹುಮೆಚ್ಚಿಗೆಯ ಮಾತನ್ನಾಡಿದರು. ಬೆಂಗಳೂರಿಗೆ ಬಂದಾಗ ಮನೆಗೆ ಬರಬೇಕೆಂದರು. ನಾನೂ ಬೆಂಗಳೂರಿಗೆ ಬಂದಾಗಲೆಲ್ಲ ಜಿಎಸ್‌ಎಸ್ ಅವರನ್ನು ಮನೆಯಲ್ಲೋ, ಕನ್ನಡ ವಿಭಾಗದಲ್ಲೋ ಭೇಟಿ ಮಾಡಲಾರಂಭಿಸಿದೆ. ಜಿಎಸ್‌ಎಸ್ ಪ್ರತಿಭೇಟಿಯಲ್ಲೂ ಮೊದಲು ಕೇಳುತ್ತಿದ್ದುದು "ಇತ್ತೀಚೆಗೆ ಏನು ಓದಿದಿರಿ?" ಅಲ್ಲಿಂದ ಆರಂಭವಾದ ಮಾತು ಸಮಕಾಲೀನ ಸಾಹಿತ್ಯದ ಚರ್ಚೆ ಹಾಗೂ ರಾಜಕಾರಣಗಳನ್ನು ಸುತ್ತು ಹಾಕಿಕೊಂಡು ರುಚಿಕರವಾದ ಊಟದಲ್ಲಿ ಮುಗಿಯುತ್ತಿತ್ತು. ನನಗೆ ನಿಜವಾಗಿ ಗಾಬರಿ ಯಾಗುತ್ತಿತ್ತು—ನನ್ನನ್ನೇಕೆ ಇವರು ಇಷ್ಟು ಹಚ್ಚಿಕೊಂಡಿದ್ದಾರೆಂದು!

ಒಮ್ಮೆ ನಾನು ಯಾವುದೋ ಸಮಾಜವಾದಿ ಅಧ್ಯಯನ ಶಿಬಿರಕ್ಕೆಂದು ಹರ್ಯಾಣದ ಯಾವುದೋ ಹಳ್ಳಿಗೆ ಹೋಗಿ ದೆಹಲಿಗೆ ಹಿಂತಿರುಗಿದರೆ ನಮ್ಮ ಮನೆಯ ಬಾಗಿಲು ಒಳಗಿಂದ ಬೋಲ್ಟ್ ಆಗಿದೆ! ಗಾಬರಿಯಿಂದ ಬಾಗಿಲು ತಟ್ಟಿದರೆ ಬಾಗಿಲು ತೆಗೆದವರು ಜಿಎಸ್‌ಎಸ್.... ದಿವಾನ್ ಮೇಲೆ ಪದ್ಮಾಮೇಡಂ! ಬೇಸಿಗೆಯ ಆ ದಿನಗಳಲ್ಲಿ ಸೊಳ್ಳೆಗಳ ಕಾಟದಿಂದ ತತ್ತರಿಸಿ ಹೋಗಿದ್ದ ಆ ದಂಪತಿಗಳು ನಾನು ಮನೆಯನ್ನು ಇಟ್ಟುಕೊಂಡಿದ್ದ ರೀತಿ ನೀತಿಗಳ ಬಗ್ಗೆ ಕಟು ವ್ಯಾಖ್ಯಾನ ಮಾಡಿದರು. ಬೇಗ ವಿವಾಹವಾಗಲು ಸೂಚಿಸಿದರು. ವಿವಾಹವಾಗದೆಯೂ ಚೊಕ್ಕವಾಗಿರಬಹುದೆಂದು ಸಾಬೀತು ಮಾಡುವ ಜವಾಬ್ದಾರಿ ಈಗ ನನ್ನದಾಯಿತು. ನಾನು ಕೂಡಲೇ, ಆಗ್ಗೆ ದೆಹಲಿ ವಿಶ್ವವಿದ್ಯಾಲಯ ಸೇರಿದ್ದ ಜಿಎಸ್‌ಎಸ್ ಅವರ ಶಿಷ್ಯ ಟಿ.ಎಸ್. ಸತ್ಯನಾಥ್ ಅವರನ್ನು ಸಂಪರ್ಕಿಸಿ ದಂಪತಿಗಳ ದೆಹಲಿ ವಾಸ್ತವ್ಯ ಹಾಗೂ ಸುತ್ತಮುತ್ತಲಿನ ಸ್ಥಳಗಳಿಗೆ ತಿರುಗಾಟದ ಚೊಕ್ಕ ವ್ಯವಸ್ಥೆ ಮಾಡಿ ಆಫೀಸಿಗೆ ಹೋದರೆ, ತಾವು ಬರುವುದಾಗಿ ಜಿಎಸ್‌ಎಸ್ ಬರೆದಿದ್ದ ಪತ್ರ ಹತ್ತು ದಿನಗಳ ಹಿಂದೆಯೇ ನನ್ನ ಡ್ರಾನಲ್ಲಿ ಬಿದ್ದಿದೆ!

ದೆಹಲಿಯಲ್ಲಿ ಇದ್ದಷ್ಟು ದಿನವೂ ನನಗೆ ಸಾಹಿತ್ಯಕ್ಕಿಂತ ರಾಜಕಾರಣದ ಆಕರ್ಷಣೆಯೇ ಜಾಸ್ತಿಯಾಗಿತ್ತು. ಅದಕ್ಕೆ ಮುಖ್ಯಕಾರಣ ನಾನು ದೆಹಲಿಗೆ ಹೋದ ಕೆಲವೇ ತಿಂಗಳುಗಳಲ್ಲಿ ತುರ್ತುಪರಿಸ್ಥಿತಿ ಘೋಷಣೆಯಾಗಿ ಇಡೀ ದೆಹಲಿ ಉದ್ವಿಗ್ನಗೊಂಡದ್ದು. ಲೋಹಿಯಾ ತತ್ವಚಿಂತನೆಯ ವಿದ್ಯಾರ್ಥಿಯಾಗಿದ್ದ ನಾನು ಸಹಜವಾಗಿಯೇ ತುರ್ತುಪರಿಸ್ಥಿತಿ ವಿರೋಧಿ

ಆಂದೋಲನಕ್ಕೆ ಸೆಳೆಯಲ್ಪಟ್ಟೆ. 1975ರ ಜೂನ್-ಜುಲೈ ತಿಂಗಳುಗಳಲ್ಲಿ ಇದ್ದಕ್ಕಿದ್ದಂತೆ ಬೀದಿಗೆ ನುಗ್ಗುತ್ತಿದ್ದ ಪೋಲೀಸ್ ಪಡೆ ಮೊದಲೇ ಗುರುತಿಟ್ಟುಕೊಂಡಂತೆ ಬಸ್ಸುಗಳಿಂದ ಇಳಿಯುತ್ತಿದ್ದ ಜನರನ್ನು ಅತ್ತಿತ್ತ ತಳ್ಳಿ ತಮಗೆ ಬೇಕಾದವರನ್ನು ವ್ಯಾನುಗಳಿಗೆ ತುಂಬಿಕೊಂಡು ಹೋಗುತ್ತಿದ್ದುದನ್ನು ನಾನು ಕಣ್ಣಾರೆ ನೋಡುತ್ತಿದ್ದೆ. ಹೀಗೆ ವ್ಯಾನ್‌ಗೆ ತುಂಬಲ್ಪಟ್ಟು ತಿಂಗಳು ಗಟ್ಟಲೆ ಕಾಣೆಯಾಗಿ ಕೊನೆಗೆ ತುರ್ತುಪರಿಸ್ಥಿತಿ ಮುಕ್ತಾಯವಾದಾಗ ಮುರಿದ ಮೂಳೆಗಳೊಂದಿಗೆ ಬಿಡುಗಡೆಯಾದವರಲ್ಲಿ ನನ್ನ ಸರ್ದಾರ್ಜೀ ಸ್ನೇಹಿತ ಜಸವೀರ್‌ಸಿಂಗ್‌ನೂ ಒಬ್ಬ. ಮುಂದೆ ಆತ ಜವಾಹರಲಾಲ್ ವಿಶ್ವವಿದ್ಯಾಲಯ ಸೇರಿ, ಕಿಷನ್ ಪಟ್ನಾಯಕ್ ಮಾರ್ಗದರ್ಶನದಲ್ಲಿ ಅಲ್ಲಿ ಸಮಾಜವಾದಿ ವಿದ್ಯಾರ್ಥಿ ಆಂದೋಲನವನ್ನು ಕಟ್ಟಿದ. ಈತನಿಗೆ ಜೊತೆಯಾಗಿ ನಿಂತವರಲ್ಲಿ ಈಗ ಕೇಂದ್ರದಲ್ಲಿ ರೈಲ್ವೇ ಸಹಾಯಕ ಮಂತ್ರಿಯಾಗಿರುವ ಸಮತಾಪಕ್ಷದ ನಾಯಕ ದಿಗ್ವಿಜಯಸಿಂಗ್ ಕೂಡಾ ಒಬ್ಬ. ಈ ಗುಂಪಿನ ಸಂಪರ್ಕದಲ್ಲಿದ್ದ ನನಗೆ ಸಾಹಿತ್ಯ ಎರಡನೆಯ ಆದ್ಯತೆಯಾಗಿತ್ತು. ಮೂರನೇ ಆದ್ಯತೆ ನನ್ನ ಆಕಾಶವಾಣಿ ಕೆಲಸ! ಇಂತಹ ಹಿನ್ನೆಲೆಯಲ್ಲಿ ದೆಹಲಿಯಲ್ಲಿ 'ಕ್ರಿಯಾಶೀಲ' ನಾಗಿದ್ದ ನನಗೆ ಆಗಾಗ್ಗೆ ದೆಹಲಿ ಭೇಟಿ ಮೂಲಕ ಸಾಹಿತ್ಯಸ್ಪರ್ಶ ನೀಡುತ್ತಿದ್ದವರು ಜಿಎಸ್‌ಎಸ್. ಅವರ ಒಡನಾಟವೇ ಸಾಹಿತ್ಯ-ಸಂಸ್ಕೃತಿಗಳ ಸೂಕ್ಷ್ಮತೆ-ಘನತೆಗಳ ಸ್ಪರ್ಶ ಮಾಡಿಸಿಬಿಡುತ್ತಿತ್ತು. ಅವರು ರಾಜಕಾರಣದ ಬಗ್ಗೆ ಅಸಡ್ಡೆಯನ್ನೇನೂ ಹೊಂದಿರಲಿಲ್ಲ. ಅವರೂ ಲೋಹಿಯಾ ಕುರಿತು ಅಪಾರ ಗೌರವ ಹೊಂದಿದವರಾಗಿದ್ದರು. ನಾನು ಸಂಪಾದಿಸಿದ್ದ 'ಸಂಕ್ರಮಣ'ದ ಲೋಹಿಯಾ ವಿಶೇಷ ಸಂಚಿಕೆಯನ್ನು ಅವರು ಗಮನಿಸಿ ಮೆಚ್ಚುಗೆಯ ಮಾತುಗಳನ್ನಾಡಿದ್ದರು. ನಾನು ಸಾಹಿತ್ಯ ವಿಮರ್ಶೆ ಬರೆದರೆ ಚೆನ್ನ ಎಂದು ಪರೋಕ್ಷವಾಗಿ ಸೂಚಿಸಿದವರೂ ಅವರೇ. ಜಿಎಸ್‌ಎಸ್ ಅವರ ರೀತಿಯೇ ಹಾಗೆ-ನಿಮಗೆ ಗೊತ್ತಿಲ್ಲದಂತೆಯೇ ನಿಮ್ಮನ್ನು ಒಂದು ಶಿಸ್ತಿನೆಡೆಗೆ ಒಯ್ಯುತ್ತಿರುತ್ತಾರೆ.

77ರ ನಂತರದ ಜನತಾ ರಾಜಕಾರಣದಲ್ಲಿ—ನಾನು ಜೆ.ಪಿ.ಯವರ 'ಸೆರಮನೆ ದಿನಚರಿ'ಯನ್ನು ಅನುವಾದಿಸಿ; ಕಿಷನ್ ಪಟ್ನಾಯಕ್ ಜೊತೆಗೂಡಿ ಹೊಸ ಸಮಾಜವಾದಿ ಆಂದೋಲನ ರೂಪಿಸುವ ಪೂರ್ವಭಾವಿ ಸಮ್ಮೇಳನವೊಂದನ್ನು ಬೆಂಗಳೂರಿನಲ್ಲಿ ಆಯೋಜಿಸಿ; ದೆಹಲಿಯಲ್ಲಿದ್ದುಕೊಂಡೇ ಮೈಸೂರಿನಿಂದ ನೆಲಮನೆ ದೇವೇಗೌಡ ಹಾಗೂ ದೇವನೂರ ಮಹಾದೇವ ಅವರ ಸಹಕಾರದಿಂದ 'ಮಾನವ' ಎಂಬ ಸಮಾಜವಾದಿ ಮಾಸಪತ್ರಿಕೆ ನಡೆಸಿ ಆಗ 'ಸುದ್ದಿ'ಯಾಗಿದ್ದೆ—ನಾನು ಕರಗಿ ಹೋಗಿ ಯಾವುದೋ ಒಂದು ಪುಡಿ ರಾಜಕೀಯ ಪಕ್ಷದ ನಾಯಕಮಣಿಯಾಗಿ ಅವನತಿಗೊಳ್ಳದಂತೆ ನನ್ನನ್ನು ರಕ್ಷಿಸಿದವರಲ್ಲಿ ಜಿಎಸ್‌ಎಸ್ ಅವರೂ ಒಬ್ಬರು. ಇನ್ನಿಬ್ಬರು, ರಾಜಕಾರಣವನ್ನು ಕನಸಿಗೇ ಸೀಮಿತಗೊಳಿಸಿ ಕೊಂಡಂತಿರುವ ದೇವನೂರ ಮಹಾದೇವ ಹಾಗೂ ರಾಜಕಾರಣದ ತಾಯಿ ಗುಣವನ್ನಷ್ಟೇ ರೂಢಿಸಿಕೊಂಡು ತಂದೆ ಗುಣವನ್ನೇ ಮರೆತಂತಿರುವ ಕಿಷನ್ ಪಟ್ನಾಯಕ್. ಜೊತೆಗೆ ನಾನು ಕಲಿತ ಗಣಿತಶಾಸ್ತ್ರದ ಒಟ್ಟಂದದ ಶಿಸ್ತೂ ಇಲ್ಲಿ ಕೆಲಸ ಮಾಡಿರಬಹುದು. ಅದೇನೇ ಇರಲಿ, ಜಿಎಸ್‌ಎಸ್ ಅವರ ಶಿಷ್ಯರಿಗೆ ಸಾಹಿತ್ಯ ಗುರುವಾದರೆ ನನಗೆ ಸಾಂಸ್ಕೃತಿಕ ಗುರುವಾದರು.

ಸಾಹಿತ್ಯದ ಕಡೆಯಿಂದ ಸಂಪೂರ್ಣ ರಾಜಕಾರಣದ ಕಡೆ ಹೊರಳುತ್ತಿದ್ದ ನನ್ನನ್ನು ನನಗೆ ಗೊತ್ತಿಲ್ಲದಂತೆಯೇ—ಅವರಿಗೂ ಗೊತ್ತಿಲ್ಲದಂತೆಯೂ ಇರಬಹುದು—ಮತ್ತೆ ಸಾಹಿತ್ಯದ ಕಡೆ ಸೆಳೆದರು. ತಮ್ಮ ನಡೆ-ನುಡಿಗಳ ಮೂಲಕವೇ, ಆತ್ಯಂತಿಕವಾಗಿ ಸಾಹಿತ್ಯ-ಸಂಸ್ಕೃತಿಗಳೇ ಮನುಷ್ಯನನ್ನು ಅಧೋಗತಿಯಿಂದ ರಕ್ಷಿಸಬಲ್ಲವು ಎನ್ನುವುದನ್ನು ಮನದಟ್ಟು ಮಾಡಿದರು. ಅಥವಾ ಅವರ ಸುಸಂಸ್ಕೃತ ವ್ಯಕ್ತಿತ್ವದ ಸಹವಾಸದಿಂದಾಗಿ ನನಗೇ ಮನದಟ್ಟಾಯಿತು. ಈ ನಂಬಿಕೆಯಿಂದಾಗಿಯೇ ನಾನು, ಮುಂದೆ ಸ್ಥಾಪಿತವಾದ ಬಂಡಾಯ ಸಾಹಿತ್ಯ ಸಂಘಟನೆಯ ಜೊತೆ ಗುರುತಿಸಿಕೊಳ್ಳಲು ಇಷ್ಟಪಡದಿದ್ದುದು. ಮೂಲತಃ ಅರಾಜಕವಾಗಿರುವ ಸಾಹಿತ್ಯಕ್ಕೆ ರಾಜತ್ವದ ಕಿರೀಟ ತೊಡಿಸ ಹೊರಟ ಈ ಸಂಘಟನೆಯ ನಾಯಕರು ಎಲ್ಲಿಂದ ಹೊರಟು ಈಗ ಎಲ್ಲಿಗೆ ತಲುಪಿದ್ದಾರೆ ಎಂಬುದನ್ನು ಗಮನಿಸಿದರೇ ಸಾಹಿತ್ಯ-ಸಂಸ್ಕೃತಿಗಳ ಸ್ವಾಯತ್ತತೆಯೊಡನೆ ಹಸ್ತಕ್ಷೇಪ ಮಾಡುವುದು ಎಷ್ಟು ಅನಾಹುತಕಾರಿ ಎಂಬುದರ ಅರಿವಾಗುತ್ತದೆ. ಆದರೆ ವಿಚಿತ್ರವೆಂದರೆ ಸ್ವತಃ ಜಿಎಸ್‌ಎಸ್ ಬಂಡಾಯ ಸಾಹಿತ್ಯ ಸಂಘಟನೆಗೆ ವಿರೋಧವನ್ನೇನೂ ವ್ಯಕ್ತಪಡಿಸಲಿಲ್ಲ; ಬದಲಾಗಿ ಈಗಲೂ ಸಹಾನುಭೂತಿಯನ್ನೇ ಹೊಂದಿರುವವರು. ಅದು ಜಿಎಸ್‌ಎಸ್ ಆರಿಸಿಕೊಂಡ ತಾಳುವಿಕೆ-ಬಾಳುವಿಕೆಯ ಮಾರ್ಗ, ದೊಡ್ಡವರ ಮಾರ್ಗ.

ಜಿಎಸ್‌ಎಸ್ ಬಗ್ಗೆ ಇಷ್ಟೆಲ್ಲವನ್ನೂ ನಾನು ಹೇಳುತ್ತಿರುವುದರ ಹಿಂದೆ ನಾನು ಈಗ ನಮೂದಿಸಿರುವ ಸಂಗತಿಗಳಷ್ಟೇ ಇರಲಾರವು ಎಂಬ ಅನುಮಾನವೂ ನನಗಿದೆ. ಈಗ 2001ರಲ್ಲಿ ನಾನು ಒಮ್ಮೆ ನಿಂತು ತಿರುಗಿ ನೋಡಿದಾಗ ಅನ್ನಿಸಿದ್ದನ್ನು ಒಂದು ನಿರ್ದಿಷ್ಟ ಕಾಲಘಟ್ಟಕ್ಕೆ ಆರೋಪಿಸಿ ಹೇಳುವ ತಪ್ಪು ಮಾಡುತ್ತಿದ್ದೇನೇನೋ ಎಂದೂ ನನಗೆ ಅನ್ನಿಸುತ್ತಿದೆ. ಇರಬಹುದು, ಏಕೆಂದರೆ ವಾಸ್ತವ ಘಟನೆಗಳಲ್ಲಿ ಸ್ಥಿತಗೊಂಡ ಕಾಲವೂ ಅವುಗಳ ನೆನಪುಗಳಲ್ಲಿ ಪ್ರಕಟಗೊಳ್ಳುವ ಕಾಲವೂ ಬೇರೆ ಬೇರೆಯೇ! ನಾನು ದೆಹಲಿಯಿಂದ ಕರ್ನಾಟಕಕ್ಕೆ ವಾಪಸ್ ಬಂದ ಮೇಲೂ ಜಿಎಸ್‌ಎಸ್ ನನ್ನ ಬಗ್ಗೆ ಅದೇ ಪ್ರೀತಿ ತೋರಿದ್ದಾರೆ. 20-25 ವರ್ಷಗಳ ಹಿಂದೆ ಅವರು ಏರ್ಪಡಿಸುತ್ತಿದ್ದ ವಿಚಾರ ಸಂಕಿರಣಗಳ ಯಾವ ವೇದಿಕೆಯ ಮೇಲಿನ ಗಣ್ಯರನ್ನು ನಾನು ಬೆರಗುಗಣ್ಣುಗಳಿಂದ ನೋಡಿ ಆಲಿಸುತ್ತಿದ್ದೆನೋ ಅಂಥಹ ವೇದಿಕೆಗೆ ನನ್ನನ್ನು ಹತ್ತಿಸಿದ್ದಾರೆ. ಕನ್ನಡ ಅಧ್ಯಯನ ಕೇಂದ್ರದ ದಶಮಾನೋತ್ಸವ ಸಂದರ್ಭದ ವಿಚಾರ ಸಂಕಿರಣದಲ್ಲಿ ಒಂದು ಗೋಷ್ಠಿಯ ಪ್ರಾಸ್ತಾವಿಕ ಭಾಷಣಕಾರರನ್ನಾಗಿಯೂ; ನಂತರ 'ಕಾದಂಬರಿಕಾರರಾಗಿ ಕಾರಂತ' ವಿಚಾರ ಸಂಕಿರಣದಲ್ಲಿ ಪ್ರಬಂಧ ಮಂಡನೆಗಾಗಿಯೂ ಆಹ್ವಾನಿಸಿ ನನ್ನನ್ನು—ಹಾಗೂ ಬಹುಶಃ ಹಲವರನ್ನು— ಬೆರಗುಗೊಳಿಸಿದ್ದಾರೆ. ರಾಜಕೀಯ ಒಳನೋಟಗಳುಳ್ಳ ವಿಮರ್ಶೆ ಬೆಳೆಸುವ ಕಡೆ ಜಿಎಸ್‌ಎಸ್ ಆಗ ವಿಶೇಷ ಗಮನ ನೀಡುತ್ತಿದ್ದು, ಅದರ ಅಂಗವಾಗಿ ಅವರು ನನಗೆ ಈ ಅವಕಾಶಗಳನ್ನು ನೀಡಿದರು ಎಂದು ನಾನು ಭಾವಿಸಿದ್ದೇನೆ. ನಂತರ ರಾಜ್ಯ ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾದ ಮೇಲೂ ಹಲವು ವಿಚಾರ ಸಂಕಿರಣಗಳಿಗೆ ನನ್ನನ್ನು ಆಹ್ವಾನಿಸಿದ್ದಾರೆ. ಕನ್ನಡದ ಅತ್ಯಂತ ಹಿರಿಯ ಹಾಗೂ

ಪ್ರತಿಭಾನ್ವಿತ ಸಾಹಿತಿಗಳ ಮಧ್ಯೆ ನನ್ನನ್ನು ಕೂಡಿಸಿ ತಮಾಷೆ ನೋಡಿದ್ದಾರೆ. ಈ ಎಲ್ಲವೂ ನನ್ನ ಈ ಮೇಲಿನ ಮಾತುಗಳ ಹಿಂದೆ ಕೆಲಸಮಾಡಿರಬಹುದು.

ಅದೇನೇ ಇರಲಿ, ನಾನು ಅವರ ನಿರೀಕ್ಷೆಯ ಮಟ್ಟಕ್ಕೆ ಬೆಳೆಯಲಾಗಲಿಲ್ಲವೆಂದು ನನಗೆ ಗೊತ್ತಿದೆ. ಅದಕ್ಕೆ ನನ್ನಲ್ಲಿನ ಆ ರೀತಿಯ ಪ್ರತಿಭೆಯ ಕೊರತೆ ಒಂದು ಕಾರಣವಾದರೆ, ಇಂತಹ ಔಪಚಾರಿಕ ಚರ್ಚೆ-ಸಂವಾದ-ವಾಗ್ವಾದಗಳ ಕುರಿತು ನಮ್ಮ 'ಗುರು' ಕೆ.ಎಂ. ಶಂಕರಪ್ಪ ಆಗಾಗ್ಗೆ ನೀಡುತ್ತಿದ್ದ ಎಚ್ಚರಿಕೆಯೂ ಇನ್ನೊಂದು ಕಾರಣವಾಗಿರಬಹುದು. ಅನೇಕ ಸಲ ನನಗೇ ಅನ್ನಿಸಿದೆ—ಜಿಎಸ್‌ಎಸ್ ಬೆಳೆಸಿದರೆಂದು ಹೇಳಲಾಗುವ ಪ್ರತಿಭಾನ್ವಿತ ವಿಮರ್ಶಕಗಣ ಏನಿದೆ, ಅದು ಸಾಹಿತ್ಯ ನಿರ್ಮಿತಿಯ ಆತ್ಯಂತಿಕ ಸಾರ್ಥಕತೆಯಾದ ಅಹಂಕಾರ ನಿವಾರಣೆಯ ವಿರುದ್ಧ ದಿಕ್ಕಿನಲ್ಲೇ ರಭಸದ ಹೆಜ್ಜೆಗಳನ್ನಿಟ್ಟಿದೆ ಎಂದು. ಇಂತಹ ವಿಮರ್ಶೆಯಲ್ಲಿ ಬೆಳೆಯುವುದು ವಿಮರ್ಶಕನ ಅಹಂಕಾರವೇ ಹೊರತು ವಿಮರ್ಶೆಗೊಳಗಾದ ಕೃತಿಯಲ್ಲ. ಇದು ಪ್ರತಿಭಾ ವಿಕ್ಷಿಪ್ತತೆ. ಹಾಗೆಂದೇ, ಜಿಎಸ್‌ಎಸ್ ಮುಂದುವರಿಸಿದರೆಂದು ಹೇಳಲಾಗುತ್ತಿರುವ ಕುವೆಂಪು ಪರಂಪರೆ ಈ ಪ್ರತಿಭಾನ್ವಿತ ವಿಮರ್ಶಕ ಗಣದಿಂದ ಪೂರ್ಣಪ್ರಮಾಣದಲ್ಲಿ ಪುನರಾನ್ವೇಷಣೆಗಾಗಲೀ ಮರುಮೌಲ್ಯಮಾಪನಕ್ಕೆ ಒಳಗಾಗಲೇ ಇಲ್ಲ. ಹಾಗಾಗಿಯೇ ಕನ್ನಡ ಸಂಸ್ಕೃತಿಯ 'ಆಧುನಿಕ ಮಹಾಕಾವ್ಯ'ವಾದ 'ಮಲೆಗಳಲ್ಲಿ ಮದುಮಗಳು' ಕಾದಂಬರಿ ಈ ಹೊಸ, ಸಂಸ್ಕೃತಿ-ಕೇಂದ್ರಿತವೆಂದು ಹೇಳಲಾದ ವಿಮರ್ಶೆಯ ಪರಿಧಿಯಂಚಿನಲ್ಲೇ ಉಳಿದುಹೋದ ವಿಪರ್ಯಾಸವನ್ನು ನಾವಿಂದು ನೋಡಬೇಕಾಗಿದೆ. ಜಿಎಸ್‌ಎಸ್ ಎಂತಹ ಉದಾರವಾದಿಯೆಂದರೆ, he allowed himself to be overwhelmed by his disciples. ಇದಕ್ಕೆ ಮುಖ್ಯಕಾರಣವೆಂದು ನನಗನ್ನಿಸಿದ್ದು, ಕುವೆಂಪು ಅವರಲ್ಲಿ ಅವರ ಆಳವಾದ ಆಧ್ಯಾತ್ಮಿಕ ನಂಬಿಕೆಯಿಂದಾಗಿ ಕಾಣೆಯಾಗಿದ್ದ self doubt, ಜಿಎಸ್‌ಎಸ್ ಅವರಲ್ಲಿ ಪದೇಪದೇ ಕಾಣತೊಡಗಿದ್ದುದು. ಇದು ಜಿಎಸ್‌ಎಸ್ ಅವರ ಹೊಸಕಾಲದ ಅರಿವೋ, ದೌರ್ಬಲ್ಯವೋ ಎಂಬುದನ್ನು ಬರುವ ಕಾಲವೇ ನಿರ್ಣಯಿಸಬೇಕು.

ಭವಿಷ್ಯಕಾಲದ ಆ ನಿರ್ಣಯ ಏನೇ ಆಗಿರಲಿ, ಅದು ವರ್ತಮಾನದ ಜಿಎಸ್‌ಎಸ್ ಅವರ ವ್ಯಕ್ತಿತ್ವಕ್ಕೆ ಕುಂದುಂಟು ಮಾಡಲಾರದಲ್ಲ ಎಂಬುದೇ ಸದ್ಯದ ಸಂತೋಷ. ನಾನು ವರ್ಗವಾಗಿ ಹೋದ ಎಲ್ಲ ಸ್ಥಳಗಳಿಗೂ—ಇತ್ತೀಚಿನ ಮಡಿಕೇರಿ ಹೊರತಾಗಿ—ಅವರು ಒಂದಲ್ಲ ಒಂದು ಕೆಲಸದ ಮೇಲೆ ಬಂದಿದ್ದಾರೆ. ಬಂದಾಗ ಕೆಲವೆಡೆ ನಮ್ಮ ಮನೆಯಲ್ಲೇ ಉಳಿದುಕೊಂಡು ಮನೆಯ ಸದಸ್ಯರಂತೆಯೇ ನಮ್ಮೊಡನೆ ಬೆರೆತು ಲಘುಸಾಹಿತ್ಯಿಕ ಹರಟೆ-ವಿನೋದ-ಕಾವ್ಯವಾಚನಗಳಲ್ಲಿ ಕಾಲ ಕಳೆದಿದ್ದಾರೆ. ಭದ್ರಾವತಿಯ ನನ್ನ ಪುಟ್ಟ ಮನೆಯಲ್ಲಿ ದಿ. ಪಂಚಾಕ್ಷರಿ ಗವಾಯಿಯವರ ಕಂಠದಿಂದ ಹರಿದು ಬಂದ ಬೇಂದ್ರೆಯವರ "ಯಾಕೋ ಕಾಣೆ ರುದ್ರವೀಣೆ..." ಮತ್ತು ತಮ್ಮ "ಯಾವ ಹಾಡ ಹಾಡಲಿ..." ಎಂಬ ಗೀತೆಗಳನ್ನು ಆ ವಠಾರದ ಎಲ್ಲ ಹೆಂಗಸರು ಮಕ್ಕಳ ಮಧ್ಯೆ ನಿಸ್ಸಂಕೋಚವಾಗಿ ಕೂತು ಕೇಳಿ ಆನಂದಿಸಿದ

ಆ ದಿನಗಳು ಇನ್ನೂ ನನ್ನ ನೆನಪಿನಲ್ಲಿ ಹಸಿರಾಗಿವೆ. ಅವರು ನನ್ನೊಡನೆ, ನಾನು ಅವರೊಡನೆ ಮುನಿಸಿಕೊಂಡಿದ್ದ ದಿನಗಳೂ ಇವೆ. ಅವರು ನನಗೆ ಪರಿಚಯವಾದ ನಂತರ ಪ್ರಕಟವಾದ, ಪುನರ್ಮುದ್ರಿತವಾದ ಅವರ ಎಲ್ಲ ಪುಸ್ತಕಗಳನ್ನೂ ನನಗೆ ಪ್ರೀತಿಯಿಂದ ಕೊಟ್ಟಿದ್ದಾರೆ. ಆದರೆ ನನ್ನದೇ ಸಂಕೋಚ-ಸೋಮಾರಿತನಗಳಿಂದಾಗಿ ಅವಕ್ಕೆ ಒಮ್ಮೆಯೂ ಪ್ರತಿಕ್ರಿಯಿಸದ ಘೋರ 'ಔಪಚಾರಿಕ ಅಪರಾಧ'ವನ್ನು ಮಾಡಿ ಅವರ ಮುನಿಸಿಗೆ ಕಾರಣನಾಗಿದ್ದೇನೇನೋ ಎಂಬ ಆಂತಕವೂ ನನ್ನನ್ನು ಹಲವುಬಾರಿ ಕಾಡಿದೆ. ಆದರೆ ನನಗೆ ಜಿಎಸ್ಎಸ್, ಸಾಹಿತ್ಯವನ್ನು ಮೀರಿದ ವ್ಯಕ್ತಿತ್ವವಾಗಿದ್ದರು ಎಂಬುದು ಅವರಿಗೆ ತಾನೇ ಹೇಗೆ ಗೊತ್ತಾಗಬೇಕು! ಅಂದಹಾಗೆ, ತಾವು ಮುನಿಸಿಕೊಂಡಿದ್ದನ್ನು ಅವರು ಎಂದೂ ಒಪ್ಪುವುದಿಲ್ಲ—'ನಾಗಭೂಷಣ ಯಾಕೋ ಇತ್ತೀಚೆಗೆ ನನ್ನನ್ನು ಕಂಡರೆ ಒದ್ದುಕೊಂಡಿದ್ದಾನೆ' ಎಂದು ಇತರರ ಬಳಿ ಹೇಳಿಯಾರಷ್ಟೆ! ನಾನು ಕರೆದ ಕಡೆ, ನಾನು ಆಹ್ವಾನಿಸಿದ ಸಂದರ್ಭಗಳಿಗೆ ಅವರು ಬರುವುದಿಲ್ಲ ಎಂದರೆ ನನಗೆ ಮುನಿಸು ಬರಬಾರದೇಕೆ? ಆದರೆ ದೊಡ್ಡವರಾದ ಅವರು ನನ್ನ ಮುನಿಸನ್ನು ಮನ್ನಿಸಿ ನನ್ನೊಡನೆ ಎಂದಿನ ಸ್ನೇಹ-ವಿಶ್ವಾಸಗಳನ್ನು ಮುಂದುವರಿಸಿರುವುದು ನನ್ನ ಸೌಭಾಗ್ಯವೆಂದೇ ನಾನು ಭಾವಿಸಿದ್ದೇನೆ. ಅವರು ಯಾರ ಬಳಿಯೋ ನನ್ನನ್ನು ಪ್ರೀತಿಯಿಂದ "ವಕ್ರ" ಎಂದು ಕರೆದದ್ದುಂಟು. ಅದಕ್ಕೆ ನನ್ನ ಉತ್ತರ, ನಿಮಗೆ ಜಗತ್ತು ನೇರವಾಗಿ ಕಾಣುತ್ತಿರುವುದೇ ನಮ್ಮಂತಹವರ "ವಕ್ರತೆ"ಯಿಂದ!

ನನ್ನ ಪತ್ನಿ ಸವಿತಾಳ ಕಾವ್ಯವನ್ನು ಅವಳ ಕಾವ್ಯದ ಆರಂಭ ಘಟ್ಟದಿಂದಲೂ ಗಮನಿಸುತ್ತಾ ಬಂದಿರುವ ಅವರು ಪ್ರತಿಸಾರಿ ಬಂದಾಗಲೂ ಅವಳ ಹೊಸ ಕವನಗಳನ್ನು ಕೇಳಿ ಪ್ರೋತ್ಸಾಹದ ಮಾತುಗಳನ್ನಾಡಿದ್ದಾರೆ. ನಮ್ಮ ಮದುವೆಯಾದಾಗ ಮನೆಗೆ ಕರೆದು ಔತಣಮಾಡಿಸಿ, ಉಡುಗೊರೆ ನೀಡಿ ಹರಸಿದ್ದಾರೆ. ಅವರು ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾದ ನಂತರ ಆರಂಭಿಸಿದ ಯುವಕವಿಗೋಷ್ಠಿಯ ಅಧ್ಯಕ್ಷತೆಗೆ ಸವಿತಾಳನ್ನು ಆಹ್ವಾನಿಸಿ ಅವಳಲ್ಲಿ ಆಶ್ಚರ್ಯವನ್ನೂ, ಧನ್ಯತೆಯನ್ನೂ ಉಂಟುಮಾಡಿದ್ದಾರೆ. ಜಿಎಸ್ಎಸ್ ಅಕಾಡೆಮಿ ಅಧ್ಯಕ್ಷರಾಗಿದ್ದಾಗಲೇ ಅವಳ ಮೊದಲ ಕವನ ಸಂಕಲನ 'ನಾ ಬರುತ್ತೇನೆ ಕೇಳು'ಗೆ ಅಕಾಡೆಮಿ ಬಹುಮಾನ ಬಂದದ್ದು ನನಗೆ-ಅವಳಿಗೆ ಇಬ್ಬರಿಗೂ ಹೆಮ್ಮೆಯ ಸಂಗತಿಯಾಗಿ ಉಳಿದಿದೆ. ಹಾಸನಕ್ಕೆ ಒಮ್ಮೆ ಬಂದಿದ್ದಾಗ ನನ್ನ 'ಗಮನ' ವಿಮರ್ಶಾ ಸಂಕಲನದ ಮುದ್ರಿತ ಹಾಳೆಗಳನ್ನು ಗಮನಿಸಿ ನನ್ನ ಕೋರಿಕೆಯ ಮೇರೆಗೆ ಅಂದೇ ಇಡೀ ಲೇಖನಗಳನ್ನು ಓದಿ, ಸ್ವತಃ ನಾನೇ ನಂಬಲಾಗದಂತಹ ಸಾಲುಗಳುಳ್ಳ ಬೆನ್ನುಡಿ ಬರೆದುಕೊಟ್ಟಿದ್ದಾರೆ. ಸವಿತಾಳ ಆಯ್ದ ನೂರೊಂದು ಕವನಗಳ 'ಆಕಾಶಮಲ್ಲಿಗೆ' ಸಂಕಲನಕ್ಕೆ—ಕೇಂದ್ರಸಾಹಿತ್ಯ ಅಕಾಡೆಮಿಯ ಕೆಲಸದ ಒತ್ತಡಗಳ ಮಧ್ಯೆಯೂ—ಅವಳ ಮೂರೂ ಕವನ ಸಂಕಲನಗಳ ಕವನಗಳನ್ನು ಗಮನಿಸಿ, ಬೆನ್ನುಡಿ ಬರೆದು ಹರಸಿದ್ದಾರೆ. ಮೂರು ವರ್ಷಗಳ ಹಿಂದೆ ನಾನು ಅಸ್ವಸ್ಥನಾಗಿ ಬೆಂಗಳೂರಿನ ಬಂಧುವೊಬ್ಬರ ಮನೆಯಲ್ಲಿ ಚೇತರಿಸಿಕೊಳ್ಳುತ್ತಿದ್ದಾಗ, ಅದು ಹೇಗೋ ವಿಷಯ ಗೊತ್ತಾಗಿ ಜಿಎಸ್ಎಸ್ ಪದ್ಮಾ

ಅವರೊಂದಿಗೆ ಎರಡು ಬಸ್ಸುಗಳನ್ನು ಹತ್ತಿ ಇಳಿದು ನನ್ನ ಬಂಧುವಿನ ಮನೆ ಹುಡುಕಿಕೊಂಡು ಬಂದೇ ಬಂದರು, ಹಣ್ಣ-ಹಂಪಲುಗಳೊಂದಿಗೆ! ಇದನ್ನೆಲ್ಲಾ ಏನೆಂದು ಕರೆಯುವುದು? ಏನೆಂದು ಗುರುತಿಸುವುದು? ಬರೀ ಪ್ರೀತಿ-ವಿಶ್ವಾಸಗಳೆಂದೇ? ಜಿಎಸ್‌ಎಸ್‌ಗೂ ನಮಗೂ ಎತ್ತಣಿಂದೆತ್ತ ಸಂಬಂಧ? ಈ ಪ್ರಶ್ನೆಯಲ್ಲಿನ ಬೆರಗನ್ನು ನಾವು ಕೊನೆಯವರೆಗೂ ಹಾಗೇ ಉಳಿಸಿಕೊಳ್ಳಬಯಸುತ್ತೇವೆ....

ಜಿಎಸ್‌ಎಸ್ ನಮ್ಮ ಕಾಲದ ಸಾಂಸ್ಕೃತಿಕ ವಕ್ತಾರ. ಅವರ ಎದುರು ಹಾರಾಡಿದ ಹಿರಿ-ಕಿರಿಯರೆಲ್ಲ ಗುಡುಗು-ಮಿಂಚುಗಳಂತೆ ಆರ್ಭಟಿಸಿ ಹೊಳೆದು ಮಾಯವಾಗಿದ್ದಾರೆ. ಜಿಎಸ್‌ಎಸ್ ಮಾತ್ರ ಎಲ್ಲವನ್ನೂ ಸಹಿಸಿಕೊಂಡು ತಾಳಿಕೊಂಡು ನಸುನಗುತ್ತಾ ನಮ್ಮ ನಡುವೆ ನಿಂತೇ ಇದ್ದಾರೆ. ಅವರ ದೌರ್ಬಲ್ಯಗಳನ್ನು ನಮ್ಮಲ್ಲಿ ಪ್ರತಿಯೊಬ್ಬರೂ ತಂತಮ್ಮ ಅನುಭವಗಳಿಗನುಸಾರವಾಗಿ ಪಟ್ಟಿಮಾಡುತ್ತಾ ಹೋಗಬಹುದು. ಆದರೆ ಈ ಪಟ್ಟಿಯಲ್ಲಿ ನಮ್ಮ ಕಾಲದ ಅನೇಕ ಬುದ್ಧಿಜೀವಿಗಳನ್ನು ಹಾಳು ಮಾಡಿದ ಪ್ರದರ್ಶನಪ್ರಿಯತೆ, ಲಂಪಟತನ, ಅಧಿಕಾರದಾಹ, ಮತ್ಸರ ಹಾಗೂ ಹುಸಿ ಸೌಜನ್ಯಗಳು ಸೇರಲಾರವು. ಹಾಗೆಂದೇ ಜಿಎಸ್‌ಎಸ್ ನಮಗೆಲ್ಲ ದೊಡ್ಡವರು, ಪ್ರಿಯರು, ಗೌರವಾರ್ಹರು. ಅವರ ಜೀವನ ಪ್ರೀತಿ, ಶ್ರದ್ಧೆ, ಶಿಸ್ತು, ಅಚ್ಚುಕಟ್ಟುತನ, ಹಿತಮಿತವಾದ ವಿನೋದ ಹಾಗೂ ಸಹಜ ಸಂಕೋಚ ನಮ್ಮ ತಲೆಮಾರಿನವರ ಬಾಳಿನ ಅಂದ-ಚೆಂದ-ಸವಿಯನ್ನು ಹೆಚ್ಚಿಸಬಲ್ಲವು. ಆ ಕಾರಣಕ್ಕಾದರೂ ಜಿಎಸ್‌ಎಸ್ ನಮ್ಮೊಡನೆ ಇನ್ನೂ ಹೆಚ್ಚು ದಿನ ಇರುವಂತಾಗಲಿ.



# ಜಿಎಸ್‌ಎಸ್ ಎಂಬ 'ಗ್ಯಾಂಗ್‌ಸ್ಟರ್'!

**ಪ್ರೊ|| ಎಸ್. ಚಂದ್ರಶೇಖರ್**

**ಜಿ**ಎಸ್‌ಎಸ್‌ರನ್ನು ನಾನು ಮೊದಲು ಕಂಡದ್ದು 1972ರ ಆಗಸ್ಟ್ ತಿಂಗಳಲ್ಲಿ. ಸೆಂಟ್ರಲ್ ಕಾಲೇಜಿನ ಚರಿತ್ರೆ ವಿಭಾಗದಲ್ಲಿ ಮೊದಲ ಎಂ.ಎ. ತರಗತಿಯ ವಿದ್ಯಾರ್ಥಿಯಾಗಿ ಆಗಷ್ಟೆ ಸೇರಿದ್ದೆ. ಆ ಸಮಯಕ್ಕಾಗಲೇ ಜಿಎಸ್‌ಎಸ್ ಅವರದು ದೊಡ್ಡ ಹೆಸರು. ಬೆಂಗಳೂರು ವಿಶ್ವವಿದ್ಯಾಲಯದ ಕಲಾ ವಿಭಾಗಗಳಲ್ಲಿ ಆಗ ಯಾವ ವಿಭಾಗದಲ್ಲೂ ಅವರಷ್ಟು ಹೆಸರು ಮಾಡಿದ ಅಧ್ಯಾಪಕರು ಇರಲಿಲ್ಲ. ಹಾಗೆಯೇ ಜುಬ್ಬಾ, ಕಚ್ಚೆಪಂಚೆ-ಪೈಜಾಮ ಹಾಕುವ ಅಧ್ಯಾಪಕರು ಕೂಡ. ನಾನು ವಿದ್ಯಾರ್ಥಿಯಾಗಿದ್ದ ಚರಿತ್ರೆ ವಿಭಾಗದ ಕಟ್ಟಡ ಸೆಂಟ್ರಲ್ ಕಾಲೇಜಿನ ಪ್ರಸನ್ನಕುಮಾರ ಬ್ಲಾಕ್‌ನಲ್ಲಿತ್ತು. ಕನ್ನಡ ನಮ್ಮ ವಿಭಾಗದ ಮುಂದಿನ ಕಟ್ಟಡದಲ್ಲಿತ್ತು. ನನ್ನ ವಿಭಾಗಕ್ಕೆ ಹೋಗುವಾಗಲೆಲ್ಲ ನಾನು ಕನ್ನಡ ವಿಭಾಗವನ್ನು ಹಾದು ಹೋಗಬೇಕಾಗಿತ್ತು. ಹೀಗಾಗಿ, ಆಗಾಗ ಜಿಎಸ್‌ಎಸ್ ಅವರ ದರ್ಶನವಾಗುತ್ತಿತ್ತು. ಅವರು ಕನ್ನಡ ವಿಭಾಗದ ಪ್ರಾಧ್ಯಾಪಕರೂ, ಮುಖ್ಯಸ್ಥರೂ ಆಗಿದ್ದರು. ಅವರ ಸಾಹಿತ್ಯಕ ಕೃಷಿಯ ಬಗ್ಗೆ ನನಗೆ ಓದಿ-ಕೇಳಿ ಗೊತ್ತಿತ್ತೇ ವಿನಹ ಅವರನ್ನು ಭೇಟಿಯಾಗುವ ಸಂದರ್ಭ ಒದಗಿದ್ದು ಐದಾರು ವರ್ಷಗಳ ನಂತರ.

1974ರಲ್ಲಿ ಎಂ.ಎ. ಮುಗಿಸಿ ಚರಿತ್ರೆ ವಿಭಾಗದಲ್ಲಿ ಸಂಶೋಧನ ಸಹಾಯಕನಾಗಿ ಸೇರಿದೆ. ವಾರಕ್ಕೆ ಹದಿನಾರು ಘಂಟೆಗಳಷ್ಟು ಪಾಠ ಮಾಡಲು ಕಷ್ಟಪಡುತ್ತಿದ್ದೆ. ಅದಕ್ಕಾಗಿ ನಡೆಸುತ್ತಿದ್ದ ತಯಾರಿಯೇ ನನ್ನ ಸಮಯವನ್ನೆಲ್ಲಾ ನುಂಗಿ ಹಾಕುತ್ತಿತ್ತು. ಪಠ್ಯಗಳನ್ನು ಬಿಟ್ಟು ಬೇರೆಯದನ್ನು ಓದಲು ಸಿಕ್ಕುತ್ತಿದ್ದ ಸಮಯ ಕಡಿಮೆ. ಜೊತೆಗೆ ನನ್ನವೇ ಆದ ತರಲೆ ಕೆಲಸಗಳು, ಸ್ನೇಹಿತರು ಇತ್ಯಾದಿಗಳಲ್ಲಿ ಮುಳುಗಿಹೋಗುತ್ತಿದ್ದ ನನಗೆ ಯೂನಿರ್ವಸಿಟಿ ಕೆಲಸ ಸುಲಭವೆನ್ನಿಸಲಿಲ್ಲ. ಅಧ್ಯಾಪನದ ಜೊತೆಗೆ, ಸಂಶೋಧನಾ ಪ್ರಗತಿಯ ಬಗ್ಗೆ ನನ್ನ ಮಾರ್ಗದರ್ಶಕರು ಆಗಾಗ ಕ್ಲಾಸ್ ಹಾಕುತ್ತಿದ್ದರು. ನನ್ನ ವಿಭಾಗದಲ್ಲಿ ಇದ್ದ ನನ್ನ ಇತರ ಅಧ್ಯಾಪಕ ಸಹೋದ್ಯೋಗಿ ವೃಂದವೂ ನನ್ನಂಥವರ ಬಗ್ಗೆ ತಾತ್ಸಾರದಿಂದಲೇ ಇರುತ್ತಿದ್ದುದೂ ನನ್ನ ಗಮನಕ್ಕೆ ಬಂದಿತ್ತು.

ನಾನು ವಿಶ್ವವಿದ್ಯಾಲಯದ ಕೆಲಸಕ್ಕೆ ಸೇರಿದ ಎರಡು ವರ್ಷಗಳ ನಂತರ ಅಧ್ಯಾಪನ ಕೆಲಸದಲ್ಲಿ ಸ್ವಲ್ಪ ರಿಯಾಯಿತಿ ಕೊಟ್ಟರು. ಆ ವೇಳೆಗೆ ಗೆಳೆಯರಾದ ಕಲ್ಗುಡಿ, ಸಿದ್ಧಲಿಂಗಯ್ಯ,

ಡಿ.ಆರ್. ನಾಗರಾಜ, ಕಾಳೇಗೌಡ ನಾಗವಾರ ಮುಂತಾದವರು ಕನ್ನಡ ವಿಭಾಗಕ್ಕೆ ಬಂದಿದ್ದರು. ನಮ್ಮೆಲ್ಲರಿಗಿಂತ ಸ್ವಲ್ಪ ಹಿರಿಯರಾದ ಕಿ.ರಂ., ಕೆ.ವಿ. ನಾರಾಯಣ, ಕೆ.ಎಂ.ಎಸ್, ಜಯದೇವ್ ಮುಂತಾದವರ ಪರಿಚಯವೂ ಆಗಿತ್ತು.

ನನ್ನ ವಿಭಾಗದ ಶೈಕ್ಷಣಿಕ ವಾತಾವರಣ ನನಗೆ ಅಷ್ಟು ಉತ್ಸಾಹದಾಯಕವಾಗಿರಲಿಲ್ಲ. ಸಮಾಜವಾದಿ ವಿದ್ಯಾರ್ಥಿ ಸಂಘಟನೆಗಳಲ್ಲಿ ಸಕ್ರಿಯನಾಗಿದ್ದ ನನ್ನನ್ನು ಸಹಜವಾಗಿಯೇ ಕನ್ನಡ ವಿಭಾಗದ ಗೆಳೆಯರು ಆಕರ್ಷಿಸಿದರು. ಚರಿತ್ರೆ ಪುಸ್ತಕಗಳ ಓದು, ಹಳ್ಳಿಯ ಹಿನ್ನೆಲೆಯಿಂದ ಬಂದ ನನಗೆ ತೌಡು ಜಗಿದಂತೆ ಇರುತ್ತಿತ್ತು. ಕೊಸಾಂಬಿ, ಪಾಮೆದತ್, ರೋಮಿಲಾ ಥಾಪರ್, ಆರ್.ಎಸ್. ಶರ್ಮರಂಥವರು ಬರೆದದ್ದನ್ನು ಬಿಟ್ಟರೆ ಉಳಿದೆಲ್ಲವೂ ನಮ್ಮ ಜನರ ಇತಿಹಾಸವೆನಿಸುತ್ತಲೇ ಇರಲಿಲ್ಲ. ನನ್ನ ಸಮಸ್ಯೆ ಅನುಮಾನ, ಗೊಂದಲಗಳ ಬಗ್ಗೆ ಚರ್ಚಿಸಲು ಕನ್ನಡ ವಿಭಾಗದ ಗೆಳೆಯರು ನೆರವಾದರು. ಅದೇ ಸಂದರ್ಭದಲ್ಲಿ 'ಲೇಖಕರ, ಕಲಾವಿದರ ಒಕ್ಕೂಟ' ರಚನೆಯಾಯಿತು. ಅದರ ಮುಂಚೂಣಿಯಲ್ಲಿದ್ದುದೇ ಕನ್ನಡ ವಿಭಾಗ ಮತ್ತು ಮುಖ್ಯವಾಗಿ 'ಜಿಎಸ್‌ಎಸ್'.

1977ರ ನಂತರ ಸಂಶೋಧನೆಯಲ್ಲಿ ಹೆಚ್ಚು ತೊಡಗಿಸಿಕೊಂಡೆ. ಅಪಾರ ಸಾಮಗ್ರಿಯನ್ನು ಕಲೆಹಾಕಿದೆ. ಬರೆಯಲು ಧೈರ್ಯ ಸಾಲದು. ಯಾಕೆಂದರೆ ಕನ್ನಡದಲ್ಲಿ ಬರೆಯಲು ಅಂಜಿಕೆ. ಇಂಗ್ಲಿಷ್‌ನಲ್ಲಿ ಬರೆದೆ. ಆದರೆ ಬರೆದದ್ದನ್ನು ಅಚ್ಚು ಮಾಡಿಸುವುದು ಎಲ್ಲಿ? ಹಾಗೇ ಇಟ್ಟುಕೊಳ್ಳುತ್ತಿದ್ದೆ. ನಾನು ಆಗ ಬರೆಯುತ್ತಿದ್ದುದು ಹೆಚ್ಚಾಗಿ ಆಧುನಿಕ ಮೈಸೂರಿನ ಬಗ್ಗೆ. ನನ್ನ ಪಿಎಚ್.ಡಿ. ವಿಷಯವೂ ಅದೇ. ಬರೆಯುವ ಮುನ್ನ ಗೆಳೆಯರ ಜೊತೆ ವಿಶೇಷವಾಗಿ ಕನ್ನಡ ವಿಭಾಗದ ಗೆಳೆಯರ ಜೊತೆ ಚರ್ಚಿಸುತ್ತಿದ್ದೆ. ಸೆಮಿನಾರ್‌ಗಳಲ್ಲಿ ಬರೆದಿದ್ದನ್ನು ಓದುತ್ತಿದ್ದೆ.

ಕಲ್ಗುಡಿ, ಕಿ.ರಂ, ಕೆ.ವಿ. ನಾರಾಯಣ, ಆಗ ನಾನು ಇಂಗ್ಲಿಷ್‌ನಲ್ಲಿ ಬರೆದಿದ್ದನ್ನು ಕನ್ನಡಕ್ಕೆ ಭಾಷಾಂತರಿಸಿ ಪ್ರಕಟಿಸಬಹುದೆಂದು ಹುರಿದುಂಬಿಸಿದರು. ಕಲ್ಗುಡಿಯವರೇ ಒಂದು ವರ್ಷದ ಅವಧಿಯಲ್ಲಿ ನನ್ನ ಮೂರು ಲೇಖನಗಳನ್ನು ಕನ್ನಡೀಕರಿಸಿ ನಮ್ಮ ವಿಶ್ವವಿದ್ಯಾಲಯದ ತ್ರೈಮಾಸಿಕ 'ಸಾಧನೆ'ಯಲ್ಲಿ ಪ್ರಕಟಿಸಲು ನೆರವಾದರು. 'ಸಾಧನೆ' 'ಜಿಎಸ್‌ಎಸ್' ಅವರ ಕೂಸು. ಅವರೇ ಅದರ ಪ್ರಧಾನ ಸಂಪಾದಕರು. ನನ್ನ ಲೇಖನಗಳು ಪ್ರಕಟವಾಗುತ್ತವೊ-ಇಲ್ಲವೋ ಎನ್ನುವ ಭಯ ನನ್ನಲ್ಲಿತ್ತು. ಆದರೆ ಅವೆಲ್ಲಾ ಅಚ್ಚಾದವು. ನಾನು ಜಿಎಸ್‌ಎಸ್ ಅವರ ಗಮನ ಸೆಳೆದದ್ದು ಹೀಗೆ.

1979ರ ಅಕ್ಟೋಬರ್‌ನಲ್ಲಿರಬೇಕು. ಒಂದು ಮಧ್ಯಾಹ್ನ ನನ್ನ ತರಗತಿ ಮುಗಿಸಿ ಬಂದೆ. ವಿಭಾಗದ ಅಟೆಂಡರ್ ಬಂದು 'ಮುಖ್ಯಸ್ಥರು ಕರೆಯುತ್ತಿದ್ದಾರೆ' ಎಂದ. ಏನೋ ಕೆಲಸ ಹಚ್ಚುತ್ತಾರೆಂದು ಗೊಣಗಿಕೊಂಡೇ ಅವರಲ್ಲಿಗೆ ಹೋದೆ. ಅವರು 'ನೋಡಿ, ಶಿವರುದ್ರಪ್ಪನವರು ಫೋನ್ ಮಾಡಿದ್ರು. ನೀವು ಅವರನ್ನ ನೋಡಬೇಕಂತೆ' ಅಂದರು. ನನಗೆ ಆಶ್ಚರ್ಯ, ಸಂತೋಷ, ಭಯ ಎಲ್ಲ ಒಟ್ಟಿಗೇ ಆದವು. ಅದು ಜಿಎಸ್‌ಎಸ್ ಅವರ

ಮಧ್ಯಾಹ್ನದ ಊಟದ ಸಮಯ. ಆದರೂ ಎಂದಿನಂತೆ ಕನ್ನಡ ವಿಭಾಗಕ್ಕೆ ಹೋದೆ. ಮಾಮೂಲಿಯಾಗಿಯೇ ಅಲ್ಲಿಯ ಗೆಳೆಯರೊಂದಿಗೆ ಕ್ಯಾಂಟೀನಿಗೆ ಹೋಗಿ ಟೀ ಕುಡಿದು, ಅವರಲ್ಲಿ ವಿಷಯ ಪ್ರಸ್ತಾಪ ಮಾಡಿದೆ. ಅವರೆಲ್ಲಾ 'ಅದರಲ್ಲೇನಿದೆ ಹೋಗಿ ನೋಡಿ' ಎಂದರು. ಅಂಜುತ್ತಲೇ ಜಿಎಸ್‌ಎಸ್ ಅವರ ಕೊಠಡಿಗೆ ಹೋಗಿ 'ಸಾರ್' ಎಂದೆ. ಏನೋ ಕಾಗದಕ್ಕೆ ಸಹಿಹಾಕುತ್ತಿದ್ದ ಜಿಎಸ್‌ಎಸ್ ಕತ್ತೆತ್ತಿ 'ಏನು ಹೇಳಿ' ಎಂದರು. ನನ್ನ ಪರಿಚಯ ಹೇಳಿಕೊಂಡೆ. 'ಓ, ನೀವೇನಾ, ನಿಮ್ಮನ್ನು ಹೆಚ್ಚು ಕಡಿಮೆ ದಿನ ನಿತ್ಯವೂ ಇಲ್ಲೇ ನೋಡುತ್ತಿರುತ್ತೇನೆ. ಆದರೆ ನೀವೇ ಚಂದ್ರಶೇಖರ್ ಅಂತ ಗೊತ್ತಿರಲಿಲ್ಲ. ಕೂತ್ಕೊಳ್ಳಿ' ಅಂದರು. ಆಮೇಲೆ ನನ್ನ ಬಗ್ಗೆ, ಸಂಶೋಧನೆ ಇತ್ಯಾದಿಗಳ ಬಗ್ಗೆ ವಿಚಾರಿಸಿದರು. ಸುಮಾರು 45 ನಿಮಿಷಗಳ ಕಾಲ ಮಾತು-ಕತೆ ನಡೆಯಿತು. ಕಾಫಿ ತರಿಸಿದರು.

'ಎಲ್ಲಾ ಸರಿ ಚಂದ್ರಶೇಖರ್, ನೀವು ಯಾಕೆ ಕನ್ನಡದಲ್ಲಿ ಬರೀಬಾರದು–ಇತರರ ಕೈಲಿ ಅನುವಾದ ಮಾಡಿಸಿ ಪ್ರಕಟನೆಗೆ ಕಳಿಸ್ತೀರಿ?' ಅಂದ್ರು. ನಾನು ನನ್ನ ಹಿಂಜರಿಕೆ ಮತ್ತು ವಿಧ್ಯುಕ್ತವಾಗಿ ಕನ್ನಡವನ್ನು ಕಲಿಯದಿದ್ದುದು ಮುಂತಾದುವನ್ನು ಹೇಳಿಕೊಂಡೆ. ಅದಕ್ಕವರು 'ಅಲ್ಲಪ್ಪಾ ಇಷ್ಟೊತ್ತು ನೀವು ನನ್ನ ಜೊತೆ ಮಾತನಾಡಿದ್ರಲ್ಲ, ಯಾವ ಭಾಷೇಲಿ? ಅದು ಕೇವಲ ಉಭಯಕುಶಲೋಪರಿಯಲ್ಲದೆ ಗಂಭೀರವಾದ ವಿಷಯಗಳನ್ನು ಚರ್ಚೆಮಾಡಿದ್ರಿ. ಮುಕ್ಕಾಲು ಘಂಟೆಯಿಂದ ಯಾವ ರೀತಿ ಭಾಷೇಲಿ ನೀವು ಮಾತಾಡಿದ್ರೋ ಆ ಭಾಷೆ ಬರಿಯೋದಕ್ಕೆ ಸಾಕು. ಅದೇ ಕನ್ನಡ ಭಾಷೇಲಿ ನೀವು ಬರೀಬೇಕಾದ್ದನ್ನು ನೇರವಾಗಿ ಬರೆದ್ಬಿಡಿ. ಮೊದಲಿಗೆ ಸ್ವಲ್ಪ ಕಷ್ಟ ಅನ್ನಿಸಬಹುದು. ಆದರೆ ಬರ್ತಾ ಬರ್ತಾ ಸರಿ ಹೋಗುತ್ತೆ' ಅಂದು ಧೈರ್ಯ ತುಂಬಿದರು. ಇದೇ ಮಾತುಗಳನ್ನು ಕನ್ನಡ ವಿಭಾಗದ ಗೆಳೆಯರು ನನಗೆ ಅನೇಕ ಬಾರಿ ಹೇಳಿದ್ದರು. ಆದರೆ ಜಿಎಸ್‌ಎಸ್ ಮಾತುಗಳಿಗೆ ಮಂತ್ರಶಕ್ತಿಯಿತ್ತೇನೋ. ಆವತ್ತಿನಿಂದ ಧೈರ್ಯಮಾಡಿ ಕನ್ನಡದಲ್ಲೇ ಬರೆಯಲು ಶುರುಮಾಡಿದೆ. ಅದು ಮುಂದುವರಿದಿದೆ.

ಆಗಾಗ ಅವರನ್ನು ಭೇಟಿಯಾಗುವುದು ನಡೆದಿತ್ತು. ಹೀಗೇ ಇನ್ನೊಮ್ಮೆ ಅವರು ನನಗೆ ಹೇಳಿಕಳಿಸಿದರು. ಅದು 1983ರ ಆರಂಭ. ಆ ಹೊತ್ತಿಗೆ ನಾನು ಪಿಎಚ್.ಡಿ ಪಡೆದು ಅಧ್ಯಾಪಕನೂ ಆಗಿದ್ದೆ. ಕಾಫಿ ಕೊಡಿಸಿ, ನಾನು ಆ ಸಂದರ್ಭದಲ್ಲಿ ಬರೆದಿದ್ದ ಎರಡು ಲೇಖನಗಳ ಬಗ್ಗೆ ಚರ್ಚಿಸಿದರು. ನಂತರ ನಾನು ಹೊರಡುತ್ತೇನೆಂದು ತಯಾರಾಗುತ್ತಿದ್ದಾಗ 'ಕೂತ್ಕೊಳ್ಳಿ, ನನಗೆ ಇನ್ನೊಂದು ವಿಚಾರ ಮಾತನಾಡೋದಿದೆ. ಈಗ ನಿಮ್ಮವು ಎಷ್ಟು ಲೇಖನಗಳಾಗಿವೆ—ಒಂದು ಹತ್ತಾಗಿರಬಹುದಲ್ವೇ? ಅವು ಚರಿತ್ರೆಗೆ ಸಂಬಂಧಿಸಿದವು. ಆದ್ರೂ ಒಟ್ಟಿಗೆ ಬಂದ್ರೆ ಅದರ ಅಂದವೇ ಬೇರೆ, ಅರ್ಥವೂ ವಿಸ್ತಾರವಾಗಿರುತ್ತೆ. ಒಂದು ಕೆಲಸ ಮಾಡಿ—ಒಂದೆರಡು ತಿಂಗಳು ಸಮಯ ಬೇಕಾದ್ರೆ ತಗೊಳ್ಳಿ. ಆದ್ರೆ ಮಾರ್ಚ್ ಕೊನೆ ಹೊತ್ತಿಗೆ ಆ ಲೇಖನಗಳನ್ನೆಲ್ಲಾ ಸೇರಿಸಿ ತಂದು ಕೊಡಿ' ಅಂದ್ರು. ಯಾಕೆ ಎಂದು ಕೇಳುವ ಧೈರ್ಯವಾಗದೆ ವಾಪಸು ಬಂದೆ. ಆ ಬಗ್ಗೆ ನಾರಾಯಣ, ಕಲ್ಗುಡಿಯವರಲ್ಲಿ ವಿಚಾರಿಸಿದೆ. 'ಆ ಬಗ್ಗೆ ತಲೆಯಾಕೆ ಕೆಡಿಸಿಕೊಳ್ತೀರಿ, ಹೇಳಿದಷ್ಟನ್ನು ಮಾಡಿ' ಎಂದಷ್ಟೇ ಹೇಳಿದರು.

ಸರಿ, ಎಲ್ಲಾ ಲೇಖನಗಳನ್ನು ತೆಗೆದು ನೋಡಿದೆ. ಒಟ್ಟು ಹತ್ತು ಲೇಖನಗಳೇನೋ ಇದ್ದವು. ಅವುಗಳನ್ನು ತಿದ್ದಿ, ಇನ್ನೂ ಇಂಗ್ಲಿಷಿನಲ್ಲಿದ್ದ ಎರಡು ಲೇಖನಗಳನ್ನು ಅನುವಾದಿಸಿ, ಕಲ್ಬುರ್ಗಿಯವರಿಗೆ ತೋರಿಸಿದೆ, ಸಂತೋಷಪಟ್ಟರು. ನಾರಾಯಣ್ ಉತ್ಸಾಹ ತೋರಿದರು. ಕಿ.ರಂ, ಬೀಡಿ, ಸಿಗರೇಟು ಕೊಟ್ಟು ಕೂಡಿಸಿಕೊಂಡು ಎಲ್ಲವನ್ನು ಓದಿದರು.

ಇಷ್ಟೆಲ್ಲಾ ಆದ ಮೇಲೆ ಎಲ್ಲವನ್ನೂ ನನ್ನ ಬಗಲು ಚೀಲದಲ್ಲಿ ಹಾಕಿಕೊಂಡು ಮಾರ್ಚ್ ಮಧ್ಯ ಭಾಗದಲ್ಲಿ ಜಿಎಸ್‌ಎಸ್ ನೋಡಲು ಹೋದೆ. 'ಏನು ಮಾಡಿದಿರಿ, ಲೇಖನಗಳೆಲ್ಲಾ ಸಿಕ್ಕಿದವೋ? ಎಲ್ಲವನ್ನೂ ತೆಗೆದುಕೊಂಡು ಮುಂದಿನ ಬುಧವಾರ ಬನ್ನಿ' ಎಂದರು. ಅಂದೇ ಕೇಳಿದ್ದರೂ ಕೊಡಲು ತಯಾರಿದ್ದ ನನಗೆ ಸ್ವಲ್ಪ ನಿರಾಶೆಯಾದರೂ ಅದನ್ನು ತೋರ್ಪಡಿಸಿಕೊಳ್ಳದೆ ಇನ್ನೊಮ್ಮೆ ಅವನ್ನೆಲ್ಲಾ ಓದಬಹುದು, ತಪ್ಪುಗಳಿದ್ದರೆ ತಿದ್ದಬಹುದೆಂದು ವಾಪಸು ಬಂದೆ. ಮುಂದಿನ ಬುಧವಾರ ಕನ್ನಡ ವಿಭಾಗಕ್ಕೆ ಹೋದೆ. ನಾರಾಯಣರ ರೂಮಿನಲ್ಲಿ ಕಲ್ಬುರ್ಗಿ, ಚಿ. ಶ್ರೀನಿವಾಸರಾಜು ಕುಳಿತಿದ್ದರು. ಜಿಎಸ್‌ಎಸ್ ಕ್ಲಾಸಿನಲ್ಲಿದ್ದಂತೆ ನೆನಪು. ಯಥಾ ಪ್ರಕಾರ ಟೀ ಕುಡಿದು ಬಂದೆವು. ಆ ವೇಳೆಗೆ ಜಿಎಸ್‌ಎಸ್ ತಮ್ಮ ಕೊಠಡಿಗೆ ಹಿಂದಿರುಗಿದ್ದರು. ನಾರಾಯಣರ ರೂಮಿಗೆ ಬುಲಾವ್ ಬಂದಿತ್ತು. ಎಲ್ಲರೂ ಜಿಎಸ್‌ಎಸ್ ರೂಮಿಗೆ ಹೋದೆವು. ಸರಿ, ಲೇಖನಗಳನ್ನು ಕೊಡಿ ಎಂದರು. ಟ್ಯಾಗ್ ಹಾಕಿದ್ದ ಕಡತಗಳನ್ನು ಅವರ ಕೈಲಿಟ್ಟೆ. ಅವರು ಅದನ್ನು ರಾಜು ಅವರಿಗೆ ವರ್ಗಾಯಿಸಿದರು.

ಹೀಗೆ ಅಂಕಣ ಪ್ರಕಾಶನದಿಂದ ನನ್ನ ಮೊದಲ ಕೃತಿ, 'ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ 1881-1947: ಕೆಲವು ಒಳನೋಟಗಳು' ಕೃತಿ 1983ರಲ್ಲಿ ಪ್ರಕಟವಾಯಿತು. ಆ ಪ್ರಕಟನೆಯ ಹಿಂದೆ ಮುಖ್ಯವಾಗಿ ಕೆ.ವಿ. ನಾರಾಯಣ, ಕಲ್ಬುರ್ಗಿ ಮುಂತಾದವರ ಕೈವಾಡವಿದ್ದರೂ ಆ ಬಗ್ಗೆ ಜಿಎಸ್‌ಎಸ್ ಅವರು ವಹಿಸಿದ ಮುತುವರ್ಜಿ ಅಪಾರವಾದುದು. ಕನ್ನಡದಲ್ಲಿ ಒಬ್ಬ ಲೇಖಕನಾಗಿ ನನಗೆ ಸ್ವಲ್ಪ ಮಾನ್ಯತೆ ಗಳಿಸಿ ಕೊಟ್ಟದ್ದು ಆ ಕೃತಿ. ಆ ಸಂಕಲನದ ಬಹುತೇಕ ಲೇಖನಗಳನ್ನು ಮೊದಲು 'ಸಾಧನೆ'ಯಲ್ಲಿ ಪ್ರಕಟಿಸಿದವರೂ, ಜಿಎಸ್‌ಎಸ್ ಅವರೇ.

ಅನಂತರ 1984ರಲ್ಲಿ ಜಿಎಸ್‌ಎಸ್ ಇನ್ನೊಂದು ಕೆಲಸ ವಹಿಸಿದರು. ಅದು ಬಿ.ಎಂ. ಶ್ರೀ ಅವರ ಶತಾಬ್ದಿಗೆ ಸಂಬಂಧಿಸಿದ್ದು. ಅದು ಹೀಗೇ ಮುಂದುವರಿದು ಕನ್ನಡ ಸಾಹಿತ್ಯದಲ್ಲಿ ನನ್ನ ಆಸಕ್ತಿಯನ್ನು ಹೆಚ್ಚಿಸಿತು. ಚರಿತ್ರೆಯ ಸಂಗತಿ (facts) ಗಳಲ್ಲೇ ಅನಿವಾರ್ಯವಾಗಿ ಮುಳುಗಿ ಉಸಿರುಕಟ್ಟುತ್ತಿದ್ದ ನನ್ನನ್ನು ಸ್ವಲ್ಪ ವಿಸ್ತಾರವಾದ ವಾತಾವರಣಕ್ಕೆ ಎಳೆದು ತಂದವರು ಕನ್ನಡ ವಿಭಾಗದ ಗೆಳೆಯರು ಮತ್ತು ಅದಕ್ಕೆ ಒಂದು ರೂಪು ಕೊಟ್ಟವರು ಅದರ ಮುಖ್ಯಸ್ಥರಾಗಿದ್ದ ಜಿಎಸ್‌ಎಸ್. ಅನಂತರ ಅವರ ಪ್ರೋತ್ಸಾಹದಿಂದಲೇ ಅಷ್ಟಿಷ್ಟು ಆಧುನಿಕ ಕನ್ನಡ ಸಾಹಿತ್ಯವನ್ನು ಓದಿಕೊಂಡೆ. ಕರ್ನಾಟಕ ಚರಿತ್ರೆಯನ್ನು ಮನನ ಮಾಡಿಕೊಳ್ಳುವ ಹೊಸದಾರಿಯೊಂದು ನನಗೆ ಅಲ್ಲಿ ಗೋಚರವಾಯಿತು. ಆಗಾಗ ಆ ದಾರಿಯಲ್ಲಿ ಅಷ್ಟಿಷ್ಟು ಅಡ್ಡಾಡುತ್ತೇನೆ. ಹೀಗೆ ಅಡ್ಡಾಡುವಾಗ ಮೂಡಿಬಂದವೇ ನನ್ನ ಹಲವಾರು ಬರಹಗಳು.

ಅದರಲ್ಲಿ ಮುಖ್ಯವಾದುವು, ರಾಷ್ಟ್ರೀಯತೆ, ಉಪರಾಷ್ಟ್ರೀಯತೆ, ಕೋಮುವಾದ, ವಸಾಹತುವಾದ, ಸ್ವಾತಂತ್ರ್ಯ ಚಳುವಳಿ ಕುರಿತಾದ ಲೇಖನಗಳು. ಹಲವಾರು ಸಂದರ್ಭಗಳಲ್ಲಿ ಈ ಲೇಖನಗಳನ್ನು ನಾನು ಬರೆದೆ. ಎಲ್ಲೆಲ್ಲೋ ಅವು ಅಚ್ಚಾಗುತ್ತಿದ್ದವು.

ಈ ಮಧ್ಯೆ 'ಜಿಎಸ್‌ಎಸ್' ವಿಶ್ವವಿದ್ಯಾಲಯದಿಂದ ನಿವೃತ್ತರಾಗಿದ್ದರು. ಆದರೆ ಅವರ ಸಾಹಿತ್ಯಿಕ ಕ್ರಿಯಾಶೀಲತೆ ಚ್ಯುತಿಯಿಲ್ಲದೆ ಮುಂದುವರೆದಿತ್ತು. 1992ರಲ್ಲಿ ಕುವೆಂಪು ಹುಟ್ಟೂರು ಕುಪ್ಪಳಿಗೆ ನಮ್ಮನ್ನೆಲ್ಲಾ ಕರೆದುಕೊಂಡು ಹೋದರು. ಅವರ ಒತ್ತಾಸೆಗೆ ಕಟ್ಟುಬಿದ್ದು ನಾನೂ ಮಾತಾಡಿದೆ. ಹಾಗೆಯೇ ಮಾತಾಡಿದ್ದನ್ನು ಬರೆದುಕೊಟ್ಟೆ. ಅದು ಅಚ್ಚಾಯಿತು. 1992ರ ನನಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ತಂದುಕೊಟ್ಟ 'ಅಂಬೇಡ್ಕರ್ ಮತ್ತು ಗಾಂಧಿ' ಕೃತಿಯನ್ನು ಅಕ್ಷರ ಪ್ರಕಾಶನ ಪ್ರಕಟಿಸಿತು. ಆದರೆ ಬಿಡುಗಡೆ ಸಮಾರಂಭಕ್ಕೆ 'ಜಿಎಸ್‌ಎಸ್' ಕೇವಲ ಒಬ್ಬ ಸಭಿಕರಾಗಿ ಬಂದದ್ದು ನೋಡಿ ನನ್ನ ಹೃದಯ ತುಂಬಿ ಬಂತು. ಅದು ಅವರ ಸರಳತೆ-ಸಜ್ಜನಿಕೆ, ಮತ್ತು ನನ್ನ ಮೇಲಿನ ಪ್ರೀತಿಯ ಕುರುಹು ಎಂದೇ ನನ್ನ ಭಾವನೆ. 'ಪುಸ್ತಕಕ್ಕೆ ಪ್ರಶಸ್ತಿ ಬರಲೇ ಬೇಕಿತ್ತು' ಎಂದಾಗ ನನಗೆ ಪ್ರಶಸ್ತಿ ಬಂದುದಕ್ಕಿಂತಲೂ ಹೆಚ್ಚು ಸಂತೋಷವಾಯಿತು.

1992ರಲ್ಲಿ ವಿಭಾಗದ ಮುಖ್ಯಸ್ಥನಾಗುವ ಅನಿವಾರ್ಯತೆ ಬಂತು. ಆಗಾಗ ಅವರ ಸಲಹೆ ಪಡೆಯಲು ಪ್ರಯತ್ನಿಸಿದೆ. ಆದರೆ ಕೆಲವೊಮ್ಮೆ ಬಿಟ್ಟರೆ, 'ಜಿಎಸ್‌ಎಸ್' ಆ ಬಗ್ಗೆ ಆಸಕ್ತಿ ತೋರಿದವರಲ್ಲ. ಹಾಗೆಯೇ ನಾನು 1996ರಲ್ಲಿ ನಮ್ಮ ವಿಶ್ವವಿದ್ಯಾಲಯದ ಸಿಂಡಿಕೇಟ್ ಚುನಾವಣೆಗೆ ನಿಂತೆ. ಗೆಳೆಯ ಪುಂಡಲೀಕ 'ಜಿಎಸ್‌ಎಸ್' ಅವರನ್ನು ನೋಡೋಣ ಎಂದರು. ಆ ಬಗ್ಗೆ ಅವರಿಗಿದ್ದ ನಿಲುವನ್ನು ಅರಿತಿದ್ದ ನಾನು ಬೇಡವೆಂದು ಅವರನ್ನು ಕಾಣಲು ಹೋಗಲಿಲ್ಲ. ಚುನಾವಣೆ ಗೆದ್ದ ನಂತರ ಅವರೊಮ್ಮೆ ಯಾವುದೋ ಕಾರ್ಯಕ್ರಮದಲ್ಲಿ ಕಂಡಾಗ ಅಭಿನಂದಿಸಿದರು. 'ಜಂಜಡಗಳಲ್ಲಿ ಸಿಕ್ಕಿಹಾಕಿಕೊಂಡಿದ್ದೀರಿ, ಆದರೆ ಓದು-ಬರಹಗಳನ್ನು ಮುಂದುವರಿಸಿ' ಎಂದು ಪ್ರೀತಿಯಿಂದಲೇ ಎಚ್ಚರಿಸಿದರು.

ಹಲವಾರು ಪ್ರಕಾಶನ ಸಂಸ್ಥೆಗಳೂ, ಗೆಳೆಯರೂ ಸಾಹಿತ್ಯ-ಚರಿತ್ರೆಗೆ ಸಂಬಂಧಿಸಿದ ನನ್ನ ಲೇಖನಗಳ ಸಂಕಲನವೊಂದನ್ನು ಪ್ರಕಟಿಸಬೇಕೆಂದು ಆಗಾಗ ಹೇಳುತ್ತಲೇ ಇದ್ದರು. 1999ರಲ್ಲಿ ಸಮಯ ಕೂಡಿಬಂತು. ತಿಪಟೂರಿನ 'ನಮ್ಮ ಪ್ರಕಾಶನ'ದವರಿಗೆ ಅದನ್ನು ಪ್ರಕಟಿಸಲು ಕೊಟ್ಟು, ಪುಸ್ತಕದ ಟೈಟಲ್ ಬಗ್ಗೆ ಯೋಚಿಸಿ ಸರಳವಾಗಿರಲೆಂದು 'ಸಾಹಿತ್ಯ ಮತ್ತು ಚರಿತ್ರೆ' ಯೆಂದೇ ತೀರ್ಮಾನಿಸಿದೆವು. ಆ ಪುಸ್ತಕ ಅಚ್ಚಾದಾಗ ಜಿಎಸ್‌ಎಸ್ ಅವರಿಗೇ ಅರ್ಪಿಸಬೇಕೆಂದು ಬಹಳ ಹಿಂದೆಯೇ ತೀರ್ಮಾನಿಸಿದ್ದೆ. ಅದರ ಬಗ್ಗೆ ಯೋಚಿಸುವ ಪ್ರಮೇಯವೇ ಇರಲಿಲ್ಲ. ಅವರನ್ನು ಒಪ್ಪಿಗೆ ಕೇಳಲು ಮುಜುಗರವಾಯಿತು. ಅಕಸ್ಮಾತ್ ಬೇಡವೆಂದರೆ? ಕೇಳದೆಯೇ ಅರ್ಪಿಸಿಬಿಟ್ಟರೆ? ಗೊಂದಲಗೊಂಡೆ. ಒಬ್ಬಿಬ್ಬರು ಗೆಳೆಯರ ಹತ್ತಿರ ಪ್ರಸ್ತಾಪಿಸಿದೆ. ಏನೂ ಪ್ರಯೋಜನವಾಗಲಿಲ್ಲ. ಕೊನೆಗೆ ಧೈರ್ಯಮಾಡಿ ಫೋನ್ ಮಾಡಿದೆ 'ನಿಮ್ಮನ್ನು ನೋಡಬೇಕು' ಎಂದು. ಜಿಎಸ್‌ಎಸ್ ಆ ಕಡೆಯಿಂದ 'ಬನ್ನಿ, ಆದರೆ

ಅಷ್ಟು ದೂರದಿಂದ ಬರಬೇಕು. ಅರ್ಧದಷ್ಟು ದಿವಸ ಬೇಕಾಗುತ್ತದೆ. ಗಹನವಾದ ವಿಚಾರವಿದ್ದರೆ ಸರಿ-ಇಲ್ಲದಿದ್ದರೆ ಅದೇನು ಹೇಳಬಹುದಲ್ಲ' ಎಂದರು. ವಿಷಯ ಪ್ರಸ್ತಾಪ ಮಾಡಿದೆ. ಅವರು ಮುಜುಗರ ಪಟ್ಟುಕೊಂಡಂತಿತ್ತು. 'ಅದು ಯಾಕಪ್ಪಾ?' ಅಂದರು. ಉತ್ತರಿಸಲು ನನಗೂ ಮುಜುಗರ, 'ಏನೋ ಸಾರ್ ನನಗೆ ಹಾಗೆನ್ನಿಸಿತು ಅಷ್ಟೇ ದಯವಿಟ್ಟು ಒಪ್ಪಿಗೆ ಕೊಡಿ' ಎಂದು ಒತ್ತಾಯಿಸಿದೆ. ಒಪ್ಪಿದರು. ನನ್ನ ತಲೆಯ ಮೇಲಿನ ಭಾರ ಇಳಿದಂತಾಯಿತು. ಹಾಗೆಯೇ ಸಂತೋಷವಾಯಿತು. ನನ್ನ ಜೀವನದಲ್ಲಿ ನೆನಪಿಸಿಕೊಳ್ಳಲೇ ಬೇಕಾದ ಕೆಲವೇ ಕ್ಷಣಗಳಲ್ಲಿ ಅದು ಒಂದು. ಪುಸ್ತಕ ಪ್ರಕಟವಾದ ನಂತರ ಹೀಗೇ ಒಂದು ಕಾರ್ಯಕ್ರಮದಲ್ಲಿ ಸಿಕ್ಕಿದರು. ಅಲ್ಲಿ ಪುಸ್ತಕ ಮಾರಾಟದ ವ್ಯವಸ್ಥೆಯೂ ಇದ್ದು ನನ್ನ ಪುಸ್ತಕವೂ ಇತ್ತು. ನನ್ನ ಹಲವಾರು ಕೆಲಸಗಳ ಮಧ್ಯೆ ಪುಸ್ತಕ ಬಂದು ಒಂದು ವಾರಕ್ಕಿಂತ ಹೆಚ್ಚು ಸಮಯವಾಗಿದ್ದರೂ, ಅವರನ್ನು ಕಾಣಲು ಆಗಿರಲಿಲ್ಲ. 'ಕ್ಷಮಿಸಿ ಸಾರ್ ನಿಮ್ಮನ್ನು ಬಂದು ಕಾಣಲು ಆಗಲಿಲ್ಲ. ನಾಳೆ ಬರುವವನಿದ್ದೆ' ಎಂದೆ. 'ಪುಸ್ತಕ ಇಲ್ಲೇ ಕೊಟ್ಟರೂ ನಡೆಯುತ್ತೆ. ಮನೆಗೆ ಬನ್ನಿ-ಆದರೆ ಅದಕ್ಕಾಗಿ ಎಂದೇ ಬರಬೇಕಾಗಿಲ್ಲ' ಎಂದರು. ಎಂದಿನದೆ ಪ್ರೀತಿ ತುಂಬಿದ ಸರಳ ಮಾತುಗಳು.

ಇವೆಲ್ಲಾ ಸ್ವಲ್ಪ ವೈಯಕ್ತಿಕವಾದವು. ಜಿಎಸ್‌ಎಸ್ ಬಗ್ಗೆ ಅವರು ಅಧ್ಯಯನ ಕೇಂದ್ರವನ್ನು ಕಟ್ಟಿ, ನಡೆಸಿದ ಬಗ್ಗೆ ನಾನು ಒಮ್ಮೊಮ್ಮೆ ಬಾಲಿಶವಾದ, ಕೆಲವೊಮ್ಮೆ ಗಂಭೀರವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದುಂಟು. ಗೆಳೆಯ ಡಿ.ಆರ್., ಸಿದ್ಧಲಿಂಗಯ್ಯ ಇವರ ಜೊತೆ ಮಾತಾಡುತ್ತಾ ಒಮ್ಮೆ ಜಿಎಸ್‌ಎಸ್, ಒಂದು ಥರಾ 'Gangster' ಎಂದೆ. ಅವರಿಬ್ಬರೂ ಅವಾಕ್ಕಾದರು. 'ಏನ್ರೀ ಹಾಗಂದ್ರೆ-ಜಿಎಸ್‌ಎಸ್ ಬಗ್ಗೆ ಇಂಥಾ ಮಾತಾಡೋದೆ' ಎಂದರು. ನಾನು ವಿವರಣೆ ಕೊಟ್ಟೆ 'Gangster ಅಂದ್ರೆ ಕೆಟ್ಟ ಅರ್ಥದಲ್ಲಲ್ಲ. ಅವರು Gangsterism of likemindedness ನಲ್ಲಿ ನಂಬಿಕೆ ಇರೋ ವ್ಯಕ್ತಿ. ಯಾಕೆಂದ್ರೆ ವಿಭಾಗದಲ್ಲಿ ಸಂಶೋಧಕರನ್ನು ನೇಮಕ ಮಾಡ್ಕೊಬೇಕಾದ್ರೆ ತಮಗೆ ಬುದ್ಧಿವಂತರು ಅಂಥ ಯಾರ ಬಗ್ಗೆ ಅನ್ನುತ್ತೊ ಅಂಥವರನ್ನೇ ಆಯ್ಕೆ ಮಾಡ್ಕೊಳ್ತಾರೆ. ಅವರಿಗೆ ಆಸಕ್ತಿ ಇರೋ ಸಂಶೋಧನಾ ಯೋಜನೆಗಳನ್ನೇ ಹಾಕ್ಕೊಳ್ತಾರೆ'. ಆದರೆ ಅವರಿಬ್ಬರಿಗೂ ನನ್ನ ಮಾತುಗಳು ರುಚಿಸಿದಂತೆ ಕಾಣಲಿಲ್ಲ.

ಇನ್ನೊಂದು ಸಂದರ್ಭ 1984ರಲ್ಲಿರಬೇಕು. ವಿಶ್ವವಿದ್ಯಾಲಯದ ತ್ರೈಮಾಸಿಕ 'ಸಾಧನೆ'ಗೆ ಮೂರು ವರ್ಷಗಳ ಅವಧಿಗಾಗಿ ಮೂರು ಜನರ ಸಂಪಾದಕ ಮಂಡಳಿಯ ರಚನೆಯಾಯಿತು. ಅದರಲ್ಲಿ ನಾನೂ ಒಬ್ಬ ಸಂಪಾದಕನಾಗಿ ನೇಮಕಗೊಂಡ ಪತ್ರ ಬಂತು. ನನಗೆ ಆಶ್ಚರ್ಯ, ಸಂತೋಷ. ಆಗ ಡಿ.ಆರ್. ಛೇಡಿಸಿದರು, 'ಏನ್ರೀ ನೀವೂ ಜಿಎಸ್‌ಎಸ್ ಅವರ ಗ್ಯಾಂಗ್ ಸದಸ್ಯರಾದ್ರಿ'!

ಇನ್ನೊಮ್ಮೆ ಕೆಲವು ಅಧ್ಯಾಪಕರ ನೇಮಕಾತಿ ಸಂದರ್ಭ. ಜಿಎಸ್‌ಎಸ್ ಅವರಿಗೂ ತಿಳಿದಂತೆ ವಿಶ್ವವಿದ್ಯಾಲಯದವರು ಮಾಡಿದ ಆಯ್ಕೆ ಸರಿಯಲ್ಲ. ಯಾಕೆಂದರೆ

ತಾಂತ್ರಿಕವಾಗಿಯಾಗಲಿ ಮಾನವೀಯ ದೃಷ್ಟಿಕೋನದಿಂದಾಗಲೀ ಆ ಆಯ್ಕೆಗಳನ್ನು ಸಮರ್ಥಿಸಿಕೊಳ್ಳಲು ಸಾಧ್ಯವಿಲ್ಲವೆಂದು ನನಗನ್ನಿಸಿತ್ತು. ಆ ಬಗ್ಗೆ ನಮ್ಮ ನಮ್ಮಲ್ಲೇ ಗೆಳೆಯರಲ್ಲಿ ಚರ್ಚೆಯಾಯಿತು. ನಾನಂತೂ ಕೆಲವು ಆಯ್ಕೆಗಳು ಅಂತಿಮವಾಗಿ ಊರ್ಜಿತವಾಗದಂತೆ ತಡೆಯಲು ಪ್ರಯತ್ನಿಸಿದೆ. ಅದು ಜಿಎಸ್‌ಎಸ್‌ಗೆ ತಿಳಿದಿದೆಯೋ, ಇಲ್ಲವೋ ನನಗಂತೂ ತಿಳಿದಿಲ್ಲ. ನನ್ನ ಅಭಿಪ್ರಾಯವೇ ಸರಿಯೆಂದು ಆಮೇಲೆ ಸಾಬೀತಾಯಿತು. ಆದರೆ ಒಬ್ಬ ಶೈಕ್ಷಣಿಕ ಆಡಳಿತಗಾರ ಮತ್ತು ಅಧ್ಯಯನ ಕೇಂದ್ರವನ್ನು ಕಟ್ಟುವ ಮುತ್ಸದ್ದಿಯಾಗಿ ಜಿಎಸ್‌ಎಸ್ ಅವರ ಪ್ರಯತ್ನ ಅಂದಿನ ಸಂದರ್ಭದಲ್ಲಿ ಪ್ರಾಮಾಣಿಕವಾದುದೇ ಆಗಿತ್ತು ಎಂಬ ಬಗ್ಗೆ ನನಗೆ ಅನುಮಾನವಿಲ್ಲ. ನಾನೇ ಸ್ವಲ್ಪ ಭಾವೋದ್ವೇಗಕ್ಕೆ ಒಳಗಾಗಿದ್ದಿರಬಹುದೆಂದು ಆಮೇಲೆ ಅನ್ನಿಸಿತು.

ಒಟ್ಟಾರೆ, ನಾ ಕಂಡಂತೆ ಜಿಎಸ್‌ಎಸ್ ಸಾಮರ್ಥ್ಯದ, ಗುಣದ, ಪಕ್ಷಪಾತಿ. ಅದೂ 'ಸಾಮಾಜಿಕ ನ್ಯಾಯ'ವೆಂದು ನಮ್ಮಲ್ಲಿ ಬಹುತೇಕರು ಭಾಷಣ ಮಾಡುತ್ತಿರುವುದನ್ನು ತಣ್ಣಗೆ, ಸದ್ದಿಲ್ಲದೆ ಆಚರಣೆಯಲ್ಲಿ ತಂದ ಮಾನವತಾವಾದಿ. ವಿಭಿನ್ನ ಸಾಮಾಜಿಕ ಹಿನ್ನೆಲೆಯ ದಕ್ಷರನ್ನು ಆಯ್ದು ಅವರು ವಿಭಾಗವನ್ನು ಕಟ್ಟಿ ಬೆಳೆಸಿದರು. ಅಭಿಪ್ರಾಯ ಭೇದಗಳನ್ನು, ವೈವಿಧ್ಯತೆಗಳನ್ನು ಗುರುತಿಸಿ ಆರೋಗ್ಯಪೂರ್ಣ ವಾಗ್ವಾದಕ್ಕೆ ವೇದಿಕೆ ನಿರ್ಮಿಸಿಕೊಟ್ಟರು. ಅವರ ನಿರ್ದೇಶನದಲ್ಲಿ ಬೆಂಗಳೂರಿನ ಕನ್ನಡ ಅಧ್ಯಯನ ಕೇಂದ್ರ ವ್ಯವಸ್ಥೆ ಮಾಡಿದ ವಿಚಾರಸಂಕಿರಣಗಳು ನಾಡಿನ ಹಲವಾರು ಮಹತ್ತರ ಸಾಂಸ್ಕೃತಿಕ ವಾಗ್ವಾದಗಳಿಗೆ ಎಡೆಮಾಡಿಕೊಟ್ಟವು. ಹಾಗೆ ನೋಡಿದರೆ ನನ್ನ, ನನ್ನ ಹಿಂದಿನ-ಮುಂದಿನ ಪೀಳಿಗೆಯವರೆಲ್ಲಾ ಈ ವಾದ್ವಾದಗಳಿಂದ ಪ್ರಭಾವಿತರಾಗಿ, ಸ್ಫೂರ್ತಿ ಪಡೆದರು. ಕರ್ನಾಟಕ ಮತ್ತು ದಕ್ಷಿಣ ಭಾರತದಲ್ಲಿ ಬೌದ್ಧಿಕ ಅಲುಗಿಗೆ ಸಾಣೆ ಹಿಡಿದ ಕೀರ್ತಿ ಜಿಎಸ್‌ಎಸ್‌ಗೆ ಸಲ್ಲುತ್ತದೆ.

■

# ನಮ್ಮ ಕಾಲದ ಕಾವ್ಯಗುರು ಡಾ. ಶಿವರುದ್ರಪ್ಪ

ಕುಂ. ವೀರಭದ್ರಪ್ಪ

**ಬೆ**ಳ್ಳಕ್ಕಿಗಳ ಕಣ್ಣೊಳಗೆ ಶಾರದೆಯ ಕಥೆ ಬರೆದ ಶಿವರುದ್ರಪ್ಪ ನನ್ನ ಕಾವ್ಯದ, ಬರಹದ ಗುರುಗಳಲ್ಲಿ ಓರ್ವರು ಎಂದು ಪ್ರಸ್ತಾಪಿಸುವುದೇ ಹೆಮ್ಮೆಯ ಸಂಗತಿ. ಮನುಷ್ಯ ಮನುಷ್ಯನನ್ನು ಇಡಿಯಾಗಿ ಸ್ವೀಕರಿಸುವುದೇ ವಿಚಿತ್ರ ಮತ್ತ ಅಪರೂಪ. ದಿನಗಟ್ಟಲೆ ಜೊತೆಯಲ್ಲಿರುವವರು ನಮ್ಮವರೆನಿಸುವುದೇ ಇಲ್ಲ. ಎಷ್ಟು ಪ್ರಯತ್ನಿಸಿದರೂ ಅಂಥವರನ್ನು ಮನಸ್ಸು ನಿರಾಕರಿಸುತ್ತದೆ. ಅಂಥವರು ಹತ್ತಿರ ಬಂದಷ್ಟೂ ಮನಸ್ಸು ದೂರ ಓಡುತ್ತದೆ! ಪಂಚೇಂದ್ರಿಯಗಳ ಮೂಲ ಅಭಿರುಚಿಯೂ ಅಷ್ಟೆ, ಕಣ್ಣು ಸ್ವೀಕರಿಸುವ ರೂಪವೇ ಬೇರೆ! ಕಿವಿ ಅರಸುವ ಧ್ವನಿಯೇ ಬೇರೆ! ನಾಲಗೆಯೂ ಅಷ್ಟೆ. ವಿಚಿತ್ರವಾದುದನ್ನು, ಸಮಾಜಕ್ಕೆ ಇಷ್ಟವಾಗದ ವಿಷಯ ಕುರಿತು ಮಾತಾಡುವ ಪ್ರಯತ್ನ ಮಾಡುತ್ತಿರುತ್ತದೆ. ಚರ್ಮಕ್ಕಿರುವ ಸ್ಪರ್ಶದ ಆಸೆಯೇ ಬೇರೆ. ಯಾಕೆ! ಹೀಗೆ! ಇವೆಲ್ಲ ಅರ್ಥವಾಗದ ಸಂಗತಿಗಳು. ಇದ್ದುದನ್ನು ಬಿಟ್ಟು ಇಲ್ಲದರ ಕಡೆ ತುಡಿಯುವುದು, ದಾಂಗುಡಿ ಇಡುವುದು ಮನುಷ್ಯನ ಜಾಯಮಾನಗಳಲ್ಲಿ ಒಂದು ಎನ್ನದೆ ವಿಧಿ ಇಲ್ಲ. ಮನೋಫಲಕದ ಮೇಲೆ ದಿನನಿತ್ಯ ಸಾವಿರಾರು ರೂಪಗಳು ಮೂಡಿ ಮರೆಯಾಗುತ್ತವೆ, ಮನಸ್ಸು ಅವುಗಳ ಪೈಕಿ ಒಂದನ್ನೂ ಉಳಿಸಿಕೊಳ್ಳುವ ಪ್ರಯತ್ನ ಮಾಡುವುದಿಲ್ಲ. ಮನದ ಮೂಲೆಯ ನಸುಕಿನ ಆಳದಿಂದ ಯಾವುದೋ ಒಂದು ಮುಖ ಮೂಡುವ ಮುಳುಗುವ ಪ್ರಯತ್ನ ಮಾಡುತ್ತಲೇ ಇರುತ್ತದೆ. ಎಷ್ಟು ಪ್ರಯತ್ನಿಸಿದರೂ ಅದು ನಮ್ಮ ಚಿಮುಟಿಗೆಗೆ ದಕ್ಕುವುದೇ ಇಲ್ಲ. ಇಂಥ ಪ್ರಯತ್ನ ನೀಡುವ ಯಾತನೆ ಸುಮಧುರ. ನಮ್ಮನ್ನು ಸದಾ ಕ್ರಿಯಾಶೀಲವಾಗಿರಿಸುವುದು ಸಹ ಇದೇ ಆಗಿದೆ. ಸಾರ್ವಜನಿಕವಾಗಿ ಅಂಥದೊಂದು ಚಹರೆಯನ್ನು, ವ್ಯಕ್ತಿತ್ವವನ್ನು ಗುರುತಿಸುವ ಪ್ರಯತ್ನಕ್ಕೆ ಕೊನೆಮೊದಲಿಲ್ಲ. ಮನುಷ್ಯ ಸಾಹಿತ್ಯವನ್ನು ಗ್ರಹಿಸುವ, ಅವಧರಿಸುವ ಪ್ರಯತ್ನ ಹೀಗೆಯೇ. ನಾವು ಓದುವುದೇ ಒಂದು ಅದು ಅರ್ಥವಾಗುವುದೇ ಇನ್ನೊಂದು ರೀತಿಯಲ್ಲಿ. ಕಥೆ ಓದುವಾಗ ಯಾವುದೋ ಒಂದು ಕವಿತೆ ಇಣುಕುನೋಟ ಬೀರುತ್ತಿರುತ್ತದೆ. ಕಥೆಯ ಕಾದಂಬರಿಯ ದರ್ಪಣದಲ್ಲಿ ಆ ಕವಿತೆ ಮುಖ ನೋಡಿಕೊಳ್ಳುತ್ತಿರುತ್ತದೆ. ನಾವು ಎಷ್ಟೇ ನವ್ಯ, ನವ್ಯೋತ್ತರದ ಜಾತ್ರೆಯಲ್ಲಿರಲಿ ನಾವು ವೇಗವಾಗಿ ತುಡಿಯುವುದು ನವೋದಯ ಯುಗದ ಸಾಂತ್ವನ ಹೇಳುವ ಕವಿತೆ, ಹಾಡುಗಳ ಕಡೆಗೇ. ಆ ಕಾಲದ

ಒಂದೊಂದು ಕವಿತೆಗಳೊಳಗೂ ಆಯಾ ಕವಿಗಳ ಪೂರ್ಣಪ್ರಮಾಣದ ವ್ಯಕ್ತಿತ್ವ ಅಡಗಿ ಕೊಂಡಿರುವುದು, ಪ್ರೀತಿ ವಾತ್ಸಲ್ಯದ ಸಂವಾಹಕ ಶಕ್ತಿ ಇರುವುದೇ ಇದಕ್ಕೆ ಕಾರಣ. ವ್ಯಕ್ತಿಯ ಅರಿಷಡ್ವರ್ಗಗಳ ಮೇಲೆ ನಿಯಂತ್ರಣ ಸಾಧಿಸುವ ಶಕ್ತಿ ಆ ಯುಗದ ಸಾಹಿತ್ಯಕ್ಕಿದೆ. ಆ ಯುಗದ ಬರಹಗಾರರಿಗೆ ನಿರ್ಮಲ ಅಂತಃಕರಣವಿತ್ತು. ಸಸ್ಯಜಗತ್ತು ಮತ್ತು ಪ್ರಾಣಿಜಗತ್ತಿನ ಬಗ್ಗೆ ಅನನ್ಯ ಪ್ರೀತಿ ಇತ್ತು. ಯಾವುದೇ ಪೂರ್ವಾಗ್ರಹಗಳಿಲ್ಲದೆ ಸಮಗ್ರ ನೋಟ ಬೀರುವ ವಾತ್ಸಲ್ಯವಿತ್ತು. ಎಂದೂ ಯಾರ ಮೇಲೂ ಹುಬ್ಬೇರಿಸದವರಾಗಿದ್ದರು. ಇಂಥ ಹಲವು ಕಾರಣಗಳಿಂದಾಗಿಯೇ ನವೋದಯ ಸಾಹಿತ್ಯ ಕೃತಿಗಳು ನವ ನವೋನ್ಮೇಷವಾಗಿವೆ. ಇವಕ್ಕೆ ಸಾವೆಂಬುದಿಲ್ಲ. ಚಿರಂಜೀವಿತನ ಅವುಗಳ ಸ್ವಭಾವವಾಗಿದೆ. ಸಮಾಜ ಒಂಚೂರಾದರೂ ಬದುಕಿರಬೇಕೆಂಬ ಹಂಬಲ ಅವುಗಳ ಸ್ಥಾಯಿಯಾಗಿದೆ. ಆ ಅಮೂಲ್ಯ ಕೃತಿಗಳನ್ನು ಓದುವಾಗ ಆಯಾ ಲೇಖಕರ ಪ್ರಸನ್ನ ಮುಖಮುದ್ರೆ, ನಮ್ಮ ಮನಃಪಟಲದ ಮೇಲೆ ಮೂಡುತ್ತವೆ. ಆ ಲೇಖಕರ ತುಂಬು ವ್ಯಕ್ತಿತ್ವದ ಭಾವಚಿತ್ರಗಳನ್ನು ನೋಡಿದಾಗ ಮನಸ್ಸು ಮುದಗೊಳ್ಳುತ್ತದೆ, ಅವರ ಕೃತಿಗಳ ಓದು ಸುರುಳಿ ಸುರುಳಿಯಾಗಿ ಬಿಚ್ಚಿಕೊಳ್ಳುತ್ತದೆ.

ಶಿವರುದ್ರಪ್ಪ ಮತ್ತು ಚನ್ನವೀರ ಕಣವಿಯವರ ಸೃಜನಶೀಲತೆಯ ಬೇರುಗಳು ನವೋದಯದ ಫಲವತ್ತಾದ ಮಣ್ಣಿನಾಳಕ್ಕಿಳಿದಿವೆ ಎಂಬ ಕಾರಣದಿಂದಾಗಿಯೇ ಈ ಈರ್ವರು ನನಗಿಷ್ಟವಾಗುತ್ತಾರೆ. ಇವರು ಸಾಮಾಜಿಕ ಮೌಲ್ಯಗಳ ಬಗ್ಗೆ ನಿಷ್ಠೆ ಗೌರವಗಳನ್ನು ಹೊಂದಿರುವಂಥವರು. ಇವರು ಸಸ್ಯಜಗತ್ತು ಪ್ರಾಣಿಜಗತ್ತುಗಳ ಸಂಕೇತ, ಪ್ರತಿಮೆಗಳ ಮೂಲಕ ಆಧುನಿಕ ಸಮಾಜ ಕುರಿತು ಮಾತಾಡುತ್ತಾರೆ. ಅನುಭವದ ಮೂಸೆಯಲ್ಲಿ ತಮ್ಮ ಅನುಭವಗಳನ್ನು ಸುಟ್ಟು ಅತ್ಯಾಧುನಿಕವಾಗಿ ಪರಿಣಾಮವನ್ನು, ಕಾವ್ಯದ ಮೂಲಕ ನೋಡುವ ಪ್ರಯತ್ನ ಮಾಡುತ್ತಾರೆ. ಕಣವಿ ಅಂತರ್ಮುಖತೆಯಿಂದ ಬದುಕು ಶೋಧಿಸುವ ಯತ್ನ ಮಾಡಿದರೆ ಶಿವರುದ್ರಪ್ಪನವರ ಇತ್ತೀಚಿನ ಕವಿತೆಗಳಲ್ಲಂತೂ ಸಮಾಜಾಭಿಮುಖತೆ ಎದ್ದು ಕಾಣುತ್ತದೆ. ಶಿವರುದ್ರಪ್ಪನವರು ಕಣವಿಯವರ ಹಾಗೆ ಕೇವಲ ಕಾವ್ಯದಗ್ಗಿಷ್ಟಿಕೆಗಳಿಗಷ್ಟೆ ಕಟ್ಟುಬಿದ್ದವರಲ್ಲ. ಇವರು ಕಾವ್ಯ ಪ್ರಾಕಾರದ ಜೊತೆ ಜೊತೆಯಲ್ಲಿ ವಿಮರ್ಶೆ ಚರ್ಚೆ ಆಡಳಿತಾತ್ಮಕ ವಿಷಯಗಳಲ್ಲಿ ಸದಾ ತೊಡಗಿಸಿಕೊಂಡಿರುವಂಥವರು. ಮೌನ ಇವರ ಜಾಯಮಾನವಲ್ಲ. ಇವರ ಪ್ರಮುಖ ಆಸ್ಥೆ ಸಮಾಜ ಮತ್ತು ಅದರ ಸಮಗ್ರ ಘಟಕಗಳ ಆರೋಗ್ಯ. ಇತಿಹಾಸ ಮತ್ತು ಸಂಸ್ಕೃತಿಗಳನ್ನು ಪುನಃಸೃಷ್ಟಿಸುವ ಪ್ರಯತ್ನ ಮಾಡುತ್ತಾರೆ, ಶ್ರೇಣೀಕೃತ ಸಮಾಜದ ಕಟ್ಟ ಕೊನೆಯ ಮನುಷ್ಯನನ್ನು ಕಾವ್ಯದ ಮೂಲಕ ಕಟ್ಟಿಕೊಡುವ ಪ್ರಯತ್ನ ಮಾಡುತ್ತಾರೆ. ಅವನ ವ್ಯಕ್ತಿತ್ವದ ವಿಕಾಸಕ್ಕೆ ಅಡ್ಡಿಯಾಗುವ ಮೂಲಭೂತಶಕ್ತಿಗಳ ವಿರುದ್ಧ ಬಂಡೇಳುತ್ತಾರಲ್ಲದೆ ಸಾಮಾಜಿಕ ಸ್ವಾಸ್ಥ್ಯದ ಬಗ್ಗೆ ಚರ್ಚೆಯ ಮೂಲಕ ತಮ್ಮನ್ನು ತಾವು ತೆರೆದುಕೊಳ್ಳುತ್ತಾರೆ. ಕಾವ್ಯವನ್ನೆ ತಮ್ಮ ಅಭಿವ್ಯಕ್ತಿಯ ಪ್ರಮುಖ ಮಾಧ್ಯಮವನ್ನಾಗಿ ಮಾಡಿಕೊಂಡಿರುವ ಕಣವಿಯವರು ಮತ್ತು ಕಾವ್ಯದಲ್ಲಿ ವೈವಿಧ್ಯ ಜೀವಂತಿಕೆಗಳನ್ನು ಉಳಿಸಿಕೊಂಡೂ ಸೃಜನಶೀಲತೆಯ ವಿವಿಧ ಮುಖಗಳನ್ನು ಅಧ್ಯಯನ ಮಾಡುವ,

ಸಾಮಾಜಿಕವಾಗಿಸುವ ಶಿವರುದ್ರಪ್ಪನವರು ಅನರ್ಘ್ಯ ದ್ವಿದಳಧಾನ್ಯ ಎನ್ನಬಹುದು. ಇವರೀರ್ವರಿಗೆ ಜೀವನ ಮತ್ತದರ ಸೌಂದರ್ಯ ಮುಖ್ಯ. ವೈಯಕ್ತಿಕತೆಯನ್ನು ಸಾರ್ವತ್ರೀಕರಿಸುವ, ಸಾರ್ವತ್ರೀಕತೆಯನ್ನು ವೈಯಕ್ತೀಕರಿಸುವ ಮತ್ತು ವೈಯಕ್ತಿಕತೆ ಸಾರ್ವತ್ರಿಕತೆಯ ನಡುವಿನ ಲಕ್ಷ್ಮಣರೇಖೆಯನ್ನು ಅಳಿಸಿ ಹಾಕುವ ಛಲವನ್ನು ಇವರಿಬ್ಬರ ಕವಿತೆಗಳಲ್ಲಿ ಕಾಣಬಹುದು.

ಇವರ ಕವಿತೆಗಳಲ್ಲಿ ವೈಯಕ್ತಿಕ ಮತ್ತು ಸಾಮಾಜಿಕ ಹಂತಗಳನ್ನು ಗುರುತಿಸಬಹುದು. ಕಣವಿಯವರದು ಒಂದು ರೀತಿ ಹೆಂಗರುಳಾದರೆ ಜಿಎಸ್ಎಸ್ ರವರದ್ದು ರೂಢಿಗತ ಎಲ್ಲೆಗಳನ್ನು ಉಲ್ಲಂಘಿಸುವ ಪೌರುಷಪರವಾದದ್ದು. ಇವರೀರ್ವರು ತಮ್ಮ ಅಂತರಂಗಕ್ಕೆ ಹೊಳೆಯುವ ಹೊಸ ಭಾವಗಳನ್ನು ನವೋದಯ ಪ್ರಣೀತ ಶಬ್ದ, ಲಯ ಪ್ರತಿಮೆಗಳಲ್ಲಿ ಹಿಡಿದಿಡುವ ಪ್ರಯತ್ನ ಮಾಡುತ್ತಾರೆ. ನವೋದಯ ಕಾವ್ಯದೊಂದಿಗೆ ಇವರೀರ್ವರಿಗಿರುವ ಸಂಬಂಧವೇ ಅಂಥಾದ್ದು. ಸಾಮಾಜಿಕ ಬದುಕಿನಿಂದ ಪಡೆಯುವ ಮತ್ತು ನಿರಾಕರಿಸುವ ಮೂಲಕ ಕನ್ನಡಕ್ಕೆ ವಿಶಿಷ್ಟವಾದ ಸಾಧ್ಯತೆಯನ್ನು ಈ ಅಶ್ವಿನಿಕುಮಾರರು ಪಡೆದುಕೊಂಡಿದ್ದಾರೆ. ಕಾವ್ಯ ಮತ್ತು ದೃಶ್ಯಕಲೆಯ ಪರಂಪರೆಯಲ್ಲಿ ಇವರು ತಮ್ಮ ಅನುಭವಕ್ಕೆ ಆಕಾರ ಕೊಡುತ್ತಾರೆ, ಅನುಭವವನ್ನು ಹಸಿಹಸಿಯಾಗಿ ಹೇಳದೆ ನೆನಪಿನಲ್ಲಿ ಮೂಡಿದ ಅನುಭವವನ್ನು ಧೇನಿಸುತ್ತಾರೆ. ಇವರ ಕಾವ್ಯಜಗತ್ತು ನವೋದಯಕಾಲದ್ದು ಮತ್ತು ಚಿಂತನೆ ಆಧುನಿಕವಾದದ್ದು. ಆದ್ದರಿಂದಾಗಿಯೇ ಇವರ ಕಾವ್ಯ ನವನವೋನ್ಮೇಷ. ಸಮಕಾಲೀನ ಸಾಹಿತ್ಯಿಕ ಸಂದರ್ಭದಲ್ಲಿ ಇವರ ಕವಿತೆಗಳು ಓದುಗನನ್ನು ಒಟ್ಟಿಗೆ ತರುತ್ತವೆ. ನನ್ನ ಧಾರಣ ಶಕ್ತಿಗೆ ಸುಲಭವಾಗಿ ಒಗ್ಗುವ ಕಾರಣದಿಂದಾಗಿಯೇ ಇವರೀರ್ವರ ಕವಿತೆಗಳನ್ನು ನನ್ನ ಓದಿನ ವಠಾರದಲ್ಲಿ ಇಟ್ಟುಕೊಂಡಿದ್ದೇನೆ; ಮತ್ತು ವಿಶೇಷವಾಗಿ ಆರಾಧನಭಾವದಿಂದ ನೋಡುವ ಪ್ರಯತ್ನ ಮಾಡಿದ್ದೇವೆ.

ಆರಂಭದಿಂದಲೂ ಡಾ. ಜಿಎಸ್ಎಸ್ ಅವರದ್ದು ಬಂಡಾಯ ಧೋರಣೆಯ ಮತ್ತು ಸಮಾಜಾಭಿಮುಖಿಯಾದ ಕಾವ್ಯ ಎಂದು ಈ ಮೊದಲೆ ಹೇಳಿದೆನಲ್ಲವೆ! ದಾರಿತಪ್ಪಿಸುವ ಆಧುನಿಕ ಮನುಷ್ಯರು ಕರಗತ ಮಾಡಿಕೊಂಡಿರುವ ತಪ್ಪಿಸುವಿಕೆ ಕ್ರಿಯೆಯ ಕುರಿತು 'ನನ್ನ ಸುತ್ತ' ಎಂಬ ಕವಿತೆಯಲ್ಲಿ ಸೂಕ್ಷ್ಮ ಸಂವೇದನಾಶೀಲ ಮನುಷ್ಯನ ಆತಂಕಗಳಿದ್ದರೆ 'ಒರೆಗಲ್ಲು' ಕವಿತೆಯಲ್ಲಿ ಯಥಾಸ್ಥಿತಿವಾದಿಗಳಾದ ಕವಿಗಳನ್ನು ಅವರ ಸಮಾಧಿ ಸ್ಥಿತಿಯಿಂದ ಎಚ್ಚರಿಸುವ, ಅಂಥವರನ್ನು ಹೋರಾಟಕ್ಕಣಿಗೊಳಿಸುವ ಪ್ರಯತ್ನ ಮಾಡುತ್ತಾರೆ. 'ದಾಸಪಂಥ' ಕವಿತೆಯಲ್ಲಿ ನೌಕರಶಾಹಿಯನ್ನು ಟೀಕಿಸುವ, ಲೇವಡಿಮಾಡುವ ಶಿವರುದ್ರಪ್ಪನವರು 'ದುಃಸ್ವಪ್ನ' ಕವಿತೆಯಲ್ಲಿ ಸಮಕಾಲೀನ ಸಮಾಜದ ಅಧಃಪತನ ಕಂಡು ಮಮ್ಮಲನೆ ಮರುಗುತ್ತಾರೆ. ಹೀಗೆ ಡಾ.ಜಿಎಸ್ಎಸ್ ರವರ ವೈಯಕ್ತಿಕ ವೇದನೆಗಳು, ಸಂವೇದನೆಗಳು ಮಾನವೀಯ ಸ್ತರದಲ್ಲಿ ಪರಿಪಾಕಗೊಂಡಂಥವುಗಳು.

ಸಾಹಿತ್ಯಿಕವಾದ ಎಳೆಯ ದಿನಗಳಲ್ಲಿ ನಾನು ಓದಿ ಇಷ್ಟಪಟ್ಟ ಜಿಎಸ್ಎಸ್ ರವರ ಕವಿತೆಗಳೆಂದರೆ *ಶಾರದೆ, ಮಲ್ಲಿಗೆ, ಚೈತ್ರ, ಸ್ತ್ರೀ, ಬೆಳಗು ಬಾ, ನನ್ನ ನಿನ್ನ ನಡುವೆ, ಮುರಿದ*

ಒಲುಮೆಗೆ, ಹಾರೈಕೆ ಮುಂತಾದ ಕವಿತೆಗಳು. ಇಂಥ ಕವಿತೆಗಳ ಚೆಲುವಿಗೆ ನಾನು ಮಾರುಹೋಗಿದ್ದು ಅಷ್ಟಿಷ್ಟಲ್ಲ. ಈ ಕವಿತೆಗಳಲ್ಲಿನ ಮಾತಿನ ಪ್ರಯೋಗ ಲಯಗಳ ಸ್ಫೂರ್ತಿಗೆ ಸಿಕ್ಕು ನಾನು ಅದೇ ಜಾಯಮಾನದ ಕವಿತೆಗಳನ್ನು ಬರೆಯುವ ಪ್ರಯತ್ನ ಮಾಡಿದ್ದು. ಆದ್ದರಿಂದಾಗಿಯೇ ನಾನು ಶಿವರುದ್ರಪ್ಪನವರನ್ನು ಬೆಳ್ಳಕ್ಕಿಗಳ ಕಣ್ಣೊಳಗೆ ಶಾರದೆಯ ಕಥೆ ಬರೆದವರೆಂದೇ ಪ್ರೀತಿಯಿಂದ ಕರೆಯುತ್ತೇನೆ. ಸಾಂಸ್ಕೃತಿಕ ಹಿನ್ನೆಲೆಯ ಈ ಕವಿ ಹಾಗೂ ವಿದ್ವಾಂಸರ ಕವಿತೆಗಳ ಹಿಂದಿನ ಧ್ವನಿ ಪೂರ್ಣತೆಯ ಗ್ರಹಿಸಿ ಹೊಸ ಅರ್ಥಗಳನ್ನು ಸೃಷ್ಟಿಸುವ ಬೌದ್ಧಿಕ ಕ್ರಿಯೆಯನ್ನು ಕಾಣಬಹುದಾಗಿದೆ.

ಡಾ. ಜಿಎಸ್ಎಸ್ ರವರ ಕಾವ್ಯಕೃಷಿಗೆ ಸುಮಾರು ಐದು ದಶಕಗಳಷ್ಟು ಸುದೀರ್ಘ ಇತಿಹಾಸವಿದೆ. ಈವರೆಗೆ ಅವರು ಸುಮಾರು ಐದುನೂರುಗಳಷ್ಟು ಕವಿತೆಗಳನ್ನು ಬರೆದಿರಬಹುದು. ಅವೆಲ್ಲವುಗಳ ಸ್ಥಾಯಿ ಪ್ರೀತಿ, ಮತ್ತು ಅಂತಃಕರಣ ಎಂಬುದು ಗಮನಾರ್ಹ. ಪ್ರತಿಯೊಂದು ಕವಿತೆಯೊಳಗೂ ವಿನಯ, ಸೌಜನ್ಯ ಮನೆಮಾಡಿವೆ.

**ದೀಪವಿರದ ದಾರಿಯಲ್ಲಿ**
**ತಡವರಿಸುವ ನುಡಿಗಳೇ**
**ಕಂಬನಿಗಳ ತಲಾತಲದಿ**
**ನಂದುತಿರುವ ಕಿಡಿಗಳೇ**
**ಉಸಿರನಿಡುವೆ**
**ಹೆಸರಕೊಡುವೆ**
**ಬನ್ನಿ ನನ್ನ ಹೃದಯಕೆ**

(ಬನ್ನಿ ನನ್ನ ಹೃದಯಕೆ)

ಜಿಎಸ್ಎಸ್‌ರ ಕಾವ್ಯದ ಶಕ್ತಿ ಇರುವುದು ಇಂಥ ತಾಯ್ತನದಲ್ಲಿ. ತಾಯ್ತನ ಮತ್ತು ಸಾಂತ್ವನ ಅವರ ಬಹುತೇಕ ಕವಿತೆಗಳ ಮುಖ್ಯ ಆಶಯ. ಸಾಮಾಜಿಕ ಅಸಮಾನತೆ, ಪುರೋಹಿತಶಾಹಿ ಪ್ರತೀತ ಮೂಢನಂಬಿಕೆಗಳ ವಿರುದ್ಧ ಅವರ ಬಹುತೇಕ ಕವಿತೆಗಳು ಬಂಡೇಳುತ್ತಾವಾದರೂ ಎಲ್ಲೂ ವಾಚ್ಯವಾಗುವುದಿಲ್ಲ. ತಣ್ಣನೆಯ ಕೋಪ ಜಿಎಸ್ಎಸ್ ರವರ ಕಾವ್ಯದ ಮುಖ್ಯ ಜಾಯಮಾನ. ಮಲ್ಲಿಗೆ, ನೀಳಜಡೆ ಬಗ್ಗೆ ಹೇಳುವಾಗಲೂ ಇವರ ಕಾವ್ಯ ಸಾಮಾಜಿಕ ಆಶಯಗಳಿಂದ ದೂರ ಉಳಿಯುವುದಿಲ್ಲ. ತಮ್ಮ ನೋವನ್ನು ಅವರ ಅಸ್ತಿತ್ವದ ಸ್ಥಿತಿಯಲ್ಲಿ ಗ್ರಹಿಸಿ ಮೆಲುದನಿಯಲ್ಲಿ ಹೇಳುವುದೇ ಅವರ ತಾತ್ವಿಕ ನಿಲುವು. ದೇಶೀಯ ಜಾಯಮಾನದ ಡಾ. ಶಿವರುದ್ರಪ್ಪ ಶ್ರೇಷ್ಠ ಕವಿಗಳಷ್ಟೇ ಅಲ್ಲ; ವಣಿವರಿಯನ ಶ್ರೇಷ್ಠ ವಿದ್ವಾಂಸರು ಕೂಡ. ಅಷ್ಟೇ ಅಲ್ಲದೆ ಅವರು ಸೃಜನಶೀಲ ಕಣ್ಣಿನ ಅತ್ಯುತ್ತಮ ಪ್ರವಾಸಿಗಳು ಕೂಡ. ಜೊತೆಗೆ ಅವರು ಕನ್ನಡ ಸಾಹಿತ್ಯಿಕ ಮತ್ತು ಸಾಂಸ್ಕೃತಿಕವಲಯದ ಎಡಪಂಥೀಯ ಚಳವಳಿಗಳನ್ನು ಸದಾ ಬೆಂಬಲಿಸುತ್ತಿರುವರು. ಅವರು ಶ್ರೇಣೀಕೃತ

ಚಿಂತನಾಕ್ರಮದ ಮೂಲಕ ಬರಹ ಮತ್ತು ಮಾತನ್ನು ಬಳಸಿಕೊಳ್ಳುವಂಥವರು. ಸದಾ ಅಧ್ಯಯನಶೀಲರಾದ ಇವರು ಅತ್ಯುತ್ತಮ ಸಹೃಯಿಗಳು, ಹೊಸಬರ ಒಳ್ಳೆಯ ಕೃತಿಗಳನ್ನು ಸಾರ್ವಜನಿಕವಾಗಿ ಬೆಂಬಲಿಸುವಂಥವರು. ಇಂಥ ಅನೇಕ ಕಾರಣಗಳಿಂದ ನಾನು ಸನ್ಮಾನ್ಯರನ್ನು ನನ್ನ ಕಾವ್ಯದ ಗುರುಗಳಲ್ಲಿ ಅಗ್ರಮಾನ್ಯರೆಂದು ಭಾವಿಸಿದ್ದೇನೆ.

ಬರಹದ ಸಾಧ್ಯತೆ ಅಗತ್ಯತೆಗಳ ಸಂದರ್ಭದಲ್ಲಿ ನಾನು ಅವರ ಧೀರೋದಾತ್ತ ಆಕರ್ಷಕ ನಿಲುವನ್ನು ಕಲ್ಪಿಸಿಕೊಳ್ಳುತ್ತಿದ್ದೆ. ನಾನು ಅವರನ್ನು ಕಾಣುವ, ಮಾತಾಡುವ, ಸ್ಪರ್ಶಿಸುವ, ನನ್ನ ಆರಂಭದ ಬರಹಗಳನ್ನು ಅವರೆದುರು ನಿವೇದಿಸಿಕೊಳ್ಳುವ ಅವಕಾಶಕ್ಕಾಗಿ ತುದಿಗಾಲಲ್ಲಿ ನಿಂತು ಕಾಯುತ್ತಿದ್ದೆ. ಇದಕ್ಕೆ ನಿರೀಕ್ಷಣಾ ಸೋಂದಣಿ ಎಂದರೆ ಸಮಂಜಸ ವಾದೀತು. ಇದ್ದುದನ್ನು ಬಿಟ್ಟು ಇಲ್ಲದುದರ ಕಡೆ ತುಡಿಯುವ ಮಾನಸಿಕ ಕ್ರಿಯೆಗೆ ರೆಕ್ಕೆಪುಕ್ಕ ಮೂಡಿದ್ದು ಸಿದ್ಧಗಂಗಾಮಠದಲ್ಲಿ. 'ಹಾಲು ಜೇನಿನ ಬೆಣ್ಣೆ ಅದನು ಕದಿಯುವೆ ಹೆಣ್ಣೆ ರಸದೂಟವನ್ನು ಬಡಿಸು ನಿನ್ನ ಕವಿಗೆ' ಎಂದು ಮುಂತಾಗಿ ಬರೆಯುವುದರ ಮೂಲಕ ನನ್ನನ್ನು ನಾನು ಕವಿ ಎಂದು ಘೋಷಿಸಿಕೊಂಡಿದ್ದೆ. ಶಿವರುದ್ರಪ್ಪನವರು ಪ್ರಪ್ರಥಮ ದರ್ಶನ ನನಗಾದದ್ದು ಸಿದ್ಧಗಂಗಾಮಠದಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ. ವೇದಿಕೆಯ ನೊಸಲ ಮೇಲೆ ರಾರಾಜಿಸುತ್ತಿದ್ದ ಶಿವರುದ್ರಪ್ಪನವರ ಕವಿತೆಯೊಂದರ ಸಾಲುಗಳು ನನ್ನ ನೆನಪಿನಂಗಳದಲ್ಲಿ ಅಚ್ಚಳಿಯದುಳಿವೆ.

**ಸದ್ದು ಗದ್ದಲವಿರದ ಸಾಧನೆ ಇಲ್ಲಿ ಗದ್ದುಗೆ ಏರಿದೆ**
**ಕಾಯಕವೆ ಕೈಲಾಸವೆನ್ನುವ ಮಾತು ಕೃತಿಯೊಳು ಮೂಡಿದೆ**
**ಕಾವಿಯುಡುಗೆಯನುಟ್ಟ ನಭವೇ ಕಿರಣ ಹಸ್ತವ ಚಾಚಿದೆ**
**ಎನ್ನ ನನ್ನವರೆನ್ನುವ ಭಾವದ ಕರುಣೆಯೇ ಕಣ್ತೆರೆದಿದೆ.**

(ಸಿದ್ಧಗಂಗೆಯ ಶ್ರೀ ಚರಣಕ್ಕೆ)

ಕವನದ ಈ ಸಾರ್ಥಕ ಭಾವ ಸಮಗರಿವಾಗುವುದು ಅಲ್ಲಿ ಎರಡು ಮೂರು ವರ್ಷಗಳ ಕಾಲ ವಿದ್ಯಾಭ್ಯಾಸ ಮಾಡಿದ ನನ್ನಂಥವರಿಗೆ ಮಾತ್ರ ಸಾಧ್ಯ. ಸಿದ್ಧಗಂಗ ಆಶ್ರಯ ನೀಡಿರದಿದ್ದಲ್ಲಿ ನಾನು ಮಡಕೆ ಮಾಡಿ ಬೇಯಿಸುತ್ತಿರಬೇಕಿತ್ತು. ಮಠದ ಹಳೆಯ ಪ್ರತಿಭಾವಂತ ವಿದ್ಯಾರ್ಥಿಗಳ ಪೈಕಿ ಶಿವರುದ್ರಪ್ಪನವರು ಅಗ್ರಗಣ್ಯರು ಎಂದು ಒಮ್ಮೆ ಶಿಕ್ಷಕರು ಹೇಳಿದಾಗ ನನಗಾದ ಸಂತೋಷ ಅಷ್ಟಿಷ್ಟಲ್ಲ. ಡಾ. ಎಲ್. ಬಸವರಾಜು, ಡಾ. ದೇಜಗೌ ಅವರೊಂದಿಗೆ ಬಂದಿದ್ದ ಶಿವರುದ್ರಪ್ಪನವರನ್ನು ಅವರ ವಾಯುವಿಹಾರದ ಸಂದರ್ಭದಲ್ಲಿ ಭೆಟ್ಟಿಯಾದದ್ದು, ಕೈಕುಲುಕಿದ್ದು, ಅವರೊಂದಿಗೆ ಅಷ್ಟು ದೂರ ವಾಕಿಂಗ್ ಹೋದದ್ದು ಅವರು ನನಗೆ ಕಡಲೆಕಾಯಿ ಕೊಟ್ಟದ್ದು, ನನ್ನ ಕವನಗಳನ್ನು ಅವರಿಂದ ವಾಚಿಸಿ ಮೆಚ್ಚುಗೆ ಪಡೆದದ್ದು ಇದೆಲ್ಲ ಮನದಂಗಳದಲ್ಲಿ ಹಚ್ಚ ಹಸಿರಾಗುಳಿದಿದೆ. ಅಂದಿನಿಂದ ಅವರನ್ನು ಗುರುವೆಂದೇ ಪರಿಭಾವಿಸಿದೆ. ಮತ್ತೆ ಮತ್ತೆ ಬರೆಯುವ ಪ್ರಯತ್ನ ಮುಂದುವರಿಸಿದೆ.

ನನ್ನ ಬರಹಗಳು ಒಂದರ ಹಿಂದೆ ಒಂದರಂತೆ ಪತ್ರಿಕೆಗಳಲ್ಲಿ ಪ್ರಕಟವಾದಾಗ ನಾನು ಸೊಕ್ಕಿನಿಂದ ಬೀಗಿದ್ದು ಉಂಟು. ಸೊಕ್ಕು ಮತ್ತು ಕೋಡು ನನಗೆ ಆಂಧ್ರಪ್ರದೇಶ ನೀಡಿದ ಬಳುವಳಿಗಳು. ಯಶಸ್ಸಿನಲ್ಲಿ ಸೊಕ್ಕಿನ ಪಾಲು ಇಲ್ಲದಿಲ್ಲ. ಆಂಧ್ರ ಮತ್ತು ಕರ್ನಾಟಕದ ನಡುವೆ ಮದಗಜದಂತೆ ಅಡ್ಡಾಡುತ್ತಿದ್ದುದೂ ಉಂಟು. ಯೌವನ ದಾಟಿದಂತೆ ಕೊಬ್ಬೂ ಇಳಿಯಿತು. ಅದು ಬೇರೆ ವಿಷಯ. ಆ ದಿನಗಳಲ್ಲಿ ಆಗೊಮ್ಮೆ ಈಗೊಮ್ಮೆ ಡಾ. ಶಿವರುದ್ರಪ್ಪ ಅವರನ್ನು ಭೆಟ್ಟಿಯಾಗುತ್ತಿದ್ದುದುಂಟು. ಅವರಿಂದ ಪ್ರೀತಿಯ ಮಾತುಗಳನ್ನು ಕೇಳಿ ಪುಲಕಗೊಳ್ಳುತ್ತಿದ್ದುದೂ ಉಂಟು. ಅದನ್ನೆಲ್ಲ ಗೆಳೆಯರ ಬಳಿ ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದುದೂ ಉಂಟು. ಅವರ ಹೃದಯ ಶ್ರೀಮಂತಿಕೆಯೇ ಅಂಥಾದ್ದು. ಅವರದ್ದು ಎಂದೆಂದಿಗೂ ಮಾಸಲಾರದಂಥ ರೂಪ ಚೇತನಗಳನ್ನು ಜೀವಂತ ಬಿಡುವುದು, ಬೆಳೆಸುವುದು, ಆನಂದಿಸುವುದು ಅವರ ಜಾಯಮಾನ. ಅವರು ತಮ್ಮ 'ಸನ್ನ ಹಣತೆ' ಕವಿತೆಯಲ್ಲಿ ಸ್ಪಷ್ಟವಾಗಿ ಹೇಳಿಕೊಂಡಿದ್ದಾರೆ.

**ಆದರೂ ಹಣತೆ ಹಚ್ಚುತ್ತೇನೆ ನಾನೂ**
**ಕತ್ತಲೆಯನ್ನು ದಾಟುತ್ತೇನೆಂಬ ಭ್ರಮೆಯಿಂದಲ್ಲ**
**ಇರುವಷ್ಟು ಹೊತ್ತು ನಿನ್ನ ಮುಖ ನಾನು, ನನ್ನ ಮುಖ ನೀನು**
**ನೋಡಬಹುದೆಂಬ ಒಂದೇ ಒಂದು ಆಸೆಯಿಂದ**
**ಹಣತೆ ಆರಿದ ಮೇಲೆ ನೀನು ಯಾರೋ, ಮತ್ತೆ**
**ನಾನು ಯಾರೋ**

ಹಣತೆ ಹಚ್ಚುವ, ಬೆಳಕು ಹಂಚುವ, ಕತ್ತಲೆವಿರುದ್ಧ ಹೋರಾಡುವ ನಿರ್ಮಲ ಅಂತಃಕರಣ ಅವರದ್ದು. ಪರಸ್ಪರ ಉಳಿಸುವ, ಉಳಿಯುವ ಹೃದಯ ಶ್ರೀಮಂತಿಕೆ ಸ್ವಾರ್ಥಪರವಾದುದಲ್ಲ. ವರ್ತಮಾನದ ಕ್ರೌರ್ಯ, ದೌರ್ಜನ್ಯ, ಅಸಮಾನತೆ, ಶೋಷಣೆ ವಿರುದ್ಧ ಸದಾ ಯೋಚಿಸುವ ಶಿವರುದ್ರಪ್ಪನವರು ತಮ್ಮ 'ಎಲ್ಲೋ ಮಗು ಅಳುತಾ ಇದೆ' ಕವಿತೆಯಲ್ಲಿ ಅವರ ಹೋರಾಟದ ಮನೋಧರ್ಮವನ್ನು ಕಾಣಬಹುದಾಗಿದೆ. ಅವರ ಸಾಮಾಜಿಕ ಚಿಂತನೆಯ ಅಭಿವ್ಯಕ್ತಿಯ ಫಲ. ಇಂಥ ಕವಿತೆಗಳು, ಅವರಿಗೆ ತಮ್ಮ ಕವಿತೆ ಬೇರೆ ಅಲ್ಲ; ತಮ್ಮ ವ್ಯಕ್ತಿತ್ವ ಬೇರೆ ಅಲ್ಲ. ಇವೆರಡರ ನಡುವೆ ತದಾತ್ಮಭಾವ ಇದೆ. ನನ್ನ ಈ ಮಾತನ್ನು ಸಮರ್ಥಿಸಲೋಸುಗ ಅವರೊಂದಿಗಿನ ಇನ್ನೊಂದು ಘಟನೆಯನ್ನು ಇಲ್ಲಿ ಪ್ರಸ್ತಾಪಿಸಿದರೆ ಅಪ್ರಸ್ತುತವಾಗಲಾರದು.

ಅದೆಂದರೆ ಬೆಂಗಳೂರಿನ ಗೆಲಾಕ್ಸಿ ಚಿತ್ರಮಂದಿರದಲ್ಲಿ ನಾನು ಅವರೊಂದಿಗೆ 'ಓಮರ್ ಮುಖ್ತಾರ್' ಎಂಬ ಅದ್ಭುತ ಸಿನೆಮಾ ನೋಡಿದ್ದು. ನನ್ನ ಪಕ್ಕದಲ್ಲಿ ಶಿವರುದ್ರಪ್ಪ ಅವರಿರುವ ಸಂಗತಿ ಇಂಟರ್‌ವಲ್ ಬಿಡುವವರೆಗೆ ನನಗೆ ಗೊತ್ತಾಗಲೇ ಇಲ್ಲ. ಮೊದ ಮೊದಲು ನನ್ನನ್ನು ಡಿ.ಎಸ್. ನಾಗಭೂಷಣ ಎಂದೇ ಸಂಬೋಧಿಸಿ ಚಿತ್ರದಲ್ಲಿ ಪಡೆಮೂಡಿರುವ

ಬ್ರಿಟೀಷ್ ಸಾಮ್ರಾಜ್ಯಶಾಹಿ, ಕ್ರೌರ್ಯ, ರಕ್ತದಾಹದ ಬಗ್ಗೆ, ಅಂಥೋಣಿ ಚಿನ್ ಎಂಬ ನಟನ ಮನೋಜ್ಞ ಅಭಿನಯದ ಬಗ್ಗೆ, ಒಮ್ಮೆ ನುರಿತ ಚಿತ್ರ ವಿಮರ್ಶಕನಿಗಿಂತ ಮಿಗಿಲಾಗಿ ಮಾತನಾಡಿದರು. ಸಿನಿಮಾ ನೋಡುವುದಾದರೆ ಅವರ ಹಾಗೆಯೇ ನೋಡಬೇಕು.

ಸಿನಿಮಾ ನೋಡಿದಾದನಂತರ ಅವರ ವಿಶಿಷ್ಟ ಕಾರು ಎಂಬ ವಾಹನದಲ್ಲಿ ಬಸವನ ಗುಡಿವರೆಗೆ ಪಯಣಿಸಿದ್ದೊಂದು ರೋಚಕ ಅನುಭವ. ಆ ಜನದಟ್ಟಣೆಯ ನಡುವೆ ಕಾರಿಗೆ ನಾನೇ ಬ್ರೇಕಾಗಿದ್ದೆ. 'ದೀಪದ ಹೆಜ್ಜೆ'ಯ ಸಂಕಲನದ ಒಂದು ಕವಿತೆಯಂತೆ 'ನೂರಾರು ಭಾವದ ಬಾವಿ. ನಮಗೆ ಬೇಕಾದಷ್ಟು ಸಿಹಿನೀರನ್ನು ಎತ್ತಿಕೊಳ್ಳಬಹುದು. ದಾರಿಹೋಕರ ದಾಹ ಪರಿಹರಿಸುವುದೊಂದೇ ಬಾವಿಯ ಉದ್ದೇಶವಷ್ಟೆ.'

ಶಿವರುದ್ರಪ್ಪನವರು ಎಷ್ಟು ಒಳ್ಳೆಯ ಬರಹಗಾರರೋ ಅಷ್ಟೆ ದಕ್ಷ ಆಡಳಿತಗಾರರು ಎಂಬುದು ಸರ್ವವಿದಿತ ವಿಷಯ. ಅವರು ಎಲ್ಲಿರುತ್ತಾರೋ ಅಲ್ಲಿ ಸುವರ್ಣಯುಗ ಆರಂಭವಾಯಿತೆಂದೇ ಲೆಕ್ಕ. ಡಾ. ಸಿ.ಎನ್. ರಾಮಚಂದ್ರನ್‌ರವರಂಥ ವಿದ್ವಾಂಸರು ಈ ಸಂಗತಿಗಳನ್ನು ಆಗಾಗ್ಗೆ ಸ್ಮರಿಸುತ್ತಾರೆ. ಅವರು ಕನ್ನಡ ಅಧ್ಯಯನ ಸಂಸ್ಥೆಯ ಅಧ್ಯಕ್ಷರಾಗಿದ್ದಾಗ ನಾಡಿನ ಸಮಸ್ತ ಸಾಹಿತ್ಯಾಸಕ್ತರ ದೃಷ್ಟಿ ಬೆಂಗಳೂರು ವಿಶ್ವವಿದ್ಯಾಲಯದತ್ತ ನೆಟ್ಟಿತ್ತು. ಆಗ 'ಸಾಧನೆ' ತ್ರೈಮಾಸಿಕ ನಮ್ಮೆಲ್ಲರ ಅಧ್ಯಯನದ ಆಸರೆಯಾಗಿತ್ತು. ಸಾಮಾನ್ಯ ಮತ್ತು ಸಾಹಿತ್ಯ, ಬೇಂದ್ರೆ ಮುಂತಾದ ಕನ್ನಡ ಅಧ್ಯಯನ ಸಂಸ್ಥೆಯ ಪ್ರಸಾರಾಂಗದ ಪ್ರಕಟಣೆಗಳನ್ನು ನಾವೆಲ್ಲ ಹೇಗಾದರೂ ದೊರಕಿಸಿಕೊಂಡು ಜವಾಬ್ದಾರಿಯಿಂದ ಓದುತ್ತಿದ್ದೆವು. ಬೆಂಗಳೂರಿಗೆ ಹೋದಾಗಲೆಲ್ಲ ವಿಶ್ವವಿದ್ಯಾಲಯಕ್ಕೆ ಹೋಗುವ, ಅಲ್ಲಿನ ಲೇಖಕರ ನಡುವೆ ತಿರುಗಾಡುವ ಪ್ರಯತ್ನ ಮಾಡುತ್ತಿದ್ದೆವು. ಬರಗೂರು ರಾಮಚಂದ್ರಪ್ಪ, ಡಿ.ಆರ್. ನಾಗರಾಜ, ಸಿದ್ಧಲಿಂಗಯ್ಯ, ಕಾಳೇಗೌಡ ನಾಗವಾರ ಮೊದಲಾದ ಕನ್ನಡದ ಅತ್ಯುತ್ತಮ ಲೇಖಕರ ಮೇಲೆ ಶಿವರುದ್ರಪ್ಪ ಬೀರಿರುವ ಪ್ರಭಾವ, ತುಂಬಿರುವ ಚೈತನ್ಯ ಅಪಾರವಾದುದು.

ಡಾ. ಶಿವರುದ್ರಪ್ಪನವರು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದಾಗ ಮಾಡಿದ ಸಾಧನೆ ಪ್ರಾತಃಸ್ಮರಣೀಯ. ಅಕಾಡೆಮಿಯನ್ನು ಸಮಗ್ರವಾಗಿ, ಅರ್ಥಪೂರ್ಣವಾಗಿ ರೂಪಿಸಿದ ಕ್ರಿಯಾಶಕ್ತಿಯೇ ಅವರು. ಡಾ. ಪ್ರಭುಶಂಕರ, ಚದುರಂಗ, ಬೆಸಗರಹಳ್ಳಿ ರಾಮಣ್ಣನವರಂಥ ಸಾಹಿತ್ಯ ಲೋಕದ ದಿಗ್ಗಜರ ನಡುವೆ ನಾನೂ ಅಕಾಡೆಮಿಯ ಸದಸ್ಯನಾಗಿದ್ದೇನೆಂಬುದೇ ಸೌಭಾಗ್ಯದ ಸಂಗತಿ. ಶಿವರುದ್ರಪ್ಪ ಅವರ ನೇತೃತ್ವದಲ್ಲಿ ಅಕಾಡೆಮಿ ಮಾಡಿದ ಸಾಧನೆ ನಭೂತೋ ನಭವಿಷ್ಯತಿ. ಕೆ. ಎಸ್. ನರಸಿಂಹಸ್ವಾಮಿ, ಪುತಿನರಂಥ ಹಿರಿಯಚೇತನಗಳನ್ನು ಹೇಗೆ ಪರಿಭಾವಿಸಬೇಕು, ಹೇಗೆ ಗೌರವಿಸಬೇಕೆಂದು ಉಡಾಫೆಗೆ ಹೆಸರಾಗಿದ್ದ ನಮಗೆಲ್ಲ ಕಲಿಸಿದ್ದೇ ಅವರು. ಮೈಸೂರಿನಲ್ಲಿ ಅಕಾಡೆಮಿಯ ಸಮಾರಂಭ ನಡೆದಾಗ ನಮ್ಮೆಲ್ಲರನ್ನು ಪ್ರಭುಶಂಕರ್ ಮತ್ತು ಶಿವರುದ್ರಪ್ಪನವರು ಉದಯರವಿಗೆ ಕರೆದೊಯ್ದು ರಸಋಷಿ ಕುವೆಂಪುರವರ ದರ್ಶನಮಾಡಿಸಿದರು. ಆ ಮಹಾನ್ ಲೇಖಕ ರೊಂದಿಗೆ ನಾವೆಲ್ಲ ತುಸು ಹೊತ್ತು ಕಳೆಯುವಂತೆ ಮಾಡಿದರು.

ಇಂಥ ಹತ್ತು ಹಲವು ಕಾರಣಗಳಿಂದ ಡಾ. ಶಿವರುದ್ರಪ್ಪನವರು ನನಗೆ, ನನ್ನಂಥವರಿಗೆ ಸದಾ ಪ್ರಾತಃಸ್ಮರಣೀಯರು. ತಾಯ್ತನದ, ಹೆಂಗರುಳಿನ ಅವರ ಕವಿತೆಗಳೊಂದೊಂದೂ ನಂದಾದೀಪವೆ.

**ಕಣಿವೆತಳದೊಳು ಕೊಳೆವ ಜೊಂಡಾಗದಿರು ಮಗುವೆ**
**ಬೆಟ್ಟ ಗುಡ್ಡವ ಹೀರಿ ತೇಗವಾಗು**
**ತಲೆಯ ಬಾಗದೆ ನಿಂತು ಕೊಂಬೆರೆಂಬೆಯ ಚಾಚಿ**
**ಮಳೆ ಬಿಸಿಲುಗಾಳಿಗಳ ತೊಟ್ಟಿಲಾಗು.**

ಈ ಅವರ ಹಾರೈಕೆ ಮರೆಯಲಾದೀತೆ!



# ಶ್ರದ್ಧೆ ಬಹಳ ದೊಡ್ಡದು

ಜಿ. ಪಿ. ಬಸವರಾಜು

**ಜಿ**ಎಸ್‌ಎಸ್ ಎಂದ ಕೂಡಲೇ ಥಟ್ಟನೆ ಎರಡು ಅಂಶಗಳು ನನ್ನ ಮನಸ್ಸಿನಲ್ಲಿ ಸುಳಿದುಹೋಗುತ್ತವೆ. ಮೊದಲನೆಯದು ಅವರು ಪದ್ಯ ಓದುವ ರೀತಿ. ಎರಡನೆಯದು ಅವರು ಉಪನ್ಯಾಸ ನೀಡುವ ಕ್ರಮ.

ಜಿಎಸ್‌ಎಸ್ ಪದ್ಯ ಓದುವುದನ್ನು ಅನೇಕ ಸಭೆಗಳಲ್ಲಿ ಕೇಳಿದ್ದೇನೆ. ಪುಟ್ಟ ಪುಟ್ಟ ಕೂಟಗಳಲ್ಲಿ ಕೇಳಿದ್ದೇನೆ. ಕ್ಯಾಮೆರಾ ಮುಂದೆ ಪ್ರಖರ ಬೆಳಕಿನ ಎದುರು ಕಾವ್ಯ ಓದುವುದನ್ನು ಕೇಳಿದ್ದೇನೆ. ನಾನೊಬ್ಬನೇ ಶ್ರೋತೃವಾಗಿ ಕೇಳಿದ್ದೇನೆ. ಅವರು ಪದ್ಯ ಓದುವ ರೀತಿ ಬಹಳ ಆಪ್ತವಾದದ್ದು. ಸ್ಪಷ್ಟವಾಗಿ, ಖಚಿತವಾಗಿ, ಏರಿಳಿವುಗಳನ್ನು ಗಮನಿಸಿ ಕೇಳುಗನ ಎದೆಗೆ ನಾಟುವಂತೆ ಜಿಎಸ್‌ಎಸ್ ಪದ್ಯ ಓದುತ್ತಾರೆ. ಪದ್ಯದ ರಚನಾಕ್ರಮ ಭಿನ್ನವಾಗಿದ್ದರೆ ಅದನ್ನು ನಮಗೆ ತಿಳಿಸಲು (ಖಾಸಗಿಯಾಗಿ ಓದುವಾಗ) ಸೂಚನೆಗಳನ್ನು ಕೊಡುತ್ತಾರೆ. ಪದ್ಯ ಒಂದು ಸ್ಟ್ಯಾಂಜಾದಲ್ಲಿ ನಿಲ್ಲದೆ ಇನ್ನೊಂದು ಸ್ಟ್ಯಾಂಜಾಕ್ಕೆ ಮುಂದುವರಿದಿದ್ದರೆ ಅದನ್ನೂ ತಿಳಿಸುತ್ತಾರೆ. ಇವೆಲ್ಲ ಸೂಚನೆಗಳೂ ರಚನೆಯ, ಪದ್ಯದ ಹೊರಮೈಯ ಅಂಶಗಳಿಗೆ ಸಂಬಂಧಿಸಿದ ಸೂಚನೆಗಳೇ ಹೊರತು ಪದ್ಯದ ತಿರುಳನ್ನು, ಅದನ್ನು ಅರ್ಥ ಮಾಡಿಕೊಳ್ಳುವ ಬಗೆಯನ್ನು ತಿಳಿಸಿ ಹೇಳುವ ಸೂಚನೆಗಳಲ್ಲ. ಅಂಥ ಸೂಚನೆಗಳನ್ನು ಓದುಗನಿಗೆ / ಕೇಳುಗನಿಗೆ ನೀಡಬಾರದು ಎಂಬ ಅರಿವೂ ಅವರಿಗಿದೆ. ಈ ದೃಷ್ಟಿಯಲ್ಲಿ ಅವರ ನಡವಳಿಕೆ ಬಹಳ ಸೂಕ್ಷ್ಮವಾದದ್ದು.

ಪದ್ಯವನ್ನು ಕೇಳಿದ ಮೇಲೆ ಪದ್ಯ ಚೆನ್ನಾಗಿದೆ ಎಂದರೆ ಅದನ್ನು ತೆಗೆದುಕೊಳ್ಳುವ ರೀತಿಯಲ್ಲೇ, ಪದ್ಯದ ಬಗ್ಗೆ ಬೇರೆಯ ಮಾತುಗಳನ್ನು ಆಡಿದಾಗಲೂ ಕೇಳಿಸಿಕೊಳ್ಳುತ್ತಾರೆ. ಅದು ಅಲ್ಲಿ ಸರಿಹೋಗಲಿಲ್ಲ, ಇಲ್ಲಿ ಸರಿಯಾಗಲಿಲ್ಲ, ಈ ಭಾಗ ಇನ್ನಷ್ಟು ಪರಿಣಾಮಕಾರಿಯಾಗಿ ಬರಬೇಕಾಗಿತ್ತು ಇತ್ಯಾದಿ ಮಾತುಗಳನ್ನು ಆಡಿದಾಗಲೂ ಅವರು ಬಹಳ ಗಂಭೀರವಾಗಿ ಕೇಳಿಸಿಕೊಂಡಿದ್ದಾರೆ. ಅದನ್ನು ಹೇಗೆ ಮಾಡಬಹುದು ನೋಡುತ್ತೇನೆ ಎಂದು ಅವರು ಹೇಳಿರುವುದು ನನ್ನ ಅನುಭವಕ್ಕೆ ಬಂದಿದೆ. ಮತ್ತೆ ಎಂದೋ ಸಿಕ್ಕಾಗ, ನಾನು ಆಡಿದ ಮಾತನ್ನು ನೆನಪಿನಲ್ಲಿಟ್ಟುಕೊಂಡು, 'ನೀವು ಹೇಳಿದನ್ನು ಸರಿಮಾಡಿದೆ. ಪ್ರಜಾವಾಣಿಯ ವಿಶೇಷಾಂಕಕ್ಕೆ ಕೇಳಿದ್ದರು, ಕಳಿಸಿಬಿಟ್ಟೆ' ಎಂದು ಹೇಳಿದ್ದೂ ಇದೆ.

ಸಾಕಷ್ಟು ಪದ್ಯಗಳನ್ನು ಬರೆದ ದಿನಗಳಲ್ಲಿ ಸಿಕ್ಕರೆ, 'ಈ ವರ್ಷ ಸಾಕಷ್ಟು ಬರೆದುಬಿಟ್ಟೆ,

ಒಂದು ಸಂಕಲನಕ್ಕಾಗುವಷ್ಟಿದೆ' ಎಂದೋ, 'ಸುಗ್ಗಿ ಜೋರಾಗಿದೆ' ಎಂದೋ ನಗುತ್ತಾರೆ. ಪದ್ಯಗಳನ್ನೇ ಬರೆಯದಿದ್ದಾಗ, 'ಬರಗಾಲ, ಒಂದೂ ಪದ್ಯ ಬರೆಯಲು ಸಾಧ್ಯವೇ ಆಗುತ್ತಿಲ್ಲ, ಎಲ್ಲ ಸೆಲೆಗಳೂ ಬತ್ತಿರುವಂತೆ ಕಾಣುತ್ತಿದೆ' ಎಂದೂ ಹೇಳುತ್ತಾರೆ. ಹೀಗೆ ಹೇಳುವಾಗಲೂ ಅವರ ನಗೆ ಪುಟಿಯುತ್ತಿರುತ್ತದೆ. ಪದ್ಯ ಬರೆಯಲು ಸಾಧ್ಯವಾಗಲಿಲ್ಲ ಎಂಬ ವಿಷಾದವೂ ಅಲ್ಲಿ ಕಾಣಿಸುವುದಿಲ್ಲ.

ಜಿಎಸ್‌ಎಸ್ ಅವರು ಪದ್ಯವನ್ನು ಓದುವಾಗ ನಮ್ಮ ಪದ್ಯವನ್ನೂ ಇವರ ಕೈಯಲ್ಲೇ ಕೊಟ್ಟು ಓದಿಸಬೇಕು ಎಂದೆನಿಸುತ್ತದೆ. ಅವರದು ಮನಮುಟ್ಟುವ ಓದು.

ಕಾವ್ಯದ ಬಗ್ಗೆ ಜಿಎಸ್‌ಎಸ್ ತೋರುವ ಶ್ರದ್ಧೆ ಬಹಳ ದೊಡ್ಡದು. ಅಲ್ಲಿಯೂ ಕೂಡಾ ಒಂದು ತಲೆಮಾರಿನ ಶ್ರದ್ಧೆಯೇ ಕಾಣಿಸುತ್ತದೆ. ತೀರ ಹಿರಿಯರು ಬರೆದ ಪದ್ಯಗಳನ್ನೂ ಅವರು ಉಡಾಫೆಯಿಂದ ನೋಡಿದ್ದನ್ನು ನಾನು ನೋಡಿಯೇ ಇಲ್ಲ. ಇದಕ್ಕೆ ವ್ಯತಿರಿಕ್ತವಾಗಿ ಹೊಸ ಹುಡುಗರು ಉತ್ಸಾಹದಿಂದ ಬರೆಯುವುದನ್ನು ಗಮನಿಸಿ, 'ಆ ಹುಡುಗ ನೋಡಿ, ಎಷ್ಟು ಸೊಗಸಾಗಿ ಬರೆಯುತ್ತಾನೆ' ('ಸೊಗಸು' ಜಿಎಸ್‌ಎಸ್ ಅವರಿಗೆ ಬಹಳ ಪ್ರಿಯವಾದ ಪದ) ಎಂದಿರುವುದನ್ನು ಅನೇಕ ಬಾರಿ ಕೇಳಿದ್ದೇನೆ. 'ಉತ್ತರ ಕರ್ನಾಟಕದ ಅನೇಕ ತರುಣರು ಚೆನ್ನಾಗಿ ಬರೆಯುತ್ತಿದ್ದಾರೆ. ಇನ್‌ಫ್ಯಾಕ್ಟ್ ಅಲ್ಲಿಂದಲೇ ಹೊಸ ಬರವಣಿಗೆ ಉತ್ಕೃಷ್ಟ ರೀತಿಯಲ್ಲಿ ಬರುವಂತೆ ಕಾಣಿಸುತ್ತಿದೆ' ಎನ್ನುವುದನ್ನೂ ಕೇಳಿದ್ದೇನೆ. ಇಂಥವರು ಚೆನ್ನಾಗಿ ಬರೆಯುತ್ತಿದ್ದಾರೆ, ಓದಿ ಎಂದು ಸೂಚಿಸಿರುವುದೂ ಉಂಟು.

ಒಮ್ಮೆ ನನ್ನ ನೋಟ್‌ಬುಕ್ಕನ್ನು ಜಿಎಸ್‌ಎಸ್ ಅವರಿಗೆ ಕೊಟ್ಟೆ. ಅದರಲ್ಲಿ ನಾನು ಆಗಾಗ ಬರೆದ ಒಂದಿಷ್ಟು ಪದ್ಯಗಳಿದ್ದವು. ಅವುಗಳನ್ನು ಪ್ರತಿಮಾಡಿ ಕೊಡುವ ಬದಲು ನೋಟ್‌ಬುಕ್ಕನ್ನೇ ಅವರಿಗೆ ಕೊಟ್ಟೆ. 'ಕೊಡಿ, ಓದುತ್ತೇನೆ' ಎಂದು ನೋಟ್‌ಬುಕ್ಕನ್ನು ತೆಗೆದುಕೊಂಡರು. ನನಗೆ ಒಂದು ರೀತಿಯ ಆತಂಕ. ಪ್ರತಿಮಾಡಿ ಕೊಟ್ಟಿದ್ದರೇ ಚೆನ್ನಾಗಿತ್ತು, ನೋಟ್‌ಬುಕ್ ಕಳೆದುಹೋದರೆ? ಎಂಬುದು ಈ ಆತಂಕಕ್ಕೆ ಕಾರಣವಾಗಿತ್ತು. (ನನ್ನ ಕೆಲವು ಮಿತ್ರರು ಈ ಕಳೆಯುವ ಕೆಲಸವನ್ನು ಬಹಳ ಯಶಸ್ವಿಯಾಗಿ ಮಾಡಿದ್ದರೂ ನಾನು ಎಚ್ಚರಿಕೆ ವಹಿಸದೆ ಮೂಲ ಪ್ರತಿಯನ್ನೇ ಜಿಎಸ್‌ಎಸ್ ಅವರಿಗೆ ಕೊಟ್ಟಿದ್ದೆ.) ಮೂರ್‍ನಾಲ್ಕು ದಿನಗಳ ನಂತರ ಜಿಎಸ್‌ಎಸ್‌ಗೆ ಫೋನ್ ಮಾಡಿದೆ. ನನ್ನ ಪದ್ಯ ಓದಿದ್ದಾರೆಯೇ ಎಂಬುದಕ್ಕಿಂತ ನೋಟ್‌ಬುಕ್ ಸುರಕ್ಷಿತವಾಗಿದೆಯೇ ಎಂಬ ಕುತೂಹಲವೇ ನನಗೆ ಮುಖ್ಯವಾಗಿತ್ತು. ಆದರೆ ಹಾಗೆ ಕೇಳಲಿಲ್ಲ. 'ಪದ್ಯ ಓದಿದಿರಾ ಸರ್' ಎಂದೆ. ಅವರು ಪದ್ಯಗಳನ್ನು ಓದಿದ್ದರು. ಉತ್ಸಾಹದಿಂದಲೇ ಮಾತನಾಡಿದರು. ನನ್ನ ಕಾವ್ಯದ ಬಗೆಗಿನ ವಿಮರ್ಶೆಯನ್ನು ಖಚಿತವಾದ ಮಾತುಗಳಲ್ಲಿ ಕೆಲವೇ ವಾಕ್ಯಗಳಲ್ಲಿ ಫೋನ್‌ನಲ್ಲಿ ತಿಳಿಸಿದರು. ನೋಟ್‌ಬುಕ್ಕನ್ನು ಮರಳಿ ಪಡೆಯಲು ಇಂಥ ದಿನ ಬರುವುದಾಗಿ ತಿಳಿಸಿ ಆ ದಿನ ಹೋದೆ. ನೋಟ್‌ಬುಕ್ಕನ್ನು ಅವರು ನನ್ನ ಕೈಗೆ ಕೊಟ್ಟರು. ಅದನ್ನು ಪಾಲಿಥೀನ್ ಬ್ಯಾಗ್‌ನಲ್ಲಿ ಸುರಕ್ಷಿತವಾಗಿ ಇಟ್ಟಿದ್ದರು. ಒಂದು ಹಾಳೆ ಕೂಡಾ ಕೊಂಕದಂತೆ ನೋಡಿಕೊಂಡಿದ್ದರು. ನನ್ನಲ್ಲಿರುವುದಕ್ಕಿಂತ ಅವರಲ್ಲಿ ಹೆಚ್ಚು ಜೋಪಾನವಾಗಿತ್ತು. ಅವರ ಕಾವ್ಯದ ಬಗ್ಗೆ ಇರುವ ಪ್ರೀತಿ ಮತ್ತು ಎಚ್ಚರಗಳೇ ಇನ್ನೊಬ್ಬರ

ಕಾವ್ಯದ ಬಗೆಗೂ ಇರುವುದು ಮೆಚ್ಚುಗೆ ಹುಟ್ಟಿಸುವಂತಿತ್ತು; ಅನುಸರಿಸಲು ಯೋಗ್ಯವಾಗಿಯೂ ಇತ್ತು.

ಪದ್ಯಗಳ ಬಗ್ಗೆ ಏನು ಹೇಳುತ್ತಾರೋ ಎಂದು ಕಾದು ಕೂತೆ. ಹೇಳಿದರು. ಅವೇ ಮಾತುಗಳು. ಫೋನ್‌ನಲ್ಲಿ ಆಡಿದ ಮಾತುಗಳ ಪುನರಾವರ್ತನೆ. ಒಂದು ಶಬ್ದ ಆಚೆ ಈಚೆ ಇಲ್ಲ; ಹೆಚ್ಚು ಕಡಿಮೆಯೂ ಇಲ್ಲ. ಅಷ್ಟೇ ಮಾತು, ಅದೇ ಅಭಿಪ್ರಾಯ; ತೂಕಮಾಡಿಟ್ಟ ಹಾಗೆ. ಅದರಾಚೆಗೆ ಮಾತುಗಳೇ ಇಲ್ಲ. ಇದ್ದರೆ ಅವು ಬೇರೆ ವಿಷಯವನ್ನು ಕುರಿತ ಲೋಕಾಭಿರಾಮದ ಮಾತು.

ನಾನು ಮನೆ ಸೇರಿದ ಮೇಲೆ ನೋಟ್‌ಬುಕ್‌ನಲ್ಲಿ ಒಮ್ಮೆ ಕಣ್ಣಾಡಿಸಿದೆ. ಅಲ್ಲಲ್ಲಿ ಏನನ್ನಾದರೂ ಬರೆದಿರಬಹುದು, ಸೂಚನೆಗಳನ್ನೇನಾದರೂ ಕೊಟ್ಟಿರಬಹುದು ಎಂದು ಅನಿಸುತ್ತಿತ್ತು. ನಿಜ. ಅಲ್ಲಿ ಸೂಚನೆಗಳಿದ್ದವು. ಸೂಚನೆಗಳೆಂದರೆ ಸೈನ್‌ಬೋರ್ಡ್ ಥರದ ಸೂಚನೆಗಳು. ಕಾಣಿಸದಷ್ಟು ಸಣ್ಣ ಅಕ್ಷರಗಳಲ್ಲಿ ರೈಟ್ ಮಾರ್ಕ್, Ok, Fine, Good ಇತ್ಯಾದಿ. ಪದ್ಯ ಸರಿಯಾದ ಜಾಗದಲ್ಲಿ ಮುಕ್ತಾಯವಾಗಬಹುದಾಗಿದ್ದು, ಅದು ಮುಂದುವರಿದ ಕಡೆಗಳಲ್ಲಿ ಒಂದು ಸಣ್ಣ ಗೆರೆ ಎಳೆದು, ಪಕ್ಕದಲ್ಲಿ ತೀರ ಸಣ್ಣ ಅಕ್ಷರಗಳಲ್ಲಿ 'ಮುಂದಿನ ಸಾಲುಗಳು ಬೇಕೆ?' ಎಂದು ಬರೆದಿದ್ದರು. ಇವೆಲ್ಲ ತೀರ ಸಣ್ಣ ಸೂಚನೆಗಳಿರಬಹುದು. ಕವಿಗೆ ಬೇಕಾಗಿರುವುದು ಇಷ್ಟೇ. ಸ್ವತಃ ಕವಿಯಾದ ಜಿಎಸ್‌ಎಸ್ ಅವರಿಗೆ ಇದು ಚೆನ್ನಾಗಿಯೇ ಗೊತ್ತಿರುವಂತಿದೆ. ಕವಿಯ ಸ್ವಾತಂತ್ರ್ಯಕ್ಕೆ ಯಾವ ರೀತಿಯ ಧಕ್ಕೆಯೂ ಆಗಬಾರದು ಎಂಬ ಎಚ್ಚರದ ಜೊತೆಗೆ, ಕಾವ್ಯವನ್ನು ಸೂಕ್ಷ್ಮವಾಗಿ ಗ್ರಹಿಸುವ ಪ್ರಯತ್ನಗಳೂ ಇಲ್ಲಿ ನನಗೆ ಕಾಣಿಸಿದವು.

ಜಿಎಸ್‌ಎಸ್ ಅವರು ಅನೇಕರ ಕವಿತಾ ಸಂಕಲನಗಳಿಗೆ ಮುನ್ನುಡಿಗಳನ್ನೋ, ಹಿನ್ನುಡಿಗಳನ್ನೋ ಬರೆದಿದ್ದಾರೆ. ಬಹುಪಾಲು ಎಳೆಯ ತಲೆಮಾರಿನವರಿಗೆ ಬರೆದ ಮಾತುಗಳು ಇವು. ಇಲ್ಲಿಯೂ ಅಷ್ಟೆ. ಇದೇ ಚೌಕಟ್ಟು. ಮಾತಿನ ಮುಂದುಗಾರಿಕೆಯೇ ಇಲ್ಲ. ಈ ಕವಿ ಬರೆಯುತ್ತಿರುವ ಕಾವ್ಯ ಸಂದರ್ಭದ ಹಿನ್ನೆಲೆ; ಕಾವ್ಯದ ಗುಣಾಂಶಗಳು; ಕಾವ್ಯದ ಮಿತಿಗಳು ಅಥವಾ ದೋಷಗಳು. ಇದೇ ಚೌಕಟ್ಟಿನಲ್ಲಿ ಆಡಿದ ಮಾತುಗಳು. ಹೀಗೆ ಬರೆಯುವಾಗ ಅವರು ಪೂರ್ವಾಗ್ರಹ ಪೀಡಿತರಾಗಿ ಬರೆದದ್ದು ಕಾಣಸುವುದೇ ಇಲ್ಲ. ತಮಗೆ ಅನಿಸಿದ್ದನ್ನು ಖಚಿತವಾಗಿ, ಸ್ಪಷ್ಟವಾಗಿ, ಸಂಗ್ರಹವಾಗಿ ಹೇಳುವ ಗುಣವನ್ನು ಜಿಎಸ್‌ಎಸ್ ಅವರಿಂದಲೇ ಕಲಿಯಬೇಕು ಎನ್ನಿಸುವ ಬರವಣಿಗೆ. ಕಾವ್ಯದ ಹೊರಮೈ, ನಡೆ, ಶಿಲ್ಪ ಸೌಂದರ್ಯ ಇವೆಲ್ಲವನ್ನೂ ಅವರು ಸರಿಯಾಗಿಯೇ ಗ್ರಹಿಸಿರುವುದಕ್ಕೆ ಅನೇಕ ನಿದರ್ಶನಗಳು ಇಂಥ ಮುನ್ನುಡಿ, ಬೆನ್ನುಡಿಗಳಲ್ಲೇ ಸಿಕ್ಕುತ್ತವೆ. ಭಾರತೀಯ ಕಾವ್ಯ ಪರಂಪರೆಯ ಹಿನ್ನೆಲೆಯನ್ನು ಪ್ರಸ್ತಾಪಿಸುವಾಗ ಜಿಎಸ್‌ಎಸ್ ಅವರಿಗೆ ಈ ಪರಂಪರೆಯ ಅರಿವು ಎಷ್ಟು ಸ್ಫುಟವಾಗಿದೆ ಎನ್ನುವುದು ತಿಳಿಯುತ್ತದೆ.

ಅವರ ಕಾವ್ಯ ಗ್ರಹಿಕೆ ಸೂಕ್ಷ್ಮ ಸಂವೇದಿಯಾದದ್ದು.

ಜಿಎಸ್‌ಎಸ್ ಅವರ ಕಾವ್ಯ ಶ್ರದ್ಧೆ ಒಂದೇ ರೀತಿಯಲ್ಲಿ ಉಳಿದುಕೊಂಡು ಬಂದದ್ದು.

ಒಂದು ಉತ್ತಮ ಕಾವ್ಯ ಸಂಗ್ರಹ ಪ್ರಕಟವಾದಾಗ ಜಿಎಸ್‌ಎಸ್ ತಕ್ಷಣ ಓದಿರುತ್ತಾರೆ. ಅನೇಕರಿಗೆ ಆ ಬಗ್ಗೆ ಹೇಳುತ್ತ, 'ಅದನ್ನು ಓದಿ' ಎಂದು ಸೂಚಿಸುತ್ತಾರೆ. ಸುಜನಾ ಅವರ 'ಯುಗಸಂಧ್ಯಾ' ಪ್ರಕಟವಾದಾಗ ಅದನ್ನು ಜಿಎಸ್‌ಎಸ್ ಓದಿ ಅನೇಕರಿಗೆ ಹೇಳಿದ್ದು ನನಗೆ ನೆನಪಿದೆ. ಅದು ಪ್ರಕಟವಾಗಿ ಎರಡು ವರ್ಷಗಳಾದರೂ ಅದರ ಬಗ್ಗೆ ಯಾವುದೇ ಪತ್ರಿಕೆಯಲ್ಲಿ ಲೇಖನವಾಗಲೀ, ವಿಮರ್ಶೆಯಾಗಲೀ ಬಾರದಿದ್ದಾಗ ಜಿಎಸ್‌ಎಸ್ 'ಇದೆಂಥ ಕಾಲ!' ಎಂದು ವಿಷಾದಿಸಿದರು. ಮತ್ತೊಂದು ಸಲ, 'ಯಾಕೆ ಮೈಸೂರು ಹೀಗಾಯಿತು. ನಾರಾಯಣ ಶೆಟ್ಟರು ಒಂದು ಕಾವ್ಯ ಬರೆದಿದ್ದಾರೆ. ಅದು ಚೆನ್ನಾಗಿರಬಹುದು, ಇಲ್ಲದೆ ಇರಬಹುದು. ಆ ಬಗ್ಗೆ ಒಂದು ವಿಚಾರಸಂಕಿರಣ, ಚರ್ಚೆ ಯಾವುದೂ ಬೇಡವೇ? ಓದುವ ಜನರೇ ಇಲ್ಲವೇ?' ಎಂದು ವ್ಯಥೆಪಟ್ಟರು.

ಜಿಎಸ್‌ಎಸ್ ಭಾಷಣ ಮಾಡುವ ಕ್ರಮ. ಇದನ್ನು ಭಾಷಣ ಎಂದು ಹೇಳಬಾರದು; ಉಪನ್ಯಾಸವೆಂದೇ ಕರೆಯಬೇಕು. ಉದ್ಘಾಟನೆಯಾಗಲೀ, ಸಮಾರೋಪವಾಗಲಿ, ಅಧ್ಯಕ್ಷ ಭಾಷಣವಾಗಲಿ, ವಿಶೇಷ ಉಪನ್ಯಾಸವಾಗಲಿ ಜಿಎಸ್‌ಎಸ್ ಮಾಡಿಕೊಳ್ಳುವ ಸಿದ್ಧತೆ ಬಹಳ ಶಿಸ್ತಿನಿಂದ ಕೂಡಿರುತ್ತದೆ. ವಾರಗಳ ಕಾಲ ಓದುತ್ತಿರುತ್ತಾರೆ. ಓದಿದ್ದನ್ನು ವಿಶ್ಲೇಷಿಸಿ, ತಮ್ಮದೇ ಅಭಿಪ್ರಾಯ ರೂಪಿಸಿಕೊಳ್ಳುತ್ತಾರೆ. ಕೊನೆಯಲ್ಲಿ ಈ ಬಗ್ಗೆ ನೋಟ್ಸ್ ಮಾಡಿಕೊಳ್ಳುತ್ತಾರೆ. ಈ ನೋಟ್ಸ್ ಚಿಕ್ಕ ಚಿಕ್ಕ ಹಾಳೆಗಳಲ್ಲಿರುತ್ತದೆ. ಕೈಯಲ್ಲಿ ಹಿಡಿದುಕೊಂಡು ಅದನ್ನು ಅಲ್ಲಲ್ಲಿ ರೆಫರ್ ಮಾಡುತ್ತ ಮಾತುಗಳು ಆಚೆ ಈಚೆ ಹರಿದಾಡದಂತೆ ವಿಷಯದ ಮೇಲೇಯೇ ಕೇಂದ್ರೀಕೃತವಾಗುವಂತೆ ನೋಡಿಕೊಳ್ಳುತ್ತಾರೆ. ಇದಕ್ಕಾಗಿಯೇ ಈ ನೋಟ್ಸ್. ಜಿಎಸ್‌ಎಸ್ ಅವರ ಮಾತುಗಳನ್ನು ಟೇಪ್ ಮಾಡಿಕೊಂಡು ಹಾಗೆಯೇ ಬರೆದಿಟ್ಟರೆ ಅದೇ ಒಂದು ಲೇಖನವಾಗಬೇಕು, ಹಾಗಿರುತ್ತದೆ ಮಾತಿನ ಓಘ.

ಕುವೆಂಪು ಅವರಿಗೆ 90 ವರ್ಷ ತುಂಬಿದಾಗ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಒಂದು ವಿಚಾರ ಸಂಕಿರಣ ನಡೆಯಿತು. ಅದರ ಉದ್ಘಾಟನೆಯನ್ನು (ಅಥವಾ ಸಮಾರೋಪ) ಜಿಎಸ್‌ಎಸ್ ಮಾಡಿದರು. ಆಗಲೂ ಅವರು ತಮ್ಮ ನೋಟ್ಸ್ ಸಿದ್ಧಪಡಿಸಿಕೊಂಡು ಬಂದಿದ್ದರು. ಕೊನೆಯಲ್ಲಿ ನಾನು, 'ನಿಮ್ಮ ನೋಟ್ಸ್ ಕೊಡಿ' ಎಂದು ತೆಗೆದುಕೊಂಡೆ. ಓದಿದರೆ ಲೇಖನದಂತೆಯೇ ಇತ್ತು. ಕುವೆಂಪು ಅವರನ್ನು ಜಿಎಸ್‌ಎಸ್ ನೋಡಿದ ಕ್ರಮ ಮತ್ತು ವಿಶ್ಲೇಷಿಸಿದ ರೀತಿ ಚೆನ್ನಾಗಿದ್ದವು. ಈ ನೋಟ್ಸನ್ನು ಜಿಎಸ್‌ಎಸ್ ಅವರಿಗೆ ವಾಪಸ್ಸು ಕಳುಹಿಸುವ ಬದಲು ನೇರವಾಗಿ ನಮ್ಮ (ಪ್ರಜಾವಾಣಿ) 'ಸಾಪ್ತಾಹಿಕ ಪುರವಣಿ' ವಿಭಾಗಕ್ಕೆ ಕಳುಹಿಸಿದೆ. ಮುಂದಿನ ವಾರದಲ್ಲಿಯೇ ಅದು ಲೇಖನವಾಗಿ ಪ್ರಕಟವಾಯಿತು. ಅದಕ್ಕೆ ಅನೇಕ ಮೆಚ್ಚುಗೆಯ ಕಾಗದಗಳೂ ಬಂದವು.

ಜಿಎಸ್‌ಎಸ್ ಅವರ ಬಹುಪಾಲು ನೋಟ್ಸ್ ಹೀಗೆಯೇ ಇರುತ್ತವೆ. ಅವನ್ನು ಮತ್ತೆ ಸರಿಪಡಿಸಿ ಬರೆಯಬೇಕಾದ ಅಗತ್ಯವಿರುವುದಿಲ್ಲ. ಅಕ್ಷರಗಳು ತೀರ ಚಿಕ್ಕದಾಗಿ ಓದಲು ತೊಂದರೆಯಾಗಬಹುದೇ ಹೊರತು ಮತ್ತೆ ಯಾವ ತೊಂದರೆಯೂ ಇರುವುದಿಲ್ಲ. ಅವು ಸರಿಯಾದ ಲೇಖನಗಳೇ.

■

# ತಲೆಮಾರು-ವಿಚಾರಗಳ ಬೆಸುಗೆ

ಎಂ. ಚಂದ್ರಶೇಖರಯ್ಯ

**ನಾ** ಕಂಡ ಜಿಎಸ್‌ಎಸ್ ಯಾವಾಗಲೂ ಶ್ವೇತ ಶುಭ್ರ ಉಡುಪು ಮತ್ತು ನಿರ್ಮಲ ವ್ಯಕ್ತಿತ್ವದವರು. ಅಂತರಂಗ ಮತ್ತು ಬಹಿರಂಗ-ಎರಡೂ ಒಂದಾಗಿರುವ ಅವರ ನಡೆ ನುಡಿಯ ಪ್ರಭಾವದ ಪರಿಧಿ ಎಷ್ಟೊಂದು ಮೋಹಕ, ಚುಂಬಕ ಎಂದರೆ-ಸಾಹಿತ್ಯವಲಯದ ಸಹೃದಯಿಯೊಬ್ಬ ಅದರಿಂದ ವಂಚಿತನಾದರೆ ಕಿಂಚಿತ್ತಾದರೂ ಏನನ್ನೋ ಕಳೆದುಕೊಂಡಂತೆ ಎಂದು ಹೇಳುವಷ್ಟು. ಕಾರಣ ಇಷ್ಟೆ: ಯಾವುದೇ ಸಮಕಾಲೀನ ಸಾಹಿತ್ಯದ ಪ್ರಭಾವ, ಚಳುವಳಿ, ಪಂಥ, ಪ್ರಭಾವಗಳನ್ನು ಪ್ರೀತಿಯಿಂದ ಸ್ವೀಕರಿಸಿ ಹುಡುಗರನ್ನು ದೊಡ್ಡವರನ್ನಾಗಿ ಬೆಳೆಸುವ ಅವರ ಹಿರಿಯ ಗುಣ. ಜಿಎಸ್‌ಎಸ್ ಎಂದರೆ ಒಂದು ತಲೆಮಾರಿನ ಸಂಜೀವಿನಿಯಂತೆ.

ನಾನು ಅವರನ್ನು ಮೊದಲ ಬಾರಿ ಕಂಡದ್ದು 1974ರಲ್ಲಿ ಲಂಕೇಶರೊಟ್ಟಿಗೆ, ಅವರ ಮನೆಯಲ್ಲಿ. 3-4 ಕಥೆಗಳಷ್ಟನ್ನೇ ಬರೆದಿದ್ದ ನನ್ನನ್ನು ಪ್ರೀತಿಯಿಂದ ಮಾತನಾಡಿಸಿ ಬೆನ್ನು ತಟ್ಟಿದ್ದರು. ಬೆಂಗಳೂರ ವಿ.ವಿ.ಯ ಕನ್ನಡ ವಿಭಾಗದಲ್ಲಿ ಅನೇಕ ವಿಚಾರ ಸಂಕಿರಣಗಳನ್ನು ಹೊಸ ಹೊಸ ನೆಲೆಗಳಲ್ಲಿ ಏರ್ಪಡಿಸಿ 'ತಲೆಮಾರು' ಕಟ್ಟಿದ ಆ ದಿನಗಳಲ್ಲಿ ಅವರನ್ನು ಅಲ್ಲಿ ಇಲ್ಲಿ ಗಮನಿಸುತ್ತಾ, ಅವರ ಕವಿತೆಗಳಲ್ಲಿ ಕಾಣುವ ಹೊಸತನವನ್ನು ನಾನು ನಿಬ್ಬೆರಗಾಗಿ ಓದಿದೆ. ಪ್ರಭಾವಿತನಾಗಿಲ್ಲವೆಂದು ಹೇಳುವ ಧೈರ್ಯವಾದರೂ ನನಗೆ ಎಲ್ಲಿದೆ?

ಶಿವರುದ್ರಪ್ಪನವರನ್ನು ನಾನು ಮುಂದೆ ಅನೇಕ ಬಾರಿ ಕಾಣುವಾಗಲೆಲ್ಲ ಗೆಳೆಯ ಡಿ.ಎಸ್. ನಾಗಭೂಷಣರು ಜೊತೆಗಿದ್ದರು. 1985ರಲ್ಲಿ ಭದ್ರಾವತಿಯ ಆಕಾಶವಾಣಿಯಲ್ಲಿದ್ದ ನಾಗಭೂಷಣ್‌ರನ್ನು ಕಾಣಲು ಅವರು ಬಂದಿದ್ದರು. ಡಿ.ಎಸ್.ಎನ್. ಮನೆಯಲ್ಲಿ ಪಂಚಾಕ್ಷರಿ ಗವಾಯಿಗಳಿಂದ ಭಾವಗೀತೆಗಳ ಗಾಯನ. ಜಿಎಸ್‌ಎಸ್ ಗಾಯನ ಆನಂದಿಸಿದ ದೃಶ್ಯ—ಧ್ಯಾನಿಸಿ, ತಲೆದೂಗಿ, ತಲ್ಲೀನರಾಗಿ—ನನಗೆ ಮರೆಯಲು ಸಾಧ್ಯವಾಗಿಲ್ಲ. ತಮ್ಮ ಭಾವಗೀತೆಗಳನ್ನೇ ಹಾಡುತ್ತಿದ್ದಾಗ ಕುವೆಂಪು, ಬೇಂದ್ರೆ ಗೀತೆಗಳನ್ನು ಹಾಡಲು ಸೂಚಿಸುತ್ತಿದ್ದರು. 1989ರಲ್ಲಿ ಮತ್ತೊಮ್ಮೆ ಜಿಎಸ್‌ಎಸ್ ಅಕಾಡೆಮಿ ಅಧ್ಯಕ್ಷರಾಗಿದ್ದಾಗ ಅವರ ಕಛೇರಿಗೆ ಹೋಗಿದ್ದೆ. ಶೂದ್ರದಲ್ಲಿ ಜಿಎಸ್‌ಎಸ್ ಕುರಿತು ಒಂದು ಲೇಖನ ಬರೆದಿದ್ದೆ. ನಾಗಭೂಷಣ್ ಅದನ್ನು ಅವರ ಗಮನಕ್ಕೆ ತಂದರು. ನಾನು ಸುಮ್ಮನಿದ್ದೆ. ಹೇಳಿದರು: "ಅದು ಹಾಗಲ್ಲ;

ನನ್ನ ಕವಿತೆಗಳನ್ನು ಹೀಗೇ ನೋಡಬೇಕೆಂದು ನಾನು ಹೇಳಲಾರೆ. ಆದರೆ ನೀವು ಇನ್ನೊಂದು ದೃಷ್ಟಿಯಿಂದ ನೋಡಬೇಕಿತ್ತು." ಪೆಚ್ಚಾದರೂ ನಾನು ಒಪ್ಪಿಕೊಂಡೆ. ಸಂಕೋಚವಿಲ್ಲದ ಅವರ ಸ್ವಭಾವದ ಹಾಗೇ ಅಚ್ಚುಕಟ್ಟು ಕೂಡಾ ಅವರ ಜೀವನ ಶೈಲಿ. ಅವರ ಪಾರದರ್ಶಕ ಗುಣವೂ ತೀಕ್ಷ್ಣವಾದದ್ದು. ಇಷ್ಟವಾಗದ ವ್ಯಕ್ತಿ ಪಕ್ಕದಲ್ಲಿರಲಿ, ಸಹೋದ್ಯೋಗಿ ಆಗಿರಲಿ 'ಹಾಳಾಗಿ ಹೋಗಲಿ, ನಿಷ್ಠುರ ಯಾಕೆ' ಎಂದು ಎಂದೂ ರಾಜಿಮಾಡಿಕೊಳ್ಳದ ವೈಶಿಷ್ಟ್ಯ ಅವರದು.

ಶಿವಮೊಗ್ಗದ ಅಕ್ಕಮಹಾದೇವಿ ಮಂದಿರದಲ್ಲಿ ಚಿಕ್ಕ ಸಾಹಿತ್ಯ ಸಭೆ ನಡೆದಿತ್ತು. ಅವರನ್ನು ಅಲ್ಲಿ ನಾಲ್ಕಾರು ಬಾರಿ ಸಮನ್ವಯ ಕವಿ ಎಂದು ಗುರ್ತಿಸಿದಾಗ ಸ್ವಲ್ಪ ಸಿಡಿಮಿಡಿಗೊಂಡರು. "ನಾನು ಸಮನ್ವಯ ಕವಿಯಲ್ಲ, ಕವಿ. ಸಾಹಿತ್ಯದಲ್ಲಿ ಸಮನ್ವಯ ಇಲ್ಲವೇ ಇಲ್ಲ. ಸುಮ್ಮನೆ ನನಗೆ ಹಚ್ಚಿರುವ ಈ ಲೇಬಲ್ ಇಷ್ಟವಿಲ್ಲ" ಎಂದು ಗುಡುಗಿದರು. ಸಮನ್ವಯ ವಿಚಾರಧಾರೆಯ ಚರ್ಚೆ ಮುದುರಿ ಬೇರೆ ದಿಕ್ಕು ಹಿಡಿಯಿತು. ಅವರ ಮುಖ ನೋಡಿದೆ. ಮೋಡ ಚದುರಿದ ಆಗಸದಂತೆ ಮತ್ತೆ ಶಾಂತವಾಗಿತ್ತು.

ಬೆಂಗಳೂರು ವಿ.ವಿ.ಯಲ್ಲಿ ಒಮ್ಮೆ ವಿದ್ಯಾರ್ಥಿಗಳ ದಾಂಧಲೆ ತೀವ್ರವಾಗಿತ್ತು. ತರಲೆ ಹೇಗೆ ಆಯಾಮ ಪಡೆದಿತ್ತೆಂದರೆ 'ಯಾರಿಗಾದರೂ ಫೇಲ್ ಮಾಡಿ, ನಮಗೆ ಮಾತ್ರ 60 ಶೇಕಡ ಅಂಕ ನೀಡಿ' ಅಂತ. ಜಿಎಸ್‌ಎಸ್ ಮೇಲೆ ಹಲ್ಲೆಯಾಗಿತ್ತು. ನೊಂದುಕೊಂಡರೂ. ಅವರೆಲ್ಲ ದಲಿತ ವಿದ್ಯಾರ್ಥಿಗಳಾಗಿದ್ದರು. ದಲಿತ ಕವಿ ಸಿದ್ಧಲಿಂಗಯ್ಯ 'ನಿಮ್ಮೊಡನಿದ್ದೂ ನಿಮ್ಮಂತಾಗದೆ' ಬಾಯಿ ಹೊಲಿದುಕೊಂಡಿದ್ದರು. 'ಊರುಕೇರಿ'ಯಲ್ಲಿ ಜಿಎಸ್‌ಎಸ್ ಕರೆದು ಕೆಲಸ ಕೊಟ್ಟಿದ್ದನ್ನು ಸಿದ್ಧಲಿಂಗಯ್ಯ ಸ್ಮರಿಸಿದ್ದಾರೆ. ಜಿಎಸ್‌ಎಸ್ ಇಂತಹ ಒಳಗುದ್ದುಗಳನ್ನು ಪ್ರೀತಿಯಿಂದ ನುಂಗಿಕೊಂಡರು. ಅವರ ಕವಿತೆಗಳ ವಿಷಾದ ಧ್ವನಿ ಇಲ್ಲಿ ಕಂಡಿತ್ತು, ಅಷ್ಟೆ. ಮತ್ತೆ ಮೋಡ ಸರಿದ ಆಕಾಶದಂತೆ ಅವರು.

ಭದ್ರಾವತಿಗೆ ಒಮ್ಮೆ ಜಿಎಸ್‌ಎಸ್ ಪ್ರೊ. ಬಿ. ಕೃಷ್ಣಪ್ಪನವರನ್ನು ಕಾಣಲು ಬಂದಿದ್ದರು. ಕೃಷ್ಣಪ್ಪನವರು ಇರಲಿಲ್ಲ. ನಾನು ಸರ್ ಎಂ.ವಿ. ಕಲಾ ಕಾಲೇಜಿನಲ್ಲಿ ಕನ್ನಡ ಸಾಹಿತ್ಯ ಗೋಷ್ಠಿ ಸಂಚಾಲಕ. ರಣ ರಣ ಬಿಸಿಲು. ದಣಿದಿದ್ದರು. 'ನಮ್ಮ ಹುಡುಗರಿಗೆ ಒಂದಿಷ್ಟು ಮಾತಾಡಿ' ಅಂತ ಕೇಳಿಕೊಂಡೆ. 'ಆಗಲಪ್ಪ' ಎಂದರು. ಕಲಾಮಂದಿರ ಕಿಕ್ಕಿರಿದು ತುಂಬಿತು. ಮೈಕ್ ಇರಲಿಲ್ಲ. ಭಾರತೀಯ ಕಾವ್ಯಮೀಮಾಂಸೆ-ಪಾಶ್ಚಾತ್ಯ ಕಾವ್ಯ ಮೀಮಾಂಸೆ ಇವೆರಡರ ಸಾರದ ನೆರಳಿನಲ್ಲಿ ಬೆಳೆದು ಅರಳಿರುವ ಕನ್ನಡ ಕಾವ್ಯ ಪರಂಪರೆ-ಕುರಿತು ಒಂದೂವರೆ ತಾಸು ನಿರರ್ಗಳ ಭಾಷಣ. ಹುಡುಗರು ಅಲುಗಾಡಲಿಲ್ಲ. ಯಾತಕ್ಕೋ ಬಂದ ಅವರ ಬಳಿ ಒಂದು ಚಿಕ್ಕ ಚೀಟಿ ತುಂಡಿನ ಟಿಪ್ಪಣಿ ಕೂಡಾ ಇರಲಿಲ್ಲ! ಅಧ್ಯಾಪಕನಾದ ನಾನು ಆ ವಿದ್ವತ್ತನ್ನು ನಾಚಿಕೆಯಿಂದ ಎಷ್ಟೋ ಬಾರಿ ನೆನಪಿಸಿಕೊಂಡಿದ್ದೇನೆ. ಇನ್ನೆಲ್ಲೂ ಅಂತಹ ನಿರರ್ಗಳತೆಯ ಮಾತನ್ನು ಕೇಳುವುದಕ್ಕೆ ಸಾಧ್ಯವಾಗಿಲ್ಲ. ಐಚ್ಛಿಕ ಕನ್ನಡದ ಹುಡುಗರಿಗೆ ತೀನಂಶ್ರೀ ಅವರ 'ಭಾರತೀಯ ಕಾವ್ಯ ಮೀಮಾಂಸೆ' ಬಿಟ್ಟರೆ ಬೇರೆ ಯಾವ ಕೃತಿ ಇದೆ

ಎಂದು ಹೇಳುತ್ತಿದ್ದ ಅಧ್ಯಾಪಕರು ಈಗ ಮಾತು ಬದಲಿಸಬೇಕಾಗಿದೆ. ಜಿಎಸ್‌ಎಸ್ ಅವರ 'ಕಾವ್ಯಾರ್ಥ ಚಿಂತನ' ಓದಲು ಮರೆತೀರಿ—ಎಂದು ಹೇಳಲೇ ಬೇಕಾಗಿದೆ. ಪರಂಪರೆಗೆ ಜಿಎಸ್‌ಎಸ್ ಕೊಡುಗೆ ಈ ತೆರನಾದದ್ದು.

ಶಿವಮೊಗ್ಗದ ಆಸಕ್ತಿ ಬಳಗ, ಜಿಎಸ್‌ಎಸ್‌ಗೆ ಸನ್ಮಾನ ಮತ್ತು ವಿಚಾರ ಸಂಕಿರಣವನ್ನು ಎರಡು ವರ್ಷದ ಹಿಂದೆ ಆಯೋಜಿಸಿ ಆಹ್ವಾನಿಸಿದ್ದರು. ಆಗ ಭದ್ರಾವತಿಯಲ್ಲಿದ್ದ ಮಿತ್ರ ನಾಗಭೂಷಣರ ಮನೆಗೆ ಅವರನ್ನು ನೋಡಲು ಬಂದಿದ್ದರು. ಪುನಃ ನಾನು ಆಹ್ವಾನಿಸಿ ನಮ್ಮ ಹುಡುಗರಿಗೆ ಮಾತನಾಡಿ ಎಂದು ಕಾಲೇಜಿಗೆ ಕರೆದುಕೊಂಡು ಬಂದೆ. ನೆನಪಿಗೆ ಒಂದು ಹಿತ್ತಾಳೆ ಕರಂಡವನ್ನು ಕೊಟ್ಟಿದ್ದೆವು. ಅದನ್ನು ಬೆಂಗಳೂರಿಗೆ ಒಯ್ಯಲಾರದೆ 'ಇದನ್ನು ನಾಗಭೂಷಣ್‌ಗೇ ಬಿಟ್ಟುಹೋಗುತ್ತೇನೆ. ನಿಮ್ಮ ಆಕ್ಷೇಪಣೆ ಇಲ್ಲ ತಾನೇ' ಎಂದು ನಕ್ಕರು. ನಾನೂ ನಕ್ಕುಬಿಟ್ಟೆ. ಹೀಗೆ ತಮ್ಮ ನೆನಪುಗಳನ್ನು ಆತ್ಮೀಯರಿಗೇ ಬಿಟ್ಟು ಹೋಗುವುದು ಅವರ ಜಾಯಮಾನ. ಅವರ ಸಾರ್ಥಕ ಬದುಕಿನುದ್ದಕ್ಕೂ ಹೀಗೆ ಬಿಟ್ಟು ಹೋಗಿರುವುದನ್ನು; ಕೊಟ್ಟು ಹೋಗಿರುವುದನ್ನು; ಪ್ರೀತಿ ತುಂಬಿ ಹರಸಿ ಹೋಗಿರುವುದನ್ನು ನಾವು ಎಷ್ಟು ಉಳಿಸಿಕೊಂಡು ನಮ್ಮ ಮುಂದಿನವರಿಗೆ ಎಷ್ಟು ಬಿಟ್ಟು ಹೋಗುತ್ತೇವೆ? ನೆನಪಾದಾಗ ಗಾಬರಿಯಾಗುತ್ತದೆ. ಯಾಕೆಂದರೆ ಅಂತಹ ಹರಸುವ ಚೈತನ್ಯಗಳು ಮುಂದಿನ ತಲೆಮಾರಿಗೆ ಇವೆಯೆ? ಪರಂಪರೆ ಉಳಿಯುತ್ತದೆ, ನಿಜ. ಅದು ಯಾವ ಪರಂಪರೆ? ಜಿಎಸ್‌ಎಸ್ ಪರಂಪರೆಯೇ ತಮ್ಮ ನಡುವಿನ ತಲೆಮಾರು-ವಿಚಾರಗಳನ್ನು ಬೆಸುಗೆ ಹಾಕುವ ಕೊಂಡಿ. ಮುಕ್ಕಾಲು ಶತಮಾನ ಪೂರೈಸಿರುವ ಹಿರಿಚೇತನಕ್ಕೆ ಇನ್ನೊಂದು ಒಕ್ಕಾಲು ಶತಮಾನವೂ ಮೀಸಲಿರಲಿ.

■

# ಸತ್ಯನಿಷ್ಠುರ

ಡಾ|| ಬಸವರಾಜ ಸಬರದ

ನಾನು ಎಂ.ಎ. ವಿದ್ಯಾರ್ಥಿಯಾಗಿದ್ದಾಗಲೇ ಜಿಎಸ್‌ಎಸ್ ಅವರ ಕಾವ್ಯವನ್ನು ಓದಿ ಮೆಚ್ಚಿಕೊಂಡಿದ್ದೆ. ಆಡುಮಾತಿಗೆ ಕಾವ್ಯಧ್ವನಿ ನೀಡುವ ಅವರ ಸೃಜನಶೀಲತೆಯನ್ನು ಕಂಡು ಹೆಮ್ಮೆಪಟ್ಟಿದ್ದೆ. ಜಿಎಸ್‌ಎಸ್ ಹಾಗೂ ಕಣವಿಯವರ ಕಾವ್ಯದ ಬಗೆಗೆ ತೌಲನಿಕ ಲೇಖನ ಬರೆದಿದ್ದೆ. ಆದರೆ ಅವರೊಂದಿಗೆ ನಿಕಟಸಂಪರ್ಕ ಬಂದದ್ದು ನಾನು ಸಾಹಿತ್ಯ ಅಕಾಡೆಮಿಯ ಸದಸ್ಯನಾಗಿದ್ದಾಗ; ಆಗ ಅವರು ಅಕಾಡೆಮಿಯ ಅಧ್ಯಕ್ಷರಾಗಿದ್ದರು. ಜಿಎಸ್‌ಎಸ್ ಅವರ ನೇತೃತ್ವದಲ್ಲಿ ಸಾಹಿತ್ಯ ಅಕಾಡೆಮಿಯ ಕಾರ್ಯಕಲಾಪ ಹಮ್ಮಿಕೊಳ್ಳುವುದು ಸಾಮಾನ್ಯವಾಗಿ ಅಂದಿನ ಎಲ್ಲ ಸದಸ್ಯರಿಗೂ ಹೆಮ್ಮೆಯ ವಿಷಯವಾಗಿತ್ತು. ನನಗಂತೂ ಜಿಎಸ್‌ಎಸ್ ಅವರ ಪ್ರತಿಭೆ, ಅವರಲ್ಲಿರುವ ಶಿಸ್ತು, ಪ್ರಾಮಾಣಿಕತೆ ಬಹುವಾಗಿ ಆಕರ್ಷಿಸಿದ್ದವು. ನಾವೆಲ್ಲಾ ಆಗ ಅಕಾಡೆಮಿಗಾಗಿ ಮೂರು ವರ್ಷ ಕಾರ್ಯನಿರ್ವಹಿಸಿದ್ದು ಸಾರ್ಥಕವೆನಿಸಿತ್ತು. ಅದಕ್ಕೆಲ್ಲಾ ಮೂಲ ಕಾರಣವೆಂದರೆ ಜಿಎಸ್‌ಎಸ್. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಮುಖ್ಯಸ್ಥರಾಗಿ ಜಿಎಸ್‌ಎಸ್ ಅವರು ಪ್ರಕಟಿಸಿದ ಕನ್ನಡ ಕೃತಿಗಳು ತುಂಬಾ ಮೌಲಿಕವಾದವುಗಳು. ಅದೇ ರೀತಿಯ ಮೌಲಿಕ ಕೃತಿಗಳನ್ನು ಅವರು ಅಕಾಡೆಮಿ ಅಧ್ಯಕ್ಷರಾಗಿದ್ದಾಗ ತಂದೆವು. ಇಂದಿಗೂ ಆ ಕೃತಿಗಳು ಪ್ರಸ್ತುತವಾಗಿವೆ.

ಅಕಾಡೆಮಿಯ ಕಾರ್ಯಕ್ರಮಗಳನ್ನು ನಾಡಿನ ಬೇರೆ ಬೇರೆ ಸ್ಥಳಗಳಲ್ಲಿ ಹಮ್ಮಿಕೊಂಡು, ಬೆಂಗಳೂರಿನ ಗಡಿಬಿಡಿಯ ವಾತಾವರಣದಿಂದ ಬಿಡಿಸಿಕೊಂಡು ಅಕಾಡೆಮಿಯ ಕಾರ್ಯಚಟುವಟಿಕೆಗಳನ್ನು ವಿಕೇಂದ್ರೀಕರಣಗೊಳಿಸಿದವರಲ್ಲಿ ಜಿಎಸ್‌ಎಸ್ ಮೊದಲಿಗರು. ಅವರು ಅಧ್ಯಕ್ಷರಾಗಿದ್ದ ಆ ಅವಧಿಯಲ್ಲಿ ಯಾವುದೇ ಪ್ರದೇಶದ ಲೇಖಕರಿಗೆ ಅನ್ಯಾಯವಾಗಲಿಲ್ಲ. ಅಕಾಡೆಮಿಯ ಪ್ರಶಸ್ತಿಗಾಗಿ ಆಯ್ಕೆ ಮಾಡುವಂತಹ ಸಂದರ್ಭದಲ್ಲಿ ಅವರು ತುಂಬಾ ಮುಂಜಾಗ್ರತೆ ವಹಿಸುತ್ತಿದ್ದರು. ಹಿರಿಯ ಸಾಹಿತಿಗಳನ್ನು ಗೌರವಿಸುತ್ತ, ಕಿರಿಯ ಲೇಖಕರಿಗೆ ಪ್ರೋತ್ಸಾಹ ನೀಡುತ್ತಾ, ಕನ್ನಡದ ವಿವಿಧ ಮೂಲೆಯ ಪ್ರತಿಭೆಗಳನ್ನು ಗುರುತಿಸುತ್ತಿದ್ದರು. "ನ್ಯಾಯನಿಷ್ಠುರ; ದಾಕ್ಷಿಣ್ಯಪರ ನಾನಲ್ಲ" ವೆಂಬ ಬಸವಣ್ಣನವರ ವಚನದಂತೆ ಜಿಎಸ್‌ಎಸ್ ಅಂತಹ ಸಂದರ್ಭಗಳಲ್ಲಿ ತುಂಬಾ ನಿಷ್ಠುರವಾಗಿಯೇ ನಡೆದುಕೊಳ್ಳುತ್ತಿದ್ದರು. ಗುಣಾತ್ಮಕ ಆಯ್ಕೆಯೇ ಅವರ ಪ್ರಧಾನ ಕಾಳಜಿಯಾಗಿರುತ್ತಿತ್ತು.

ಅಕಾಡೆಮಿಗೆ ಘನತೆ-ಗೌರವ ತಂದುಕೊಟ್ಟವರು ಜಿಎಸ್ಎಸ್. ಅವರು ಯಾವುದೇ ಒಂದು ವರ್ಗದ, ಒಂದು ಪ್ರದೇಶದ ಲೇಖಕರ ಪರವಹಿಸದೆ, ಕನ್ನಡದ ಶ್ರೇಷ್ಠ ಬರಹಗಾರರ ಕಡೆ ಗಮನಕೊಡುತ್ತಿದ್ದರು. ಪ್ರತಿಯೊಂದು ವಿಚಾರ ಸಂಕೀರ್ಣ ಸಕಾಲಿಕವೂ, ಅರ್ಥಪೂರ್ಣವೂ ಆಗಿರುತ್ತಿತ್ತು. ಅಕಾಡೆಮಿಯ ಸದಸ್ಯ ಬಳಗ ಯಾವುದೇ ವಿಚಾರ ಸಂಕಿರಣದಲ್ಲಿ ಪ್ರಬಂಧ ಮಂಡಿಸುವುದಾಗಲಿ, ಮುಖ್ಯ ಅತಿಥಿಯಾಗಿ ಬರುವುದಾಗಲಿ, ಅಕಾಡಮಿ ಸದಸ್ಯರು ತಮ್ಮ ಪುಸ್ತಕಗಳಿಗೆ ತಾವೇ ಪ್ರಶಸ್ತಿ ಕೊಟ್ಟುಕೊಳ್ಳುವುದಾಗಲಿ ಜಿಎಸ್ಎಸ್ ಅಧಿಕಾರಾವಧಿಯಲ್ಲಿ ಸಾಧ್ಯವಿರಲಿಲ್ಲ. ಕಾರ್ಯಕ್ರಮಗಳನ್ನು ಸರಿಯಾಗಿ ನಡೆಸುವುದು, ವ್ಯವಸ್ಥೆ ಮಾಡುವುದು, ನಿರ್ವಹಣೆ-ವಂದನಾರ್ಪಣೆ ಮಾಡುವುದು ಅಂದಿನ ಸದಸ್ಯರ ಪ್ರಮುಖ ಚಟುವಟಿಕೆಗಳಾಗಿದ್ದವು. ಚದುರಂಗರಂತಹ ಹಿರಿಯ ಸಾಹಿತಿಗಳೂ ಕೂಡ ಜಿಎಸ್ಎಸ್ ಅವರ ಅವಧಿಯಲ್ಲಿ ಅಕಾಡೆಮಿಯ ಸದಸ್ಯರಾಗಿದ್ದರು. ನಾವೆಲ್ಲರೂ ಮೈಸೂರಲ್ಲಿ ಕುವೆಂಪು ಅವರೊಂದಿಗೆ ಅವರ ಮನೆ 'ಉದಯರವಿ'ಯಲ್ಲಿ ಫೋಟೋ ತೆಗಿಸಿಕೊಂಡದ್ದು ಇನ್ನೂ ನೆನಪಿದೆ. ಕುವೆಂಪು ಅವರು ಜಿಎಸ್ಎಸ್ ಅವರ ಅಕಾಡೆಮಿಯ ಯೋಜನೆಗಳನ್ನು ಮೆಚ್ಚಿಕೊಂಡು ಮಾತನಾಡಿದ್ದರು.

ಸಾಹಿತ್ಯ ಅಕಾಡೆಮಿಯಲ್ಲಿ ಅನೇಕ ವರ್ಷಗಳಿಂದ ತಾತ್ಕಾಲಿಕವಾಗಿ ಸೇವೆ ಸಲ್ಲಿಸುತ್ತಿದ್ದ ಸಿಬ್ಬಂದಿಯನ್ನು ಖಾಯಂಗೊಳಿಸಲು ಜಿಎಸ್ಎಸ್ ಪ್ರಯತ್ನಿಸಿದ್ದರು. ಅಕಾಡೆಮಿಯ ಹಣವನ್ನು ದುಂದುವೆಚ್ಚ ಮಾಡದೆ, ರಚನಾತ್ಮಕ ಕಾರ್ಯಕ್ರಮಗಳಿಗಾಗಿ ಸದುಪಯೋಗ ಪಡಿಸಿಕೊಳ್ಳುತ್ತಿದ್ದರು. ಅವರ ಅವಧಿಯಲ್ಲಿ ಪ್ರಕಟವಾಗಿರುವ ಪ್ರತಿಯೊಂದು ಕೃತಿಯೂ ವಿಶಿಷ್ಟತೆಯಿಂದಿರುವುದನ್ನು ಓದುಗರು ಗಮನಿಸಿದ್ದಾರೆ, ವಿಮರ್ಶಕರು ಮೆಚ್ಚಿಕೊಂಡಿದ್ದಾರೆ.

ಜಿಎಸ್ಎಸ್ ಅವರ ಒಳನೋಟಗಳು, ಸಮಕಾಲೀನ ಚಿಂತನೆಗಳು ಅವರು ಹಾಕಿಕೊಂಡಿದ್ದ ಅಕಾಡೆಮಿಯ ಎಲ್ಲ ಯೋಜನೆಗಳಲ್ಲಿಯೂ ಎದ್ದು ಕಾಣುತ್ತವೆ. ಸರಳಸ್ವಭಾವದ, ಸಜ್ಜನಿಕೆಯ ವ್ಯಕ್ತಿತ್ವ ಹೊಂದಿರುವ ಜಿಎಸ್ಎಸ್‌ರಂತಹ ಸಾಹಿತಿಗಳು ವಿರಳ. ಅಧಿಕಾರದಲ್ಲಿದ್ದೂ ಅದನ್ನು ದುರುಪಯೋಗಪಡಿಸಿಕೊಳ್ಳದ, ಮಹತ್ವದ ಸಾಹಿತಿಯಾಗಿದ್ದೂ ಕಿರಿಯ ಲೇಖಕರನ್ನು ಮರೆಯದ, ಉನ್ನತ ಸ್ಥಾನದಲ್ಲಿದ್ದೂ ತುಂಬಾ ವಿನಯ ಸಂಪನ್ನರಾಗಿರುವ ಜಿಎಸ್ಎಸ್ ನಾನು ಕಂಡ ಅಪರೂಪದ ಸಾಹಿತಿ. ಅನೇಕ ಯುವ ಸಾಹಿತಿಗಳನ್ನು ಬೆಳೆಸಿದ ಜಿಎಸ್ಎಸ್ ಯುವಪೀಳಿಗೆಯ ಅನೇಕರಿಗೆಲ್ಲಾ ಪ್ರೀತಿಯ ಮೇಷ್ಟು. ಮೃದು ಸ್ವಭಾವದ ಜಿಎಸ್ಎಸ್ ಸತ್ಯನಿಷ್ಠುರರು. ಅಂತೆಯೇ ಅವರನ್ನು ಕಂಡರೆ ಎಲ್ಲರಿಗೂ ಗೌರವ. ಮೈಸೂರಲ್ಲಿ ನಡೆದ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಅನಂತಮೂರ್ತಿಯವರು ಪ್ರಶಸ್ತಿ ಸ್ವೀಕರಿಸಿ ಒಂದು ಮಾತನ್ನು ಹೇಳಿದ್ದರು—"ಜಿಎಸ್ಎಸ್ ಅಧ್ಯಕ್ಷರಾಗಿದ್ದಾಗ ನನಗೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ

ಲಭಿಸಿದ್ದು ಹೆಮ್ಮೆಯ ವಿಷಯ"—ಈ ಮಾತನ್ನು ಗಮನಿಸಬೇಕು. ಪ್ರಶಸ್ತಿಯ ಗೌರವ ಹೆಚ್ಚಾಗುವುದು ಸಂಸ್ಥೆಗಳಿಂದಲ್ಲ, ಸಂಸ್ಥೆಗಳನ್ನು ನಿರ್ವಹಿಸುತ್ತಿರುವ ವ್ಯಕ್ತಿಗಳಿಂದ. ಪ್ರಾಮಾಣಿಕನಲ್ಲದ, ಸಾಹಿತಿಯಲ್ಲದ, ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಿಂದ ಸ್ವೀಕರಿಸುವ ಪ್ರಶಸ್ತಿಗೆ ಬೆಲೆ ಬಾರದು. ಪ್ರಶಸ್ತಿಯ ಆರ್ಥಿಕ ಮೌಲ್ಯಕ್ಕಿಂತ ಅದರ ನೈತಿಕ ಮೌಲ್ಯ ಬಹುದೊಡ್ಡದು. ಅದನ್ನು ಜಿಎಸ್‌ಎಸ್ ಕಾಯ್ದುಕೊಂಡು ಬಂದರು.



# ಕಾವ್ಯ ದೊಡ್ಡದು, ಕವಿಯೂ...

ಚಿಂತಾಮಣಿ ಕೊಡ್ಲೆಕೆರೆ

"ಶಕ್ತಿಯ ಕೊಡು ಶಕ್ತಿಯ ಕೊಡು
ಶಕ್ತಿಯ ಕೊಡು ಹೇ ಪ್ರಭೂ
ಸತ್ಯಕಾಗಿ ನಿಲುವ ಛಲವ
ದೀಪ್ತಗೊಳಿಸು ನನ್ನೊಳು"

ಎಸ್.ಎಸ್.ಎಲ್.ಸಿ.ಯ ಕನ್ನಡ ಪಠ್ಯಪುಸ್ತಕದಲ್ಲಿದ್ದ ಜಿಎಸ್‌ಎಸ್ ಪದ್ಯ. ಮನೆಯ ಅಟ್ಟದ ಮೇಲೆ ಕೂತು ಓದುತ್ತಿದ್ದವನು ಅದೆಷ್ಟು ಬಾರಿ ಮೈದುಂಬಿ ಗಟ್ಟಿಯಾಗಿ ಹೇಳಿಕೊಂಡೆನೋ! ನನ್ನಲ್ಲಿ ಆಕೃತಿ ತಳೆಯಲು ಹವಣಿಸುತ್ತಿದ್ದ ಸಾತ್ವಿಕ ಕೆಚ್ಚಿಗೆ ಈ ಪದ್ಯ ಅಪೂರ್ವ ರೀತಿಯಲ್ಲಿ ಧ್ವನಿ ನೀಡಿತು. ಕವಿತೆಯೊಂದು ಓದುಗನ ಅಂತರಂಗವನ್ನು ಪೋಷಿಸಿ ಬೆಳೆಸುವ ಬಗೆಗಳ ಕುರಿತು ತಾತ್ವಿಕ ವ್ಯಾಖ್ಯಾನಗಳೇನೂ ನನಗೆ ತಿಳಿಯದು. ಆದರೆ ಆ ಕುರಿತು ತಕ್ಕ ಮಟ್ಟಿನ ಸ್ವಾನುಭವವಿದೆ ನನ್ನ ಅಂತರಂಗವನ್ನು ಬೆಳಗಿದ ಕವಿತೆಗಳಲ್ಲೊಂದು ಮೇಲಿನದು. ನನ್ನ ಅತ್ಯಂತ ಸಂಕಟದ ಗಳಿಗೆಗಳಲ್ಲಿ ಈ ಪದ್ಯ ಸಂಗಾತಿಯಾಗಿ ಸಲುಹಿದೆ. ನಾನು ಜಿಎಸ್‌ಎಸ್ ರನ್ನು ಎದುರುಗೊಂಡಿದ್ದು ಈ ಪದ್ಯದ ಮೂಲಕ.

"ಎಲ್ಲಿ ಹೋಗುವಿರಿ, ನಿಲ್ಲಿ ಮೋಡಗಳೆ, ನಾಲ್ಕು ಹನಿಯ ಚೆಲ್ಲಿ"—ನನ್ನ ತಂದೆಯವರು ಮತ್ತೆ ಮತ್ತೆ ನೆನೆಸಿಕೊಳ್ಳುವ ಸಾಲುಗಳಿವು. ಅವರು ಶಿವಮೊಗ್ಗದಲ್ಲಿ ಇಂಟರ್‌ಮೀಡಿಯೇಟ್ ಓದುವ ಹೊತ್ತಿಗಾಗಲೇ ಜಿಎಸ್‌ಎಸ್ ತರುಣ ಅಧ್ಯಾಪಕರಾಗಿ ಕವಿಯಾಗಿ ಜನಪ್ರೀತಿ ಪಡೆದಿದ್ದರು. ನನ್ನ ತಂದೆಯವರೂ, ಅವರ ಮಿತ್ರರೂ ಜಿಎಸ್‌ಎಸ್ ಬಾಯಿಂದ ಆ ಪದ್ಯ ಕೇಳಿ ಆದರ ಬೆಳೆಸಿಕೊಂಡಿದ್ದರು. ಚಿಕ್ಕಂದಿನಲ್ಲಿ ನನ್ನ ತಂದೆ ನನಗೆ ಉತ್ತಮ ಕಾವ್ಯ ಕುರಿತು ನೀಡುತ್ತಿದ್ದ ಉದಾಹರಣೆಗಳಲ್ಲಿ ಈ ಪದ್ಯವೂ ಸೇರಿತ್ತು. ಮುಂದೆ ನಾನು ಜಿಎಸ್‌ಎಸ್‌ರನ್ನು ಇಡಿಯಾಗಿ ಓದಿದೆ. ಅವರ ಕವಿತೆಗಳಂತೆಯೇ ಕಾವ್ಯ ಚಿಂತನವೂ ನನಗೆ ತುಂಬ ಆಪ್ತವಾಯಿತು.

ಬೆಂಗಳೂರಿಗೆ ಬಂದ ಒಂದೆರಡು ವರ್ಷಗಳಲ್ಲೇ ಜಿಎಸ್‌ಎಸ್‌ರನ್ನು ಪ್ರತ್ಯಕ್ಷವಾಗಿ ಕಾಣುವ ಅವಕಾಶ ಸಿಕ್ಕಿತು (1988). ತುಂಬ ಸಂಕೋಚದಿಂದಲೇ ನನ್ನ ಮೊದಲ ಕವನ

ಸಂಕಲನವನ್ನು ಅವರ ಕೈಗಿತ್ತೆ. ಅವರಿಗಿದ್ದ ಕಾರ್ಯಬಾಹುಳ್ಯ ಗಮನಿಸಿದರೆ ಪ್ರತಿಕ್ರಿಯೆ ಲಭಿಸೀತೆಂಬ ನಿರೀಕ್ಷೆಗೆ ಅವಕಾಶವೇ ಇಲ್ಲ. ಆದ್ದರಿಂದ ತಕ್ಷಣ ಅವರನ್ನು ಕಾಣಲೂ ಇಲ್ಲ. ಆದರೆ ಮಿತ್ರರಿಂದ ಒಳ್ಳೆಯ ಮಾತುಗಳು ಬಂದು ಮುಟ್ಟಿದವು. ಜಿಎಸ್ಎಸ್ ನನ್ನ ಪದ್ಯಗಳ ಕುರಿತು ಮೆಚ್ಚುಗೆಯ ಮಾತುಗಳನ್ನಾಡಿದ್ದರು. ಜಿಎಸ್ಎಸ್‌ರನ್ನು ಮೆಚ್ಚಿ ಆರಾಧಿಸಿದ ನನ್ನಂಥವನಿಗೆ ಇದಕ್ಕಿಂತ ದೊಡ್ಡ ಗೌರವ ಇನ್ನಾವುದಿದೆ? ಅವರ ಒಳ್ಳೆಯ ಮಾತುಗಳು ನೀಡಿದ ಧೈರ್ಯದಿಂದಾಗಿ ಮುಂದೆ ಅವರನ್ನು ಆಗಾಗ ಕಾಣುವುದು ಸಾಧ್ಯವಾಯಿತು. ಆಗ ನನ್ನ ಮನೆಯೂ ಅವರ ಮನೆಗೆ ತೀರ ಹತ್ತಿರವಿದ್ದುದರಿಂದ ಮತ್ತೆ ಮತ್ತೆ ಅವರನ್ನು ಕಾಣಲು ಅವಕಾಶ ಸಿಕ್ಕಿತು.

ಜಿಎಸ್ಎಸ್ ವ್ಯಕ್ತಿತ್ವ ಆಳವಾದುದು. ತುಂಬ ಸಂಕೀರ್ಣವಾದುದನ್ನೂ ಸರಳವಾಗಿ ಮನಮುಟ್ಟಿಸಬಲ್ಲ ವಿಶಿಷ್ಟ ಸೃಜನಶಕ್ತಿ ಅವರದು. "ಪ್ರಕೃತಿಯಂತೆ ಕವಿಯ ಮನಸು" ಎಂಬ ಅವರ ಕವಿತೆಯನ್ನು ನನ್ನ ಮಿತ್ರನೊಬ್ಬ ಹಾಡುತ್ತ ಮೈಮರೆಯುತ್ತಿದ್ದ, ಮೈ ಮರೆಸುತ್ತಿದ್ದ ದಿನಗಳನ್ನು ಹೇಗೆ ಮರೆಯಲಿ? ಆ ಗೆಳೆಯನ ದೊಡ್ಡಪ್ಪ ಖ್ಯಾತ ಯಕ್ಷಗಾನ ಕಲಾವಿದರು. ನನ್ನ ಅತ್ಯಂತ ಆತ್ಮೀಯ ಗೌರವ ಸ್ಮರಣೆ ಆ ಹಿರಿಯ ಯಕ್ಷಚೈತನ್ಯಕ್ಕೆ—ಅವರ ಹೆಸರು ವಿ. ದೇವರು ಹೆಗಡೆ, ಮೂರೂರು—ಅವರು ಈ ಪದ್ಯವನ್ನು ಕೇಳುತ್ತ ಭಾವುಕರಾಗುತ್ತಿದ್ದ ಬಗೆಯನ್ನು ಗೆಳೆಯ ಉತ್ಕಟತೆಯಿಂದ ಬಣ್ಣಿಸುತ್ತಿದ್ದ. ಕವಿ ಕೊಡುವ ದೊಡ್ಡ ಅನುಭವ ಇದು—ಬಿಡುಗಡೆ ಭವದಿಂದ, ನಮ್ಮ ಅಹಂನಿಂದ, ಎಲ್ಲ ಕ್ಷುದ್ರತೆಯಿಂದ—ಅರೆಕ್ಷಣದ್ದೇ ಇದ್ದೀತಾದರೂ—ಬಿಡುಗಡೆ. ಆ ಬಿಡುಗಡೆಯನ್ನು ತಂದು ಕೊಡಬಲ್ಲ ಕಾವ್ಯ ದೊಡ್ಡದು, ಕವಿಯೂ.

ಜಿಎಸ್ಎಸ್ ನಮ್ಮ ನಾಡಿನ ಸಾಂಸ್ಕೃತಿಕ ಜೀವನದ ಒಂದು ಮುಖ್ಯ ಕೇಂದ್ರವಾಗಿದ್ದಾರೆ. ತಮ್ಮ ಕಾವ್ಯದಿಂದಲೂ ವ್ಯಕ್ತಿತ್ವದಿಂದಲೂ ಮಾನವ ಜೀವನದ ಸಾರ್ಥಕತೆಯನ್ನು ಹೆಚ್ಚಿಸುತ್ತ ಬಂದಿದ್ದಾರೆ. ಅವರ ಮೇರೆಯರಿಯದ ಪ್ರೀತಿ ಈ ಕಿರಿಯನ ಪಾಲಿಗೆ ಸಿಕ್ಕಿದೆ. ಅವರ ಪ್ರಯೋಗಶೀಲತೆ, ಹೊಸದನ್ನು ಕಾಣುವ, ನಿರ್ಮಿಸುವ ತವಕ, ಜೀವನೋತ್ಸಾಹ ಎಲ್ಲವೂ ನನಗೆ ಆದರ್ಶವಾಗಿ ಕಂಡಿವೆ.

■

# ತಸ್ಮೈಶ್ರೀ ಗುರವೇ ನಮಃ

**ಡಾ|| ಸಿ. ಪಿ. ಕೃಷ್ಣಕುಮಾರ್**

"**ಕ**ನ್ನಡದ ಯಾವ ಯಜ್ಞಕುಂಡದ ಒಂದು ಕಿಡಿಯಾಗಿ ನಾನು ಸಿಡಿದುಬಂದೆನೋ ಅದರ ಅಧ್ವರ್ಯು ಕುವೆಂಪು!"—ಇದು ಜಿಎಸ್‌ಎಸ್ ಸುಮಾರು ಐವತ್ತೈದು ವರ್ಷಗಳ ಹಿಂದೆ ಆಡಿದ ಮಾತು. (ಎಷ್ಟು ಕಾವ್ಯಾತ್ಮಕ!)

ಸಂದರ್ಭ: ಆಗ ಕನ್ನಡ ಪ್ರಾಧ್ಯಾಪಕರಾಗಿದ್ದ ಕುವೆಂಪು, ಶಿವಮೊಗ್ಗೆಯ (ಆಗಿನ) ಇಂಟರ್‌ಮೀಡಿಯಟ್ ಕಾಲೇಜಿಗೆ ಅಧಿಕೃತವಾಗಿ ಭೇಟಿಕೊಟ್ಟಾಗ ಏರ್ಪಡಿಸಲಾಗಿದ್ದ ಅವರ ಭಾಷಣ ಕಾರ್ಯಕ್ರಮ. ವರ್ಷ: 1954 ಅಥವಾ 55. ಅಲ್ಲಿ ಆಗ ಕನ್ನಡ ಅಧ್ಯಾಪಕರಾಗಿದ್ದ ಜಿಎಸ್‌ಎಸ್ ತಮ್ಮ ಗುರುಗಳನ್ನು ಸ್ವಾಗತಿಸುತ್ತ ಆಡಿದ ಮೊದಲ ವಾಕ್ಯ ಮೇಲಿನದು. ನಾನು ಆಗ ಅದೇ ಕಾಲೇಜಿನಲ್ಲಿ ವಿದ್ಯಾರ್ಥಿ.

ಜಿ.ಎಸ್.ಎಸ್ ಕೂಡ ನನ್ನಂಥ ಎಷ್ಟೋ ಕಿಡಿಗಳಿಗೆ ಆಕರವಾದ ಯಜ್ಞಕುಂಡದ ಅಧ್ವರ್ಯು! ಅಧ್ಯಾಪನ, ವಿಮರ್ಶೆಗಳಲ್ಲಿ ಕುವೆಂಪು ಮಾರ್ಗವನ್ನು ನನಗೆ ಪರಿಚಯಿಸಿದವರಲ್ಲಿ ಅವರೊಬ್ಬರು. (ಇನ್ನೊಬ್ಬರು ಸುಜನಾ)

ಶಿವಮೊಗ್ಗೆಯ ಇಂಟರ್‌ಮೀಡಿಯಟ್ ಕಾಲೇಜಿನಲ್ಲಿ ನನಗೆ ಕನ್ನಡದ ಅಧ್ಯಾಪಕರಾಗಿ ದೊರೆತವರು ಜಿಎಸ್‌ಎಸ್; ಇಂಗ್ಲಿಷ್ ಅಧ್ಯಾಪಕರಾಗಿ ಯು.ಆರ್. ಅನಂತಮೂರ್ತಿ. ಒಬ್ಬರು ನವೋದಯ ಪ್ರಸ್ಥಾನದ ಬಗ್ಗೆ, ಮತ್ತೊಬ್ಬರು ನವ್ಯದ ಬಗ್ಗೆ ನನ್ನಲ್ಲಿ ಆಸಕ್ತಿ ಮೂಡಿಸಿದರು. ಜಿಎಸ್‌ಎಸ್ ನನ್ನ ಮೇಲೆ ಬೀರಿದ ಪ್ರಭಾವ ಗಾಢ ಮತ್ತು ವ್ಯಾಪಕವಾದುದು. ವೈದ್ಯನಾಗಬೇಕೆಂಬ ಅಸ್ಪಷ್ಟ ಬಯಕೆಯಿಂದ ಇಂಟರ್‌ಮೀಡಿಯಟ್‌ನಲ್ಲಿ ರಸಾಯನಶಾಸ್ತ್ರ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರಗಳನ್ನು ಐಚ್ಛಿಕ ವಿಷಯಗಳನ್ನಾಗಿ ಆರಿಸಿಕೊಂಡಿದ್ದ ನಾನು ಆ ದಿಕ್ಕನ್ನೇ ಮರೆತು ಕನ್ನಡ ಆನರ್ಸ್‌ಗೆ ಸೇರಬೇಕು, ಮುಂದೆ ಕನ್ನಡ ಅಧ್ಯಾಪಕನಾಗಬೇಕು ಎಂಬ ನಿರ್ಧಾರವನ್ನು ಕೈಗೊಂಡುದಕ್ಕೆ ಆ ಪ್ರಭಾವವೇ ಕಾರಣ.

ನಾನು ಇಂಟರ್‌ಮೀಡಿಯಟ್ ವಿದ್ಯಾರ್ಥಿಯಾಗಿ ಶಿವಮೊಗ್ಗೆಗೆ ಹೋದಾಗ, ಅಲ್ಲಿ ಜಿಎಸ್‌ಎಸ್ ಕನ್ನಡ ಅಧ್ಯಾಪಕರೆಂದು ತಿಳಿದುಬಂತು. ಅದಕ್ಕೆ ಮುನ್ನವೆ 'ಕವಿಮನೋಧರ್ಮ' ಎಂಬ ಲೇಖನವೊಂದನ್ನು 'ಚಿತ್ರಗುಪ್ತ' ಪತ್ರಿಕೆಯ ವಿಶೇಷ ಸಂಚಿಕೆಯೊಂದರಲ್ಲಿ ಓದಿದ್ದೆ. ಅದರ ಲೇಖಕರು 'ಜಿ.ಎಸ್. ಶಿವರುದ್ರಪ್ಪ, ಬಿ.ಎ. (ಆನರ್ಸ್)' ಎಂದಿತ್ತು. ಆದರೆ ನಮ್ಮ

ಅಧ್ಯಾಪಕ ಜಿಎಸ್‌ಎಸ್, ಎಂ.ಎ. ಆಗಿದ್ದವರು! ಆದ್ದರಿಂದ ಇಬ್ಬರೂ ಬೇರೆ ಬೇರೆ ಎಂಬುದು ನನ್ನ ಮೊದಲ ಗ್ರಹಿಕೆಯಾಗಿತ್ತು. ಅಲ್ಲದೆ ಕಾಲೇಜಿನ ಸೂಚನಾಫಲಕದ ಕನ್ನಡ ವೇಳಾಪಟ್ಟಿಯಲ್ಲಿದ್ದ ಜಿಎಸ್‌ಎಸ್ ಅವರ ಹಸ್ತಾಕ್ಷರ ಅಷ್ಟೇನೂ ಚೆನ್ನಾಗಿ ಕಾಣಲಿಲ್ಲ; ಇಂಥ ಅಸುಂದರ ಕೈಬರಹದ ವ್ಯಕ್ತಿ ಒಬ್ಬ ಕವಿ-ವಿಮರ್ಶಕನಾಗಿರುವುದು ಸಾಧ್ಯವೆ ಎಂಬುದು ನನ್ನ ಶಂಕೆಯಾಗಿತ್ತು! ಆಮೇಲೆ ಕೆಲ ದಿನಗಳಲ್ಲಿ ಖಚಿತವಾಯಿತು. ಆ ಲೇಖಕರು ಮತ್ತು ನಮ್ಮ ಅಧ್ಯಾಪಕರು ಅಭಿನ್ನರೆಂದು! (ಹಸ್ತಾಕ್ಷರದ ಬಗೆಗೆ ಹೇಳುವುದಾದರೆ, ವಿ.ಸೀ. ಅಥವಾ ಎಸ್.ವಿ.ಪಿ. ಅವರ ಹಸ್ತಾಕ್ಷರವನ್ನು ಆಗ ನಾನು ನೋಡಿರಲಿಲ್ಲ!)

ಪ್ರಥಮ ಇಂಟರ್‌ಮೀಡಿಯಟ್ ತರಗತಿಯಲ್ಲಿ ಜಿಎಸ್‌ಎಸ್ ನಮಗೆ 'ಹೂಮಾಲೆ' ಎಂಬ ಪದ್ಯಪಠ್ಯದ ಸಂಕಲನವೊಂದನ್ನು ಬೋಧಿಸುತ್ತಿದ್ದರು. ನಿಸ್ಸಂಶಯವಾಗಿ ಅವರೊಬ್ಬ ಆದರ್ಶ ಅಧ್ಯಾಪಕರು. ಅವರು ಪಾಠ ಹೇಳುವ ರೀತಿ ವಿಶಿಷ್ಟ; ಆಕರ್ಷಕ. ಅದರಲ್ಲಿ ವಿಮರ್ಶೆಯಿರುತ್ತಿತ್ತು; ಒಳನೋಟಗಳಿರುತ್ತಿದ್ದವು; ಹೊಸ ಹೊಳಪುಗಳಿರುತ್ತಿದ್ದುವು. (ಹಾಗೆ ನೋಡಿದರೆ, ಅವರ ಅಧ್ಯಾಪನ, ಭಾಷಣಗಳು ಮಧ್ಯವಯಸ್ಸಿನಲ್ಲಿ ಮತ್ತು ಪರಿಣತ ವಯಸ್ಸಿನಲ್ಲಿ ಹೇಗಿದ್ದುವೋ ಮತ್ತು ಇವೆಯೋ ತಾರುಣ್ಯದಲ್ಲೂ ಹಾಗೆಯೇ ಇದ್ದುವೆನ್ನಬೇಕು.) ಅವರ ಪಾಠದ ದಿನಕ್ಕಾಗಿ ನಾನು ಕಾತರದಿಂದ ಕಾಯುತ್ತಿದ್ದೆ. (ಆಗ ವಿಜ್ಞಾನ ವಿದ್ಯಾರ್ಥಿಗಳಿಗೆ ಒಂದು ಕಾವ್ಯಕೃತಿ, ಒಂದು ಗದ್ಯಕೃತಿ ಎರಡೇ ಕನ್ನಡ ಪಠ್ಯಗಳು. 'ಕಲಾ' ವಿದ್ಯಾರ್ಥಿಗಳಿಗಾದರೆ ಇನ್ನೂ ಎರಡು ಪಠ್ಯಗಳು ಹೆಚ್ಚಾಗಿರುತ್ತಿದ್ದವು.)

ಜಿಎಸ್‌ಎಸ್ ಪಾಠ ಮಾಡುವಾಗ ಒಮ್ಮೊಮ್ಮೆ ಇಂಗ್ಲಿಷಿನಲ್ಲಿ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಿದ್ದುದೂ ಉಂಟು. ಉದಾಹರಣೆಗೆ ಒಮ್ಮೆ ರನ್ನನ 'ಗದಾಯುದ್ಧ'ದ ಪಠ್ಯಭಾಗವನ್ನು ಬೋಧಿಸುತ್ತ, ದುರ್ಯೋಧನನದು 'ಮಣ್ಣಿನ ಮೋಹ' ಎಂದರು; ಮರುಗಳಿಗೆಯಲ್ಲೇ 'lust of dust' ಎಂದರು! ಇಂತಹುದೂ-ಇಷ್ಟೆ ಅಲ್ಲ-ಅವರ ಪಾಠವಿಧಾನದ ಸೆಳೆತವಾಗಿತ್ತು. ಆಂಡಯ್ಯನ 'ಕಬ್ಬಿಗರ ಕಾವ'ದ ಪಠ್ಯಭಾಗವನ್ನು ಕುರಿತೊಮ್ಮೆ "ಮಾತಿನ ಮಗ್ಗ, ಕಲ್ಪನೆಯ ಕಗ್ಗ" ಎಂದು ಟೀಕಿಸಿದಂತೆ ನೆನಪು. 'ಕರ್ನಾಟಕ ಕಾದಂಬರಿ'ಯ ಪಠ್ಯಭಾಗವನ್ನು ಪಾಠ ಮಾಡುತ್ತ "ಇಂಗ್ಲಿಷಿನಲ್ಲಿ fall in love ಎನ್ನುತ್ತಾರೆ. ವಿಚಿತ್ರ! fall ಏಕೆ? ನಮ್ಮಲ್ಲಾದರೋ rise in love!" ಎಂದದ್ದುಂಟು. ಆದರೆ ಜಿಎಸ್‌ಎಸ್ ಎಂದೂ ಅತಿರೇಕಕ್ಕೆ ಹೋದವರಲ್ಲ; ಔಚಿತ್ಯವನ್ನು ಮರೆತವರಲ್ಲ. ಎಲ್ಲಿಯೂ ಸಮನ್ವಯದ, ಸಮತೂಕದ ನಿಲುವು ಅವರದು. ಅದು ಅವರ ಬದುಕು, ಬರಹಗಳ ಸೂತ್ರ ಮತ್ತು ನೇತ್ರ!

ಜಿಎಸ್‌ಎಸ್ ಅವರ ಸ್ವಕಾವ್ಯವಾಚನ, ಉಪನ್ಯಾಸಗಳು ಕಾಲೇಜಿನಲ್ಲಿ, ಶಿವಮೊಗ್ಗೆಯ ಕರ್ನಾಟಕ ಸಂಘದಲ್ಲಿ, ಇನ್ನೂ ಇತರೆಡೆಗಳಲ್ಲಿ ನಡೆಯುತ್ತಿದ್ದವು. ನಾನು ತಪ್ಪದೆ ಅಲ್ಲೆಲ್ಲ ಉತ್ಸುಕತೆಯಿಂದ ಹಾಜರಿರುತ್ತಿದ್ದೆ ಎಂದು ಬೇರೆ ಹೇಳಬೇಕೆ?

ನಾನು ದ್ವಿತೀಯ ಇಂಟರ್‌ಮೀಡಿಯಟ್‌ಗೆ ಹೋದಾಗ, ಆರಂಭದಲ್ಲಿ ಕಾಲೇಜಿನ ಸಾಹಿತ್ಯಸಂಘದ ಕಾರ್ಯದರ್ಶಿಯಾಗಿ ಆಯ್ಕೆಗೊಂಡೆ. ಜಿಎಸ್‌ಎಸ್ ಸಂಘದ ಅಧ್ಯಕ್ಷರು.

ಆಮೇಲೆ ನಾವಿಬ್ಬರೂ ಪರಸ್ಪರ ಹತ್ತಿರವಾದೆವು; ಈ ನಡುವೆ ನಾನು ಕವಿತಾ ರಚನೆಗೂ ತೊಡಗಿದೆ. 'ಪ್ರಜಾಮತ'ದಲ್ಲಿ ಪ್ರಕಟವಾಗಿದ್ದ ನನ್ನ ಕವನ—ಭಾಷಾಂತರವೊಂದರ ಬಗೆಗೆ ಜಿಎಸ್ಎಸ್ ಮೆಚ್ಚುಗೆ ಸೂಚಿಸಿದರು. 'ಪಕ್ಷಪಾತ' ಎಂಬ ಕವನವೊಂದನ್ನು ತೋರಿಸಿದಾಗ, "ಇದನ್ನು 'ಪ್ರಬುದ್ಧ ಕರ್ಣಾಟಕ'ಕ್ಕೆ ನಾನೆ ಕಳುಹಿಸುತ್ತೇನೆ!" ಎಂದರು. ಅವರಿಗೇಕೆ ತೊಂದರೆ ಎಂದು ನಾನೆ ಕಳುಹಿಸಿದೆ; ಆದರೆ ಅದು ಪ್ರಕಟವಾಗಲಿಲ್ಲ. (ಆಗ 'ಪ್ರ.ಕ.'ದ ಸಂಪಾದಕರಾಗಿದ್ದ ಉ.ಕಾ. ಸುಬ್ಬರಾಯಾಚಾರ್ಯರು ಮುಂದೊಮ್ಮೆ ಸಿಕ್ಕಿದಾಗ, "ನಿಮ್ಮ ಕವನ ಇನ್ನು ಸ್ವಲ್ಪ ಚೆನ್ನಾಗಿದ್ದರೆ ಪ್ರಕಟಸಿಬಹುದಿತ್ತು!" ಎಂದರು. ಈಚೆಗೆ ಆ ಕವನ ಆರನೆಯ ತರಗತಿಯ ಪಠ್ಯಪುಸ್ತಕದಲ್ಲಿ ಸೇರಿದ್ದೊಂದು ಸ್ವಾರಸ್ಯಕರ ಸಂಗತಿ.)

ನಾನು ದ್ವಿತೀಯ ಇಂಟರ್ ಮೀಡಿಯಟ್‌ನಲ್ಲಿದ್ದ ವರ್ಷದ ನಡುವೆಯೆ ಜಿಎಸ್ಎಸ್ ಅವರಿಗೆ ಸಂಶೋಧನಕ್ಕಾಗಿ ಯು.ಜಿ.ಸಿ.ಯ ಫೆಲೋಷಿಪ್ ಸಿಕ್ಕಿ, ಅವರು ಮೈಸೂರಿಗೆ ಹೋಗಬೇಕಾಯಿತು. ನಾನು ದುಗುಡದಿಂದ ಅವರನ್ನು ಬೀಳ್ಕೊಟ್ಟೆ! ಆಮೇಲೆ ತಮ್ಮೊಂದು ಪತ್ರದಲ್ಲಿ "ನಾನೀಗ ಸರಸ್ವತಿಯ ಮಂಗಳಾರತಿಯ ಮುಂಬೆಳಗಿನಲ್ಲಿದ್ದೇನೆ" ಎಂದು ಬರೆದಿದ್ದರು. ಕೆಲವರು ಸಾಹಿತಿಗಳನ್ನು ಮೈಸೂರಿನಿಂದ ನಮ್ಮಲ್ಲಿಗೆ ಕಳುಹಿಸಿಕೊಡುವುದಾಗಿಯೂ ತಿಳಿಸಿದ್ದರು. ಅದರಂತೆ, ತಮಗೆ ಸಿಕ್ಕಿದ ಚದುರಂಗರೊಡನೆ ಮಾತನಾಡಿ, ನಮ್ಮ ಸಾಹಿತ್ಯಸಂಘದ ಒಂದು ಕಾರ್ಯಕ್ರಮಕ್ಕೆ ಕಳುಹಿಸಿಕೊಟ್ಟರು. (ಆಗ ಚದುರಂಗರ 'ಸರ್ವಮಂಗಳಾ' ನಮಗೆ ಪಠ್ಯಪುಸ್ತಕವಾಗಿದ್ದುದರಿಂದ, ವಿದ್ಯಾರ್ಥಿಗಳಿಗೆ ಅವರ ಬರವು ಸ್ವಾಗತಾರ್ಹವಾಗಿತ್ತು.) ತ.ಸು. ಶಾಮರಾಯರನ್ನು ಕೇಳಿಕೊಂಡರಂತೆ; ಆದರೆ ಅವರು ಬರಲಾಗಲಿಲ್ಲ.

ಇದು ಜಿಎಸ್ಎಸ್ ಅವರ ಮತ್ತು ನನ್ನ ಸಂಬಂಧದ ಮೊದಲ ಘಟ್ಟ. ಅದು ಅಲ್ಲಿಗೇ ನಿಲ್ಲದೆ, ಮತ್ತೂ ಮುಂದುವರಿದುದು ಗಮನಾರ್ಹ. ಪ್ರಾಯಶಃ ಬಹುಮಂದಿಗೆ ಗೊತ್ತಿರುವುದು ಈ ಉತ್ತರಭಾಗವಷ್ಟೇ!

ನಾನು ಇಂಟರ್‌ಮೀಡೀಯಟ್ ಮುಗಿಸಿ, ನಡುವೆ ಒಂದು ವರ್ಷವನ್ನು ವ್ಯರ್ಥ ಮಾಡಿಕೊಂಡು, ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಆನರ್ಸ್‌ಗೆ ಸೇರಿದಾಗ—ನಮ್ಮದೇ ಕಟ್ಟಕಡೆಯ ಆನರ್ಸ್ ತಂಡ—ಅಷ್ಟರಲ್ಲಿ, ಸಂಶೋಧನೆ ಮುಗಿಸಿ, ಮಹಾಪ್ರಬಂಧ ರಚನೆಮಾಡಿ 'ಡಾಕ್ಟರ್' ಆಗಿದ್ದ ಜಿಎಸ್ಎಸ್ ಮತ್ತೆ ನನಗೆ ಗುರುಗಳಾಗಿ ಪ್ರತ್ಯಕ್ಷ! ನನ್ನ ಹಿಗ್ಗು ಹೇಳತೀರದು.

ಆನರ್ಸ್‌ನ ಮೂರು ವರ್ಷಗಳಲ್ಲಿ (ಅಥವಾ ಎರಡು ವರ್ಷ?) ಅವರು ಭಾರತೀಯ ಕಾವ್ಯಮೀಮಾಂಸೆ, ಪಾಶ್ಚಾತ್ಯ ವಿಮರ್ಶೆ ಹಾಗೂ ಪಂಪಭಾರತವನ್ನು ಪಾಠ ಹೇಳಿದರು. ವಿಮರ್ಶೆ ನಮಗೆ ಪಠ್ಯವಾಗಿತ್ತಷ್ಟೆ, ಆದರೆ ಪರೀಕ್ಷೆಗಿರಲಿಲ್ಲ. ಆದರೂ ಜಿಎಸ್ಎಸ್ ಅದನ್ನೂ ಉಳಿದ ವಿಷಯಗಳನ್ನೂ ಶ್ರದ್ಧೆಯಿಂದ ತಲಸ್ಪರ್ಶಿಯಾಗಿ ಬೋಧಿಸಿದರು. ಸಮರ್ಪಕವೂ ಸಮರ್ಥವೂ ಸಮಗ್ರವೂ ಆಗ ಪೂರ್ವಸಿದ್ಧತೆಯಿಲ್ಲದೆ, ಅವರು

ತರಗತಿಗೆ ಬರುತ್ತಿರಲಿಲ್ಲ. ಅಧ್ಯಾಪನ, ಬರವಣಿಗೆ ಎರಡರಲ್ಲೂ ಸಾಧ್ಯವಾದಮಟ್ಟಿಗೆ ಸ್ವೋಪಜ್ಞತೆಯ ಸಾಧನೆ ಅವರ ಧ್ಯೇಯ. ಅವರ 'ಪಂಪಭಾರತ' (9, 10, 11ನೆಯ ಆಶ್ವಾಸಗಳು) ಬೋಧನೆ ರಸಸ್ವಾದಿಯಾಗಿರುತ್ತಿತ್ತು; ಅಷ್ಟೇ ವಿಮರ್ಶಾತ್ಮಕವಾಗಿರುತ್ತಿತ್ತು. ಹೇಗೆ ಅವರು ಹೊಸಹೊಸದನ್ನು ಕೊಡುತ್ತಿದ್ದರು ಎಂಬುದಕ್ಕೆ ಒಂದೇ ಒಂದು ನಿದರ್ಶನ; ಭೀಷ್ಮ ಪಟ್ಟಾಭಿಷೇಕ ಪ್ರಕರಣದ ಬಗೆಗೆ ಅವರ ಹೇಳಿಕೆಯಿದು: "ಶ್ರದ್ಧೆ ಮತ್ತು ಸ್ಪರ್ಧೆ ಜೀವನದ ಎರಡು ಪ್ರೇರಕ ಶಕ್ತಿಗಳು. ಭೀಷ್ಮ ಶ್ರದ್ಧೆಯ ಪ್ರತೀಕವಾದರೆ, ಕರ್ಣ ಸ್ಪರ್ಧೆಯ ಪ್ರತೀಕ" (ಇದನ್ನು ಮುಂದೆ ಅವರೊಂದು ಚಿಂತನವನ್ನಾಗಿ ಬೆಳೆಸಿದರು.) ಜಿಎಸ್‌ಎಸ್ ಅವರ ಎಷ್ಟೋ ಉಕ್ತಿಗಳು ಸೂತ್ರಪ್ರಾಯವಾದವು; ಪ್ರಾಸಬದ್ಧ ಕೂಡ.

ಮುಂದೆ ನಾನು ಮಾನಸಗಂಗೋತ್ರಿಯಲ್ಲಿ ಎಂ.ಎ.ಗೆ ಸೇರಿದಾಗ, ಜಿಎಸ್‌ಎಸ್ ಅಲ್ಲಿಗೂ ಬಂದರು! ('ದೇವಕೇತು?') ಒಂದು ವರ್ಷ ವಿಶೇಷ ವಿಷಯವನ್ನಾಗಿ ಭಾವಗೀತೆಯನ್ನು ಕುರಿತು ಕೂಲಂಕಷವಾಗಿ ಬೋಧಿಸಿದರು. ಕನ್ನಡ ಕಾವ್ಯವಂತಿರಲಿ, 'ಗೋಲ್ಡನ್ ಟ್ರೆಷರಿ'ಯನ್ನು ಅವರು ಪಾಠ ಹೇಳಿದ ಬಗೆ ಮರೆಯಲಾಗದ್ದು.

ನನ್ನ ಕಾವ್ಯ ಕಣ್ದೆರೆದದ್ದೇ ಜಿಎಸ್‌ಎಸ್ ಅವರ ಪ್ರಭಾವ ಪರಿವೇಷದಲ್ಲಿ; ಮುಂದೆಯೂ ಅದರಿಂದ ನಾನು ಸಂಪೂರ್ಣವಾಗಿ ಮುಕ್ತನಾಗಲಿಲ್ಲವೇನೋ! ಒಮ್ಮೆ ವಿದ್ಯಾರ್ಥಿದಶೆಯಲ್ಲೆ ಅವರಿಗೆ ನಾನು ಹೇಳಿದೆ: "ನಿಮ್ಮ ಪ್ರಭಾವದಿಂದ ತಪ್ಪಿಸಿಕೊಳ್ಳುವುದೆ ನನಗೆ ಸಾಧ್ಯವಾಗುತ್ತಿಲ್ಲ!" ಆಗ ಅವರು ತಮಾಷೆಯಾಗಿ ಹೇಳಿದರು: "ಶ್ರೀ ರಾಮಕೃಷ್ಣ ಪರಮಹಂಸರು ಜ್ಞಾನಖಡ್ಗದಿಂದ ಕಾಳಿಯ ಮೂರ್ತಿಯನ್ನು ಕತ್ತರಿಸಿ ನಿರ್ವಿಕಲ್ಪ ಸಮಾಧಿಗೆ ಹೋದಂತೆ, ನನ್ನ ಪ್ರಭಾವವನ್ನು ಸೀಳಿ ಮುಂದೆ ಹೋಗಿ!" ಅದು ಬರಿಯ ತಮಾಷೆಯ ಮಾತಾಗಿರಲಿಲ್ಲ. ಆದರೆ ಅಂಥ ಪ್ರಯತ್ನವನ್ನೆ ನಾನು ಮಾಡಲಿಲ್ಲ!

ನಾನು ಎಂ.ಎ.ನಲ್ಲಿ ಓದುವಾಗ, ನನ್ನ ಚೊಚ್ಚಲು ಕವನ ಸಂಕಲನ 'ತಾರಾಸಖ' ಪ್ರಕಟವಾಯಿತು. ಅದಕ್ಕೆ ಜಿಎಸ್‌ಎಸ್ ಅವರದೇ ಹಿನ್ನುಡಿ. ಅದರಲ್ಲಿ ಉದಯೋನ್ಮುಖ ಕವಿಗೆ ಅಗತ್ಯವಾದ, ಪ್ರೋತ್ಸಾಹಕರವಾದ ಒಳ್ಳೆಯ ಮಾತುಗಳನ್ನಾಡಿದ್ದಾರೆ. "ನನಗೆ ದೋಷಗಳನ್ನು ಎತ್ತಿ ಹೇಳಿ ಸುಖಿಸುವ ಅಭ್ಯಾಸವಿಲ್ಲ!" ಎಂದು ಅಲ್ಲೇ ಅವರಾಡಿರುವ ನುಡಿಯೊಂದು ಲಕ್ಷಿಸತಕ್ಕದಾಗಿದೆ. ಎಲ್ಲ ವಿಮರ್ಶಕರಿಗೂ ಇಂಥ ಧೋರಣೆ ಇದ್ದಿದ್ದರೆ!

ನನ್ನ ಕವನವೊಂದರ ನಾಲ್ಕು ಸಾಲುಗಳು ಇಲ್ಲಿ ಜ್ಞಾಪಕಕ್ಕೆ ಬರುತ್ತವೆ:

**ತರಗತಿಯೊಳಿದ್ದರೋ-**
**ಕಾವ್ಯದುರ್ಗಕೆ ಅಲ್ಲಿ ನಮ್ಮ ಲಗ್ಗೆ;**
**ವಾರಿಧಿ ವಸಂತ ಕಾಮನಬಿಲ್ಲು ಕೌಮುದಿಯ**
**ಬಳಗ ಜೊತೆಗೆ!**

ಇವು ನಿರ್ದಿಷ್ಟವಾಗಿ ಜಿಎಸ್‌ಎಸ್ ಅವರ ತರಗತಿಯನ್ನೆ ಕುರಿತು ಬರೆದವು! ನನ್ನ ಕವನಗಳ

ಹಸ್ತಪ್ರತಿಯನ್ನು ಓದಿದ ಜಿಎಸ್‌ಎಸ್ ಈ ಸಾಲಗಳ ಪಕ್ಕದಲ್ಲಿ ಹೀಗೆ ಟಿಪ್ಪಣಿ ಬರೆದಿದ್ದರು: "ಇದಕ್ಕೆ ವಿರುದ್ಧವಾದ ಭಾವನೆಯಿಂದ, ಇನ್ನೂ ಮೇಲಾದ ಕಾವ್ಯ ಹುಟ್ಟಬಹುದು; ಪ್ರಯತ್ನಿಸಿ!" ಆದರೆ ನನ್ನ ಅನುಭವವೇನೂ ಸುಳ್ಳಾಗಿರಲಿಲ್ಲ.

ನಾನು ಎಂ.ಎ. ಮುಗಿಸಿದ ನಂತರ ಮೂರುವರ್ಷಕಾಲ ಪ್ರಾಚ್ಯವಿದ್ಯಾ ಸಂಶೋಧನಾ ಲಯದಲ್ಲಿ ಉದ್ಯೋಗಿಯಾಗಿದ್ದೆ; ಅನಂತರ ಮಹಾರಾಜಾ ಕಾಲೇಜಿನಲ್ಲಿ ಅಧ್ಯಾಪಕನಾದೆ. ಈ ನಡುವೆ ಜಿಎಸ್‌ಎಸ್ ಹೈದ್ರಾಬಾದಿನ ಉಸ್ಮಾನಿಯ ವಿಶ್ವವಿದ್ಯಾಲಯಕ್ಕೆ ಹೋಗಿದ್ದವರು, ಮರಳಿ ಮಹಾರಾಜಾ ಕಾಲೇಜಿಗೆ ಬಂದು ನನ್ನ ಸಹೋದ್ಯೋಗಿಯಾದರು. ಆಮೇಲೆ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಹೋದರು; ಭೌತಿಕವಾಗಿ ಸ್ವಲ್ಪ ದೂರವಾದರು.

ಅವರು ಹೈದ್ರಾಬಾದಿನಲ್ಲಿದ್ದಾಗ, ಅವರ 'ಅನಾವರಣ' ಎಂಬ ಕವನಸಂಕಲವನ್ನು ನಾನು 'ಪ್ರಬುದ್ಧ ಕರ್ನಾಟಕ'ದಲ್ಲಿ ವಿಮರ್ಶಿಸಿದ್ದೆ. ಆ ವಿಮರ್ಶೆಯಿಂದ ಜಿಎಸ್‌ಎಸ್ ತುಸು ಅಸಮಾಧಾನಗೊಂಡಿರಬೇಕು. ಅದು ಬಹುಕಾಲ ಅವರ ಮನಸ್ಸಿನಲ್ಲಿ ಎಲ್ಲೋ ಒಂದುಕಡೆ ಸುಪ್ತವಾಗಿ ಉಳಿದಿರಬೇಕು ಎಂದು ನನ್ನ ಸಂದೇಹ. ಅದು ನಿರಾಧಾರ ಎನ್ನುವುದಾದರೆ, ನನಗೆ ತುಂಬ ಸಂತೋಷ!

ನಮ್ಮಿಬ್ಬರ ಸಂಬಂಧ ಈಗ ಸೌಹಾರ್ದಯುತವಾಗಿಯೆ ಇದೆ. ಹೇಳಲೇಬೇಕಾದ ಮತ್ತೊಂದು ಮುಖ್ಯವಾದ ಮಾತು: ಜಿಎಸ್‌ಎಸ್ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದ ಅವಧಿಯಲ್ಲಿ, 1988ರಲ್ಲಿ ನನಗೆ ಅಕಾಡೆಮಿಯ ಗೌರವ ಪ್ರಶಸ್ತಿ ಪ್ರಾಪ್ತವಾಯಿತು. ಅದೊಂದು ಯೋಗಾಯೋಗವೆಂದು ತಿಳಿದಿದ್ದೇನೆ.

ಎಷ್ಟೋ ಅಂಶಗಳಲ್ಲಿ ಜಿಎಸ್‌ಎಸ್ ಅವರಿಗೆ ನಾನು ಋಣಿ. (ನಾನು ವಿದ್ಯಾರ್ಥಿಯಾಗಿದ್ದಾಗ ಅವರೊಮ್ಮೆ "ದುಡ್ಡೇನಾದರೂ ಬೇಕೆ?" ಎಂದು ಕೇಳಿದ್ದುದು ಈಗ ನೆನಪಾಗುತ್ತಿದೆ.) "ಎನಿತು ಜನ್ಮದಲಿ ಎನಿತು ಜೀವರಿಗೆ ಎನಿತು ನಾವು ಋಣಿಯೋ!" ಎಂದು ಅವರೇ ಹಾಡಿಲ್ಲವೆ?

"ಶಿಷ್ಯಾದಿಚ್ಛೇತ್ ಪರಾಜಯಂ" ಎಂಬ ಸೂಕ್ತಿಯೊಂದು ಉಂಟಷ್ಟೆ. ಆದರೆ ಜಿಎಸ್‌ಎಸ್ ಅವರಂಥ ಗುರುಗಳನ್ನು ಪರಾಜಯಗೊಳಿಸುವುದು ಸುಲಭವಲ್ಲ! "ತಸ್ಮೈ ಶ್ರೀಗುರವೇ ನಮಃ".



# ಗುರುತನವ ಮೀರಿದ ಗೆಳೆತನ

**ಕೆ. ರಾಮದಾಸ್**

ಅಧ್ಯಾಪನ ವೃತ್ತಿಯಿಂದ ನಿವೃತ್ತನಾಗಿ ಮಹಾರಾಜ ಕಾಲೇಜಿನಿಂದ ನಿರ್ಗಮಿಸುತ್ತಿರುವ ಸಂದರ್ಭದಲ್ಲಿ, ನಾನು ಪ್ರೀತಿಯಿಂದ ಗೌರವಿಸುವ ಗುರುಗಳಾದ ಜಿ.ಎಸ್.ಎಸ್. ಅವರ ಜೊತೆಯ ನನ್ನ ಒಡನಾಡವನ್ನು ಕುರಿತು ಬರೆಯುತ್ತಿರುವುದು ಎಂಥ ಆಕಸ್ಮಿಕ...

ನಾನು ವಿದ್ಯಾರ್ಥಿಯಾಗಿ ಮಹಾರಾಜ ಕಾಲೇಜಿನ ಮೆಟ್ಟಿಲು ಹತ್ತಿದಾಗ ಅದು ತನ್ನ ಭವ್ಯತೆಯ ಸಂಭ್ರಮ ಕಳೆದುಕೊಡು ನಿಸ್ತೇಜವಾಗಿತ್ತು. ಅಲ್ಲಿದ್ದ ಸ್ನಾತಕೋತ್ತರ ತರಗತಿಗಳೆಲ್ಲ ಪ್ರತ್ಯೇಕಗೊಂಡು ಸ್ವತಂತ್ರ ವಿಭಾಗಗಳಾಗಿ ಮಾನಸಗಂಗೋತ್ರಿಯಲ್ಲಿ ಸ್ಥಾಪನೆಯಾಗಿದ್ದವು. ಆಗಲೇ ಜಿ.ಎಸ್.ಎಸ್ ಅವರು ಹೈದರಾಬಾದಿನ ಉಸ್ಮಾನಿಯ ವಿಶ್ವವಿದ್ಯಾನಿಲಯಕ್ಕೆ ವಲಸೆ ಹೋಗಿದ್ದರು. ಅವರ ಬಗ್ಗೆ ನಮಗೆ ಮತ್ತೇನೂ ಅಷ್ಟಾಗಿ ತಿಳಿದಿರಲಿಲ್ಲ.

ಕುವೆಂಪು ಶಿಷ್ಯವರ್ಗಕ್ಕೆ ಸೇರಿದ ಎಸ್. ವಿ. ಪರಮೇಶ್ವರ ಭಟ್ಟರು, ಸುಜನಾ, ಡಾ. ಜಿ. ವರದರಾಜರಾವ್, ಎಸ್.ವಿ. ಸಂಪತ್, ಡಾ. ಪ್ರಭುಶಂಕರ ಅವರು ಕನ್ನಡ ಐಚ್ಛಿಕ ತರಗತಿಗಳಿಗೆ ಪಾಠ ಮಾಡುತ್ತಿದ್ದರು. ಇದರಲ್ಲಿ ಕೆಲವರು ಮಾನಸಗಂಗೋತ್ರಿಯಿಂದ ಬರುತ್ತಿದ್ದರು. ಸುಜನಾ ಮುಂತಾದವರು ಮಹಾರಾಜ ಕಾಲೇಜಿನಲ್ಲಿ ಇದ್ದರು. ಆಗಾಗ ಕನ್ನಡ ವಿಭಾಗೆ ಮುಖ್ಯಸ್ಥರು ಬದಲಾಗುತ್ತಲೇ ಇದ್ದರು.

ನಾನು ಶ್ರೀಕೃಷ್ಣ ಆಲನಹಳ್ಳಿ, ಡಾ. ಪಿ.ಕೆ. ರಾಜಶೇಖರ ಮತ್ತು ಶಿವಮೂರ್ತಯ್ಯ (ಈಗ ತರಳಬಾಳು ಮಠಾಧೀಶರು) ಮುಂತಾದವರು ಸಹಪಾಠಿಗಳಾಗಿ ಮಹಾರಾಜ ಕಾಲೇಜಿನ ಕನ್ನಡ ಸಂಘದ ಮುಂಚೂಣಿಯಲ್ಲಿ ನಿಂತು ಸಾಹಿತ್ಯಾಸಕ್ತಿಯ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದೆವು. ಇದರ ಜೊತೆಯಲ್ಲಿ ನಾನು, ಶ್ರೀಕೃಷ್ಣ ಆಲನಹಳ್ಳಿ ಮತ್ತು ಕಾಳೇಗೌಡ ಸಮಾಜವಾದಿ ಮತ್ತು ವಿಚಾರವಾದಿ ಆಂದೋಲನಗಳ ಜೊತೆಯಲ್ಲಿ ಗುರುತಿಸಿಕೊಂಡಿದ್ದೆವು.

ನಾವು ದ್ವಿತೀಯ ಬಿ.ಎ.ಗೆ ಬಂದಾಗ ಇದ್ದಕಿದ್ದಂತೆ ದೂರದ ಹೈದರಾಬಾದಿನಲ್ಲಿದ್ದ ಜಿಎಸ್ಎಸ್ ಅವರು 1965ರಲ್ಲಿ ಮಹಾರಾಜ ಕಾಲೇಜಿನ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಆಗಮಿಸಿದರು. ಸದಾ ಗಂಭೀರ ನಡೆ-ನುಡಿಯ ವ್ಯಕ್ತಿತ್ವದ ಜಿಎಸ್ಎಸ್ ಅವರ ಜೊತೆಯಲ್ಲಿ ನಾವು ಸಲಿಗೆಯಿಂದ ವರ್ತಿಸಲು ಅಳುಕು ಉಂಟಾಗುತ್ತಿತ್ತು. ಅತ್ಯಂತ

ಸಂಕೋಚದ ಸ್ವಭಾವದ ಮತ್ತು ಹಿತ-ಮಿತ ಮೃದು ವಚನದ ಜಿ.ಎಸ್.ಎಸ್ ಮೌನಿಯಂತೆ ಕಾಣುತ್ತಿದ್ದರು. ಅವರು ಅಷ್ಟು ಉಲ್ಲಸಿತರಂತೆ ಕಾಣುತ್ತಿರಲಿಲ್ಲ. ಎಂಥವರ ಜೊತೆಯಲ್ಲಿ ಬೇಕಾದರೂ ಅತ್ಯಂತ ಸಲಿಗೆಯಿಂದ ವರ್ತಿಸುತ್ತಿದ್ದ ಶ್ರೀಕೃಷ್ಣ ಆಲನಹಳ್ಳಿ, ಜಿಎಸ್‌ಎಸ್ ಅವರನ್ನು ಮಾತನಾಡಿಸಲು ಹಿಂಜರಿಯುತ್ತಿದ್ದ.

ಜಿಎಸ್‌ಎಸ್ ಅವರು ನಮಗೆ ಪಠ್ಯವಾಗಿದ್ದ ಕುವೆಂಪು ಅವರ ಕವನ ಸಂಕಲನ 'ಕಿಂಕಿಣಿ'ಯನ್ನು ಪಾಠ ಮಾಡುತ್ತಿದ್ದರು. ಕುವೆಂಪು ಅವರ ಅಗ್ರಪಂಕ್ತಿಯ ಶಿಷ್ಯರಾಗಿದ್ದ ಅವರು ಸಹಜವಾಗಿಯೇ ಉಲ್ಲಾಸಭರಿತರಾಗಿ ಕವನಗಳನ್ನು ಓದುತ್ತಿದ್ದರು ಮತ್ತು ಅವುಗಳನ್ನು ವ್ಯಾಖ್ಯಾನಿಸುತ್ತಿದ್ದರು. ಸ್ವತಃ ಕವಿಯಾಗಿದ್ದ ಮತ್ತು ಕಾವ್ಯ ಮೀಮಾಂಸಕರಾಗಿದ್ದ ಅವರು ಪಾಠದಲ್ಲಿ ತಲ್ಲೀನರಾಗುತ್ತಿದ್ದರು. ಪಠ್ಯವನ್ನು ವಿಷಯಾಂತರ ಮಾಡಿ ಅನ್ಯ ವಿಚಾರಗಳನ್ನು ಪ್ರಸ್ತಾಪಿಸುತ್ತಿರಲಿಲ್ಲ. ಅವರ ಬೋಧನಾಕ್ರಮ ಅಪ್ಪಟ ಸಾಹಿತ್ಯ ಶೈಲಿಯದ್ದಾಗಿತ್ತು. ಕಾವ್ಯ ಮತ್ತು ಕಾವ್ಯ ಮೀಮಾಂಸೆ ಅವರ ಆಸಕ್ತಿಯ ನೆಲೆಗಳೆಂಬುದನ್ನು ನಾವು ಗುರುತಿಸಿದ್ದೆವು. ತರಗತಿಯ ನಂತರ ಅವರು ಯಾರೊಂದಿಗೂ ಅಷ್ಟಾಗಿ ಬೆರೆಯುತ್ತಿರಲಿಲ್ಲ.

ಆಗ ಅವರು ಮೈಸೂರಿನಲ್ಲಿ ಮನೆ ಮಾಡಿರಲಿಲ್ಲ. ಒಬ್ಬರೆ ಮಹಾರಾಜ ಕಾಲೇಜಿನ ವಿದ್ಯಾರ್ಥಿನಿಲಯದಲ್ಲಿ ಅಧ್ಯಾಪಕರಿಗೆ ಮೀಸಲಾದ ಕೊಠಡಿಯಲ್ಲಿ ತಂಗಿದ್ದರು. ಕನ್ನಡ ಸಂಘದ ಚಟುವಟಿಕೆಗಳ ಮೂಲಕ ನಮ್ಮ-ಅವರ ಒಡನಾಟ ಕುದುರತೊಡಗಿತು. ಒಮ್ಮೊಮ್ಮೆ ನಾನು-ಶ್ರೀಕೃಷ್ಣ ಸಾಯಂಕಾಲದ ಸಮಯದಲ್ಲಿ ಅವರನ್ನು ಭೇಟಿಯಾಗಲು ಅವರ ಕೊಠಡಿಗೆ ಹೋಗುತ್ತಿದ್ದೆವು. ಜಿ.ಎಸ್.ಎಸ್ ಅವರು ವಾಯುವಿಹಾರದ ನೆಪದಲ್ಲಿ ನಮ್ಮನ್ನೂ ಜೊತೆಯಲ್ಲಿ ಕರೆದುಕೊಂಡು ಆ ಕಾಲದಲ್ಲಿ ಮೈಸೂರಿನಲ್ಲಿ ಜನಪ್ರಿಯವಾಗಿದ್ದ ರಾಜೂ ಹೋಟೆಲಿನಲ್ಲಿ ಮಸಾಲೆದೋಸೆ ಕೊಡಿಸುತ್ತಿದ್ದರು. ಆಗಾಗ ಈ ಕಾರ್ಯಕ್ರಮ ನಡೆಯುತ್ತಿತ್ತು. ಈ ಸಂದರ್ಭದಲ್ಲಿ ಜಿಎಸ್‌ಎಸ್ ಎಂದೂ ನಮ್ಮೊಂದಿಗೆ ವೈಯಕ್ತಿಕ ವಿಚಾರಗಳನ್ನು ಪ್ರಸ್ತಾಪಿಸುತ್ತಿರಲಿಲ್ಲ. ನವ್ಯ ಮತ್ತು ನವೋದಯ ಸಾಹಿತ್ಯದ ವಿದ್ಯಮಾನಗಳನ್ನು ಚರ್ಚಿಸುತ್ತಿದ್ದರು.

ಒಮ್ಮೆ ನಮ್ಮ ಕನ್ನಡ ವಿಭಾಗದ ಕೊಠಡಿಯಲ್ಲಿ ಗೋಡೆಗಳನ್ನು ಅಲಂಕರಿಸಿದ್ದ ಭಾವಚಿತ್ರಗಳನ್ನು ಕ್ರಮಬದ್ಧವಾಗಿ ಓರಣಗೊಳಿಸಬೇಕೆಂದು ಜಿಎಸ್‌ಎಸ್ ಸೂಚಿಸಿದರು. ನಾನು ಕಾಳೇಗೌಡ ನಾಗವಾರ, ಶ್ರೀಕೃಷ್ಣ ಎಲ್ಲಸೇರಿ ಈ ಕೆಲಸಕ್ಕೆ ಕೈ ಹಾಕಿದೆವು. ನಾನು ಟೇಬಲ್ ಮೇಲೆ ಒಂದು ಕುರ್ಚಿ ಇಟ್ಟುಕೊಂಡು ಅದರ ಕೈಗಳ ಮೇಲೆ ನಿಂತುಕೊಂಡು ಕೈಗೆಟುಕದ ಎತ್ತರವಾದ ಗೋಡೆಗೆ ಮೊಳೆಹೊಡೆಯುತ್ತಿದ್ದೆ. ಒಂದು ಕ್ಷಣದಲ್ಲಿ ಹೇಗೋ ಆಯತಪ್ಪಿ ಕಾಲುಜಾರಿ ಬಿದ್ದುಬಿಟ್ಟೆ. ಬೀಳುವಾಗ ಟೇಬಲ್ಲಿನ ಏಣು ಹೊಡೆದು ನನ್ನ ಎಡಗಾಲಿಗೆ ಬಲವಾದ ಪೆಟ್ಟಾಗಿ ಗಾಯವಾಗಿತ್ತು. ಒಂದೇ ಸಮನೆ ಬಸಿಯುತ್ತಿದ್ದ ರಕ್ತವನ್ನು ನೋಡಿ ಜಿಎಸ್‌ಎಸ್ ಗಾಬರಿಯಾದರು. ತಕ್ಷಣ ಒಂದು ಟಾಂಗಾ ತರಿಸಿ ನನ್ನನ್ನು ಕೆ.ಆರ್.

ಆಸ್ಪತ್ರೆಯ ಅಪಘಾತ ಚಿಕಿತ್ಸಾ ವಿಭಾಗಕ್ಕೆ ಕರೆದೊಯ್ದು ಚಿಕಿತ್ಸೆ ಕೊಡಿಸಿದರು. ಜಿ.ಎಸ್.ಎಸ್ ಅವರ ಪ್ರೀತಿಯ ಕಾಳಜಿ ಈ ಬಗೆಯದು.

1966ರ ಜನವರಿಯಲ್ಲಿ ಭಾರತ ಪ್ರಧಾನಮಂತ್ರಿ ಲಾಲ್ ಬಹದ್ದೂರ್ ಶಾಸ್ತ್ರಿಯವರು ಪಾಕೀಸ್ತಾನದ ಜೊತೆ ಕಾಶ್ಮೀರ ವಿವಾದವನ್ನು ಚರ್ಚಿಸಲು ರಷ್ಯಾದ ತಾಷ್ಕೆಂಟ್ ನಗರಕ್ಕೆ ಹೋದವರು ಅಲ್ಲಿಯೇ ನಿಧನ ಹೊಂದಿದರು. ಜನಪ್ರಿಯ ಪ್ರಧಾನಿಯವರ ಸಾವಿನ ವಾರ್ತೆಯಿಂದ ಭಾರತ ಸಿಡಿಲು ಬಡಿದಂತೆ ದುಃಖತಪ್ತವಾಯಿತು. ನಮ್ಮ ಕಾಲೇಜಿನಲ್ಲೂ ಸಂತಾಪ ಸೂಚಕ ಸಭೆ ನಡೆಯಿತು. ನಾನು ಇದೊಂದು ರಾಷ್ಟ್ರೀಯ ದುರಂತವೆಂದು ವಿದ್ಯಾರ್ಥಿಗಳ ಪರವಾಗಿ ಸಂತಾಪ ವ್ಯಕ್ತಪಡಿಸಿದೆ. ಸಭೆ ಮುಗಿದ ನಂತರ ಜಿಎಸ್‌ಎಸ್ ನನ್ನನ್ನು ಕರೆದು, ನಿಮ್ಮ ಮಾತು ನನಗೆ ಹಿಡಿಸಿತು, ಚೆನ್ನಾಗಿ ಮಾತನಾಡಿದಿರಿ, ಎಂದು ಬೆನ್ನು ತಟ್ಟಿದರು. ನಾನು ಮೌನವಾಗಿ ತಲೆತಗ್ಗಿಸಿ ನಿಂತಿದ್ದೆ. ಇಂತಹ ಸಂದರ್ಭಗಳಲ್ಲೂ ಅವರು ಹೆಚ್ಚು ಮಾತನಾಡುತ್ತಿರಲಿಲ್ಲ.

ಜಿಎಸ್‌ಎಸ್ ಅವರ ಜೊತೆ ನಮ್ಮ ಒಡನಾಟ ಬೆಸೆಯುವ ಹೊತ್ತಿಗೆ ನಾವು ಅಂತಿಮ ಬಿ.ಎ ಗೆ ಬಂದಾಗ ಮತ್ತೆ ಅನೀರಿಕ್ಷಿತವಾಗಿ ಅವರು ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ಹೊರಟು ಹೋದರು. ನಮ್ಮ ಈ ಅಲ್ಪ ಕಾಲಾವಧಿಯ ಒಡನಾಟದ ಸಂಪರ್ಕ ಕಡಿದು ಹೋಯಿತು. ನಮ್ಮ ಅಧ್ಯಾಪಕ ವರ್ಗದಲ್ಲಿ ಜಿಎಸ್‌ಎಸ್ ಸಾಹಿತ್ಯದ ಅಪ್ಪಟ ಅಧ್ಯಾಪನ ಮಾದರಿಯಾಗಿದ್ದರು.

ಮೈಸೂರಿನಲ್ಲಿ ಸಾಂದರ್ಭಿಕವಾಗಿ ನಡೆಯುತ್ತಿದ್ದ ಕವಿಗೋಷ್ಠಿಗಳಲ್ಲಿ ಮತ್ತು ಸಾಹಿತ್ಯದ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಜಿಎಸ್‌ಎಸ್ ಬೆಂಗಳೂರಿನಿಂದ ಬರುತ್ತಿದ್ದರು. ಮೈಸೂರು ವಿಶ್ವವಿದ್ಯಾನಿಲಯದ ಚಿನ್ನದ ಹಬ್ಬದ ಅಂಗವಾಗಿ ಕನ್ನಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿಯಲ್ಲಿ ಏರ್ಪಡಿಸಿದ್ದ ಕವಿಗೋಷ್ಠಿಯಲ್ಲಿ ಜಿಎಸ್‌ಎಸ್ ಕವನ ಓದಿದರು. ಆ ವೇಳೆಗಾಗಲೇ ಜಿಎಸ್‌ಎಸ್ ಅವರ ನಿರ್ಗಮನದ ವಿದ್ಯಮಾನಗಳನ್ನು ಗ್ರಹಿಸಿದ್ದ ನಮಗೆ ಅವರ ಕವನ ವಾಚನದ ಪ್ರತಿಭಟನೆಯ ಧ್ವನಿಗಳು ಅರ್ಥವಾದವು. 'ಮೈಸೂರು ವಿಶ್ವವಿದ್ಯಾನಿಲಯದ ಚಿನ್ನದ ಹಬ್ಬಕ್ಕೆ' ಎಂಬ ಕವನವನ್ನು ಪ್ರತಿಭಟನೆಯ ದನಿಯಲ್ಲಿಯೇ ಸ್ವಲ್ಪ ಬಿರುಸಿನಿಂದಲೇ ಓದಿದರು:

> ನಾನು ನಿನ್ನ ದೇವಸ್ಥಾನಕ್ಕೆ ಬಿಟ್ಟ ಬಸವ
> ಕರುವಾಗಿ ಎಳೆಗುರುಕೆ ಮೇದು ಹೆಗ್ಗೂಳಿಯಾಗಿ
> ಗುಟುರು ಹಾಕಲು ಕಲಿತದ್ದು ಇಲ್ಲಿ;
> ಸುತ್ತ ಹತ್ತೂಕಡೆಗೆ ಹರಿದಾಡಿ ಹಸಿರು ಮೇದಿದ್ದೇನೆ
> ನಿಂತ ನೆಲೆಗಳನ್ನೆಲ್ಲ ಗೊರಸಿನಿಂದೊರಸಿ ಗಟ್ಟಿನೆಲ ಹುಡುಕುತ್ತಿದ್ದೇನೆ.

ಈ ಕವನ ಮಾರ್ಮಿಕವಾಗಿ ಅವರ ನಿರ್ಗಮನದ ನೋವನ್ನು ಸೂಚಿಸುತ್ತಿತ್ತು.

ಇಂತಹ ವೈಯಕ್ತಿಕ ನೋವುಗಳನ್ನೆಲ್ಲ ಮನಸ್ಸಿನಲ್ಲೇ ದಮನ ಮಾಡುತ್ತಿದ್ದ ಅವರು, ತಮಗಾದ ಅನ್ಯಾಯಕ್ಕೆ ಅಂದು ಕಾವ್ಯದ ಮೂಲಕ ಪ್ರತಿಭಟಿಸಿದರು.

ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಅವರು ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾದ ಮೇಲೆ ಜಿ.ಎಸ್.ಎಸ್ ಅವರ ಜೊತೆ ನಮ್ಮ ಒಡನಾಟದ ಅವಕಾಶಗಳು ಮತ್ತೆ ಪ್ರಾಪ್ತವಾದವು. ಆ ವೇಳೆಗಾಗಲೇ ನಾನು ಅಧ್ಯಾಪನ ವೃತ್ತಿಯನ್ನು ಪ್ರಾರಂಭಿಸಿದ್ದೆ. ಸಮಕಾಲೀನ ಸಾಹಿತ್ಯದ ನವೋದಯ-ನವ್ಯ ಕಾವ್ಯಮಾರ್ಗಗಳ ಬಗ್ಗೆ ಅವರು ಏರ್ಪಡಿಸುತ್ತಿದ್ದ ವಿಚಾರ ಸಂಕಿರಣಗಳು ಸಾಹಿತ್ಯದಲ್ಲಿ ಹೊಸ ಸಂವೇದನೆಯ ಸಂವಾದಗಳಿಗೆ ಪ್ರಚೋದನೆ ನೀಡಿದವು. ನವ್ಯ ವಿಮರ್ಶೆ ಆಧುನಿಕ ಕನ್ನಡ ಸಾಹಿತ್ಯದ ವಿಮರ್ಶಾ ಕ್ಷೇತ್ರವನ್ನು ವಿಸ್ತರಿಸಿದೂ ಅದರ 'ವಠಾರ ನಿಷ್ಠತೆ'ಯ ಬಗ್ಗೆ ಜಿಎಸ್‌ಎಸ್ ಅವರು ಆತಂಕಗೊಂಡಿದ್ದರು. ವಿಮರ್ಶೆಯ ನ್ಯಾಯದಲ್ಲಿ ನಡೆಯುತ್ತಿದ್ದ ನಯವಂಚನೆಯನ್ನು ಬಹಿರಂಗವಾಗಿ ಪ್ರಶ್ನಿಸುವ ಜರೂರನ್ನು ಕುರಿತು ಪೂರ್ಣಚಂದ್ರ ತೇಜಸ್ವಿ, ಪಿ. ಲಂಕೇಶ್, ಚಂಪಾ ಮತ್ತು ಪ್ರೊ ಎಂ.ಡಿ. ನಂಜುಂಡಸ್ವಾಮಿಯವರೊಂದಿಗೆ ಪ್ರಸ್ತಾಪಿಸಿದರು. ಇದಕ್ಕೆ ಸಹಮತ ವ್ಯಕ್ತವಾಯಿತು. ಆಗ ನಾವು ಸಮಾಜವಾದಿ ಆಂದೋಲನ ಮತ್ತು ವಿಚಾರವಾದಿ ಚಳವಳಿಯಲ್ಲಿ ನಿರತರಾಗಿದ್ದೆವು. ತೇಜಸ್ವಿಯವರು ಜಿಎಸ್‌ಎಸ್ ಮತ್ತು ಡಾ. ಚಿದಾನಂದಮೂರ್ತಿಯವರನ್ನು ತುಂಬ ಗೌರವಿಸುತ್ತಿದ್ದರು ಮತ್ತು ಅವರ ಅಭಿಪ್ರಾಯಗಳನ್ನು ಗಂಭೀರವಾಗಿ ಪರಿಗಣಿಸುತ್ತಿದ್ದರು. ಇದರ ಪರಿಣಾಮವಾಗಿ ತೇಜಸ್ವಿಯವರ ಸಲಹೆಯಂತೆ ಜಿಎಸ್‌ಎಸ್ ಅವರ ಅಧ್ಯಕ್ಷತೆಯಲ್ಲಿ 'ಕರ್ನಾಟಕ ಬರಹಗಾರರ ಮತ್ತು ಕಲಾವಿದರ ಒಕ್ಕೂಟ'ವನ್ನು ಸ್ಥಾಪಿಸಲು ನಿರ್ಧರಿಸಲಾಯಿತು. ಮೈಸೂರಿನಲ್ಲಿ ನಡೆದ ಅದರ ಪ್ರಥಮ ಸಮ್ಮೇಳನವನ್ನು ಕುವೆಂಪು ಅವರು ಉದ್ಘಾಟಿಸಿದರು. ಲಂಕೇಶ್ ಅವರ ಸಂಪಾದಕತ್ವದಲ್ಲಿ 'ಪಾಂಚಾಲಿ' ದೀಪಾವಳಿ ವಿಶೇಷ ಸಂಚಿಕೆ ಪ್ರಕಟಿಸಲಾಯಿತು.

ಒಕ್ಕೂಟದ ನಿರ್ಧಾರಗಳಿಗೆ ಬದ್ಧವಾಗದ ಕೆಲವರು ಅದರ ಆಶಯಗಳಿಗೆ ಅನುಗುಣವಾದ ರೀತಿಯಲ್ಲಿ ವರ್ತಿಸದಿರುವುದು ಮತ್ತು ಅದರ ತಾತ್ವಿಕ ನಿಲುವುಗಳ ಅವಸರದ ತೀರ್ಮಾನಗಳಿಂದಾಗಿ ಒಕ್ಕೂಟ ನಿಷ್ಕ್ರಿಯವಾಗಿ ಕ್ರಮೇಣ ಸ್ಥಗಿತವಾಯಿತು. ಆದರೂ ಒಕ್ಕೂಟದ ಸಮ್ಮೇಳನ ಉಂಟುಮಾಡಿದ ಕಂಪನಗಳು ನವ್ಯೋತ್ತರ ಸಾಹಿತ್ಯದ ಹೊಸ ಆಯಾಮಗಳಿಗೆ ಪ್ರೇರಣೆ ನೀಡಿದವು.

ಈ ಮಧ್ಯೆ ವಿಚಾರವಾದಿ ಆಂದೋಲನದ ಅಂಗವಾಗಿ ಜಾತಿ ವ್ಯವಸ್ಥೆಯ ವಿರುದ್ಧದ ಪ್ರತಿಭಟನಾ ಕಾರ್ಯಕ್ರಮದಲ್ಲಿ ಜಿಎಸ್‌ಎಸ್ ಭಾಗವಹಿಸಿದರು. ಬೆಂಗಳೂರಿನ ಲಾಲ್‌ಬಾಗ್‌ನಲ್ಲಿ ವೀರಶೈವ ಮಹಾಸಭಾದಿಂದ ಏರ್ಪಾಡಾಗಿದ್ದ ಅಖಿಲ ಭಾರತ ವೀರಶೈವ ಸಮ್ಮೇಳನವನ್ನು ವಿರೋಧಿಸಿ ನಾವು ಮಾಡಿದ ಪ್ರತಿಭಟನೆಯಲ್ಲಿ ಜಿಎಸ್‌ಎಸ್ ಮತ್ತು ಚಿದಾನಂದಮೂರ್ತಿ ಭಾಗವಹಿಸಿದ್ದರು. ಪ್ರೊ. ಎಂ.ಡಿ. ನಂಜುಂಡಸ್ವಾಮಿ, ಪಿ.ಲಂಕೇಶ್, ತೇಜಸ್ವಿ, ಚಂಪಾ ಮುಂತಾದವರ ಜೊತೆಯಲ್ಲಿ ಎಲ್ಲರೂ ಬಂಧನಕ್ಕೆ

ಒಳಗಾಗಬೇಕಾಯಿತು. ಇಂತಹ ಪ್ರತಿಭಟನೆಗಳ ಸ್ವಭಾವವೇ ಇಲ್ಲದ ಜಿಎಸ್‌ಎಸ್ ನಮ್ಮ ಸಹವಾಸದಿಂದ ಪೋಲಿಸ್ ಠಾಣೆಯ ಅನುಭವವನ್ನು ಪಡೆಯಬೇಕಾಯಿತು.

ಜೆ.ಪಿ ಯವರ 'ಸಂಪೂರ್ಣ ಕ್ರಾಂತಿ'ಯ ಚಳವಳಿಯಿಂದ ಪ್ರಭಾವಿತರಾದ ನಾವು ಕರ್ನಾಟಕದಲ್ಲಿ 'ನವ ನಿರ್ಮಾಣ ಕ್ರಾಂತಿ'ಯ ಚಳವಳಿಯನ್ನು ಪ್ರಾರಂಭಿಸಿ ಅದರ ಮುಂಚೂಣಿಯಲ್ಲಿ ಕಾರ್ಯನಿರತರಾದ್ದರಿಂದ ಬರಹಗಾರರ-ಕಲಾವಿದರ ಒಕ್ಕೂಟ ಸಂಪೂರ್ಣವಾಗಿ ಅವಸಾನ ಹೊಂದಿತು. ನಮ್ಮ ಮತ್ತು ಜಿಎಸ್‌ಎಸ್ ಅವರ ಸಂಪರ್ಕ ನಿಂತುಹೋಯಿತು. ಜಿಎಸ್‌ಎಸ್ ವಿರುದ್ಧ ನವ್ಯದ ವಠಾರದಿಂದ ಅನೇಕ ಹುನ್ನಾರಗಳು ನಡೆದವು. ಈ ರೀತಿಯ ಕಿರುಕುಳಗಳಿಂದ ಜಿಎಸ್‌ಎಸ್ ಮಾನಸಿಕ ಯಾತನೆಯನ್ನು ಅನುಭವಿಸಬೇಕಾಯಿತು. ಏಕಾಂಗಿಯಾಗಿ ಪರಿತಪಿಸಬೇಕಾಯಿತು.

ಗೋಕಾಕ್ ಭಾಷಾ ಚಳವಳಿ ಪ್ರಾರಂಭವಾದ ಮೇಲೆ ಮತ್ತೆ ಅವರ ಒಡನಾಟಕ್ಕೆ ಅವಕಾಶವಾಯಿತು. ಗೋಕಾಕ್ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದ ನಾವು *ಲಂಕೇಶ್ ಪತ್ರಿಕೆ*ಯ ಗಾಂಧಿಬಜಾರಿನ ಆಗಿನ ಕಛೇರಿಯಲ್ಲಿ ನಡೆಯುತ್ತಿದ್ದ ಸಮಾಲೋಚನಾ ಸಭೆಗಳಲ್ಲಿ ಭಾಗವಹಿಸಲು ಹೋದ ಸಂದರ್ಭಗಳಲ್ಲಿ ಅಲ್ಲಿಗೆ ಬರುತ್ತಿದ್ದ ಡಾ. ಚಿದಾನಂದಮೂರ್ತಿ ಮತ್ತು ಜಿಎಸ್‌ಎಸ್ ಅವರನ್ನು ಭೇಟಿ ಮಾಡುತ್ತಿದ್ದೆವು. ಚಿದಾನಂದಮೂರ್ತಿ ಚಳವಳಿಯ ಅಗ್ರ ಪಂಕ್ತಿಯ ನಾಯಕರಾಗಿದ್ದರು. ಜಿಎಸ್‌ಎಸ್ ಕೂಡ ಆಸಕ್ತಿಯಿಂದ ಅದರಲ್ಲಿ ಭಾಗವಹಿಸುತ್ತಿದ್ದರು. *ಲಂಕೇಶ್ ಪತ್ರಿಕೆ* ಗೋಕಾಕ್ ಚಳವಳಿಯ ಮುಖವಾಣಿಯಾಗಿತ್ತು.

ಲಂಕೇಶರು, ಜಿಎಸ್‌ಎಸ್ ಅವರನ್ನು ಗೌರವದಿಂದ ಕಂಡರೂ ನಿಷ್ಠುರತೆ ಇಲ್ಲದ ಮುಲಾಜುಗಳಿಂದ ಜಿಎಸ್‌ಎಸ್ ನಡೆದುಕೊಳ್ಳುತ್ತಾರೆಂದು ಅನೇಕ ಸಂದರ್ಭಗಳಲ್ಲಿ ಜಿಎಸ್‌ಎಸ್ ಅವರನ್ನು ಲೇವಡಿ ಮಾಡುತ್ತಿದ್ದರು. ಇದರಿಂದ ಜಿಎಸ್‌ಎಸ್ ಮುಜುಗರ ಅನುಭವಿಸಿದರೂ ಲಂಕೇಶ್‌ರನ್ನು ಪ್ರೀತಿಯಿಂದ ಕಾಣುತ್ತಿದ್ದರು.

ಲಂಕೇಶ್‌ರಿಗೆ 60 ವರ್ಷವಾದಾಗ ನಾವು ಮೈಸೂರಿನಲ್ಲಿ ನಡೆಸಿದ 'ಲಂಕೇಶ್ 60' ವಿಚಾರ ಸಂಕಿರಣವನ್ನು ಉದ್ಘಾಟಿಸಬೇಕೆಂದು ಕೇಳಿಕೊಂಡಾಗ ಯಾವ ಸಬೂಬುಗಳನ್ನೂ ಹೇಳದೆ ಪ್ರೀತಿಯಿಂದ ಉದ್ಘಾಟನೆ ಮಾಡಿದರು. ಈ ವಿಚಾರ ಸಂಕಿರಣದಲ್ಲಿ ಭಾಗವಹಿಸಲು ಅನೇಕ ಲೇಖಕರು ಒಂದೊಂದು ನೆಪಹೇಳಿ ನಮ್ಮ ಆಹ್ವಾನವನ್ನು ನಿರಾಕರಿಸಿದ್ದರು. ವಿಚಾರ ಸಂಕಿರಣ ಮುಗಿದ ನಂತರ ಲೇಖನಗಳನ್ನು ಸಂಕಲಿಸಿ ಆದಷ್ಟು ಬೇಗ ಪ್ರಕಟಿಸಬೇಕೆಂದು ಜಿಎಸ್‌ಎಸ್ ಒತ್ತಾಯಪಡಿಸುತ್ತಿದ್ದರು. ಆದರೆ ಆ ಕೆಲಸ ನನ್ನಿಂದ ಮಾಡಲಾಗಲಿಲ್ಲ.

ಲಂಕೇಶ್ ಅವರು ನವ್ಯದ ಹಿರಿಯ ಕವಿ ರಾಮಚಂದ್ರ ಶರ್ಮರಿಗೆ 70 ತುಂಬಿದಾಗ ಅವರನ್ನು ಅಭಿನಂದಿಸಲು ವಿಚಾರ ಸಂಕಿರಣ ಏರ್ಪಡಿಸಿ ಎಲ್ಲರನ್ನು ಆಮಂತ್ರಿಸಿ ಅಭಿನಂದನಾ ಕಾರ್ಯಕ್ರಮ ನಡೆಸಿದರು. ಜಿಎಸ್‌ಎಸ್ ಅವರಿಗೂ 70 ತುಂಬಿದಾಗ ಅಭಿನಂದನಾ ಕಾರ್ಯಕ್ರಮ ಮೈಸೂರಿನಲ್ಲಿ ಅಥವಾ ಬೆಂಗಳೂರಿನಲ್ಲಿ ಏರ್ಪಡಿಸಬೇಕೆಂಬ

ಆಸೆ ಇತ್ತು. ಈ ಕಾರ್ಯಕ್ರಮದ ಸ್ವರೂಪದ ಬಗ್ಗೆ ನನ್ನೊಂದಿಗೆ ಚರ್ಚಿಸಿದ್ದರು. ಆ ವೇಳೆಗಾಗಲೇ ಲಂಕೇಶರ ಆರೋಗ್ಯ ಕ್ಷೀಣಿಸಿ ಅವರು ಆಸ್ಪತ್ರೆ ಸೇರಬೇಕಾಯಿತು. ಲಂಕೇಶರ ಆಸೆ ಈಡೇರಲೇ ಇಲ್ಲ. ಲಂಕೇಶ್ ನಿರ್ಗಮಿಸಿಬಿಟ್ಟರು.

ನಾನು ಹೃದಯಾಘಾತದಿಂದ ಬೆಂಗಳೂರಿನ ಜಯದೇವ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾಗ ಜಿಎಸ್‌ಎಸ್ ಅನಿರೀಕ್ಷಿತವಾಗಿ ನನ್ನನ್ನು ನೋಡಲು ಬಂದೇಬಿಟ್ಟರು. ನನಗೆ ತುಂಬ ಸಂಕೋಚವಾಯಿತು. ಅವರಿಗೂ ಹೃದಯದ ಶಸ್ತ್ರಚಿಕಿತ್ಸೆಯಾಗಿತ್ತು. ಆಗ ಅವರನ್ನು ನಾನು ನೋಡಲು ಹೋದಾಗ 'ನೋಡಿ ನಾನು ಒಂದು ಲಕ್ಷ ಹಣಕೊಟ್ಟು ಪುನರ್ ಜನ್ಮಕೊಂಡುಕೊಂಡಿದ್ದೇನೆ' ಎಂದು ತಮಾಷೆಯಾಗಿ ಹೇಳಿದ್ದರು. ಅವರು ನನ್ನನ್ನು ನೋಡಲು ಬಂದಾಗ ನಾನು 'ಸಾರ್, ನನಗೂ ಒಂದು ಹೃದಯವಿದೆಯೆಂದು ಈಗ ಗೊತ್ತಾಯಿತು' ಎಂದು ತಮಾಷೆಯಾಗಿ ಹೇಳಿದೆ. ಅವರು ತೋರಿಸಿದ ಪ್ರೀತಿ ದೊಡ್ಡದು.

ಜಿಎಸ್‌ಎಸ್ ಅವರು ಹಣತೆಗಳನ್ನು ಹಚ್ಚುತ್ತಾ ಅಧ್ಯಾಪಕರಾಗಿ, ಕವಿಯಾಗಿ, ಕಾವ್ಯ ಮೀಮಾಂಸಕರಾಗಿ ಜೀವನದಲ್ಲಿ 'ದೀಪದ ಹೆಜ್ಜೆ' ಇಟ್ಟವರು. ಒಮ್ಮೊಮ್ಮೆ ನಮ್ಮಂತಹ ಪಂಜಿನವರ ಜೊತೆಯಲ್ಲೂ ಹೆಜ್ಜೆ ಹಾಕಿರುವುದು ಮತ್ತು ತಣ್ಣನೆಯ ಮಂದಹಾಸದ ಪ್ರೀತಿಯನ್ನು ತೋರಿರುವುದು ಎಂಥ ಸೋಜಿಗ!



# ಶಿಷ್ಯರು ಧನ್ಯರು

ಮಹೇಶ್ವರಪ್ಪ

**ಪ್ರ**ತಿಯೊಬ್ಬ ವ್ಯಕ್ತಿಯ ವಿದ್ಯಾರ್ಥಿ ಜೀವನದ ಸುದೀರ್ಘ ಅವಧಿಯಲ್ಲಿ ಅನೇಕ ಅಧ್ಯಾಪಕರು ತಮ್ಮದೇ ಆದ ರೀತಿಯ ಪ್ರಭಾವವನ್ನು ಬೀರಿರುತ್ತಾರೆ. ಆದರೂ ಅತ್ಯಂತ ಗಾಢ ಪ್ರಭಾವ ಬೀರಿ ಜೀವನ ಪರ್ಯಂತ ಮನಸ್ಸಿನಲ್ಲಿ ಉಳಿಯುವಂಥ ಅಧ್ಯಾಪಕರೊಬ್ಬರು ಇದ್ದೇ ಇರುತ್ತಾರೆ ಎಂಬುದರಲ್ಲಿ ಎರಡು ಮಾತಿಲ್ಲ. ಈ ರೀತಿ ಪ್ರಭಾವ ಬೀರಿದ ಗುರು-ಅರ್ಥಾತ್ ಶಿಕ್ಷಕರು ಪ್ರಾಥಮಿಕ ಹಂತದವರಿರಬಹುದು, ಪ್ರೌಢಶಾಲಾ ಹಂತದವರಿರ ಬಹುದು ಇಲ್ಲವೇ ಕಾಲೇಜಿನಂಥ ಪ್ರಬುದ್ಧ ಹಂತದವರಿರಬಹುದು. ಅದು ಆಯಾ ಶಿಷ್ಯರ ಸಂಸ್ಕಾರವನ್ನು ಆಧರಿಸಿದ್ದಾಗಿರುತ್ತದೆ. ವಿದ್ಯಾರ್ಥಿ ಜೀವನವನ್ನು ದಾಟಿ ಹೊಣೆಗಾರಿಕೆಯ ಸ್ಥಾನದಲ್ಲಿರುವ ಯಾರನ್ನೇ ಕೇಳಿದರೂ ಈ ಮಾತನ್ನು ಒಪ್ಪುವರು. ಅಂಥ ಗುರುವನ್ನು, ಅಧ್ಯಾಪಕರನ್ನು, ಶಿಕ್ಷಕರನ್ನು, ಪ್ರಾಧ್ಯಾಪಕರನ್ನು ನಮ್ಮ ಜನ ತುಂಬ ಆತ್ಮೀಯತೆಯಿಂದ ಮೇಷ್ಟು ಎಂದೇ ಕರೆಯುವುದು ಸರ್ವೇಸಾಮಾನ್ಯವಾಗಿದೆ. ಈ ಪದ ತುಂಬ ವ್ಯಾಪಕವಾದ ಅರ್ಥದಲ್ಲಿ ಬಳಕೆಯಾಗುತ್ತಿದೆ. ಕೆಲ ಸಂದರ್ಭಗಳಲ್ಲಿ ಸಂಕುಚಿತ ಅರ್ಥಕೊಡುವ ಸಂಭವವೂ ಇಲ್ಲದಿಲ್ಲ.

ಆಂಗ್ಲಭಾಷೆಯ 'ಮಾಸ್ಟರ್' ಪದವೇ ಅಪಭ್ರಂಶಗೊಂಡು 'ಮೇಷ್ಟು' ಎಂದಾಗಿದೆ. ಉತ್ತರ ಕರ್ನಾಟಕದಲ್ಲಿ 'ಮಾಸ್ತರ' ಎಂದು ಕರೆಯುವುದುಂಟು. ಈ ಪದಕ್ಕೆ ಒಡೆಯ, ಯಜಮಾನ, ಪ್ರಭುತ್ವವುಳ್ಳವನು ಎಂಬ ಅರ್ಥಗಳೂ ಇವೆ. ಭಾಷೆಯ ಮೇಲೆ ಪ್ರಭುತ್ವವುಳ್ಳವನು ಅಭಿವ್ಯಕ್ತಿಯ ಸಾಮರ್ಥ್ಯ ಹೊಂದಿದ್ದರೆ ವಿದ್ಯಾರ್ಥಿಗಳನ್ನು ಆಕರ್ಷಿಸುವುದು ಮಾತ್ರವಲ್ಲದೆ ಅವರ ಮೇಲೆ ಪ್ರಭುತ್ವನ್ನಿಟ್ಟುಕೊಂಡಿರಲೂ ಶಕ್ಯವಿದೆ. ಅಂಥವರು ಒಳ್ಳೆಯ ಮೇಷ್ಟ್ರೂ ಕೂಡ ಆಗಬಲ್ಲರು. 'ಮೇಷ್ಟ್ರ ಕೆಲಸ' ಎಂಬ ಪದ ನೀತಿ ಬೋಧೆಗೆ ಪರ್ಯಾಯವೆಂಬ ಧಾಟಿಯಲ್ಲೂ ಪ್ರಯೋಗದಲ್ಲಿದೆ.

ಕನ್ನಡದ ಶ್ರೇಷ್ಠ ಕವಿಗಳಲ್ಲಿ ಒಬ್ಬರೆನ್ನಿಸಿಕೊಂಡಿರುವ ಜಿ.ಎಸ್. ಶಿವರುದ್ರಪ್ಪನವರು 'ಜಿಎಸ್‌ಎಸ್' ಎಂದೇ ಸಾರಸ್ವತ ಪ್ರಪಂಚದಲ್ಲಿ ಖ್ಯಾತನಾಮರಾಗಿದ್ದಾರೆ. ಅವರು ಶ್ರೇಷ್ಠ ಪ್ರಾಧ್ಯಾಪಕರೂ ಎನ್ನಿಸಿಕೊಂಡಿದ್ದು ಅಸಂಖ್ಯಾತ ಅಭಿಮಾನಿ ಶಿಷ್ಯರನ್ನು ಹೊಂದಿದ್ದಾರೆ. ಅಂಥವರು ನನ್ನ ಗುರುಗಳಾಗಿದ್ದರು ಎಂದು ಹೇಳಿಕೊಳ್ಳುವುದಕ್ಕೆ ಅತೀವ ಸಂತಸವೆನಿಸುತ್ತದೆ.

ಕಣ್ಣೆದುರಿಗಿದ್ದು ಪಾಠಹೇಳಿ ಶಿಷ್ಯರ ಮೇಲೆ ಪ್ರಭಾವ ಬೀರುವುದಕ್ಕಿಂತ ಸಾನಿಧ್ಯದಿಂದ ದೂರವಿದ್ದೂ ಶಿಷ್ಯರ ಮೇಲೆ ಪ್ರಭಾವ ಬೀರುವಂತಹವರೇ ನಿಜವಾದ ಗುರು ಅರ್ಥಾತ್–ಮೇಷ್ಟ್ರು.

1953 ರಿಂದ 55ರವರೆಗೆ ನಾನು ಶಿವಮೊಗ್ಗೆಯ ಇಂಟರ್ ಮೀಡಿಯಟ್ (ಈಗಿನ ಸಹ್ಯಾದ್ರಿ) ಕಾಲೇಜಿನ ಕಲಾ ವಿಭಾಗದಲ್ಲಿ ವಿದ್ಯಾರ್ಥಿಯಾಗಿ ಕಲಿಯುವ ಅವಕಾಶ ದೊರೆತದ್ದು ಆಕಸ್ಮಿಕವಾದರೂ ಅನಿವಾರ್ಯವಾಗಿತ್ತು. ಮೆಟ್ರಿಕ್‌ನಂತರ ಒಂದು ವರ್ಷ ನನ್ನ ವಿದ್ಯಾಭ್ಯಾಸ ಸ್ಥಗಿತಗೊಂಡಿದ್ದರಿಂದ ಯಾವಾಗ ಕಾಲೇಜು ಬಾಗಿಲು ತೆಗೆದೀತು, ಯಾವಾಗ ಪಾಠ ಕೇಳೇನೊ ಎಂಬ ಅದಮ್ಯ ಉತ್ಸಾಹವಿತ್ತು. ಮೊದಲ ದಿನ ಕಾಲೇಜಿಗೆ ಹೋದಾಗ ಆಂಗ್ಲ ಮಾದರಿಯ ಉಡುಪು ಧರಿಸಿ ಟಿಪ್ ಟಾಪಾಗಿ ಅವರದೇ ಆದ ಗತ್ತಿನಲ್ಲಿ ತರಗತಿಗಳಿಗೆ ಹೋಗುತ್ತಿದ್ದ ಅಧ್ಯಾಪಕರನ್ನು ಬೆರಗುಗಣ್ಣುಗಳಿಂದ ನೋಡುತ್ತಿದ್ದೆ. ಅವರನ್ನು ಮಾತನಾಡಿಸಲಿಕ್ಕೇ ಭಯವಾಗುತ್ತಿತ್ತು. ಅಂಥವರ ಮಧ್ಯೆ ಬಿಳೀ ಜುಬ್ಬ ಧರಿಸಿ ಕಚ್ಚೆ ಪಂಚೆ ಉಟ್ಟು ತ್ರಿಕೋನಾಕಾರದಲ್ಲಿ ಮಡಿಸಿದ ಧೋತ್ರವನ್ನು ಹೊದ್ದು, ಚಿನ್ನದ ಮುಲಾಮು ಬಳಿದ ಕಡ್ಡಿ ಫ್ರೇಮಿನ ಚಸ್ಮ ಹಾಕಿಕೊಂಡು ಕನ್ನಡದ ತರಗತಿಗೆ ಪ್ರವೇಶಿಸಿದ ಜಿ.ಎಸ್. ಶಿವರುದ್ರಪ್ಪನವರನ್ನು ಮೊದಲ ದಿನ ನೋಡಿದಾಗ ಭಾರತೀಯ ಸಂಪ್ರದಾಯದ ಸಾಕಾರ ಮೂರ್ತಿಯಂತೆ ಗೋಚರಿಸಿದರು.

ಅವರು ಬೋಧಿಸಬೇಕಾಗಿದ್ದ ಪಠ್ಯಪುಸ್ತಕ, ಬಾಣಭಟ್ಟನ ಕಾದಂಬರಿ ಆಧಾರಿತ, ನಾಗವರ್ಮನಿಂದ ವಿರಚಿತವಾದ ಚಂಪೂಕಾವ್ಯ, *ಕರ್ನಾಟಕ ಕಾದಂಬರೀ ಸಂಗ್ರಹ.* ಪ್ರೌಢಶಾಲೆಯ ಹಂತದಲ್ಲಿ ಪಂಪನದೋ ರನ್ನನದೋ ಆದ ಒಂದೆರಡು ಚಂಪೂ ಧಾಟಿಯ ಪದ್ಯಗಳ ಪರಿಚಯವಾಗಿತ್ತು. ಕಬ್ಬಿಣದ ಕಡಲೆಯಂತಿರುವ ಇಡೀ ಕಾವ್ಯವನ್ನು ನೋಡಿದ ನನಗೆ ಗಾಬರಿಯಾಯ್ತು. ಸಂಸ್ಕೃತ ಭೂಯಿಷ್ಟ ಚಂಪೂಕಾವ್ಯವೆಂದರೆ ನಾರೀಕೇಳ ಪಾಕವಿದ್ದಂತೆ ಎಂಬ ಪೂರ್ವಸೂರಿಗಳ ಮಾತು ನೆನಪಾಯ್ತು. ತೆಂಗಿನ ಕಾಯಿಯ ಸಿಪ್ಪೆ ಸುಲಿದು, ಗುಂಜು ಕಿತ್ತು, ಕರಟ ಒಡೆದು, ತಿರುಳು ತೆಗೆದು, ಬಾಯಿಗೆ ಹಾಕಿಕೊಂಡು ಅಗಿದಾಗ ಅದರ ರಸಾಸ್ವಾದನೆಯಾಗುವಂತೆ ಜಿಎಸ್‌ಎಸ್‌ರವರು ಕಾವ್ಯದಲ್ಲಿನ ಒಂದೊಂದು ಪದ್ಯವನ್ನೂ ಬಿಡಿಸಿ ಓದಿ, ವ್ಯಾಖ್ಯಾನಿಸಿದ ಬೋಧನಾ ವೈಖರಿ ಎಂಥ ವಿಚಲಿತ ಮನಸ್ಕರನ್ನೂ ತಲ್ಲೀನಗೊಳಿಸುವಂತಿತ್ತು.

ಸಂಸ್ಕೃತದಲ್ಲಿ ವರ್ಣನಾ ವೈಖರಿಗೆ ಬಾಣಭಟ್ಟನನ್ನು ಬಿಟ್ಟರೆ ಅವನಿಗೆ ಸರಿಸಾಟಿ ಯಾಗಬಲ್ಲ ಮತ್ತೊಬ್ಬ ಕವಿಯಿಲ್ಲ ಎಂಬುದನ್ನು ನಾಗವರ್ಮನ ಈ ಕಾವ್ಯದ ಮೂಲಕ ಮನದಟ್ಟು ಮಾಡಿಕೊಟ್ಟು, ಆ ಕಾವ್ಯದ ಬಗ್ಗೆ ಅತೀವ ಆಸಕ್ತಿಯನ್ನು ಕೆರಳಿಸಿದ್ದರು. ಚಂಪೂಕಾವ್ಯ ಕೂಡ ಕಿವಿಗೆ ಇಂಪಾಗಬಲ್ಲುದು ಎಂಬುದನ್ನು ಪರಿಣಾಮಕಾರಿ ಬೋಧನೆಯ ಮೂಲಕ ವಿದ್ಯಾರ್ಥಿಗಳಿಗೆ ಮನದಟ್ಟು ಮಾಡಿಕೊಟ್ಟಿದ್ದರು. ಅಲ್ಲಿ ಬರುವಂಥ ನಾಯಕ ನಾಯಕಿಯರ, ಸೇವಕಿಯರ, ಕುದುರೆ, ಗಿಳಿಗಳಂಥ ಪ್ರಾಣಿಗಳ ವಿಚಿತ್ರ ಹೆಸರುಗಳು,

ಅವರ ಜನ್ಮಜನ್ಮಾಂತರದ ಕಥೆಗಳು ಸ್ವಾರಸ್ಯಕರವಾಗಿದ್ದು ಓದುಗರನ್ನು ಕಲ್ಪನಾ ಲಹರಿಯಲ್ಲಿ ತೇಲಿಸಿಕೊಂಡು ಹೋಗುತ್ತಿದ್ದವು. ವ್ಯಕ್ತಿಗಳ ಸ್ವಭಾವ ಚಿತ್ರಣ, ನಿಸರ್ಗವರ್ಣನೆ ಕಾವ್ಯದ ಸೊಗಸಿಗೆ ಕ್ಯಾನ್‌ವಾಸ್ ಒದಗಿಸಿದಂತಿತ್ತು. ಕಾವ್ಯದೊಳಕ್ಕೆ ಪ್ರವೇಶ ಮಾಡಿದರೆ ನಿಬಿಡವಾದ ಅರಣ್ಯಮಧ್ಯದಲ್ಲಿ ಸಿಕ್ಕಿಹಾಕಿಕೊಂಡವನಿಗೆ ದಿಕ್ಕುತೋಚದಂತಾಗಿ ಹೇಗೋ ಕಷ್ಟಪಟ್ಟು ದಾರಿ ಮಾಡಿಕೊಂಡು ಮುನ್ನಡೆಯ ಬೇಕೆನ್ನುವಷ್ಟರಲ್ಲಿ ಭಯಾನಕ ಮೃಗಗಳು ಎದುರಾದಂತೆ ಬರುತ್ತಿದ್ದ ಕ್ಲಿಷ್ಟಪದಗಳು ಗಾಬರಿ ಹುಟ್ಟಿಸುವಂತಿದ್ದವು. ಅಂಥ ಕಾವ್ಯವನ್ನು ಸರಳಗೊಳಿಸಿ ಸುಲಭವೇದ್ಯವಾಗುವಂತೆ ಮಾಡುತ್ತಿದ್ದ ಜಿಎಸ್‌ಎಸ್‌ರವರ ಬೋಧನಾ ವೈಖರಿ ಅಸದೃಶವಾಗಿತ್ತು. ಅರ್ಥವಾಗುವಂತೆ ಬಿಡಿಸಿ ಓದಲು ಹಾಕಿಕೊಂಡ ಗುರುತು ಹಾಗೂ ಕ್ಲಿಷ್ಟಪದಗಳ ಅರ್ಥದ ಬಗೆಗೆ ಬರೆದುಕೊಂಡಿದ್ದ ಟಿಪ್ಪಣಿಯುಕ್ತ ಪಠ್ಯ ಪುಸ್ತಕ ಇನ್ನೂ ನನ್ನಲ್ಲಿದೆ. 'ಸಹಜವೈರಿ ಎನಿಸಿದ ಸಿಂಹ, ಆನೆಯ ಮೇಲೆ ಎರಗಿದಾಗ ಅದರ ಕುಂಭಸ್ಥಳಕ್ಕೆ ಉಗುರು ತಾಕಿದಲ್ಲಿ ಹೊಮ್ಮಿದ್ದ ರಕ್ತದ ಹನಿಗಳಂತೆ ಕೆಂಪಾಗಿದ್ದ, ದಾಳಿಂಬೆ ಬೀಜಗಳ ರಸವನ್ನು ಆಸ್ವಾದಿಸಿದೆ' ಎಂದು ಚಂಡಾಲ ಕನ್ಯೆ ನೀಡಿದ ವಿವರಣೆಯಾಗಲಿ, ಮಹಾಶ್ವೇತೆಯ ಶರೀರದ ಸೌಂದರ್ಯವನ್ನು ಕಣ್ಣಿಗೆ ಕಟ್ಟಿದಂತೆ ವರ್ಣಿಸಿದ ಪದ್ಯಗಳು ಈಗಲೂ ನೆನಪಿನಲ್ಲಿವೆ.

ಜಿಎಸ್‌ಎಸ್, ತರಗತಿಯಲ್ಲಿನ ವೇದಿಕೆಯೇರಿ ಕುರ್ಚಿಯ ಮೇಲೆ ಕೂತು ಪಾಠಮಾಡಿದರೆ, ಸೂಜಿ ಬಿದ್ದರೂ ಕೇಳಿಸುವಂತಹ ನಿಶ್ಶಬ್ದವಾತಾವರಣವಿರುತ್ತಿತ್ತು. ತರಗತಿಯಲ್ಲಿ ಅವರು ಮುಖ ಗಂಟುಹಾಕಿಕೊಂಡ ಸಂದರ್ಭಗಳೇ ಇರುತ್ತಿರಲಿಲ್ಲ. ಅವರ ಮಾತನ್ನು ಕೇಳಲು ಚಾತಕಪಕ್ಷಿಯಂತೆ ಹಾತೊರೆದು, ವಿದ್ಯಾರ್ಥಿಗಳು ತದೇಕ ಚಿತ್ತರಾಗಿ ಕುಳಿತಿರುತ್ತಿದ್ದರು. ಸದಾ ಅವರ ಮುಖದಲ್ಲಿ ಗಾಂಭೀರ್ಯ ಎದ್ದು ಕಾಣುತ್ತಿತ್ತು. ಅವರ ಕಣ್ಣಾಳದಲ್ಲಿ ಏನನ್ನೋ ಪರಿಭಾವಿಸುವಂತಹ ಭಾವುಕತೆ ಬಿಂಬಿತವಾಗುತ್ತಿತ್ತು. ಎಂಥ ಸಂದರ್ಭದಲ್ಲೂ ಮುಗುಳುನಗೆ ಬೀರುವುದರ ಹೊರತಾಗಿ ಗಹಗಹಿಸಿ ನಕ್ಕದ್ದನ್ನು ಕಾಣಲಿಲ್ಲ. ಆತ್ಮೀಯರೊಂದಿಗೆ ಮಾತ್ರ ಮನಬಿಚ್ಚಿ ಸಲುಗೆಯಿಂದ ಮಾತನಾಡುವ ಸ್ವಭಾವ ಅವರದ್ದಾದರೂ ಎಂಥವರ ಮಧ್ಯೆಯೂ ನಿರ್ದಿಷ್ಟ ಅಂತರವನ್ನು ಕಾಪಾಡಿಕೊಳ್ಳುವ ಎಚ್ಚರ ಅವರ ಅಂತರಂಗದಲ್ಲಿ ಸದಾಕೆಲಸ ಮಾಡುತ್ತಿರುತ್ತದೆ. ಶ್ರೇಷ್ಠ ಕವಿಗಿರಬೇಕಾದ ಲಕ್ಷಣವೂ ಅದೇ.

ಅವರ ಪಾಠ ಕೇಳಿ ಕನ್ನಡ ಭಾಷೆಯ ಮೇಲೆ ಅಪಾರ ಅಭಿಮಾನ ಆಸಕ್ತಿಗಳನ್ನು ಬೆಳಸಿಕೊಂಡೆ. ಮುಂದೆ ಮಹಾರಾಜಾ ಕಾಲೇಜು ಸೇರಿ ಕನ್ನಡವನ್ನೇ ಐಚ್ಛಿಕ ವಿಷಯವನ್ನಾಗಿ ಆರಿಸಿಕೊಂಡು ಅದರಲ್ಲಿ ಹೆಚ್ಚು ಅಂಕ ಗಳಿಸಲು ಜಿಎಸ್‌ಎಸ್ ಹಾಕಿದ ಬುನಾದಿಯೇ ಕಾರಣವಾಯ್ತು ಎಂಬುದರಲ್ಲಿ ಸಂಶಯವಿಲ್ಲ. ಪದವಿ ಮುಗಿಸಿ ಪ್ರೌಢಶಾಲೆಯಲ್ಲಿ ಕೆಲ ವರ್ಷಗಳು ಅಧ್ಯಾಪಕನಾಗಿ ಕಾರ್ಯನಿರ್ವಹಿಸಿದ ಮೇಲೆ 1965ರಲ್ಲಿ ಸರ್ಕಾರದ ವತಿಯಿಂದ ಕನ್ನಡದಲ್ಲಿ ಸ್ನಾತಕೋತ್ತರ ವ್ಯಾಸಂಗಕ್ಕೆಂದು ಮೈಸೂರಿಗೆ ಬಂದೆ. ಗಂಗೋತ್ರಿ ಹಾಸ್ಟೆಲಿನಲ್ಲಿ ಸೀಟು ಸಿಗದ ಕಾರಣ ಮಹಾರಾಜಾ ಕಾಲೇಜ್ ಹಾಸ್ಟೆಲಿನಲ್ಲೇ ಒಂದು ವರ್ಷ

ತಂಗಬೇಕಾಯ್ತು. ಆಗ ಜಿಎಸ್‌ಎಸ್‌ರವರನ್ನು ತೀರ ಸನಿಹದಿಂದ ನೋಡುವ ಸದಾವಕಾಶ ದೊರಕಿತು. ಈ ಮಧ್ಯೆ ಜಿಎಸ್‌ಎಸ್ ಉಸ್ಮಾನಿಯಾ ವಿಶ್ವ ವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ನೇಮಕಗೊಂಡು ಕೆಲಕಾಲದ ನಂತರ ಮರುಭೂಮಿಯಲ್ಲಿ ವ್ಯವಸಾಯ ಮಾಡುವುದು ವ್ಯರ್ಥವೆಂದರಿತು, ಮಧ್ಯಂತರದಲ್ಲೇ ಮೈಸೂರಿಗೆ ಮರಳಿ, ಮಹಾರಾಜಾ ಕಾಲೇಜಿನಲ್ಲಿ ಅಧ್ಯಾಪಕರಾದರು. ಅನಿವಾರ್ಯ ಕಾರಣದಿಂದಾಗಿ ಅವರೂ ಮಹಾರಾಜಾ ಕಾಲೇಜು ಹಾಸ್ಟೆಲಿನಲ್ಲೇ ತಂಗಿದರು. ನಾನಿದ್ದ ಕೊಠಡಿಯ ಪಕ್ಕದಲ್ಲೇ ಇದ್ದ ಮತ್ತೊಂದು ಕೊಠಡಿಯಲ್ಲಿ ನನ್ನ ಮಿತ್ರ ಜಿ. ಟಿ. ಮರುಳಸಿದ್ದಪ್ಪ ಆಗ ಅರ್ಥಶಾಸ್ತ್ರಕ್ಕೆ ಸಂಬಂಧಪಟ್ಟ ವಿಷಯದಲ್ಲಿ ಪಿಎಚ್.ಡಿಗಾಗಿ ವ್ಯಾಸಂಗ ಮುಂದುವರಿಸಿದ್ದರು. ಅವರೂ ಶಿವರುದ್ರಪ್ಪನವರ ಆತ್ಮೀಯ ಶಿಷ್ಯರಲ್ಲೊಬ್ಬರಾಗಿದ್ದರು. ಅವರೊಂದಿಗೆ ಸಲಿಗೆಯಿಂದ ಮಾತನಾಡುವಷ್ಟರ ಮಟ್ಟಿನ ವಿಶ್ವಾಸ ಕೂಡ ಹೊಂದಿದ್ದರು. ಸಂಜೆ ಹೊತ್ತು ಮೂವರೂ ಒಟ್ಟಿಗೆ ಊಟಕ್ಕೆ ಹೋಗುವ ಪರಿಪಾಠವಿತ್ತು.

"ಸುಮಾರು 8.30ರ ಸಮಯಕ್ಕೆ ನನ್ನ ರೂಮಿನ ಹತ್ತಿರ ಬನ್ನಿ; ಮೆಲ್ಲಗೆ ಬಾಗಿಲು ಬಡಿಯಿರಿ; ನಾನೂ ರೆಡಿಯಾಗುತ್ತೇನೆ" ಎಂದಿದ್ದರು. ಜಿ.ಟಿ. ಮತ್ತು ನಾನು ಒಟ್ಟಿಗೇ ಹೋಗಿ ಅವರ ರೂಮಿನ ಬಾಗಿಲ ಬಳಿ ನಿಂತಾಗ ಜಿ.ಟಿ. ಮರುಳಸಿದ್ಧಪ್ಪನೇ ಮೆಲ್ಲಗೆ ಬಾಗಿಲು ಬಡಿದು ಸನ್ನೆಮಾಡಿದ. ಒಳಗೆ ಏನನ್ನೋ ಬರೆಯುತ್ತಿದ್ದ ಜಿಎಸ್‌ಎಸ್ ಅದನ್ನು ಮುಗಿಸಿ ಡ್ರಾನೊಳಗೆ ಮುಚ್ಚಿಟ್ಟು ತುಸು ಸಮಯದ ನಂತರ ಬಂದು ಬಾಗಿಲು ತೆರೆದು 'ಬನ್ನಿ ಬನ್ನಿ' ಎಂದು ಒಳಕ್ಕೆ ಕರೆದರು. ಅವರು ಊಟಕ್ಕೆ ಹೊರಡಲು ಸಿದ್ಧವಾಗುತ್ತಿದ್ದಾಗ ನನ್ನ ಮಿತ್ರ ಜಿ.ಟಿ. "ಅದೇನು ಬರೆದಿದ್ದೀರ, ತೆಗೀರಿ ಸಾರ್ ನೋಡೋಣ" ಎಂದು ಮಾಮೂಲಿ ಸಲಿಗೆಯಿಂದಲೇ ನುಡಿದ. ಅದಕ್ಕವರು "ಯಾವುದೇ ಬರವಣಿಗೆ ಅಚ್ಚಾಗಿ ಪ್ರಕಟವಾಗುವ ಮುನ್ನ ಇನ್ನೊಬ್ಬರಿಗೆ ತೋರಿಸಬಾರದು; ಕೃತಿಚೌರ್ಯವಾಗುವ ಸಾಧ್ಯತೆಯಿರುತ್ತೆ ಎಂದು ಕಾವ್ಯಮೀಮಾಂಸಕ ರಾಜಶೇಖರ ಹೇಳಿದ್ದಾನೆ" ಎಂದರು. ಪಟ್ಟು ಬಿಡದ ತ್ರಿವಿಕ್ರಮನಂತೆ "ತೆಗೀರಿ ಸಾರ್ ನಾವೇನು ಅದರಲ್ಲಿ ಕದ್ದು ಬರಿಯೋರಲ್ಲ" ಎಂದು ಜಿ.ಟಿ. ಹಿಂದಿನಂತೆಯೇ ಪುನರುಚ್ಚರಿಸಿದರು. ಅದಕ್ಕೆ ಜಿಎಸ್‌ಎಸ್ ಪ್ರತಿಕ್ರಿಯಿಸುತ್ತಾ, "ಅದಕ್ಕೇ ನೋಡು ನಿನಗೆ ಮರುಳು ಎಂದು ಹೆಸರಿಟ್ಟಿರುವುದು" ಎಂದು ಅಷ್ಟೇ ಸಹಜವಾಗಿ ನವಿರಾದ ಹಾಸ್ಯದೊಳಗೇ ವಿಡಂಬಿಸಿ ನುಡಿದರು. ಬರೆದು ಮುಚ್ಚಿಟ್ಟಿದ್ದನ್ನು ತೋರಿಸಲೇ ಇಲ್ಲ. ನಿಜವಾದ ಕವಿಗೆ ಅವನದೇ ಆದ ಬದ್ಧತೆಯಿರುತ್ತದೆ ಎಂಬುದನ್ನು ಅದು ವ್ಯಕ್ತಪಡಿಸಿದಂತಿತ್ತು.

ರಷ್ಯಾದೇಶ ಆಹ್ವಾನಿಸಿದ್ದರಿಂದ ಅಲ್ಲಿ 21 ದಿನ ಪ್ರವಾಸಮಾಡಿ ಹಿಂತಿರುಗಿದ ಮೇಲೆ ಚಿತ್ರದುರ್ಗದ ನಗರಸಭೆಯ ಅಧ್ಯಕ್ಷರಾಗಿದ್ದ ಕಮ್ಯೂನಿಸ್ಟ್ ಪಕ್ಷದವರಾದ ಕಾಮ್ರೇಡ್ ಚಂದ್ರಣ್ಣನವರು ನಮ್ಮ ಜಿಲ್ಲೆಯ ಕವಿ ಎಂಬ ಅಭಿಮಾನದಿಂದಾಗಿ ಜಿಎಸ್‌ಎಸ್ ಅವರನ್ನು ಆಹ್ವಾನಿಸಿ ಸನ್ಮಾನ ಮಾಡಿದರು. ಆ ಸಂದರ್ಭದಲ್ಲಿ ಸಾಹಿತಿ ರಾಘವೇಂದ್ರ ರಾವ್ ಅವರು

ಶಿವರುದ್ರಪ್ಪನವರ ಬಗ್ಗೆ ಮಾತನಾಡುತ್ತಾ ಅವರ ಹೆಸರಿನ ಸಂಕೇತಾಕ್ಷರಗಳಾಗಿರುವ ಜಿಎಸ್‌ಎಸ್ ಕುರಿತಂತೆ, ಮರ್ಜಿಗಾಗಿ ವರಿಷ್ಠರ ಮುಂದೆ ಬಾಗಿ 'ಜೀಯಾ' ಎನ್ನದ, ಇನ್ನೊಬ್ಬರ ಮಾತಿಗೆ ಯೋಚಿಸದೆ 'ಎಸ್.ಎಸ್..' ಎಂದು ತಲೆಹಾಕದ ವಿಶಿಷ್ಟ ವ್ಯಕ್ತಿತ್ವ ಎಂದದ್ದು ನನಗೆ ನೆನಪಿದೆ. ಆ ಸಂದರ್ಭದಲ್ಲಿ ಅಭಿಮಾನಿಗಳು ಸಂಗ್ರಹಿಸಿದ ನಿಧಿಯನ್ನು ಅರ್ಪಿಸಲು ಕೇಳಿಕೊಂಡಾಗ ನಿರಾಕರಿಸಿದ್ದು ಅವರ ನಿರ್ಲಿಪ್ತ ಧೋರಣೆಯ ದ್ಯೋತಕವಾಗಿತ್ತೆಂದರೆ ಅತಿಶಯೋಕ್ತಿಯೇನಲ್ಲ. ದುರ್ಗದಲ್ಲಿ ಅವರ ಸೋದರ ಸಂಬಂಧಿಗಳಿರುವುದರಿಂದ ಅಪರೂಪಕ್ಕೆ ಬಂದು ಹೋಗುವ ಪರಿಪಾಠವಿತ್ತು. ಮನೆಗೆ ಹೋಗುವಾಗಲೆಲ್ಲಾ ಸಣ್ಣ ಮಕ್ಕಳಿಗೆಂದು ಹಣ್ಣು, ಬಿಸ್ಕೀಟ್, ಇತ್ಯಾದಿ ತೆಗೆದುಕೊಂಡೇ ಹೋಗುತ್ತಿದ್ದುದನ್ನು ನೋಡಿದರೆ ಸದಾ ಕಲ್ಪನಾ ಲೋಕದಲ್ಲಿ ವಿಹರಿಸುವ ಕವಿಗೆ ಲೌಕಿಕದ ಸಂಪ್ರದಾಯಗಳ ಬಗೆಗೂ ಕಾಳಜಿಯಿರುತ್ತದೆ ಎಂದು ನನಗೆ ಮನವರಿಕೆಯಾಯ್ತು.

ಕುವೆಂಪುರವರ ಆತ್ಮೀಯ ಶಿಷ್ಯರಾಗಿ ಅವರ ಎಲ್ಲ ಉದಾತ್ತ ಗುಣಗಳನ್ನೂ ಮೈಗೂಡಿಸಿಕೊಂಡು ಅವರ ಪ್ರಶಂಸೆಗೇ ಪಾತ್ರರಾಗುವಂತಹ ಕವಿತೆಗಳನ್ನು ರಚಿಸಿದ್ದಾರೆಂದರೆ ಗುರುವಿಗೆ ಅದಕ್ಕಿಂತ ದೊಡ್ಡ ಬಹುಮಾನ ಇನ್ನೇನು ಬೇಕು! ತಮ್ಮ ಎಪ್ಪತ್ತೈದರ ಹರಯದಲ್ಲೂ ಅವರ ಪ್ರತಿಭೆಯ ಸ್ರೋತ, ಸೊರಗಿಲ್ಲವೆಂದಾಗ ಅವರು ತಮ್ಮ ಮಾನಸಿಕ ಸ್ವಾಸ್ಥ್ಯವನ್ನು ಚೆನ್ನಾಗಿ ಕಾಪಾಡಿ ಕೊಂಡಿರುವುದರ ದ್ಯೋತಕವೇ ಆಗಿದೆ. ಅಂಥ ಕವಿಯ ಲೇಖನಿಯಿಂದ ಮೂಡಿಬರುವ ಸಾಹಿತ್ಯ ಕೂಡ ಸಮಾಜದ ಸ್ವಾಸ್ಥ್ಯವನ್ನು ಕಾಪಾಡಬಲ್ಲದು. ಅವರು ಯಾವುದನ್ನೇ ಬರೆಯಲಿ, ಏನನ್ನೇ ಮಾತಾಡಲಿ ಅದರಲ್ಲಿ ಹಿಂದಿನವರ ಸವಕಲು ಮಾತನ್ನೇ ಬಳಸದೆ ಹೊಸ ಹೊಳವನ್ನು ಸೂಚಿಸುವ ವಾಕ್ ಸರಣಿ ಅವರ ನೈಜಪ್ರತಿಭೆಗೆ ಹಿಡಿದ ಕನ್ನಡಿ. ಇಂಥ ಗುರುಗಳಿಂದ ಪಾಠ ಕಲಿತ ಶಿಷ್ಯರು ಧನ್ಯರು, ಅಂತೆಯೇ ನಾಡೂ ಧನ್ಯ.

■

# ಬದುಕೇ ಬೆಳಕು ಎಂದ ಮಾರ್ಗದರ್ಶಿ

ಆರ್. ನಿರ್ಮಲ

1967ರಲ್ಲಿ ಮಹಾರಾಣಿ ಕಾಲೇಜು, ಬೆಂಗಳೂರಿನಲ್ಲಿ ದ್ವಿತೀಯ ಬಿ.ಎ. ಓದುತ್ತಿದ್ದೆ. ಅದೇ ವರ್ಷದ ಮೇ ತಿಂಗಳಿನಲ್ಲಿ ಶ್ರವಣಬೆಳುಗೊಳದಲ್ಲಿ 46ನೇ ಕನ್ನಡ ಸಾಹಿತ್ಯ ಸಮ್ಮೇಳನ. ಹಿರಿಯ ವಿದ್ವಾಂಸ ಆ. ನೇ. ಉಪಾಧ್ಯೆಯವರು ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು. ಮೂರುದಿನದ ವಿಚಾರಗೋಷ್ಠಿಗಳು, ಕವಿಗೋಷ್ಠಿ ಎಲ್ಲವನ್ನೂ ಮುಗ್ಧತೆಯಿಂದ ಮೆಚ್ಚಿಕೊಂಡಿದ್ದೆ. ಸಮ್ಮೇಳನದ ಸಲುವಾಗಿಯೇ ಏರ್ಪಡಿಸಿದ್ದ ಗೊಮ್ಮಟೇಶ್ವರನ ಮಹಾಮಸ್ತಕಾಭಿಷೇಕದ ದೃಶ್ಯವೂ ಅಪೂರ್ವವಾಗಿತ್ತು.

ಆಗಿನ್ನೂ ನನಗೆ ಹಿರಿಯರ ಸಾಹಿತಿಗಳ ಹಸ್ತಾಕ್ಷರ ಸಂಗ್ರಹಿಸುವ ಹದಿಹರೆಯದ ಸಹಜ ಆಸಕ್ತಿಯಿತ್ತು. ಸುಮಾರು ಸಾಹಿತಿಗಳ ಹಸ್ತಾಕ್ಷರವನ್ನು ಪಡೆದ ನನಗೆ, ಶ್ರೀ ಶಿವರುದ್ರಪ್ಪನವರ ಸಹಿ ಮಾತ್ರ ವಿಶಿಷ್ಟವಾಗಿ ಕಂಡಿತು. 'Life is light' ಎಂಬ ಪುಟ್ಟ ವಾಕ್ಯ ಬರೆದು ಸಹಿಹಾಕಿದ್ದರು, ದಿನಾಂಕದ ಸಮೇತ. ವಯಸ್ಸು ಅನುಭವಗಳೆಲ್ಲ ಮಾಗಿದ ಹಿರಿಯ ಕವಿಯೊಬ್ಬರು ಸಾಹಿತ್ಯಾಸಕ್ತಿ ಉಳ್ಳ ಅಪರಿಚಿತ ಹೆಣ್ಣುಮಗಳಿಗೆ 'ಬದುಕೇ ಬೆಳಕು' ಎಂದು ಸೂಚಿಸಿದ್ದರು. ತಾಯ್ತಂದೆಗಳ ಬೆಚ್ಚನೆಯ ಪ್ರೀತಿಯಲ್ಲಿ, ಹೊರಪ್ರಪಂಚದ ಅರಿವೇ ಇಲ್ಲದಿದ್ದ ಆ ದಿನಗಳಲ್ಲಿ ಆ ವಾಕ್ಯ ನಾಲ್ಕಾರು ದಿನ ತಲೆಯೊಳಗೇ ಗುಯ್‌ಗುಡುತ್ತಿತ್ತು. ಸಾಹಿತ್ಯಾಸಕ್ತಿ ಉಳ್ಳ ಕಿರಿಯರ ಬಗೆಗಿನ ಕವಿಯ ಕಾಳಜಿಯನ್ನು ಸೂಚಿಸುತ್ತಿತ್ತು.

ಆ ಸಮ್ಮೇಳನದಲ್ಲಿ ಪರಿಚಿತರಾಗಿ ಈಗ ಕುಟುಂಬ ಮಿತ್ರರೇ ಆಗಿರುವ ಜಯಚಂದ್ರ ಮೈಸೂರಿನಲ್ಲಾಗ ಎಂಎ. ಮಾಡುತ್ತಿದ್ದರು. ಕುವೆಂಪು ಅವರ ಮನೆ 'ಉದಯರವಿ'ಯಿದ್ದ ಮೈಸೂರನ್ನು ಕುರಿತು, ಅಲ್ಲಿಯ ಇನ್ನಿತರ ಕವಿ ಸಾಹಿತಿ ವಿದ್ವಾಂಸರನ್ನು ಕುರಿತು ಕುತೂಹಲ ನನಗೆ. ತಮಗೆ ಗೊತ್ತಿದ್ದ ಸಂಗತಿಗಳ, ಕಟ್ಟುಕತೆಗಳ ಗಂಟು ಬಿಚ್ಚಿ ಜಯಚಂದ್ರ ಮೈಸೂರಿನ ಸಾಹಿತ್ಯ ಪರಿಸರದ ಬಗ್ಗೆ ಬಹಳಷ್ಟು ಮಾತನಾಡಿದರು. ಅದರಲ್ಲಿ ಕವಿ ಜಿಎಸ್‌ಎಸ್ ಅವರ ಕವಿತೆ, ಕಾವ್ಯಮೀಮಾಂಸೆಯ ಗ್ರಂಥಗಳ ಬಗ್ಗೆ ಮಾತನಾಡುತ್ತಲೇ ಜಯಚಂದ್ರ ಈ ಕಥೆ ಹೇಳಿದರು.

ಜಿಎಸ್‌ಎಸ್ ಬೆಂಗಳೂರು ವಿಶ್ವವಿದ್ಯಾಲಯದ ಸ್ನಾತಕೋತ್ತರ ವಿಭಾಗದ ರೀಡರ್ ಹುದ್ದೆಗೆ ಸಂದರ್ಶನಕ್ಕೆ ಬಂದಿದ್ದರು. ಒಬ್ಬ ಸಂದರ್ಶಕರು, ಪಂಡಿತ ಕವಿ ಷಡಕ್ಷರದೇವನ

ಶಬರಶಂಕರ ವಿಳಾಸದಿಂದ ಒಂದು ಪದ್ಯವನ್ನು ಓದಲು ಸೂಚಿಸಿದರೂ ಜಿಎಸ್ಎಸ್ ನಿರಾಕರಿಸಿದರು. ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಎರಡು ವರ್ಷ ವಿಭಾಗ ಮುಖ್ಯಸ್ಥರಾಗಿದ್ದು ಕಾಲೇಜಿನಲ್ಲಿ ಹದಿನೈದು ವರ್ಷ ಅಧ್ಯಾಪಕ ವೃತ್ತಿಮಾಡಿದ ಅಧ್ಯಾಪಕನಿಗೆ ಒಂದು ಪದ್ಯ ಓದಲು ಬರುತ್ತದೋ ಇಲ್ಲವೋ ಎಂಬ ಸಂದರ್ಶಕರ ಶಂಕೆಯೇ ಜಿಎಸ್ಎಸ್ ಅವರ ಅಸಮಾಧಾನಕ್ಕೆ ಕಾರಣವಾಯಿತು. 'ಹೋಗಲಿ ಓದಬೇಡಿ, please enlighten me about the poem' ಎಂದು ಸಂದರ್ಶಕರಲ್ಲೊಬ್ಬರು ಕೇಳಿದರು. ಕವಿ ಪದ್ಯದ ಮೇಲೆ ಕಣ್ಣಾಡಿಸಿದರು. 'There is no light in the poem to enlighten you' ಎಂದರು. ಮುಂದೆ ಸಂದರ್ಶನ ಕವನ ವಾಚನದ ದಾರಿ ಹಿಡಿದು ಜಿಎಸ್ಎಸ್ ಆಯ್ಕೆಯಾಗಿದ್ದರು. ಇದೆಲ್ಲ ಬರಿಯ ಕಟ್ಟುಕತೆಯೆಂದು ನಿರಾಕರಿಸಿದೆ. ಜಯಚಂದ್ರ 'ತಾನು ಸುಳ್ಳು ಹೇಳುತ್ತಿಲ್ಲ' ಎಂದರು. ಇಂಥ ವಿಚಾರಗಳು ವಿದ್ಯಾರ್ಥಿಗಳಿಗೆ ಹೇಗೆ ಗೊತ್ತಾಗುತ್ತದೋ, ಅದಕ್ಕೆ ಏನೇನು ಬಣ್ಣ ಹಚ್ಚಿ ದಂತಕಥೆಯನ್ನಾಗಿಸುತ್ತಾರೋ ಒಂದು ಅನುಮಾನಿಸುತ್ತ ಇದ್ದುಬಿಟ್ಟೆ.

1986ರಲ್ಲಿ ಜಿಎಸ್ಎಸ್ ಅವರ ಅಸಮಗ್ರ ಆತ್ಮಕಥೆ 'ಚತುರಂಗ' ಪ್ರಕಟವಾಯಿತು. ಜಯಚಂದ್ರ ಹೇಳಿದ ಸಂಗತಿಯನ್ನು ಅದರ ಸಕಲ ವಿವರಣೆಯೊಂದಿಗೆ ಶಿವರುದ್ರಪ್ಪನವರೇ ಬರೆದುಕೊಂಡಿದ್ದರು. ಆಗಷ್ಟೇ ನನ್ನ ದೀರ್ಘಕಾಲದ ಅನುಮಾನ ಪರಿಹಾರವಾಯಿತು. ಜಿಎಸ್ಎಸ್ ಸಂದರ್ಶನದಲ್ಲಿ ನಡೆದುಕೊಂಡ ಬಗ್ಗೆ ಹೆಮ್ಮೆಯೆನಿಸಿತು.

ಜಿಎಸ್ಎಸ್ ಅವರು ಬದುಕಿನುದ್ದಕ್ಕೂ ಸ್ವಾಭಿಮಾನಿಯಾಗಿಯೇ ಇದ್ದಾರೆ. ತಮಗೆ ಎದುರಾದ ಅಡೆತಡೆಗಳನ್ನು ಧೈರ್ಯದಿಂದ ಎದುರಿಸುತ್ತ, ತಮ್ಮ ಅರ್ಹತೆಗೆ ಯೋಗ್ಯವಾದ ಹುದ್ದೆಗಳಿಗೆ ಪ್ರಾಮಾಣಿಕ ಪ್ರಯತ್ನ ಮಾಡುತ್ತ, ಯಾರ ವಶೀಲಿಗೂ ಬೀಳದೆ ಉಳಿದಿದ್ದಾರೆ. ಸರ್ಕಾರದ ಯಾವ ಅಧಿಕಾರ ಪ್ರಾಧಿಕಾರದ ಆಸೆ ಆಮಿಷಗಳಿಗೆ ಸಿಲುಕಲೂ ಇಲ್ಲ; ವಿಧಾನಸೌಧದ ಕಂಬಗಳನ್ನು ಸುತ್ತಲೂ ಇಲ್ಲ. ಕವಿಯ ಪ್ರಾಮಾಣಿಕ ಘನತೆಯನ್ನು ಕಾಯ್ದುಕೊಂಡರು, ತಮ್ಮ ಗಾಂಭೀರ್ಯವನ್ನೂ ಉಳಿಸಿಕೊಂಡರು.

ತಾನಾಗಿ ಬಂದ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷಸ್ಥಾನದಲ್ಲಿ ಹಲವು ಹೊಸ ಪ್ರಯೋಗಗಳನ್ನು ಮಾಡಿ, ರಾಜಧಾನಿಗೇ ಮೀಸಲಾಗಿದ್ದ ಅಕಾಡೆಮಿಯ ಚಟುವಟಿಕೆಗಳನ್ನು ಕರ್ನಾಟಕದ ವಿವಿಧ ಕಡೆಯಲ್ಲಿ ನಡೆಸುವ ಹೊಸ ಸಂಪ್ರದಾಯವನ್ನು ಹುಟ್ಟು ಹಾಕಿದರು. ಅಕಾಡೆಮಿಗೆ ಹೊಸ ಚಾಲನೆ ಕೊಟ್ಟರು.

1968-70ನೆಯ ಅವಧಿಯಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ರಂ.ಶ್ರೀ. ಮುಗಳಿ, ಜಿಎಸ್ಎಸ್, ಚಿದಾನಂದಮೂರ್ತಿ ಮೊದಲಾದ ಹಿರಿಯರ ಬಳಿ ಎಂ.ಎ. ಮಾಡುವ ಅವಕಾಶ ನನಗೆ ಸಿಕ್ಕಿತು. ಆಗ ಎ.ಆರ್.ಕೃ., ಟಿ.ಎಸ್. ವೆಂಕಣ್ಣಯ್ಯನವರು ಹುಟ್ಟುಹಾಕಿದ್ದ 'ಕರ್ನಾಟಕ ಸಂಘ'ಕ್ಕೆ ಸುವರ್ಣ ಮಹೋತ್ಸವ. ಶ್ರೀ ಜಿ. ವೆಂಕಟಸುಬ್ಬಯ್ಯನವರಿಂದ ಉದ್ಘಾಟನೆಗೊಂಡ ಕರ್ನಾಟಕದ ಸಂಘದ ಸುವರ್ಣಮಹೋತ್ಸವ, ವರ್ಷದುದ್ದಕ್ಕೂ

ನಡೆದು ಬಂತು. ಹಿರಿಕಿರಿಯ ಸಾಹಿತಿಗಳ, ನವೋದಯ ನವ್ಯರ ಉಪನ್ಯಾಸ ಮಾಲೆ ಆಗಾಗ ನಡೆಯುತ್ತಿತ್ತು. 1953-54ರಿಂದ ಹುಟ್ಟಿಕೊಂಡು, ತಮ್ಮದೇ ಪತ್ರಿಕೆಗಳ ಮೂಲಕ ನವ್ಯಸಾಹಿತ್ಯವನ್ನು ಅರ್ಥೈಸುತ್ತ ಅದಕ್ಕೊಂದು ತಾತ್ವಿಕ ಸಿದ್ಧಾಂತವನ್ನು ನವ್ಯದ ಮುಂಚೂಣಿಯ ಲೇಖಕರು ರೂಪಿಸುತ್ತಿದ್ದರು. ನವ್ಯ ವಿಮರ್ಶೆಯ ಹೆಸರಿನಲ್ಲಿ ನವೋದಯ ಸಾಹಿತ್ಯವನ್ನು ಪುನರ್ವಿಮರ್ಶೆ ಮಾಡುವ ಪ್ರಯತ್ನದಲ್ಲಿದ್ದರು. ಇದೆಲ್ಲವನ್ನೂ ಸಾಕ್ಷಿಪ್ರಜ್ಞೆಯಿಂದ ನೋಡುತ್ತ ನವೋದಯದ ಒಳಿತನ್ನು ಬಿಡದೆ, ನವ್ಯದ ಒಳಿತನ್ನು ಸ್ವೀಕರಿಸುವ ಪ್ರಯತ್ನ ಪ್ರಯೋಗಗಳನ್ನು ಆಗ ಜಿಎಸ್‌ಎಸ್ ನಡೆಸಿದ್ದರು. ಹೀಗಾಗಿ ಸುವರ್ಣ ಮಹೋತ್ಸವದ ಸಮಾರೋಪ ಸಮಾರಂಭದ ವೇದಿಕೆಯ ಮೇಲೆ ನವೋದಯದ ಹಿರಿಯರೂ ನವ್ಯದ ಅಧ್ವರ್ಯುಗಳೂ ಒಟ್ಟು ಸೇರುವಂತಾಯಿತು. ಈ ಮೂಲಕ ಸಾಹಿತ್ಯ ಸಂವಾದಕ್ಕೆ ಹೊಸಚಾಲನೆ ಸಿಕ್ಕಿತು.

ಬೆಂಗಳೂರು ವಿ.ವಿ. ಕನ್ನಡ ಅಧ್ಯಯನ ಕೇಂದ್ರ ಕಾಲಕಾಲಕ್ಕೆ ವಿವಿಧ ವಿಷಯಗಳ ಬಗ್ಗೆ ವಿಚಾರ ಸಂಕಿರಣಗಳನ್ನು ನಡೆಸುತ್ತಲೇ ಬಂದಿತು. ಅವನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುವ ಯೋಜನೆಯೂ ರೂಪುಗೊಂಡಿತು. ಕೇವಲ ನಾಲ್ಕು ವರ್ಷದ ಎಳೆಯ ಕೂಸಾದ ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಕೇಂದ್ರ ಪ್ರೌಢವಾಗಿ ಬೆಳೆಯಲೂ, ಕಾಲಕಾಲಕ್ಕೆ ಕನ್ನಡ ಸಾಹಿತ್ಯ ಪಡೆದುಕೊಳ್ಳುತ್ತಿದ್ದ ಹೊಸ ರೂಪಗಳನ್ನು ತಿರುವುಗಳನ್ನೂ ದಾಖಲಿಸುವ ಪ್ರಯತ್ನವೂ ನಡೆಯುತ್ತಲೇ ಬಂದಿತು. ಇವೆಲ್ಲಕ್ಕೂ ಜಿಎಸ್‌ಎಸ್ ಅವರ ವಿಶಿಷ್ಟವಾದ ಮುಂದಾಳ್ತನ ಕಾರಣವಾಗಿತ್ತು.

ಜಿಎಸ್‌ಎಸ್ ಅವರಿಗೆ ಕಾವ್ಯಮುಖ್ಯ, ಪಂಥಗಳಲ್ಲ. 'ಬರಹಗಾರರ ಒಕ್ಕೂಟ'ದ (1974) ಕಾಲದಿಂದ ಕನ್ನಡಕಾವ್ಯ ಹೊರಳು ದಾರಿಯನ್ನು ಹಿಡಿದದ್ದನ್ನೂ ಬಂಡಾಯ ದಲಿತ ಸಾಹಿತ್ಯದ ಸಾಮಾಜಿಕ ಬದ್ಧತೆಯನ್ನೂ, ನವ್ಯೋತ್ತರ ಕಾವ್ಯದ ಬೆಳವಣಿಗೆಯನ್ನೂ ಜಿಎಸ್‌ಎಸ್ ಕವಿಯಾಗಿ ಕಾವ್ಯಮಾಮೀಂಸಕರಾಗಿ ವಿಶ್ಲೇಷಿಸುತ್ತ, ಅರ್ಥೈಸಿಕೊಳ್ಳುತ್ತ ತಮ್ಮ ಕವನ ರಚನೆಯನ್ನೂ ಮುಂದುವರೆಸಿದರು. ನವೋದಯದ ಶ್ರೀಸಾಮಾನ್ಯನ ಬಗೆಗಿನ ಕಾಳಜಿಯನ್ನು ಬಿಡದೆ ನವ್ಯರ ವ್ಯಕ್ತಿ ನಿಷ್ಠ ಪ್ರತಿಮೆ ಪ್ರತೀಕಗಳಲ್ಲಿ ಒಳಿತೆನಿಸಿದ್ದನ್ನು ಯಾವ ಸಂಕೋಚವೂ ಇಲ್ಲದೆ ಸ್ವೀಕರಿಸಿದರು. ಅವರಿಗೆ ಸಮನ್ವಯ ಕವಿ ಎಂದೇಕೆ ವಿಮರ್ಶಕರು ಹಣೆಪಟ್ಟಿ ಕಟ್ಟಿದರೋ ಗೊತ್ತಿಲ್ಲ. ಸಾಹಿತ್ಯ ಪಂಥದ ಹಣೆ ಪಟ್ಟಿಗಿಂತ ಸಾಹಿತ್ಯದ ಸತ್ಯ ಸತ್ವ ಮೂಲ್ಯ. ಪಂಥದ ಹಣೆಪಟ್ಟಿಯೇ ಯಾವ ಸಾಹಿತ್ಯ ಕೃತಿಯ ಮೌಲ್ಯವನ್ನೂ ಹೆಚ್ಚಿಸಲಾರದು.

ಹೊಸ ಬರಹಗಾರರು ಯಾವ ಪಂಥದ ಹೆಸರಿನಲ್ಲಿ ಬರೆದರೂ ನಿಜವಾದ ಪ್ರತಿಭೆಯುಳ್ಳ ಶಿಷ್ಯರನ್ನು ಗುರುತಿಸಿ ಪ್ರೋತ್ಸಾಹಿಸುವ ದೊಡ್ಡಗುಣ ಜಿಎಸ್‌ಎಸ್ ಅವರದು. ಕೇವಲ ಕನ್ನಡ ಎಂ.ಎ. ವಿದ್ಯಾರ್ಥಿಗಳು ಮಾತ್ರವಲ್ಲ ಇತರ ವಿಭಾಗಗಳ ಪ್ರತಿಭಾವಂತ ಎಳೆಯರನ್ನು ಮೆಚ್ಚಿ ಬೆನ್ನುತಟ್ಟಿ ಮುನ್ನಡೆಸಿದರು. ಅವರ ಪ್ರೋತ್ಸಾಹದಿಂದ ಅನೇಕ ಪ್ರತಿಭಾವಂತ ಚಿಂತಕರೂ ವಿಮರ್ಶಕರೂ ಕವಿಗಳೂ ಕತೆಗಾರರೂ ಬೆಳಕಿಗೆ ಬಂದಿದ್ದಾರೆ.

ಈ ಕೆಲಸದಲ್ಲಿ ನೆರವಾದದ್ದು ಜಿಎಸ್ಎಸ್ ಅವರ ಸಂಘಟನಾ ಚಾತುರ್ಯ, ಕಾಲಕ್ಕೆ ನೀಡುತ್ತಿದ್ದ ಮಹತ್ವ ಹಾಗೂ ವಿದ್ಯಾರ್ಥಿಗಳನ್ನೂ ಸಹೋದ್ಯೋಗಿಗಳನ್ನೂ ಸಮಾನರಂತೆ ಕಾಣುವ ಸಹೃದಯತೆ. ಮತ್ತು ನಿರಂತರ ಚಟುವಟಿಕೆಯ ಕಾರ್ಯಶೀಲತೆ. ಯಾರೊಡನೆಯೂ ನಿಷ್ಠುರವಾದಿಯಾಗದ ಜಿಎಸ್ಎಸ್ ಅವರು ದಾವಣಗೆರೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾದಾಗ ವಿರೋಧದ ಧ್ವನಿ ಏಳಲಿಲ್ಲ.

ಎರಡು ವರ್ಷಗಳ ಕಾಲ ಅವರ ವಿದ್ಯಾರ್ಥಿನಿಯಾಗಿದ್ದು ನನ್ನ ಬದುಕಿನಲ್ಲಿ ಬಹುದೊಡ್ಡ ತಿರುವನ್ನು ತಂದಿತು. ಸದಭಿರುಚಿಯ ಸಾಹಿತ್ಯ, ಸಾಹಿತ್ಯೇತರ ಗ್ರಂಥಗಳನ್ನು ಗುರುತಿಸಿ ವ್ಯಾಸಂಗ ಮಾಡುವ, ಅವುಗಳ ಸಾರಗ್ರಹಣ ಮಾಡುವ ಶಕ್ತಿ ಬೆಳೆಯಿತು. ಬದುಕಿನುದ್ದಕ್ಕೂ ಸಾಹಿತ್ಯದ ವಿದ್ಯಾರ್ಥಿನಿಯಾಗಿಯೇ ಇದ್ದು ಬಿಡಬೇಕೆಂಬ ಅಪೇಕ್ಷೆ ಮೊಳೆಯಿತು.

ಜಿಎಸ್ಎಸ್ ಅವರ ಮುಖ್ಯ ಆಸಕ್ತಿಗಳು ಎರಡು—ಕಾವ್ಯಮೀಮಾಂಸೆ ಮತ್ತು ಕವಿತ್ವ. ಅವರದು ಸಹೃದಯ ವಿಮರ್ಶೆ, ವಿವರಣೆ. ಅಧ್ಯಾಪಕ ವೃತ್ತಿಯನ್ನು ಗಂಭೀರವಾಗಿ ಪರಿಗಣಿಸಿದ್ದ ಜಿಎಸ್ಎಸ್ ಒಬ್ಬ ಉತ್ತಮ ಅಧ್ಯಾಪಕರು. ಜಿಎಸ್ಎಸ್ ಅವರ ಒಂದೊಂದು ತರಗತಿಯೂ ಒಂದೊಂದು ರಸಘಟ್ಟಿ. ಪಂಪಭಾರತದ ಪಂಪನೇ ಕಣ್ಣಮುಂದೆ ಬಂದು ಕುಳಿತಂತಾಗುತ್ತಿತ್ತು. ಭಾವಗೀತೆಯ ತರಗತಿ ಎಂದರೆ ರಸಪೂರ್ಣ ಭಾವಗೀತಾವಾಚನ. ಕಾವ್ಯ ಮೀಮಾಂಸೆಯ ತರಗತಿಗೂ ರಸಲೇಪ. ಕವಿಯಾಗಿ ತನ್ನ ಅನುಭವಗಳನ್ನೇ ಉದಾಹರಿಸಿ ಸ್ಫೂರ್ತಿತತ್ವದ ವಿವರಣೆ. ಎಂದೋ ಎಲ್ಲೋ ಕನಸಿನಲ್ಲೋ ರೂಪುಗೊಂಡ ಒಂದು ಸಾಲು, ಎಷ್ಟೋ ಕಾಲಾವಧಿಯ ಮೇಲೆ ಅಚ್ಚುಕಟ್ಟಾದ ಕಾವ್ಯಶಿಲ್ಪದ ಕವನವಾಗಿ ಬೆಳೆಯುತ್ತಿದ್ದುದನ್ನು ವಿವರಿಸುತ್ತಿದ್ದರೆ, ನಮಗೆ ಕವಿಮನದ ಒಳಹೊಕ್ಕ ಅನುಭವ. ಪಾಠಮಾಡುತ್ತ ಅವರು ಕವಿಯಾಗಿ ಸಹೃದಯಿಯಾಗಿ ರಸಾಸ್ವಾದನೆಯ ಅರ್ಥಪೂರ್ಣ ಮೌನದಲ್ಲಿ ಕೆಲಕ್ಷಣಗಳನ್ನು ಕಳೆಯುತ್ತಿದ್ದರೆ, ವಿದ್ಯಾರ್ಥಿಗಳಾದ ನಾವೂ ಮೂಕವಿಸ್ಮಿತರಾಗಿ ನಿಷ್ಪಂದವಾಗಿ ಕುಳಿತುಕೊಳ್ಳುತ್ತಿದ್ದೆವು. ಅವರ ಔಚಿತ್ಯಪೂರ್ಣ ವಿಮರ್ಶೆಯೂ ನಮ್ಮ ವ್ಯಾಸಂಗದ ಅಗಲ ಆಳಗಳನ್ನು ವಿಸ್ತರಿಸುತ್ತಿದ್ದವು.

ಕುವೆಂಪು ಅವರ ನೇರ ಶಿಷ್ಯಪರಂಪರೆಗೆ ಸೇರಿದವರಲ್ಲಿ ಜಿಎಸ್ಎಸ್ ಅಗ್ರಮಾನ್ಯರು. ರಾಮಕೃಷ್ಣಾಶ್ರಮದ ಬಗ್ಗೆ ಕೂಡ ಗೌರವವುಳ್ಳವರು. ಆಗಾಗ ರಾಮಕೃಷ್ಣಾಶ್ರಮದ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುತ್ತಾರೆ. ಅವರ ಪತ್ನಿ ಶ್ರೀಮತಿ ರುದ್ರಾಣಿಯವರು ಸ್ಥಾಪಿಸಿರುವ 'ಸಂಧ್ಯಾ ದೀಪ' ವೃದ್ಧಾಶ್ರಮದ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿರುತ್ತಾರೆ. ಜಿಎಸ್ಎಸ್ ಅವರ ಸ್ವಂತ ರಚನೆ 'ಶಾರದಾ ದೇವಿ'ಯನ್ನು ಕುರಿತ ಸ್ತುತಿಯನ್ನು ಸ್ವಾಮಿ ಪುರುಷೋತ್ತಮಾನಂದಜೀ ಅವರೂ ಸೇರಿದಂತೆ ಬಹಳ ಮೆಚ್ಚಿಕೊಂಡಿದ್ದಾರೆ. ಆ ಕವನದ ಕೆಲವು ಸಾಲುಗಳನ್ನು ಇಲ್ಲಿ ಉಲ್ಲೇಖಿಸಬಯಸಿದ್ದೇನೆ—

**ರಾಮಕೃಷ್ಣ ತಪೋವನದ**
**ಪರ್ಣಕುಟಿಯ ದೀಪವೇ**
**ಬಳಿಗೆ ಬಂದ ಪಣತೆಗಳಿಗೆ**
**ಬೆಳಕನಿತ್ತ ಕಿರಣವೇ**
**ಮೌನ ಪ್ರಭಾವಲಯವೇ**

**ನದಿ ನದಿಗಳ ವಾತ್ಸಲ್ಯದ**
**ಹಾಲವಾಡಿದ ತೀರ್ಥವೇ**
**ದಿವ್ಯಕೃಪಾರೂಪವೇ**

ಈಗ ಜಿಎಸ್‌ಎಸ್ ಅವರನ್ನು ನೆನಪು ಮಾಡಿಕೊಂಡಾಗಲೆಲ್ಲ 28.5.67ರಲ್ಲಿ ಬರೆದ 'life is light' ಪದಗುಚ್ಛ ನೆನಪಾಗುತ್ತದೆ. ನಿಜ, ಕಾವ್ಯ ದೊಡ್ಡದು; ಬದುಕು ಅದಕ್ಕಿಂತ ದೊಡ್ಡದು. ಬದುಕೇ ಬೆಳಕು ಎನ್ನುವ ಶ್ರದ್ಧೆ ಇನ್ನೂ ದೊಡ್ಡದು. ನಿಗರ್ವಿ ಮಿತಭಾಷಿ ಜಿಎಸ್‌ಎಸ್ ಅವರಿಗೆ ಶ್ರದ್ಧಾಪೂರ್ವಕ ಪ್ರಣಾಮಗಳನ್ನು ಈ ಮೂಲಕ ಸಲ್ಲಿಸುತ್ತೇನೆ.



# ನನ್ನ ಪೂರ್ವಜನ್ಮದ ಭಾಗ್ಯ

**ಟಿ. ಎಸ್. ದಕ್ಷಿಣಾಮೂರ್ತಿ**

**ಜಿ**ಎಸ್‌ಎಸ್ ಅವರು ನನಗೆ ಬಹಳ ಮೆಚ್ಚಿಗೆಯಾದ ಗುರುಗಳು. ನಾನು ಪ್ರಾಥಮಿಕ ಶಾಲೆಯಿಂದ ಎಂ.ಎ.ದವರೆಗೆ ಕಂಡ ಅನೇಕ ಗುರುಗಳಲ್ಲಿ ಸುಮಾರು 5 ಅಥವಾ 6 ಜನ ಮಾತ್ರ ನನ್ನ ಬದುಕಿನ ಮೇಲೆ ವಿಶೇಷ ಪರಿಣಾಮ ಬೀರಿದ್ದಾರೆ. ಅವರಲ್ಲಿ ಜಿಎಸ್‌ಎಸ್ ಕೂಡ ಒಬ್ಬರು. ಮತ್ತು ಪ್ರಮುಖರು.

ಜಿಎಸ್‌ಎಸ್ ಅವರನ್ನು ನಾನು ಮೊದಲ ಬಾರಿಗೆ ನೋಡಿದ್ದು ನನ್ನ ಗುರುಗಳಾದ ಪ್ರೊ. ಕೆ.ಜಿ. ನಾಗರಾಜಪ್ಪನವರ ಜೊತೆ ಅವರ ಮನೆಯಲ್ಲಿ. ಆಗ ಅವರು ಗವಿಪುರಂ ಬಡಾವಣೆಯಲ್ಲಿ (ರಾಮಕೃಷ್ಣಾಶ್ರಮದ ಪಕ್ಕ), ಈಗ ವಾಸವಾಗಿರುವ ಬನಶಂಕರಿಯಲ್ಲಿರುವ 'ಚೈತ್ರ'ಕ್ಕೆ ಬರುವ ಮುನ್ನ ವಾಸಿಸುತ್ತಿದ್ದರು. ನಾನು ಜಿಎಸ್‌ಎಸ್ ಅವರನ್ನು ಅನಂತರ ನೋಡಿದ್ದು ಪ್ರಥಮ ಎಂ.ಎ. ತರಗತಿಯ ವಿದ್ಯಾರ್ಥಿಯಾಗಿ. ಎಂ.ಎ. ತರಗತಿಗಳು ಆಗ ಸೆಂಟ್ರಲ್ ಕಾಲೇಜಿನಲ್ಲಿ ನಡೆಯುತ್ತಿದ್ದವು. ಕನ್ನಡ ಅಧ್ಯಯನ ಕೇಂದ್ರ ಆಗಿನ್ನು ಸೆಂಟ್ರಲ್ ಕಾಲೇಜಿನಲ್ಲಿಯೇ ಇತ್ತು. ಜಿಎಸ್‌ಎಸ್ ಕನ್ನಡ ಅಧ್ಯಯನ ಕೆಂದ್ರದ ಪ್ರಾಧ್ಯಾಪಕರು ಹಾಗು ನಿರ್ದೇಶಕರು ಆಗಿದ್ದರು. ಕನ್ನಡ ಅಧ್ಯಯನ ಕೇಂದ್ರ ಇಡೀ ರಾಜ್ಯದಲ್ಲಿ ಹೆಸರುವಾಸಿಯಾಗಿತ್ತು. ಇದಕ್ಕೆ ಕಾರಣ ಜಿಎಸ್‌ಎಸ್.

1972ರ ಆಗಸ್ಟ್ ತಿಂಗಳಲ್ಲಿ ಎಂ.ಎ. ತರಗತಿಗಳು ಆರಂಭವಾದವು. ನಾನು 'ಭಾವಗೀತೆ'ಯನ್ನು ಒಂದು ವಿಶೇಷ ವಿಷಯವನ್ನಾಗಿ ತೆಗೆದುಕೊಂಡಿದ್ದೆ. ಭಾವಗೀತೆಯ ಕ್ಲಾಸ್‌ಗೆ ಜಿಎಸ್‌ಎಸ್ ಬಂದರು. ಅಚ್ಚ ಬಿಳಿಯ ಕಚ್ಚೆ ಪಂಚೆ, ಹಾಲಿನಂತಹ ಬಿಳಿಯ ಹಲ್ಲುಗಳು, ಕನ್ನಡಕ, ಕುರ್ಚಿಯಲ್ಲಿ ಕುಳಿತು ಪಾಠ ಹೇಳುವ ರೀತಿ ಅತ್ಯಂತ ಆಕರ್ಷಕವಾಗಿತ್ತು.

ಮೊದಲ ದಿವಸ 'Lyric'-ಬಗ್ಗೆ ಹೇಳಿದರು. ಇದು Lyre ಎನ್ನುವ ತಂತಿ ವಾದ್ಯದಿಂದ ಬಂದ ರೀತಿ, ಇದರ ಸಹಾಯದೊಂದಿಗೆ ಹಾಡುವ ಗೀತೆಯನ್ನು ಭಾವಗೀತೆ ಯೆಂದು ಕರೆದ ಬಗೆ ಇತ್ಯಾದಿಗಳನ್ನು ಹೇಳಿ; Lyric ಎಂದರೆ ಭಾವಗೀತೆ; ಇದು ಕನ್ನಡಕ್ಕೆ ಇಂಗ್ಲೀಷಿನಿಂದ ಬಂದಿದೆ ಎಂದು ತಿಳಿಸಿದರು. ವರ್ಡ್ಸ್‌ವರ್ತ್ ಕೀಟ್ಸ್, ಶೆಲ್ಲಿ—ಇವರುಗಳ ಪದ್ಯಗಳನ್ನು ಹೇಳುತ್ತಾ, ಅದೇ ವಿಷಯಗಳನ್ನು ಕನ್ನಡದ ಕವಿಗಳು ಹೇಗೆ ಬರೆದಿದ್ದಾರೆ ಮುಂತಾದ ವಿಷಯವನ್ನು ವಿವರವಾಗಿ, ಸರಳವಾಗಿ, ಆತ್ಮೀಯವಾಗಿ ಹೇಳಿದರು.

ವರ್ಡ್ಸ್‌ವರ್ತ್‌ನ Introduction to the lyrical ballad ನಲ್ಲಿಯ ಮಾತುಗಳಲ್ಲಿ quote ಮಾಡುತ್ತಾ ಭಾವಗೀತೆಯ ಲಕ್ಷಣಗಳನ್ನು ವಿವರಿಸುತ್ತಿದ್ದರು. ಭಾವಗೀತೆಗೆ-ಭಾವನೆ (Feeling) ಹಾಗು ಗೇಯತೆ-ಇರಬೇಕು; ಯಾವುದೇ ವಸ್ತು ಭಾವಗೀತೆಯ ವಸ್ತುವಾಗಬಲ್ಲದು; ಒಂದು ಕ್ಷಣದ ಅನುಭವವೆ ಒಳ್ಳೆಯ ಭಾವಗೀತೆಯಾಗಬಲ್ಲದು ಎನ್ನುವುದನ್ನು—Lyric is a momentous monument ಎಂದು ವಿವರಿಸುತ್ತಿದ್ದರು.

ಬಿ.ಎಂ. ಶ್ರೀಯವರ ಇಂಗ್ಲೀಷ್ ಗೀತೆಗಳು ಕನ್ನಡ ಸಾಹಿತ್ಯದಲ್ಲಿ ಹೊಸತೊಂದು ಕಾವ್ಯಮಾರ್ಗ ಆರಂಭವಾಗಲು ಯಾವ ರೀತಿ ಸಹಕಾರಿಯಾಯಿತು ಎನ್ನುವದನ್ನು ವಿವರಿಸುತ್ತಾ; ಕುವೆಂಪು ಅವರ ಆರಂಭದ ಗೀತೆಗಳು—ವರ್ಡ್ಸ್‌ವರ್ತ್ ನಿಂದ ಹೇಗೆ ಪ್ರಭಾವಿತವಾಗಿವೆ ಎನ್ನುವುದನ್ನು ಬಿಡಿಸಿ ಬಿಡಿಸಿ ಹೇಳುತ್ತಿದ್ದರು.

ಕುವೆಂಪು ಅವರ 'ಪಕ್ಷಿಕಾಶಿ' ನಮಗೆ ಪಠ್ಯವಾಗಿತ್ತು. ಈ ಒಂದು ಕವನ ಸಂಕಲನದ ಮೂಲಕ ಕುವೆಂಪು ಅವರ ಪ್ರಕೃತಿ ಪ್ರೇಮ; ಪ್ರಕೃತಿಯೇ ಪರಮಾತ್ಮನೆಂಬ ನಂಬಿಕೆ—ಮುಂತಾದ ವಿಚಾರಗಳನ್ನು ವಿವರಿಸುತ್ತಿದ್ದರು. ಅವರ ಸಂಸ್ಕೃತಮಯವಾದ ಭಾಷೆ ಬಗ್ಗೆ ವಿಮರ್ಶಿಸುತ್ತಿದ್ದರು. ಕುವೆಂಪು ಕನ್ನಡದ ವರ್ಡ್ಸ್‌ವರ್ತ್ ಎಂದು ಹೇಳುತ್ತಿದ್ದರು. ಹಾಗೆಯೇ, ಬೇಂದ್ರೆ, ಪು.ತಿ.ನ., ಕೆ.ಎಸ್.ನ., ಗೋಪಾಲಕೃಷ್ಣ ಅಡಿಗರ ಕವಿತೆಗಳನ್ನು ಅರ್ಥೈಸುವ ಮೂಲಕ ಅವರ ಎಲ್ಲಾ ಸಾಹಿತ್ಯವನ್ನು ಯಾವ ದೃಷ್ಟಿಯಿಂದ ನೋಡಬೇಕು ಎನ್ನುವುದನ್ನು ಮನದಟ್ಟಾಗುವಂತೆ ತಿಳಿಸುತ್ತಿದ್ದರು. ನವೋದಯ ಕವಿಗಳ ಬಗ್ಗೆ ಹೇಳುವಾಗ ಅಪಾರ ಅಭಿಮಾನವಾಗಲಿ, ನವ್ಯ ಕವಿಗಳ ವಿಚಾರದಲ್ಲಿ ಅನಾದರವಾಗಲಿ ಇರುತ್ತಿರಲಿಲ್ಲ. ಎಲ್ಲರನ್ನೂ, ಎಲ್ಲವನ್ನೂ ಸಮಾನ ದೃಷ್ಟಿಯಿಂದ ನೋಡುತ್ತಿದ್ದ ರೀತಿ ಮಾತ್ರ ನಮಗೆ ಬಹಳ ಮೆಚ್ಚುಗೆಯಾಗುತ್ತಿತ್ತು. ಜಿಎಸ್‌ಎಸ್ ಅವರು ಒಂದು ಗಂಟೆಯ ಪಾಠ ನಾವು ನೂರು ಪುಸ್ತಕಗಳನ್ನು ಓದಿದರೂ ಲಭ್ಯವಾಗದಷ್ಟು ಮಾಹಿತಿಯನ್ನು, ವಿಚಾರವನ್ನು, ವಿಮರ್ಶೆಯನ್ನು ಒದಗಿಸುತ್ತಿತ್ತು. ಜಿಎಸ್‌ಎಸ್ ಅವರ ತರಗತಿಯೆಂದರೆ ನಮಗೆಲ್ಲ ಒಂದು ರೀತಿಯ ಸ್ವರ್ಗ.

ಈ ರೀತಿ ಸಂತೋಷದಲ್ಲಿ ಪ್ರಥಮ ವರ್ಷದ ಎಂ.ಎ. ಓದುತ್ತಿರುವಾಗ ಒಂದು ದಿನ ನಮಗೆಲ್ಲ ಬೇಸರದ ಸಂಗತಿಯೊಂದು ತಿಳಿಯಿತು. "ಭಾರತ-ಸೋವಿಯತ್ ಸಾಂಸ್ಕೃತಿಕ ವಿನಿಮಯ ಯೋಜನೆ"ಯಡಿ ಸಂದರ್ಶಕ ಪ್ರಾಧ್ಯಾಪಕರಾಗಿ ಪ್ರೊ.ಜಿಎಸ್‌ಎಸ್ ಮಾಸ್ಕೋಗೆ ಹೋಗಲಿದ್ದಾರೆ ಎಂದು. ನಮ್ಮ ಪ್ರೊಫೆಸರ್ ಮಾಸ್ಕೋಕ್ಕೆ ಹೋಗುತ್ತಿರುವುದು ಸಂತಸದ ಸುದ್ದಿಯಾದರೂ, ಸುಮಾರು ಒಂದು ತಿಂಗಳು ಅವರ ಪಾಠ ಕೇಳುವ ಅವಕಾಶ ತಪ್ಪಿತಲ್ಲ ಎನ್ನುವ ನೋವು ಅಷ್ಟೆ. ಕನ್ನಡ ಅಧ್ಯಯನ ಕೇಂದ್ರದ ಅಧ್ಯಾಪಕರು, ತಮ್ಮ ಸೀನಿಯರ್ ವಿದ್ಯಾರ್ಥಿಗಳು ನಾವೆಲ್ಲರೂ ಸೇರಿ ಬೀಳ್ಕೊಡುಗೆ ಸಮಾರಂಭವನ್ನು ಏರ್ಪಡಿಸಿದೆವು.

ಪ್ರೊ. ಜಿ.ಎಸ್. ಶಿವರುದ್ರಪ್ಪನವರು ಮಾಸ್ಕೊ ಪ್ರವಾಸ ಮುಗಿಸಿ ಬಂದ ಮೇಲೆ ಅಲ್ಲಿಯ ಅನುಭವವನ್ನು ಕುರಿತು ಒಂದು ದಿನ ಉಪನ್ಯಾಸ ಮಾಡಿದರು. ರಂ.ಶ್ರೀ.

ಮುಗಳಿಯವರ 'ಕನ್ನಡ ಸಾಹಿತ್ಯ ಚರಿತ್ರೆ'ಯ ಪುಸ್ತಕ ಮಾಸ್ಕೋದ ಗ್ರಂಥಾಲಯವೊಂದರಲ್ಲಿ ಇರುವುದಾಗಿ ತಿಳಿಸಿದರು. ರಷ್ಯಾದ ಪ್ರಖ್ಯಾತ ಸಾಹಿತಿ ಟಾಲ್‌ಸ್ಟಾಯ್ ಬೆಳೆದ 'ಮಲೆನಾಡಿ'ನ ಬಗ್ಗೆ ವಿವರವಾಗಿ ವಿವರಿಸಿ—ನಮಗೆಲ್ಲ ಸಂತೋಷವುಂಟು ಮಾಡಿದರು. ಪ್ರವಾಸದ ಅನುಭವವನ್ನು ಪ್ರವಾಸ ಕಥನವನ್ನಾಗಿ ಬರೆಯುವುದಾಗಿ ಪ್ರಕಟಿಸಿದರು.

"ಮಾಸ್ಕೊದಲ್ಲಿ ಇಪ್ಪತ್ತೆರಡು ದಿನ"—ಜಿಎಸ್‌ಎಸ್ ಅವರ ಮೊದಲ ಪ್ರವಾಸ ಕಥನ. ಆವರೆಗೆ ಬಂದಿದ್ದ ಎಲ್ಲ ಪ್ರವಾಸ ಕಥನಗಳಿಗಿಂತ ಭಿನ್ನವಾದ ಪ್ರವಾಸ ಕಥನವೆಂದು ಓದುಗರ ಮೆಚ್ಚುಗೆಗೆ ಪಾತ್ರವಾಗಿದೆ. ಸೊಗಸಾದ ಕಾವ್ಯಭಾಷೆಯ ನಿರೂಪಣೆ, ಜಿಎಸ್‌ಎಸ್ ಅವರ ಶೈಲಿ ಎಷ್ಟು ಹದ, ಎಷ್ಟು ಮೃದು, ಎಷ್ಟು ಸರಳ ಎನ್ನುವುದಕ್ಕೆ ಈ ಪುಸ್ತಕ ಸಾಕ್ಷಿಯಾಗಿದೆ.

ಒಂದು ದಿನ ನಾನು ತರಗತಿಯಲ್ಲಿ ಪಾಠ ಕೇಳುತ್ತಿದ್ದಾಗ, "ಪ್ರೊ. ಜಿಎಸ್‌ಎಸ್ ಅವರನ್ನು, ಅವರ ಛೇಂಬರಿನಲ್ಲಿ ತರಗತಿ ಮುಗಿದ ಮೇಲೆ ನೋಡಬೇಕಂತೆ" ಎನ್ನುವ ಸೂಚನೆ ನನಗೆ ಬಂತು. ಸೂಚನೆ ತಲುಪಿದ ಮೇಲೆ ನನಗೆ ಒಂದು ರೀತಿಯ ಆಶ್ಚರ್ಯ, ಸಂತೋಷ, ಕುತೂಹಲ ಎಲ್ಲವೂ ಏಕ ಕಾಲದಲ್ಲಿಯೇ ಉಂಟಾದವು. ನನ್ನ ಸಹಪಾಠಿಗಳಿಗೆ ಒಂದು ರೀತಿಯ ಕುತೂಹಲ. ಏನು ಜಿಎಸ್‌ಎಸ್ ಈತನನ್ನು ಕರೆದಿದ್ದಾರೆ? ಏನು ವಿಷಯ ಇತ್ಯಾದಿ..... ತರಗತಿ ಮುಗಿದ ಮೇಲೆ ಭಯಭಕ್ತಿಯಿಂದ ನಾನು ಜಿಎಸ್‌ಎಸ್ ಅವರ ಛೇಂಬರಿಗೆ ಹೋದೆ. "ಸಾರ್ ನನ್ನನ್ನು ಕರೆದರಂತೆ" ಎಂದೆ. ಅದಕ್ಕೆ ಪ್ರೊಫೆಸರ್ "ಹೌದು ಇಂದು ಸಂಜೆ ನನ್ನ ಜೊತೆ ಮನೆಗೆ ಬನ್ನಿ" ಎಂದರು. ಯಾಕೆ? ಎಂದು ಕೇಳುವ ಧೈರ್ಯವಿಲ್ಲದೆ, ಮರುಮಾತನಾಡದೆ ವಾಪಸ್ ತರಗತಿಗೆ ಬಂದೆ.

ಅಂದು ಸಂಜೆ ತರಗತಿಗಳು ಮುಗಿದ ಮೇಲೆ ಜಿಎಸ್‌ಎಸ್ ಅವರ ಜೊತೆ ಅವರ ಸ್ಟಾಂಡರ್ಡ್ ಕಾರಿನಲ್ಲಿ ಗವಿಪುರಂನಲ್ಲಿಯ ಅವರ ಮನೆಗೆ ಹೋದೆ. ಲಘು ಉಪಹಾರ ವಾಯಿತು. ಸ್ವಲ್ಪ ಕಾಲ ಮೌನ. ಆಗ ಜಿಎಸ್‌ಎಸ್ ಹೇಳಿದರು "ನೋಡಿ ನಾವು ಈ ಅಕ್ಟೋಬರ್ ರಜೆಯಲ್ಲಿ ಪ್ರವಾಸ ಹೋಗುತ್ತಿದ್ದೇವೆ, ಮನೆಯಲ್ಲಿ ಯಾರು ಇರುವುದಿಲ್ಲ. ಹಾಸ್ಟೆಲಿನಲ್ಲಿ ಇರುವ ಬದಲು ಇಲ್ಲಿಯೇ ಇರಿ" ಎಂದು. ಪ್ರೊ. ಹೇಳುತ್ತಿದ್ದಾರೆ, ಉತ್ತರವಾಗಿ 'ಆಗಲಿ' ಎನ್ನುವುದನ್ನು ಬಿಟ್ಟು ಬೇರೆ ಏನು ಹೇಳಲು ಸಾಧ್ಯವಿಲ್ಲದೆ, "ಸರಿ, ಆಗಲಿ ಸಾರ್" ಎಂದೆ.

ಪ್ರವಾಸವನ್ನು ಮುಗಿಸಿ ಬರುವವರೆಗೆ ನಾನು ಮತ್ತು ನನ್ನ ಒಂದಿಬ್ಬರು ಸ್ನೇಹಿತರು —ಜಯದೇವ ಹಾಸ್ಟೆಲ್‌ನ ವಿದ್ಯಾರ್ಥಿಗಳು—ಅವರ ಮನೆಯಲ್ಲಿ ವಾಸ ಮಾಡಿದೆವು. ಯಾವುದೇ ನಿಯಂತ್ರಣ, ನಿರ್ಬಂಧವಿರಲಿಲ್ಲ. ಓದುವುದಕ್ಕೂ ತುಂಬಾ ಅನುಕೂಲಕರವಾಗಿತ್ತು. ಪ್ರೊ. ಅವರ ಗ್ರಂಥಾಲಯದ ಪುಸ್ತಕಗಳನ್ನು ತಿರುವಿ ಹಾಕುವ ಸೌಭಾಗ್ಯ ನಮಗೆ ಲಭಿಸಿತು. ಅದನ್ನು ಚೆನ್ನಾಗಿ ಬಳಸಿಕೊಂಡೆವು.

ಎಂ.ಎ. ಮೊದಲನೆ ವರ್ಷದ ತರಗತಿಗಳು ಸೆಂಟ್ರಲ್ ಕಾಲೇಜಿನಲ್ಲಿ ನಡೆದವು.

ಎರಡನೆ ವರ್ಷದ ಎಂ.ಎ. ತರಗತಿಗಳು 'ಜ್ಞಾನಭಾರತಿ'ಗೆ ವರ್ಗವಾದವು. 'ಜ್ಞಾನಭಾರತಿ' ಈ ಹೆಸರನ್ನು ನೀಡಿದವರೂ ಜಿಎಸ್‌ಎಸ್. 'ಜ್ಞಾನಭಾರತಿ'ಯ ಕಟ್ಟಡಗಳು ಇನ್ನೂ ಪೂರ್ಣವಾಗಿರಲಿಲ್ಲ. ಆಗಿನ ಉಪಕುಲಪತಿಗಳಾದ ಡಾ. ಎಚ್.ಎನ್. ಅವರ ಪ್ರಯತ್ನ ಹಾಗು ಪರಿಶ್ರಮದಿಂದ ನಾವೆಲ್ಲ ಅಲ್ಲಿಗೆ ಹೋಗಬೇಕಾಯಿತು. ಕನ್ನಡ ವಿಭಾಗದ ಜೊತೆ-ಹಿಂದೆ, ಸಂಸ್ಕೃತ ಇತ್ಯಾದಿ 'ಜ್ಞಾನಭಾರತಿ'ಗೆ ವರ್ಗವಾದವು.

'ಜ್ಞಾನಭಾರತಿ'ಯ ಕಟ್ಟಡಗಳು, ಜಿಎಸ್‌ಎಸ್ ಅವರ ಮಾತಿನಲ್ಲಿ 'ಅರೆಮನೆಗಳು'— ಅರ್ಧಂಬರ್ಧ ನಿರ್ಮಾಣಗೊಂಡ ಗೋಡೆಗಳು, ಟಾರು ಕಾಣದ ರಸ್ತೆಗಳು, ನಿಲ್ಲಲು ನೆಲೆಯಿಲ್ಲದ ಕೂರಲು ಸರಿಯಾದ ಜಾಗವಿಲ್ಲದ, ಯಾವ ಕ್ಯಾಂಟೀನ್ ಗೀಂಟೀನ್ ಇಲ್ಲದ ಕೊಂಪೆ. ತರಗತಿಗಳು ಮಧ್ಯಾಹ್ನ 12 ರಿಂದ 4 ರವರೆಗೆ ನಡೆಯುತ್ತಿದ್ದವು. ಮಧ್ಯೆ ಬಿಡುವು ಇರುತ್ತಿರಲಿಲ್ಲ. ಬಸ್ ಇಳಿದು ಕ್ಲಾಸಿಗೆ ಹೋದರೆ ಮತ್ತೆ 4 ಗಂಟೆಗೆ ಕ್ಲಾಸ್ ಮುಗಿದ ಮೇಲೆ ನೇರವಾಗಿ ಬಸ್‌ಗೆ ಬರುತ್ತಿದ್ದೆವು. ಯಾರಾದರೂ ಅಧ್ಯಾಪಕರು ಬಾರದೆ ಕ್ಲಾಸ್ ಇಲ್ಲದಿದ್ದರೆ ವೃಷಭಾವತಿ ನದಿ ದಂಡೆಯ ಮೇಲೆ ಕುಳಿತು ಕಾಲ ಕಳೆಯುತ್ತಿದ್ದೆವು.

ಎರಡನೆ ವರ್ಷದ ಎಂ.ಎ. ತರಗತಿಗೆ ಜಿಎಸ್‌ಎಸ್ ಕಾವ್ಯ ಮೀಮಾಂಸೆ ಪಾಠ ಮಾಡುತ್ತಿದ್ದರು. ಜಿಎಸ್‌ಎಸ್ ಅವರ ಕಾವ್ಯಮೀಮಾಂಸೆ ಪಾಠ ಮಾತ್ರ, ಅದ್ಭುತ. ಅಷ್ಟೊಂದು ಚೆನ್ನಾಗಿ ಕಾವ್ಯ ಮೀಮಾಂಸೆ ಪಾಠ ಮಾಡುವವರನ್ನು ನಾನು ಬೇರೆಲ್ಲೂ ಕಂಡಿಲ್ಲ, ಕೇಳಿಲ್ಲ. ಸಿಂಪ್ಲಿ ಎಕ್ಸಲೆಂಟ್.

ಜಿಎಸ್‌ಎಸ್ ಅತ್ಯಂತ ಉತ್ಸಾಹಶಾಲಿಗಳು. ಕ್ರಿಯಾಶೀಲರು, ಹೊಸ ಹೊಸ ಆಲೋಚನೆಗಳನ್ನು ಉಳ್ಳವರು. ಇವರು ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿದ್ದಾಗ ಕೆಲವು ವಿಚಾರ ಸಂಕಿರಣಗಳನ್ನು ಏರ್ಪಡಿಸಿದರು. ಇಂಥದೊಂದು ಕೆಲಸವನ್ನು ಆ ಕಾಲಕ್ಕೆ (ಈಗಲೂ ಕೂಡ) ವ್ಯವಸ್ಥಿತವಾಗಿ ಸಂಘಟಿಸುವ ಕಾರ್ಯವನ್ನು ಯಾರೂ ಮಾಡಿರಲಿಲ್ಲ. ಈ ವಿಚಾರ ಸಂಕಿರಣಗಳು ಸೆಂಟ್ರಲ್ ಕಾಲೇಜಿನ ಸೆನೆಟ್ ಹಾಲ್‌ನಲ್ಲಿ ನಡೆಯುತ್ತಿದ್ದವು. ಸಂಕಿರಣದಲ್ಲಿ ಭಾಗವಹಿಸಲು, ಪ್ರಬಂಧ ಮಂಡಿಸಲು ನಾಡಿನ ಬೇರೆ ಬೇರೆ ವಿಶ್ವವಿದ್ಯಾ ನಿಲಯಗಳಿಂದ ಪ್ರಾಧ್ಯಾಪಕರುಗಳು ಬರುತ್ತಿದ್ದರು. ಅವರುಗಳನ್ನು ಬರಮಾಡಿಕೊಳ್ಳುವ ಜವಾಬ್ದಾರಿಯನ್ನು ಒಬ್ಬೊಬ್ಬ ಅಧ್ಯಾಪಕರಿಗೆ ವಹಿಸುತ್ತಿದ್ದರು. ಅತಿಥಿಗಳು ಬಂದು ಹೋಗುವವರೆಗೆ ಅವರ ಯೋಗಕ್ಷೇಮವನ್ನು ನೋಡಿಕೊಳ್ಳುವ ಜವಾಬ್ದಾರಿ ಈ ಅಧ್ಯಾಪಕರು ಗಳದಾಗಿತ್ತು. ಇವರ ಸಹಾಯಕ್ಕೆ ಒಬ್ಬೊಬ್ಬ ವಿದ್ಯಾರ್ಥಿಯನ್ನು ನಿಯೋಜಿಸುತ್ತಿದ್ದರು. ಈ ರೀತಿ ನಿಯೋಜಿಸಲ್ಪಟ್ಟ ಅಧ್ಯಾಪಕರಾದ ಶ್ರೀ ಜಯದೇವ್ ಅವರಿಗೆ ಸಹಾಯಕನಾಗಿ ಕೆಲಸ ಮಾಡುವ ಅವಕಾಶ ನನ್ನದಾಗಿತ್ತು.

ವಿಚಾರ ಸಂಕಿರಣಗಳ ಸಂದರ್ಭದಲ್ಲಿ ಬಂದಿದ್ದ ಹಿರಿಯ ಸಾಹಿತಿಗಳಾದ ಮರಿಯಪ್ಪಭಟ್ಟ, ಆರ್.ಸಿ. ಹಿರೇಮಠ, ವೈಕುಂಠರಾಜು, ಎಂ.ಎಂ. ಕಲಬುರ್ಗಿ, ಚಂಪಾ, ಎಸ್.ಎಲ್. ಭೈರಪ್ಪ, ಯು.ಆರ್. ಅನಂತಮೂರ್ತಿ, ಆಲನಹಳ್ಳಿ ಕೃಷ್ಣ, ಗಿರಡ್ಡಿ, ಕೆ.ವಿ.

ಸುಬ್ಬಣ್ಣ—ಮುಂತಾದ ಸಾಹಿತ್ಯ ದಿಗ್ಗಜಗಳನ್ನು ನೋಡುವ ಭಾಗ್ಯ ಮೊದಲ ಬಾರಿಗೆ ನಮಗೆಲ್ಲಾ ಲಭಿಸಿತು. ಆಗೆಲ್ಲ ವಿಚಾರ ಸಂಕಿರಣಗಳು ನಮಗೆಲ್ಲ ಹೊಸ ಅನುಭವಗಳನ್ನು ನೀಡುತ್ತಿದ್ದವು. 'ಚಂಪಾ' ಅವರ ಮಾತುಗಳು ಸಭಿಕರನ್ನು ಕೆರಳಿಸುತ್ತಿದ್ದವು. ಬಿಸಿಬಿಸಿಯ ಚರ್ಚೆ ನಡೆಯುತ್ತಿತ್ತು. ಅವುಗಳೆಲ್ಲ ನಮಗೆ ಒಂದು ರೀತಿಯ ಜಗಳದಂತೆ ಕಾಣಿಸಿಕೊಂಡು ತಮಾಷೆಯನ್ನುಂಟು ಮಾಡುತ್ತಿತ್ತು. ತರಗತಿಯಿಂದ ಹೊರಗೆ, ಅಧ್ಯಾಪಕರುಗಳನ್ನು ಕಾಣುವುದು, ಮಾತನಾಡುವುದು ನನಗೆ ಒಂದು ರೀತಿಯ ರೋಮಾಂಚನವನ್ನುಂಟು ಮಾಡುತ್ತಿತ್ತು. ವಿಚಾರ ಸಂಕಿರಣಗಳ ನೆಪದಲ್ಲಿ ಸಾಹಿತಿಗಳ ಸಾಮೀಪ್ಯವನ್ನು ಅನುಭವಿಸುವುದರ ಮೂಲಕ ಅವರುಗಳ ಆತ್ಮೀಯತೆಯನ್ನು ಗಳಿಸಿಕೊಂಡೆ ಎನ್ನಬಹುದು.

ಇಂಥ ಸಂಕಿರಣಗಳನ್ನು ಏರ್ಪಡಿಸುವುದರ ಮೂಲಕ ಒಂದು ನಿರ್ದಿಷ್ಟವಾದ ವಿಷಯವನ್ನು ಕುರಿತಾದ ಗಂಭೀರ ಚರ್ಚೆಗೆ ಒಂದು ವೇದಿಕೆಯನ್ನು ನಿರ್ಮಾಣ ಮಾಡಿ ಜಿಎಸ್‌ಎಸ್ ಎಲ್ಲರ ಮೆಚ್ಚುಗೆಗೆ ಪಾತ್ರರಾಗುತ್ತಿದ್ದರು. ವರ್ಷಕ್ಕೊಮ್ಮೆ ಬಹಳಷ್ಟು ಸಾಹಿತಿಗಳು ಒಂದೆಡೆ ಸೇರಿ ವಿಚಾರ ವಿನಿಮಯ ಮಾಡಿಕೊಳ್ಳಲು ಅವಕಾಶ ಕಲ್ಪಿಸುವುದರ ಮೂಲಕ ಸಾಹಿತಿಗಳೆಲ್ಲರ ಪ್ರೀತಿಯನ್ನು ಸಂಪಾದಿಸಿದ್ದರು. ಜಿಎಸ್‌ಎಸ್ ಪ್ರಗತಿಪರ ಧೋರಣೆಯುಳ್ಳವರು, ಪ್ರತಿಭಾವಂತರು. ಹೊಸ ಹೊಸ ಪ್ರತಿಭಾಶಾಲಿಗಳನ್ನು ಅನ್ವೇಷಣೆ ಮಾಡುತ್ತಿದ್ದರು. ಇಂಥ ಸಂಕಿರಣದಲ್ಲಿ ಅಂಥವರಿಗೆ ಅವಕಾಶ ಕಲ್ಪಿಸಿ ಬೇರೆಯವರಿಗೆ ಅವರನ್ನು ಪರಿಚಯಿಸುತ್ತಿದ್ದರು. ಈ ರೀತಿಯ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿದ ಅನೇಕ ಜನ ಹೊಸ ತಲೆಮಾರಿನ ಲೇಖಕರು ತಾವು ಒಬ್ಬ ಲೇಖಕ ಅಥವಾ ಬರಹಗಾರ ಎಂದು ಸಾಬೀತು ಪಡಿಸಲು ಈ ವಿಚಾರ ಸಂಕಿರಣಗಳು ದಾರಿದೀಪವಾದವು ಎಂದು ಇಂದೂ ಸ್ಮರಿಸಿಕೊಳ್ಳುವುದನ್ನು ಕೇಳಿದ್ದೇನೆ.

ಜಿಎಸ್‌ಎಸ್ ಅವರು ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿದ್ದ ಕಾಲ, ಅಧ್ಯಯನ ಕೇಂದ್ರದ ಸುವರ್ಣಯುಗ ಎಂದು ಹೇಳಿದರೆ ಯಾರು ಹೊಟ್ಟೆಕಿಚ್ಚು ಪಡಬೇಕಿಲ್ಲ. ಡಿ.ಆರ್. ನಾಗರಾಜ್, ಕಿ.ರಂ., ಬರಗೂರು, ಕೆ.ವಿ. ನಾರಾಯಣ, ಡಾ. ಸಿದ್ಧಲಿಂಗಯ್ಯ—ಮುಂತಾದ ಶಿಷ್ಯರನ್ನು ತಯಾರು ಮಾಡಿ ಅಧ್ಯಯನ ಕೇಂದ್ರಕ್ಕೆ ಕೊಡುಗೆಯಾಗಿ ನೀಡಿದ ಕೀರ್ತಿ ಜಿಎಸ್‌ಎಸ್ ಅವರದು.

ನಾನು ಎಂ.ಎ. ಮುಗಿಸಿದ ತಕ್ಷಣ ಚಿಕ್ಕನಾಯಕನಹಳ್ಳಿಯಲ್ಲಿ ಸರ್ಕಾರಿ ಪದವಿಪೂರ್ವ ಕಾಲೇಜಿನಲ್ಲಿ ಪಾರ್ಟ್ ಟೈಮ್ ಉಪನ್ಯಾಸಕ ವೃತ್ತಿ ದೊರೆಯಿತು. ಜಿಎಸ್‌ಎಸ್ ಅವರಿಗೆ ಪತ್ರ ಬರೆದು ತಿಳಿಸಿದೆ. "ಒಳ್ಳೆಯದಾಗಲಿ, ಪೂರ್ವಸಿದ್ಧತೆಯಿಲ್ಲದೆ ತರಗತಿಗೆ ಹೋಗಬೇಡಿ" ಎಂದು ಪತ್ರ ಬರೆದು ಶುಭ ಹಾರೈಸಿದರು. ಈ ಪತ್ರ ನನ್ನ ಬಳಿ ಇನ್ನೂ ಇದೆ. ಅನಂತರ ನನಗೆ ಕೆ.ಪಿ.ಎಸ್.ಸಿ. ಮೂಲಕ ಉಪನ್ಯಾಸಕರ ಹುದ್ದೆಗೆ ಆಯ್ಕೆಯಾಯಿತು. 1975ರ ಡಿಸೆಂಬರ್‌ನಿಂದ 1978ರ ಅಕ್ಟೋಬರ್‌ವರೆಗೆ ಕನ್ನಡ ಉಪನ್ಯಾಸಕನಾಗಿ ತುಮಕೂರಿನ ಸರ್ಕಾರಿ ಪದವಿಪೂರ್ವ ಕಾಲೇಜಿನಲ್ಲಿ ಕೆಲಸ ಮಾಡಿದೆ. 1978ರ ಅಕ್ಟೋಬರ್‌ನಲ್ಲಿ

ಸರ್ಕಾರ ನನ್ನನ್ನು ಆಗ ತಾನೆ ಜಿಲ್ಲಾ ಕೇಂದ್ರಗಳಲ್ಲಿ ಆರಂಭವಾದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹಾಯಕ ನಿರ್ದೇಶಕನೆಂದು ನಿಯೋಜಿಸಿತು.

ಸಹಾಯಕ ನಿರ್ದೇಶಕನಾಗಿ ತುಮಕೂರಿನಲ್ಲಿ ಕೆಲಸ ಮಾಡುತ್ತಿದ್ದ ಸಮಯದಲ್ಲಿ ಡಾ. ಜಿಎಸ್‌ಎಸ್ ಅವರ "ಕಾವ್ಯಾರ್ಥ ಚಿಂತನ"ಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿತು. ಈ ಸಂದರ್ಭದಲ್ಲಿ ಇವರಿಗೆ ಜಿಲ್ಲಾ ಆಡಳಿತದ ವತಿಯಿಂದ ನಾಗರಿಕ ಸನ್ಮಾನವನ್ನು ಮಾಡಬೇಕೆಂದು ತೀರ್ಮಾನಿಸಿ, ಆಗ ಜಿಲ್ಲಾಧಿಕಾರಿಯಾಗಿದ್ದ ನನ್ನ ನೆಚ್ಚಿನ ಅಧಿಕಾರಿಗಳೂ ಸಾಹಿತ್ಯ ಹಾಗು ಸಂಗೀತಾಭಿಮಾನಿಗಳೂ ಆದ ಕೆ. ಜೈರಾಜ್ ಅವರಲ್ಲಿ ವಿನಂತಿಸಿಕೊಂಡೆ. ಅವರು ಸಂತೋಷದಿಂದ ಒಪ್ಪಿಕೊಂಡು ಇದಕ್ಕಾಗಿ ಒಂದು ಸಮಿತಿಯನ್ನು ರಚಿಸಿದರು. ಇದರಲ್ಲಿ ಆಗಿನ ಜಿಲ್ಲಾ ಪೊಲೀಸ್ ಸೂಪರಿಂಟೆಂಡೆಂಟ್ ಆಗಿದ್ದ ಡಿ.ಎನ್. ಮುನಿಕೃಷ್ಣ, ಸಾಹಿತಿಗಳಾದ ವಿ.ಚಿ., ಪತ್ರಕರ್ತರಾದ ಎಸ್.ಎನ್. ಬಾಗಲೋಡಿ, ವಿಶೇಷ ಜಿಲ್ಲಾಧಿಕಾರಿಗಳಾಗಿದ್ದ ವಿ.ಪಿ. ಬಳಿಗಾರ್ ಸದಸ್ಯರಾಗಿದ್ದರು. ನಾನು ಮತ್ತು ಗೆಳೆಯ ಕೆ.ಎಸ್. ರಾಘವೇಂದ್ರರಾವ್ ಕಾರ್ಯದರ್ಶಿಗಳಾಗಿ ಕೆಲಸ ಮಾಡಿದೆವು.

ಡಾ. ಜಿಎಸ್‌ಎಸ್ ಅಭಿನಂದಾ ಸಮಾರಂಭವನ್ನು ನಗರದ ಟೌನ್‌ಹಾಲ್ ಸಭಾಂಗಣದಲ್ಲಿ ಏರ್ಪಡಿಸಲಾಗಿತ್ತು. ಸಮಾರಂಭಕ್ಕೆ ಶ್ರೀ ಶಿವಕುಮಾರ ಸ್ವಾಮೀಜಿಯವರು, ಪು.ತಿ.ನ., ಗೊರೂರು ರಾಮಸ್ವಾಮಿ ಐಯ್ಯಂಗಾರ್, ಕೆ.ಎಸ್. ನರಸಿಂಹಸ್ವಾಮಿಯವರು ಆಗಮಿಸಿದ್ದರು.

ಸಮಾರಂಭ ತುಂಬಾ ಚೆನ್ನಾಗಿ ನಡೆಯಿತು. ಕಾರ್ಯಕ್ರಮ ಮುಗಿದ ಒಂದು ವಾರದ ನಂತರ ನನಗೆ ಒಂದು ಪತ್ರ ಬಂತು. ಅದು ಗುರುಗಳಾದ ಜಿಎಸ್‌ಎಸ್ ಅವರ ಪತ್ರ. ಅದರಲ್ಲಿ "ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಬಂದ ಸಂದರ್ಭದಲ್ಲಿ ನನಗೆ ನನ್ನ ಊರು ಸೇರಿದಂತೆ ಅನೇಕ ಕಡೆ ಅಭಿನಂದನೆಗಳು ಸಂದಿವೆ. ಆದರೆ ನಾನು ಬಹಳವಾಗಿ ಗೌರವಿಸುವ ಸಿದ್ಧಗಂಗಾ ಶ್ರೀಗಳ ಸಮ್ಮುಖದಲ್ಲಿ ನನ್ನ ವಿದ್ಯಾರ್ಥಿ ಜೀವನದ ಕೆಲಭಾಗವನ್ನು ಕಳೆದ ತುಮಕೂರಿನ ಈ ಸಮಾರಂಭ, ಹಾಗು ನನಗೆ ನೀಡಿದ ಗೌರವ ನನಗೆ ತುಂಬಾ ಸಂತೋಷವನ್ನು ತಂದಿದೆ. ಇದಕ್ಕೆ ಕಾರಣರಾದ ಎಲ್ಲರಿಗೆ ವಿಶೇಷವಾಗಿ ನಿಮಗೆ ಹಾಗು ಜಿಲ್ಲಾ ಆಡಳಿತಕ್ಕೆ ಕೃತಜ್ಞತೆಗಳು" ಎಂದು ಬರೆದಿದ್ದರು. ನಮ್ಮ ಕರೆಗೆ ಮನ್ನಣೆ ನೀಡಿ ಗೌರವವನ್ನು ಸ್ವೀಕರಿಸಿದ ಜಿಎಸ್‌ಎಸ್ ಅವರಿಗೆ ನಾವೆಲ್ಲರೂ ಋಣಿಯಾಗಿದ್ದೇವೆ.

ನಾನು ಸಹಾಯಕ ನಿರ್ದೇಶಕನಾಗಿ ಕೆಲಸ ಮಾಡಿದ ಜಿಲ್ಲೆಗಳಾದ ತುಮಕೂರು, ಹಾಸನ, ಮಡಿಕೇರಿ,ಕೋಲಾರ ಎಲ್ಲ ಕಡೆ ಜಿಎಸ್‌ಎಸ್ ಅವರನ್ನು ಒಂದಿಲ್ಲೊಂದು ಕಾರ್ಯಕ್ರಮಕ್ಕೆ ಆಹ್ವಾನಿಸಿದ್ದೇನೆ. ಪ್ರೀತಿಯಿಂದ ಬಂದು ಕಾರ್ಯಕ್ರಮದಲ್ಲಿ ಭಾಗವಹಿಸಿ ನನಗೆ ಬಹಳ ಉಪಕಾರ ಮಾಡಿದ್ದಾರೆ. ಇಲಾಖೆಯ ಘನತೆಯನ್ನು ಹೆಚ್ಚಿಸಿದ್ದಾರೆ. ನನಗೆ 'ನಾನು ಜಿಎಸ್‌ಎಸ್ ಅವರ ವಿದ್ಯಾರ್ಥಿ' ಎಂದು ಹೇಳಿಕೊಳ್ಳುವುದೇ ಒಂದು ಹೆಮ್ಮೆಯ ಸಂಗತಿ. ನಾನು ಒಮ್ಮೆ ಮೈಸೂರಿಗೆ ಹೋದಾಗ ಪ್ರಸಾರಾಂಗದ ನಿರ್ದೇಶಕರಾಗಿದ್ದ ಡಾ. ಪ್ರಭುಶಂಕರ

ಅವರನ್ನು ಭೇಟಿಯಾಗಿದ್ದೆ. ನನಗೆ ಡಿ.ಎಲ್.ಎನ್. ಅವರ ಲೇಖನಗಳಿರುವ ಹಳೆಯ 'ಪ್ರಬುದ್ಧ ಕರ್ನಾಟಕ'ದ ಪ್ರತಿಗಳು ಬೇಕಿದ್ದವು. ನಾನು ಜಿಎಸ್ಎಸ್ ಅವರ ವಿದ್ಯಾರ್ಥಿಯೆಂದು ತಿಳಿದ ತಕ್ಷಣ ಪ್ರಭುಶಂಕರ ಅವರು ಡಿ.ವಿ.ಕೆ. ಮೂರ್ತಿಯವರಿಗೆ ದೂರವಾಣಿ ಮಾಡಿ ಡಿ.ಎಲ್.ಎನ್. ಅವರ 'ಪೀಠಿಕೆಗಳು ಮತ್ತು ಲೇಖನಗಳು' ಪುಸ್ತಕವನ್ನು ಸಾಲವಾಗಿ ಕೊಡಿಸಿದರು.

ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಜಿಎಸ್ಎಸ್ ಮಾಡಿದ ಕೆಲಸ ಅಪೂರ್ವವಾದುದು. ಅಕಾಡೆಮಿಯ ಘನತೆಯನ್ನು ಎತ್ತಿಹಿಡಿದ ಜಿಎಸ್ಎಸ್, ಮುಂದಿನವರಿಗೆ ದಾರಿದೀಪವಾಗಿದ್ದಾರೆ. ನಾನು ಸಾಹಿತ್ಯ ಅಕಾಡೆಮಿಯ ರಿಜಿಸ್ಟ್ರಾರ್ ಆದ ಮೇಲೆ ಅವರನ್ನು ಪದೇ ಪದೇ ಭೇಟಿಯಾಗುತ್ತೇನೆ. ಅವರ ಶಿಸ್ತು, ಸಮಯಪ್ರಜ್ಞೆ, ಅಧ್ಯಯನಾಸಕ್ತಿಗಳನ್ನು ಕಂಡು ಬೆರಗಾಗಿದ್ದೇನೆ.

ನಾನು ಅಕಾಡೆಮಿಯ ಒಂದು ಕಾರ್ಯಕ್ರಮದಲ್ಲಿ ಮಾಡಿದ ಸ್ವಾಗತ ಭಾಷಣವನ್ನು ಕೇಳಿದ ಸಭಿಕರೊಬ್ಬರು ಅಧ್ಯಕ್ಷರಾದ ಡಾ. ಗಿರಡ್ಡಿಯವರ ಬಳಿ ನಿಮ್ಮ ರಿಜಿಸ್ಟ್ರಾರ್ ಪರವಾಗಿಲ್ಲ, ಸಾಹಿತ್ಯದ ಬಗ್ಗೆ ಅಭಿರುಚಿಯಿದೆ ಎಂದರು. ಅದಕ್ಕೆ ಗಿರಡ್ಡಿಯವರು "ದಕ್ಷಿಣಾಮೂರ್ತಿ ಜಿಎಸ್ಎಸ್ ಅವರ ವಿದ್ಯಾರ್ಥಿ" ಎಂದು ಅವರಿಗೆ ಪರಿಚಯಿಸಿದರು. ಈ ಮಾತನ್ನು ಕೇಳಿದ ನನಗೆ ಬೇರೆ ಯಾವುದೇ ಸರ್ಟಿಫಿಕೇಟ್ ಬೇಕಿಲ್ಲ ಎನ್ನಿಸಿತು. ಧನ್ಯತೆ ಮೂಡಿತು.

ಕರ್ನಾಟಕದ ಸಾಹಿತ್ಯ ಹಾಗು ಸಾಂಸ್ಕೃತಿಕ ಕ್ಷೇತ್ರದಲ್ಲಿ ಜಿಎಸ್ಎಸ್ ಅವರದು ಬಹಳ ದೊಡ್ಡ ಹೆಸರು. ನೇರ ಸ್ವಭಾವದ, ಸರಳ ಜೀವಿಯಾದ ಜಿಎಸ್ಎಸ್ ಸಾರಸ್ವತ ಲೋಕದಲ್ಲಿ ಗಣ್ಯಸ್ಥಾನವನ್ನು ಗಳಿಸಿದ್ದಾರೆ. ಅಧ್ಯಾಪಕರಾಗಿ ಆ ಹುದ್ದೆಗೆ ವಿಶೇಷ ಗೌರವ ತಂದು ಅಪಾರ ಶಿಷ್ಯವೃಂದದ ಹೃದಯ ಗೆದ್ದಿದ್ದಾರೆ. ವಿಮರ್ಶಕರಾಗಿ ವಿಮರ್ಶಾಕ್ಷೇತ್ರಕ್ಕೆ ಹೊಸ ಆಯಾಮ ನೀಡಿದ್ದಾರೆ.

ಜಿಎಸ್ಎಸ್ ಅವರ ಬಗ್ಗೆ ನನಗೆ ಬಹಳ ಪ್ರೀತಿ, ಗೌರವ ಅಭಿಮಾನ. ಅವರನ್ನು ಕಂಡ ಮೊದಲ ದಿನದಿಂದ ಇಂದಿನವರೆಗೆ ಕಿಂಚಿತ್ತೂ ಮುಕ್ಕಾಗದೆ ಅದೇ ಭಾವನೆ ಇದೆ. ಅದೇ ಪ್ರೀತಿಯನ್ನು ಗುರುಗಳು ನನ್ನ ಬಗ್ಗೆ ತೋರುತ್ತಿದ್ದಾರೆ ಎನ್ನುವುದು ನನ್ನ ಪೂರ್ವಜನ್ಮದ ಭಾಗ್ಯವೆಂದು ನಂಬಿದ್ದೇನೆ. ಜಿಎಸ್ಎಸ್ ಅವರ ಸಾವಿರ ಸಾವಿರ ಶಿಷ್ಯರಲ್ಲಿ ನಾನೂ ಒಬ್ಬ ಎಂದು ಹೇಳಿಕೊಳ್ಳುವುದೇ ನನ್ನ ಭಾಗ್ಯ.

■

# ಹಳತು-ಹೊಸತುಗಳ ಸಮೀಕರಣ

ಡಾ|| ವಿಜಯಾ ಸುಬ್ಬರಾಜ್

ಪ್ರೀತಿಯ ಜಿಎಸ್‌ಎಸ್‌ಗೆ ಒಂದು ದೊಡ್ಡ ಶಿಷ್ಯ ಪರಂಪರೆಯೇ ಇದೆ. ಈ ಶಿಷ್ಯ ಪರಂಪರೆಗೂ ಒಂದು ಶಿಷ್ಯ ಪರಂಪರೆ ಹುಟ್ಟಿಕೊಂಡಿದೆ. ಸಾಹಿತ್ಯ, ಶಿಕ್ಷಣ, ಸಾರ್ವಜನಿಕ ವಲಯಗಳಲ್ಲೆಲ್ಲೂ ನನ್ನ ಮೇಷ್ಟು ಪ್ರೀತಿಯಿಂದ ಜಿಎಸ್‌ಎಸ್ ಎಂದೇ ಗುರುತಿಸಿಕೊಂಡಿದ್ದಾರೆ. ಮೂವತ್ತು ಮೂರು ವರ್ಷದಿಂದಲೂ ನೋಡುತ್ತಾ ಗಮನಿಸುತ್ತಾ, ಅವರ ಬಗ್ಗೆ ಒಂದು 'ವ್ಯಕ್ತಿತ್ವ' ಚಿತ್ರವನ್ನು ನನ್ನದೇ ರೀತಿಯಲ್ಲಿ ರೂಪಿಸಿಕೊಂಡಿದ್ದೇನೆ. ನಾನು ಕಟ್ಟಿಕೊಂಡ ಚಿತ್ರವೇ ಬಹುಶಃ ಎಲ್ಲರಲ್ಲೂ ಇದ್ದಿರಬಹುದು. ನಮ್ಮೆಲ್ಲರಿಗೂ ಅವರ ಕುರಿತು ಪ್ರೀತಿಯಿದೆ; ಮೆಚ್ಚುಗೆಯಿದೆ; ಬೆರಗಿದೆ; ಆರಾಧನೆಯ ಭಾವವೂ ಇದೆ.

ಜಿಎಸ್‌ಎಸ್ ಅವರ ವಿದ್ಯಾರ್ಥಿಯಾಗುವ ಸುಯೋಗವೂ ಆಕಸ್ಮಿಕವಾಗಿ ನನಗೆ ಬಂತು. ಸಾಹಿತ್ಯ ನನ್ನ ಕ್ಷೇತ್ರವೂ ಆಗಿರಲಿಲ್ಲ. ಮಹಾರಾಣಿ ಕಾಲೇಜಿನಲ್ಲಿ ವಿಜ್ಞಾನ ವಿದ್ಯಾರ್ಥಿಯಾಗಿದ್ದೆ. ಜಿಎಸ್‌ಎಸ್ ಅವರ ಹೆಸರು ಆಗಾಗ ನನ್ನ ಕಿವಿ ಮೇಲೆ ಬೀಳುತ್ತಲೇ ಇತ್ತು. ಅವರೊಬ್ಬ ಪ್ರತಿಭಾವಂತ ಮತ್ತು ಶ್ರೇಷ್ಠಕವಿ ಎನ್ನುವುದು ನಮ್ಮ ಕಾಲೇಜಿನ ಕನ್ನಡ ಮೇಷ್ಟುಗಳ ಅಭಿಪ್ರಾಯವಾಗಿತ್ತು. ಅವರ ಕವಿತೆಗಳು ಭಾವಗೀತೆಗಳಾಗಿ ಕಾಲೇಜಿನ ಸ್ಪರ್ಧೆಗಳಲ್ಲಿ ಕೇಳಿಬರುತ್ತಿತ್ತು. ಅದರಲ್ಲಿಯೂ ಒಮ್ಮೆ ನನ್ನ ಸಹಪಾಠಿಯೊಬ್ಬಳು ತನ್ನ ಮಧುರ ಕಂಠದಲ್ಲಿ ಜಿಎಸ್‌ಎಸ್ ಅವರ

**ಉಡುಗಣವೇಷ್ಟಿತ ಚಂದ್ರಸುಶೋಭಿತ**
**ದಿವ್ಯಾಂಬರ ಸಂಚಾರಿ.....**

ಎನ್ನುವ ಕವನ ಹೊಮ್ಮಿದ್ದೇ.... ಕೇಳಿ ಮೂಕವಿಸ್ಮಿತಳಾದೆ. ಮೈಯೆಲ್ಲ ರೋಮಾಂಚನ! ಅಂದಿನ ಆ ವಯಸ್ಸಿನಲ್ಲಿ ಆ ದಿನಗಳಲ್ಲಿ ಬಹುಶಃ ನನ್ನ ಆ ಸ್ಥಿತಿ, ಪ್ರತಿಕ್ರಿಯೆಗಳು ತೀರಾ ಸಹಜವಿರಬಹುದು. ಈ ಹಾಡಿನ ಕರ್ತೃವನ್ನು ಹೇಗಾದರೂ ಪತ್ತೆ ಹಚ್ಚಿ ನೋಡಬೇಕು. ಮಾತಾಡಿಸಬೇಕೆಂಬ ಹಂಬಲ, ಛಲವಾಗಿ ಮಾರ್ಪಟ್ಟಿತು. ಹಾಡಿನ ಲಯ, ನಾದ, ಕಲ್ಪಕತೆಗಳ ಸೌಂದರ್ಯಕ್ಕೆ ಮನ ತೆತ್ತಿದ್ದ ನನಗೆ ಅವರೂ ಅದರಷ್ಟೇ ಮೋಹಕವಾಗಿ ಇರಬಹುದೇನೋ ಎನ್ನುವ ಲೆಕ್ಕಾಚಾರದೊಂದಿಗಿದ್ದೆ. ವಿಜ್ಞಾನ ಓದಿ ಜಡ್ಡು ಹಿಡಿದಿದ್ದ ನನ್ನ

ಮನಸ್ಸಿಗೆ ಭಾವಪೂರ್ಣ ಕವಿತೆ ಅತಿ ಹಿತವೆನಿಸಿತ್ತು. ಇಂತಹ ಕವಿಯ ಸಾನ್ನಿಧ್ಯ, ಶಿಷ್ಯವೃತ್ತಿ ಪಡೆಯುವುದು ಜೀವನದ ಸೌಭಾಗ್ಯ ಎನ್ನುವ ಅತಿ ಎನಿಸಬಹುದಾದ sentiment!

ಪತ್ತೆ ಹಚ್ಚಿದೆ. ಸೆಂಟ್ರಲ್ ಕಾಲೇಜ್ ಕನ್ನಡ ವಿಭಾಗದಲ್ಲಿ ರೀಡರ್ ಆಗಿದ್ದಾರೆ ಎಂದು ತಿಳಿದುಕೊಂಡೆ. ಅವರಲ್ಲಿ ಓದಿ, ಅವರಂತೆಯೇ ಕವಿತೆ ಬರೆಯಬೇಕು. ಅವರಿಂದ ಸ್ಫೂರ್ತಿ ಪಡೆಯಬೇಕು ಎನ್ನುವುದು ನನ್ನ ಕನಸಾಗಿತ್ತು. ಆದರೆ ಒಂದು ಸಂಶಯ—ವಿಜ್ಞಾನದ ವಿದ್ಯಾರ್ಥಿಗೆ ಕನ್ನಡ ಎಂ.ಎ.ಗೆ ಸೀಟು ಕೊಡುವವರು ಯಾರು? ಈ ಪ್ರಶ್ನೆ ನನ್ನನ್ನು ಕಾಡಿತು. ಒಂದು ಕಡೆ ವಿಜ್ಞಾನವೇ ಮುಂದುವರೆಸಿ ಎಂ.ಎಸ್ಸಿ, ಎಂ.ಬಿ.ಬಿ.ಎಸ್. ಮಾಡಬೇಕೆಂಬ ತುಡಿತ; ಮತ್ತೊಂದು ಕಡೆ ಕನ್ನಡ ಸಾಹಿತ್ಯ ಓದಿ ಸಾಹಿತಿ ದಿಗ್ಗಜರ, ಕವಿಗಳ ಸಂಪರ್ಕ, ಸಾನ್ನಿಧ್ಯಗಳನ್ನು ಪಡೆಯಬೇಕೆಂಬ ತುಡಿತ! ಇಂತಹ ದ್ವಂದ್ವ ಸ್ಥಿತಿಯಲ್ಲಿ ಕಾಲ ನನಗೇ ಅನುಕೂಲಿಸಿತು. ಕಾರಣಾಂತರಗಳಿಂದ ನನ್ನ ಡಾಕ್ಟರಾಗುವ ಕನಸಿಗೆ ಕತ್ತರಿ ಬಿತ್ತು. ಆದರೆ ಇನ್ನೊಂದು ಬಗೆಯ ಅದೃಷ್ಟ ಬಾಗಿಲು ತಟ್ಟಿತು. ಬೆಂಗಳೂರು ವಿಶ್ವವಿದ್ಯಾಲಯ ಮೊದಲಬಾರಿಗೆ ವಿಜ್ಞಾನ ವಿದ್ಯಾರ್ಥಿಗಳಿಗೆ ಕನ್ನಡ ಎಂ.ಎ. ಮಾಡಲು ಪ್ರವೇಶಾವಕಾಶ ದೊರಕಿಸಿಕೊಟ್ಟಿತು. ನನಗೆ ಸ್ವರ್ಗ ಮೂರೇ ಗೇಣು!! ಮೊದಲಿನಿಂದಲೂ ಭಾವುಕಳಾಗಿದ್ದ ನನಗೆ ಜಿಎಸ್‌ಎಸ್ ರಂತಹವರಿಂದ ಪಾಠ ಕೇಳುವ ಕ್ಷಣಗಳನ್ನು ಊಹಿಸಿಕೊಳ್ಳುತ್ತಲೇ ಪುಲಕಿಸುತ್ತಿದ್ದೆ.

ಆ ದಿನಗಳು ಬಂದೇ ಬಂದವು! ಮೊಟ್ಟಮೊದಲ ದಿನ ಜಿಎಸ್‌ಎಸ್ ನಮಗೆ ಪಾಠ ತೆಗೆದುಕೊಳ್ಳಲು ಬಂದಾಗ, ಅವರ ಪಾಠದ ಕಡೆ ಗಮನ ಕೊಡುವುದಕ್ಕಿಂತ ಹೆಚ್ಚಾಗಿ ಅವರ ಚರ್ಯೆಗಳನ್ನು, ಪಾಠದ ಶೈಲಿಯನ್ನು, ವ್ಯಕ್ತಿತ್ವವನ್ನು ನನ್ನ ಊಹೆಯ ವ್ಯಕ್ತಿತ್ವದೊಂದಿಗೆ ಹೋಲಿಸಿಕೊಳ್ಳುತ್ತಿದ್ದೆ. ಅಂಗುಲಂಗುಲವೂ ಅಳೆಯುತ್ತಿದ್ದೆ. ಅಳೆದಷ್ಟೂ ಹಿಡಿತಕ್ಕೆ ಸಿಗದ ಎತ್ತರದ ವ್ಯಕ್ತಿತ್ವ ಎನ್ನುವ ವಿಚಾರ ಕುಡಿಯೊಡೆಯುತ್ತಿದ್ದಂತೆ ನನ್ನಲ್ಲಿ ಅವರ ಬಗ್ಗೆ ಆದರಾಭಿಮಾನಗಳು ಮೂಡುತ್ತಿದ್ದವು. ಮೆಚ್ಚುಗೆಯ ಭಾವದ ಕಿಡಿ ಹೊತ್ತಿತು.

ದಿನಗಳು, ಮಾಸಗಳು, ವರ್ಷಗಳು, ದಶಕಗಳು ಕಳೆದು ಹೋಗಿವೆ. ಅಂದು ನನ್ನಲ್ಲಿ ಅವರ ಬಗ್ಗೆ ಮೂಡಿದ ಭಾವನೆಗಳಲ್ಲಿ ವ್ಯತ್ಯಯವೇ ಇಲ್ಲ. ವ್ಯಕ್ತಿ ಕಾಲ ಕಳೆದಂತೆ ನಡೆ, ನುಡಿ ಸ್ವಭಾವಗಳಲ್ಲಿ, ಅಂತಸ್ತು, ಅಧಿಕಾರ, ಕೀರ್ತಿಗಳು ಬರುತ್ತಿದ್ದಂತೆ, ಬೆಳೆಯುತ್ತಿದ್ದಂತೆ ಬದಲಾಗುತ್ತಾನೆನ್ನುವುದು ಲೋಕ ಕಂಡ ಸತ್ಯ. ಆದರೆ ಜಿಎಸ್‌ಎಸ್ ಅಂದಿನಿಂದ ಇಂದಿನವರೆಗೂ ಅದೇ ಆಗಿದ್ದಾರೆ. ವ್ಯಕ್ತಿಯೂ ನಯ. ವ್ಯಕ್ತಿತ್ವವು ಮತ್ತೂ ನಯ. ಮಾತು ಪೋಲಾಗದಂತೆ ಕಟುವಾಗದಂತೆ ಮಾತನಾಡುತ್ತಾರೆ. 67ನೇ ಇಸವಿಯಿಂದ ಇಂದಿನವರೆಗೆ ಒಂದು ದಿನವಾದರೂ ಸಿಟ್ಟುಮುಖ, ಸೊಟ್ಟ ಮುಖವನ್ನು ಕಂಡದ್ದೇ ಇಲ್ಲ. ನನ್ನಂತಹ ಮಾತು ಪ್ರಿಯರಿಗೆ, ಹರಟೆ ಪ್ರಿಯರಿಗೆ ಜಿಎಸ್‌ಎಸ್ ಅವರೊಂದಿಗೆ ಗಂಟೆಗಟ್ಟಲೆ ಮಾತನಾಡಬೇಕೆಂದು ಬಯಸಿ ಹೋದರೆ ಬರೀ ನಿರಾಶೆಯೇ! ಪ್ರಶ್ನೆಗೆ ಉತ್ತರ ಎಷ್ಟೋ ಅಷ್ಟೆ! ಮಾತು ಬೆಳೆಸುವುದಕ್ಕೆ ಅವಕಾಶವೇ ಇಲ್ಲ. ಆದರೆ ಒಮ್ಮೊಮ್ಮೆ ಎಂದಾದರೂ ಹುಕಿ

ಬಂತೆಂದರೆ ಪಾಠಮಾಡುವಾಗ ಹಿತವಾದ ತುಂತುರು ಮಳೆಯಂತೆ ಹಾಸ್ಯದ ಚಿನುಕುಗಳು ಸಿಡಿಯುತ್ತಿದ್ದವು.

ಅನಿವಾರ್ಯ ಸಂದರ್ಭಗಳು ಬಂದಾಗ ಮಾತ್ರ ಅವರು ಮಿತಭಾಷಿಗಳು. ಮಾತಾಡುವುದೇ ಅಪರೂಪ ಎನ್ನುವ ನಮ್ಮ ಕಲ್ಪನೆಯೇ ಹುಸಿ ಎನಿಸುತ್ತದೆ. ಆದರೆ ನಿರರ್ಗಳವಾದ ಹರಟೆ ಚರ್ಚೆಗಳು ಸಾಧ್ಯವಾಗುತ್ತಿದ್ದುದು, ಕಾವ್ಯ ಕುರಿತೋ, ಕಾವ್ಯ ಮೀಮಾಂಸೆಯ ಸಂಬಂಧವೋ ಆಗಿದ್ದಾಗ ಮಾತ್ರ. ಆದರೆ ವಿದ್ಯಾರ್ಥಿಗಳ ಬಗ್ಗೆ ತುಂಬಾ ಕಳಕಳಿ ಇತ್ತು. ವೈಯಕ್ತಿಕ ಸಮಸ್ಯೆಗಳನ್ನೂ ಅವರೊಂದಿಗೆ ಹಂಚಿಕೊಳ್ಳುತ್ತಿದ್ದವು. ಅವರ ನಡೆನುಡಿ ರೀತಿಗಳಿಂದಲೇ ಪ್ರೀತಿ, ವಿಶ್ವಾಸ, ಆದರ್ಶಗಳಿಗೆ ಎಷ್ಟೊಂದು ಬೆಲೆ ಕೊಡುತ್ತಿದ್ದರು ಎಂಬುದು ಸ್ಪಷ್ಟವಾಗಿತ್ತು. ಇಲ್ಲಿಯವರೆಗೂ ಯಾವೊಬ್ಬ ವಿದ್ಯಾರ್ಥಿಯಾಗಲೀ, ಸ್ನೇಹಿತರಾಗಲಿ, ಸಾರ್ವಜನಿಕರಾಗಲೀ ಅವರ ವಿಚಾರವಾಗಿ ಟೀಕಿಸಿಲ್ಲ. ಆಕ್ಷೇಪಿಸಿಲ್ಲ; ಆರೋಪಿಸಿಲ್ಲ. ಭಿನ್ನಾಭಿಪ್ರಾಯಗಳಿಗ ಅವಕಾಶವೇ ಇಲ್ಲ. ಎಲ್ಲರದೂ ಮೆಚ್ಚುಗೆಯ ಮಾತೇ!

ಪ್ರತಿಯೊಂದು ವಿಷಯದಲ್ಲಿಯೂ ಅಚ್ಚುಕಟ್ಟು. ಅಭಿವ್ಯಕ್ತಿಯಲ್ಲಿ ಎಂದಿಗೂ ಗೊಂದಲವಿಲ್ಲದ ಸ್ಪಷ್ಟತೆ. ಭಾಷಣವಾಗಲೀ, ಪಾಠವಾಗಲೀ, ಯಾವುದಾದರಾಗಲಿ ಶ್ರದ್ಧೆ ಮತ್ತು ಬದ್ಧತೆಗಳು ಅನಿವಾರ್ಯ ಅಂಶಗಳಾಗಿರುತ್ತವೆ. ನಮಗೆ ಎಂ.ಎ. ಕ್ಲಾಸಿನಲ್ಲಿ ಕಾವ್ಯಮೀಮಾಂಸೆ ಪಾಠ ಮಾಡುವಾಗಲಂತೂ, ಇಡೀ ಕ್ಲಾಸೇ ಮಂತ್ರಮುಗ್ಧವಾಗಿ ಕುಳಿತಿರುತ್ತಿತ್ತು. ಮೇಜಿನ ಮೇಲೆ ಹತ್ತಾರು ಪುಸ್ತಕಗಳನ್ನು ಹರಡಿಕೊಂಡು ಗಂಭೀರ ವಿಷಯಗಳನ್ನೂ ಹಾಸ್ಯದ ಲೇಪದೊಂದಿಗೆ, ಆತ್ಮೀಯ ಸ್ಪರ್ಶದೊಂದಿಗೆ ಹೇಳುತ್ತಿದ್ದ ಕ್ಷಣಗಳನ್ನು ಮರೆಯುವುದಕ್ಕೇ ಸಾಧ್ಯವಿಲ್ಲ. ಶಾಸ್ತ್ರವಿಷಯವಾದ ಕಾವ್ಯಮೀಮಾಂಸೆಯನ್ನೂ ಸೃಜನಶೀಲ ಸಾಹಿತ್ಯಕ್ಕಿಂತ ರಸಮಯವಾಗಿಸಬಲ್ಲ ಮಾಂತ್ರಿಕ ಶಕ್ತಿ ಅವರಿಗಿತ್ತು. ಆ ಅವರ ಪಾಠದ ವೈಖರಿಯಿಂದಾಗಿ ಇಂದಿಗೂ ಕಾವ್ಯ ಮೀಮಾಂಸೆ ನನ್ನ ಪ್ರೀತಿಯ ವಿಷಯವಾಗಿದೆ.

ಹಳತು-ಹೊಸತು ವಿಚಾರಗಳ ಸಮೀಕರಣ, ಹಿರಿಯ ಕವಿಗಳ ಸಾಂಪ್ರದಾಯಿಕ ನಿಲುವು, ಕಿರಿಯ ಕವಿಗಳ ಕ್ರಾಂತಿ ಮನೋಧರ್ಮಗಳ ಸಮನ್ವಯ ಎಲ್ಲವನ್ನೂ ತಮ್ಮೊಳಗಿರಿಸಿ ಕೊಂಡವರು ಜಿಎಸ್ಎಸ್.

ಜಿಎಸ್ಎಸ್ ನನ್ನ ಮೇಲೆ ಆರಂಭದ ದಿನಗಳಲ್ಲಿ ಅತಿ ಹೆಚ್ಚಿನ ಪರಿಣಾಮ ಬೀರಿದ ಕವಿ ಮತ್ತು ಮೇಷ್ಟ್ರು. ಎಂ.ಎ. ವಿದ್ಯಾರ್ಥಿಯಾಗಿದ್ದು ಒಂದು ಸುಯೋಗವಾದರೆ ಪಿಎಚ್.ಡಿ ವಿದ್ಯಾರ್ಥಿಯಾಗಿದ್ದು ಮತ್ತೊಂದು ಸುಯೋಗ. ಅವರ ಮಾರ್ಗದರ್ಶನದಲ್ಲಿಯೇ ಪಿಎಚ್.ಡಿ ಮಾಡಬೇಕೆನ್ನುವುದು ನನ್ನಂತಹ ಹಲವರ ಬಯಕೆಯಾಗಿತ್ತು. ನನ್ನೊಂದಿಗೆ ಒಂದೆರಡು ಸಲ ತಮಾಷೆಯಾಗಿ ಮಾತಾಡಿದ್ದುಂಟು. ನನಗೋ ಮಾತಾಡುವ ಚಪಲ; ಹರಟೆಯ ಚಪಲ. ಆದರೆ ಅವಕಾಶವೇ ಸಿಗುತ್ತಿರಲಿಲ್ಲ. ಅಲ್ಲದೆ ಅವರ ಬಗ್ಗೆ ಮೆಚ್ಚುಗೆಯಿದ್ದರೂ ಮಾತಾಡಲು ಒಂದು ಬಗೆಯ ಅಳುಕು. ಅವರೊಂದಿಗೆ ಮಾತಾಡುವಷ್ಟು ಪ್ರಬುದ್ಧಳಲ್ಲವೇನೋ ಎನಿಸಿತ್ತು. ಒಂದು ಸಲ ಮಾತ್ರ ಹೇಗೋ ಒಂದು ಸಂದರ್ಭ ಎದುರಾಯಿತು.

ಯಾವುದೋ ಕಾರಣಕ್ಕೆ ನನ್ನ ಮನಸ್ಸು ಬೇಸರಗೊಂಡು ಮುಖ ಬಾಡಿತ್ತು. ಇವನ್ನು ಸುಮಾರು ಹೊತ್ತು ಗಮನಿಸಿದ ಜಿಎಸ್‌ಎಸ್ ನನ್ನ ಬಳಿ ಬಂದು ನಗುತ್ತಲೇ ಕೀಟಲೆಯ ದನಿಯಲ್ಲಿ "ಏನ್ರೀ ಇನ್ನೂ ಮೋಡ ಕರಗಲಿಲ್ಲವೇ'—ಎಂದು ಪ್ರಶ್ನಿಸಿದರು. ಅದು ಅವರು ಮಾತನಾಡುವ ಕಾವ್ಯದ ಭಾಷೆಯ ರೀತಿಯಾಗಿತ್ತು. ನಾನೂ ಹಿಂದೆ ಬೀಳಲಿಲ್ಲ. ಅವರ ವಿದ್ಯಾರ್ಥಿಯಾಗಿ ಅವರದೇ ಶೈಲಿಯಲ್ಲಿ ಉತ್ತರಿಸಬೇಕೆಂದುಕೊಂಡೇ ಹೇಳಿದೆ 'ಮೋಡವೂ ಕರಗುವುದಿಲ್ಲ; ಮಳೆಯೂ ಬರುವುದಿಲ್ಲ' ಎಂದು.

ಪಿಎಚ್.ಡಿ ಸಂಬಂಧವಾಗಿ ಅವರ ಮನೆಗೆ ಹೋಗುತ್ತಿದ್ದೆ. ಜಿಎಸ್‌ಎಸ್ ಅವರ ಅತಿಥಿ ಸತ್ಕಾರದ, ಆದರಾಭಿಮಾನದ ಪರಿಚಯವಾಯಿತು. ವಿಷಯದ ಚರ್ಚೆಯ ಜೊತೆಗೆ ಪ್ರತಿಸಲವೂ ಪುಷ್ಕಳವಾದ ಊಟ. ಮನ ಉಲ್ಲಾಸಗೊಳ್ಳುವ ಉಪಚಾರ. ಒಂದು ದಿನವಲ್ಲ. ಹಲವು ದಿನಗಳು ಈ ಬಗೆಯ ಪ್ರೀತಿಯ ಆತಿಥ್ಯ ಪಡೆಯುವ ಅವಕಾಶ ಸಿಕ್ಕಿತ್ತು. ಇಂದಿಗೂ ಅದೇ ರೀತಿಯ ಅತಿಥಿ ಸತ್ಕಾರ ಅವರಿಂದ ಅವರ, ಮನೆಯವರಿಂದ!!

ಪ್ರತಿಯೊಬ್ಬರ ಜೊತೆಗೂ ಆತ್ಮೀಯವಾಗಿ ಬೆರೆಯುವ ಜಿಎಸ್‌ಎಸ್ ಅವರ ವ್ಯಕ್ತಿತ್ವದ ಮುಖಗಳು ಹಲವು. ಹೇಳುತ್ತಾ ಹೋದಷ್ಟು ಹೇಳಬೇಕಾದ್ದು ಉಳಿದೇಬಿಡುತ್ತದೆ. ಆದ್ದರಿಂದ ಅವರ ಬಗೆಗಿನ ನನ್ನ ಅನಿಸಿಕೆಯನ್ನು ಒಂದೆರಡು ಚರಣಗಳಲ್ಲಿ ಅಭಿವ್ಯಕ್ತಿಸಿದರೆ ತಪ್ಪಾಗುವುದಿಲ್ಲ. ಅವರು ನನಗೆ ಹೀಗೆ ಕಾಣುತ್ತಾರೆ:-

ವ್ಯಕ್ತಿ ಊಹೆಗೆಟುಕದ ವೃತ್ತ
ಒಳಗಸಂಖ್ಯಯೋಜನೆ ತ್ರಿಜ್ಯ
ಎನಿತು ತ್ರಿಜ್ಯಗಳನಿತು
ಗುಣಗಳ ಹೆಣಿಗೆ
ವೈವಿಧ್ಯಭಾವ ಪುಷ್ಪ ವೈತರಣಿ
ಸೌಂದರ್ಯ ರೇಖೆಗಳ ಸರಣಿ
ಗಂಭೀರದೆತ್ತರದ ಶೃಂಗ
ಸಂಗ ಸ್ಪರ್ಶಕೆ ಬರೆ ಮೇಘ ಭೃಂಗ
ಸುರಿಯುವುದು, ಜೇನ್ಮಳೆಯು
ಹಿತ! ಹಿತ! ಹಿತ
ಮೀಟಿದರೆ ಹೊಮ್ಮುವುದು ಸಾಮಗಾನ
ಹೃದಯದಲಿ ಚೆಲುವ ಒಲವಿನ ನರ್ತನ
ಸುಲಭದಲಿ ಅನಾವರಣವಾಗದ
ಭಾವಚಿತ್ರ

ದೇವಶಿಲ್ಪದ ಬೆರಗು ಬಯಸುವುದು
ತಾಯಿ ಸೆರಗು
ಪ್ರೀತಿ ಇಲ್ಲದ ಬದುಕೊಂದು ಶೂನ್ಯ
ಗೋಡೆಗಳ ಕೆಡವಿ ಎದೆಯ
ಮಂದಿರಗಳಲ್ಲಿ ಕಾರ್ತೀಕ ದೀಪಗಳ
ಹಚ್ಚುವ ಕನಸು
ದೀಪದ ಹೆಜ್ಜೆಯ ಜಾಡಿನಲಿ
ನಡೆದು ಆ ವಿಶ್ವಾತ್ಮನ ಊರ
ಸೇರುವ ತವಕ
ಅಳತೆ ಮೀರಿದ ಆದರ್ಶಗಳು
ಎದೆ ತುಂಬ ಉಕ್ಕುವ ಕಡಲು
ತೆರೆದ ದಾರಿಗಳಲ್ಲಿ ಎಚ್ಚರದ ನಡಿಗೆ
ಕಾಡಿನ ಕತ್ತಲಲ್ಲೂ ಸ್ವಯಂ ಬೆಳಕಿನ
ಉಡಿಗೆ
ಕೈಗೆಟುಕದ ಆಕಾಶ ನಕ್ಷತ್ರ ಪ್ರಕಾಶ

ಜಿಎಸ್‌ಎಸ್ ಅವರ ಕಾವ್ಯದ ವಿಷಯಕ್ಕೆ ಬಂದರಂತೂ ಸ್ಪಷ್ಟವಾಗಿ ಅವರ ವ್ಯಕ್ತಿತ್ವದಲ್ಲಿನ ಅಂಶಗಳೇ ಅಲ್ಲಿ ಬಿಂಬಿತವಾಗಿವೆ. ಮಾತಿನಲ್ಲಿನ ನುಣುಪು ಕೋಮಲತೆಗಳು, ಸೌಂದರ್ಯಪ್ರಜ್ಞೆ-ಕಾವ್ಯದಲ್ಲಿಯೂ ನಿಚ್ಚಳವಾಗಿ ಮೂಡಿದೆ. ಪ್ರಾರಂಭದ ಅವರ ಕಾವ್ಯದಲ್ಲಿ ನವೋದಯದ ಎಲ್ಲ ಅಂಶಗಳೂ ಕಾಣಸಿಗುತ್ತವೆ. ಬಹುಶಃ ಅವರು ಬರೆಯ ಹೊರಟ ಸಂದರ್ಭದಲ್ಲಿ ಕುವೆಂಪುರವರ ದಟ್ಟ ಪ್ರಭಾವ ಅವರ ಮೇಲೆ ಇದ್ದಿರಬೇಕು. ಅಲ್ಲದೆ ಸಾಮಗಾನ ಕವನ ಸಂಕಲನಕ್ಕೆ ಮುನ್ನುಡಿ ಬರೆದವರೂ ಅವರೇ. ಜಿಎಸ್‌ಎಸ್ ಕಾವ್ಯದಲ್ಲಿ ಅವರು ಗುರುತಿಸಿ ಹೇಳಿದ ಊರ್ಧ್ವಗಮನಾಭಿಲಾಷೆ, ಆದರ್ಶೋನ್ಮುಖವಾದ ಅಭೀಪ್ಸೆ ಮತ್ತು ಸತ್ಯ, ಶಿವ ಸುಂದರವಾದದ್ದನ್ನು ಆರಾಧಿಸುವ ಹಾರೈಕೆಗಳು ನಿಚ್ಚಳವಾಗಿ ಅವರ ಕವನಗಳಲ್ಲಿ ಕಾಣುತ್ತೇವೆ. ನವೋದಯವಾಗಲೀ ನವ್ಯವಾಗಲಿ ಜಿಎಸ್‌ಎಸ್ ಅವರ ಶೈಲಿಯಲ್ಲಿ ಅವರದೇ ಆದ ವಿಶಿಷ್ಟತೆಯನ್ನು ಗುರುತಿಸಬಹುದು. ಜಿಎಸ್‌ಎಸ್ ನವೋದಯ ಮಾದರಿಯ ಕವಿತೆಗಳನ್ನು ಬರೆದರೂ ಅತಿ ಭಾವುಕತೆಗೆ ಅವಕಾಶವಿಲ್ಲದಂತೆ ನಿಸ್ಪೃಹ ನೆಲೆಯಿಂದಲೇ ಪ್ರಕೃತಿ, ಬದುಕು, ಸಮಾಜಗಳನ್ನು ಅವಲೋಕಿಸಿದರು. ಅನುಭವ ಅವಲೋಕನಗಳ ಮೂಲಕ ನಿಖರವಾದ ಜೀವನ ಸತ್ಯಗಳನ್ನು ಕಂಡುಕೊಂಡಿದ್ದಾರೆ. ನಿಸರ್ಗವನ್ನು ಕುವೆಂಪು, ವರ್ಡ್ಸ್‌ವರ್ತ್‌ರಂತೆ ಆರಾಧಿಸುತ್ತಲೇ, ಚೆಲುವಿಗೆ ಮಾರು ಹೋಗುತ್ತಲೇ ತತ್ವ ಬೋಧೆಯನ್ನೂ ಪಡೆದಿದ್ದಾರೆ. ಜಗತ್ತನ್ನು ಸುತ್ತವರಿದಿರುವ ಆ

ಚಿತ್‌ಶಕ್ತಿಯ ಅಥವಾ ಪರಮನ ವ್ಯಾಪಕತೆಯನ್ನು ಇಡೀ ಸೃಷ್ಟಿಯ ನಿಯಂತ್ರಕ ಶಕ್ತಿಯನ್ನು ಗುರುತಿಸುತ್ತಾರೆ.

ಜಿಸ್ಎಸ್ ಕಾವ್ಯವೆಂದಕೂಡಲೇ *ಕೃಷ್ಣಶಕ್ತಿ, ದೇವಶಿಲ್ಪ, ತೆರೆದ ದಾರಿ, ಗಡಿಯಾರದಡಿಯಲ್ಲಿ, ಶಾರದೆ, ಮುಂಬೈ ಜಾತಕ*—ಇತ್ಯಾದಿ ಹಲವು ಕವಿತೆಗಳು ನೆನಪಿಗೆ ಬರುತ್ತವೆಯಾದರೂ ಅಭಿವ್ಯಕ್ತಿಯಲ್ಲಿ ಸರಳವಾದರೂ ಅನುಭವದ ಗಾಢತೆಯೊಂದಿಗೆ ಅವರ ಬದುಕಿನ ನಿಲುವುಗಳನ್ನು, ಕಂಡುಕೊಂಡ ಸತ್ಯಗಳನ್ನು ಬಿಂಬಿಸುವ ಕೆಲವು ಕವಿತೆಗಳ ಬಗ್ಗೆ ಬರೆಯುವುದು ನನ್ನ ಆಶಯವಾಗಿದೆ. ಪ್ರಾರಂಭದ ಸಂಕಲನಗಳಿಂದ ಮಾತ್ರವೇ ಆಯ್ದುಕೊಂಡ *ಪ್ರಕೃತಿಪೂಜೆ, ತಂತುಕೃತಿ, ನೆನಪಿದೆಯೇ ನಿನಗೆ, ಹೂವು*—ಇತ್ಯಾದಿ ಕೆಲವು ಕವಿತೆಗಳು ಈ ಲೇಖನದ ವ್ಯಾಪ್ತಿಯಲ್ಲಿದೆ.

ನಿಸರ್ಗದಲ್ಲಿ ಶಿವನ ದರ್ಶನವನ್ನು ಕಾಣುವ ಕವಿಗೆ, ಪ್ರಕೃತಿ ಮಾತೆಯ ಸ್ತನ್ಯಪಾನದೊಂದಿಗೆ ಚೇತನ ಪುಷ್ಟಿಗೊಳ್ಳುತ್ತದೆ ಎಂದು ನಂಬಿದ ಕವಿಗೆ, ಅಂತಹ ಪ್ರಕೃತಿಯ ಮಡಿಲಲ್ಲಿ ಕಂಡ ಜೇಡ ಬಲೆ ಏಕಕಾಲದಲ್ಲಿ ಚೆಲುವಿನ ಆನಂದವನ್ನೂ ನೀಡುತ್ತದೆ ಮತ್ತು ಅದರ ಆಂತರ್ಯದಲ್ಲಿ ಇರಬಹುದಾದ ಕ್ರೌರ್ಯದ ಸಾಕ್ಷಾತ್ಕಾರವನ್ನೂ ಮಾಡಿಸುತ್ತದೆ.

**ಏನು ನೂಲುಗಳು ಏನು ಬಂಧನ**
**ಎಂಥ ಸೂಕ್ಷ್ಮಕಲೆ ಎನಿತು ಮೋಹನ**

—ಎಂದು ಅಚ್ಚರಿಯ ಉದ್ಗಾರ ಹೊಂದಿಸಿದ್ದ ಕವಿಗೆ ಮರುಕ್ಷಣದ ಅನುಭವ ಅದಕ್ಕೆ ತದ್ವಿರುದ್ಧವಾಗಿ, ಎದೆಯ ತಲ್ಲಣಕ್ಕೆ ದಾರಿ ಮಾಡುತ್ತದೆ. ಜೇಡ ಬಲೆಯಲ್ಲಿ ಸಿಕ್ಕಿಕೊಂಡ ಕೀಟಕ್ಕೆ ಅದು ಮೃತ್ಯುಪಾಶ.

**ಬಲೆಯ ನೂಲುಗಳ ಸಾವಿನಬಂಧ**
**ಬಿಗಿಯುತ್ತಿದೆ ಆ ಕೀಟವನ**
**ಚೀರಾಡಿತು ಆ ಪ್ರಾಣಿ**
**ಸುಂದರ ಸೊಬಗಿನ ಬಲೆಯಲ್ಲಿ**
**ಯಮ ಬಂಧದ ಆ ನೂಲಿನಲಿ**
................
**ಮೈನಡುಗಿತು ಸಿಡಿದೊಡೆಯಿತು**
**ಸೌಂದರ್ಯ**
**ಸಾವು ಬದುಕಿನ ಹೋರಾಟದ ಕ್ರೌರ್ಯ** *(ತಂತು ಕೃತಿ)*

ಎಂದು ನಿಟ್ಟುಸಿರುಡುತ್ತಾರೆ.

ಬದುಕು ಭಾವಿಸುವಷ್ಟು ಸುಗಮವಲ್ಲ; ಸರಳವಲ್ಲ; ಎಲ್ಲವೂ ನೇರವಲ್ಲ; ನಮ್ಮ

ಸುತ್ತಲೂ ಎಲ್ಲರೂ ಒಳ್ಳೆಯವರಲ್ಲ. ದ್ವಂದ್ವಗಳಿಂದ ಸಂಘರ್ಷಗಳಿಂದ, ದ್ವೇಷಾಸೂಯೆಗಳಿಂದ ಕೂಡಿದ ಬದುಕಿನ ಅನುಭವ ಅವರಿಗಿದೆ.

**ಸಾಕಷ್ಟಿದೆ ಬಡಿದಾಟ**
**ಸಾಕಷ್ಟಿದೆ ನೋವು**
**ಎದೆ ಬಿರಿಯುವ ನರಳಾಟ**
**ಬರಿ ವ್ಯರ್ಥದ ಸಾವು**
**ಎಲ್ಲೆಲ್ಲಿಯು ದ್ವೇಷದ ಹೊಗೆ**
**ಒಣರೋಷದ ಕಿಚ್ಚು**
**ದಹಿಸುತ್ತಿದೆ ಜೀವನವನು** *(ಹೂವಿಗೆ)*

ಇದೂ ಸಾಲದೆಂಬಂತೆ ಅವರಿಗೆ ಲೋಕವು

**ಹೊಗಳು ಭಟ್ಟರ ಸಂತೆ**
**ಇದು ಲೋಕವಂತೆ**
**ಎಲ್ಲೆಲ್ಲಿಯು ಇವರ**
**ಕಂತೆ! ಕಂತೆ!** *(ಇದು ಲೋಕವಂತೆ)*

ಎನಿಸುವುದರೊಂದಿಗೆ ಇನ್ನೊಂದು ಕಟು ಅನುಭವವು

**ನಮ್ಮವರು ನಮಗಿಲ್ಲ**
**ನಮಗೆ ನಾವೇ ಎಲ್ಲ ಕಟ್ಟಕಡೆಗೆ**
**ನಂಬಿದವರೇ ನಮಗೆ**
**ಕಾರುವರು ವಿಷದ ಹೊಗೆ**
**ಅಂತರ್ಯದೊಳಗೆ** *(ಆಟ)*

—ಎನ್ನುವ ನಿಲುವಿಗೆ ಕೊಂಡೊಯ್ಯುತ್ತದೆ. ಇಂತಹ ಅನುಭವಗಳಿಂದ ವಿಕ್ಷುಬ್ಧಗೊಳ್ಳುವ ಮನಸ್ಸಿಗೆ ನಿಸರ್ಗಮುಖವಾದಾಗ ಅಲ್ಲಿನ ಹೂವು, ಮರ ಗಿಡಬಳ್ಳಿಗಳು ಒಂದೊಂದು ಪಾಠವನ್ನು ಕಲಿಸುತ್ತವೆ. ಬದುಕಿನಲ್ಲಿ ಹುಟ್ಟು ಸಾವುಗಳ ದ್ವಂದ್ವದ ರೀತಿ, ಬದುಕನ್ನು ಸ್ವೀಕರಿಸಬೇಕಾದ ಪರಿ ಎಲ್ಲದರ ಅರಿವನ್ನು ಹೊಳೆಸುತ್ತವೆ.

**ಸಾವಿಂಗೆ ಶೋಕಿಸದೆ**
**ಎಳನಗೆ ಬೀರುತ್ತ**
**ಮೋಸವಿಹುದು**
............
**ಅಳುತ ಸತ್ತರೆ ನರಕ**

ನಗುತ ಸತ್ತರೆ ನಾಕ
ಅಳುವು ನಗುವು ಕೂಡಿದ
ಅದೆ ಮರ್ತ್ಯಲೋಕ (ಹೂವು)

—ಎಂದು ಆಲೋಚಿಸುವಂತೆ ಮಾಡುವ ಹೂವು ಬದುಕನ್ನು ಸಹನೀಯವಾಗಿಸುತ್ತದೆ. ನೋವಿನಲ್ಲೂ ಚೆಲುವನ್ನು ಕಾಣಬಲ್ಲ ಕ್ಷಮತೆ ಮೂಡುತ್ತದೆ. ಆಗ ಕವಿಗೆ ಹೊಳೆದದ್ದನ್ನು ಅವರ ಮಾತಿನಲ್ಲೇ ನೋಡಬಹುದು:

ಈ ಬಗೆಯ ನೋವಿನಲಿ ಏನೊ ಚೆಲುವುಂಟು
ಪರರ ನೋವಿನ ಬಗೆಗೆ ಅನುಕಂಪವುಂಟು
ನೋವಿನಲಿ ನಲಿವುಂಟು
ಎಂಬ ಅನುಭವವಾಗಿ ಬೆಳಕು ಮೂಡುತಿದೆ
ನೋವು ಸೃಷ್ಟಿಯ ಮೂಲ ಎಂದು ತೋರುತಿದೆ (ತಾಯಿಗೆ)

ನಗು, ಸಂಭ್ರಮ, ಸಂತೋಷ, ದುಃಖದ ಸಂದರ್ಭಗಳಲ್ಲಿ ಸಹಜವಾಗಿ ಹೊಮ್ಮುವ ಕಣ್ಣೀರು ಕೂಡಾ ಅವರಲ್ಲಿ ಚಿಂತನೆಯ ಕಿಡಿಯನ್ನು ಹೊತ್ತಿಸುತ್ತದೆ. 'ಕಣ್ಣೀರು' ಅವರಿಗೆ ತತ್ವಬೋಧಕನಂತೆ ಕಾಣಿಸುತ್ತದೆ.

ಕಣ್ಣೀರ ಹನಿಯಲ್ಲಿ ಮೊಗದ ನಗೆಯನು ಕಂಡೆ
ಕಣ್ಣೀರ ಹನಿಯಲ್ಲಿ ಜಗದ ಹೃದಯವ ಕಂಡೆ
ಕಣ್ಣೀರಿನಲಿ ವಿವಿಧ ಅನುಭವದ ಸವಿಯುಂಡೆ
ಕಣ್ಣೀರಿಗಂ ಮಿಗಿಲು ತತ್ವಬೋಧಕರಿಲ್ಲ
ಮುನ್ನೀರು ಎಂಬುದೂ ಕಣ್ಣೀರೆ ಎಲ್ಲ! (ಕಣ್ಣೀರು)

—ಎಂದು ನಂಬಿದ ಕವಿಗೆ ಕಣ್ಣೀರಿನಲ್ಲಿ ನೋವು, ನಲಿವು ಪ್ರೀತಿಗಳೆಲ್ಲವೂ ದರ್ಶನವಾಗುತ್ತವೆ. ಜಗತ್ತು, ಸಮಾಜ ನಮ್ಮ ನಿರೀಕ್ಷೆಗಿಂತ ಭಿನ್ನವಾಗಿ ಎಲ್ಲ ಬಗೆಯ ಸಣ್ಣತನಗಳಿಂದ ದ್ವೇಷಾಸೂಯೆಗಳಿಂದ ಕೂಡಿದೆ. ಬದುಕೂ ಸುಗಮವಲ್ಲ. ಹುಟ್ಟುಸಾವಿನ ಚಕ್ರ ಸುಳಿಯಿಂದ ಬಿಡುಗಡೆಯಿಲ್ಲ. ಆದ್ದರಿಂದ ಎಲ್ಲವನ್ನು ಒಪ್ಪಿಕೊಳ್ಳುತ್ತಲೇ ಬದುಕುವುದನ್ನು ಕಲಿಯಬೇಕು.

ಮೈತುಂಬ ಹೂವು ತೊಡಲೇ ಬೇಕು
ಗಿಡವಾಗಿ ಹುಟ್ಟಿದ ಮೇಲೆ
ಬೇಡವೆಂದರು ಕೂಡ ಬೀಳದಿದ್ದೇತೆ
ಸಂಜೆ ಮುಂಜಾವುಗಳ ರೆಕ್ಕೆನೆರಳು (ಹೂವುಗಳ ನಿಟ್ಟುಸಿರು)

—ಎನ್ನುವ ಅರಿವಿನೊಂದಿಗೆ ಎದೆಯಲ್ಲಿ ಧೈರ್ಯ ಆತ್ಮವಿಶ್ವಾಸಗಳನ್ನು ತುಂಬಿಕೊಂಡು ಮುನ್ನುಗ್ಗುವುದನ್ನು ರೂಢಿಸಿಕೊಳ್ಳಬೇಕು, ಬಾಳರಂಗದಲ್ಲಿ ಹೇಗೆ ಸೆಣಸಾಡುತ್ತ ಸಾಗಬೇಕೆನ್ನುವ ಕಲ್ಪನೆಯಿದೆ.

**ಘೋರ ಕದನದಲಿ ಸಾಗಿ ಬಾ**
**ಕುದುರೆ ಹತ್ತಿ ಬಾ ಖಡ್ಗ ಹಿಡಿದು ಬಾ**
**ಎಡರು ತೊಡರುಗಳ ಹಾಡು ಬಾ**
**ಘೋರ ಸಮರದಲಿ ಹೋರಿ ಬಾ**

—ಎಂದು ಆಹ್ವಾನಿಸುವ ಕವಿ ಇದರೊಂದಿಗೆ

**ಹತ್ತು ಜನರ ಕಣ್ ಬಿಡಿಸಿ**
**ಅವರೆದೆಯ ತಂತಿಯ ನುಡಿಸಿ**
**ವಿಶ್ವಗಾನವನು ಹಾಡು ಬಾ**
**ಬಾಳರಂಗದಲಿ**

ಎನ್ನುವುದರೊಂದಿಗೆ 'ವಿಶ್ವಗಾನ'ವನ್ನು ಹೊಮ್ಮಿಸುವ ಜವಾಬ್ದಾರಿಯನ್ನೂ ನೆನಪಿಸುತ್ತಾರೆ. ಎಲ್ಲರಲ್ಲೂ ಸ್ಪಂದನಶೀಲತೆ, ಸಂವೇದನೆಗಳನ್ನು ಹುಟ್ಟು ಹಾಕಬೇಕಾಗಿದೆ ಎನ್ನುತ್ತಾರೆ.

ಅಪ್ರಿಯ ಜನ, ಜಗತ್ತಿನ ಬಗ್ಗೆ ಯೋಚಿಸಿ ತಲೆ ಕೆಡಿಸಿಕೊಳ್ಳುವುದಕ್ಕಿಂತ ದಿವ್ಯ ನಿರ್ಲಕ್ಷ್ಯಭಾವದಿಂದ ಇದ್ದು ಬಿಟ್ಟರೆ ಸಮಸ್ಯೆಗೆ ಪರಿಹಾರ ಸುಲಭ. ಆದ್ದರಿಂದ ಕವಿ ಹೇಳುವ ಕಿವಿ ಮಾತೆಂದರೆ:

**ಕಣ್ಣೆತ್ತಿಯೂ ನೋಡದಿರು ಈ ದೊಡ್ಡವರ ಸಣ್ಣ**
**ತನದತ್ತ; ಬಿಟ್ಟುಬಿಡು ಅವರನ್ನು ಅತ್ತ ಕಡೆಗೆ!** *(ಹಾರೈಕೆ)*

ಕತ್ತಲಮೂಲಕವೇ ಬೆಳಕನ್ನು ಕಾಣುವ ಪ್ರಯತ್ನ ನಮ್ಮದಾಗಬೇಕು. ಧೈರ್ಯದಿಂದ ಹೆಜ್ಜೆ ಸಾಗುತ್ತ ಮುಂದುವರೆಯಬೇಕು.

**ಮುಬ್ಬು ಕವಿದರೇನು ನಿನ್ನ**
**ಹಬ್ಬದಿರುಳ ದಾರಿಗೆ**
**ನಡೆ ಮುಂದಕೆ ಧೈರ್ಯದಿಂದ**
**ಅರುಣೋದಯ ತೀರಕೆ** *(ಯುಗಾದಿಯ ಹಾಡು)*

ಜಗತ್ತನ್ನೇ ಆವರಿಸಿರುವ ಆ ದಿವ್ಯಶಕ್ತಿ, ಚಿತ್‌ಶಕ್ತಿ ನಮ್ಮ ನೆರವಿಗೆ, ಸಾಂತ್ವನಕ್ಕಿದೆ. ಸಂಘರ್ಷಮಯ ಬದುಕಿನಲ್ಲಿ ಕವಿ ಈ ಶಕ್ತಿಯ ಮೊರೆ ಹೊಕ್ಕು ಬೇಡುವುದಾದರೂ ಏನನ್ನು?

**ಶಕ್ತಿಯಕೊಡು ಶಕ್ತಿಯಕೊಡು**
**ಶಕ್ತಿಯಕೊಡು ಹೇ ಪ್ರಭೂ**
**ಸತ್ಯಕಾಗಿ ನಿಲುವ ಛಲವ**
**ದೀಪ್ತಗೊಳಿಸು ನನ್ನೊಳು** *(ಶಕ್ತಿಯ ಕೊಡು)*

ಎಂದು ಪ್ರಾರ್ಥಿಸುತ್ತಾರೆ. ಅವರಿಗೆ ಜೀವನವು ಒಂದು ಹರಿಯುವ ನದಿಯಂತೆ. ಅದರಲ್ಲಿ ನಾವು ಮೀನುಗಳು. ಯಾತ್ರೆ ಮುಂದುವರೆಯಬೇಕಾದರೆ ಒಲವಿನ ಹಾದಿ ಅಗತ್ಯ. ಮೊದಲಿನಿಂದಲೂ ಒಲವು ಚೆಲುವುಗಳನ್ನು ಪ್ರೀತಿಸುವ ಕವಿಗೆ ಈ ಹಾರೈಕೆ ಅನಿವಾರ್ಯ.

**ನೂರು ಒಲವಿನ ಸಾಲು**
**ಹಸಿಯೊಲವು ಹುಸಿಯೊಲವು**
**ಸಿಹಿಯೊಲವು, ಕಹಿಯೊಲವು** *(ಪಯಣ)*

ಎಂದು ಹಲವು ಬಗೆಯ ಒಲವುಗಳನ್ನು ಕಂಡಂತೆ ಹಲವು ಬಗೆಯ ಚೆಲುವುಗಳೂ ಉಂಟು. ಸೃಷ್ಟಿಯಲ್ಲಿ ಚೆಲುವಿಗೆ ಕೊರತೆಯಿಲ್ಲ. 'ಒಂದೊಂದರೊಳು ಉಂಟು ಏನೊ ಚೆಲುವು' ಎಂದು ನಂಬಿದ ಕವಿ ಹೃದಯಕ್ಕೆ ಒಮ್ಮೊಮ್ಮೆ ಚೆಲುವಿನ ಅಂತರ್ಯದಲ್ಲಿ ನೋವನ್ನೂ ಅನುಭವಿಸುತ್ತಾರೆ.

**ಏನು ಒಲವೋ ಎಂಥ ಒಲವೊ,**
**ಬರಿಯ ಮಾಯದ ಮಂಪರ** (ಮುರಿದ ಒಲುಮೆಗೆ)

ಎನ್ನುವ ಬೇಸರದ ತೀರ್ಮಾನಕ್ಕೆ ಬಂದರೂ, ತಟ್ಟನೆ ಚೆಲುವು ಒಲವುಗಳ ಗೆಲುವಿನ ಅನುಭವವಾಗುತ್ತದೆ.

**ಬೆಳಕೊಂದೆ ಗೆಲುವುದು**
**ಚೆಲುವೊಂದೆ ಗೆಲುವುದು**
**ಒಲವೊಂದೆ ಗೆಲುವುದು** (ಗೆಲುವು)

ಕವಿ ಜಿಎಸ್‌ಎಸ್ ಅವರ ಅನುಭವ ಜಗತ್ತು ಅಪಾರ. ಅನುಭವದ ವಿಸ್ತಾರದ ಜೊತೆ ಜೊತೆಗೆ ಸಂಕಲನದಿಂದ ಸಂಕಲನಕ್ಕೆ ಅಭಿವ್ಯಕ್ತಿಯ ರೀತಿಗಳೂ ಬದಲಾದವು. ಕಾವ್ಯದ ವಸ್ತು, ದೃಷ್ಟಿಗೆ ಅನುಗುಣವಾಗಿ ಭಾವ ತೀವ್ರತೆ, ವ್ಯಂಗ್ಯ ವಿಡಂಬನೆಯ ಅಂಶಗಳು ಕಾಣಿಸಿಕೊಂಡವು. ನವ್ಯದತ್ತ ಬರುತ್ತಿದ್ದಂತೆ ಅನುಭವ ಅಭಿವ್ಯಕ್ತಿಗಳೆರಡೂ ಸಂಕೀರ್ಣತೆಯತ್ತ ಹೊರಳಿದವು. ಆದರೆ ಅವರ ಮೊದಲ ಸಂಕಲನಗಳಲ್ಲಿಯೇ ಜಿಎಸ್‌ಎಸ್ ಅವರ ಜೀವನದೃಷ್ಟಿ, ನಂಬಿಕೆ ನಿಲುವುಗಳು, ತಾತ್ವಿಕ ಚಿಂತನೆಗಳು ಸರಳ, ಸ್ಪಷ್ಟ ರೂಪದಲ್ಲಿ

ಕಾಣಿಸಿಕೊಂಡಿವೆಯೆನ್ನುವುದು ನನ್ನ ನಂಬಿಕೆಯಾಗಿದೆ. ಪ್ರೀತಿ ಕರುಣೆ, ಮರುಕಗಳನ್ನೇ ಪರಮಧರ್ಮವೆಂದು ಭಾವಿಸುವ ಜಿಎಸ್ಎಸ್ ಜಗತ್ತಿನ ತುಂಬೆಲ್ಲ ಅದನ್ನೇ ನಿರೀಕ್ಷಿಸುತ್ತಾರೆ. ಬದುಕಿನಲ್ಲಿ ನಿಸರ್ಗದಲ್ಲಿ ಕಾಣುವ ಚೆಲುವನ್ನು ಪ್ರೀತಿಸುತ್ತಾರೆ. ಚೆಲುವಿಗೆ ಚೆಲುವೊಂದೇ ಹೆಸರು. ಅದು ಬಿಟ್ಟು ಬೇರೆ ಯಾವ ಹೆಸರಿಟ್ಟರೂ ಅದು ಊನವೆಂದು ಭಾವಿಸುತ್ತಾರೆ.

ಸ್ವಭಾವತಃ ಮೃದುಮನಸ್ಸಿನ ಜಿಎಸ್ಎಸ್ ಮಾತು, ಕೃತಿಗಳೆಲ್ಲದರಲ್ಲಿಯೂ ಆ ಮೃದುತ್ವವನ್ನೇ ಬಿಂಬಿಸಲು ಪ್ರಯತ್ನಿಸುತ್ತಾರೆ. ವಿಕೃತ, ಕರ್ಕಶ, ಅಸುಂದರ ನಿಷ್ಠುರ ವಾದುದೆಲ್ಲದರಿಂದ ದೂರ ನಿಂತು ಚೆಲುವು ಒಲವುಗಳ ಪರಿಸರದಲ್ಲಿ ಬದುಕುವ ಪ್ರಯತ್ನ ಅವರದಾಗಿದೆ. ತಮ್ಮ ಪಾಡಿಗೆ ತಾವು

> **ಎಲ್ಲ ಕೇಳಲಿ ಎಂದು ನಾನು**
> **ಹಾಡುವುದಿಲ್ಲ**
> **ಹಾಡುವುದು ಅನಿವಾರ್ಯ ಕರ್ಮ ನನಗೆ**

ಎನ್ನುವ ನಿಲುವಿನಲ್ಲಿ ಬದುಕುತ್ತಾ *ನೊಂದ ಜೀವರಿಗೆ ತಂಪನೀಯುವುದೆ ಪರಮ ಪೂಜೆ* ('ನೆಲದ ಕರೆ') ಎಂದು ನಂಬಿ ನಡೆಯುವಂತಹ ವ್ಯಕ್ತಿತ್ವ ಅವರದಾಗಿದೆ.



# ಸ್ನೇಹಗಂಗೆ

ಪಿ. ರೇವಮ್ಮ

1961-63 ನಾನು ಗಂಗೋತ್ರಿಯಲ್ಲಿ ಎಂ.ಎ. ವ್ಯಾಸಂಗಕ್ಕಾಗಿ ಮೈಸೂರಿನಲ್ಲಿ ವಾಸ್ತವ್ಯ ಹೂಡಿದ ವರ್ಷಗಳು ನನ್ನ ಕನಸು ನನಸಾದ ಅವಧಿ. ನಮಗೆ ತರಗತಿಗಳನ್ನು ತೆಗೆದುಕೊಳ್ಳುತ್ತಿದ್ದ ಹಿರಿಯ ಪ್ರಬುದ್ಧ ಪಾಂಡಿತ್ಯಪೂರ್ಣ ಚೇತನಗಳು—ಶ್ರೀಯುತರಾದ ತೀನಂಶ್ರೀ, ಡಿಎಲ್‌ಎನ್ (ಸೇವಾವಧಿಯ ವಿಸ್ತರಣೆಯಲ್ಲಿ) ಎಸ್‌ವಿಪಿ, ಎಲ್‌ಬಿ, ಜಿ.ವಿ. ರಾವ್ ಇವರ ನಡುವೆ ಕಿರಿಯ ಎಳೆಯ ಜೋಡಿ ಜಿಎಸ್‌ಎಸ್ ಹಾಗೂ ಚಿಮೂ.

ನೀಳಕಾಯದ ಚುರುಕು ನಡಿಗೆಯ ಹೊಳಪು ಕಂಗಳ, ಕಚ್ಚೆ ಪಂಚೆ, ಜುಬ್ಬಾ ಧರಿಸಿದ ಸೌಮ್ಯ ರೂಪದ ಜಿಎಸ್‌ಎಸ್, ಭಾರತೀಯ ಕಾವ್ಯಮೀಮಾಂಸೆ ಹಾಗೂ ಭಾವಗೀತೆ ಪ್ರಕಾರವನ್ನು ಬೋಧಿಸಿದರು. ಇವು ನನ್ನನ್ನು ಬಹು ಆಕರ್ಷಿಸಿದ ವಿಷಯಗಳು.

1968ರಲ್ಲಿ ಉಪನ್ಯಾಸಕಿಯಾಗಿ ಬೆಂಗಳೂರಿನಲ್ಲಿ ನೆಲಸಬೇಕಾಯಿತು. ನನ್ನ ಆಪ್ತ ಗೆಳತಿ ಪದ್ಮಾ, ಜಿಎಸ್‌ಎಸ್‌ರವರ ಬಾಳಸಂಗಾತಿಯಾಗಿ ಸಂಸಾರ ಹೂಡಿದ್ದರು. ಹೀಗಾಗಿ ಅವರ ಕುಟುಂಬವರ್ಗದವರ ನಿಕಟ ಪರಿಚಯವಾಯಿತು. ಕುಟುಂಬದ ಸದಸ್ಯರೆಲ್ಲರ ವಿಶ್ವಾಸ ಇಲ್ಲಿಯವರೆಗೆ ಉಳಿದ ಸವಿಯಾದ ಅನುಭವ.

ಜಿಎಸ್‌ಎಸ್‌ರವರಿಗೆ ಪ್ರವಾಸ ಎಂದರೆ ಬಹು ಆಸಕ್ತಿ. ಒಂದೇ ಸ್ಥಳಕ್ಕೆ ಎರಡನೇ ಬಾರಿ ಭೇಟಿ ಕೊಡುವಂತಹ ಸಂದರ್ಭಗಳಲ್ಲೂ ಅದೇ ಉತ್ಸಾಹ. ಸಾಮಾನ್ಯವಾಗಿ ಪ್ರವಾಸಗಳೆಂದರೆ ಮೂರರಿಂದ ಐದು ಮಂದಿಯಾದರೂ ಇರುತ್ತಿದ್ದುದೇ ಹೆಚ್ಚು. ಅದೊಂದು ಚೊಕ್ಕ ಕ್ರಮಬದ್ಧ ವ್ಯವಸ್ಥೆ. ನಮಗೆಲ್ಲ ಬಹು ಆರಾಮ, ಎಲ್ಲಾ ವ್ಯವಸ್ಥೆಯ ಜವಾಬ್ದಾರಿ, ಮಾರ್ಗಸೂಚಿ, ತಂಗುದಾಣಗಳ ನಿರ್ಣಯ—ಎಲ್ಲಾ ಅವರದೇ ಅಂತಿಮ ತೀರ್ಮಾನ. ನಾವು ಪಾಲಿಸಬೇಕಾದ ಒಂದೇ ಒಂದು ಕಟ್ಟುನಿಟ್ಟಿನ ನಿಯಮವೆಂದರೆ ಸಮಯಪಾಲನೆ. ಜಿಎಸ್‌ಎಸ್‌ರವರಿಗೆ ಅಭಿಮಾನಿಗಳ ಬಹು ದೊಡ್ಡ ಬಳಗ. ಎಲ್ಲಿ ಹೋದರೂ ವ್ಯವಸ್ಥೆ, ಉಪಚಾರಕ್ಕೆ ಕೊರತೆಯಿಲ್ಲ ಅದರಲ್ಲಿ ನಾವೆಲ್ಲರೂ ಭಾಗಿಗಳು.

ಸರಳ, ಮಿತವ್ಯಯಿ. ಅವಶ್ಯಕತೆ ಬಿದ್ದಾಗ ಈ ಮಿತ, ಹದವಾಗಿ ಹಿಗ್ಗಲು ಸಿದ್ಧ. ಆ ಸರಳ-ಅಚ್ಚುಕಟ್ಟುತನ ಇಂದಿಗೂ ಅಚ್ಚಳಿಯದಿದೆ. ಒಳಗೊಂದು ಹೊರಗೊಂದು ಇಲ್ಲದ ಇಂತಹ ಸಂದರ್ಭಗಳಲ್ಲಿ ಹೊಮ್ಮುವ ಪ್ರಾಮಾಣಿಕತೆ; ಜೊತೆಗೆ ಮುಗ್ಧತೆ. ಒಮ್ಮೊಮ್ಮೆ

ನಾವಂದದ್ದೊ-ಅವರಂದದ್ದೊ ತಪ್ಪಾಗಿ ಗ್ರಹಿಸಿ ನಮ್ಮ ನಗೆ ಬುಗ್ಗೆ ಎಷ್ಟೋ ಹೊತ್ತಿನವರೆಗೆ ಉಳಿವ ಉಲ್ಲಾಸದ ಪರಿಮಳ. ಆಗಾಗ ಅವರ ವಿದ್ಯಾರ್ಥಿ ಜೀವನದ ನೆನಪನ್ನು ಹಂಚಿಕೊಳ್ಳುವಲ್ಲಿ ಅವರಿಗೆ ಸಂಕೋಚವಿಲ್ಲ. ಮೇಲೇರಿದ ಹಿಂದಿನ ಕಷ್ಟಗಳ ನೆನಪನ್ನು ತಪ್ಪು ಎಂದೆಣಿಸುವವರಿಂದ ಜಿಎಸ್ಎಸ್ ಹೊರತಾದವರು.

ಊಟತಿಂಡಿಗಳಲ್ಲಿ ಶುಚಿ-ರುಚಿ ಅಪೇಕ್ಷಣೀಯ. ಈ ಉಣಿಸಿಗೆ ಇದೇ ಜೋಡಿ ಎನ್ನುವುದು ಪ್ರಿಯ. ಪಥ್ಯವನ್ನು ಪಾಲಿಸುವಲ್ಲಿ ಸೋಮಾರಿತನವಿಲ್ಲದ ಸಂಯಮ. 30-40 ವರ್ಷಗಳ ನಂತರವೂ ಹೆಸರು ಉಳಿಸಿಕೊಂಡಿರುವ ಆಯಾ ಹೋಟೆಲ್‌ಗಳ ಭೇಟಿಯನ್ನು ಅವರು ಮಾಡಿಸಿದ್ದಾರೆ.

ತರಗತಿಗಳ ಸಿದ್ಧತೆ ಎಚ್ಚರ ಆಸಕ್ತಿಗಳು ಅವರು ಭಾಷಣ ಮಾಡುವಾಗಲೂ ಕಡಿಮೆಯಾಗವು. ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಅವರು ಪಾದಾರ್ಪಣೆ ಮಾಡಿದಾಗ ಶ್ರೀ ರಂ.ಶ್ರೀ ಮುಗಳಿಯವರು ನಿವೃತ್ತಿ ಸಮೀಪಿಸಿದ್ದ ಸಮಯ. ನಂತರ ಜಿಎಸ್ಎಸ್ ಇಲಾಖೆಯ ಮುಖ್ಯಸ್ಥರಾಗಿ ನೇಮಕಗೊಂಡು ಸೆಂಟ್ರಲ್ ಕಾಲೇಜಿನಲ್ಲಿದ್ದರು. ಆಗಲೂ ನಾವು ಅವರ ವಿದ್ಯಾರ್ಥಿಗಳೇ—ನಾವು ತರಗತಿಗಳನ್ನು ತೆಗೆದುಕೊಳ್ಳುವಲ್ಲಿ ಎದುರಾಗುತ್ತಿದ್ದ ಪದ್ಯಗಳ ವಿವರಣೆಯನ್ನು ಕೇಳುವ ಸರದಿ ಇದ್ದೇ ಇರುತ್ತಿತ್ತು!

ಸೆಂಟ್ರಲ್ ಕಾಲೇಜಿನಿಂದ ಕನ್ನಡ ವಿಭಾಗ ಜ್ಞಾನಭಾರತಿಗೆ ಸ್ಥಳಾಂತರಗೊಂಡಿತು. ಮುಂದಿನ ವರ್ಷಗಳಲ್ಲಿ ವಿಚಾರಸಂಕಿರಣಗಳ ಪ್ರಾರಂಭ. ವಿಚಾರ ಸಂಕಿರಣಗಳು ಎಂದರೆ ವಿದ್ಯಾರ್ಥಿಗಳ ಉಪನ್ಯಾಸಕರ ಭಾಗಕ್ಕೆ ಉತ್ಸವ ಕುತೂಹಲ ಆಸಕ್ತಿಗಳ ಕೇಂದ್ರ. ಒಂದೊಂದು ಸಂಕಿರಣವು ಮಹತ್ವದ, ಹಿಂದಿನ-ಇಂದಿನ ಕವಿಗಳ ಕುರಿತು ವಿಮರ್ಶೆ; ಕಾವ್ಯ, ಸಾಹಿತ್ಯ, ಮಾರ್ಗಗಳ ಒಳಗೊಂಡ, ವಿಸ್ತಾರ ಯೋಜನೆ. ಅದನ್ನು ವ್ಯವಸ್ಥಿತವಾಗಿ ನಡೆಸಿದ ಹಿರಿಮೆ ಜಿಎಸ್ಎಸ್‌ರವರದ್ದು. ಸಂಕಿರಣಗಳಿಗೆ ಹಾಜರಾಗುವುದು ಎಂದರೆ ಹಲವು ವರ್ಷ ವ್ಯಕ್ತಿಗತವಾಗಿ ಅಧ್ಯಯನ ಮಾಡಬಹುದಾದಷ್ಟು ಸಂಗ್ರಹಿತ ವಿಷಯಗಳು ಒಂದೇ ವೇದಿಕೆಯಲ್ಲಿ ದೊರಕಿದಂತೆ. 2-3 ದಿನಗಳ ಆ ಹಬ್ಬದಲ್ಲಿ ಭಾಗವಹಿಸಿದ ನಮ್ಮಲ್ಲಿ ಉತ್ಸಾಹ ಆನಂದ ತುಂಬಿ ಮುಂದಿನ ಸಂಕಿರಣ ಯಾವಾಗ, ಅಯ್ಯೋ ಇದು ಮುಗಿದೇ ಹೋಯಿತೇ ಎನಿಸಿ ತಿಂಗಳುಗಟ್ಟಲೇ ನಮ್ಮ ಮನಸ್ಸು ತುಂಬಿಕೊಳ್ಳುತ್ತಿದ್ದ ಒಂದು ಅಮಲು ಎಂದರೂ ತಪ್ಪಿಲ್ಲ. ಜಿಎಸ್ಎಸ್‌ರವರ ಸಂಘಟನಾ ಚಾತುರ್ಯಕ್ಕೆ ಸಾಕ್ಷಿ ವಿಚಾರಸಂಕಿರಣಗಳು. ಹಾಗೇ ಅವರ ಮುಂದಾಲೋಚನೆಗೆ ಸಾಕ್ಷಿ: ಒಂದು ಸಂಕಿರಣದಲ್ಲಿ ಮಂಡನೆಯಾದ ಎಲ್ಲ ಲೇಖನಗಳು ಪುಸ್ತಕರೂಪದಲ್ಲಿ ಮುದ್ರಣಗೊಂಡು ಆಸಕ್ತರಿಗೆ ಲಭಿಸುತ್ತಿದ್ದುದು.

ಅವರ ಸೌಜನ್ಯಪೂರ್ಣ ಪ್ರೀತಿ—ನನ್ನ ಗಂಡ, ತಾಯಿ ಇವರನ್ನು ಕಳೆದುಕೊಂಡಾಗ ಬಹಳವಾಗಿ ಉಪಕರಿಸಿ ನನ್ನನ್ನು ಮೇಲೆತ್ತಿಕೊಂಡಿವೆ; ಖಿನ್ನತೆ ಬಳಸಿದಾಗ ಸಕಾಲಿಕ ವರ್ಷಿಸಿ ಅಗಾಧ ಪರಿಣಾಮವನ್ನುಂಟುಮಾಡಿವೆ. ಅದಕ್ಕೆ ನಾನು ಆಜನ್ಮ ಅಭಾರಿ. ಹಲವು ವಿಷಯಗಳಲ್ಲಿ ಅವರು ಮಾಡಿದ ಮಾರ್ಗದರ್ಶನ ಇಂದಿಗೂ ನನ್ನನ್ನು ಮುನ್ನಡೆಸುತ್ತಿದೆ.

ನನ್ನ ಮಕ್ಕಳ ಅಭಿವೃದ್ಧಿ; ವಿವಾಹ ಸಂದರ್ಭಗಳಲ್ಲಿ ನೀಡಿದ ಭೇಟಿ ನನ್ನ ಕುಟುಂಬ ವರ್ಗದವರೆಲ್ಲರಿಗೆ ಮುದ ನೀಡಿದೆ.

ಸೌಮ್ಯ ಶಾಂತ ಸ್ವರೂಪದ ಜಿಎಸ್‌ಎಸ್‌ರವರಿಗೆ ಕೋಪ ಬರುವುದಿಲ್ಲವೆಂದಲ್ಲ. ಕೋಪ ಬಂದರೆ ರುದ್ರ ನಿಜ. ಆಗ ವಿಷಯ ವಿವರಿಸುವ, ಸಮರ್ಥಿಸುವ ಕೆಲಸಕ್ಕೆ ಹೋಗದೆ ಸುಮ್ಮನಿದ್ದರಾಯಿತು ಅಷ್ಟೆ. ಒಂದು ಐವತ್ತು ಎಣಿಸುವಷ್ಟರಲ್ಲಿ ಅವರೇ ಒಮ್ಮೆ ನಕ್ಕು ಎಲ್ಲಾ ತಿಳಿ ತಿಳಿ. ಈಗ ನಮಗೇ ಅನುಮಾನ, ಅವರಿಗೆ ಕೋಪ ಬಂದಿದ್ದು ನಿಜವೇ? ಒಮ್ಮೊಮ್ಮೆ ಆ ಕೋಪ ನಮಗೆ ಒಳಗೊಳಗೆ ನಗೆ ತರಿಸಿದರೂ, ಗಪ್‌ಚುಪ್.

ಪ್ರೀತಿ-ವಿಶ್ವಾಸ ಇವೆಲ್ಲ ಎಷ್ಟೇ ಇದ್ದರೂ, ಅದು ಸಲುಗೆಯಾಗಿ ಎಲ್ಲೆ ಮೀರಲು ಸಾಧ್ಯವಿಲ್ಲ. ಅಂತಹ ಒಂದು ಸುವರ್ಣ ಮಾಧ್ಯಮ—ದೂರ ಪಾಲನೆ ಭಯಮಿಶ್ರಿತ ಗೌರವಾದರಗಳ ಸಲ್ಲಿಕೆ ಮಾತ್ರ ಸಾಧ್ಯ.

ಕರ್ನಾಟಕ ಸಾಹಿತ್ಯ ಅಕಾಡಮಿಯ ಅಧ್ಯಕ್ಷರಾಗಿದ್ದಾಗ ಧಾರವಾಡದಲ್ಲಿ ಕವಿ ದಿನಾಚರಣೆ ಅಂಗವಾಗಿ ಮಾಡಿದ ಪ್ರವಾಸ ಸಿಬ್ಬಂದಿಯೊಂದಿಗಿನ ಪರಿಚಯವೂ ಆಗಿತ್ತು. ಅಲ್ಲದೆ ವರಕವಿ ಬೇಂದ್ರೆಯವರ 'ಶ್ರೀಮಾತಾ'ದಲ್ಲಿ ನಡೆದ ಕಾರ್ಯಕ್ರಮ ಒಮ್ಮೆ ಮಾತ್ರ ಸಿಗುವಂತಹ ಸದವಕಾಶ. ಅದೂ ನನಗೊದಗಿದ್ದು ಜಿಎಸ್‌ಎಸ್‌ರವರ ಸೌಹಾರ್ದ.

ಜಿಎಸ್‌ಎಸ್‌ರವರು ಗುರುಪರಂಪರೆಯ ಪ್ರಮುಖ ಕೊಂಡಿಯಾಗಿ, ನನ್ನ ಭಾಗಕ್ಕೆ ಸ್ನೇಹ ಮಾರ್ಗದರ್ಶನಗಳ ಪ್ರಬಲ ಅಂತಃಶಕ್ತಿಯಾಗಿ ಉಳಿದವರು. ಈಗಲೂ ಅವರು ನಡೆಸಿಕೊಡುವ, ಭಾಗವಹಿಸುವ ಕಾರ್ಯಕ್ರಮಗಳು ಟಿ.ವಿ.ಯಲ್ಲಿ ಪ್ರಸಾರವಾದಾಗ ನನಗೆ ಚೇತೋಹಾರಿ.

ನನಗೆ ಕಾದಂಬರಿ ಪ್ರಕಾರ ಪ್ರಿಯ. ಜಿಎಸ್‌ಎಸ್‌ರವರು ತಾವು ಓದಿ ಮೆಚ್ಚಿದ ಎಷ್ಟೋ ಕಾದಂಬರಿಗಳನ್ನು ಒದಗಿಸಿದ್ದಾರೆ, ಈ ಸ್ನೇಹಗಂಗೆ ನನಗೆ.

■

# ವಿಚಿತ್ರಗಳ ಸಂಗಮ

ಡಾ॥ ಮೀರಾಸಾಬಿಹಳ್ಳಿ ಶಿವಣ್ಣ

1969-74 ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದ ಕಾಲ. ಮೂಲತಃ ವಿಜ್ಞಾನದ ವಿದ್ಯಾರ್ಥಿಯಾದ ನಾನು ಸಾಹಿತ್ಯದ ಹುಚ್ಚು ಹತ್ತಿಸಿಕೊಂಡು ಹಳ್ಳಿಯಿಂದ ಬೆಂಗಳೂರಿಗೆ ಕನ್ನಡ (ಆನರ್ಸ್) ಓದಲೆಂದೇ ಬಂದವನು. ಚಿತ್ರದುರ್ಗ ಸೀಮೆಯವನಾದ ನಾನು ಸಹಜವಾಗಿ ತ.ರಾ.ಸು. ಕಾದಂಬರಿಗಳು ಮೋಡಿಗೆ ಒಳಗಾಗಿದ್ದ ಕಾಲ. ಆದರೆ ಬಾವಿಯಲ್ಲಿದ್ದ ಕಪ್ಪೆಯನ್ನು ಸಾಗರಕ್ಕೆ ತಂದುಹಾಕಿದ ಅನುಭವದಿಂದ ಅಲ್ಲಾಡಿಹೋದೆ, ಕ್ರಮೇಣ ಚೇತರಿಸಿಕೊಂಡು ಹೊಂದಿಕೊಂಡೆ.

ಆಗ ಜಿ.ಎಸ್.ಎಸ್. ಇನ್ನೂ ವಿಭಾಗದ ಮುಖ್ಯಸ್ಥರಾಗಿರಲಿಲ್ಲ. ಅದು ರಂ.ಶ್ರೀ. ಮುಗಳಿಯವರು ಮುಖ್ಯಸ್ಥರಾಗಿದ್ದ ಕಾಲ. ಸಾಹಿತ್ಯ ಚಟುವಟಿಕೆಗಳು ಹೆಚ್ಚು ಇರಲಿಲ್ಲ. ಒಂದು ರೀತಿ ಇಡೀ ಕನ್ನಡ ವಿಭಾಗವೇ ನಿದ್ರಿಸುವಂತಿರುತ್ತಿತ್ತು. ಆದರೆ ಆಗಾಗ್ಗೆ-ಇದ್ದ ಕೆಲವೇ ಅಧ್ಯಾಪಕರ ಪಾಠದ ಮಿಂಚಿನ ಸಂಚಾರ ಮಾತ್ರ ನಮಗೆ ಚುರುಕು ಮುಟ್ಟಿಸುತ್ತಿತ್ತು. ಆಗ ಮನಸ್ಸಿನಲ್ಲಿ ಉಳಿದ ಅಧ್ಯಾಪಕರೆಂದರೆ ಜಿಎಸ್ಎಸ್., ಚಿ.ಮೂ., ಲಕ್ಷ್ಮೀನಾರಾಯಣಭಟ್ಟ, ಕೆ. ಮರುಳಸಿದ್ದಪ್ಪ. (ಆಗ ಕಂಬಾರರು ಇನ್ನೂ ಬಂದಿರಲಿಲ್ಲ.) ಬಹುಶಃ ಜಿಎಸ್ಎಸ್ ಬೇಂದ್ರೆಯವರ 'ಗರಿ' ಕವನ ಸಂಕಲನ ಮಾಡುತ್ತಿದ್ದರು ಎಂದು ನೆನಪು. ಆಗ ನಮ್ಮ ಕಲ್ಪನೆಗಳಲ್ಲಿ ಗರಿಬಿಚ್ಚಿ ಕುಣಿಯುತ್ತಿದ್ದವು. ಜಿಎಸ್ಎಸ್ ಪದ್ಯ ವಾಚನದಲ್ಲಿಯ ಲವಲವಿಕೆ ಎಂತಹುದೆಂದರೆ ಕಣ್ಣಮುಂದೆ ಒಂದು ಜೀವಂತ ರಂಗಭೂಮಿಯೇ ತೆರೆದುಕೊಳ್ಳುತ್ತಿತ್ತು. ಹಾಸ್ಯ-ಉತ್ಸಾಹದ ಹೊನಲು ಹರಿಸಿಬಿಡುತ್ತಿದ್ದರು. ಮಧ್ಯಮಧ್ಯದಲ್ಲೇ ಚಾಟಿ ಏಟಿನಂತಹ ವಿಮರ್ಶೆಯ ಬಾಣವನ್ನು ಬಿಡುತ್ತಿದ್ದರು.

ನಮಗೆ ಜಿಎಸ್ಎಸ್ ವಿಚಿತ್ರಗಳ ಸಂಗಮವಾಗಿ ಕಾಣುತ್ತಿದ್ದರು. ಸೊಂಟದಿಂದ ಕೆಳಕ್ಕೆ-ಸಾಂಪ್ರದಾಯಿಕವಾದ ಕಚ್ಚೆಪಂಚೆಯಾದರೆ, ಮೇಲಕ್ಕೆ ಆಧುನಿಕವೆನಿಸುವ ಮುಚ್ಚುಕೋಟು ಧರಿಸುತ್ತಿದ್ದರು. ಹಳತು-ಹೊಸತುಗಳ ಸಂಗಮವಾದ ಅವರ ವೇಷಭೂಷಣ ಅವರ ವ್ಯಕ್ತಿತ್ವವನ್ನು ಧ್ವನಿಪೂರ್ಣವಾಗಿ ಸೂಚಿಸುವಂತಿತ್ತು. ಹಳತನ್ನು ನಿರಾಕರಿಸದ, ಹೊಸತನ್ನು ತಿರಸ್ಕರಿಸದ ಅವರ ನಿಲುವೇ ಅಲ್ಲಿ ಪ್ರತಿನಿಧಿಸಿದಂತಿತ್ತು. ಪಠ್ಯಗಳಿಗಷ್ಟೇ ಸೀಮಿತವಾದ ನಮ್ಮ ಓದಿನ ಮಿತಿಯನ್ನು, ಒತ್ತಾಯದ ಮೂಲಕ, ಭೀಡಿಕೆ ಮೂಲಕ ಲೈಬ್ರರಿಯವರೆಗೆ

ವಿಸ್ತರಿಸಿದ ಶ್ರೇಯಸ್ಸು ಏನಿದ್ದರೂ ಜಿಎಸ್ಎಸ್‌ರವರಿಗೇ ಸಲ್ಲಬೇಕು. ಸಾಹಿತ್ಯ ವಿದ್ಯಾರ್ಥಿಗಳಿಗೆ ಗ್ರಂಥಾಲಯ ಒಂದು ತೀರ್ಥಕ್ಷೇತ್ರವಿದ್ದಂತೆ ಎಂದು ಒತ್ತಿ ಹೇಳುತ್ತಾ ನಮಗೆ ಲೈಬ್ರರಿಯ ಹುಚ್ಚುಹಿಡಿಸಿದರು. ಸದಾ ವರ್ತಮಾನ ಕಾಲಕ್ಕೆ ತೆರೆದುಕೊಂಡೇ ಭೂತದೊಂದಿಗೆ ಅನುಸಂಧಾನ ನಡೆಸಬೇಕು ಎಂದು ಹೇಳುತ್ತಿದ್ದ ಮಾತು ನಮಗೆ ದಾರಿದೀಪವಾಯಿತು.

ರಂ.ಶ್ರೀ ಮುಗಳಿಯವರು ನಿವೃತ್ತರಾಗಿ ಜಿಎಸ್ಎಸ್ ವಿಭಾಗದ ಮುಖ್ಯಸ್ಥರ ಹುದ್ದೆಗೆ ಏರುತ್ತಲೇ ಇಡೀ ವಿಭಾಗದಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ನಿದ್ರಾವಸ್ಥೆಯಲ್ಲಿದ್ದ ವಿಭಾಗ ಮೈಕೊಡವಿಕೊಂಡು ಮೇಲೆದ್ದಿತು. ಕಾರ್ಯಕ್ರಮಗಳು ಗರಿ ಬಿಚ್ಚಿದವು. ವಿಚಾರ ಸಂಕಿರಣದ ಮೇಲೆ ವಿಚಾರ ಸಂಕಿರಣಗಳನ್ನು ಸಂಘಟಿಸತೊಡಗಿದರು. 'ಕನ್ನಡ ವಿಭಾಗ'— 'ಕನ್ನಡ ಅಧ್ಯಯನ ಕೇಂದ್ರ'ವಾಗಿ ಚಟುವಟಿಕೆಗಳ ಜೀವಂತ ಕೇಂದ್ರವಾಯಿತು. ಪ್ರಸಾರಾಂಗದಿಂದ ನೂರಾರು ಪುಸ್ತಕಗಳು ಹೊರಬಂದವು. ಅಂದಿನ ಸಾಹಿತ್ಯಿಕ ಪರಿಸರ ಇಂದಿನ ಸಾಹಿತ್ಯಕ್ಷೇತ್ರದ ಅನೇಕ ಪ್ರಸಿದ್ಧರನ್ನು ರೂಪಿಸಿದ್ದು ಒಂದು ಇತಿಹಾಸ. ಬರಗೂರು ರಾಮಚಂದ್ರಪ್ಪ, ದೊಡ್ಡರಂಗೇಗೌಡ, ಕೆ.ವಿ.ನಾರಾಯಣ, ಎಚ್.ಎಸ್. ರಾಘವೇಂದ್ರರಾವ್, ಎಚ್.ಎಸ್. ವೆಂಕಟೇಶಮೂರ್ತಿ, ಡಿ.ಆರ್. ನಾಗರಾಜ, ಸಿದ್ದಲಿಂಗಯ್ಯ, ಕರೀಗೌಡ ಬೀಚನಹಳ್ಳಿ ಅವರೆಲ್ಲಾ ವಿದ್ಯಾರ್ಥಿಗಳಾಗಿದ್ದ ಕಾಲ ಅದು. ನವ್ಯ ಸಾಹಿತ್ಯದ ಉಚ್ಛ್ರಾಯ ಕಾಲ ಅದು. ಆದರೆ ಬಂಡಾಯದ ಬೀಜಾಂಕುರವಾಗುತ್ತಿದ್ದ ಸಂಕ್ರಮಣ ಕಾಲವೂ ಅದಾಗಿತ್ತು. ಇಂಥ ವಿಶಿಷ್ಟ ಸನ್ನಿವೇಶದಲ್ಲಿ ಓದುವ ಭಾಗ್ಯ ನಮ್ಮದಾಗಿತ್ತು.

ಕನ್ನಡ ವಿಭಾಗಕ್ಕೆ ಅಂದಿನ ಸಾಹಿತ್ಯದ ಸಿದ್ಧ-ಪ್ರಸಿದ್ಧರೆಲ್ಲ, ದಿಗ್ಗಜಗಳೆಲ್ಲ ಯಾವು ಯಾವುದೋ ನೆಪದಲ್ಲಿ ಬಂದುಹೋಗುತ್ತಿದ್ದ ಸುವರ್ಣ ಕಾಲಘಟ್ಟದಲ್ಲಿ ನಾವಿದ್ದೆವು. ಅವರೆಲ್ಲರನ್ನು ಅಲ್ಲಿ ಬರಮಾಡಿಕೊಳ್ಳುತ್ತಿದ್ದ ಕ್ರಿಯಾಶಕ್ತಿ ಜಿಎಸ್ಎಸ್ ಅವರದೇ ಆಗಿತ್ತು. ವಿದ್ಯಾರ್ಥಿಗಳಿಗೋಸ್ಕರ ವಿದ್ಯಾರ್ಥಿಗಳನ್ನೇ ಪ್ರಬಂಧಕಾರರನ್ನಾಗಿಸಿ ವಿಚಾರ ಸಂಕಿರಣಗಳನ್ನು ನಡೆಸುವ ಪರಿಪಾಠವನ್ನು ಪ್ರಾರಂಭಿಸಿದವರು ಜಿಎಸ್ಎಸ್. ಹೀಗೆ ಹಲವು ಹತ್ತು ಆಸಕ್ತಿಗಳ, ಕುತೂಹಲದ ಕೇಂದ್ರ ಕನ್ನಡ ವಿಭಾಗವಾಗಿದ್ದ ಕಾಲದಲ್ಲೇ-ಜಾನಪದ, ತೆಲುಗು ವಿಷಯಗಳನ್ನು ಹೊಸದಾಗಿ ಸೇರಿಸಿದರು. ಜಾನಪದ ವಿಭಾಗವನ್ನು ಬೆಳಸುವ ಉದ್ದೇಶದಿಂದ ಯಾವುದೋ ಪದವಿ ಕಾಲೇಜಿನಲ್ಲಿ ಕೆಲಸ ಮಾಡುತ್ತಿದ್ದ ಚಂದ್ರಶೇಖರ ಕಂಬಾರರನ್ನು ಕರೆಸಿಕೊಂಡರು. ಕಾಳೇಗೌಡ ನಾಗವಾರರೂ ವಿಭಾಗಕ್ಕೆ ಬಂದರು. ತೆಲುಗು ವಿಭಾಗಕ್ಕೆ ತೆಲುಗಿನ ಸುಪ್ರಸಿದ್ಧ ಜಾನಪದ ವಿದ್ವಾಂಸರಾದ ಡಾ. ತಂಗಿರಾಲ ವೆಂಕಟಸುಬ್ಬರಾವ್ (ನಾವು ಸಂಕ್ಷಿಪ್ತವಾಗಿ ಟಿ.ವಿ.ಎಸ್. ಎನ್ನುತ್ತಿದ್ದೆವು) ಅವರನ್ನು ಬರಮಾಡಿಕೊಂಡರು. ಹೀಗೆ ವಿಭಾಗ ಸರ್ವತೋಮುಖ ಅಭಿವೃದ್ಧಿಗೆ ತನ್ನನ್ನು ತೆರೆದುಕೊಂಡಿತು. ಕುವೆಂಪುರವರ ಪಟ್ಟಶಿಷ್ಯರಾಗಿದ್ದ ಜಿಎಸ್ಎಸ್, ಕುವೆಂಪು ಮಾನಸಗಂಗೋತ್ರಿಯನ್ನು ನಿರ್ಮಿಸಿದ ಮಾದರಿಯಲ್ಲೇ ಬೆಂಗಳೂರು ವಿಶ್ವವಿದ್ಯಾಲಯದ ನಾಗರಭಾವಿಯ ಹೊಸ ಆವರಣ 'ಜ್ಞಾನ ಭಾರತಿ'ಯನ್ನು ನಿರ್ಮಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದರು.

ಹೀಗೆ ಕನ್ನಡ ವಿಭಾಗದ ಕೀರ್ತಿ ದಿಗ್ದಿಗಂತಕ್ಕೆ ಹಬ್ಬುತ್ತಿರುವಾಗಲೇ ಜಿಎಸ್‌ಎಸ್ ಅವರಿಗೆ ರಷ್ಯಾಕ್ಕೆ ಹೋಗುವ ಅವಕಾಶ ಬಂತು. ಮೊದಲೇ ಹೊರದೇಶ, ಅದೂ ಚಳಿದೇಶ, ಅಲ್ಲಿಗೆ ನೀವು ಸೂಟು-ಬೂಟು ಹಾಕಿಕೊಂಡೇ ಹೋಗಬೇಕು ಎಂದು ವಿದ್ಯಾರ್ಥಿಗಳ ಆಗ್ರಹ. ನಮ್ಮೆಲ್ಲರ ಆಗ್ರಹಕ್ಕೆ ಮಣಿದು ಸೂಟು ಹೊಲಿಸಿದರು. 'ಹಾಕಿಕೊಂಡು ಬನ್ನಿ, ಇಲ್ಲೇ ಸೂಟ್ ಹಾಕುವ ಟ್ರಯಲ್ ಮಾಡಿ' ಎಂದು ನಮ್ಮೆಲ್ಲರ ಒತ್ತಾಯ. ಆಗ್ರಹಕ್ಕೆ ಮಣಿದು ಹಾಕಿಕೊಂಡು ಬಂದರು. ಪಂಚೆ ಹಾಕಿಕೊಂಡು ಫ್ರೀಯಾಗಿದ್ದ, ಅವರ ಫಜೀತಿ ಕಂಡು ಎಲ್ಲರೂ ಒಂದಷ್ಟು ಕಾಲ ಸಂತೋಷಪಟ್ಟವರೇ. ಅವರು ರಷ್ಯಾಕ್ಕೆ ಹೋಗಿ ಬಂದ ನಂತರ ಹಂಚಿಕೊಂಡ ಅನುಭವವನ್ನು ಅವರ ಬಾಯಿಯಲ್ಲೇ ಕೇಳಬೇಕು. ನಿಜಕ್ಕೂ ಅದೊಂದು ರಸಾನುಭವ.

ಇಷ್ಟಾಗಿಯೂ ನನ್ನ ಅವರ ನಡುವಿನ ಸಂಬಧದಲ್ಲಿ ಒಂದು ರೀತಿಯ 'ಅಂತರ' ಇದ್ದೇ ಇತ್ತು. ಅದು ಒಡೆದದ್ದು—ನಾನು ಎಂ.ಎ.ಯಲ್ಲಿ ಅವರದೇ ವಿಶೇಷ ವಿಷಯ 'ಭಾವಗೀತೆ'ಯನ್ನು ತೆಗೆದುಕೊಂಡಾಗ. ಆಗ ಪು.ತಿ.ನ. ರವರ 'ಹಣತೆ' ಕವನಸಂಕಲನ ಪಾಠ ಮಾಡುತ್ತಿದ್ದ ನೆನಪು. ನಮ್ಮನ್ನು ದಿವ್ಯಾನುಭೂತಿಯಲ್ಲಿ ಮುಳುಗಿಸಿ ತೇಲಿಸುತ್ತಿದ್ದರು. ಅವರ ಕಾವ್ಯಮೀಮಾಂಸೆಯ ಪಾಠವಂತೂ ಒಂದು ಮರೆಯಲಾಗದ ಅನುಭವ. ಅಷ್ಟೊತ್ತಿಗೆ ಅವರ ಪಿಎಚ್.ಡಿ ಥೀಸಿಸ್ ಕೂಡ ಓದಿದ್ದೆ. ಭಾರತೀಯ ಕಾವ್ಯಮೀಮಾಂಸಾ ಕ್ಷೇತ್ರವಲ್ಲಿ ತೀ.ನಂ.ಶ್ರೀ ಬಿಟ್ಟರೆ ಏಕಮೇವಾದ್ವಿತೀಯರೆಂದರೆ ಜಿಎಸ್‌ಎಸ್‌ರವರೇ ಆಗಿದ್ದರು. ಅವರು ವಿಭಾಗದ ಮುಖ್ಯಸ್ಥರಾದ್ದರಿಂದ ನಮಗೆ ನಿಯಮಿತವಾಗಿ ತರಗತಿಗಳನ್ನು ತೆಗೆದುಕೊಳ್ಳಲಾಗುತ್ತಿರಲಿಲ್ಲ. ಆದರೆ ಅವರಿಗೆ ಬಿಡುವಿದ್ದಾಗ ಬಂದು ಗಂಟೆಗಟ್ಟಲೆ ಅಂದರೆ ಎರಡು-ಮೂರು ಗಂಟೆಗಳಷ್ಟು ಕಾಲ ಕಂಟಿನ್ಯೂಯಸ್ ಆಗಿ ತೆಗೆದುಕೊಳ್ಳುತ್ತಿದ್ದರು. ಯಾರಿಗೂ ಕಾಲದ ಪರಿವೆಯೇ ಇರುತ್ತಿರಲಿಲ್ಲ! ಪಾಠ ಮಾಡುವ ವೇಗ ಕೂಡ—ನಾನ್‌ಸ್ಟಾಪ್, ಸೂಪರ್ ಫಾಸ್ಟ್ ಎಕ್ಸ್‌ಪ್ರೆಸ್ ಮಾದರಿಯದು!

ಮೈಸೂರು ವಿಶ್ವವಿದ್ಯಾಲಯ 'ಪ್ರಬುದ್ಧ ಕರ್ನಾಟಕ'ದ ಮಾದರಿಯಲ್ಲಿ, ಬೆಂಗಳೂರು ವಿಶ್ವವಿದ್ಯಾಲಯದಿಂದಲೂ 'ಸಾಧನೆ' ಎಂಬ ಪತ್ರಿಕೆ ತಂದಿದ್ದು ನಿಜಕ್ಕೂ ಇವರ ಸಾಧನೆಯೇ ಸರಿ.

'ಜ್ಞಾನಭಾರತಿ'ಯ ಹೊಸ ಕ್ಯಾಂಪಸ್‌ಗೆ ಮೊಟ್ಟಮೊದಲು ಹೋದವರು 'ಕನ್ನಡ'ದವರು ಎಂಬ ಹೆಗ್ಗಳಿಕೆ ಪಡೆದುಕೊಳ್ಳಲು, ಶೈಕ್ಷಣಿಕ ವರ್ಷದ ಕೊನೆಯ ಮೂರು-ನಾಲ್ಕು ತಿಂಗಳು ಅಲ್ಲಿಗೆ ಓಡಿಯಾಡುವಂತೆ ಮಾಡಿದ ವಿಶಿಷ್ಟ ಅನುಭವಕ್ಕೂ ಜಿಎಸ್‌ಎಸ್‌ರೇ ಕಾರಣರು. ಆದರೆ ಅತಿ ಉತ್ಸಾಹದಲ್ಲಿ—(ಅಂದು ವಿಶ್ವವಿದ್ಯಾಲಯ ಆರ್ಥಿಕ ಬಿಕ್ಕಟ್ಟು ಎದುರಿಸುತ್ತಿದ್ದ ಕಾರಣ-ಮಿತವ್ಯಯದ ಕ್ರಮವಾಗಿ ಶೈಕ್ಷಣಿಕ ಪ್ರವಾಸದ ಅನುದಾನವನ್ನು ಬಿಟ್ಟುಕೊಡಲು ಕೇಳಿದ ಕುಲಪತಿಗಳ ಮಾತಿಗೆ ಜಿಎಸ್‌ಎಸ್ ಒಪ್ಪಿಗೆ ಸೂಚಿಸಿ ಬಂದಿದ್ದರು.) ನಮ್ಮ ಪ್ರವಾಸಕ್ಕೆ 'ಕಲ್ಲುಹಾಕಲು' ಮನಸ್ಸು ಮಾಡಿದ್ದರು! ಆಗ ವಿದ್ಯಾರ್ಥಿಗಳೊಂದಿಗೆ ಸ್ವಲ್ಪ

ಮನಸ್ತಾಪವೂ ಉಂಟಾಯಿತು. ಆದರೆ ನಮ್ಮ ಗುಂಪಿನ ವಿದ್ಯಾರ್ಥಿಗಳು ಕೆಲವೆಡೆ ಪ್ರಬಲ ರಾಜಕೀಯ ಪ್ರಭಾವ ಇದ್ದ ಕಾರಣ ಪ್ರವಾಸ ಅನುದಾನವನ್ನು ಬಿಡುಗಡೆ ಮಾಡಿಸಿಕೊಂಡು ತಂದು ಪ್ರವಾಸ ಹೋದಾಗ ಸ್ವಲ್ಪ ಮುಜುಗರ ಅನುಭವಿಸಿದರು.

ಈ ಪ್ರಸಂಗವನ್ನೇ ಕೆಲವರು ದೊಡ್ಡದು ಮಾಡಿ ನಮ್ಮನ್ನು ಅವರ ವಿರೋಧಿಗಳೆಂಬಂತೆ ಬಣ್ಣಿಸುವಲ್ಲಿ ಯಶಸ್ವಿಯೂ ಆದರು. ಅಲ್ಲಿಯವರೆಗೂ ಜಾತ್ಯಾತೀತ ನಿಲುವಿಗೆ ಹೆಸರಾಗಿದ್ದ ಜಿಎಸ್‌ಎಸ್ ಸ್ವಲ್ಪ ತಮ್ಮ ಸಮತೋಲನವನ್ನು ಕಳೆದುಕೊಂಡರೇನೂ ಎನ್ನುವ ಅನುಮಾನ ಎಲ್ಲರಲ್ಲೂ ಮೂಡಿತು. ಯಾವತ್ತೂ ಸಣ್ಣವರಾಗದಿದ್ದ ಅವರು ವಿದ್ಯಾರ್ಥಿಯೊಬ್ಬನ ಮಾತುಕೇಳಿ ಸ್ವಲ್ಪ ವಿಚಲಿತರಾದರೇನೋ ಅನಿಸಿತು. ಈ ಅತೃಪ್ತಿ ಅಧ್ಯಾಪಕವಲಯದಲ್ಲೂ ಬೇರೊಂದು ರೀತಿಯಲ್ಲಿ ಕಾಣಿಸಿಕೊಂಡಿತು. ರೀಡರ್ ಹುದ್ದೆಗಾಗಿ ನಡೆದ ಸಂದರ್ಶನದಲ್ಲಿ ಅಳಿಯನ ಪಕ್ಷವಹಿಸಿದರೆಂಬ ಗುಲ್ಲು ಎದ್ದಿತು. ಆದರೆ ಜಿಎಸ್‌ಎಸ್ ಬಹಳ ಬೇಗ ಈ ಸುಳಿಯಿಂದ ಹೊರಬಂದು ತಮ್ಮ ಜಾತ್ಯಾತೀತ ನಿಲುವನ್ನು ಮೆರೆದರು. ಬರಗೂರು ರಾಮಚಂದ್ರಪ್ಪ, ಡಿ.ಆರ್. ನಾಗರಾಜ, ಸಿದ್ದಲಿಂಗಯ್ಯನವರಂತಹ ಪ್ರತಿಭೆಗಳನ್ನು ವಿಭಾಗಕ್ಕೆ ತರುವ ಮೂಲಕ ಎಲ್ಲರ ಬಾಯಿ ಮುಚ್ಚಿಸಿದರು.

ಮಾನವ ಸಹಜವಾದ ಇಂಥ ಒಂದೆರಡು ಘಟನೆಗಳನ್ನು, ದೌರ್ಬಲ್ಯಗಳನ್ನು ಹೊರತುಪಡಿಸಿದರೆ, ತೆಲುಗಿನ ಕವಿ ವೇಮನ ಹೇಳುವಂತೆ—“ಪುರುಷಲಲೋ ಪುಣ್ಯಪುರುಷಲುವೇರಯ್ಯಾ” ಎಂಬ ಮಾತು ಜಿಎಸ್‌ಎಸ್ ಅವರಿಗೆ ಅಕ್ಷರಶಃ ಅನ್ವಯಿಸುತ್ತದೆ.

■

# ಅಪರೂಪದ ಆಚಾರ್ಯ

ಡಾ|| ಡಿ. ಮಂಗಳಾ ಪ್ರಿಯದರ್ಶಿನಿ

ಇನ್ನೂ ಶಾಲೆಯಲ್ಲಿ ಓದುತ್ತಿದ್ದಾಗ ಶ್ರೀಮತಿ ಹೆಚ್.ಆರ್. ಲೀಲಾವತಿಯವರು ಹಾಡಿದ್ದ 'ಉಡುಗಣವೇಷ್ಟಿತ' ಕವನ ನನ್ನ ಮನಸ್ಸನ್ನು ಸೂರೆಗೊಂಡಿತ್ತು. ಕಷ್ಟಪಟ್ಟು ಶಾಲೆಯ ವಾರ್ಷಿಕೋತ್ಸವದಲ್ಲಿ ಹಾಡಿ ಮೆಚ್ಚುಗೆ ಪಡೆದ ನೆನಪು ಇನ್ನೂ ಹಸಿರಾಗಿದೆ. ಆದರೆ ಅದರ ರಚನೆಕಾರರು ಯಾರು ಎಂದು ತಿಳಿದಿರಲಿಲ್ಲ. ಕಾಲೇಜಿನ ಮೆಟ್ಟಿಲು ಹತ್ತುತ್ತಿದ್ದಂತೆ ನಮ್ಮ ಕಾಲೇಜಿನ 'ವೃಂದಗಾನ ತಂಡ'ದ ಸದಸ್ಯಳಾದಾಗ ಖ್ಯಾತ ಸುಗಮ ಸಂಗೀತಗಾರ ದಿವಂಗತ ಮೈಸೂರು ಅನಂತಸ್ವಾಮಿಯವರು ನಮಗೆ ಕೆಲವು ಹಾಡುಗಳನ್ನು ಹೇಳಿಕೊಟ್ಟರು. ಆ ಸಂದರ್ಭದಲ್ಲಿ ನಮಗೆ 'ಎದೆ ತುಂಬಿ ಹಾಡಿದೆನು' ಕವನವನ್ನು ಹೇಳಿಕೊಟ್ಟರು. ಆ ಕವನದ ಪದಲಾಲಿತ್ಯ, ಸಾಹಿತ್ಯ, ಭಾವ-ಹದಿಹರೆಯದ ಹೆಣ್ಣುಮಕ್ಕಳಾದ ನಮ್ಮನ್ನು ಅಪ್ಪಿ ಭದ್ರವಾಗಿ ಮನಸ್ಸಿನೊಳಗೆ ಕೂತುಬಿಟ್ಟಿತ್ತು. ಅನಂತಸ್ವಾಮಿಯವರು ಪ್ರತಿಯೊಂದು ಕವನದ ಕವಿ, ಕವನದ ಭಾವ ಸಂದರ್ಭ—ಇವುಗಳನ್ನು ತಿಳಿಸಿ, ಹಾಡಿನ ಸಾಹಿತ್ಯವನ್ನು ಬರೆಸಿ, ನಂತರ ಹಾಡಿಸುತ್ತಿದ್ದರು. ಈ ಕವನದ ಕರ್ತೃ ಡಾ. ಜಿ.ಎಸ್.ಶಿವರುದ್ರಪ್ಪನವರೆಂದು ಬರೆಸಿದರು. ಹಾಗೇ 'ಉಡುಗಣವೇಷ್ಟಿತ' ಕವನದ ಕರ್ತೃವೂ ಅವರೇ ಎಂಬುದು ತಿಳಿಯಿತು. ಹೀಗೆ ಡಾ. ಜಿಎಸ್‌ಎಸ್ ಅವರನ್ನು ಅವರ ಕಾವ್ಯದ ಸಹೃದಯಿಯಾಗಿ ಈಗಾಗಲೇ ಪರಿಚಯ ಮಾಡಿಕೊಂಡುಬಿಟ್ಟಿದ್ದೆ. ಆದರೆ ಅವರನ್ನು ನೋಡಿರಲಿಲ್ಲ. ಅವರನ್ನು ಮೊದಲಬಾರಿಗೆ ನೋಡಿದ್ದೇ ಎಂ.ಎ. ತರಗತಿಗಳಿಗೆ ಮೊದಲ ಸೆಮೆಸ್ಟರ್ ಕನ್ನಡ ಎಂ.ಎ. ವಿದ್ಯಾರ್ಥಿನಿಯಾಗಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರವನ್ನು ಸೇರಿದಾಗ.

ನನ್ನ ಆತ್ಮೀಯ ಗುರುಗಳಾದ ಡಾ. ಜಿಎಸ್‌ಎಸ್ ಅವರ ನೆನಪು ಮಾಡಿಕೊಳ್ಳಲು ಹೊರಟಾಗ ನನ್ನ ಮನಸ್ಸು ಎಪ್ಪತ್ತರ ದಶಕದ ಕೊಟ್ಟಕೊನೆಯ ಭಾಗಕ್ಕೆ ಹಾರುತ್ತದೆ. ಅದೇ ವರ್ಷ ತಾನೆ ಬೆಂಗಳೂರು ವಿಶ್ವವಿದ್ಯಾಲಯ ಸ್ನಾತಕೋತ್ತರ ಪದವಿ ವಿಷಯಗಳಿಗೆ ಸೆಮೆಸ್ಟರ್ ಪದ್ಧತಿಯನ್ನು ಜಾರಿಗೊಳಿಸಿತ್ತು. ಜ್ಞಾನಭಾರತಿಯ ಕನ್ನಡ ಅಧ್ಯಯನ ಕೇಂದ್ರಕ್ಕೆ ಆಗ ತುಂಬು ಉತ್ಸಾಹ ಪುಟಿಯುತ್ತಿದ್ದ ಹರೆಯ. ಸೆಮೆಸ್ಟರ್ ಅವಧಿ ಚಿಕ್ಕದು, ಆದರೆ ಇದ್ದ ಪಠ್ಯ ಅಪಾರ—ಹೀಗಾಗಿ ಅಲ್ಲಿದ್ದ ಮೇಷ್ಟುಗಳೆಲ್ಲ ರಜಾದಿನ ಎಂಬುದನ್ನೂ ಪರಿಗಣಿಸದೆ

ಒಬ್ಬರ ಮೇಲೆ ಒಬ್ಬರು ಪೈಪೋಟಿಯಂತೆ ನಮಗೆ ತರಗತಿಗಳನ್ನು ತೆಗೆದುಕೊಳ್ಳುತ್ತಿದ್ದರು. ಸದಾ ಅಸೈನ್‌ಮೆಂಟುಗಳು, ನೋಟ್ಸುಗಳು, ಟೆಸ್ಟುಗಳು, ವಿಚಾರ ಸಂಕಿರಣಗಳು—ನಾವು ಪುಸ್ತಕಲೋಕದ ಕ್ರಿಮಿಗಳಾಗಿದ್ದೆವು. ಯಾವಾಗಲೂ ಗ್ರಂಥಾಲಯ, ಬರವಣಿಗೆ, ಅಧ್ಯಯನ—ಇಂಥ ಹೊಸ ಸಂದರ್ಭಕ್ಕೆ ಹೊಂದಿಕೊಳ್ಳಲು ಪ್ರಯತ್ನಿಸುತ್ತಿದ್ದೆವು. ಅಂತಹ ಸಂದರ್ಭದಲ್ಲಿ ಕನ್ನಡ ನಾಡಿನ ಖ್ಯಾತ ಕವಿಗಳು, ಕಾದಂಬರಿಕಾರರು, ನಾಟಕಕಾರರು, ವಿಮರ್ಶಕರು, ಭಾಷಾ ವಿಜ್ಞಾನಿಗಳು, ಸಂಶೋಧಕರು, ಚಲನಚಿತ್ರ ನಿರ್ದೇಶಕರು—ಹೀಗೆ ಸಾಲು ಸಾಲು ಪ್ರತಿಭಾವಂತರು ನಮ್ಮ ಅಧ್ಯಾಪಕರಾಗಿದ್ದರು. ಹೀಗಾಗಿ ಸದಾ ನಮ್ಮ ಸುತ್ತ ಸೃಜನಶೀಲ ಹಾಗೂ ಕ್ರಿಯಾಶೀಲ ವಾತಾವರಣ.

ಮೊದಲದಿನ ಎಂ.ಎ. ತರಗತಿಗೆಂದು ಜ್ಞಾನಭಾರತಿಯ ಕ್ಯಾಂಪಸ್ಸಿಗೆ ಹೋದಾಗ ಕನ್ನಡ ಅಧ್ಯಯನ ಕೇಂದ್ರದ ತಲೆಬರಹ ಕಾಣಿಸಿತು. ಕಿರಿದಾದ ಎರಡು ಮೆಟ್ಟಲೇರಿ ಪ್ರಾಂಗಣಕ್ಕೆ ನಿಂತು ಎಡಕ್ಕೆ ತಿರುಗಿದ ಕೂಡಲೇ ಕಾಣಿಸಿದ ಬೋರ್ಡು, ಡಾ. ಜಿ.ಎಸ್. ಶಿವರುದ್ರಪ್ಪ, ನಿರ್ದೇಶಕರು, ಎಂದು. ನೋಡು ನೋಡುತ್ತಿದ್ದಂತೆಯೇ ಶುಭ್ರವಾದ ಬಿಳಿಯ ಮಲ್ ಕಚ್ಚೆಪಂಚೆ, ಬಿಳಿ ಜುಬ್ಬ ಧರಿಸಿದ ಎತ್ತರದ ನಿಲುವಿನ ವ್ಯಕ್ತಿಯೊಬ್ಬರು ಪುಸ್ತಕಗಳೊಂದಿಗೆ ಎರಡನೇ ಎಂ.ಎ. ತರಗತಿಯ ಒಳಗೆ ನುಸುಳಿದರು. ದೂರದಿಂದ ಹಣುಕು ಹಾಕಿ ಅವರನ್ನು ದಿಟ್ಟಿಸಿದ ನನಗೆ ಅವರ ಚಿನ್ನದ ಬಣ್ಣದ ಚೌಕಟ್ಟಿನ ಕನ್ನಡಕ, ಕ್ರಾಪು, ಮುಖಭಾವ—ಎಲ್ಲವೂ ಎಂದೋ ನಮ್ಮ ಮನೆಯಲ್ಲಿ ನೋಡಿದ ತೀ.ನಂ.ಶ್ರೀಯವರ ಭಾವಚಿತ್ರವನ್ನು ನೆನಪಿಸಿತ್ತು. ಸುತ್ತಮುತ್ತಲಿನ ಇತರ ವಿದ್ಯಾರ್ಥಿಗಳ 'ಪ್ರೊಫೆಸರ್' ಎಂಬ ಗುಸು-ಪಿಸುಮಾತುಗಳಿಂದ ಸ್ಪಷ್ಟವಾದದ್ದು, ಅವರೇ ಡಾ. ಜಿ.ಎಸ್. ಶಿವರುದ್ರಪ್ಪನವರು, ಎಂದು.

ವಿದ್ಯಾರ್ಥಿಗಳು ತುಂಬ ಗೌರವ ಹಾಗೂ ಪ್ರೀತಿಯಿಂದ ಜಿಎಸ್ಎಸ್ ಎಂದೇ ಕರೆಯುವ ಡಾ. ಜಿ.ಎಸ್. ಶಿವರುದ್ರಪ್ಪನವರ ಪ್ರತಿಭೆಗೆ ಹಲವು ಹತ್ತು ಮುಖಗಳು. ಅತ್ಯುತ್ತಮ ಅಧ್ಯಾಪಕರಾಗಿ, ಕವಿಗಳಾಗಿ, ವಿಮರ್ಶಕರಾಗಿ, ಆಡಳಿತಗಾರರಾಗಿ, ಅನುವಾದಕರಾಗಿ, ಸಂಪಾದಕರಾಗಿ, ಕನ್ನಡ ಸಾಹಿತ್ಯದ ಎಲ್ಲ ಸಕ್ರಿಯ ಸಾಹಿತ್ಯಿಕ ಚಳುವಳಿಗಳೊಂದಿಗೆ ತಮ್ಮನ್ನು ತಾವು ಗುರುತಿಸಿಕೊಳ್ಳುತ್ತಲೇ ಅದನ್ನು ಮೀರಿ ಬೆಳೆದ ಜಿಎಸ್ಎಸ್ ಅವರ ಕೊಡುಗೆ ಕನ್ನಡ ಸಾಹಿತ್ಯ, ಸಂಸ್ಕೃತಿಗೆ ಅಪಾರವಾದದ್ದು.

ವಿದ್ಯಾರ್ಥಿಜೀವನ, ವ್ಯಕ್ತಿಯ ಬದುಕಿನಲ್ಲಿ ಬಹಳ ಅಮೂಲ್ಯವಾದ ಘಟ್ಟ. ಈ ಘಟ್ಟದಲ್ಲಿ ಎಂಥ ಅಧ್ಯಾಪಕರು, ಸ್ನೇಹಿತರು ಪ್ರಭಾವ, ಪ್ರೇರಣೆ ನೀಡಿ ಮಾರ್ಗದರ್ಶನ ಮಾಡುತ್ತಾರೋ ಅದನ್ನೇ ಅವರ ಇಡೀ ಭವಿಷ್ಯದ ಬದುಕು ಆಧರಿಸುತ್ತದೆ. ಕೆಲವು ಅಧ್ಯಾಪಕರಂತೂ ವಿದ್ಯಾರ್ಥಿಗಳು ಶಿಕ್ಷಣಮುಗಿಸಿ, ಎಲ್ಲೇ ಹೋದರೂ, ತಮ್ಮ ಅಚ್ಚಳಿಯದ ನೆನಪು ಉಳಿಸುತ್ತಾರೆ. ಗತದ ಬದುಕನ್ನು ಕೆದಕಿದಾಗ ಸಕ್ಕರೆಯ ಸಿಹಿ ಅನುಭವ ನೀಡುತ್ತಾರೆ. 'ಮಳೆಬಿಟ್ಟರೂ ಮಳೆ ಹನಿ ಬಿಡದ' ಪ್ರೇರಣೆಯ ಚಿರಂತನತೆಯ ದ್ಯೋತಕವಾಗುತ್ತಾರೆ.

ಇವರಿಂದ ಕಲಿತ ನಾವು ಧನ್ಯರು, ಎಂಬ ಧನ್ಯಭಾವ ಮೂಡಿಸುತ್ತಾರೆ. ಇವರು ಬರೀ ಅನ್ನ ಸಂಪಾದಿಸುವ ಮಾರ್ಗ ಮಾತ್ರ ಹೇಳಿಕೊಟ್ಟವರಲ್ಲ. ಬದಲಿಗೆ, ಬದುಕಿನ ಸೂಕ್ಷ್ಮ ಸಂವೇದನೆಗಳನ್ನು ಪರಿಚಯಿಸಿದವರು. ಜೀವನವನ್ನು ಪ್ರೀತಿಸುವ ಕಲೆ ಕಲಿಸಿದವರು, ದೃಢವಾಸ್ತವದ ಬದುಕನ್ನು ಮುಖಾಮುಖಿಯಾಗಿ ಎದುರಿಸಲು ಕಲಿಸಿಕೊಟ್ಟವರು. ಇಂಥ ನಮ್ಮ ಮೇಷ್ಟ್ರು ಜಿಎಸ್‌ಎಸ್, ಪ್ರಾತಃ ಸ್ಮರಣೀಯರು.

ಪ್ರೀತಿಯ ಮೇಷ್ಟ್ರು ಜಿಎಸ್‌ಎಸ್ ಇಂಥ ಜಾತಿಯ ಅಪರೂಪದ ಅಧ್ಯಾಪಕರು. ಕಾಲೇಜಿನಲ್ಲಿ ಅವರು ಅತ್ಯಂತ ಜನಪ್ರಿಯ ಅಧ್ಯಾಪಕರು. ಎಂದೂ ಹುಬ್ಬುಗಂಟಿಕ್ಕದೆ ಸದಾ ಹಸನ್ಮುಖಿಯಾಗಿಯೇ ಇರುತ್ತಿದ್ದ ಅವರು, ನಮಗೆ ಎರಡುವರ್ಷಗಳ ಕಾಲ ನಾಲ್ಕೂ ಸೆಮೆಸ್ಟರ್‌ಗಳಲ್ಲಿ ಸತತವಾಗಿ ಪಾಠಮಾಡಿದರೂ, ಈ ಅವಧಿಯಲ್ಲಿ ಯಾವೊಬ್ಬ ವಿದ್ಯಾರ್ಥಿಯನ್ನೂ ಬೈದುದಿರಲಿ, ಗದರಿಸಿದ ನೆನಪೂ ಇಲ್ಲ. ಜಿಎಸ್‌ಎಸ್ ಅವರ ಬಗ್ಗೆ ವಿದ್ಯಾರ್ಥಿಗಳಲ್ಲಿ ಗೌರವಭಾವ ತನಗೆ ತಾನೇ ಮೂಡಿಬರುತ್ತಿತ್ತು. ತುಂಬ ಸಲೀಸಾಗಿ ಸಿಕ್ಕ ಸಿಕ್ಕ ವಿಚಾರಗಳನ್ನು ಸಿಕ್ಕಸಿಕ್ಕಂತೆ ಹರಟುವ ಲಾಘವ ವ್ಯಕ್ತಿತ್ವ ಅವರದಲ್ಲ. ಕುವೆಂಪುರವರ ಆತ್ಮೀಯ ಶಿಷ್ಯರಾಗಿ, ಆ ಘನವಾದ ಪಾಂಡಿತ್ಯ ಹಾಗೂ ಪ್ರಭುತ್ವಗಳನ್ನು ಸಂಪಾದಿಸಿಕೊಂಡಿದ್ದರು. ತುಂಬ ಬೇಗ ತಮ್ಮನ್ನು ತಾವು ತೆರೆದುಕೊಳ್ಳದೆ ಗಂಭೀರವಾಗಿಯೇ ಕಾಣಿಸುವ ಇವರು, ಆತ್ಮೀಯತೆಯ ಅಂಚನ್ನು ಮುಟ್ಟದಾಗ ಮಾತ್ರ ಹಾಸ್ಯಚಟಾಕಿಯನ್ನು ಹಾರಿಸಬಲ್ಲರು, ಮಗುವಿನಂತೆ ಮುಗ್ಧವಾಗಿ ನಗಬಲ್ಲರು.

ನಾವು ಮೊದಲನೇ ಸೆಮೆಸ್ಟರ್‌ನಲ್ಲಿದ್ದಾಗ ಜಿಎಸ್‌ಎಸ್ ನಮಗೆ ರನ್ನನ 'ಗದಾಯುದ್ಧ'ವನ್ನು ಬೋಧಿಸುತ್ತಿದ್ದರು. ಜಿಎಸ್‌ಎಸ್ ಅವರದು ಅತ್ಯಂತ ಸ್ಪಷ್ಟ ಉಚ್ಚಾರಣೆ. ಹಳೆಗನ್ನಡ ಕಾವ್ಯವನ್ನು ಪ್ರಸ್ತುತ ಸಾಮಾಜಿಕ, ರಾಜಕೀಯ ಹಿನ್ನೆಲೆಯಲ್ಲಿ ವೈಚಾರಿಕವಾಗಿ, ವಿಮರ್ಶಾತ್ಮಕವಾಗಿ, ಪರಿಚಯಿಸುತ್ತಿದ್ದರು. ಎರಡನೇ ಸೆಮೆಸ್ಟರ್‌ಗೆ ಬಂದಾಗ ಕುವೆಂಪು ಅವರ ಖಂಡ ಕಾವ್ಯ, 'ಚಿತ್ರಾಂಗದಾ'ದ ಬೋಧನೆ. ಕುವೆಂಪುರವರ ನೇರ ಶಿಷ್ಯರಾದ ಜಿಎಸ್‌ಎಸ್ ಈ ಕೃತಿಯನ್ನು ಪಾಠಮಾಡುವಾಗ ಭಾವಾವೇಶಕ್ಕೆ ಒಳಗಾಗುತ್ತಿದ್ದರು. ಅಗತ್ಯಕ್ಕಿಂತ ಹೆಚ್ಚಿನ ಮಾಹಿತಿ ನೀಡಲು ಸದಾ ಮುಂದು. ಲಕ್ಷ್ಮೀಶನ 'ಚಿತ್ರಾಂಗದೆ', ಠಾಕೂರರ 'ಚಿತ್ರಾ' ನಾಟಕಗಳನ್ನೂ ಈ ನಡುವೆ ಅವರು ತೌಲನಿಕವಾಗಿ ಪರಿಚಯಿಸುವ ಕ್ರಮ ಅತ್ಯಂತ ವಿಭಿನ್ನವಾಗಿತ್ತು. ಮುಂದೆ, ನಮಗೆ ಮೂರು ಮತ್ತು ನಾಲ್ಕನೇ ಸೆಮೆಸ್ಟರುಗಳಲ್ಲಿದ್ದಾಗ ಭಾರತೀಯ ಹಾಗೂ ಪಾಶ್ಚಾತ್ಯ ಕಾವ್ಯಮೀಮಾಂಸೆಗಳ ಪಾಠ ಮಾಡುತ್ತಿದ್ದರು. ತೀ.ನಂ.ಶ್ರೀ, ಕುವೆಂಪುರವರ ಕಾವ್ಯಮೀಮಾಂಸೆ, ಪಾಶ್ಚಾತ್ಯ ವಿಮರ್ಶೆಯ ಗರಡಿಯಲ್ಲಿ ತಯಾರಾಗಿದ್ದ ಜಿಎಸ್‌ಎಸ್, ಪಾಶ್ಚಾತ್ಯ ಕಾವ್ಯಮೀಮಾಂಸೆಯನ್ನು ತೌಲನಿಕವಾಗಿ ಅಧ್ಯಯನ ಮಾಡುತ್ತಿದ್ದರು. ಮುಂದೆ ಅವರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಹಾಗೂ ಪಂಪ ಪ್ರಶಸ್ತಿಗಳನ್ನು ತಂದುಕೊಟ್ಟ ಕನ್ನಡ ಕಾವ್ಯವಿಮರ್ಶಾ ಕ್ಷೇತ್ರದ ಮೈಲುಗಂಬ, ಅವರ ತೌಲನಿಕ ವಿಮರ್ಶಾಕೃತಿ, 'ಕಾವ್ಯಾರ್ಥ ಚಿಂತನ'ದ ಮೊದಲ ಪ್ರಾಯೋಗಿಕ ಸಹೃದಯಿಗಳಾಗುತ್ತಿದ್ದೇವೆಂಬ

ಅರಿವೂ ಆಗ ನಮಗಿರಲಿಲ್ಲ. ಅವರ ಆ ಬೃಹತ್ ಗ್ರಂಥ ರೂಪುಗೊಳ್ಳುತ್ತಿದ್ದ ಕಾಲದ ಮೊದಲ ಕೇಳುಗರಾಗಿ ನಾವು ತರಗತಿಯಲ್ಲಿ ಕುಳಿತಿರುತ್ತಿದ್ದೆವು ಎಂಬ ನೆನಪೇ ನನಗೆ ರೋಮಾಂಚನವನ್ನು ಹುಟ್ಟಿಸುತ್ತದೆ. ಪ್ರತಿಭೆ, ವ್ಯುತ್ಪತ್ತಿ, ಮಾನಸಿಕದೂರ.... ಮುಂತಾದ ಅವರ ಚಿಂತನೆಗಳು ಇವತ್ತಿಗೂ ಹೊಸದಾಗಿವೆ. ಆ ಸಂದರ್ಭದಲ್ಲಿ ಜಿಎಸ್ಎಸ್ ಪ್ರಾಯೋಗಿಕ ವಿಮರ್ಶೆಗಳಿಗಾಗಿ ಅನೇಕ ಪದ್ಯಗಳನ್ನು ಆಯ್ದು ಅವುಗಳನ್ನು ವಿವರಿಸುತ್ತಿದ್ದ ರೀತಿ ಅನನ್ಯವಾದುದು. ಹಳೆಗನ್ನಡ . ಪದ್ಯವನ್ನಾಗಲಿ, ಹೊಸಗನ್ನಡ ಪದ್ಯವನ್ನಾಗಲಿ ಓದುವಾಗ ಜಿಎಸ್ಎಸ್ ದನಿಯ ಏರಿಳಿತಗಳು, ತರಂಗಿಕತೆ, ಆಂಗಿಕ ಅಭಿನಯ, ತಾಳದ ಘಾತಗಳಿಗೆ ಹೆಚ್ಚಿನ ಮಹತ್ವವನ್ನು ನೀಡುತ್ತಿದ್ದರು. ಮೊದಲ ಓದಿನ ಕ್ರಮದಲ್ಲೇ ಕಾವ್ಯ ಓದುಗರೊಡನೆ ಸಂವಾದಕ್ಕೆ ಸಿದ್ಧವಾಗಿಬಿಡುತ್ತಿತ್ತು.

ಜಿಎಸ್ಎಸ್ ಅವರು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಯನ ಕೇಂದ್ರಕ್ಕೊಂದು ಹೃದಯಸ್ಥಾನ ಕಲ್ಪಿಸಿಕೊಟ್ಟರು. ಅವರು ಅಧ್ಯಯನ ಕೇಂದ್ರದ ನಿರ್ದೇಶಕರಾಗಿದ್ದಾಗ ನಡೆಸಿದ ವಿಚಾರ ಸಂಕಿರಣಗಳು ವಿದ್ಯಾರ್ಥಿ ದೆಸೆಯಲ್ಲಿದ್ದ ನಮಗೊಂದು ಬೆರಗು ಹುಟ್ಟಿಸುವಂತಹ ಆಕರ್ಷಣೆಯಾಗಿತ್ತು. ಈ ಸಂದರ್ಭದಲ್ಲಿ ನಡೆದ ಲಂಕೇಶರ 'ರೊಟ್ಟಿ' ಕತೆಯನ್ನು ಕುರಿತ ವಾದ-ವಿವಾದಗಳಾಗಲಿ, ಬೇಂದ್ರೆಯವರ 'ಸಾಮಾಜಿಕ ಪ್ರಜ್ಞೆ'ಯನ್ನು ಕುರಿತ ಚರ್ಚೆಗಳಾಗಲಿ ಇನ್ನೂ ಮನಸ್ಸಿನಲ್ಲಿ ಹಸಿರಾಗಿ ಉಳಿದಿವೆ. ಅದೊಂದು ರೀತಿಯಲ್ಲಿ ಕದನವಿಲ್ಲದ ಕಾವಿನ ವಾತಾವರಣ. ಸಾಹಿತ್ಯಿಕ ಜಗಳಗಳು, ಭಿನ್ನಾಭಿಪ್ರಾಯಗಳು ಹೊಸ ಪಲ್ಲಟಗಳಿಗೆ ಪ್ರೇರಣೆ ಒದಗಿಸಿಕೊಟ್ಟಿದ್ದವು. ಶಿವರಾಮಕಾರಂತ, ಎ.ಕೆ. ರಾಮಾನುಜನ್, ಅಡಿಗ, ಕೆ.ಎಸ್.ನ, ಪು.ತಿ.ನ., ಗೋಕಾಕ್, ಲಂಕೇಶ್, ಅನಂತಮೂರ್ತಿ, ವಿ.ಸೀ., ಎಂ.ವಿ.ಸೀ, ಎಸ್.ಎಲ್.ಭೈರಪ್ಪ, ಪುಣೇಕರ್, ಕುರ್ತುಕೋಟಿ, ಶಂಬಾ-ಹೀಗೆ ನಾಡಿನ ಹಿರಿಯ ಲೇಖಕರು, ವಿದ್ವಾಂಸರುಗಳನ್ನು ನೋಡುವ, ಕೇಳುವ ಸದವಕಾಶ. ಸಾಹಿತ್ಯ ವಿದ್ಯಾರ್ಥಿಗಳಿಗೆ ಇದಕ್ಕಿಂತ ಮತ್ತಾವ ಸೌಭಾಗ್ಯಬೇಕು? ಅವರು ಏರ್ಪಡಿಸಿದ ವಿಚಾರ ಸಂಕಿರಣಗಳು ಕೇವಲ ತತ್ಕಾಲೀನ ಆನಂದ, ಚಿಂತನೆಗಳನ್ನು ನೀಡಿ ಗಾಳಿಗೆ ತೂರಿ ಹೋಗುತ್ತಿರಲಿಲ್ಲ. ಅವೆಲ್ಲವನ್ನೂ ಒಂದೆಡೆ ಸಂಕಲಿಸಿ, ಅಚ್ಚುಕಟ್ಟಾಗಿ ಸಂಪಾದಿಸಿ, ಕೊನೆಯಲ್ಲಿ ಆ ಸಂದರ್ಭದಲ್ಲಿ ವಿಶೇಷ ಆಹ್ವಾನಿತರು ಹಾಗೂ ಶ್ರೋತೃಗಳು ಕೇಳಿದ ಪ್ರಶ್ನೆಗಳೂ ಹಾಗೂ ಅವುಗಳಿಗೆ ಸೂಕ್ತ ಉತ್ತರಗಳನ್ನು ಸೇರಿಸಿ ಅವುಗಳನ್ನು ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಮುದ್ರಿಸಿರುವುದು ಮುಂಬರುವ ವಿದ್ಯಾರ್ಥಿಗಳಿಗೂ ಅತ್ಯಂತ ಉಪಯುಕ್ತವಾಗಿವೆ. ಈ ಮಾಲಿಕೆಯಲ್ಲಿ ಮೂಡಿಬಂದ ಪಂಪ-ಒಂದು ಅಧ್ಯಯನ, ಶ್ರೀ ಕುವೆಂಪು, ಕಾದಂಬರಿಕಾರರಾಗಿ ಕಾರಂತ, ಬೇಂದ್ರೆ, ಸಾಹಿತ್ಯ ಮತ್ತು ಸಾಮಾನ್ಯ ಮನುಷ್ಯ, ಸಾಹಿತ್ಯ ಮತ್ತು ಸಾಮಾಜಿಕ ಪ್ರಜ್ಞೆ, ಮಹಿಳಾ ಸಂವೇದನೆ—ಮುಂತಾದ ಕೃತಿಗಳು ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗದ ಸಾಲಿನಲ್ಲಿ ಚಿರಕಾಲ ಉಳಿಯಬಲ್ಲ ಗಟ್ಟಿಕೃತಿಗಳು.

ಕರ್ನಾಟಕದ ಉಳಿದ ವಿಶ್ವವಿದ್ಯಾಲಯಗಳಿಗಿಂತ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ನಾಡಿನ ಖ್ಯಾತ ವಿಮರ್ಶಕರು ಹಾಗೂ ಲೇಖಕರ ಹಿಂದು ಹಿಂಡೇ ಬಂದದ್ದನ್ನು ಗಮನಿಸಬಹುದು. ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ, ಸಾಹಿತ್ಯ ವಾರ್ಷಿಕ, ಸಾಧನೆಯುಂತಹ ಅನೇಕ ಕ್ರಿಯಾಶೀಲ ಯೋಜನೆಗಳ ಮೂಲಕ ಜಿಎಸ್‌ಎಸ್ ಹೊಸ ಎಚ್ಚರದ ವಿಮರ್ಶಕರ ಪಡೆಯನ್ನೇ ತಯಾರು ಮಾಡಿದರು. ಒಟ್ಟು ಸದಾ ರಾಜಕೀಯದಿಂದ ಮುಕ್ತವಾದ ಶುದ್ಧ ಸಾಹಿತ್ಯಿಕ ವಾತಾವರಣವನ್ನು ಬೆಳೆಸಲು, ಕಾಪಾಡಲು ಪ್ರಯತ್ನಿಸಿದರು. ಕನ್ನಡ ಸಾಹಿತ್ಯ ವಿಮರ್ಶೆಯ ವಾತಾವರಣ ಹಾಗೂ ಬೆಳವಣಿಗೆಯಲ್ಲಿ ಅವರು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ ಹಾಗೂ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಕೈಗೊಂಡ ಕಾರ್ಯಕ್ರಮಗಳು ಗಮನಾರ್ಹವಾದವು.

ವಿದ್ಯಾರ್ಥಿಗಳಲ್ಲೇ ಆಗಲಿ, ಅಧ್ಯಾಪಕರಲ್ಲೇ ಆಗಲಿ, ಅಶಿಸ್ತನ್ನು ಕಂಡರೆ ಸಿಡಿದುಬೀಳುವ ಶಿಸ್ತಿನ ಸಿಪಾಯಿ; ಸಮಯದೊಳಗೆ ಪಠ್ಯ ಮುಕ್ತಾಯ, ನಿರ್ದಿಷ್ಟ ಸಮಯದಲ್ಲಿ ಪರೀಕ್ಷೆಗಳು, ಫಲಿತಾಂಶಗಳನ್ನು ತರುವಲ್ಲಿ, ಒಟ್ಟಾರೆಯಾಗಿ ಒಂದು ಅತ್ಯುತ್ತಮ ಅಕಡಮಿಕ್ ವಾತಾವರಣ ಮೂಡಿಸುವಲ್ಲಿ ಸಫಲರಾದವರು.

ಜಿಎಸ್‌ಎಸ್ ತಾವು ಪ್ರವಾಸಪ್ರಿಯರಾಗಿದ್ದಂತೆ, ವಿದ್ಯಾರ್ಥಿಗಳ ಪ್ರವಾಸವನ್ನೂ ಪ್ರೋತ್ಸಾಹಿಸುತ್ತಿದ್ದರು. ಎಲ್ಲ ಅಧ್ಯಾಪಕರೊಡನೆ ಹೊಗೇನಕಲ್ ಫಾಲ್ಸ್, ಮೆಟ್ಟೂರು ಡ್ಯಾಮಿಗೆ ಹೋಗಿಬಂದ ಅನುಭವವನ್ನು ನಾನು ಮರೆಯಲಾರೆ. ನಾವು ಕೊನೆಯ ಸೆಮೆಸ್ಟರ್‌ಗೆ ಬಂದಾಗ ನಮಗೆ ಪಾಠ ಹೇಳಿಕೊಟ್ಟ ಪ್ರತಿಯೊಬ್ಬ ಅಧ್ಯಾಪಕರೂ ನಮ್ಮನ್ನು ಅವರ ಮನೆಗೋ ಅಥವಾ ಹೋಟೆಲ್ಲಿಗೋ ಕರೆದೊಯ್ದು ಆತಿಥ್ಯವನ್ನು ನೀಡುವ ಸತ್‌ಸಂಪ್ರದಾಯವನ್ನು ಹಾಕಿಕೊಂಡಿದ್ದರು. ಜಿಎಸ್‌ಎಸ್ ಅವರು ನಮ್ಮ ವಿದ್ಯಾರ್ಥಿಗಳ ದಂಡನ್ನು ಕರೆದೊಯ್ದು ಹೋಟೆಲಿನಲ್ಲಿ ರುಚಿಯಾದ ಬೆಣ್ಣೆಮಸಾಲೆ, ಜಾಮೂನುಗಳನ್ನು ಕೊಡಿಸಿದ್ದರು. ಆ ಸವಿ ಇನ್ನೂ ಹೃದಯದಂಚಿನಲ್ಲೇ ಹೆಪ್ಪುಗಟ್ಟಿದೆ,

ನಾನು ಎಂ.ಎ. ಪರೀಕ್ಷೆಯಲ್ಲಿ ಮೊದಲ ರ್‍ಯಾಂಕು ಪಡೆದಾಗ ನನ್ನನ್ನು ಕರೆಸಿ ಮುಂದೆ ಏನು ಮಾಡಬೇಕೆಂದಿದ್ದೀರಿ ಎಂದು ಪ್ರಶ್ನಿಸಿದರು. ನಾನು 'ಸಂಶೋಧನೆ' ಮಾಡಬೇಕೆಂಬ ನನ್ನ ಕನಸನ್ನು ಅವರ ಮುಂದಿಟ್ಟಾಗ, ಬಿ.ಎಂ.ಎಸ್. ಮಹಿಳಾ ಕಾಲೇಜಿನಲ್ಲಿ ಅರೆಕಾಲಿಕ ಕನ್ನಡ ಉಪನ್ಯಾಸಕಿ ಹುದ್ದೆ ಖಾಲಿ ಇದೆಯೆಂದು ತಿಳಿಸಿ, ಅದಕ್ಕೆ ಪ್ರಯತ್ನಿಸುವಂತೆ ಹೇಳಿ, ಎಂ.ಫಿಲ್. ಪದವಿಗೆ ವಿದ್ಯಾರ್ಥಿನಿಯಾಗಬೇಕೆಂಬ ಸಲಹೆ ನೀಡಿದರು. ಅಧ್ಯಾಪಕಿಯಾಗುವ ಮೊದಲ ಅವಕಾಶ ಕಲ್ಪಿಸಿಕೊಟ್ಟಿದ್ದೇ ಅಲ್ಲದೆ, ಎಂ.ಫಿಲ್. ಪದವಿಗೂ ನನಗೆ ಮಾರ್ಗದರ್ಶಕರಾದರು. ನನ್ನ ಎಂ.ಫಿಲ್. ಪದವಿ ಮುಗಿದಾಗ ಪಿಎಚ್.ಡಿ.ಗೆ ಅವರ ಬಳಿ ಜಾಗವಿರಲಿಲ್ಲ. ಜಿಎಸ್‌ಎಸ್ ನನಗೆ ತಾವೇ ಖುದ್ದು ಪಿಎಚ್.ಡಿ. ಮಾರ್ಗದರ್ಶಕ ರಾಗುತ್ತೇನೆಂದು ತಿಳಿಸಿ, ಅವರ ವಿದ್ಯಾರ್ಥಿ ಹಾಗೂ ನನ್ನ ಅಧ್ಯಾಪಕರಾಗಿದ್ದ ಡಾ.

ಡಿ.ಆರ್.ನಾಗರಾಜ್ ಅವರು ತಮ್ಮ ಪ್ರೌಢಪ್ರಬಂಧವನ್ನು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಮರ್ಪಿಸಿದ ಕೂಡಲೆ, ತೆರವಾದ ಆ ಸ್ಥಾನಕ್ಕೆ ನನ್ನನ್ನು ವಿದ್ಯಾರ್ಥಿನಿಯಾಗಿ ಸ್ವೀಕರಿಸಿದರು. ಆ ಮೂರು ವರ್ಷಗಳ ಕಾಲ ಅವರು ವಿಷಯಗಳನ್ನು ನನಗೆ ವಿವರಿಸುತ್ತಿದ್ದ ರೀತಿ, ಬರವಣಿಗೆಯನ್ನು ತಿದ್ದಿ ನೀಡುತ್ತಿದ್ದ ಆತ್ಮವಿಶ್ವಾಸ, ಧೈರ್ಯ, ಒಳ್ಳೆಯ ವಿಚಾರಗಳನ್ನು ಮೆಚ್ಚಿಕೊಳ್ಳುವ ಗುಣ—ಇವುಗಳ ಕಾರಣದಿಂದ ನನ್ನ ಅಧ್ಯಯನ ತುಂಬ ಗಂಭೀರವಾಗಿ ಮೂಡಿಬರಲು ಕಾರಣರಾದರು. ಅವರ ಮಾರ್ಗದರ್ಶನದಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಡಾಕ್ಟರೇಟ್ ಪದವಿಗಾಗಿ ಪ್ರೌಢಪ್ರಬಂಧವನ್ನು ಸಲ್ಲಿಸುವ ಅವಕಾಶ ಮಾಡಿಕೊಟ್ಟರು. ನಾನು ಅವರಿಗೆ ಸದಾ ಚಿರಋಣಿಯಾಗಿದ್ದೇನೆ. ಅವರ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಅಧ್ಯಯನ ಕೈಗೊಂಡ ಕೊನೆಯ ವಿದ್ಯಾರ್ಥಿನಿ ನಾನು. ನನಗೆ ಇಂಥ ಹಿರಿಯ ವಿದ್ವಾಂಸರ ನೇತೃತ್ವದಲ್ಲಿ ಅಧ್ಯಯನ ಮಾಡಲು ಸಾಧ್ಯವಾದುದರ ಬಗ್ಗೆ ತುಂಬ ಹೆಮ್ಮೆ ಇದೆ.

ಅಂದಿನಿಂದ ಇಂದಿನವರೆಗೂ ಹಿರಿಯರಾದ ಜಿಎಸ್‌ಎಸ್ ಅವರು ನನ್ನ ಬದುಕಿನ ಎಲ್ಲ ಮುಖ್ಯ ಘಟ್ಟಗಳಲ್ಲೂ ಹಿತಚಿಂತಕರಾಗಿ, ಮಾರ್ಗದರ್ಶಕರಾಗಿ ಸಲಹೆ ಸೂಚನೆಗಳನ್ನು ನೀಡುತ್ತಲೇ ಬಂದಿದ್ದಾರೆ. ಅವರ ಕುಟುಂಬದ ಸದಸ್ಯರಲ್ಲಿ ಒಬ್ಬಳಾಗುವವರೆಗೆ ಅವರ ವಿಶ್ವಾಸ ಹಬ್ಬಿದೆ. ಅವರ ಬರವಣಿಗೆ, ಕವಿತ್ವ, ವಿಮರ್ಶಾಪ್ರಜ್ಞೆ, ವೈಚಾರಿಕ ಮನೋಭಾವ ನನಗೆ ಸದಾ ಪ್ರೇರಣೆಯನ್ನು ನೀಡಿದೆ.

ಡಾ. ಜಿಎಸ್‌ಎಸ್ ನೇರನುಡಿಯವರು. ಒಮ್ಮೊಮ್ಮೆ ಬೇರೆಯವರಿಗೆ ನೋವಾಗ ಬಹುದೇನೋ ಎಂಬ ಕಲ್ಪನೆಯೂ ಇಲ್ಲದಂತೆ ತಮಗನ್ನಿಸಿದ್ದನ್ನು ಜೋರಾಗಿ ಕೂಗಿ ಹೇಳಿ ಮನಸ್ಸನ್ನು ಹಗುರಗೊಳಿಸಿಕೊಳ್ಳುವವರು. ಬೇಸರವಾದರೆ ನೇರವಾಗಿ ಇದಿರಿಗೇ ಬೇಸರ ವಾಯಿತೆಂದು ಹೇಳುವ, ಇಷ್ಟವಾದರೆ ಆ ಕ್ಷಣದಲ್ಲೇ ಮುಕ್ತವಾಗಿ ಮೆಚ್ಚಿಕೊಳ್ಳುವ ಮುಗ್ಧರು. ನಾಡಿನ ಮುಖ್ಯ ಸಮಸ್ಯೆಗಳ ಸಂದರ್ಭದಲ್ಲಿ ಅಡ್ಡಗೋಡೆಯ ಮೇಲೆ ದೀಪವಿಡುವ ಚಿಂತಕರಂತಲ್ಲದೆ ಸ್ಪಷ್ಟವಾಗಿ ತಮ್ಮ ನಿಲುವನ್ನು ಪ್ರಕಟಿಸಿ ಕೆಲವೊಮ್ಮೆ ಅನೇಕರ ವಿರೋಧ, ಟೀಕೆಗಳಿಗೂ ಗುರಿಯಾದವರು. ಅದು ಜಾತಿ ವಿವಾದವೇ ಆಗಬಹುದು, ರಾಮಜನ್ಮ ಭೂಮಿಯೇ ಆಗಬಹುದು, ಸಾಹಿತ್ಯ ಕೃತಿಗಳ ವಿವಾದವೇ ಆಗಬಹುದು. ಯಾವ ಯಾರ ಮುಲಾಜಿಗೂ ಒಳಗಾಗದೆ ದಿಟ್ಟ ಅಭಿಪ್ರಾಯವನ್ನು ಸೂಚಿಸಿದವರು. ಅವರು ಬುದ್ಧಿಜೀವಿಗಳೂ ಹೌದು, ಭಾವುಕರೂ ಹೌದು. ಅವರು ಪಾಠ ಮಾಡುವಾಗಲೆಲ್ಲ ಅವರ ವ್ಯಕ್ತಿತ್ವದಲ್ಲಿ ಕವಿ ಹಾಗೂ ವಿಮರ್ಶಕ—ಇಬ್ಬರೂ ಕಾಣಿಸಿಕೊಳ್ಳುತ್ತಾರೆ. ಕಾವ್ಯ ನಿರ್ಮಿತಿಯ ಮನಸ್ಸಿಗೂ, ಕಾವ್ಯ ಮೀಮಾಂಸೆಯನ್ನು ಬರೆಯುವ ಮನಸ್ಸಿಗೂ ಸದಾ ಹೊಂದಾಣಿಕೆ ಮಾಡಿಕೊಳ್ಳುತ್ತಲೇ ಇರುತ್ತಾರೆ.

ಪ್ರವಾಸಪ್ರಿಯರಾದ ಜಿಎಸ್‌ಎಸ್ ಎಲ್ಲೆಲ್ಲಿ ತಿರುಗಿ ಬಂದರೂ, ಅದರ ಅನುಭವಗಳನ್ನು ದಾಖಲಿಸುವ ಕೆಲಸ ಮಾಡುತ್ತಲೇ ಬಂದಿದ್ದಾರೆ. ಅದು ರಷ್ಯಾ ದೇಶದ ಭೇಟಿಯಾಗಲಿ, ಇಂಗ್ಲೆಂಡ್, ಅಮೆರಿಕಾ, ಗಂಗೆ-ಹಿಮಾಲಯಗಳ ಭೇಟಿಯೇ ಆಗಲಿ, ಸೊಗಸಾದ ಪ್ರವಾಸ ಕಥನಗಳಾಗಿ ಮೂಡಿ ಬಂದಿವೆ. ಇಂಥ ಪ್ರವಾಸಗಳು ತಮ್ಮ ಜೀವನಾನುಭವಗಳನ್ನು

ವಿಸ್ತರಿಸಿವೆ, ಎಂದು ನಂಬಿದವರು. ನಮ್ಮ ತರಗತಿಗಳೊಳಗೆ ಅವರು ಅದೇ ತಾನೆ ಭೇಟಿ ಇತ್ತಿದ್ದ ಸ್ಥಳಗಳ ಅನುಭವಗಳನ್ನು ನಮ್ಮೊಡನೆ ಹಂಚಿಕೊಳ್ಳುತ್ತಿದ್ದರು. ಮುಖ್ಯವಾಗಿ ಜಿಎಸ್‌ಎಸ್ ಅವರ ಬರವಣಿಗೆಯಲ್ಲಿ 'ಸಾಹಿತ್ಯ ಸಂಶೋಧನೆ' ಹಾಗೂ 'ತೌಲನಿಕ ಪರಿಶೀಲನೆ'—ಇವೆರಡನ್ನೂ ಒಳಗೊಂಡಂತಹ ಒಂದು ಅಪೂರ್ವ ಗುಣ ಕನ್ನಡ ವಿಮರ್ಶೆಯಲ್ಲಿ ಗಟ್ಟಿಯಾಗಿ ನೆಲೆ ಕಂಡದ್ದನ್ನು ಗಮನಿಸಬಹುದು. ಜಿಎಸ್‌ಎಸ್ ಅವರ ಸಾಹಿತ್ಯವಿಮರ್ಶೆ ಮುಖ್ಯವಾಗಿ ಕನ್ನಡ ಸಾಹಿತ್ಯದ ಸಂಸ್ಕೃತಿ ಹಾಗೂ ಪರಂಪರೆಗಳ ಬಗೆಗಿನ ಕಾಳಜಿ ಹಾಗೂ ವ್ಯಾಖ್ಯಾನಗಳನ್ನು ಪ್ರಕಟಪಡಿಸುತ್ತದೆ.

'ಜಾಗತೀಕರಣ'ದ ಈ ಸನ್ನಿವೇಶದಲ್ಲಿ ದೇಶ, ವಿದೇಶಗಳ ಗಡಿ, ಗೆರೆಗಳೇ ಅಳಿಸಿ ಹೋಗುತ್ತವೆಯೇನೋ ಎಂದೆನ್ನಿಸಿದರೂ ನಮ್ಮಲ್ಲಿ ಜಾತಿಗಳು ಮತ್ತಷ್ಟು ಸಂಘಟಿತವಾಗುತ್ತಿವೆ. ಮತಗಳು, ಮತೀಯ ಶಕ್ತಿಗಳು ಇನ್ನಷ್ಟು ಬಲಿಷ್ಠವಾಗುತ್ತ ರಾಜಕೀಯ ಶಕ್ತಿಕೇಂದ್ರಗಳಾಗುತ್ತಿವೆ. ಮಾನವಕುಲವನ್ನು ಒಡೆಯುವ ಅತ್ಯಂತ ವ್ಯವಸ್ಥಿತವಾದ ಇಂತಹ ವಿಚಿತ್ರ ಹುನ್ನಾರಗಳು, ಬೆಳವಣಿಗೆಗಳು ಸಮಾಜಲ್ಲಿ ಕಾಣಿಸಿಕೊಂಡಾಗ ಜಿಎಸ್‌ಎಸ್ ಸ್ಪಷ್ಟವಾಗಿ ತಮ್ಮ ವಿರೋಧವನ್ನು ಸೂಚಿಸಿದ್ದಾರೆ. ಅವರ ಈ ನಿಲುವು ಮೆಚ್ಚುವಂತಹದು.

ಡಾ. ಜಿಎಸ್‌ಎಸ್ ಅವರು, ಅವರ ವಿದ್ಯಾರ್ಥಿ ಸಮುದಾಯ ಅತ್ಯಂತ ಪ್ರೀತಿಯಿಂದ ಕಾಣುವ, ಗೌರವಿಸುವ ಮೇಷ್ಟ್ರು. ಎಂದೂ ಯಾರ ಮೇಲೂ ಕೋಪಮಾಡಿಕೊಳ್ಳದ, ಎಲ್ಲರಿಗೂ ಬೇಕಾದವರು. ವಿದ್ಯಾರ್ಥಿಗಳ ಮೇಲೂ ಅಚ್ಚಳಿಯದ ಪ್ರಭಾವ ಮೂಡಿಸಬಲ್ಲ ಅತ್ಯುತ್ತಮ ಅಧ್ಯಾಪಕರು. ವಿದ್ಯಾರ್ಥಿಗಳನ್ನು ಮಕ್ಕಳ ಹಾಗೆ ಕಾಳಜಿಯಿಂದ ಕಾಣುವ ಅಧ್ಯಾಪಕ ಪರಂಪರೆ ಮಾಯವಾಗುತ್ತಿರುವ ಇಂದಿನ ಸಂದರ್ಭದಲ್ಲಿ ಇಂತಹ ಅಪರೂಪದ ಆಚಾರ್ಯರುಗಳು ಆಗಾಗ್ಗೆ ಕಾಣಿಸಿಕೊಳ್ಳುತ್ತಾರೆ. ಜಿಎಸ್‌ಎಸ್ ಅಂಥ ಹಿರಿಯ ತಲೆಮಾರಿನ ಗುರುಪರಂಪರೆಗೆ ಸೇರಿದ 'ಒಜುವಯ್ಯಗಳು.' ಅಂದು ನನ್ನೊಡನೆ ಒಂದೇ ತರಗತಿಯಲ್ಲಿ ಕೂತು ಈ ಗುರುವರ್ಯರ ಪಾಠ ಕೇಳಿ, ಅನುಭವಗಳನ್ನು ಹಂಚಿಕೊಂಡ ನನ್ನ ಎಲ್ಲ ಸಹಪಾಠಿಗಳ ಅನುಭವಗಳು, ಅಭಿಪ್ರಾಯಗಳು ನನ್ನವಕ್ಕಿಂತ ಖಂಡಿತ ಬೇರೆ, ಎಂದು ನಾನು ಭಾವಿಸುವುದಿಲ್ಲ. ಹರಿದು ಹಂಚಿಹೋಗಿ ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಗಣ್ಯಬಾಳ್ವೆ ಮಾಡುತ್ತಿರುವ ಪ್ರಿಯ ಸಹಪಾಠಿಗಳ ಭಾವನೆಗಳ ಅಭಿವ್ಯಕ್ತಿಯ ಲೇಖನಿ ಮಾತ್ರ ನನ್ನದು. ಅವರೆಲ್ಲರ ಈ ಭಾವನೆಗಳು, ಅನುಭವಗಳ ರೋಮಾಂಚನ, ನೆನಪಿನ ಜಗಿತಗಳ ಪ್ರತಿನಿಧಿ ನಾನು.

ಪೂಜ್ಯ ಗುರುಗಳು ಮುಕ್ಕಾಲು ಶತಮಾನಕ್ಕೆ ಬಂದು ನಿಂತಿದ್ದಾರೆ. ಇದು ಸಾಮಾನ್ಯವಾದ ಸಂಗತಿಯೇನಲ್ಲ. ಎಷ್ಟೋ ಒಳ್ಳೆಯ ಕೆಲಸಗಳನ್ನು ಅವರು ಮಾಡಿದ್ದರೂ, ಅವರಿಂದ ಇನ್ನೂ ಆಗಬಹುದಾದ ಕೆಲಸಗಳು ಸಾಕಷ್ಟಿವೆ. ಅವೆಲ್ಲವನ್ನೂ ಅವರು ತುಂಬ ಕ್ರಿಯಾಶೀಲರಾಗಿ ಮಾಡಬಲ್ಲ ಸೃಜನಶೀಲರು. ಬದುಕಿನ ಈ ಸಾರ್ಥಕ್ಯದ ಕ್ಷಣದಲ್ಲಿ ಅವರಿಗೆ ಎಲ್ಲ ಯಶಸ್ಸು ಮತ್ತು ಕೆಲಸ ಮಾಡಬಲ್ಲ ಹುಮ್ಮಸ್ಸು, ಶಕ್ತಿ, ಆರೋಗ್ಯಗಳು ಹೆಚ್ಚಲಿ ಎಂದು ಅವರ ಎಲ್ಲ ವಿದ್ಯಾರ್ಥಿಗಳ ಪರವಾಗಿ ಹಾರೈಸುತ್ತೇನೆ.

■

# "ಬಾಲಗಳಾಗಬೇಡಿ....."

ಪ್ರೊ॥ ಬಿ. ಪಿ. ವೀರೇಂದ್ರಕುಮಾರ್

**ವಿ**ಜ್ಞಾನದ ವಿದ್ಯಾರ್ಥಿಯಾಗಿದ್ದ ನಾನು ಕನ್ನಡ ಆನರ್ಸ್ ಸೇರಿದಾಗ, ನನ್ನಲ್ಲಿ ಇದ್ದದ್ದು, ಸಾಹಿತ್ಯದ ಬಗ್ಗೆ ಉತ್ಸಾಹ ಮಾತ್ರ. ಜನಪ್ರಿಯ ಕಾದಂಬರಿಗಳನ್ನು ಓದಿಕೊಂಡು ಅದೇ ಸಾಹಿತ್ಯವೆಂಬ ಹುಸಿ ಭ್ರಮೆಯಲ್ಲಿದ್ದ ನಾನು ಸಾಹಿತ್ಯದ ವಿದ್ಯಾರ್ಥಿಯಾದೆ. ಮನೆಯಲ್ಲಿ ಮತೀಯ ಶ್ರದ್ಧೆ ಇದ್ದುದರಿಂದ, ಮತೀಯವಾದ ಮನೋಧರ್ಮ ನನ್ನಲ್ಲಿ ಹಸಿಯಾಗಿದ್ದು, ಅದರ ಮೂಲಕವೇ ಸಾಹಿತ್ಯವನ್ನು ನೋಡುವ ಅಪಕ್ವ ಮನಸ್ಸು ನನ್ನದಾಗಿತ್ತು. ನಾನು ಹುಟ್ಟಿ ಬೆಳೆದ ಮನೆಯ ವಾತಾವರಣದ ಪ್ರಭಾವ ಸಹಜವಾಗಿಯೇ ನನ್ನ ಮೇಲೆ ತೀವ್ರ ಪ್ರಭಾವ ಬೀರಿತ್ತು.

ಬೆಂಗಳೂರಿನ ಸೆಂಟ್ರಲ್ ಕಾಲೇಜನ್ನು ನಾನು ಆಯ್ಕೆ ಮಾಡಿಕೊಂಡಾಗ ಅದೊಂದು ಪ್ರತಿಷ್ಠಿತ ಕಾಲೇಜು ಎಂಬುದೇ ಕಾರಣವಾಗಿತ್ತು. ಹದಿಹರೆಯದ ಹುಸಿಭ್ರಮೆಗಳಿದ್ದ ಆ ವಯಸ್ಸಿನಲ್ಲಿ ಸಾಹಿತ್ಯವೇ ಪ್ರಪಂಚ, ಎಂಬ ಹುಂಬತನವೂ ಮನೆಮಾಡಿತ್ತು. ಇಂಥ ಸ್ಥಿತಿಯಲ್ಲಿ ಜಿಎಸ್‌ಎಸ್ ನನಗೆ ಗುರುವಾಗಿ ಕಾಣಿಸಿಕೊಂಡರು. ಮೊದಲ ನೋಟದಲ್ಲೇ ಭಯಮಿಶ್ರಿತ ಗೌರವಭಾವ ಉಂಟಾಯಿತು. ಹರಿತವಾದ ನೋಟ, ಗಂಭೀರವಾದ ನಡಿಗೆ, ಇವೆಲ್ಲವೂ ವಿಶೇಷ ಪ್ರಭಾವ ಬೀರಿದವು. ಎಲ್ಲಾ ಮೇಷ್ಟುಗಳ ಮಧ್ಯೆ ಜಿಎಸ್‌ಎಸ್ ವಿಶೇಷವಾಗಿಯೇ ಕಂಡರು. ನನ್ನ ಸಾಹಿತ್ಯದ ಅಭಿರುಚಿಯ ಮೇಲೆ ಹಾಗೂ ಮನೋಧರ್ಮದ ಮೇಲೆ ನಿರಂತರ ಪ್ರಭಾವ ಬೀರುತ್ತಲೇ ಹೋದರು.

ಜಿಎಸ್‌ಎಸ್ ತರಗತಿಗಳು ನನ್ನಲ್ಲಿ ಸಾಹಿತ್ಯದ ಆಸಕ್ತಿ ಹಾಗೂ ಅಭಿರುಚಿ ಆರೋಗ್ಯಕರವಾಗಿ ಬೆಳೆಯಲು ಕಾರಣವಾದುವು. ನನ್ನಲ್ಲಿ ಮನೆ ಮಾಡಿದ್ದ ಮತೀಯ ಮನೋಭಾವ ಮರೆಯಾಗಿ ನೈಜವಾದ ಸಾಹಿತ್ಯದ ಆಸಕ್ತಿ ಮೂಡಲು ಕಾರಣವಾದುವು. ಅವರ ತರಗತಿಗಳ, ಪಂಪನ 'ವಿಕ್ರಮಾರ್ಜುನವಿಜಯ'ದ ವಿಶ್ಲೇಷಣೆಯಾಗಲೀ, ಹರಿಹರನ ರಗಳೆಗಳನ್ನು ಕುರಿತ ವಿಮರ್ಶೆಯೇ ಆಗಲೀ, 'ಸಿದ್ಧರಾಮಚರಿತೆ' ಕೃತಿಯ ವಿವರಣೆಯಾಗಲೀ, ನನಗೆ ಕನ್ನಡ ಕೃತಿಗಳನ್ನು 'ಸಾಹಿತ್ಯಕ ಗುಣ'ಗಳಿಂದ ಹೇಗೆ ಪ್ರವೇಶಿಸಬೇಕು, ಎಂಬುದನ್ನು ಕಲಿಸಿವೆ.

70 ರ ದಶಕದಲ್ಲಿ ನವೋದಯ ಹಾಗೂ ನವ್ಯಪರಂಪರೆಗಳು ಮುಖಾಮುಖಿಯಾಗಿ

ಸಂಘರ್ಷಕ್ಕೆ ಒಳಗಾಗುತ್ತಿದ್ದ ಕಾಲ. ಆ ದಿನಗಳನ್ನು ನೆನಪಿಸಿಕೊಂಡರೆ ಈಗಲೂ ಸಂತೋಷ ವಾಗುತ್ತದೆ. ಸಾಹಿತ್ಯದ ವಾತಾವರಣ ವಿಮರ್ಶೆಯ ಪರಿಸರ ಅತ್ಯಂತ ಜೀವಂತವಾಗಿದ್ದ ಕಾಲ. ಜಿಎಸ್‌ಎಸ್ ಸ್ವತಃ ವಿಮರ್ಶಾಮನೋಭಾವವನ್ನು ಬೆಳೆಸಿಕೊಂಡ ಹಾಗೂ ವಿಮರ್ಶಾಪರಿಸರವನ್ನು ಇಚ್ಛಿಸುವ ಪ್ರಾಧ್ಯಾಪಕರು. ಅವರ ನಿಲುವುಗಳು ನನ್ನ ಮೇಲೆ ವಿಶೇಷ ಪರಿಣಾಮ ಬೀರುತ್ತಿದ್ದವು. ನನ್ನ ಅತಿರೇಕದ ಅಭಿಪ್ರಾಯಗಳನ್ನು ನಿಯಂತ್ರಿಸುತ್ತಿದ್ದವು. ಕುವೆಂಪುರವರ ಬಗ್ಗೆ ಗೌರವ ಇಟ್ಟುಕೊಂಡೇ 'ನವ್ಯ'ದ ಅನನ್ಯತೆಯನ್ನು ಗುರುತಿಸುವ ವಿಶಿಷ್ಟ ಬಗೆಯ ಮನೋಭಾವವನ್ನು ನಮ್ಮೆಲ್ಲರಲ್ಲಿ ಬೆಳೆಯಲು ಜಿಎಸ್‌ಎಸ್ ತರಗತಿಗಳೇ ಕಾರಣವಾದುವು.

ತರಗತಿಗಳಲ್ಲಿ ಎಷ್ಟೋವೇಳೆ, ಮಾತಿನ ಚಕಮಕಿ ನಡೆದದ್ದೂ ಉಂಟು. ವಿಶೇಷವಾಗಿ 'ನವ್ಯ'ರ ಅಹಂಕಾರವನ್ನು ಜಿಎಸ್‌ಎಸ್ ಕಟುವಾಗಿ ಪ್ರತಿಭಟಿಸುತ್ತಿದ್ದರು. ನಮಗೆ ಆಗ ಅವರ ಈ ಪ್ರತಿಕ್ರಿಯೆ ಇಷ್ಟವಾಗುತ್ತಿರಲಿಲ್ಲ. ನವ್ಯಸಾಹಿತ್ಯದ ಪರವಾಗಿ ಚರ್ಚೆಮಾಡಿ ಸಡಗರಿಸುತ್ತಿದ್ದ ಹದಿಹರೆಯದ ವಯಸ್ಸಿನ ನಮಗೆಲ್ಲಾ ಅವರ ಈ ವರ್ತನೆ ಅಸಹನೆಯನ್ನೂ ತರಿಸಿತ್ತು. ಆದರೂ ಜಿಎಸ್‌ಎಸ್‌ರವರ ಬಗ್ಗೆ ನಮಗೆಲ್ಲಾ ಅಪಾರ ಗೌರವವಿತ್ತು. ಶಿಕ್ಷಕರಾಗಿ ನಮ್ಮೆಲ್ಲರ ಹೃದಯವನ್ನು ಅವರು ಗೆದ್ದಿದ್ದರು. ಗೌರವ ಸಂಬಂಧ ಉಳಿಸಿಕೊಂಡೇ ವಾಗ್ವಾದ ಮಾಡುವ ಬಗೆಯನ್ನು ಅವರಿಂದಲೇ ನಾವುಗಳೆಲ್ಲಾ ಕಲಿತೆವು.

ವಿಮರ್ಶೆಯ ಹೆಸರಿನಲ್ಲಿ ಗುಂಪುಗಾರಿಕೆಗಳನ್ನು ಅವರು ಸಹಿಸುತ್ತಿರಲಿಲ್ಲ. ಆಗ ಅವರು 'ಬಾಲಗಳಾಗಬೇಡಿ, ಗದೆಗಳಾಗಿ' ಎಂದು ಸೂಚ್ಯವಾಗಿ ಎಚ್ಚರಿಸಿದ್ದೂ ಉಂಟು.

ಜಿಎಸ್‌ಎಸ್, ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾದ ಮೇಲೆ, ಕನ್ನಡವಿಭಾಗಕ್ಕೆ ಹೊಸ ಜೀವಂತಿಕೆ ಬಂತು. ಪ್ರತಿವಾರವೂ ಪ್ರಥಮ ಆನರ್ಸ್‌ನಿಂದ ಹಿಡಿದು ಸೀನಿಯರ್ ಎಂ.ಎ.ವರೆಗೆ ವಿಚಾರ ಸಂಕಿರಣಗಳು ನಡೆಯುವ ಪ್ರಕ್ರಿಯೆಗೆ ಹೊಸ ಅರ್ಥವಂತಿಕೆ ಬಂತು. ಇವುಗಳಲ್ಲದೆ ಪ್ರತಿ 15 ದಿವಸಕ್ಕೊಮ್ಮೆ ವಿಶೇಷ ಸಾಹಿತ್ಯಗೋಷ್ಠಿ ಏರ್ಪಾಟಾಯಿತು. ವಿದ್ವಾಂಸರ, ವಿಮರ್ಶಕರ ವಾಗ್ವಾದಗಳು ಇಲ್ಲಿ ನಡೆಯುತ್ತಿತ್ತು. ಕೆಲವೊಮ್ಮೆ ಚರ್ಚೆ ಕಾವೇರುತ್ತಾ ಥಟ್ಟನೆ ನಿಂತುಹೋದದ್ದೂ ಉಂಟು. ಈ ಎಲ್ಲಾ ದೃಶ್ಯಗಳು ನಮಗೆಲ್ಲರಿಗೂ ವಿಶಿಷ್ಟ ಅನುಭವ ನೀಡುತ್ತಿದ್ದವು. ಜಿಎಸ್‌ಎಸ್, ತರಗತಿಗಳಲ್ಲಿ ಈ ಅತಿರೇಕಗಳನ್ನು ಕುರಿತು ಪ್ರತಿಕ್ರಿಯಿಸುತ್ತಿದ್ದರು. ವಿಮರ್ಶಾ ಮನೋಭಾವದಲ್ಲಿ, ವಿನಯವನ್ನು ಹೇಗೆ ಕಾಪಾಡಿಕೊಳ್ಳಬೇಕು ಎಂಬುದನ್ನು ತಿಳಿಸುತ್ತಿದ್ದರು.

ಜಿಎಸ್‌ಎಸ್ ಅವರು ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ ಮಾಡಿದ ಅಪೂರ್ವ ಕೆಲಸವೆಂದರೆ ಎಲ್ಲಾ ವಿಶ್ವವಿದ್ಯಾಲಯಗಳ ವಿಮರ್ಶಕರನ್ನು ಸಾಹಿತಿಗಳನ್ನು ಒಂದೆಡೆ ಸೇರಿ ಚರ್ಚಿಸಲು, ಒಂದು ವೇದಿಕೆ ಮಾಡಿಕೊಟ್ಟುದು. ಸೆನೆಟ್ ಹಾಲ್‌ನಲ್ಲಿ ನಡೆಯುತ್ತಿದ್ದ ವಿಶೇಷ ವಿಚಾರಸಂಕಿರಣಗಳು ನನ್ನ ಮನಸ್ಸಿನ ಮೇಲೆ ಗಾಢ ಪ್ರಭಾವ ಬೀರಿವೆ. ಜಿಎಸ್‌ಎಸ್ ಆಸ್ಥೆಯಿಂದ ಎಲ್ಲಾ ಬಗೆಯ ದೃಷ್ಟಿಕೋನಗಳ ಚಿಂತಕರನ್ನೂ ಒಟ್ಟಿಗೆ

ಸೇರಿಸಿ 'ವಿಮರ್ಶಾಪ್ರಜ್ಞೆ' ಜೀವಂತವಾಗಿಡಲು ಶ್ರಮಿಸಿದರು. ಸೆನೆಟ್ ಹಾಲ್‌ನಲ್ಲಿ ನಡೆದ ವಿಚಾರ ಸಂಕಿರಣಗಳಲ್ಲಿ ಲಂಕೇಶ್-ಬೇಂದ್ರೆ ಸೆಣಸಾಡಿದ್ದು, ಕಾರಂತ-ಲಂಕೇಶ್ ವಾಗ್ವಾದ ಮಾಡಿದ್ದು, ಹಾಗೆಯೇ ಶಾಂತಿನಾಥ ದೇಸಾಯಿ, ಜಿ.ಎಚ್. ನಾಯಕ್, ಕುರ್ತುಕೋಟಿ, ಅನಂತಮೂರ್ತಿ ಹೀಗೆ ಎಲ್ಲಾ ವಿಮರ್ಶಕರುಗಳನ್ನು ಒಟ್ಟಿಗೆ ಸೇರಿಸಿ ಸಮಕಾಲೀನ ಸಾಹಿತ್ಯವನ್ನು ಗಂಭೀರ ಚರ್ಚೆಗೆ ಒಳಗಾಗಿಸಿದ್ದು—ಇವೆಲ್ಲಾ ಮರೆಯು ವಂಥದಲ್ಲ. ಈ ಬಗೆಯ ಜೀವಂತ ಹಾಗೂ ಆರೋಗ್ಯಕರ ವಿಮರ್ಶಾ ವಾತಾವರಣ ಉಂಟುಮಾಡಿದ ಕೀರ್ತಿ ಜಿಎಸ್‌ಎಸ್ ಅವರದು. ಅವರು ಒದಗಿಸಿಕೊಟ್ಟ ಈ ಪರಿಸರದಿಂದ ಸಾಕಷ್ಟು ಬೆಳೆದೆವು ಎಂದು ನಮಗೆಲ್ಲರಿಗೂ ಅನಿಸಿದೆ.

ಹಿರಿಯ ಮಟ್ಟದ ವಿದ್ವಾಂಸರ ವಿಮರ್ಶಕರ ವಿಚಾರಸಂಕಿರಣಗಳನ್ನು ನಿಯೋಜಿಸಿದ್ದು, ಇಡೀ ಕನ್ನಡ ವಿಭಾಗದಲ್ಲಿ ವಿಮರ್ಶಾಪ್ರಜ್ಞೆ ಅರಳಲು ಕಾರಣವಾಯಿತು. ನನ್ನಂಥವರಿಗೆ ಇದೊಂದು ಪ್ರಾಯೋಗಿಕ ಕಮ್ಮಟ. ಕೆಲವು ಚರ್ಚೆಗಳು ಆಗ ಅರ್ಥವಾಗದೇ ಹೋದರೂ ಮುಂದೆ ಗಂಭೀರ ಚಿಂತನೆಗಳಿಗೆ ಅನುವುಮಾಡಿಕೊಟ್ಟವು. ನನ್ನ ಹಸಿ ಹಸಿ ವಿಚಾರ; ತರ್ಕಗಳು, ಅಡ್ಡದಾರಿ ಹಿಡಿಯದ ಹಾಗೆ ಅವರ ತರಗತಿಯ ಪಾಠಗಳು ಆಗಾಗ ಎಚ್ಚರಿಸುತ್ತಿದ್ದವು.

ಜಿಎಸ್‌ಎಸ್, ಎಂ.ಎ. ತರಗತಿಗಳನ್ನು ತೆಗೆದುಕೊಳ್ಳುವಾಗ ತರಗತಿಯಲ್ಲಿ ಅತ್ಯಂತ ಗಂಭೀರವಾಗಿರುತ್ತಿದ್ದರು. ಮೈಮರೆತು ಪಾಠ ಮಾಡುವ ಅವರ ಶ್ರದ್ಧೆ ಎಲ್ಲಾ ಅಧ್ಯಾಪಕರುಗಳಿಗೂ ಮಾದರಿಯಾಗಿದೆ. ನಾನು ಅಧ್ಯಾಪಕನಾದಮೇಲೆ ಅವರಂತೆ ಪಾಠ ಮಾಡಲು ಪ್ರಯತ್ನಿಸಿದ್ದುಂಟು. ಈ ದೃಷ್ಟಿಯಿಂದ ಅವರು ಒಬ್ಬ ಆದರ್ಶ ಶಿಕ್ಷಕ. ವಿಶೇಷವಾಗಿ ಅವರ 'ಕಾವ್ಯಮೀಮಾಂಸೆ'ಯ ಪಾಠಗಳು, ನಮಗೆಲ್ಲಾ ಸಾಹಿತ್ಯದ ಬಗೆಗೆ ತಳಪಾಯ ಒದಗಿಸಿದ ಪಾಠಗಳು. ಹೊಚ್ಚಹೊಸ ಆಲೋಚನೆಗಳು, ಉದಾಹರಣೆಗಳು, ನಿರೂಪಿಸುವ ಶೈಲಿ, ಎಲ್ಲವೂ ಇಷ್ಟವಾಗಿ ಇಡೀ ಗಂಟೆ ಒಂದೇ ಕ್ಷಣದಲ್ಲಿ ಕಳೆದಂತೆ ಭಾಸವಾಗುತ್ತಿತ್ತು. ಪ್ರತಿಯೊಂದು ತರಗತಿಯಲ್ಲೂ ನಮಗೆಲ್ಲಾ 'ನಾವು ಈ ತರಗತಿಯಿಂದ ಬೆಳೆದಿದ್ದೇವೆ' ಎಂಬ ಅನುಭವವಾಗುತ್ತಿತ್ತು, ಹೆಮ್ಮೆ ಎನಿಸುತ್ತಿತ್ತು, ಅವರ ಬಗ್ಗೆ ಅಭಿಮಾನ ಮೂಡುತ್ತಿತ್ತು.

ಜಿಎಸ್‌ಎಸ್, ತರಗತಿಯಲ್ಲಿ ಚರ್ಚೆಗೆ ಸಂವಾದಕ್ಕೆ ಅವಕಾಶ ಕೊಡುತ್ತಿರಲಿಲ್ಲ. ಅವರ ತರಗತಿಯಲ್ಲಿ ಪ್ರಶ್ನೆ ಹಾಕುವುದೆಂದರೆ ಅದು 'ಉದ್ಧಟತನ' ಎಂದೇ ಅವರಿಗೆ ಅನಿಸುತ್ತಿತ್ತೇನೋ? ಇದೊಂದು ವಿಷಯದಲ್ಲಿ ನಾವುಗಳೆಲ್ಲಾ ಅವರನ್ನು ಟೀಕಿಸಿದ್ದೂ ಉಂಟು. ಅಧ್ಯಾಪಕರಾಗಿ ಪ್ರತಿಭಟನೆಯನ್ನು ಅವರು ಸಹಿಸುತ್ತಿರಲಿಲ್ಲ. ಹೀಗಾಗಿ ನನಗೆ ಅವರಲ್ಲಿ ಅತ್ಯಂತ ಗೌರವಭಾವ ಮೂಡಲು ಸಾಧ್ಯವಾಯಿತೇ ಹೊರತು ಸಲಿಗೆ ಬೆಳೆಸಿಕೊಳ್ಳಲು ಸಾಧ್ಯವಾಗಲಿಲ್ಲ.

ನಮ್ಮ ತರಗತಿಯ ಮಿತ್ರರೆಲ್ಲಾ ಸೇರಿ 'ಸಂಕೀರ್ಣ' ಎಂಬ ಸಾಹಿತ್ಯ ಪತ್ರಿಕೆಯನ್ನು

ಹುಟ್ಟುಹಾಕಿದೆವು. ಈ ಪತ್ರಿಕೆಗೆ ಗೌರವ ಸಂಪಾದಕರಲ್ಲಿ ಜಿಎಸ್‌ಎಸ್ ಕೂಡ ಒಬ್ಬರು. ಜಿಎಸ್‌ಎಸ್ ನಮ್ಮ ಈ ಪ್ರಯತ್ನ ಕಂಡು ಸಂತೋಷಪಟ್ಟರು. ಪತ್ರಿಕೆಗೆ ಒಂದು ಕೊಠಡಿಯನ್ನೇ ಬಿಟ್ಟುಕೊಟ್ಟು ಬೆನ್ನು ತಟ್ಟಿದರು.

ಆದರೆ ಆ ಪತ್ರಿಕೆಯಲ್ಲಿ ಅವರಿಗೆ ಒಪ್ಪದ ಲೇಖನ ಅಚ್ಚಾಗುವುದನ್ನೂ ಸಹಿಸದ ಅವರು 'ಗೌರವ ಸಂಪಾದಕರಾಗಿ ನನ್ನ ಹೆಸರನ್ನು ಬಳಸಿಕೊಳ್ಳಬೇಡಿ' ಎಂದು ಗುಡುಗಿದರು. ಜಿಎಸ್‌ಎಸ್ ಶಿಷ್ಯರಾದ ನಾವು ಈ ಪ್ರತಿಭಟನೆಯ ನಡುವೆಯೂ ಪತ್ರಿಕೆ ತಂದೆವು. ಜಿಎಸ್‌ಎಸ್ ಮೌನವಾಗಿಯೇ ಸಹಿಸಿದರು. ಈ ರೀತಿಯ ಸಂಬಂಧ ಬೇರೆ ವಿಶ್ವವಿದ್ಯಾಲಯಗಳಲ್ಲಿ ಇದ್ದುದನ್ನು ನಾನು ಕೇಳಿಲ್ಲ. ಈ ದೃಷ್ಟಿಯಿಂದ ಜಿಎಸ್‌ಎಸ್ ನಮಗೆಲ್ಲಾ ದೊಡ್ಡವರಾಗಿ ಕಂಡರು.

ನಾನು ಅಧ್ಯಾಪಕನಾದ ಮೇಲೂ ಜಿಎಸ್‌ಎಸ್‌ರವರು ಸಂಯೋಜಿಸುತ್ತಿದ್ದ ವಿಚಾರಸಂಕಿರಣಗಳಲ್ಲಿ ಭಾಗವಹಿಸುತ್ತಿದ್ದೆ. ನನಗದು ಪುನಃಶ್ಚೇತನ ಶಿಬಿರವೇ ಆಗುತ್ತಿತ್ತು. ಅವರ ಶ್ರದ್ಧೆ, ಅವರ ಶೈಲಿ, ನನ್ನ ಅಧ್ಯಾಪಕ ವೃತ್ತಿಯ ಮೇಲೆ ಪ್ರಭಾವ ಬೀರಿದೆ. ಜಿಎಸ್‌ಎಸ್, ತೀನಂಶ್ರೀಯವರ ಶಿಷ್ಯರು. ನಾನು ತೀನಂಶ್ರೀ ಅವರನ್ನು ಕಂಡಿಲ್ಲ. ಜಿಎಸ್‌ಎಸ್ ಅವರಿಂದಲೇ ಅವರ ಬಗ್ಗೆ ಅಪಾರ ಮೆಚ್ಚುಗೆಯ ಮಾತನ್ನೂ ಕೇಳಿದ್ದೇನೆ. ಜಿಎಸ್‌ಎಸ್ ರವರಿಗೆ ತೀನಂಶ್ರೀ ಆದರ್ಶ ಶಿಕ್ಷಕ. ನನಗೆ ಜಿಎಸ್‌ಎಸ್ ಆದರ್ಶ ಶಿಕ್ಷಕ. ಜಿಎಸ್‌ಎಸ್ ಅವರಲ್ಲಿಯೇ ತೀನಂಶ್ರೀ ಅವರನ್ನು ಕಂಡಿದ್ದೇನೆ. ನನ್ನ ಸಾಹಿತ್ಯಕ ಚಿಂತನೆಗಳ ಮೇಲೆ ಹಾಗೂ ನನ್ನ ಶಿಕ್ಷಕ ವೃತ್ತಿಯ ಮೇಲೆ ಜಿಎಸ್‌ಎಸ್ ಪ್ರಭಾವ ಗಣನೀಯವಾಗಿದೆ ಎಂಬುದನ್ನು ತಿಳಿಸಲು ಹೆಮ್ಮೆ ಎನಿಸುತ್ತದೆ.

■

# ಮೋಡಿ ಮಾಡಿದ ಮೇಷ್ಟ್ರು

ಡಾ॥ ಬೈರಮಂಗಲ ರಾಮೇಗೌಡ

1976-78 ಅವಧಿಯಲ್ಲಿ ಕನ್ನಡ ಅಧ್ಯಯನ ಕೇಂದ್ರದ ವಿದ್ಯಾರ್ಥಿಯಾಗಿದ್ದಾಗಷ್ಟೆ ನಾನು ಮೊದಲಬಾರಿಗೆ ಜಿ.ಎಸ್.ಎಸ್. ಅವರನ್ನು ನೋಡಿದ್ದು. ಆದರೆ ಆ ವೇಳೆಗಾಗಲೇ ಜಿಎಸ್‌ಎಸ್ ಪ್ರೀತಿಯ ಕವಿಯಾಗಿ ನನ್ನೊಳಗೆ ಬೇರೂರತೊಡಗಿದ್ದರು. ಅವರ ಹಲವು ವಿಮರ್ಶಾಲೇಖನಗಳು ವಿಶಿಷ್ಟ ಪರಿಣಾಮ ಬೀರತೊಡಗಿ ನನ್ನ ಆಲೋಚನೆಗೆ ಒಂದು ಮೊನಚನ್ನೂ ಖಚಿತತೆಯನ್ನೂ ತಂದುಕೊಡಲು ಕಾರಣವಾಗಿದ್ದವು. ಮೊದಲ ವರ್ಷ ಅವರು ನಮಗೆ ತರಗತಿ ತೆಗೆದುಕೊಳ್ಳಲಿಲ್ಲವಾದ್ದರಿಂದ, ನಿರ್ದೇಶಕರ ಕೊಠಡಿಯಲ್ಲಿ ಬಹುಮಟ್ಟಿಗೆ ಗಂಭೀರ ಮುಖಮುದ್ರೆಯಲ್ಲಿ ಕುಳಿತಿರುತ್ತಿದ್ದುದನ್ನೋ ಪಾಠ ಮಾಡಲು ನಿರ್ದೇಶಕರ ಕೊಠಡಿಯಿಂದ ಸೀನಿಯರ್ ತರಗತಿಗಳತ್ತ ಹಾಯುತ್ತಿದ್ದುದನ್ನೋ ವಿಶ್ವವಿದ್ಯಾಲಯದ ಬಸ್ ಇಳಿದು ಅಧ್ಯಯನ ಕೇಂದ್ರದತ್ತ ನಡೆದುಬರುತ್ತಿದ್ದುದನ್ನೋ ಕಂಡು, ಯಾರೂ ವಿವರಣೆ ಕೊಡದಿದ್ದಾಗ್ಯೂ ನಮ್ಮೊಳಗೆ ತುಂಬಿಕೊಂಡಿರುತ್ತಿದ್ದ ಗೌರವಮಿಶ್ರಿತ ಭಯದಿಂದ ನಾವು ಆಡುತ್ತಿದ್ದ ಮಾತನ್ನು ನಿಲ್ಲಿಸಿ ಪಕ್ಕಕ್ಕೆ ಸರಿಯುತ್ತಿದ್ದೆವು. ಅಪರೂಪಕ್ಕೊಮ್ಮೆ ಕಚ್ಚೆಪಂಚೆ, ಕೋಟಿನಲ್ಲಿರುತ್ತಿದ್ದುದನ್ನು ಬಿಟ್ಟರೆ ಎರಡೂ ವರ್ಷಗಳಲ್ಲಿ ಅವರು ಬಹುಮಟ್ಟಿಗೆ ಕಾಣಿಸಿಕೊಂಡದ್ದು ಪಾಯಿಜಾಮ-ಜುಬ್ಬದ ಸರಳ ವೇಷದಲ್ಲಿ. ಮಗುವಿನ ಮುಗ್ಧತೆ ತುಂಬಿಕೊಂಡ ಬೆಳುದಿಂಗಳ ಮುಖ. ವಿದ್ಯಾರ್ಥಿಗಳಲ್ಲಿ ಅಶ್ರದ್ಧೆ, ಸೋಮಾರಿತನಗಳು ಕಂಡೊಡನೆ ನುಡಿಕಿಡಿ ಹಾರಿಸಲು ಸದಾ ಸನ್ನದ್ಧವಾದ ಗಂಭೀರ ಭಾವ. ತಮಗೆ ಸರಿಯಲ್ಲವೆನಿಸ್ಸಿದ್ದನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸುವಾಗಲೂ ಸದಭಿರುಚಿಯ ಎಲ್ಲೆಯನ್ನು ಮೀರದಿರುವ ವಿವೇಕ. ಗಾಂಭೀರ್ಯಕ್ಕೆ ವಿನಯ ಸೌಜನ್ಯಗಳ ನರುಗಂಪು. ಇದು ನಾನು ಕಂಡ ಜಿಎಸ್‌ಎಸ್.

ಜಿಎಸ್‌ಎಸ್, ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕತ್ವದ ಒತ್ತಡಗಳಲ್ಲಿದ್ದರೂ ತೀರಾ ಅನಿವಾರ್ಯವಾದ ಸಂದರ್ಭಗಳನ್ನು ಹೊರತುಪಡಿಸಿ ತರಗತಿಗಳನ್ನು ತಪ್ಪಿಸುತ್ತಿರಲಿಲ್ಲ. ತರಗತಿಗೆ ಬಂದವರೇ ಒಂದು ಬಾರಿ ಸಿಂಹಾವಲೋಕನ ಮಾಡಿ ಉಪನ್ಯಾಸ ಆರಂಭಿಸಿ ನಾಲ್ಕಾರು ವಾಕ್ಯಗಳನ್ನು ಮುಗಿಸುವಷ್ಟರಲ್ಲಿ ಪಾಠದಲ್ಲಿ ತನ್ಮಯರಾಗಿಬಿಡುತ್ತಿದ್ದರು. ಅನಂತರದಲ್ಲಿ ಅವರು ವಿದ್ಯಾರ್ಥಿಗಳ ಮುಖಾವಲೋಕನ ಮಾಡುತ್ತಿದ್ದದ್ದು ಕಡಿಮೆ. ಕಲ್ಪನೆಯಲ್ಲಿ

ಮುಳುಗೇಳುತ್ತಿರುವಾಗ ವಿದ್ಯಾರ್ಥಿಗಳನ್ನು ಗಮನಿಸುವುದರಿಂದ ತನ್ಮಯತೆಗೆ ಭಂಗ ವುಂಟಾದೀತೆಂಬ ಅನುಮಾನ ಅವರಿಗಿದ್ದುದರಿಂದ ಹೀಗೆ ಮಾಡುತ್ತಿದ್ದರೋ ಏನೋ. ಒಂದು ರೀತಿಯ ಸೂತ್ರಶೈಲಿಯಲ್ಲಿ ಸಾಗುತ್ತಿದ್ದ ಅವರ ಭಾಷೆ ಅಲಂಕಾರಿಕವಾದುದ್ದಾಗಿದ್ದರೂ ಅರ್ಥಮಾಡಿಕೊಳ್ಳಲು ಏನೇನೂ ತೊಡಕಾಗದೆ ನೇರವಾಗಿ ಭಾವನೆಗಳನ್ನು ನೇವರಿಸುವಂಥದ್ದು. ಕಾವ್ಯಮೀಮಾಂಸೆಯನ್ನು ಬೋಧಿಸುವಾಗ ಆವರೆಗೆ ಅವರು ಎಲ್ಲೂ ದಾಖಲಿಸದ ಹೊಸ ಆಲೋಚನೆಗಳು, ಹೊಸ ದೃಷ್ಟಿಕೋನ ಸ್ವಯಂಸ್ಫೂರ್ತಿಯಿಂದ ಚಿಮ್ಮುತ್ತಿದ್ದವು. ಮೋಹಕವಾದ, ಕಾವ್ಯಮಯವಾದ ಗದ್ಯಶೈಲಿಯಲ್ಲಿ ಅವರು ಅಭಿವ್ಯಕ್ತಿಸುತ್ತಿದ್ದ ಪದಸಮುಚ್ಚಯಗಳು, ತಕ್ಷಣ ಮನಸ್ಸನ್ನು ಆವರಿಸಿಕೊಂಡು ನೆನಪಿನಲ್ಲಿ ಸ್ಥಿರವಾಗಿ ನಿಂತೇಬಿಡುವಂಥ ವಾಕ್ಯಗಳು ವಿದ್ಯಾರ್ಥಿಗಳಿಗೆ ರಸಾನಂದವನ್ನುಂಟುಮಾಡುತ್ತಿದ್ದವು. ಪರಂಪರೆಯ ಆಲೋಚನಾ ಕ್ರಮಕ್ಕೆ ಅವರೆಂದೂ ಕಟ್ಟುಬೀಳದೆ, ಕನ್ನಡ-ಸಂಸ್ಕೃತ-ಇಂಗ್ಲಿಷ್‌ಗಳಲ್ಲಿನ ವಿಚಾರಗಳನ್ನು ಸಮೃದ್ಧವಾಗಿ ತಂದು ಸುರಿಯುತ್ತ ವ್ಯಾಖ್ಯಾನಕ್ಕೆ ಸಮಗ್ರತೆಯನ್ನು ತುಂಬುತ್ತಿದ್ದರು. ಅವರದು ಪ್ರಖರವೂ ಅಸಾಧಾರಣವೂ ಆದ ಸ್ಮರಣಶಕ್ತಿ. ತಾವು ಎಲ್ಲಿಯೋ ಎಂದೋ ಕೇಳಿದ್ದ ಮಾತುಗಳನ್ನು, ಎಂದೋ ಓದಿದ್ದ ಒಂದು ಪುಸ್ತಕದ ಸಾಲುಗಳನ್ನು, ತಮಗೆ ಪ್ರಿಯವೆನಿಸಿದ ಭಾಗವನ್ನು ಮೂಲದಿಂದ ಭಿನ್ನವಾಗದಂತೆ ವಾಕ್ಯವಾಕ್ಯವಾಗಿ ಸಾಲುಸಾಲಾಗಿ ಉದ್ಧರಿಸುತ್ತಿದ್ದುದು ಅವರಿಗಷ್ಟೇ ವಿಶಿಷ್ಟವೆನಿಸುವ ಒಂದು ಅದ್ಭುತ. ಗಂಭೀರವಾಗಿಯೇ ಕಾಣುತ್ತ, ಬಹುಮಟ್ಟಿಗೆ ಗಂಭೀರವಾಗಿಯೇ ಪಾಠ ಮಾಡುತ್ತಿದ್ದ ಅವರಲ್ಲಿ ಲಘು ವಿನೋದಶೀಲತೆಯೂ ನವಿರಾದ ಹಾಸ್ಯಾಭಿರುಚಿಯೂ ಮನೆಮಾಡಿಕೊಂಡಿದ್ದುದು ನಿಜವಾದರೂ, ಅದು ಅಪರೂಪಕ್ಕಷ್ಟೇ ಹೊರಹೊಮ್ಮುತ್ತಿತ್ತು. ಅಂಥ ಸಂದರ್ಭದಲ್ಲಿ ಅದನ್ನು ಪೂರ್ಣ ಪ್ರಮಾಣದಲ್ಲಿ ಅನುಭವಿಸುವುದು ವಿದ್ಯಾರ್ಥಿಗಳಿಗೆ ಕಷ್ಟವೇ ಆಗುತ್ತಿತ್ತು.

ಅವರು ನಿರ್ದೇಶಕರೂ ಗಂಭೀರಸ್ವಭಾವದವರೂ ಆಗಿರುವುದರಿಂದ ನಾವು ತರಗತಿಗಳಿಗೆ ತಪ್ಪಿಸಿಕೊಳ್ಳುವುದು ನಮ್ಮನ್ನು ಹಲವು ಬಗೆಯ ಸಂಕಷ್ಟಗಳಿಗೆ ಈಡು ಮಾಡಬಹುದು ಎಂಬ ಭೀತಿ. ವಿದ್ಯಾರ್ಥಿಗಳನ್ನು ಎಂದೂ ಜಿಎಸ್‌ಎಸ್ ತರಗತಿಗಳಿಗೆ ಒತ್ತಾಯಪೂರ್ವಕವಾಗಿ ದೂಡುತ್ತಿರಲಿಲ್ಲ. ಅವರ ತರಗತಿಗಳಿಗೆ ಗೈರುಹಾಜರಾಗುವುದುರಿಂದ ಉಂಟಾಗಬಹುದಾಗಿದ್ದ ನಷ್ಟದ ಅರಿವಿನಿಂದಲೇ ವಿದ್ಯಾರ್ಥಿಗಳು ಬರುತ್ತಿದ್ದರು. ಹೀಗಾಗಿ ಗಾಂಧೀಭವನದ ಕಾಡಿನಲ್ಲಿ ಹುಡುಗಿಯರೊಂದಿಗೆ ಆಗಾಗ ಕಳೆದುಹೋಗುತ್ತಿದ್ದ ವಿದ್ಯಾರ್ಥಿಗಳೂ ಜಿಎಸ್‌ಎಸ್ ತರಗತಿಗೆ ತಪ್ಪದೇ ಹಾಜರಾಗಿ ಅಚ್ಚರಿ ಹುಟ್ಟಿಸುತ್ತಿದ್ದರು. ನಿರೂಪಣೆಯ ಸ್ವಾರಸ್ಯ, ಅದರಲ್ಲಿ ಕಳೆ ತುಳುಕುವಂತೆ ಮಾಡುವ ಸೂಕ್ಷ್ಮ ಸಂವೇದನೆ, ವಿಷಯ ವಿಶ್ಲೇಷಣೆಯಲ್ಲಿ ಮೇಲಿಂದ ಮೇಲೆ ಹಾಯುತ್ತಲೇ ಇರುವ ಸಂಶೋಧಕ-ವಿಮರ್ಶಕ ದೃಷ್ಟಿ ಇವುಗಳಿಂದ ಕೂಡಿರುತ್ತಿದ್ದ ಅವರ ಒಂದೊಂದು ಉಪನ್ಯಾಸವೂ ವಿದ್ಯಾರ್ಥಿಗಳ ಪಾಲಿಗೆ ರಸದೌತಣವಾಗಿ ಪರಿಣಮಿಸುತ್ತಿತ್ತು. ಯಾರೂ ತರಗತಿಗಳಿಗೆ ಚಕ್ಕರ್ ಹಾಕದಂತೆ ಮೋಡಿ ಮಾಡಿಬಿಡುತ್ತಿತ್ತು. ಇವತ್ತು ಅವರ ಶಿಷ್ಯರ ಪೈಕಿ ಯಾರಾದರೂ

ಕಾವ್ಯಮೀಮಾಂಸೆ-ವಿಮರ್ಶೆಗಳ ವಿಚಾರದಲ್ಲಿ ಪ್ರೀತಿ ಆಸಕ್ತಿ ಗೌರವನ್ನು ತಳೆದಿದ್ದರೆ, ಆ ಸಂಬಂಧದ ಕೃಷಿಯನ್ನೇನಾದರೂ ನಡೆಸುತ್ತಿದ್ದರೆ, ತಮ್ಮ ಮಾತು-ಬೋಧನೆಗಳಲ್ಲಿ ಅಲ್ಲಿನ ವಿಚಾರಗಳನ್ನು ಹೆಣೆಯುವ ಕೆಲಸ ಮಾಡುತ್ತಿದ್ದರೆ ಅದಕ್ಕೆ ಜಿಎಸ್‌ಎಸ್ ಅವರ ಈ ಮೋಡಿಯೇ ಕಾರಣ.

ಇನ್ನು ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ ಜಿಎಸ್‌ಎಸ್ ಪಡೆದ ಯಶಸ್ಸನ್ನು ಕುರಿತು ಆರ್.ಸಿ. ಹಿರೇಮಠ್ ಅವರು ಹೇಳಿದ ಮಾತುಗಳು ಸತ್ಯಸ್ಯ ಸತ್ಯ ಎನಿಸುವಂಥವು. 'ಶಿವರುದ್ರಪ್ಪನವರ ಅವಧಿಯಲ್ಲಿ ಕನ್ನಡ ಅಧ್ಯಯನ ಕೇಂದ್ರ ಆನೆಯ ಶಕ್ತಿ ಪಡೆದು ಅನೇಕ ಹಸ್ತಗಳುಳ್ಳ ಐರಾವತರಾಯಿತು' ಎಂಬ ಈ ಅಭಿಪ್ರಾಯದಲ್ಲಿ ಪ್ರೀತಿ, ಮೆಚ್ಚುಗೆಗಳೊಂದಿಗೆ ವಾಸ್ತವಾಂಶವೂ ಸಮಪ್ರಮಾಣದಲ್ಲಿ ಬೆರೆತುಕೊಂಡಿದೆ. ಸದ್ದುಗದ್ದಲಗಳಿಂದ ದೂರವಾಗಿ, ನುಗ್ಗಿ ಬರಲೆಳಸುತ್ತಿದ್ದ ವಂದಿಮಾಗಧರನ್ನು ಹತ್ತಿರ ಸೇರಿಸದೆ ನೇರ ಸ್ವಭಾವದ ಸರಳಜೀವಿಯಾಗಿದ್ದುಕೊಂಡು, ಸಮಚಿತ್ತ ಸಮತೂಕ ಸಮನ್ವಯ ಮನೋಧರ್ಮಗಳಲ್ಲಿ ನಡೆಯುತ್ತಿದ್ದ ಅವರ ಕಾಲಾವಧಿಯಲ್ಲಿ ಅನ್ಯಾಯದ ಬಾವುಟವೇರಿಸಿ ವಿದ್ಯಾರ್ಥಿಗಳು ಮುಷ್ಕರವನ್ನೋ ಪ್ರತಿಭಟನೆಯನ್ನೋ ಮಾಡಿದ್ದು ಇಲ್ಲವೇ ಇಲ್ಲವೇನೋ. ಚಂಡ ಪ್ರಚಂಡ ಪ್ರತಿಭೆಗಳೇ ತುಂಬಿಕೊಂಡಿದ್ದ, ಹಲವು ಕ್ಷೇತ್ರಗಳಲ್ಲಿ ಸಾಧನೆಯ ಹೆಜ್ಜೆಗಳನ್ನು ಊರಿದ್ದ ಅಧ್ಯಾಪಕ ವರ್ಗದಲ್ಲಿ ಆಗಾಗ ವಿದ್ವಜ್ಜಗಳಗಳು ನಡೆದು ಸುದ್ದಿಯಾಗುತ್ತಿದ್ದವೇ ಹೊರತು ಅವೆಂದೂ ವೈಯಕ್ತಿಕ ದ್ವೇಷ, ಅಸೂಯೆ, ವಿರಸಗಳ ಚರಂಡಿಯಾಗಲಿಲ್ಲ. ಅಧ್ಯಾಪಕ ವೃತ್ತಿಯ ಬಗೆಗೆ ಅಪಾರವಾದ ಗೌರವವಿರಿಸಿಕೊಂಡು, ಉನ್ನತಮಟ್ಟದ ಬೋಧನೆಯಿಂದ ಸಾವಿರಾರು ಮಂದಿ ಶಿಷ್ಯರ ಹೃದಯ ಸೂರೆಗೊಂಡು, ಶ್ರಮವನ್ನು ಅವಲಂಬಿಸಿ ನಡೆವ ಕಷ್ಟಸಹಿಷ್ಣುಗಳಾಗಿದ್ದ ಜಿಎಸ್‌ಎಸ್, ಅಲ್ಲಿನ ಸೂತ್ರಧಾರರಾಗಿದ್ದುದೇ ಅಸಹ್ಯ, ಅವಘಡ, ಏರುಪೇರುಗಳೇನೂ ನಡೆಯದಂಥ ವಾತಾವರಣ ನಿರ್ಮಿಸಲು ಕಾರಣವಾಗಿತ್ತೆಂದಲ್ಲಿ, ಅದು ಅತಿಶಯದ ಮಾತೇನೂ ಆಗದು. ದಿಟವನ್ನೇ ಧೈರ್ಯದಲ್ಲಿ ನುಡಿಯುವವರಾಗಿದ್ದುದರಿಂದಲೇ ಅಧ್ಯಯನ ಕೇಂದ್ರದ ಆಡಳಿತ ವ್ಯವಸ್ಥೆ, ಪರೀಕ್ಷೆ, ತರಗತಿ, ಪುಸ್ತಕ ಪ್ರಕಟಣೆ, ವಿಚಾರ ಸಂಕಿರಣ ಇತ್ಯಾದಿಗಳನ್ನೆಲ್ಲ ನಿರಂತರ ಕಾರ್ಯತತ್ಪರತೆಯಿಂದ ಜನಮೆಚ್ಚುವಂತೆ ನಡೆಸಿಕೊಂಡು ಹೋಗುವುದು ಅವರಿಗೆ ಸಾಧ್ಯವಾಯಿತು.

ಶಿವರುದ್ರಪ್ಪನವರು ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿದ್ದ ಅವಧಿಯಲ್ಲಿ ಪ್ರತಿವರ್ಷ ತಪ್ಪದೆ ಏರ್ಪಡಿಸುತ್ತಿದ್ದ ವಿಚಾರ ಸಂಕಿರಣ ಯೋಜನೆ ಅಂದಿನ ಕಾಲಕ್ಕೆ ನೂತನ ಕೊಡುಗೆಯಂತಿದ್ದ ಒಂದು ಸಾಹಿತ್ಯ ಜಾತ್ರೆ. ಹಿರಿಯ-ಕಿರಿಯ ವಿಮರ್ಶಕರ ಅಪರೂಪದ ಸಂಗಮ. ಸಾಹಿತ್ಯದ ಹಳೆಯ ಕಿಲುಬನ್ನು ತೊಳೆಯುವುದಕ್ಕೆ, ಹೊಸ ಆಲೋಚನೆಗಳನ್ನು ಮಿಂಚಿಸುವುದಕ್ಕೆ, ಆರೋಗ್ಯಪೂರ್ಣ ಸಾಹಿತ್ಯಕ ಜಗಳಕ್ಕೆ ವಿಪುಲ ಅವಕಾಶ. ಪ್ರಾಚೀನ, ಆಧುನಿಕ ಸಾಹಿತ್ಯಗಳೆರಡರತ್ತಲೂ ಮುಖ ಮಾಡಿಕೊಂಡಿರುತ್ತಿದ್ದ

ಆ ಸಂಕಿರಣದಲ್ಲಿ ಪ್ರಬಂಧಕಾರರಾಗಿ, ಉದ್ಘಾಟಕರಾಗಿ, ಮುಖ್ಯ ಅತಿಥಿಯಾಗಿ, ಅಧ್ಯಕ್ಷರಾಗಿ, ವಿಶೇಷ ಆಹ್ವಾನಿತರಾಗಿ, ನಿರ್ವಾಹಕರಾಗಿ, ಆಮಂತ್ರಿತರಾಗಿ ಪಾಲು ಪಡೆಯುವುದೇ ಒಂದು ಹೆಮ್ಮೆಯ ಸಂಗತಿ. ಅಲ್ಲಿ ಚರ್ಚೆಯಾಗಬೇಕಾದ ವಿಷಯಗಳನ್ನು ಆಯ್ಕೆ ಮಾಡುವಲ್ಲಿ, ವಿದ್ವಾಂಸರನ್ನು ಆಯ್ಕೆ ಮಾಡುವಲ್ಲಿ ಯಾವ ಪಕ್ಷಪಾತಕ್ಕೂ ಎಡೆಯಾಗದಂತೆ ಜಿಎಸ್‌ಎಸ್ ಅವರ ನಿಶಿತಮತಿ ಕಾರ್ಯೋನ್ಮುಖವಾಗುತ್ತಿದ್ದ ರೀತಿ ಅತ್ಯದ್ಭುತವಾದ್ದದೇ ಸರಿ. ಅಲ್ಲಿ ಮಂಡಿತವಾಗುತ್ತಿದ್ದ ಪ್ರಬಂಧಗಳು ತಮ್ಮ ಅಭ್ಯಾಸ ಪೂರ್ಣತೆಯಿಂದಾಗಿಯೇ ಗಮನ ಸೆಳೆಯುತ್ತಿದ್ದವು. ಅವುಗಳನ್ನು ಮತ್ತಷ್ಟು ಹೊಳಪು ಗೊಳಿಸುವಂಥ ಮುಕ್ತಮನಸ್ಸಿನ ಚರ್ಚೆಗಳು ಸೆನೆಟ್ ಸಭಾಂಗಣ ಬಿಸಿಯೇರುವಂತೆ, ಕೋಲಾಹಲಗೊಳ್ಳುವಂತೆ ಮಾಡುತ್ತಿದ್ದವು. ಆ ಸಂಕಿರಣದಲ್ಲಿ ಮಂಡಿತವಾದ ಪ್ರಬಂಧಗಳು ಅಲ್ಲಿ ನಡೆದ ಚರ್ಚೆಯ ಸಾರವನ್ನು ಹೀರಿ ಪುಷ್ಟಗೊಂಡು ಮುಂದಿನ ವರ್ಷದ ಮತ್ತೊಂದು ವಿಚಾರ ಸಂಕಿರಣದ ಹೊತ್ತಿಗೆ ಪುಸ್ತಕ ರೂಪ ಧರಿಸಿ ಬಿಡುಗಡೆಗೊಳ್ಳುತ್ತಿದ್ದವು. ಆ ಪುಸ್ತಕಗಳು ಈಗಲೂ ಕನ್ನಡ ಸಾಹಿತ್ಯದ ಬೆಳವಣಿಗೆಗೆ ದಿಕ್ಸೂಚಿಯಾಗಿ, ಆಕರ ಗ್ರಂಥಗಳಾಗಿ ನಿಂತಿರುವುದು ಅವುಗಳ ಮೌಲಿಕತೆಯನ್ನು ಸ್ಪಷ್ಟಪಡಿಸುತ್ತಿದೆ. ಇದರಿಂದ ಶಿವರುದ್ರಪ್ಪನವರು ಪೌರ್ವಾತ್ಯ-ಪಾಶ್ಚಾತ್ಯ ವಿಮರ್ಶೆಯ ನೆಲೆಬೆಲೆಗಳನ್ನು ಚೆನ್ನಾಗಿ ಅರಗಿಸಿಕೊಂಡು ಅವುಗಳ ಬೆಳಕಿನಲ್ಲಿ ಹೊಸ ಬಗೆಯ ಸಾಹಿತ್ಯ ಚಟುವಟಿಕೆಗಳನ್ನು ಹಮ್ಮಿಕೊಳ್ಳುವ ಸಾಮರ್ಥ್ಯ ಹೊಂದಿದವರಾಗಿ, ಹಳೆ ಬೇರು ಹೊಸ ಚಿಗುರಿನ ಸಾಹಿತ್ಯಕ್ಕೆ ಸೇತುವೆ ಕಟ್ಟಿ ಸಂಚಾರವನ್ನು ಸುಗಮಗೊಳಿಸುವವರಾಗಿ, ಕನ್ನಡ ವಿಮರ್ಶಾ ಕ್ಷೇತ್ರದ ದಿಂಗತಗಳನ್ನು ವಿಸ್ತಾರಕ್ಕೊಯ್ಯಲು ಟೊಂಕ ಕಟ್ಟಿ ನಿಂತ ಸಾಧಕರಾಗಿ ಕಂಡುಬರುತ್ತಾರೆ. ಇದು ಅವರ ಸಾದಾ ಜೀವನ, ಪ್ರತಿಭೆ-ಪಾಂಡಿತ್ಯಗಳ ಸಾಮರಸ್ಯದ ವ್ಯಕ್ತಿತ್ವ, ಪ್ರಗತಿಪರವಾದ ಸಮನ್ವಯ ದೃಷ್ಟಿ ಇವುಗಳಿಂದ ಸಾಧ್ಯವಾದದ್ದು.

ಹೃದಯಸಂಪನ್ನತೆಗೆ ಹೆಸರಾದ ಶಿವರುದ್ರಪ್ಪನವರು ಅಧ್ಯಾಪಕರಾಗಿ, ಆಡಳಿತಗಾರ ರಾಗಿ, ವಿಮರ್ಶಕ-ಕವಿಯಾಗಿ ಪಡೆದ ಮುಪ್ಪುರಿಯ ಯಶಸ್ಸಿಗೆ ಅವರು ಬಳಸುತ್ತಿದ್ದ ಭಾಷೆಯೂ ಕಾರಣವಾಗಿದ್ದಿರಬಹುದು. ಅವರು ಪಾಠ ಮಾಡುತ್ತಿದ್ದಾಗಲೂ ಭಾಷಣ ಮಾಡುವಾಗಲೂ ಚರ್ಚೆಯಲ್ಲಿ ತೊಡಗಿರುವಾಗಲೂ ಬರೆಯುವಾಗಲೂ ಬಳಸುವ ಭಾಷೆ ಬಹು ಹದವಾದದ್ದು. ಅದು ಎಲ್ಲೂ ರೂಕ್ಷವಾಗದೆ ಚಿತ್ತವಿಕಾರಗಳನ್ನು ಕಾರದೆ ಆಲೋಚನಾಪೂರ್ಣವಾದ ವಿವೇಚನಾಶೀಲ ಮನೋವಿಲಾಸವನ್ನು ತೋರುವಂಥದ್ದು; ಸಂಯಮದಲ್ಲೇ ಸಾಗುವಂಥದ್ದು. ಸರಳತೆ, ಸೌಹಾರ್ದತೆ, ಆತ್ಮೀಯತೆ, ಸೌಮ್ಯತೆ, ಅಪರೂಪದ ಹಾಸ್ಯಪ್ರವೃತ್ತಿ ಇವುಗಳಿಂದಾಗಿ ಬಹುಮಟ್ಟಿಗೆ ಅವರು 'ಶಿವ'ನಾಗಿಯೇ ಕಾಣಿಸಿಕೊಂಡಿದ್ದರೂ ಒಮ್ಮೊಮ್ಮೆ ಕೆಲಸಗಳ ಒತ್ತಡ, ಮನಸ್ಸಿನ ಕಿರಿಕಿರಿಯಿಂದಾಗಿ 'ರುದ್ರ' ಸ್ವರೂಪವನ್ನೂ ಪ್ರಕಟಿಸಿರುವುದುಂಟು. ನಾಡಿನ ದುಸ್ಥಿತಿಯನ್ನು ಜನತೆಯ ನಿರಭಿಮಾನವನ್ನು ಕುರಿತು ಬೇಸರಗೊಳ್ಳುತ್ತಿದ್ದ ಜಿಎಸ್‌ಎಸ್ ವ್ಯಗ್ರರಾಗಿ ಕಿಡಿನುಡಿಗಳನ್ನುದುರಿಸಿರುವುದೂ

ಉಂಟು. ಧರ್ಮರಾಯ ಧನುಸ್ಸು ತೆಗೆದುಕೊಂಡಂತೆ ಕೋಮಲ ಮನಸ್ಸಿನ ಸಾತ್ವಿಕ ಜೀವಿಗಳಿಗೆ ಇದು ಸಹಜವೂ ಇರಬಹುದು. ಶೋಷಣೆ, ಭ್ರಷ್ಟಾಚಾರ, ನೀತಿಹೀನ ರಾಜಕೀಯದ ವಿರುದ್ಧ ಸಿಡಿದು ಸಾತ್ವಿಕ ಸಂತಾಪದಿಂದ ಜಿ.ಎಸ್.ಎಸ್. ಆಕ್ರೋಶ ವ್ಯಕ್ತಪಡಿಸಿರುವ ಹಲವು ಉದಾಹರಣೆಗಳು ನಮ್ಮೆದುರಿಗಿವೆ.

ನಾನು ಸೀನಿಯರ್ ಎಂ.ಎ. ತರಗತಿಯಲ್ಲಿದ್ದಾಗ ಕರ್ನಾಟಕ ಸಂಘದ ಅಧ್ಯಕ್ಷನಾಗಿ ಜಿಎಸ್ಎಸ್ ಅವರನ್ನು ಸಮೀಪದಿಂದ ನೋಡುವ-ಅರ್ಥಮಾಡಿಕೊಳ್ಳುವ ಅವಕಾಶ ಪಡೆದುಕೊಂಡಿದ್ದೆ. ಆಗ ಜಿ.ಪಿ. ರಾಜರತ್ನಂ, ರಾಮಚಂದ್ರಶರ್ಮ, ಕೆ.ಎಸ್.ನರಸಿಂಹಸ್ವಾಮಿ, ಪಿ.ಲಂಕೇಶ್ ಮುಂತಾದವರನ್ನು ಕಾರ್ಯಕ್ರಮಗಳಿಗೆ ಆಹ್ವಾನಿಸಿ ಅವರೊಡನಾಡುವ-ವಿಚಾರ ವಿನಿಮಯ ಮಾಡಿಕೊಳ್ಳುವ ಸದವಕಾಶವನ್ನು ಜಿಎಸ್ಎಸ್ ಕಲ್ಪಿಸಿಕೊಟ್ಟಿದ್ದರು. ಸಂಘದ ಚಟುವಟಿಕೆಗಳಲ್ಲಿ ಶಿಸ್ತು, ಅಚ್ಚುಕಟ್ಟುತನ, ಕ್ರಮಬದ್ಧತೆ, ಕ್ಷಿಪ್ರತೆಗಳನ್ನು ಅವರು ಬಯಸುತ್ತಿದ್ದರು. ಯಾವುದಕ್ಕೂ ಅತಿಯಾಗಿ ಅಂಟಿಕೊಳ್ಳದ, ಪರಿಸ್ಥಿತಿಯೊಂದಿಗೆ ಮನಸ್ಸಿನ ವಿರುದ್ಧವಾಗಿ ರಾಜಿ ಮಾಡಿಕೊಳ್ಳಲೊಪ್ಪದ ಅವರು, ಯೋಜಿತ ರೀತಿಯಲ್ಲಿ ಕೆಲಸಗಳು ನಡೆಯದಿದ್ದಾಗ ಆತಂಕ ಕಳವಳಗಳಲ್ಲಿ ಚಡಪಡಿಸುತ್ತ ರೇಗುವುದಕ್ಕೂ ಹಿಂದೆ ಮುಂದೆ ನೋಡುತ್ತಿರಲಿಲ್ಲ. ಪ್ರಾಮಾಣಿಕತೆ, ಸತ್ಯನಿಷ್ಠೆ, ಘನತೆ, ನ್ಯಾಯನಿಷ್ಠುರತೆ, ನಿರ್ದಾಕ್ಷಿಣ್ಯ ಪ್ರವೃತ್ತಿಗಳಿಂದ ನಮಗೆ ಕುತೂಹಲವನ್ನೂ ಅಚ್ಚರಿಯನ್ನೂ ಉಂಟುಮಾಡಿ ನಮಗೇ ಗೊತ್ತಿಲ್ಲದಂತೆ ನಮ್ಮನ್ನು ಋಜುಮಾರ್ಗದೆಡೆಗೊಯ್ಯುವ ಶಕ್ತಿಕೇಂದ್ರದಂತಿದ್ದವರು ಜಿಎಸ್ಎಸ್. ಅವರನ್ನು ಮೇಷ್ಟ್ರಾಗಿ ಪಡೆದದ್ದು ನನ್ನ ಮತ್ತು ನನ್ನಂಥ ಸಾವಿರಾರು ವಿದ್ಯಾರ್ಥಿಗಳ ಪಾಲಿಗೆ ಹೆಮ್ಮೆಯ, ಅಭಿಮಾನದ ಸಂಗತಿಯಾಗಿದೆ.

■

# ಕನ್ನಡದ ನಂದಾದೀಪ

ಎನ್. ನಾಗರಾಜು

ನನ್ನ ಬದುಕಿನ ತಿರುವುಗಳಲ್ಲಿ ಮಹತ್ತ್ವದ ಪಾತ್ರ ವಹಿಸಿದವರಲ್ಲಿ ಪ್ರೊ. ಜಿಎಸ್‌ಎಸ್ ರವರೂ ಒಬ್ಬರು. ಜಿಎಸ್‌ಎಸ್, ನನ್ನ ನೆಚ್ಚಿನ ಮೇಷ್ಟು ಮಾತ್ರವಲ್ಲ, ನಾನು ಕನ್ನಡ ಸಾಹಿತ್ಯದೇವಿಗೆ ವಿಮುಖನಾಗದಂತೆ ನನಗೆ ಸಹಾಯ ಮಾಡಿದವರೂ ಕೂಡ. ಕಾವ್ಯ ಮೀಮಾಂಸೆಯನ್ನು ಹೇಗೆ ಲೀಲಾಜಾಲವಾಗಿ ಪಾಠ ಮಾಡಲು ಗೊತ್ತುಂಟೋ ಅಷ್ಟೇ ಸಮರ್ಥವಾಗಿ ಜೀವನದ ಸಮಸ್ಯೆಗಳ ಕಗ್ಗಂಟನ್ನೂ ಬಿಡಿಸಲು ಅವರು ಸಮರ್ಥ ರೆಂಬುದನ್ನು ನನಗೆ ಅವರು ಮಾಡಿದ ಸಹಾಯ ನಿರೂಪಿಸಿತು. ನಾನು ಅಂತಿಮ ಎಂ.ಎ. ಓದುತ್ತಿದ್ದಾಗ ನನಗೆ ಗುಮಾಸ್ತೆಯ ಕೆಲಸ ಸಿಕ್ಕಿ, ಕೆಲಸಕ್ಕೆ ಹೋಗಬೇಕೆಂಬ ಆರ್ಥಿಕ ಒತ್ತಡದಿಂದ ಕೆಲಸಕ್ಕೆ ಸೇರಿದ ನಂತರ ವಿದ್ಯಾಭ್ಯಾಸಕ್ಕೆ ತಿಲಾಂಜಲಿ ನೀಡಲು ಇಚ್ಛಿಸದೆ ಕೆಲಸಕ್ಕೆ ರಾಜೀನಾಮೆ ಕೊಟ್ಟ ಸಂದರ್ಭದಲ್ಲಿ; ಜಿಎಸ್‌ಎಸ್‌ರವರು ಕೆಲಸವೂ ಇರಲಿ, ಓದೂ ಮುಂದುವರೆಯಲಿ ಎಂದು ಹೇಳಿ, ಸೆಂಟ್ರಲ್ ಕಾಲೇಜಿನಲ್ಲಿ ನಡೆಯುತ್ತಿದ್ದ ಸಂಜೆ ಕಾಲೇಜಿಗೆ ನನಗೆ ವರ್ಗಾವಣೆ ಕೊಡಿಸಿದರು. ಹೀಗಾಗಿ ನನ್ನ ಓದೂ ಮುಂದುವರೆದು ನಾನು ಕನ್ನಡ ಸ್ನಾತಕೋತ್ತರ ಪದವೀಧರನಾದೆ. ಜೊತೆಗೆ ನನ್ನ ಕೆಲಸವೂ ಉಳಿಯಿತು. ಹೀಗೆ ಮಾನವೀಯ ನೆಲೆಯಲ್ಲಿ ಜೀವನವನ್ನು ಕಂಡ ಒಬ್ಬ ಸಮರ್ಥ ಕ್ರಿಯಾಶೀಲ ಬುದ್ಧಿಜೀವಿಯಾಗಿ ಜಿಎಸ್‌ಎಸ್ ನನಗೆ ಮುಖ್ಯವಾಗುತ್ತಾರೆ.

ಪ್ರೊ. ಜಿಎಸ್‌ಎಸ್.ರವರು ಒಬ್ಬ ಸಮರ್ಥ ನವೋದಯ ಕವಿಯಾಗಿ, ಸಮನ್ವಯಶೀಲರಾಗಿ, ಶ್ರೀ ರಾಮಕೃಷ್ಣಪರಮಹಂಸರ, ಕುವೆಂಪುರವರ ವಿಶ್ವಮಾನವ ಭಾವನೆಯ ಸಮರ್ಥ ಹರಿಕಾರರಾಗಿ, ನನ್ನಂಥ ಬಹುಮಂದಿಗೆ ಮಾರ್ಗದರ್ಶಕರಾಗಿ, ಕನ್ನಡ ಸಾರಸ್ವತ ಲೋಕದ ಬಹುದೊಡ್ಡ ನೇತಾರರಾಗಿ, ಬೆಂಗಳೂರು ವಿಶ್ವವಿದ್ಯಾನಿಲಯದ ಜ್ಞಾನಭಾರತಿಯ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿ ಮಾಡಿದ ಸಾಧನೆ ಅತ್ಯಂತ ಗಮನಾರ್ಹವಾದದ್ದು. ಪ್ರಾಚೀನಕಾಲದ ಗುರುಪರಂಪರೆಗೆ ಒತ್ತು ಕೊಟ್ಟಂತೆ ಮೇಷ್ಟಾಗಿ ಜಿಎಸ್‌ಎಸ್ ನಮಗೆ ಕಲಿಸಿದ ಪಾಠ ಇಂದಿಗೂ ಮರೆಯಲಾಗದ ನೆನಪುಗಳ ಮುದ್ರೆಯನ್ನು ಒತ್ತಿದೆ. ಅವರ ಪಾಠವು ಗಂಭೀರ ಚಿಂತನೆಯ ಜೊತೆಯಲ್ಲೇ ಮೃಧುಮಧುರ ಭಾವನೆಗಳನ್ನು

ಬಿತ್ತುತ್ತಲೇ, ಒಳಿತು-ಕೆಡಕುಗಳ ಸಾರಾಸಾರ ವಿಮರ್ಶೆಯ ಬಾಗಿಲನ್ನೂ ತೆರೆಯುತ್ತ ಚಿತ್ತಮಂಥನಕ್ಕೆ ಅನುವು ಮಾಡಿಕೊಡುವುದನ್ನು ಕಾಣುತ್ತೇವೆ. ಈ ದೃಷ್ಟಿಯಿಂದ ನಾನು ಕಂಡಂತೆ ನನ್ನ ಮೇಷ್ಟು ಜಿಎಸ್ಎಸ್ ಕನ್ನಡದ ನಂದಾದೀಪಗಳಲ್ಲಿ ಒಬ್ಬರೆಂದು ಭಾವಿಸಿದ್ದೇನೆ.



# ನನ್ನ ಪತಿ ಜಿಎಸ್‌ಎಸ್: ಕೆಲವು ಸವಿನೆನಪುಗಳು

ಜಿ. ಎಸ್. ರುದ್ರಾಣಿ ಶಿವರುದ್ರಪ್ಪ

ನನ್ನ ತವರೂರು ಮಲೆನಾಡ ಅಂಚಿನಲ್ಲಿರುವ ತರೀಕೆರೆಯ ಹತ್ತಿರದ ಒಂದು ಹಳ್ಳಿ ಹಾದೀಕೆರೆ. ನಮ್ಮದು ಸುಸಂಸ್ಕೃತವಾದ ಸಂಪ್ರದಾಯಸ್ಥ ಮನೆತನ. ನಮ್ಮ ತಂದೆ ಜಮೀನುದಾರರು. ಛೇರ್ಮನ್ ಕೂಡ ಆಗಿದ್ದರು. ದೈವಭಕ್ತರು, ದಯಾಪರರೂ ಆಗಿದ್ದರು. ಗಂಡುಮಕ್ಕಳಿಲ್ಲದ ಕಾರಣ ನನ್ನ ತಾಯಿಯನ್ನು ಎರಡನೆ ಮದುವೆ ಮಾಡಿಕೊಂಡಿದ್ದರು. ನಾನು ನನ್ನ ತಾಯಿಗೆ ಚೊಚ್ಚಲ ಮಗು. ನಾನು ಹುಟ್ಟಿದ ಎಂಟೇದಿನಕ್ಕೆ ನನ್ನ ತಾಯಿ ತೀರಿಕೊಂಡರು. ನನ್ನನ್ನು ನನ್ನ ಮುತ್ತಜ್ಜಿ ಸಾಕಿದರು. ನಾನು ನನ್ನ ತಾಯಿಯ ತವರಾದ ಬೀರೂರಿನಲ್ಲೇ ಬೆಳೆದೆ. ಆರನೆ ತರಗತಿಯವರೆಗೆ ಓದಿದೆ. ಜಿಎಸ್‌ಎಸ್ ಅವರು ನನ್ನ ಸೋದರಮಾವ. ರುದ್ರಾಣಿಯನ್ನು ನಮ್ಮ ಶಿವಣ್ಣನಿಗೇ ಕೊಡಬೇಕು, ಈಗವರು ಎಲ್ಲಿದ್ದಾರೊ ಗೊತ್ತಿಲ್ಲ ಎಂದು ನನ್ನ ಅಜ್ಜಿ ಹೇಳುತ್ತಿದ್ದರು. ನಮ್ಮ ಮಾವನವರು ಮಿಡ್ಲಸ್ಕೂಲ್ ಹೆಡ್‌ಮಾಸ್ಟರ್ ಆಗಿದ್ದರು. ವರ್ಗವಾಗುವ ಹುದ್ದೆಯಾಗಿದ್ದ ಕಾರಣ ನಮ್ಮ ಅವರ ಸಂಪರ್ಕ ಇರಲಿಲ್ಲ. ಒಮ್ಮೆ ಯಾರೊ ನಮ್ಮ ದೂರದ ಬಂಧು ಒಬ್ಬರು ನನಗೆ ಹೇಳಿದರು, 'ಶಾಂತವೀರಪ್ಪನವರು ಗುಬ್ಬಿಯಲ್ಲಿ ಇದಾರಂತೆ' ಎಂದು. ನಾನು ಅಜ್ಜಿಗೆ ಹೇಳಿದೆ. ಅಜ್ಜಿ ನಮ್ಮ ತಂದೆಗೆ ಪತ್ರ ಬರೆಸಿದರು. ತಂದೆಯವರೂ ಬಂದರು. ಅಜ್ಜಿಗೆ ಮೊಮ್ಮಗನನ್ನು ನೋಡುವ ತವಕ, ತಂದೆಯವರಿಗೆ ಮಗಳಿಗೆ ಗಂಡು ಹುಡುಕುವ ತವಕ, ಇವರಿಬ್ಬರು ವಿಳಾಸ ಇಲ್ಲವಲ್ಲ ಹೇಗೆ ಹುಡುಕುವುದು ಎಂದು ಚಿಂತಿಸುತ್ತಿದ್ದರು. ಅದಕ್ಕೇನು ಕಷ್ಟ ಶಾಂತವೀರಪ್ಪ, ಮಿಡ್ಲಸ್ಕೂಲ್ ಹೆಡ್‌ಮಾಸ್ಟರ್, ಗುಬ್ಬಿ ಎಂದರೆ ಹೋಗುತ್ತದೆ ಎಂದು ನಾನೇ ಅಜ್ಜಿಯ ಹೆಸರಿನಲ್ಲಿ ಪತ್ರ ಬರೆದೆ. ಉತ್ತರವೂ ಬಂತು. ನಂತರ ತಂದೆಯವರು ಮುಂದಿನ ವ್ಯವಹಾರವನ್ನು ನಡೆಸಿದರು. ಆಗಿನ ಕಾಲದಲ್ಲಿ ವಿದ್ಯಾವಂತ ಹುಡುಗನಿಗೆ ವರದಕ್ಷಿಣೆ ಕೊಡುವವರು ಏನು ಕಡಿಮೆ ಇರಲಿಲ್ಲ. ಅದನ್ನೆಲ್ಲ ಜಿಎಸ್‌ಎಸ್ ಅವರು ನಿರಾಕರಿಸಿದರು. ನಮ್ಮ ಮದುವೆಯನ್ನು ತಪ್ಪಿಸಲು ನಮ್ಮ ಬಂಧುವೊಬ್ಬರು ನನಗೆ ಮೂರ್ಛೆ ರೋಗ ಬರುತ್ತದೆ ಎಂದು ಹೇಳಿದ್ದರಂತೆ. ಅದನ್ನು ಕೂಡ ಗಣನೆಗೆ ತಂದುಕೊಳ್ಳದೆ ಮದುವೆಗೆ ಒಪ್ಪಿಗೆ ಕೊಟ್ಟರಂತೆ. ನಮ್ಮ ತಂದೆಗೆ ವಿದ್ಯಾವಂತ ಅಳಿಯನನ್ನು ಪಡೆದಿರುವುದು ತುಂಬಾ ಹೆಮ್ಮೆಯ ವಿಚಾರವಾಗಿತ್ತು. ಅಜ್ಜಿಗೆ ವಯಸ್ಸಾದ ಕಾಲದಲ್ಲಿ ನಮ್ಮವರಲ್ಲದವರಿಗೆ ಹುಡುಗಿಯನ್ನು ಕೊಟ್ಟರೆ, ಕಡೆಗಾಲದಲ್ಲಿ ನನ್ನನ್ನ ಯಾರು ನೋಡಿಕೊಳ್ಳುತ್ತಾರೆ ಎನ್ನುವ

ಚಿಂತೆಯೂ ದೂರವಾಗಿರಬೇಕು. ನನಗೆ ನನ್ನ ಕೈ ಹಿಡಿಯುವವರನ್ನು ನಾನೇ ಹುಡುಕಿಕೊಂಡೆ ಎನ್ನುವ ಸಂತೋಷ. ಬಿ.ಎ. ಆನರ್ಸ್ ಮುಗಿದು ದಾವಣಗೆರೆಯಲ್ಲಿ ಕೆಲಸ ಸಿಕ್ಕಿದ ಮೇಲೆ 8.5.1950ರಲ್ಲಿ ಜಿಎಸ್‌ಎಸ್ ಅವರು ನನ್ನ ಕೈಹಿಡಿದರು.

ಕುವೆಂಪು ಅವರ 'ಅಜ್ಜಯ್ಯನ ಅಭ್ಯಂಜನ' ಎನ್ನುವ ಪ್ರಸಂಗವನ್ನು ಓದಿದವರಿಗೆ ಗೊತ್ತಿರುತ್ತದೆ, ಮಲೆನಾಡಿನ ಅಭ್ಯಂಜನ ಎಂದರೆ ಏನೂ ಎಂದು. ನಮ್ಮ ತಂದೆಯವರು ಕೂಡ ಅಳಿಯನ ಅಭ್ಯಂಜನಕ್ಕಾಗಿ ಒಬ್ಬ ದಢೂತಿ ಆಳನ್ನೆ ಗೊತ್ತುಮಾಡಿದ್ದರು. ದೊಡ್ಡದೊಂದು ಬಟ್ಟಲು ಹರಳೆಣ್ಣೆಯನ್ನು ತಲೆಗೆ, ಮೈಗೆ ಹಚ್ಚಲು ಆ ದಢೂತಿ ಮನುಷ್ಯನಿಗೆ ಎರಡು ಘಂಟೆ ಬೇಕಾಗುತ್ತಿತ್ತು. ಮತ್ತೆ ಅದನ್ನು ತೊಳೆಯಲು ಅಡಿಕೆ ಬೇಯಿಸುವಂಥ ದೊಡ್ಡ ದೊಡ್ಡ ಎರಡು ಹಂಡೆ (ಸುಟ್ಟು ಬರಿಯುವಂತ) ನೀರು ಬೇಕಾಗುತ್ತಿತ್ತು. ಈ ಅಭ್ಯಂಜನ ಸ್ನಾನ ಮುಗಿದ ಮೇಲೆ ನಾಲ್ಕು ರಗ್ಗುಗಳನ್ನು ಹೊದ್ದು 15 ನಿಮಿಷ ವಿಶ್ರಾಂತಿ. ಆಮೇಲೆ ಕಾಯಿಸಿದ ಘಮಘಮಿಸುವ ಹಾಲಿನ ಸೇವನೆಯಾಗುತ್ತಿತ್ತು. ಮಧ್ಯಾಹ್ನ ಪುಷ್ಕಳವಾಗಿ ಊಟ. ಇದು ಮಲೆನಾಡಿನ ಅಳಿಯೋಪಚಾರದ ವೈಖರಿ. ಹಳ್ಳಿ ಕಡೆ ಅಳಿಯೋಪಚಾರ ಎಂದರೆ ಮೂರು ತಿಂಗಳ ತನಕ. ಪಾಪ ವಿದ್ಯಾವಂತ ಅಳಿಯ ನೌಕರಿಯ ಪ್ರಯುಕ್ತ ಒಂದೇ ತಿಂಗಳಿಗೆ ಹೋಗಬೇಕಾಯಿತು. ಅಭ್ಯಂಜನದ ಕಾರ್ಯಕ್ರಮ ಹಾಗೇ ವಾರಕ್ಕೊಮ್ಮೆ ಮುಂದುವರಿಯಿತು. ನನ್ನ ಚಿಕ್ಕಮಗು ಒಮ್ಮೆ 'ಅಣ್ಣನಿಗೆ ಮಾಡಿಸಿದ ಹಾಗೆ (ಜಿಎಸ್‌ಎಸ್ ಅವರನ್ನು 'ಅಣ್ಣ' ಎಂದೇ ಕರೆಯುತ್ತಿದ್ದರು) ನಮಗೇಕೆ ಎಣ್ಣೆಸ್ನಾನ ಮಾಡಿಸುವುದಿಲ್ಲ' ಎಂದು ಕೇಳುತ್ತಿತ್ತು. "ಆ ಕಾಲದಲ್ಲಿ ನನ್ನ ಕೇಂದ್ರಬಿಂದು ಜಿಎಸ್‌ಎಸ್ ಒಬ್ಬರೇ ಆಗಿದ್ದರು." ದಾವಣಗೆರೆಯಲ್ಲಿ ಮನೆಮಾಡಿ ಒಂದು ವಾರದ ನಂತರ ನನ್ನನ್ನು ಕರೆದುಕೊಂಡು ಹೋದರು. ನಮ್ಮ ಮಾವನವರದ್ದು ದೊಡ್ಡ ಸಂಸಾರ. ನಮ್ಮ ಜೊತೆ ನಾದಿನಿ, ಮೈದುನರು, ಅಜ್ಜಿ ಇದ್ದರು. ಹೀಗೆ. ಪ್ರಾರಂಭವಾಯಿತು ನಮ್ಮ ಸಂಸಾರ.

ಒಂದು ದಿನ ಸಂಜೆ ರಾಮಕೃಷ್ಣಪರಮಹಂಸರ ಭಾವಚಿತ್ರವನ್ನು ತಂದು ನೋಡು, ಇಂದು ಪರಮಹಂಸರ ಜನ್ಮದಿನ. ಅವರನ್ನು ಪೂಜಿಸೋಣ. ಇನ್ನು ಮುಂದೆ ಇವರೇ ನಮ್ಮ ಮನೆದೇವರು ಎಂದು ಹೇಳಿದರು. ಅಂದು ಅವರು ಪೂಜಿಸಿದ ಭಾವಚಿತ್ರ ಇಂದಿಗೂ ದೇವರ ಮನೆಯಲ್ಲಿ ಪೂಜೆಗೊಳ್ಳುತ್ತಿದೆ. ಜಿಎಸ್‌ಎಸ್ ಅವರ ಕಾಲೇಜಿನ ಉಡುಪು ಶುಭ್ರವಾದ ಬಿಳಿ ಪಂಚೆ, ಜುಬ್ಬ, ಶಲ್ಯವನ್ನು ಮಡಿಸಿ ಎಡಭುಜದ ಮೇಲೆ ಹಾಕಿಕೊಳ್ಳುತ್ತಿದ್ದರು. ಸಂಜೆಯ ವಾಕಿಂಗ್ ಉಡುಪು ಜುಬ್ಬ, ಪೈಜಾಮ. ಈ ಉಡುಪನ್ನು ನಾನೇ ಶುಭ್ರವಾಗಿ ತೊಳೆದು ಗಂಜಿ ಹಾಕಿ ಗರಿಗರಿಯಾಗಿ ಇಸ್ತ್ರಿಮಾಡಿ ಕೊಡುತ್ತಿದ್ದೆ. ಅವರಿಗೆ ಕಚ್ಚೆ ಪಂಚೆಯ ನೆರಿಗೆ ಹಿಡಿದುಕೊಳ್ಳಲು ಬರುತ್ತಿರಲಿಲ್ಲ. ಅವರು ನಿವೃತ್ತಿ ಹೊಂದುವ ತನಕವೂ ನಾನೇ ಅವರ ಪಂಚೆಗೆ ನೆರಿಗೆ ಹಿಡಿಯುತ್ತಿದ್ದೆ. ಕೆಲವೊಮ್ಮೆ ಅವರಿಗೆ ಅರ್ಜೆಂಟ್ ಮೀಟಿಂಗ್ ಇದ್ದು ಬೆಳಗ್ಗೆ ಬೇಗ ಹೋಗಬೇಕಾದರೆ ನಾನೇ ಹಿಂದಿನ ದಿನ ಪಂಚೆ ಉಟ್ಟುಕೊಂಡು ನೆರಿಗೆ ಹಿಡಿದು ಇಸ್ತ್ರಿಮಾಡಿ ಸ್ಟ್ಯಾಂಡಿಗೆ ಹಾಕುತ್ತಿದ್ದ ದಿನಗಳೂ ಉಂಟು.

ಜಿಎಸ್‌ಎಸ್ ಅವರದ್ದು ವಿಶಿಷ್ಟವಾದ ವ್ಯಕ್ತಿತ್ವ. ಶಿವರುದ್ರಪ್ಪನವರಲ್ಲಿನ ಶಿವನ

ಅಂಶಕ್ಕಿಂತ ರುದ್ರನ ಅಂಶವೇ ಹೆಚ್ಚಾಗಿರುವುದರಿಂದ ಅವರ ಸುತ್ತಮುತ್ತಲಿನವರಿಗೂ ಕೂಡ ಶಾಖ ತಟ್ಟಿರಬಹುದು! ಅವರು ಸೌಂದರ್ಯಪ್ರಿಯರು, ಸಂಗೀತಪ್ರಿಯರೂ ಹೌದು. ಇವರಿಗೆ ಪ್ರತಿದಿನ ತಾಂಬೂಲ ಇರಲೇಬೇಕು. ತಾಂಬೂಲ ಎಂದರೆ ಒಂದು ಘಟನೆ ನೆನಪಿಗೆ ಬರುತ್ತದೆ. ಕಾರವಾರದಲ್ಲಿ ಸಾಹಿತ್ಯ ಸಮ್ಮೇಳನ ನಡೆದಾಗ ನಾವು ಕುಟುಂಬ ಸಮೇತರಾಗಿ ಹೋಗಿದ್ದೆವು. ಕಾರ್ಯಕ್ರಮದ ನಂತರ ರಾತ್ರಿ ಊಟ ಮುಗಿಸಿ ಸಮುದ್ರತೀರಕ್ಕೆ ಹೋದೆವು. ಅಂದು ಹುಣ್ಣಿಮೆ. ನಮ್ಮ ಜೊತೆ ಕೆ.ಜಿ. ನಾಗರಾಜಪ್ಪ, ಎಂ.ಎಸ್. ಮಹಾಂತಯ್ಯನವರೂ ಇದ್ದರು. ಚಂದ್ರ ಏರಿದ ಹಾಗೆಲ್ಲ ಸಮುದ್ರ ಉಕ್ಕುವುದನ್ನು ನೋಡುತ್ತಾ ಕುಳಿತಿದ್ದೆವು. ಜಿಎಸ್ಎಸ್ ತಾಂಬೂಲವನ್ನು ಮರೆತಿದ್ದಾರೆ ಎಂದುಕೊಂಡಿದ್ದೆ. ತಕ್ಷಣ ಕೇಳಿದರು "ಎಲ್ಲಿ ವಿಳ್ಳೇದೆಲೆ ತರಲಿಲ್ಲವಾ" ಎಂದು. "ಅದು ನನ್ನ ನಂಟು. ಬಿಡೋಕಾಗುತ್ಯೆ ತಂದಿದ್ದೇನೆ" ಎಂದು, ತುಂಬಾ ಜನರಿದ್ದ ಕಾರಣ ಎಲೆ ಮಡಿಸಿ ಕೊಡಲು ಸಂಕೋಚವಾಗಿ ಡಬ್ಬವನ್ನೇ ಕೊಟ್ಟೆ. 'ಅಯ್ಯೋ ನೀನೇ ಕೊಡಪ್ಪ, ನಂಗಾಗಲ್ಲ' ಎಂದರು. ಎಲ್ಲರೂ ಗೊಳ್ಳೆಂದು ನಕ್ಕರು. "ಅದರಲ್ಲೇನು, ಯಾವಾಗಲೂ ಅವಳೇ ಕೊಡೋದು ನನಗೆ. ಎಷ್ಟು ಸುಣ್ಣಬೇಕು ಎಂದು ಅವಳಿಗೇ ಗೊತ್ತು. ನಾನೇನಾದರು ಹಾಕಿಕೊಂಡರೆ ಸುಣ್ಣ ಹೆಚ್ಚಾಗಿ ನಾಳೆ ಊಟಮಾಡಕ್ಕಾಗಲ್ಲ" ಎಂದರು. ಆಗ ಎಲ್ಲರೂ ನಕ್ಕರು. ಮಹಾಂತಯ್ಯನವರ ಅಕ್ಕನವರು "ಇನ್ನೆಷ್ಟು ಸೂಕ್ಷ್ಮವಾಗಿ ಪ್ರೊಫೆಸರ್ ಸಾಹೇಬರ ಸೇವೆ ಮಾಡಬೇಕೂ" ಅಂತ ತಮಾಷೆ ಮಾಡಿದರು. ಇದೆಲ್ಲಕ್ಕಿಂತ ಅಂದಿನ ಸಮುದ್ರದ ಅದ್ಭುತ ದೃಶ್ಯ ಇಂದಿಗೂ ನನ್ನ ಕಣ್ಮುಂದೆ ಇದೆ. ಜಿಎಸ್ಎಸ್ ಅವರ ಕವಿ ಭಾವಕ್ಕೆ ಕಿಂಚಿತ್ತೂ ಚ್ಯುತಿ ಬಾರದಂತೆ ಎಲ್ಲವನ್ನೂ ಅರಿತುಕೊಂಡು ನಾನವರನ್ನು ನೋಡಿಕೊಂಡಿದ್ದೇನೆ.

ಅಂಗಳದಲ್ಲಿ ಅರಳಿದ ಮಲ್ಲಿಗೆಯ ಹೂವಿನ ಪರಿಮಳ ರಸಿಕ ಕವಿವರ್ಯರಿಗೇ ಅರ್ಪಿತವಾಗಲಿ ಎಂದು ಟೇಬಲ್ಲಿನ ಮೇಲೆ ಇಡುತ್ತಿದ್ದೆ. ಆ ಕಾಲದಲ್ಲಿ ಸರಸ್ವತಿಪುರ ಸೊಳ್ಳೆಗೆ ಹೆಸರುವಾಸಿಯಾಗಿತ್ತು. ಸೊಳ್ಳೆಪುರವೆಂದೇ ಕರೆಯುವ ವಾಡಿಕೆ ಬಂದಿತ್ತು. ರಾತ್ರಿ ಇವರು ಓದಲು ಕುಳಿತರೆ ಸೊಳ್ಳೆಗಳು ಕಿತ್ತು ತಿನ್ನುತ್ತಿದ್ದವು. ಅವುಗಳಿಂದ ಬಿಡುಗಡೆ ಮಾಡಲು ಎಷ್ಟೋ ಸಲ ಪೂಜೆಗೆ ಕುಳಿತವಳು ಎದ್ದು ಹೋಗಿ ಸೊಳ್ಳೆಪರದೆ ಕಟ್ಟಿ ದಿಂಬುಗಳನ್ನೇ ಡೆಸ್ಕಾಗಿ ಮಾಡಿ ಟೇಬಲ್ ಲ್ಯಾಂಪ್ ಹತ್ತಿರಕ್ಕಿಟ್ಟು ನಿರಾತಂಕವಾಗಿ ಓದಲು ಅನುವು ಮಾಡಿಕೊಟ್ಟ ದಿನಗಳೆಷ್ಟೋ. ಒಮ್ಮೆ ಮಾತಿನ ನಡುವೆ ಅವರು ಕೇಳಿದ ಪ್ರಶ್ನೆ ಇನ್ನೂ ನನಗೆ ನೆನಪಿದೆ. "ನೋಡು ನಿನಗೆ ಹೂವು, ಮರಗಿಡ, ಮಳೆ, ನದಿ, ಗುಡ್ಡ-ಬೆಟ್ಟ, ಆಕಾಶ ಇವನ್ನೆಲ್ಲ ನೋಡಿದಾಗ ಏನನಿಸುತ್ತೆ?" ಎಂದು ಕೇಳಿದರು. ನಾನು ಹೇಳಿದೆ, "ಕುಣಬೇಕು, ಆಡಬೇಕು, ಓಡಬೇಕು ಮರದ ಕೊಂಬೆ ಹಿಡಿದು ಉಯ್ಯಾಲೆ ಆಡಬೇಕು, ಆಕಾಶದ ಅಡಿಯಲ್ಲಿ ಮಲಗಿ ಚುಕ್ಕೆಗಳನ್ನು ಎಣಿಸಿ ಅಯ್ಯೋ ಲೆಕ್ಕ ತಪ್ಪಿಹೋಯಿತು ಎನ್ನುವುದು ನನ್ನ ದಿನನಿತ್ಯದ ಅಭ್ಯಾಸ... ಹೀಗೇ ಇನ್ನು ಏನೇನೊ ಅನಿಸುತ್ತೆ" ಎಂದಾಗ, ಅವರ ಮುಖದಲ್ಲಿ ಒಂದು ಸಮಾಧಾನದ ನಗು ಕಾಣಿಸಿತು. ಬಹುಶಃ ಅವರು ಅಂದುಕೊಂಡಿರಬೇಕು. ಇವಳಿಗೆ ಇಂಥಾ ಅಭಿರುಚಿ ಇದೆಯೋ ಇಲ್ಲವೋ ನನ್ನ ಕವಿಭಾವಕ್ಕೆ ಸ್ಪಂದಿಸುತ್ತಾಳೊ

ಇಲ್ಲವೊ ಅಂತ. ಅವರು ಭಾವಜೀವಿ. ಅವರ ಭಾವಗಳೆಲ್ಲ ಬರಹದಲ್ಲಿ ರೂಪತಾಳಿದರೆ ನನ್ನ ಭಾವನೆಗಳು ಅಂತರಂಗದಲ್ಲಿ ಕರಗಿ ಹೋಗುತ್ತಿದ್ದವು. ಪ್ರಕೃತಿ ಎಂದರೆ ನನಗೆ ಚಿಕ್ಕಂದಿನಿಂದಲೂ ಇಷ್ಟ. ಮುತ್ತಜ್ಜಿಯ ಕೈಯ್ಯಲ್ಲಿ ಬೆಳೆದವಳು. ಅಜ್ಜಿ ತಿಂಡಿ ಕೊಟ್ಟರೆ ಮಲ್ಲಿಗೆಬಳ್ಳಿ ಹಬ್ಬಿದ ಹಾಲಿವಾಣದ ಮರದ ಮೇಲೆ ಕುಳಿತು ತಿನ್ನುತ್ತಿದ್ದೆ. ನನ್ನ ಊಟ, ಕಥೆ ಪುಸ್ತಕ, ಓದೋದು, ಎಲ್ಲವೂ ಅಂಗಳದಲ್ಲೇ. ನನ್ನಂತೆಯೇ ನನ್ನ ಮಕ್ಕಳ ಊಟ, ತಿಂಡಿ, ಆಟ, ಪಾಠ ಕೂಡ ಗಿಡಗಳ ನಡುವೆಯೇ, ಪುರುಸೊತ್ತಾದಾಗ, ರಜಾದಿನಗಳಲ್ಲಿ ಜಿಎಸ್‌ಎಸ್ ಅವರು ನಮ್ಮೊಡನೆ ಬೆರೆಯುತ್ತಿದ್ದರು.

ಜಿಎಸ್‌ಎಸ್ ಅವರ ಶ್ರದ್ಧೆ, ಶಿಸ್ತು, ಪ್ರಾಮಾಣಿಕತೆ, ಸಮಯ ಪಾಲನೆ, ಈ ಎಲ್ಲ ಗುಣಗಳನ್ನು ನಾನು ನನ್ನ ಬದುಕಿನಲ್ಲಿ ಅಳವಡಿಸಿಕೊಂಡಿದ್ದೇನೆ. ಅವರು ಯಾವ ಸಾಹಿತ್ಯ ರಚನೆಯನ್ನಾಗಲಿ, ಪದವಿ ಪರೀಕ್ಷೆಯಲ್ಲಾಗಲಿ ನಿದ್ದೆಗೆಟ್ಟು, ಕಷ್ಟಪಟ್ಟು ಮಾಡಿದವರಲ್ಲ. ಎಂ.ಎ. ಪರೀಕ್ಷೆಯಲ್ಲಿ ಕೂಡ ರಾತ್ರಿ ಹತ್ತು ಘಂಟೆಗೆ ಮಲಗಿ, ಬೆಳಗ್ಗೆ ಆರೂವರೆಗೆ ಎದ್ದು ಆರಾಮಾಗಿ ಬರೆದು ಚಿನ್ನದ ಪದಕವನ್ನು ಪಡೆದವರು. ಪಿಎಚ್.ಡಿ ಮಾಡುವಾಗ ಕೂಡ ಬೆಳಗ್ಗೆ ಎಂಟು ಘಂಟೆಗೆ ಲೈಬ್ರರಿಗೆ ಹೋದರೆ ಮಧ್ಯಾಹ್ನ ಊಟಕ್ಕೆ ಬರುತ್ತಿದ್ದರು. ಮತ್ತೆ ಹೋದರೆ ಸಂಜೆ ಏಳು ಘಂಟೆಗೆ ಬರುತ್ತಿದ್ದರು. ಈ ಮಧ್ಯೆ ಸಂಸಾರದ ಹೊಣೆಯನ್ನು ನಾನೇ ನಿಭಾಯಿಸುತ್ತಿದ್ದೆ; ಇಂದಿನವರೆಗೂ ಅಷ್ಟೆ.

ಜಿಎಸ್‌ಎಸ್ ಅವರು ಪ್ರತಿದಿನ ರಾತ್ರಿ ಮಲಗುವ ಮೊದಲು ತಾವು ರಚಿಸಿದ ಕವನಗಳ ಜೊತೆಗೆ ಬೇಂದ್ರೆ, ಪು.ತಿ.ನ. ಅವರ ಕವಿತೆಗಳು, ಕುವೆಂಪು ಅವರ 'ಚಿತ್ರಾಂಗದೆ', 'ಅಗ್ನಿಹಂಸ', 'ಶ್ರೀರಾಮಾಯಣದರ್ಶನಂ', 'ಹರಿಶ್ಚಂದ್ರ ಕಾವ್ಯ', 'ಕುಮಾರ ವ್ಯಾಸಭಾರತ' ಮುಂತಾದ ಕಾವ್ಯಗಳನ್ನು ಓದಿ ಹೇಳುತ್ತಿದ್ದರು. ಕಾರಂತರು, ರವೀಂದ್ರನಾಥರು, ಶರಶ್ಚಂದ್ರರು, ಅನಕೃ, ತರಾಸು, ಭೈರಪ್ಪ, ಎಂ.ಕೆ. ಇಂದಿರಾ, ತ್ರಿವೇಣಿ ಇವರುಗಳ ಕಾದಂಬರಿಗಳನ್ನು ತಂದು ಕೊಟ್ಟು, ನನ್ನಲ್ಲಿ ಸುಪ್ತವಾಗಿದ್ದ ಸಾಹಿತ್ಯಾಸಕ್ತಿಯನ್ನು ಬೆಳೆಸಿದರು. ಅವರ ವಿದ್ಯಾಭ್ಯಾಸದ ಅವಧಿ ಮುಗಿದು ವಿರಾಮ ದೊರೆತಾಗಲೆಲ್ಲ ಸಂಗೀತ ಕಛೇರಿಗಳಿಗೆ, ರಾಮಕೃಷ್ಣಾಶ್ರಮಕ್ಕೆ ಹೋಗುತ್ತಿದ್ದರು. ಪ್ರತಿದಿನ ಧ್ಯಾನದ ಅಭ್ಯಾಸವನ್ನು ಕೂಡ ಇಟ್ಟು ಕೊಂಡಿದ್ದರು. ಅದಕ್ಕೆ ನಾನು ಐದು ಘಂಟೆಗೆ ಎದ್ದು ಕೊಠಡಿಯನ್ನು ಸ್ವಚ್ಛ ಮಾಡಿ ಅಗರಬತ್ತಿ ಹಚ್ಚಿ ತಂಬೂರಿಯನ್ನು ಇಡುತ್ತಿದ್ದೆ. ಪ್ರಾರ್ಥನೆ, ಧ್ಯಾನಕ್ಕೆ ಒಂದು ಘಂಟೆಯನ್ನು ವಿನಿಯೋಗಿಸುತ್ತಿದ್ದರು.

ಜಿಎಸ್‌ಎಸ್ ಅವರಿಗೆ ಮಕ್ಕಳನ್ನ ಕಂಡರೆ ತುಂಬಾ ಪ್ರೀತಿ. ಅವರು ಚಿಕ್ಕವರಿದ್ದಾಗ ಪ್ರತಿ ಯುಗಾದಿ ಹಬ್ಬದಲ್ಲಿ ಅಭ್ಯಂಜನ ಸ್ನಾನಮಾಡಿ ಹೊಸ ಬಟ್ಟೆ ತೊಟ್ಟು ತಂದೆ ತಾಯಂದಿರಿಗೆ ನಮಸ್ಕಾರ ಮಾಡಿದ ಮೇಲೆ ಅವರವರಿಗೆ ತಕ್ಕಂತೆ ಉಡುಗೊರೆ ನೀಡುತ್ತಿದ್ದರು. ಮಕ್ಕಳಿಗೆ ಕಥೆಗಳನ್ನ ಹೇಳುತ್ತಿದ್ದರು. ಜೋಕ್ಸ್ ಮಾಡುತ್ತಿದ್ದರು. ಅವರನ್ನು ಕುರಿತು ಪದ್ಯಗಳನ್ನು ಬರೆದಿದ್ದಾರೆ. ನನ್ನನ್ನು ಕುರಿತು ಕೂಡ ಕೆಲವು ಕವಿತೆಗಳು ಬಂದಿವೆ. ಇವೆಲ್ಲ 'ಸಾಮಗಾನ', 'ದೇವಶಿಲ್ಪ' ಕವಿತಾ ಸಂಕಲನಗಳಲ್ಲಿವೆ.

1961ರಲ್ಲಿ ನನ್ನ ಬದುಕಿನಲ್ಲಿ ಒಂದು ತಿರುವು ಬಂದಿತು. ಈ ತಿರುವಿನಿಂದಾಗಿ ನಾನು ಚೇತರಿಸಿಕೊಳ್ಳಲು ರಾಮಕೃಷ್ಣ, ಶ್ರೀಮಾತೆ ಶಾರದಾದೇವಿ, ಸ್ವಾಮಿವಿವೇಕಾನಂದ, ಗೀತಾಪ್ರವಚನ, ಮಂಕು ತಿಮ್ಮನ ಕಗ್ಗ, ವಚನ ಸಾಹಿತ್ಯ ಇವುಗಳ ಮೊರೆಹೊಕ್ಕೆ. ಇಂಥ ಆಧ್ಯಾತ್ಮಿಕ ಗ್ರಂಥಗಳು ನನ್ನಲ್ಲಿನ ಆಧ್ಯಾತ್ಮಿಕತೆ ಮತ್ತು ವೈಚಾರಿಕತೆಯನ್ನು ಬೆಳೆಸಿದವು. ಇವುಗಳಿಂದ ನಾನು ಆಧ್ಯಾತ್ಮಿಕ ಮತ್ತು ವೈಚಾರಿಕವಾಗಿ ಬೆಳೆದು ನನ್ನ ನೆಲೆಯನ್ನು ಕಂಡುಕೊಂಡಿದ್ದೇನೆ.

ಜಿಎಸ್ಎಸ್ ಅವರಿಂದ ಸಾಹಿತ್ಯ, ಸಂಗೀತ, ಕ್ಷೇತ್ರದಲ್ಲಿನ ಹಲವಾರು ಹಿರಿಯ ಕಿರಿಯ ವ್ಯಕ್ತಿಗಳ ಸಂಪರ್ಕ ದೊರಕಿದೆ. ಕುವೆಂಪು ಅವರನ್ನು ಕೂಡ ದರ್ಶನ ಮಾಡಿಸಿದ್ದರು. ಅವರ ಜೊತೆ ಕಳೆದ ಕ್ಷಣಗಳು ಸ್ಮರಣೀಯವಾದುವು.

ಜಿಎಸ್ಎಸ್ ಅವರು ಪ್ರವಾಸ ಪ್ರಿಯರು. ವರ್ಷಕ್ಕೊಮ್ಮೆಯಾದರೂ ಪ್ರವಾಸ ಮಾಡುವ ಹವ್ಯಾಸ, ಅವರೊಂದಿಗೆ ಮನೆಯವರೆಲ್ಲಾ ಹೋಗಿ ಆನಂದಿಸುತ್ತಿದ್ದವು. ಬೆಟ್ಟ, ಗುಡ್ಡ, ಕಾಡು, ಸಮುದ್ರ, ನದಿ ಮುಂತಾದ ಪ್ರಕೃತಿ ಸೌಂದರ್ಯ ಸ್ಥಳಗಳೆಂದರೆ ತುಂಬಾ ಅಚ್ಚುಮೆಚ್ಚು. ಪ್ರಕೃತಿಯೊಂದಿಗೆ ವಿಲೀನವಾಗಿ ಪ್ರಪಂಚವನ್ನೇ ಮರೆಯುತ್ತಿದ್ದರು, ಅವರೊಂದಿಗೆ ಹಿಮಾಲಯದ ಆಸುಪಾಸುಗಳಲ್ಲಿ ಓಡಾಡಿದ ದೃಶ್ಯಗಳಂತೂ ನನ್ನ ಜೀವನದಲ್ಲಿ ಮರೆಯಲಾಗ ದಂತಹ ಅನುಭವಗಳೆನ್ನಿಸಿವೆ.

ಜಿಎಸ್ಎಸ್ ಅವರು ತುಂಬಾ ಸರಳ ಜೀವಿ. ಆಡಂಬರದ ಜೀವನವೆಂದರೆ ಅವರಿಗಾಗುತ್ತಿರಲಿಲ್ಲ. ಮಕ್ಕಳನ್ನೂ ಹಾಗೆಯೇ ಸರಳ ಜೀವನ ನಡೆಸುವ ರೀತಿಯಲ್ಲಿಯೇ, ಶಿಸ್ತಿನಿಂದ, ಕ್ರಮಬದ್ಧವಾಗಿ ಬೆಳೆಸಿದರು. ಆಸೆಪಟ್ಟು ಹೆಚ್ಚಿನ ಕ್ರಯದ ವಸ್ತುಗಳನ್ನು ಮಕ್ಕಳು ಕೇಳಿದಾಗ, ನಯವಾಗಿ ತಿಳಿಹೇಳಿ ನಿರಾಕರಿಸುತ್ತಿದ್ದರು. ನಾವು ಯಾವಾಗಲೂ ದಿನಕ್ಕೆ ಮೂರು ನಾಲ್ಕು ಬಾರಿ ತಿಂದು, ಮೋಟಾರು ಕಾರುಗಳಲ್ಲಿ ಓಡಾಡುವ ಮಕ್ಕಳನ್ನು ನೋಡಿ, ಅವರಂತಾಗಲು ಬಯಸಬಾರದು; ಒಂದೊತ್ತು ಊಟವೂ ಇಲ್ಲದೆ ಇರುವ ಸಾವಿರಾರು ಮಕ್ಕಳು ಕಷ್ಟಪಡುವುದನ್ನು ನೋಡುವ ಅಭ್ಯಾಸ ಬೆಳೆಸಿಕೊಂಡಾಗ, ನಾವೆಷ್ಟು ಸುಖವಾಗಿದ್ದೇವೆ ಎನ್ನುವ ತೃಪ್ತಿಯುಂಟಾಗುವುದಿಲ್ಲವೇ? ಎಂದು ಮಕ್ಕಳಿಗೆ ಪ್ರಶ್ನೆ ಹಾಕಿ, ಅವರುಗಳಿಗೆ ಯೋಚಿಸುವಂತಹ ಪ್ರಚೋದನೆಯನ್ನುಂಟು ಮಾಡುತ್ತಿದ್ದರು. ಇದರಿಂದ ಮಕ್ಕಳಿಗೆ ವಾಸ್ತವ ಪರಿಸ್ಥಿತಿಯ ಅರಿವುಂಟಾಗುತ್ತಿತ್ತು, ಸರಳ ಜೀವನದ ಬಗ್ಗೆ ಒಲವು ಮೂಡಲು ಸಹಕಾರಿಯಾಗುತ್ತಿತ್ತು.

ಜಿಎಸ್ಎಸ್ ಅವರಿಗೆ ಬಡವರ ಬಗ್ಗೆ ಅತೀವ ಆಸಕ್ತಿ, ಅನುಕಂಪ. ಯಾವುದಾದ ರೊಂದು ರೀತಿಯಲ್ಲಿ ಅವರಿಗೆ ಸಹಾಯ ಮಾಡಲು ಮುಂದಾಗುತ್ತಿದ್ದರು. ಅದರಲ್ಲಿ ಒಂದೆರಡು ಪ್ರಸಂಗಗಳ ಬಗ್ಗೆ ಹೇಳಲಿಚ್ಛಿಸುತ್ತೇನೆ.

ವಾರದೂಟಕ್ಕೆಂದು ನಮ್ಮ ಮನೆಗೆ ಹುಡುಗರು ಬರುತ್ತಿದ್ದರು. ಅವರ ಬಗ್ಗೆ ಅದೆಷ್ಟು ಕಾಳಜಿ ವಹಿಸುತ್ತಿದ್ದರೆಂದರೆ, ಮನೆಯವರಿಗಿಂತ ಅವರಿಗೇ ಹೆಚ್ಚು ಆದ್ಯತೆ ನೀಡುತ್ತಿದ್ದರು. ಊಟ ಉಪಚಾರದಲ್ಲಿ ಯಾವ ಕೊರತೆಯೂ ಆಗದಂತೆ ನೋಡಿಕೊಳ್ಳುತ್ತಿದ್ದರು.

ಜಿಎಸ್‌ಎಸ್ ಅವರ ಉದಾರತೆಯನ್ನು ಕಂಡಾಗ, ನಾನೂ ಸಹ ಸಹಕರಿಸುತ್ತಿದ್ದೆ, ವಾರದೂಟಕ್ಕೆ ಬಂದ ವಿದ್ಯಾರ್ಥಿಗಳನ್ನು ಮಕ್ಕಳಂತೆಯೇ ಉಪಚರಿಸಿ, ಅವರ ಕಷ್ಟ ಸುಖಗಳನ್ನು ವಿಚಾರಿಸಿ, ನೆರವಾಗುತ್ತಿದ್ದೆ. ಈಗ ಒಳ್ಳೆಯ ನೌಕರಿಯಲ್ಲಿರುವ ಆ ವಿದ್ಯಾರ್ಥಿಗಳು ಸುಗಮ ಜೀವನ ನಡೆಸುತ್ತಿರಬಹುದು ಎನ್ನಿಸುತ್ತೆ.

ಮತ್ತೊಂದು ಸಂಗತಿ: ಐದಾರು ವರ್ಷಗಳ ಕಾಲ ನಮ್ಮ ಮನೆಯಲ್ಲಿದ್ದ ಕೆಲಸದ ಹುಡುಗಿ ಕಮಲ ಪ್ರಾಪ್ತ ವಯಸ್ಸಿಗೆ ಬಂದಾಗ, ಅವಳ ಮದುವೆ ವಿಷಯದ ಬಗ್ಗೆ ಜಿಎಸ್‌ಎಸ್ ನಮ್ಮೊಂದಿಗೆ ಪ್ರಸ್ತಾಪಿಸಿದಾಗ, ನಮ್ಮ ಹಿರಿಯ ಮಗ ಜಯದೇವ, ಜವಾಬ್ದಾರಿ ವಹಿಸಿ, ಹುಡುಗನನ್ನು ಹುಡುಕಿದ. ಮಕ್ಕಳು ಮತ್ತು ಜಿಎಸ್‌ಎಸ್ ನಾವೆಲ್ಲರೂ ಕೂತು ಈ ವಿಷಯವನ್ನು ಚರ್ಚಿಸಿ, ಕಮಲಳ ಮದುವೆಯನ್ನು ಛತ್ರದಲ್ಲಿ ಚೆನ್ನಾಗಿಯೇ ಮಾಡಿದೆವು. ಜಿಎಸ್‌ಎಸ್ ಮತ್ತು ಮಕ್ಕಳು ಸೇರಿ 10 ಸಾವಿರ ರೂ.ಗಳನ್ನು ಕಮಲಳ ಹೆಸರಿನಲ್ಲಿ ಡಿಪಾಸಿಟ್ ಮಾಡಿಸಿದರು. ಇದು ತುಂಬಾ ಹೆಮ್ಮೆಯ ವಿಷಯವೆನ್ನಿಸುತ್ತೆ ನನಗೆ. ಜಿಎಸ್‌ಎಸ್ ಹಾಗೂ ಮಕ್ಕಳ ಬಗ್ಗೆ ಅಭಿಮಾನವೆನ್ನಿಸುತ್ತೆ. ಬಡವರ ಬಗ್ಗೆ ಇರುವ ಕಾಳಜಿ ಕಂಡು ಮೂಕವಿಸ್ಮಯಳಾಗುತ್ತೇನೆ.

ಜಿಎಸ್‌ಎಸ್ ಅವರಿಗೆ ಮೊದಲಿನಿಂದಲೂ ಜಾತಿ, ಕುಲ, ಗೋತ್ರ, ಗೊಡ್ಡು ಆಚಾರ ವಿಚಾರಗಳು ಹಾಗೂ ಕುರುಡು ನಂಬಿಕೆಗಳು ಇವುಗಳ ಬಗ್ಗೆ ಅಸಡ್ಡೆ. ಜಾತೀಯತೆಯನ್ನು ಮೀರಿ ನಿಂತ ವ್ಯಕ್ತಿತ್ವ. ಮನೆಗೆ ಬಂದವರ ಬಗ್ಗೆ ಜಾತಿ ವಿಷಯವನ್ನು ಕುರಿತು ಮಾತನಾಡಲು ಇಚ್ಛಿಸುತ್ತಿರಲಿಲ್ಲ. ಮಾನವ ಜಾತಿ ಒಂದೇ ಎನ್ನುವ ವಿಶಾಲ ಮನೋಭಾವ ಜಿಎಸ್‌ಎಸ್ ಅವರದು. ಅವರ ಮನೋಭಾವ ಹಾಗೂ ಪರಂಪರೆಯನ್ನು ನಾವೆಲ್ಲರೂ ಬೆಳೆಸಿಕೊಂಡಿದ್ದೇವೆ.

ಜಿಎಸ್‌ಎಸ್ ಅವರ ವ್ಯಾಸಂಗ ಕೊಠಡಿಯಲ್ಲಿ ತುಂಬಿರುವ ಪುಸ್ತಕಗಳ ರಾಶಿಗಳು, ಅತ್ಯಮೂಲ್ಯ ಸಾಹಿತ್ಯ ಸಂಗ್ರಹಣೆಗಳು, ಹಲವಾರು ಪ್ರಶಸ್ತಿಗಳು ಇವುಗಳನ್ನೆಲ್ಲಾ ನೋಡಿದಾಗ ನನಗೆ ಒಂದು ರೀತಿಯ ಹೆಮ್ಮೆ ಅಭಿಮಾನ ಎನ್ನಿಸುತ್ತೆ. ಜಿಎಸ್‌ಎಸ್ ಅವರ ಪ್ರಿಯವಾದ ಪುಸ್ತಕಗಳ ರಾಶಿಯನ್ನು ವ್ಯವಸ್ಥಿತವಾಗಿ ಜೋಡಿಸಿ, ಸ್ವಚ್ಛಗೊಳಿಸಿ ಕಾಪಾಡುವ ಜವಾಬ್ದಾರಿ ಹಾಗೂ ಪ್ರಶಸ್ತಿಗಳನ್ನು ಅಚ್ಚುಕಟ್ಟಾಗಿ ಸುಂದರವಾಗಿ ಜೋಡಿಸಿ ಇಡುವುದು ನನಗೆ ತುಂಬಾ ಪ್ರಿಯವಾದ ಕಾರ್ಯವೆನ್ನಿಸುತ್ತೆ. ಸುಂದರವಾಗಿ ಜೋಡಿಸಿಟ್ಟ ಅವುಗಳನ್ನು ಜಿಎಸ್‌ಎಸ್ ನೋಡಿ ಕಣ್ಣಿನಿಂದಲೇ ಮೆಚ್ಚುಗೆ ಸೂಸಿದಾಗ, ನನ್ನ ಮನಸ್ಸಿಗೆ ಹಿತವೆನ್ನಿಸುತ್ತೆ. ಸಾಹಿತ್ಯಕ್ಷೇತ್ರದಲ್ಲಿ ಹಲವಾರು ಗಣ್ಯರಿಂದ ಮೆಚ್ಚಿಗೆ ಪಡೆದ ಜಿಎಸ್‌ಎಸ್ ಅವರನ್ನ ಕಂಡಾಗ ನನಗೆ ಅಭಿಮಾನವೆನ್ನಿಸುತ್ತದೆ .

ನನ್ನ ಬದುಕಿನ ಪ್ರತಿಯೊಂದು ಹಂತದಲ್ಲಿಯೂ ಜಿಎಸ್‌ಎಸ್ ಇದ್ದಾರೆ ಎಂಬುದನ್ನು ನಾನು ಮರೆಯುವಂತಿಲ್ಲ. ಬದುಕಿನಲ್ಲಿ ಬಂದದ್ದನ್ನೆಲ್ಲಾ ಧೈರ್ಯವಾಗಿ ಎದುರಿಸಿ ನಿಂತು ಸಿಹಿ, ಕಹಿಯನ್ನು ಸಮಾನವಾಗಿ ಕಾಣುವುದನ್ನು ಕಲಿತಿದ್ದೇನೆ. ಇದಕ್ಕೆ ಜಿಎಸ್‌ಎಸ್ ಅವರೇ ನನ್ನ ಗುರು.

■

# ನನ್ನ ಅಣ್ಣ ಜಿಎಸ್‌ಎಸ್

ಜಿ. ಎಸ್. ಲಲಿತಾಂಬಿಕ

ಬೆಂಗಳೂರಿನ ನಯನ ಸಭಾಂಗಣ, ಕನ್ನಡ ಭವನದಲ್ಲಿ ದಿನಾಂಕ 7.2.2001ರ ಸಂಜೆ ಡಾ. ಜಿಎಸ್‌ಎಸ್ ವಿಶ್ವಸ್ತ ಮಂಡಲಿ ವತಿಯಿಂದ ಪ್ರೊ. ಎನ್. ಬಾಲಸುಬ್ರಹ್ಮಣ್ಯ ಅವರಿಗೆ ನೀಡುವ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ, ಲವಲವಿಕೆಯಿಂದ, ಓಡಾಡುತ್ತಿದ್ದ ನನ್ನಣ್ಣ ಜಿಎಸ್‌ಎಸ್ ಅವರನ್ನು ಗಮನಿಸಿದೆ. ಸಮಾರಂಭಕ್ಕೆ ಆಗಮಿಸಿದ ಅತಿಥಿಗಳನ್ನು, ಸ್ನೇಹಿತರನ್ನು, ಬಂಧು ಬಳಗದವರನ್ನು ಆತ್ಮೀಯತೆಯಿಂದ ಮಾತನಾಡಿಸಿ, ಮುಗುಳ್ನಗೆ ಹೊರಸೂಸಿ ಬರಮಾಡಿಕೊಳ್ಳುತ್ತಿದ್ದರು. ಇಂದು ಜಿಎಸ್‌ಎಸ್‌ಗೆ 75ನೇ ವರ್ಷದ ಹುಟ್ಟಿದ ಹಬ್ಬ; ಆರೋಗ್ಯವಂತರಾಗಿ, ಶತಾಯುಷಿಯಾಗಿರಲೆಂದು ನನ್ನ ಮನಸ್ಸಿನಲ್ಲಿಯೇ ಆಶಿಸಿದೆ.

ಈ 75 ವರ್ಷಗಳ ಕಾಲದಲ್ಲಿ ಜಿಎಸ್‌ಎಸ್ ಸಾಧಿಸಿದ್ದು ಅಪಾರ. ಸ್ವಪ್ರಯತ್ನದಿಂದ ಮೇಲೆ ಬಂದವರು. ಐದಾರು ದಶಕಗಳಿಂದ ಸಾಹಿತ್ಯ ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಕವಿಯಾಗಿ, ವಿಮರ್ಶಕರಾಗಿ, ಅನೇಕ ಕಾವ್ಯಗಳನ್ನು, ವಿಮರ್ಶೆಗಳನ್ನು, ಪ್ರಬಂಧಗಳನ್ನು, ಪ್ರವಾಸ ಸಾಹಿತ್ಯಗಳನ್ನು ಬರೆದು ಜನರ ಮೆಚ್ಚುಗೆಯನ್ನು ಪಡೆದು, ಬಹು ಎತ್ತರಕ್ಕೆ ಏರಿದ ಕವಿಯಾಗಿರುವುದು ನನಗೆ ಬಹಳ ಹೆಮ್ಮೆಯ ಸಂಗತಿ ಎನ್ನಿಸಿದೆ. ಅದಕ್ಕಿಂತಲೂ ಮಿಗಿಲಾಗಿ 'ಉತ್ತಮ ವ್ಯಕ್ತಿ'ಯಾಗಿರುವುದು ನೆಮ್ಮದಿಯ ವಿಷಯವಾಗಿದೆ.

ನಮ್ಮ ಮನೆಯಲ್ಲಿ ಜಿಎಸ್‌ಎಸ್‌ರನ್ನು 'ಶಿವಣ್ಣ' ಎಂದೇ ನಾವೆಲ್ಲಾ ಕರೆಯುವುದು. ನನ್ನ ಇನ್ನಿಬ್ಬರ ಅಣ್ಣಂದಿರಂತೆ, ಇವರ ಬಳಿ ಹೆಚ್ಚು ಸಲಿಗೆಯಿಲ್ಲ, ಆದರೆ ದೊಡ್ಡವರೆಂಬ ಗೌರವ ಭಾವನೆಯಿದೆ. ಕಾಡು ಹರಟೆಯಲ್ಲಿ ಎಂದೂ ಕಾಲ ಕಳೆದದ್ದನ್ನು ನಾನು ನೋಡೇ ಇಲ್ಲ. ತುಂಬಾ ಮೌನಿ, ಯಾವಾಗಲೂ ಗಂಭೀರ ಮುಖಮುದ್ರೆ! ಯಾರಾದರೂ ಮಾತನಾಡಿಸಿದಾಗ, ಅದಕ್ಕೆ ಬೇಕಾದಷ್ಟು ಮಾತ್ರ ಚುಟುಕು ಉತ್ತರ ನೀಡುತ್ತಿದ್ದರು. ಮಾತಿಗಿಂತ ಅವರ ಮುಗುಳ್ನಗೆಯಿಂದಲೇ ಅನೇಕ ಬಾರಿ ಉತ್ತರ ಸಿಗುತ್ತಿತ್ತು. ನಮ್ಮ ತಂದೆ ಜಿ. ಶಾಂತವೀರಪ್ಪನವರು ಸರ್ಕಾರಿ ಮಾಧ್ಯಮಿಕ ಶಾಲಾ ಮುಖ್ಯೋಪಾಧ್ಯಾಯರಾಗಿದ್ದರು. ಹಾಗಾಗಿ ಊರಿಂದೂರಿಗೆ ವರ್ಗಾವಣೆಯಾಗುತ್ತಿತ್ತು. ಆದ ಕಾರಣ ನಮ್ಮಣ್ಣ ಜಿಎಸ್‌ಎಸ್ ಹಾಸ್ಟಲಿನಲ್ಲಿದ್ದು, ಬೇರೆ ಊರಲ್ಲಿ ವ್ಯಾಸಂಗ ಮುಂದುವರೆಸುತ್ತಿದ್ದರು. ಬಹುಶಃ ಹೆಚ್ಚು ಸಂಪರ್ಕವಿಲ್ಲದ ಕಾರಣ ಹೀಗಿರಬಹುದೇನೋ ಅನ್ನಿಸುತ್ತೆ.

ನಾನು ಬೆಳೆದಿದ್ದು ಹಾಗೂ ವ್ಯಾಸಂಗ ಮಾಡಿದ್ದು ಅಣ್ಣನ ಮನೆಯಲ್ಲಿ. ಮಾಧ್ಯಮಿಕ ಶಾಲೆಯಿಂದ ಕಾಲೇಜಿನವರೆಗೂ ಓದಿದ್ದು ಜಿಎಸ್‌ಎಸ್ ಅವರ ಆಶ್ರಯದಲ್ಲಿ. ನನ್ನ ಮನಸ್ಸು ಹಿಂದಿನ ದಿನಗಳತ್ತ ಓಡಿ ಮೆಲುಕು ಹಾಕುತ್ತಿರುವಾಗ ಒಂದು ಘಟನೆ ನೆನಪಾಯ್ತು. ಜಿಎಸ್‌ಎಸ್ ದಾವಣಗೆರೆಯ ಕಾಲೇಜಿನ ಉಪನ್ಯಾಸಕರಾಗಿದ್ದ ಸಮಯ. ಅವರ ಮದುವೆಯಾಗಿ ಹೊಸತರಲ್ಲಿ ನನ್ನನ್ನೂ ಕರೆದುಕೊಂಡು ಹೋಗಿ ಅಲ್ಲಿಯ ಶಾಲೆಗೆ ಸೇರಿಸಿದ್ದರು. ಆಗ ನಡೆದ 'ನಾಯಿ ಕಚ್ಚಿದ ಪ್ರಸಂಗ' ಜ್ಞಾಪಕಕ್ಕೆ ಬರುತ್ತೆ. ಒಂದು ದಿನ ಶಾಲೆಗೆ ಹೋಗುವಾಗ, ನೇರವಾದ ರಸ್ತೆಯಲ್ಲಿ ಹೋದರೆ ತಡವಾಗುತ್ತೆ ಎಂದು ತಿಳಿದು ಕಾಲು ದಾರಿಯಲ್ಲಿ ಹೋದರೆ ಸಮೀಪವಾಗುತ್ತದೆಯೆಂದು, ಹಳ್ಳ ದಿಣ್ಣೆಗಳಿದ್ದ ಕಾಲು ದಾರಿಯಲ್ಲಿ ಹೋಗ್ತಾ ಇದ್ದೆ. ಎಲ್ಲಿದ್ದವೋ 2-3 ನಾಯಿಗಳು ನನ್ನ ನೋಡಿ ಬಗುಳಿದ್ದನ್ನು ನೋಡಿ, ಓಡಿದೆ.... ಅವುಗಳೂ ನನ್ನನ್ನು ಹಿಂಬಾಲಿಸಿಕೊಂಡು ಬಂದವು. ಗಾಬರಿಯಾಗಿ ಜೋರಾಗಿ ಓಡಲು ಹೋಗಿ ಬಿದ್ದುಬಿಟ್ಟೆ. ನಾಯಿಗಳೆಲ್ಲ ನನ್ನ ಮೇಲೆಯೇ ಹಾರಿಹೋದವು. ಕೈಕಾಲು ಎಲ್ಲಾ ತರಚಿ ರಕ್ತ ಹೊರಸೂಸುತ್ತಿತ್ತು! ವಾಪಸ್ಸು ಮನೆಗೆ ಬಂದೆ.

ಕಾಲೇಜಿಗೆ ಹೊರಟಿದ್ದ ನನ್ನಣ್ಣ ಜಿಎಸ್‌ಎಸ್, ಬಿದ್ದಾಗ ಆಗಿದ್ದ ಕೊಳಕು ಬಟ್ಟೆ, ನನ್ನ ಅವಾಂತರ ನೋಡಿ ಏನೆಂದು ಕೇಳಿದಾಗ ವಿಷಯ ತಿಳಿಸಿದೆ. ಎಲ್ಲಿ ಬೈಯ್ತಾರೋ ಅಂತ ಮನದಲ್ಲಿ ಅಂಜಿಕೆ, ಆತಂಕದಿಂದ ಗಾಬರಿಗೊಂಡಿದ್ದೆ. ನೋಡಿದ್ರು, ನಾಯಿ ಕಚ್ಚಿತಾ? ಅಂತ ಕೇಳಿದ್ರು. ನಂಗೊತ್ತಿಲ್ಲ ಅಂದೆ! ಅವರಿಗೋ ಭಯ, ಗಾಯ ನೋಡಿದ್ರೆ ನಾಯಿ ಕಚ್ಚಿರೋ ತರಹಾನೇ ಇದೆ ಅಂತ ಹೇಳಿ, ಅವರು ಕಾಲೇಜಿಗೆ ಹೋಗೋದನ್ನ ಬಿಟ್ಟು ನನ್ನನ್ನ ಆಸ್ಪತ್ರೆಗೆ ಕರೆದುಕೊಂಡು ಹೋಗಿ ವೈದ್ಯರ ಬಳಿ ತೋರಿಸಿ ಪರೀಕ್ಷಿಸಿದ ನಂತರ, ಡಾಕ್ಟರು ಇದು ನಾಯಿ ಕಚ್ಚಿದ ಗಾಯವಲ್ಲ ಬಿದ್ದ ರಭಸಕ್ಕೆ ಆಗಿರುವ ಗಾಯ ಅಂತ ಹೇಳಿ, ಗಾಯಕ್ಕೆ ಔಷಧಿ ಹಚ್ಚಿ ಮಾತ್ರೆಗಳನ್ನ ಕೊಟ್ಟು ಕಳುಹಿಸಿದರು. ವಾಪಸ್ಸು ಮನೆಗೆ ಬರುವಾಗ ನಮ್ಮಣ್ಣ ಸಮಾಧಾನದ ನಿಟ್ಟುಸಿರು ಬಿಟ್ಟು, ಇನ್ನು ಮೇಲೆ ನೇರವಾದ ರಸ್ತೆಯಲ್ಲೇ ಶಾಲೆಗೆ ಹೋಗು, ಹಳ್ಳದಿಣ್ಣೆಯಿರುವ ಅಡ್ಡದಾರಿಯಲ್ಲಿ ಹೋಗಬೇಡ ಅಂತ ಬುದ್ಧಿ ಹೇಳಿ, ಮನೆಗೆ ಬಿಟ್ಟ ನಂತರ ಕಾಲೇಜಿಗೆ ಹೋದ್ರು. ನನಗೆ ಸ್ವಲ್ಪವೂ ಬೈಯ್ಯಲಿಲ್ಲವಲ್ಲ ನಮ್ಮಣ್ಣ ಅಂತ ಆಶ್ಚರ್ಯವಾಯ್ತು. ನಮ್ಮ ಊರಲ್ಲಿ ಹೀಗಾಗಿದ್ರೆ ನಮ್ಮ ತಂದೆ ಖಂಡಿತಾ ಬೈಯ್ತಾ ಇದ್ರು ಅನ್ನಿಸಿತು. ಆದ್ರೆ ಇಲ್ಲಿ ಹಾಗಾಗಲಿಲ್ಲವಲ್ಲ, ನಮ್ಮಣ್ಣ ತುಂಬಾ ಒಳ್ಳೆಯವರು ಅಂತ ನನಗೆ ನಾನೇ ಖುಷಿಪಟ್ಟುಕೊಂಡ ಆ ದಿನವಿನ್ನೂ ನನ್ನ ನೆನಪಲ್ಲಿ ಹಾಗೇ ಉಳಿದಿದೆ. ಜಿಎಸ್‌ಎಸ್ ಮನೆಯಲ್ಲಿ ಯಾರಿಗೂ ಬೈಯೋದು ಹೊಡೆಯೋದು ಮಾಡ್ತಾನೇ ಇರಲಿಲ್ಲ. ಕೋಪ ಬಂದಾಗ ಮುಖ ಊದಿಸಿಕೊಂಡು ಓಡಾಡ್ತಾ ಇದ್ರು ಅಷ್ಟೆ.

ನನಗೆ 'ಸಿಹಿ' ಅಂದರೆ ಮೊದಲಿನಿಂದಲೂ ತುಂಬಾ ಇಷ್ಟ. ಅಣ್ಣನ ಮನೆಯಲ್ಲಿದ್ದಾಗ (ಆಗಿನ್ನೂ ತುಂಬಾ ಚಿಕ್ಕವಳು, ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದೆ) ಯಾರಿಗೂ ಗೊತ್ತಿಲ್ಲದ ಹಾಗೆ ಸಕ್ಕರೆ-ಬೆಲ್ಲ ತಿನ್ನುತ್ತಿದ್ದೆ. ಈ ವಿಷಯ ಹೇಗೋ ಅಣ್ಣನಿಗೆ ಗೊತ್ತಾಗಿ, ಒಂದು ದಿನ

ನನ್ನ ಕರೆದು ಅವರ ರೂಂನಲ್ಲಿ ಕೂಡಿಸಿ, ಒಂದು ಪ್ಲೇಟ್ ತುಂಬಾ ಸಕ್ಕರೆ-ಬೆಲ್ಲವನ್ನಿಟ್ಟು ತಿನ್ನು, ನಿಂಗೆ ತುಂಬಾ ಇಷ್ಟ ಅಲ್ವಾ ಅಂದ್ರು. ನನಗೋ ಗಾಬರಿ! ಮನಸ್ಸಿನಲ್ಲಿಯೇ ಅಳುಕು ಭಾವನೆ. ಕದ್ದು ತಿನ್ನುವುದು ಹೇಗೋ ಇವರಿಗೆ ಗೊತ್ತಾಗಿ ಬಿಟ್ಟಿದೆಯಲ್ಲಾ ಅನ್ನುವ ಸಂಕೋಚ, ಅವಮಾನ, ಎಲ್ಲವೂ ಸೇರಿಕೊಂಡು ಏನು ಮಾಡಲೂ ತೋಚದೆ, ಜೋರಾಗಿ ಅತ್ತುಬಿಟ್ಟೆ. ಅಂದಿನಿಂದ ಕದ್ದು ತಿನ್ನುವುದನ್ನು ಬಿಟ್ಟುಬಿಟ್ಟೆ! ನಮ್ಮಣ್ಣ ನನ್ನ ಬೈಯದೆ ಹೊಡೆಯದೆ ಈ ರೀತಿ ಕದ್ದು ತಿನ್ನುವುದನ್ನು ಬಿಡಿಸಿದ ವಿಧಾನ ಎಷ್ಟೊಂದು ಉತ್ತಮವಲ್ಲವೇ ಅನ್ನಿಸುತ್ತೆ. ಈಗ ಒಮ್ಮೊಮ್ಮೆ ಅವರ ಮನೆಗೆ ಊಟಕ್ಕೆ ಹೋದಾಗ, ಸಹಜವಾಗಿ ಅವರು 'ಅವಳಿಗೆ ಇನ್ನೊಂದು ಒಬ್ಬಟ್ಟು ಹಾಕು, ಸಿಹಿ ಅಂದ್ರೆ ತುಂಬಾ ಇಷ್ಟ' ಅಂತ ಹೇಳಿದಾಗಲೆಲ್ಲಾ, ಹಿಂದಿನ ಆ ಘಟನೆ ತಕ್ಷಣ ನೆನಪಿಗೆ ಬಂದು ನನ್ನಷ್ಟಕ್ಕೆ ನಾನೇ ನಕ್ಕು ಬಿಡುತ್ತೇನೆ ಅಷ್ಟೆ.

ನಾ ಕಂಡಂತೆ ನಮ್ಮಣ್ಣ ಜಿಎಸ್‌ಎಸ್ ಅವರ ಉದಾತ್ತ ಮನೋಭಾವದ ಕೆಲವು ಸಂಗತಿಗಳನ್ನು ಹೇಳಬಯಸುತ್ತೇನೆ. ಜಿಎಸ್‌ಎಸ್ ತುಂಬಾ ಬುದ್ಧಿವಂತರು. ಆದರೆ ಅವರಿಗೆ ಬುದ್ಧಿಜೀವಿ ಎಂಬ ಅಹಂಭಾವವಿಲ್ಲ, ಸರಳ ಪಾರದರ್ಶಕ ವ್ಯಕ್ತಿತ್ವ. ಹೊರಗಷ್ಟೇ ಸರಳ ವ್ಯಕ್ತಿಯಲ್ಲ; ಇಡೀ ಮನೆಯ ಪರಿಸರವೇ ಸರಳತೆಯಿಂದ ವಿಶಾಲ ಹೃದಯದಿಂದ ಕೂಡಿದೆ. ಅಸಹಾಯಕರಿಗೆ ಆಶ್ರಯ ನೀಡಿ, ವಿದ್ಯಾರ್ಥಿಗಳಿಗೆ ಸೂಕ್ತ ಮಾರ್ಗದರ್ಶನ, ನೆರವು ನೀಡಿ, ಜೀವನದಲ್ಲಿ ಅನೇಕರಿಗೆ ದಾರಿ ತೋರಿಸಿದ್ದಾರೆ. ಇದಕ್ಕೆ ಸಂಬಂಧಿಸಿದಂತೆ ಕೆಲವು ವಿಷಯಗಳನ್ನು ಹೇಳಲಿಚ್ಛಿಸುತ್ತೇನೆ.

'ವಾರದೂಟ'ಕ್ಕೆಂದು ಅನೇಕ ವಿದ್ಯಾರ್ಥಿಗಳು ಅವರ ಮನೆಗೆ ಬರುತ್ತಿದ್ದರು. ಮನೆಯ ಮಕ್ಕಳಂತೆಯೇ ಅವರಿಗೂ ಸಹ ತಿಂಡಿ, ಊಟ, ಉಪಚಾರ ಮಾಡುತ್ತಿದ್ದರು. ನಮ್ಮ ಅತ್ತಿಗೆ ರುದ್ರಾಣಿಯವರೂ ಕೂಡ ಸಹಕಾರ ನೀಡುತ್ತಿದ್ದರು. ಬೇಸರವಿಲ್ಲದೆ ಅವರ ಕಷ್ಟ-ಸುಖಗಳನ್ನು ವಿಚಾರಿಸಿಕೊಂಡು, ಕೈಲಾದ ಸಹಾಯ ಮಾಡುತ್ತಿದ್ದರು. ನಾನಾಗ ಚಿಕ್ಕವಳಿದ್ದೆ. ಇದೆಲ್ಲಾ ಅರ್ಥವಾಗುತ್ತಿರಲಿಲ್ಲ. ಬಂದ ಹುಡುಗರೊಂದಿಗೆ ಮಾತನಾಡಬಹುದು, ಆಟವಾಡಬಹುದು, ಅವರೊಂದಿಗೆ ಹೊರಗಡೆ ಹೋಗಿ ಸುತ್ತಾಡಬಹುದು ಎಂದು ಆಸೆಪಡುತ್ತಿದ್ದೆ ಅಷ್ಟೆ. ನಂತರ ದಿನಗಳಲ್ಲಿ ನಮ್ಮಣ್ಣ ಜಿಎಸ್‌ಎಸ್ ಅವರ ಉದಾತ್ತ ಮನೋಭಾವನೆ ಅರ್ಥವಾಗತೊಡಗಿತು. ಮನೆ ಕೆಲಸಕ್ಕೆಂದು ಬಂದವರ ಬಗ್ಗೆ ನಮ್ಮಣ್ಣ ಜಿಎಸ್‌ಎಸ್‌ಗೆ ತುಂಬಾ ಕಾಳಜಿ ಇರುತ್ತಿತ್ತು. ಆಗಾಗ್ಗೆ ಅವರ ಊಟ-ತಿಂಡಿಗಳ ಬಗ್ಗೆ ವಿಚಾರಿಸುತ್ತಿದ್ದರು. ಮನೆಯವರ ಬಗ್ಗೆ ಇಲ್ಲದ ಕಾಳಜಿ, ಈ ಮನೆ ಕೆಲಸದವರ ಬಗ್ಗೆ ತೋರಿಸುತ್ತಾರಲ್ಲ ಅನ್ನುವ ಅಸಮಾಧಾನವೂ ನಮಗೆ ಕೆಲವೊಮ್ಮೆ ಮೂಡುತ್ತಿತ್ತು.

ಆರೆಂಟು ವರ್ಷಗಳ ಹಿಂದಿನ ವಿಷಯ. ಮನೆಯಲ್ಲಿ ಕೆಲಸಕ್ಕೆ ಇದ್ದ ಒಬ್ಬ ಹುಡುಗಿ ವಿಷಯ; ಬಹು ಚೂಟಿಯಾಗಿ, ಒಪ್ಪ ಓರಣವಾಗಿ ಕೆಲಸ ಮಾಡಿಕೊಂಡು, ಎಲ್ಲರೊಂದಿಗೆ ಹೊಂದಿಕೊಂಡು ಕೆಲಸ ಮಾಡುತ್ತಿದ್ದಳು. ಕೆಲಸವಿಲ್ಲದ ಸಮಯದಲ್ಲಿ ಒಂದು ಕಡೆ ಕುಳಿತು

ಏನನ್ನಾದರೂ ಓದುತ್ತಿದ್ದಳು. ಇದನ್ನು ಗಮನಿಸಿದ ಜಿಎಸ್‌ಎಸ್ ಒಮ್ಮೆ ಕೇಳಿದರು ಆ ಹುಡುಗಿಯನ್ನು, ಎಲ್ಲಿವರೆಗೆ ಓದಿದ್ದೀಯ, ನಿಂಗೆ ಓದಲು ಆಸಕ್ತಿ ಇದೆಯಾ? ಅಂತ. ಅದಕ್ಕೆ ಖುಷಿಯಾಗಿ ಆ ಹುಡುಗಿ ಮುಂದೆ ಓದುವ ಬಯಕೆಯನ್ನು ಅವಳ ಬಟ್ಟಲು ಕಣ್ಣುಗಳಿಂದಲೇ ತಿಳಿಸಿದಳು.

ಮುಂದೆ ಅವಳನ್ನು SSLC ಪರೀಕ್ಷೆಗೆ ಕೂಡಿಸಿ, ಸೂಕ್ತ ವ್ಯವಸ್ಥೆ, ಮಾರ್ಗದರ್ಶನಗಳನ್ನು ನೀಡಿದರು. ಪರೀಕ್ಷೆ ಫಲಿತಾಂಶ ಬಂದಾಗ, ಆ ಹುಡುಗಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣಳಾಗಿದ್ದಳು! ಮುಂದೆ ಅವಳನ್ನು ತಾಂತ್ರಿಕ ಶಿಕ್ಷಣ (Job oriented course) ಕ್ಕಾಗಿ, ಮೈಸೂರಿಗೆ ಕರೆದುಕೊಂಡು ಹೋಗಿ ಸೇರಿಸಿದರು. ಅಲ್ಲಿ ಲೇಡೀಸ್ ಹಾಸ್ಟಲಿನಲ್ಲಿ ಬಿಟ್ಟು, ಅವಳ ಖರ್ಚು ವೆಚ್ಚಗಳನ್ನು ನೋಡಿಕೊಂಡರು. ಅಲ್ಲಿಯೂ ಆ ಹುಡುಗಿ ಪರೀಕ್ಷೆಯಲ್ಲಿ ಉತ್ತೀರ್ಣಳಾದಳು. ಇಂದು ತನ್ನ ಕಾಲ ಮೇಲೆ ತಾನು ನಿಂತು ಸ್ವತಂತ್ರವಾಗಿ ನೌಕರಿ ಮಾಡುತ್ತಿದ್ದಾಳೆ. ಹಬ್ಬ-ಹರಿದಿನಗಳಲ್ಲಿ ಜಿಎಸ್‌ಎಸ್ ಮನೆಗೆ ಮನೆಯ ಮಗಳಂತೆ ಬಂದು ಹೋಗುತ್ತಿರುತ್ತಾಳೆ. ಇವಳ್ಯಾರೆಂದು ಕೇಳಿದಾಗ—'ನನ್ನ ಸಾಕುಮಗಳು' ಅಂತ ಅಣ್ಣ ನನಗೆ ಪರಿಚಯಿಸಿದ್ದನ್ನು ಕಂಡಾಗ, ಅವರ ಉದಾತ್ತ ಮನೋಭಾವದ, ಹೃದಯ ಶ್ರೀಮಂತಿಕೆಗೆ ಅಚ್ಚರಿಪಡುತ್ತೇನೆ. ಇದನ್ನು ನೋಡಿದಾಗ, ಅಸಹಾಯಕರಿಗೆ ಆಶ್ರಯನೀಡಿ ಅವರ ಮುಂದಿನ ಜೀವನೋಪಾಯಕ್ಕೆ ದಾರಿದೀಪವಾದರಲ್ಲ ಅನ್ನುವ ವಿಷಯ ತುಂಬಾ ಸಂತೋಷ ತರುತ್ತೆ.

ಇಂದಿನ ಸಮಾಜದಲ್ಲಿ ಜಾತಿಯ ಬಗ್ಗೆ ಅತಿರೇಕತೆಯಿರುವಾಗ—ನಮ್ಮಣ್ಣ ಜಿಎಸ್‌ಎಸ್ ಅವರಲ್ಲಿ, ಜಾತೀಯತೆಯ ಮನೋಭಾವವನ್ನು ಎಂದೂ ನಾನು ಕಾಣಲಿಲ್ಲ. ಅವರ ಮನೆಯಲ್ಲಿ ಜಾತೀಯತೆಯ ಭಾವನೆ ಸುಳಿಯುವುದೇ ಇಲ್ಲ. ಯಾರೇ ಬಂದರೂ ಜಾತಿ, ಕುಲ, ಗೋತ್ರ ಯಾವುದನ್ನೂ ವಿಚಾರಿಸಿದೆ ಆದರಿಸುತ್ತಾರೆ. ನಮ್ಮ ಅತ್ತಿಗೆಯವರೂ ಅಷ್ಟೆ, ಯಾರನ್ನೂ ಆತಿಥ್ಯವಿಲ್ಲದೆ ಹಾಗೇ ಕಳಿಸುವುದೇ ಇಲ್ಲ. ಇದರಿಂದಾಗಿ ಕೆಲವೊಮ್ಮೆ ಬಂಧು ಬಳಗದವರ ಅಸಮಾಧಾನ ಹಾಗೂ ಅವರ ಕೆಂಗಣ್ಣಿನ ನೋಟ ಎದುರಿಸುವ ಪ್ರಸಂಗಗಳೂ ಉಂಟು!

ನಾನು ಗಮನಿಸಿದಂತೆ ಜಿಎಸ್‌ಎಸ್ ಸದಾ ಶಿಸ್ತಿನ ವ್ಯಕ್ತಿ. ಮನೆಯಲ್ಲಿಯೂ ಅಷ್ಟೆ. ಹೊರಗಡೆಯೂ ಅಷ್ಟೆ. 'ಶಿಸ್ತಿನ ಸಿಪಾಯಿ' ಜೊತೆಗೆ ಆತುರ ಬೇರೆ. ಎಲ್ಲಿಗಾದರೂ ಹೋಗಬೇಕೆಂದಿದ್ದರೆ, ಒಂದು ಘಂಟೆ ಮುಂಚಿತವಾಗಿಯೇ ರೆಡಿಯಾಗಿ, ನಮಗೂ ಆತುರ ಪಡಿಸುತ್ತಿದ್ದರು. ಈ ವಿಚಾರದಲ್ಲಿ ನಾವುಗಳು ಗೊಣಗಿಕೊಂಡಿದ್ದು ಉಂಟು, ಇಷ್ಟೇಕೆ ಅವಸರ ಮಾಡ್ತಾರೆ ಅಂತ.

ಇದು ಒಂದು ನನ್ನ ಅನುಭವ. ಶಿವಮೊಗ್ಗಾ ಸಹ್ಯಾದ್ರಿ ಕಾಲೇಜಿನಲ್ಲಿ ಉಪನ್ಯಾಸಕರಾಗಿದ್ದ ಕಾಲ. ಅದೇ ಕಾಲೇಜಿನಲ್ಲಿ ನಾನು ಅವರ ವಿದ್ಯಾರ್ಥಿನಿಯಾಗಿದ್ದೆ. ಅವರ ಪಿರಿಯಡ್‌ನಲ್ಲಂತೂ, ನಾವೆಲ್ಲರೂ ಮುಂಚಿತವಾಗಿಯೇ ತರಗತಿಗೆ ಹಾಜರಾಗುತ್ತಿದ್ದೆವು. ಏಕೆಂದರೆ ಒಂದು

ನಿಮಿಷ ಹೆಚ್ಚು ಕಡಿಮೆಯಾಗದಂತೆ ಜಿಎಸ್‌ಎಸ್ ಬಂದು ಪಾಠ ಶುರು ಮಾಡಿಬಿಡುತ್ತಿದ್ದರು. ಅವರ ಉಪನ್ಯಾಸವನ್ನು ಕೇಳಲು, ಯಾರೂ ತಪ್ಪಿಸಿಕೊಳ್ಳುತ್ತಿರಲಿಲ್ಲ. ಅವರು ಮಾಡುತ್ತಿದ್ದ ಪಾಠದ ಶೈಲಿ, ನಿರೂಪಣೆ ಎಲ್ಲರನ್ನೂ ಮಂತ್ರಮುಗ್ಧರನ್ನಾಗಿ ಮಾಡಿಬಿಡುತ್ತಿತ್ತು. ಯಾವುದೋ ಬೇರೆ ಲೋಕದಲ್ಲಿ ಇದ್ದೇವೆ ಅನ್ನಿಸುವಷ್ಟು ಭಾವ ಪರವಶರಾಗುತ್ತಿದ್ದೆವು. ಇತರೆ ತರಗತಿಯ ವಿಜ್ಞಾನ ವಿದ್ಯಾರ್ಥಿಗಳೂ ಸಹ ಬಂದು ಪಾಠವನ್ನು ಕೇಳುತ್ತಿದ್ದರು. ನನ್ನಣ್ಣ ಜಿಎಸ್‌ಎಸ್ ಬಗ್ಗೆ ನಾನು ಮನಸ್ಸಿನಲ್ಲಿಯೇ ಅಭಿಮಾನ ಪಟ್ಟುಕೊಳ್ಳುತ್ತಿದ್ದೆ. ಸತತ ಅಧ್ಯಯನಶೀಲರು, ಚಿಂತಕರು; ಇದ್ದುದನ್ನು ಇದ್ದ ಹಾಗೇ ಹೇಳುವ ಖಂಡಿತವಾದಿ. ಇವರ ಬಗ್ಗೆ ಎಲ್ಲರಿಗೂ ಅಭಿಮಾನ. ಅವರ ಬೇಧ ಭಾವವಿಲ್ಲದ ವರ್ತನೆ ನೋಡಿ ಹೆಮ್ಮೆ ಎನ್ನಿಸುತ್ತಿತ್ತು.

ರಾಮಕೃಷ್ಣಾಶ್ರಮದ ಪ್ರಭಾವ ನನ್ನ ಜೀವನದ ಮೇಲೆ ಬೀರಲು, ಬಹುಶಃ ಜಿಎಸ್‌ಎಸ್ ಅವರೇ ಕಾರಣವಿರಬೇಕೆಂದು ಅನ್ನಿಸುತ್ತೆ. ಏಕೆಂದರೆ ಮೈಸೂರಿನಲ್ಲಿದ್ದಾಗ, ರಾಮಕೃಷ್ಣಾಶ್ರಮಕ್ಕೆ ಪ್ರತಿ ಭಾನುವಾರ, ನಮ್ಮನ್ನೆಲ್ಲಾ ಅವರ ಸ್ನೇಹಿತರೊಡನೆ ಕರೆದೊಯ್ಯುತ್ತಿದ್ದರು. ಅಲ್ಲಿಯ ವಾತಾವರಣ, ಇವರುಗಳ ಸಂಭಾಷಣೆ, ಜೀವನದ ಒಳಿತು-ಕೆಡಕುಗಳ ಬಗ್ಗೆ ಕುರಿತ ಚರ್ಚೆ—ಇವುಗಳನ್ನೆಲ್ಲಾ ಕೇಳಿಸಿಕೊಳ್ಳುತ್ತಿದ್ದ ನನಗೆ, ನಂತರದ ದಿನಗಳಲ್ಲಿ ನನ್ನ ಜೀವನದ ಮೇಲೆ ಹೆಚ್ಚು ಪ್ರಭಾವ ಬೀರಿತೆಂದು ಹೇಳಿದರೆ ತಪ್ಪಾಗಲಾರದು.

ನನ್ನ ಅಣ್ಣನಲ್ಲಿ ಕಂಡದ್ದು "ಮರೆಯುವ ಸ್ವಭಾವ"ವನ್ನು! ಬರವಣಿಗೆಯಲ್ಲಿ-ಸಾಹಿತ್ಯದಲ್ಲಿ, ಎಷ್ಟು ಆಸಕ್ತಿ ತೋರಿಸುತ್ತಾರೋ, ಅಷ್ಟೇ ಅನಾಸಕ್ತಿ ವೈಯಕ್ತಿಕ ಬದುಕಿನ ವಿಚಾರದಲ್ಲಿ ಅಂತ ನನಗನ್ನಿಸುತ್ತೆ. ಅವರದೇ ಪ್ರಪಂಚದಲ್ಲಿ ಸದಾ ಮುಳುಗಿ ಹೋಗಿರುತ್ತಾರೆ. ಎತ್ತರದ ಬೆಟ್ಟವನ್ನೇರಿ ಕುಳಿತಾಗ, ಅದಕ್ಕೆ ಹತ್ತಿರವಾಗಿ ಆಕಾಶ, ಮೋಡ, ನಕ್ಷತ್ರ, ಚಂದ್ರ ಇವುಗಳೇ ಕಾಣಿಸುತ್ತವೆಯೇನೋ ಅವರಿಗೆ; ಕೆಳಗಿನ ಜನ, ಮನೆ, ಊರು ಎಲ್ಲವೂ ಕಾಣಿಸದಂತೆ ಕುಬ್ಜವಾಗಿ ಬಿಡುತ್ತದೆಯೇನೋ ಅನ್ನುವ ಭಾವನೆ ಮೂಡಿದ್ದುಂಟು.

ಊಟ ತಿಂಡಿ ಮಾಡುವಾಗಲೂ ಏನೋ ಗಹನವಾದ ಆಲೋಚನೆಯಲ್ಲಿರುವುದನ್ನು ಅನೇಕ ಸಾರಿ ಗಮನಿಸಿದ್ದೇನೆ. ಸದಾ ಪುಸ್ತಕಗಳ ರಾಶಿಯೊಂದಿಗೇ ಅವರ ಒಡನಾಟ. ಒಂದು ತಮಾಷೆಯ ಸಂಗತಿ—ಜಿಎಸ್‌ಎಸ್ ಮನೆಯಲ್ಲಿ ಒಮ್ಮೆ ತಿಂಡಿ ತಿಂದು ಕಾಲೇಜಿಗೆ ಹೊರಟುಹೋದರು. ನಂತರ ನಾನು, ಅತ್ತಿಗೆ ರುದ್ರಾಣಿಯವರು, ತಿಂಡಿ (ಉಪ್ಪಿಟ್ಟು) ತಿನ್ನಲು ಕುಳಿತೆವು. ನಾನು ಒಂದು ತುತ್ತು ತಿಂಡಿಯನ್ನು ಬಾಯಿಗಿಟ್ಟುಕೊಂಡೆ. ನುಂಗಲಾರದೆ ವಾಕರಿಸಿದೆ. "ಚೆನ್ನಾಗಿಲ್ವಾ? ಏನಾಯ್ತು ನಿಂಗೆ? ಈಗ ತಾನೇ ನಿಮ್ಮಣ್ಣ ಸುಮ್ನೇ ತಿಂದು ಹೋಗಿದ್ದಾರೆ", ಅಂತ ಅತ್ತಿಗೆ ಸ್ವಲ್ಪ ಕೋಪವಾಗಿಯೇ ಕೇಳಿದ್ರು. "ನೀವು ಸ್ವಲ್ಪ ತಿಂದು ನೋಡಿ, ಆಮೇಲೆ ಹೇಳ್ತೀನಿ" ಅಂದೆ. ಅದಕ್ಕೆ ಅವರು ಸ್ವಲ್ಪ ತಿಂಡಿಯನ್ನು ಬಾಯಿಗಿಟ್ಟುಕೊಂಡರು. ಆಗ ಗೊತ್ತಾಯ್ತು, ಉಪ್ಪು ಹಾಕಿರಲಿಲ್ಲ, ಮೆಣಸಿನಕಾಯಿನೂ ಹಾಕಿರಲಿಲ್ಲ! "ಅಯ್ಯೋ ಯಾವುದೋ ಜ್ಞಾನದಲ್ಲಿ ಉಪ್ಪು-ಖಾರ ಹಾಕದೆ ಮಾಡಿಬಿಟ್ಟಿದ್ದೀನಲ್ಲ" ಅಂತ

ಪರಿತಪಿಸಿದರು! ಆದರೇನಂತೆ ನಮ್ಮಣ್ಣ ಯಾವ ಪುಕಾರೂ ಮಾಡದೇ ಸುಮ್ನೇ ತಿಂದು ಹೋಗಿದ್ದಾರಲ್ಲ ಅಂತ ಅಚ್ಚರಿಗೊಂಡೆ! ನಿಮ್ಮಣ್ಣನಿಗೋ ಪುಸ್ತಕ ಪಕ್ಕದಲ್ಲಿದ್ರೆ ಪ್ರಪಂಚವೇ ತಲೇ ಮೇಲೆ ಬಿದ್ರೂ ಗೊತ್ತಾಗೋಲ್ಲ, ಪುಸ್ತಕ ಪಕ್ಕದಲ್ಲಿದ್ರೆ ಸಾಕು; ಅಂತ ಹೇಳಿ ಅತ್ತಿಗೆ ಅಡಿಗೆಮನೆ ಕಡೆ ಹೊರಟರು, ತಿಂಡಿ ಸರಿಮಾಡಲು!

ಇವರ ಮರೆವಿಗೆ ಇನ್ನೊಂದು ಸಂಗತಿ. ಪರಿಚಯವಿದ್ದ ಅತಿಥಿಗಳು ಅಥವಾ ಬಂಧು ಬಳಗದವರು, ಮನೆಗೆ ಬಂದಾಗ ಕೆಲವರ ಹೆಸರುಗಳೇ ಜಿಎಸ್ಎಸ್‌ಗೆ ನೆನಪಿಗೆ ಬರುತ್ತಿರಲಿಲ್ಲ. ಅವರೆಲ್ಲಾ ಹೋದ ನಂತರ, ಅವರ ಹೆಸರೇನು ಮರ್ತುಹೋಯ್ತು, ಅಂತ ಕೇಳುತ್ತಿದ್ದರು. ಒಂದು ಬಾರಿಯಲ್ಲ, ಹಲವಾರು ಸಾರಿ ಹೀಗೇ ಕೇಳ್ತಾ ಇರ್ತಿದ್ರು. ಅದನ್ನು ನೋಡಿ ನಾವೆಲ್ಲಾ ನಗ್ತಾ ಇದ್ದೆವು, ಇದೆಂತಹ ಮರೆವು ಇವರಿಗೆ ಅಂತ.

ಜಿಎಸ್ಎಸ್ ದಾರಿಯಲ್ಲಿ ನಡೆದು ಹೋಗ್ತಾ ಇದ್ರೆ, ಕುದುರೆಗೆ ಕಡಿವಾಣ ಹಾಕಿದಾಗ, ಆಚೀಚೆ ನೋಡದೆ, ನೇರವಾಗಿ ಹೋಗುತ್ತಲ್ಲ, ಹಾಗೆಯೇ ಹೋಗ್ತಾ ಇದ್ರು. ಎಷ್ಟೋ ಬಾರಿ ಸ್ನೇಹಿತೆಯರೊಂದಿಗೆ ನಾನೇ ಎದುರುಗಡೆಯಿಂದ ನಡೆದು ಬಂದರೂ, ನೋಡ್ತಾ ಇರಲಿಲ್ಲ. ಮನೆಗೆ ಬಂದು ಹೇಳಿದ್ರೆ 'ಹೌದಾ ಎಲ್ಲಿ?' ಅಂತ ಆಶ್ಚರ್ಯವಾಗಿ ಕೇಳ್ತಾ ಇದ್ದುದನ್ನು ನೋಡಿ ನಗು ಬರ್ತಾ ಇತ್ತು ನನಗೆ. ಅನೇಕ ಸ್ನೇಹಿತರೂ, ಬಂಧುಗಳೂ ಹೀಗೇ ವ್ಯಕ್ತಪಡಿಸಿದ್ದುಂಟು—ಜಿಎಸ್ಎಸ್ ಎದುರಿಗೆ ಬಂದ್ರೂ ನಮ್ಮನ್ನ ನೋಡಲಿಲ್ಲ, ಮಾತನಾಡಿಸಲಿಲ್ಲ ಅಂತ! ಅವರ ಸ್ವಭಾವವೇ ಹಾಗೇ, ಯಾವುದೋ ಆಲೋಚನೆಯಲ್ಲಿ ಮುಳುಗಿರುತ್ತಾರೆ—ಏನೂ ತಿಳ್ಕೋಬೇಡಿ ಅಂತ ನನ್ನ ಅತ್ತಿಗೆಯವರು ಅವರ ಸ್ನೇಹಿತರಿಗೆ, ಬಂಧುಗಳಿಗೆ ತಿಳಿಸಿ, ಸಮಾಧಾನ ಮಾಡ್ತಾ ಇದ್ರು.

ಸಮಯಪ್ರಜ್ಞೆ ವಿಷಯ ಹೇಳ್ಬೇಕಾದ್ರೆ—ಜಿಎಸ್ಎಸ್‌ರಿಂದ ಕಲಿಯಬೇಕು ನೋಡಿ ಅಂತ ಅವರ ಸ್ನೇಹಿತರೇ ಹೇಳ್ತಿದ್ರು. ನಮ್ಮಣ್ಣನಿಗೆ ಎಲ್ಲವೂ ವ್ಯವಸ್ಥಿತವಾಗಿರಬೇಕು, ಸರಿಯಾದ ವೇಳೆಗೆ ಎಲ್ಲವೂ ಆಗಬೇಕು—ವಿಪರೀತವಾಗಿ ಸಮಯಪ್ರಜ್ಞೆ ಇದೆ ಎನ್ನಬಹುದು. ಎಷ್ಟೋ ಸಹನೆ ಇದ್ರೂ, ಇವುಗಳಲ್ಲಿ ವ್ಯತ್ಯಾಸವಾದರೆ ಸಾಕು, ಚಿಕ್ಕಪುಟ್ಟ ವಿಷಯಗಳಿಗೇ, ಭೂಮಿ ಆಕಾಶ ಒಂದಾಗುವಂತೆ ಹಾರಾಟ, ಕೂಗಾಟ, ಅಸಹನೆ, ರೇಗುವುದು, ಸಿಡಿ-ಮಿಡಿಗೊಳ್ಳುವುದನ್ನು ಕಂಡು ನನಗೆ ಆಶ್ಚರ್ಯವಾಗುತ್ತಿತ್ತು. ಇಷ್ಟೊಂದು ಬುದ್ಧಿ ಇರುವ ಇಂತಹ ತಲೆಯನ್ನೇಕೆ ಕೆಲವುಬಾರಿ ಕೆಡಿಸಿಕೊಳ್ಳುತ್ತಾರೆಯೋ ಎಂದು ಮರುಗುತ್ತಿದ್ದೆ.

ಇದಕ್ಕೆ ವ್ಯತಿರಿಕ್ತವೆನ್ನುವಂತೆ, ಎಲ್ಲವನ್ನೂ ಸಹಿಸಿಕೊಳ್ಳುವ ದೃಢಮನೋಭಾವನೆ ತುಂಬಾ ಇದೆ. ಜಿಎಸ್ಎಸ್ ಅವರು ಕಷ್ಟ ಬಂದಾಗ ಕುಗ್ಗಿ ಕುಸಿದು ಹೋಗಲಿಲ್ಲ. ಸುಖ ಬಂದಾಗಲೂ ಕುಣಿದು ಕುಪ್ಪಳಿಸಿಲ್ಲ. ಸ್ಥಿತಪ್ರಜ್ಞತೆಯುಳ್ಳ ವ್ಯಕ್ತಿ ಎನ್ನಬಹುದು. ಯೋಗಿಯಂತೆ ನಿರ್ಲಿಪ್ತತೆ, ಪ್ರಾಪಂಚಿಕ ವಿಷಯಗಳಲ್ಲಿ ಅನಾಸಕ್ತಿ. ಇವುಗಳನ್ನು ಅನೇಕ ಬಾರಿ ಅವರಲ್ಲಿ ಕಂಡಿದ್ದೇನೆ. ಇಲ್ಲದ ದೇವರುಗಳನ್ನು ಹುಡುಕುವ ಬಯಕೆ ಇವರಿಗಿಲ್ಲ. ಅವರೇ ಹೇಳಿದಂತೆ 'ಪ್ರೀತಿ ಪ್ರೇಮ, ಮಮತೆ, ಕರುಣೆ ಇವೇ ನಮ್ಮ ದೇವರು' ಎಂದು ನಂಬಿದವರು. ಹಾಗಂತ

ಇತರರು ಮಾಡುವ ಪೂಜೆ, ಪುನಸ್ಕಾರ—ಇವುಗಳನ್ನು ತೆಗಳಿದವರಲ್ಲ. ಅವರವರ ಮನೋಭಾವನೆ, ವೈಯಕ್ತಿಕ ಅಭಿಪ್ರಾಯಗಳು ಅವರವರಿಗೇ ಬಿಟ್ಟದ್ದು ಎನ್ನುವ ಧಾರಾಳ ಮನೋಭಾವನೆ!

ಜಿಎಸ್ಎಸ್ ಅವರದ್ದು ನಿಶ್ಚಲ ಮನೋಸ್ಥೈರ್ಯ. ಉದಾಹರಣೆಗೆ—Open Heart Surgeory ಆದಾಗಲೂ ಅಷ್ಟೆ. ನಿರ್ಭಯವಾಗಿ, ನಿಶ್ಚಿಂತೆಯಾಗಿದ್ದ ಅವರ ಮನೋಬಲವನ್ನು ಕಂಡು ನಮಗೆಲ್ಲರಿಗೂ ಆಶ್ಚರ್ಯವಾಗಿತ್ತು. ಬದುಕನ್ನು ಬಂದಂತೆ ಸ್ವೀಕರಿಸಿ ಎದುರಿಸುವಂತಹ ಸ್ವಭಾವ. ಜೀವನದ ಸಿಹಿ-ಕಹಿಗಳನ್ನು ಅನುಭವಿಸಿದ್ದ ಈ ಸೂಕ್ಷ್ಮಜೀವಿಗೆ, ಎಲ್ಲವನ್ನೂ ಸಹಿಸುವ ಅಭ್ಯಾಸ ಬಂದಿರಬಹುದೇನೋ ಎಂದೆನಿಸಿತು ನನಗೆ! ಆ ಪರಿಸ್ಥಿತಿಯನ್ನು ಕಂಡಾಗ, ನಮಗೆಲ್ಲರಿಗೂ, ಜಿಎಸ್ಎಸ್ ಪುನರ್ಜನ್ಮ ಪಡೆದು ಬಂದವರಂತೆ ಅನ್ನಿಸಿತು.

ಜಿಎಸ್ಎಸ್ ಅವರಿಗೆ ನೌಕರಿಯಿಂದ ನಿವೃತ್ತಿಯಾದ ನಂತರ ಅವರ ಸಾಹಿತ್ಯ ಪ್ರಪಂಚದ ಚಟುವಟಿಕೆಗಳಿಂದ ನಿವೃತ್ತಿಯಾಗಲಿಲ್ಲ. ನಿರಂತರವಾಗಿ ಮುಂದುವರೆಸಿಕೊಂಡೇ ಬರುತ್ತಿದ್ದಾರೆ. ಸಾಮಾನ್ಯವಾಗಿ ಕೆಲವರು ನಿವೃತ್ತಿಯಾದ ನಂತರ, ಮನೆಯಲ್ಲಿ ಹಾಯಾಗಿ ರೆಸ್ಟ್ ತಗೊಂಡು ಇರೋದನ್ನ ನೋಡಿದ್ದೇನೆ. ಆದ್ರೆ ನಮ್ಮಣ್ಣ ಮಾತ್ರ, ನಿವೃತ್ತಿಗೆ ಮೊದಲು ಯಾವ ರೀತಿಯ ಸಮಯ ಪ್ರಜ್ಞೆ-ಶಿಸ್ತು-ಓದುವ-ಬರೆಯುವ ಹವ್ಯಾಸಗಳು ಇದ್ದವೋ, ಅವುಗಳನ್ನೆಲ್ಲಾ ಹಾಗೆಯೇ ಮುಂದುವರೆಸಿಕೊಂಡು ಬಂದಿದ್ದಾರೆನ್ನಿಸುತ್ತೆ. ಯಾವಾಗ್ಲೂ busy ಯಾಗಿರುತ್ತಾರೆ. ಯಾವಾಗ್ಲೂ, ಏನಾದ್ರೂ ಮಾಡ್ತಾನೇ ಇರ್ತಾರೆ. ಓದೋದು, ಬರೆಯೋದು, ಆಲೋಚಿಸುವುದು ಹೀಗೆ ತಮ್ಮದೇ ಪ್ರಪಂಚದಲ್ಲಿ ಸದಾ ಮುಳುಗಿರುತ್ತಾರೆ.

ಆಡಂಬರ, ಡಂಭಾಚಾರದ ವ್ಯಕ್ತಿಗಳು ಮನೆಗೆ ಬಂದಾಗ, ನಯವಾಗಿ ಅವರಿಂದ ದೂರವಾಗಿಬಿಡುತ್ತಾರೆ. ಅವರುಗಳೊಂದಿಗೆ ಮಾತನಾಡಲೂ ಇಷ್ಟಪಡುವುದಿಲ್ಲ; ಮುಗುಳ್ನಗೆ ಬೀರಿ, ತಮ್ಮ ಪಾಡಿಗೆ ತಾವು ಇದ್ದು ಬಿಡುತ್ತಾರೆ. ಈ ರೀತಿಯ ಘಟನೆಗಳನ್ನು ನಾನು ಅನೇಕ ಬಾರಿ ಗಮನಿಸಿದ್ದೇನೆ. ಬಂದಿದ್ದ ಕೆಲವರಿಗೆ ಬೇಸರ ಬರುತ್ತಿತ್ತೇನೋ, ಎಷ್ಟೋ ಬಾರಿ ಅಸಮಾಧಾನದಿಂದ ಹೊರಟು ಹೋಗುತ್ತಿದ್ದರು. ನಮ್ಮಣ್ಣ ಹೀಗೇಕೆ ಮಾಡ್ತಾರೆ? ಸ್ವಲ್ಪ ಮಾತನಾಡಿಸಿ ಕಳುಹಿಸಬಹುದಿತ್ತಲ್ಲ ಅಂದುಕೊಂಡು, ಅರ್ಥವಾಗದೆ ಸುಮ್ಮನಾಗಿದ್ದೇನೆ.

ನನ್ನಣ್ಣ ಜಿಎಸ್ಎಸ್ ಅವರು ಪ್ರಚಾರ, ಪ್ರಭಾವ, ಹಣ, ಅಧಿಕಾರ, ಇವುಗಳಿಂದ ದೂರವಿದ್ದು ಬದುಕಿಗೆ ಆದರ್ಶ ಮತ್ತು ಮೌಲ್ಯಗಳನ್ನು ತುಂಬಿದ ವ್ಯಕ್ತಿ. ಇತರರ ಬೇಸರದ ಮಾತುಗಳಿಗೆ ಗಮನ ನೀಡುತ್ತಲೇ ಇರಲಿಲ್ಲ. ಅಕ್ಕಮಹಾದೇವಿ ಹೇಳಿದ ಮಾತು, ಜಿಎಸ್ಎಸ್ ಅವರನ್ನು ನೋಡಿದಾಗ ನೆನಪಿಗೆ ಬರುತ್ತೆ: "ಲೋಕದಲಿ ಹುಟ್ಟಿದ ಬಳಿಕ ಸ್ತುತಿ-ನಿಂದೆಗಳು ಬಂದರೆ ಮನದಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು".

ಇದಕ್ಕೆ ಅನ್ವಯವಾಗುವಂತಹ ಘಟನೆಯೊಂದು ನಡೆಯಿತು. ಗೊಂದಲ ಎಬ್ಬಿಸಿದ್ದ ಕೆಲವು ವೀರಶೈವ ಮುಖಂಡರ ಕೋಪಕ್ಕೆ ವಿನಾಕಾರಣ ಗುರಿಯಾಗಿ-ವೀರಶೈವ ಸಮಾಜದಿಂದ

ಜಿಎಸ್ಎಸ್ ಅವರನ್ನು ಬಹಿಷ್ಕರಿಸಿರುವುದಾಗಿ ಕೆಲವರು ಹೇಳಿದ್ದನ್ನ ವೃತ್ತಪತ್ರಿಕೆಯಲ್ಲಿ ಓದಿದೆ. ಆ ವಿಷಯದ ಬಗ್ಗೆ, ಸುಮ್ಮನಿದ್ದೀರಲ್ಲ ಅಂತ ಜಿಎಸ್ಎಸ್‌ರನ್ನ ಕೇಳಿದ್ದಕ್ಕೆ, ಮುಗುಳುನಗೆ ಬೀರಿ ನಾನೇಕೆ ಇದಕ್ಕೆ ಪ್ರತಿಕ್ರಿಯಿಸಲಿ? ಅಗತ್ಯವೇ ಇಲ್ಲ. ಬಹಿಷ್ಕಾರ—ಇದೊಂದು ತಮಾಷೆಯ ವಿಷಯ ಹಾಗೂ ಸಂತೋಷದ ಸಂಗತಿ ಎಂದು ತಾಳ್ಮೆಯಿಂದ, ನಿರ್ಭಯವಾಗಿ ಹೇಳಿದ್ದನ್ನು ಕೇಳಿ ಬೆರಗಾದೆ! ಅವರ ನಂಬಿಕೆ ಮತ್ತು ವಿಚಾರವನ್ನು ಎಲ್ಲಾ ಒತ್ತಡಗಳ ನಡುವೆಯೂ ಮಲಿನವಾಗದಂತೆ, ನೋಡಿಕೊಳ್ಳುವಂತಹುದೇ ಅವರ ದಿಟ್ಟನತಕ್ಕೆ ಸಾಕ್ಷಿ ಎನ್ನಬಹುದು. ತಮಗೆ ತೋಚಿದ ಸತ್ಯವನ್ನು ದಿಟ್ಟವಾಗಿ ಮತ್ತು ಸ್ಪಷ್ಟವಾಗಿ ಹೇಳುವ ವ್ಯಕ್ತಿತ್ವವನ್ನು ಹಾಗೆಯೇ ಮುಂದುವರೆಸಿಕೊಂಡು ಬಂದಿದ್ದಾರೆ. ಇಂದಿನ ಸಾಹಿತ್ಯಕ ಹಾಗೂ ರಾಜಕೀಯ ಸಂದರ್ಭಗಳಲ್ಲಿ ಅಸಮಾನತೆ, ಗುಂಪುಗಾರಿಕೆ, ತಾಂಡವಾಡುತ್ತಿರುವ ಪರಿಸ್ಥಿತಿಯಲ್ಲಿಯೂ, ಯಾರೊಂದಿಗೂ ರಾಜಿಯಿಲ್ಲ. ಬೆದರಿಕೆಗಳಿಗೆ ಬಗ್ಗದೆ ನಿರಂತರವಾಗಿ ತಮ್ಮ ಸಾಹಿತ್ಯ ಪ್ರಪಂಚದಲ್ಲಿ, ತಮ್ಮನ್ನು ತಾವೇ ತೊಡಗಿಸಿಕೊಂಡು ಅವರು ನಿರ್ಲಿಪ್ತತೆಯಿಂದ ಇರುವುದನ್ನು ನೋಡಿದಾಗ ನನಗೆ ತುಂಬಾ ಆಶ್ಚರ್ಯವಾಗುತ್ತದೆ.

ಹಿಂದೆ, ಹೀಗೆಯೇ ಅನೇಕ ವಿಷಯಗಳಲ್ಲಿ, ಜಿಎಸ್ಎಸ್‌ಗೆ ಪ್ರಾಣ ಬೆದರಿಕೆಯೂ ಬಂದಿತ್ತು. ನಮಗೆಲ್ಲಾ ಹೆದರಿಕೆಯಾಗಿ ಆತಂಕಗೊಂಡಿದ್ದೆವು. ಆದರೆ ಜಿಎಸ್ಎಸ್ ಅದಕ್ಕೆಲ್ಲಾ ಸೊಪ್ಪು ಹಾಕದೆ, ಅನುಕೂಲಕ್ಕಾಗಿ ಆಷಾಢಭೂತಿತನ ಪ್ರದರ್ಶಿಸದೆ, ಸಲ್ಲದ ವಿಷಯಗಳಿಗೆ ಆತಂಕಪಡದೆ, ತಮ್ಮತನವನ್ನು ಕಾಪಾಡಿಕೊಂಡು ಬರುತ್ತಿರುವ ಜಿಎಸ್ಎಸ್ ಬಗ್ಗೆ ಯಾರಿಗೆ ತಾನೇ ಅಭಿಮಾನವೆನಿಸುವುದಿಲ್ಲ?

ಒಟ್ಟಿನಲ್ಲಿ ನನ್ನಣ್ಣ ಜಿಎಸ್ಎಸ್ ಬಹು ಅಪರೂಪದ ವ್ಯಕ್ತಿಯೆಂದೇ ಹೇಳಬಹುದು. ಯಾರೊಂದಿಗೂ ಹೆಚ್ಚಾಗಿ ಬೆರೆಯದ ಏಕಾಂತಪ್ರಿಯರು, ಪ್ರಕೃತಿ ಪ್ರಿಯರು, ಮಾತು ವಿರಳ. ಬಹಳವಾಗಿ ಮೌನಿ, ಅಂತರ್ಮುಖಿ ಎಂದೇ ಹೇಳಬಹುದು. ನನ್ನ ಅತ್ತಿಗೆ ರುದ್ರಾಣಿಯವರಿಗೆ ಮನೆಯಂಗಳದಲ್ಲಿ ಹೂಗಿಡಗಳನ್ನು ಬೆಳೆಸುವ ಹುಮ್ಮಸ್ಸು. ಏಳುಸುತ್ತಿನ ಮಲ್ಲಿಗೆ ಹೂವಿನ ಗಿಡದಲ್ಲಿ, ಹೂವು ಅರಳಿದಾಗ ಅದನ್ನು ಕಂಡು—'ಇನಿತು ಹಚ್ಚಹಸಿರಿನ ನಡುವೆ ಎನಿತು ಮೂಡಿತೋ ಬೆಳ್ಳಗೆ' ಎಂಬ ಕವನವನ್ನು ರಚಿಸಿ, ತಮ್ಮ ಭಾವನೆಯನ್ನು ವ್ಯಕ್ತಪಡಿಸಿದ್ದಾರೆ. ಅರಳಿದ ಹೂವುಗಳನ್ನು ಕಣ್ಣರಳಿಸಿ, ಅಚ್ಚರಿಯಿಂದ ನೋಡಿ, ಮೆಚ್ಚುಗೆ ಸೂಸುವ ಈ ಹೂ ಮನಸ್ಸಿನ ನನ್ನ ಅಣ್ಣ ಜಿಎಸ್ಎಸ್‌ರನ್ನು ಕಂಡರೆ, ನಮ್ಮ ಮನೆಯಲ್ಲಿ ಎಲ್ಲರಿಗೂ ಅಚ್ಚುಮೆಚ್ಚು ಹಾಗೂ ಗೌರವ-ಅಭಿಮಾನ.

ಇಂತಹ ಬಹುಮುಖ ಪ್ರತಿಭೆಯ, ಪ್ರತಿಭಾವಂತ ಅಣ್ಣ ಜಿಎಸ್ಎಸ್ ನನಗಿರುವುದು ಸಂತೋಷದ ಹಾಗೂ ಹೆಮ್ಮೆಯ ವಿಷಯ.



# ಜೀವನ ಸಂಗಾತಿ ಜಿಎಸ್ಎಸ್

ಪದ್ಮಾ ಶಿವರುದ್ರಪ್ಪ

ವೈಯಕ್ತಿಕವಾಗಿ, ಕೈಹಿಡಿದವರಲ್ಲಿ ದೋಷಗಳನ್ನೇ ಕಾಣುವುದು; ಸಾಮಾಜಿಕವಾಗಿ, ಅವರ ಗುಣಗಳನ್ನು ವೈಭವೀಕರಿಸುವುದು—ಇದು ಸಾಮಾನ್ಯವಾಗಿ ಹೆಣ್ಣಿನ ಸ್ವಭಾವ. ಈ ಸ್ವಭಾವದಿಂದ ಬಿಡಿಸಿಕೊಂಡು ನನ್ನ ಜೀವನಸಂಗಾತಿಯ ಗುಣ-ದೋಷಗಳನ್ನು ಆದಷ್ಟು ವಸ್ತುನಿಷ್ಠವಾಗಿ ನೋಡುವ ಪ್ರಯತ್ನ ನನ್ನದು. ಗಂಡು-ಹೆಣ್ಣು ದೂರವಿದ್ದು ಒಬ್ಬರನ್ನೊಬ್ಬರು ಪ್ರೀತಿಸುವಾಗ, ಪ್ರೀತಿಯ ಮಂತ್ರದಂಡ ತಾನು ಪ್ರೀತಿಸುವ ವ್ಯಕ್ತಿಯನ್ನು ಸಕಲ ಸದ್ಗುಣಸಂಪನ್ನನಾಗಿ ತೋರಿಸಿ ಮೈಮರೆಸುತ್ತದೆ. ಆದರೆ ಮದುವೆಯಾದ ನಂತರದ ದೀರ್ಘಕಾಲದ ದಾಂಪತ್ಯ ಜೀವನದಲ್ಲಿ ಸುಖ-ದುಃಖ, ನೋವು-ನಲಿವು, ಘರ್ಷಣೆ, ಬದುಕಿನ ಸಫಲತೆ-ವಿಫಲತೆ ಇವೆಲ್ಲ ಸೇರಿ ಬದುಕನ್ನು ಹದಗೊಳಿಸಿ, ದಾಂಪತ್ಯಜೀವನಕ್ಕೆ ಪರಿಪಕ್ವತೆಯನ್ನು ಒಂದು ವಿಚಿತ್ರ ರೀತಿಯ ಆತ್ಮೀಯತೆಯನ್ನು ತಂದುಕೊಡುತ್ತದೆನ್ನುವುದು ನನ್ನ ಅನುಭವ.

ನನ್ನ ಮತ್ತು ಜಿಎಸ್ಎಸ್ ಅವರ ದಾಂಪತ್ಯಜೀವನ ಸುಮಾರು ನಲವತ್ತು ವರ್ಷಗಳಷ್ಟು ದೀರ್ಘಕಾಲದ್ದು. ಅವರ ಮೊದಲ ಪತ್ನಿ ಶ್ರೀಮತಿ ರುದ್ರಾಣಿ, ಅವರ ಮಕ್ಕಳಾದ ಜಯದೇವ, ಜಯಂತಿ ಮತ್ತು ಶಿವಪ್ರಸಾದ್—ಇದು ನಮ್ಮ ಕುಟುಂಬ. ನನ್ನ ಹಾಗು ಜಿಎಸ್ಎಸ್ ನಡುವಣ ಪ್ರೀತಿ, ಅವರ ಕೌಟುಂಬಿಕ ಜೀವನದಲ್ಲಿ ಎಬ್ಬಿಸಿದ ಬಿರುಗಾಳಿ ಸಾಮಾನ್ಯವಾದದ್ದಲ್ಲ. ಆ ಬಿರುಗಾಳಿಯಲ್ಲಿ ತರಗಲೆಯಾಗದೆ, ಆ ಪ್ರವಾಹದಲ್ಲಿ ಕೊಚ್ಚಿಹೋಗುವ ಹುಲ್ಲುಕಡ್ಡಿಯಾಗದೆ, ಅದೆಲ್ಲದರ ಮಧ್ಯದಲ್ಲಿಯೂ ಸಾಹಿತ್ಯಕ ಕ್ಷೇತ್ರದಲ್ಲಿ ಈ ಎತ್ತರಕ್ಕೇರಿದ್ದು ಜಿಎಸ್ಎಸ್‌ರವರ ವ್ಯಕ್ತಿತ್ವದ ಗಟ್ಟಿತನಕ್ಕೆ ಸಾಕ್ಷಿಯಾಗಿದೆ. ನನ್ನ ಅಕ್ಕ ರುದ್ರಾಣಿಯವರ ತ್ಯಾಗ, ನನ್ನ ಸಹನೆ, ಮಕ್ಕಳ ವಿಶ್ವಾಸ, ನಮ್ಮ ಬಂಧು ಬಳಗ ಹಾಗೂ ಸ್ನೇಹವಲಯ ಈ ಸಂಬಂಧವನ್ನು ಆರೋಗ್ಯಪೂರ್ಣವಾಗಿ ನೋಡಿದ ರೀತಿ, ನಮ್ಮಿಬ್ಬರನ್ನೂ ಕೈಬಿಡದ ಜಿಎಸ್ಎಸ್ ರವರ ಕರ್ತವ್ಯಪ್ರಜ್ಞೆ—ಇವೇ ನಮ್ಮ ಇಂದಿನ ಕೌಟುಂಬಿಕ ನೆಮ್ಮದಿಯ ನೆಲೆಗಳು.

ಕಾವ್ಯಸೃಷ್ಟಿ ಮತ್ತು ಸಾಹಿತ್ಯದ ಅಧ್ಯಯನದಲ್ಲಿ ಜಿಎಸ್ಎಸ್ ಅವರಿಗಿರುವ ಶ್ರದ್ಧೆ ಹಾಗು ಶ್ರಮ ಆಶ್ಚರ್ಯ ಹುಟ್ಟಿಸುವಂಥವು. ಅವರು ಓದಿ ಮುಗಿಸಿದ ಪುಸ್ತಕಗಳಲ್ಲಿ

ವಿಶೇಷವೆನ್ನಿಸಿದ ಸಾಲುಗಳಿಗೆಲ್ಲ ಗುರುತು ಹಾಕಿ ಅದರ ಪಕ್ಕದಲ್ಲೇ ಅದನ್ನು ಕುರಿತ ಟೀಕೆ-ಟಿಪ್ಪಣಿ ಬರೆದಿಟ್ಟಿರುತ್ತಾರೆ. ಯಾವುದೇ ವಿಷಯವನ್ನು ಕುರಿತು ಬರೆಯಲು ತೊಡಗಿದರೂ ಅದಕ್ಕೆ ಬೇಕಾದ ಆಧಾರಗ್ರಂಥಗಳನ್ನೆಲ್ಲ ಅಭ್ಯಸಿಸಿ, ಆಲೋಚನೆ ಮಾಡಿ ಬರೆಯುವುದು ಅವರ ಸ್ವಭಾವ. ಯಾವುದೇ ವಿಷಯವನ್ನು ಕುರಿತು ಭಾಷಣ ಮಾಡಲು ಒಪ್ಪಿಕೊಂಡರೂ ಅಷ್ಟೆ; ವಿಷಯ ಸಂಗ್ರಹ ಮಾಡಿ, ಟಿಪ್ಪಣಿ ತಯಾರಿಸಿಕೊಂಡು, ಸಾಕಷ್ಟು ಪೂರ್ವಸಿದ್ಧತೆ ಮಾಡಿಕೊಂಡು ಹೋಗಿ ಮಾತನಾಡುವವರೇ ಹೊರತು ಉಡಾಫೆ ಹೊಡೆಯುವುದಾಗಲೀ, ಬಾಯಿಗೆ ಬಂದದ್ದನ್ನು ಮಾತನಾಡುವುದಾಗಲೀ ಅವರ ಜಾಯಮಾನವಲ್ಲ. ಭಾಷಣ ಮಾಡುವಾಗಲೂ ಅಷ್ಟೆ—ದೀರ್ಘ ವೇಳೆ ತೆಗೆದುಕೊಂಡು ಬೇಸರ ತರಿಸುವುದಾಗಲೀ, ವಿಷಯವನ್ನು ಬಿಟ್ಟು ಎಲ್ಲೆಲ್ಲೋ ಹೋಗುವುದಾಗಲೀ ಇಲ್ಲವೇ ಇಲ್ಲ. ಅವರ ಭಾಷಣವೆಂದರೆ ಹಿತಮಿತವಾದ ಅಚ್ಚುಕಟ್ಟಾದ ನಿರರ್ಗಳವಾದ ಚಿಂತನಶೀಲ ಮಾತುಗಾರಿಕೆ. ಅದು ಪ್ರವಾಹವಲ್ಲ, ಜಲಪಾತವಲ್ಲ, ತುಂಬಿ ಹರಿಯುವ ನದಿಯಂತೆ ಗಂಭೀರ. ಅವರ ಬರವಣಿಗೆ ಕೂಡ ಸರಳ, ನೇರ, ಸ್ಪಷ್ಟ, ಲಲಿತ ಮತ್ತು ಅಧ್ಯಯನಶೀಲವಾದದ್ದು. ಓದಲು, ಬರೆಯಲು ತೊಡಗಿದೆಂದರೆ, ಊಟ-ತಿಂಡಿ-ನಿದ್ರೆ ಹೊರತು ಉಳಿದ ವೇಳೆಯೆಲ್ಲ ನಿರಂತರವಾಗಿ, ಕೆಲವು ಸಲ ಬೆನ್ನನ್ನು ಗುದ್ದಿಕೊಂಡು ನೇರಮಾಡಿಕೊಳ್ಳುತ್ತಾ, ಬರೆಯ ಬೇಕಾದದ್ದನ್ನು ಬರೆದು ಮುಗಿಸುವ ತನಕ ವಿಶ್ರಾಂತಿಯಾಗಲೀ, ಬೇರೆ ಕಡೆ ಗಮನವಾಗಲೀ ಇಲ್ಲವೇ ಇಲ್ಲ.

ಅವರು ಬರವಣಿಗೆಗೆ ತೊಡಗಿದಾಗ, ಅದೂ ಕವಿತೆ ಬರೆಯುವ ಹೊತ್ತಿನಲ್ಲಂತೂ ಅವರ ಕೊಠಡಿಯೊಳಗೆ ನಾನು ಪ್ರವೇಶಿಸುವುದನ್ನು ಕೂಡ ಅವರು ಇಷ್ಟಪಡುವುದಿಲ್ಲ. ಆದರೆ ಅವರ ಬರಹದ ಮೊದಲ ಶ್ರೋತೃ ಹಾಗೂ ವಿಮರ್ಶಕಗಳು ನಾನೇ. ಇಂಥ ಶ್ರದ್ಧೆ, ಏಕಾಗ್ರತೆ ಇರುವುದರಿಂದಲೇ ಬದುಕಿನಲ್ಲಿ ಇಷ್ಟೆಲ್ಲವನ್ನೂ ಸಾಧಿಸುವುದು ಅವರಿಗೆ ಸಾಧ್ಯವಾಗಿರುವುದು. ಸಮಯಕ್ಕೆ ಸರಿಯಾಗಿ ಊಟ-ತಿಂಡಿ, ಓದಲು ಬರೆಯಲು ಪುಸ್ತಕ, ಕಾಗದ ಇವಿಷ್ಟಿದ್ದರೆ ಅವರಿಗೆ ಜಗತ್ತಿನಲ್ಲಿ ಇನ್ನೇನೂ ಬೇಡ. ನಿಮ್ಮಂಥವರಿಗೆ ಒಬ್ಬ ಹೆಂಡತಿಯೂ ಬೇಕಾಗಿರಲಿಲ್ಲ, ಇಬ್ಬಿಬ್ಬರನ್ನು ಏಕೆ ಕಟ್ಟಿಕೊಂಡಿರಿ ಎಂದು ನಾನು ಅನೇಕ ಸಲ ಛೇಡಿಸಿದ್ದು ಉಂಟು.

ಪ್ರಾಮಾಣಿಕತೆ ಜಿಎಸ್ಎಸ್ ಅವರ ವ್ಯಕ್ತಿತ್ವದ ಅವಿಭಾಜ್ಯ ಅಂಗ. ಒಳಗೊಂದು, ಹೊರಗೊಂದು ಎನ್ನುವಂಥ ಕಾಪಟ್ಯ ಅವರಲ್ಲಿ ಇಲ್ಲವೇ ಇಲ್ಲ. ಮನಸ್ಸಿನಲ್ಲಿ ಯಾರ ಬಗೆಗಾದರೂ ಅಸಮಾಧಾನವಿದ್ದರೆ ಅದನ್ನು ಮುಚ್ಚಿಟ್ಟುಕೊಂಡು ಅವರೊಡನೆ ನಯವಾಗಿ ನಡೆದುಕೊಳ್ಳುವುದು ಅವರಿಂದಾಗದು. ತನಗನ್ನಿಸಿದ್ದನ್ನು ನೇರವಾಗಿ ಹೇಳಿಬಿಡುವ ಅವರ ಸ್ವಭಾವದಿಂದಾಗಿ ಅನೇಕರು ಅವರಿಗೆ ಶತ್ರುಗಳಾಗಿರುವುದೂ ಉಂಟು; ಅವರನ್ನು ದುರಹಂಕಾರಿ ಎಂದವರೂ ಉಂಟು. ಇದರಿಂದಾಗಿ ನಮಗೂ ಎಷ್ಟೋ ವೇಳೆ ಮುಜುಗರದ ಪ್ರಸಂಗಗಳನ್ನು ಎದುರಿಸಬೇಕಾಗಿ ಬಂದಿದೆ. ಹಣದ ವಿಚಾರದಲ್ಲಿಯೂ ಅವರಿಗೆ ಇದೇ

ಪ್ರಾಮಾಣಿಕತೆ. ಮನಸ್ಸು ಮಾಡಿದ್ದರೆ ಅವರು ಬೇಕಾದಷ್ಟು ಹಣ ಮಾಡಬಹುದಿತ್ತು. ಆದರವರಿಗೆ ಹಣದ ಬಗೆಗೆ ವ್ಯಾಮೋಹವೇ ಇಲ್ಲ. ಅವರ ದೃಷ್ಟಿಯಲ್ಲಿ ಹಣವೆನ್ನುವುದು ಜೀವನ ನಿರ್ವಹಣೆಯ ಸಾಧನ. ನಮಗೆಷ್ಟು ಬೇಕೋ ಅಷ್ಟಿರುವಾಗ ಅದಕ್ಕಿಂತ ಹೆಚ್ಚು ಹಣ ನಮಗೇಕೆ ಬೇಕು ಎನ್ನುತ್ತಾರೆ. ಅವರು ಸಾಹಿತ್ಯ ಅಕಾಡೆಮಿಯಲ್ಲಿ ಅಧ್ಯಕ್ಷರಾಗಿದ್ದಾಗ, ತಮ್ಮ ವೈಯಕ್ತಿಕ ಕಾಗದ ಪತ್ರಗಳನ್ನು ಕಳುಹಿಸಲು ತಮ್ಮ ಸ್ವಂತ ದುಡ್ಡಿನಿಂದ ಕೊಂಡ ಅಂಚೆ ಚೀಟಿಗಳನ್ನು ಬಳಸುತ್ತಾರೆ ಎಂದು ಅಕಾಡೆಮಿಯ ಸಿಬ್ಬಂದಿವರ್ಗ ಮಾತನಾಡಿಕೊಂಡದ್ದನ್ನು ನಾನೇ ಕೇಳಿದ್ದೇನೆ. ತಮ್ಮ ಸ್ವಂತ ಖರ್ಚಿಗಾಗಿ ಮಕ್ಕಳಿಂದ ಹಣ ತೆಗೆದುಕೊಳ್ಳುವುದನ್ನು ಕೂಡ ಅವರು ನಿರಾಕರಿಸುತ್ತಾರೆ. ಹಣವನ್ನು ಖರ್ಚು ಮಾಡುವಾಗ ಕೂಡ ಎಚ್ಚರದ, ಲೆಕ್ಕಾಚಾರದ ದೃಷ್ಟಿಯೇ ಪ್ರಧಾನ.

ಅವರಿಗೆ ಕರ್ನಾಟಕ ಸರ್ಕಾರದ ಅತ್ಯುನ್ನತ ಪ್ರಶಸ್ತಿಯಾದ 'ಪಂಪ ಪ್ರಶಸ್ತಿ' ಬಂದಾಗ, 1998ನೆಯ ಇಸವಿಯ ಡಿಸೆಂಬರ್ ತಿಂಗಳಿನಲ್ಲಿ ಬನವಾಸಿಯಲ್ಲಿ ನಡೆದ ಪ್ರಶಸ್ತಿ ಸ್ವೀಕಾರದ ಸಂದರ್ಭದಲ್ಲಿ "ಈ ಪ್ರಶಸ್ತಿಯ ಮೂಲಕ ನನಗೆ ದತ್ತವಾದ ಒಂದು ಲಕ್ಷ ರೂಪಾಯಿಗಳನ್ನು ನನ್ನ ಸ್ವಂತಕ್ಕಾಗಿ ಬಳಸಿಕೊಳ್ಳುವುದಿಲ್ಲ. ಇದನ್ನು ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಉದ್ದೇಶಗಳಿಗೆ ವಿನಿಯೋಗಿಸುತ್ತೇನೆ." ಎಂದು ಘೋಷಿಸಿದರು. ಅನಂತರ, ಕುಟುಂಬದ ಸದಸ್ಯರೊಡನೆ ಸಮಾಲೋಚಿಸಿ ಜಿಎಸ್ಎಸ್ ವಿಶ್ವಸ್ಥಮಂಡಲಿಯನ್ನು ರಚಿಸಿ, ಈ ಒಂದು ಲಕ್ಷ ರೂಪಾಯಿಗಳನ್ನು ಮೂಲಧನವಾಗಿಟ್ಟು, ಅದರಿಂದ ಬರುವ ಬಡ್ಡಿಯಿಂದ ಹತ್ತು ಸಾವಿರ ರೂ.ಗಳನ್ನು ಕನ್ನಡದಲ್ಲಿ ಪ್ರತಿವರ್ಷವೂ ಪ್ರಕಟವಾದ ಶ್ರೇಷ್ಠಸಾಹಿತ್ಯ ವಿಮರ್ಶೆಯ ಇಲ್ಲವೇ ಕಾವ್ಯಮೀಮಾಂಸೆಯ ಕೃತಿಗೆ ಅಥವಾ ಈ ಕ್ಷೇತ್ರದಲ್ಲಿ ಗಣನೀಯ ಸಾಧನೆ ಮಾಡಿರುವ ವ್ಯಕ್ತಿಗಳಿಗೆ 'ಜಿಎಸ್ಎಸ್ ಪ್ರಶಸ್ತಿ'ಯನ್ನು ನೀಡುವಂತೆ ಮಾಡಿರುವ ವ್ಯವಸ್ಥೆ ಎರಡು ವರ್ಷದಿಂದಲೂ ನಡೆದುಕೊಂಡು ಬಂದಿದೆ. ಅವರಿಗೆ ಗೊರೂರ್ ಪ್ರಶಸ್ತಿ ಬಂದಾಗ ಅದರಿಂದ ಬಂದ ಹತ್ತು ಸಾವಿರ ರೂಪಾಯಿಗಳನ್ನು ಜಿಎಸ್ಎಸ್ ವಿಶ್ವಸ್ಥಮಂಡಲಿಯ ಮೂಲಧನಕ್ಕೇ ಸೇರಿಸಿದರು.

ಅವರ ಪ್ರತಿಯೊಂದು ಕೆಲಸದಲ್ಲಿಯೂ ಶಿಸ್ತು ಮತ್ತು ಕ್ರಮಬದ್ಧತೆ ಎದ್ದು ಕಾಣುವಂಥದ್ದು. ಸೋಮಾರಿತನವೆಂದರೆ ಅವರಿಗಾದದು. ಮಾಡಲೇಬೇಕೆಂದುಕೊಂಡ ಕೆಲಸವನ್ನು ಆ ಕ್ಷಣದಲ್ಲಿಯೇ ಮಾಡಿ ಮುಗಿಸುವುದು ಅವರ ಜಾಯಮಾನ. ಯಾರಾದಾದರೂ ಕಾಗದ ಬಂದರೆ ತಕ್ಷಣವೇ ಉತ್ತರ ಬರೆದು ಅಂಚೆಗೆ ಹಾಕುವುದಾಗಲೀ, ಮನೆಗೆ ಸಂಬಂಧಿಸಿದ ವಿದ್ಯುಚ್ಛಕ್ತಿ ಬಿಲ್ ಇತ್ಯಾದಿಗಳನ್ನು ಕಟ್ಟುವುದರಲ್ಲಾಗಲೀ, ಲೇಖನ ಬರೆದುಕೊಡುತ್ತೇನೆಂದು ಒಪ್ಪಿಕೊಂಡಿದ್ದರೆ, ಆಗಲೇ ಅದಕ್ಕೆ ಬೇಕಾದ ಸಿದ್ಧತೆ ಮಾಡಿಕೊಂಡು ಬರೆದು ಮುಗಿಸಿ ಸಮಯಕ್ಕೆ ಸರಿಯಾಗಿ ಕಳುಹಿಸಿಕೊಡುವುದರಲ್ಲಾಗಲೀ, ಊಟ-ತಿಂಡಿ-ನಿದ್ರೆಗಳಲ್ಲಾಗಲೀ ಪ್ರತಿಯೊಂದರಲ್ಲಿಯೂ ಶಿಸ್ತು-ಕ್ರಮಬದ್ಧತೆ ಎದ್ದು ಕಾಣುತ್ತದೆ. 75ನೆಯ ವಯಸ್ಸಿನಲ್ಲಿಯೂ ಕೂಡ ಅವರ ಚುರುಕು, ಚಟುವಟಿಕೆ, ಶಿಸ್ತನ್ನು ನೋಡಿ ಪರಿಚಯದವರು ಆಶ್ಚರ್ಯ ಪಡುತ್ತಾರೆ.

ಸರಳತೆ ಅವರ ವ್ಯಕ್ತಿತ್ವದಲ್ಲಿ ಹಾಸುಹೊಕ್ಕಾಗಿದೆ. ಅವರ ಆವಶ್ಯಕತೆಗಳೂ ಬಹಳ ಕಡಿಮೆ. ಉದ್ಯೋಗದಲ್ಲಿದ್ದಾಗ ಕಚ್ಚೆ ಪಂಚೆ, ಜುಬ್ಬ, ಕ್ಲೋಸ್ ಕಾಲರ್ ಕೋಟ್ ಧರಿಸುತ್ತಿದ್ದರು. ನಿವೃತ್ತರಾದ ಮೇಲೆ ಬಿಳಿಯ ಪೈಜಾಮ ಮತ್ತು ಜುಬ್ಬ. ಅರ್ಧ ಡಜನ್ ಪೈಜಾಮ-ಜುಬ್ಬಗಳಿದ್ದರೆ ಮುಗಿಯಿತು. ಅದಕ್ಕಿಂತ ಹೆಚ್ಚು ಸಂಗ್ರಹವಾದರೆ ಇಷ್ಟೊಂದನ್ನಿಟ್ಟು ಕೊಂಡು ಏನು ಮಾಡಲಿ ಎಂಬುದು ಅವರ ಪ್ರಶ್ನೆ. ಥಳ, ಥಳ ಹೊಳೆಯುವ ಉಂಗುರ, ಸರ ಧರಿಸಿದ ಗಂಡಸರನ್ನು ಕಂಡರೆ ಅವರಿಗೆ ನಗು. ಬೀರು ತುಂಬ ತುಂಬಿದ ನಮ್ಮ ಸೀರೆಗಳನ್ನು ನೋಡಿ "ಅಂಗಡಿ ಇಡ್ತೀಯಾ" ಎಂದು ಅವರು ಹಾಸ್ಯ ಮಾಡಿದ್ದುಂಟು. ನೋಡಿದವರು ಕಣ್ಣರಳಿಸಿ ಅಸೂಯೆಯಿಂದ ನೋಡುವಂಥ ಅಲಂಕಾರ ಸಾಮಗ್ರಿಗಳು ತುಂಬಿರುವ ಅರಮನೆಯಂಥ ಮನೆ ಬೇಕು ಎನ್ನುವ ಬಯಕೆ ಅವರಿಗೆಂದೂ ಇಲ್ಲ. ಅವರ ವ್ಯಕ್ತಿತ್ವದಲ್ಲಿಯೂ ಗೋಜಲುಗಳು, ಗೊಂದಲಗಳು ಬಹಳ ಕಡಿಮೆ. ನಮ್ಮ ಹಾಗೆ ಸಣ್ಣ ಸಣ್ಣ ವಿಚಾರಗಳನ್ನು ಹಚ್ಚಿಕೊಂಡು ಕೊರಗುವವರೇ ಅಲ್ಲ. ಬೇಜಾರು, ಡಿಪ್ರೆಶನ್‌ನಂಥ ಮನಃಸ್ಥಿತಿ ಅವರಲ್ಲಿ ತೀರಾ ವಿರಳ.

ಅವರು ಮಿತಭಾಷಿ. ಆತ್ಮೀಯರೊಡನೆ ಗಂಟೆಗಟ್ಟಲೆ ಮಾತನಾಡುವ ಅವರಿಗೆ ಹೊಸಬರೊಡನೆ ಮಾತೇ ಕಡಿಮೆ. ಬಂಧು ಬಳಗದವರು ಬಂದಾಗ ಅವರನ್ನು ಸರಿಯಾಗಿ ಮಾತಾಡಿಸಿ ಎಂದು ನಾವೇ ಹೇಳಿಕೊಡಬೇಕಾದ ಪರಿಸ್ಥಿತಿ. ಒಂದೋ ಎರಡೋ ಮಾತಾಡಿ ಕೂತರೆಂದರೆ ಮುಗಿಯಿತು. ವೇದಿಕೆ ಮೇಲೆ ನಿಂತರೆ ಗಂಟೆಗಟ್ಟಲೆ ನಿರರ್ಗಳವಾಗಿ ಮಾತನಾಡುವ ಇವರು ಪರಿಚಿತರೆದುರು ಹೀಗೇಕೆ ಮಾಡುತ್ತಾರೆ ಎಂದು ನಾವು ಮುಜುಗರ ಪಟ್ಟುಕೊಂಡದ್ದಿದೆ. ಒಂದು ರೀತಿಯ ಭಯಮಿಶ್ರಿತ ಗೌರವ ಹುಟ್ಟಿಸುವ ವ್ಯಕ್ತಿತ್ವದಿಂದಾಗಿ, ಹೊಸಬರಿಗೆ ಇವರೊಡನೆ ಮುಕ್ತವಾಗಿ ಮಾತಾಡಲು ಸಾಧ್ಯವಿಲ್ಲ. ನಿಮಗೆ ಅಹಂಕಾರ ಎಂದು ನಾವವರನ್ನು ಬಯ್ದದ್ದೂ ಇದೆ. ಅವರ ಈ ಗಂಭೀರ ಸ್ವಭಾವದಿಂದಾಗಿ ಅವರಿಗೆ ಆತ್ಮೀಯ ಸ್ನೇಹಿತರ ಸಂಖ್ಯೆ ಕಡಿಮೆಯೇ. ತಮ್ಮ ಭಾವನೆಗಳನ್ನು ಕುರಿತು ಬೇರೆಯವರ ಬಳಿ ಮನಸ್ಸನ್ನು ಬಿಚ್ಚಿಡುವುದಾಗಲೀ, ತನ್ನನ್ನೇ ಕುರಿತು ತಾನು ಹೊಗಳಿಕೊಳ್ಳುವುದಾಗಲೀ ಅವರಿಗೆ ಸಲ್ಲದ ವಿಚಾರ. ಇಂಥ ಜಿಎಸ್ಎಸ್ ಆತ್ಮೀಯರ ಬಳಿ ಗಂಟೆಗಟ್ಟಲೆ ಸಾಹಿತ್ಯ-ಕಲೆ ಇವುಗಳ ಬಗೆಗೆ ಮಾತನಾಡಬಲ್ಲರು, ಹಾಸ್ಯ ಚಟಾಕಿ ಹಾರಿಸಬಲ್ಲರು, ಮುಕ್ತವಾಗಿ ನಗಬಲ್ಲರು.

ಹೆಂಡತಿ, ಮಕ್ಕಳು, ಬಂಧು-ಬಳಗ, ಆತ್ಮೀಯರು ಇವರೆಲ್ಲರ ಬಗೆಗೆ ಜಿಎಸ್ಎಸ್ ಅವರಿಗೆ ಪ್ರೀತಿಯಿದೆ. ಆದರೆ ಯಾರ ಬಗೆಗೂ ವ್ಯಾಮೋಹವಿಲ್ಲ. ಹಿರಿಯ ಮಗ ಜಯದೇವ್ ಮದುವೆಯಾಗಲಿಲ್ಲ. ಸಮಾಜಸೇವೆಗೆ ತನ್ನನ್ನು ಅರ್ಪಿಸಿಕೊಂಡಿದ್ದಾನೆ. ಅದರ ಬಗೆಗೆ ಜಿಎಸ್ಎಸ್ ಅವರಾಗಲೀ, ನನ್ನ ಅಕ್ಕ ರುದ್ರಾಣಿಯವರಾಗಲೀ ಚಿಂತೆ ಹಚ್ಚಿಕೊಂಡು ಕೊರಗಿಲ್ಲ. ಅದರ ಬದಲಾಗಿ ಒಳ್ಳೆಯ ಕೆಲಸದಲ್ಲಿ ತೊಡಗಿಸಿಕೊಂಡಿದ್ದಾನೆ ಎಂದು ಸಂತೋಷಪಟ್ಟಿದ್ದಾರೆ. ಕಿರಿಯ ಮಗ ಡಾ. ಪ್ರಸಾದ್, ಸೊಸೆ ಡಾ. ಪೂರ್ಣಿಮಾ ತಮ್ಮ

ಮಗಳು ಅನನ್ಯಳೊಂದಿಗೆ ಇಂಗ್ಲೆಂಡಿನಲ್ಲಿ ಕೆಲಸ ಮಾಡುತ್ತಿದ್ದಾರೆ. ಅದರ ಬಗೆಗೂ ಅವರಿಗೆ ದುಃಖವಾಗಲೀ, ಅಸಮಾಧಾನವಾಗಲೀ ಇಲ್ಲ. ಅವರವರ ಬದುಕನ್ನು ರೂಪಿಸಿಕೊಳ್ಳುವುದು ಅವರವರಿಗೆ ಬಿಟ್ಟದ್ದು; ಅದಕ್ಕೆ ಅಡ್ಡಿಪಡಿಸಲು ನಮಗೇನು ಹಕ್ಕಿದೆ? ಎನ್ನುವ ಧೋರಣೆ ಅವರದು. ಯಾರ ಮೇಲೂ ನಮ್ಮ ವಿಚಾರಗಳನ್ನು ಹೊರಿಸಬಾರದೆನ್ನುವ ಮುಕ್ತ ಮನೋಧರ್ಮ, ಒಂದು ರೀತಿಯ ನಿರ್ಲಿಪ್ತತೆ ಅವರ ಸ್ವಭಾವದಲ್ಲಿಯೇ ಇದೆ. ಒಂದೊಂದು ಸಾರಿ ಇವರಿಗೆ ಯಾರೂ ಬೇಕಾಗಿಯೇ ಇಲ್ಲವೇನೋ ಎನಿಸುತ್ತದೆ. ಯಾವುದನ್ನೂ ಹಚ್ಚಿಕೊಂಡು ಕೊರಗುವ ಸ್ವಭಾವವೇ ಅವರಲ್ಲಿಲ್ಲ. ನಮಗೆ ಆಸಕ್ತಿ ಹುಟ್ಟಿಸುವ ಅನೇಕ ಸಾಮಾನ್ಯ ವಿಷಯಗಳಲ್ಲಿ ಅವರಿಗೆ ಆಸಕ್ತಿಯೇ ಇಲ್ಲ. ಕೆಲವು ಸಾರಿ ಅವರಿವರ ವಿಷಯ ಹೇಳುತ್ತಿದ್ದರೆ ಅದರೆಡೆಗೆ ಅವರ ಗಮನವೇ ಇರುವುದಿಲ್ಲ. ಇಷ್ಟು ವರ್ಷ ಕಾಲ ಸ್ವಂತ ಮನೆಯಲ್ಲಿಯೇ ಬದುಕಿದ್ದರೂ ಅಕ್ಕಪಕ್ಕದವರ ವಿಷಯ ಕೂಡ ಅವರಿಗೆ ಸರಿಯಾಗಿ ಗೊತ್ತಿಲ್ಲ. ಇಂಥ ವ್ಯಕ್ತಿ ಇಷ್ಟೆಲ್ಲ ಕಾವ್ಯಸೃಷ್ಟಿ ಮಾಡಿದ್ದಾದರೂ ಹೇಗೆ ಎಂದು ಯೋಚಿಸಿದಾಗ ನನಗೆ ಅವರು ಗುರು 'ಕುವೆಂಪು' ಅವರ ನೆನಪಾಗುತ್ತದೆ. ಇಂಥ ನಿರ್ಲಿಪ್ತ ಸ್ವಭಾವದ ಇವರಿಗೆ ಬಡತನದಲ್ಲಿ ನರಳುವವರನ್ನು ಕಂಡರೆ ತುಂಬ ಕನಿಕರ. ಏಕೆಂದರೆ ಅವರು ಹುಟ್ಟಿ ಬೆಳೆದು ತಮ್ಮ ವಿದ್ಯಾರ್ಥಿ ಜೀವನವನ್ನು ಕಳೆದದ್ದು ಬಡತನದಲ್ಲಿಯೇ. ಅಂಥ ಎಷ್ಟೋ ಜನರಿಗೆ ಇವರು ತಮ್ಮ ಕೈಯಲ್ಲಾದ ಸಹಾಯ ಮಾಡಿದ್ದಾರೆ. ಕಷ್ಟದಲ್ಲಿದ್ದ ಒಬ್ಬ ಹುಡುಗಿಯನ್ನು ನಮ್ಮ ಮನೆಯಲ್ಲಿಯೇ ಇಟ್ಟುಕೊಂಡು ಅವಳ ವಿದ್ಯಾಭ್ಯಾಸಕ್ಕೆ ಸಹಾಯಮಾಡಿ ಅವಳು ತನ್ನ ಕಾಲಮೇಲೆ ತಾನು ನಿಲ್ಲುವಂತೆ ಮಾಡಿದ್ದಾರೆ. ನಮ್ಮ ಮನೆಯಲ್ಲಿ ಕಾರು ತೊಳೆಯುತ್ತಿದ್ದ ಕಡುಬಡವ ಮುಸ್ಲಿಂ ಹುಡುಗನೊಬ್ಬನಿಗೆ ಕನ್ನಡ ವಿಶ್ವವಿದ್ಯಾನಿಲಯದಲ್ಲಿ ಉದ್ಯೋಗ ದೊರಯುವಂತೆ ಮಾಡಿದ್ದು ಮರೆಯಲಾರದ ಸಂಗತಿಯಾಗಿದೆ.

ಅವರಿಗೆ ಲೌಕಿಕವಾದ ಯಾವ ಮಹತ್ವಾಕಾಂಕ್ಷೆಗಳೂ ಇಲ್ಲ. ಹೇಗಾದರೂ ಮೇಲೇರಬೇಕೆಂದು ಅವರಿವರ ವಶೀಲಬಾಜಿ ಮಾಡಿದವರಂತೂ ಅಲ್ಲವೇ ಅಲ್ಲ. ಇಷ್ಟೆಲ್ಲ ಪ್ರಶಸ್ತಿ, ಸನ್ಮಾನಗಳೆಲ್ಲ ಅವರ ಪ್ರತಿಭೆ, ಶ್ರದ್ಧೆ, ಶ್ರಮ, ಸಾಧನೆಗಳಿಂದಾಗಿ ಅವರನ್ನರಸಿಕೊಂಡು ಬಂದುವೆ ಹೊರತು ಅವುಗಳನ್ನರಸಿ ಅವುಗಳ ಬೆನ್ನಹಿಂದೆ ಅವರು ಎಂದೂ ಹೋದವರಲ್ಲ. ಯಾವ ಗುಂಪಿಗೂ ಸೇರದೆ ತಮ್ಮ ಪಾಡಿಗೆ ತಾವು ಬರೆದುಕೊಂಡಿರುವ ಇವರಿಗೆ ಇಷ್ಟೆಲ್ಲ ಪ್ರಶಸ್ತಿಗಳು ದೊರಕಿದ್ದು ಅವರ ಅದೃಷ್ಟವೆಂದೇ ಹೇಳಬೇಕು. ನನಗೆ ಇನ್ನೇನೋ ಸಿಕ್ಕಬೇಕಾದದ್ದು ಸಿಕ್ಕಿಲ್ಲ ಎನ್ನುವ ಹಳಹಳಿಕೆಯಾಗಲೀ, ಹತಾಶೆಯಾಗಲೀ ಅವರಿಗಿಲ್ಲ. ಜೀವನದ ಬಗೆಗೆ ಅವರಿಗೆ ತೃಪ್ತಿಯಿದೆ, ಪ್ರೀತಿಯಿದೆ, ಆದರೆ ವ್ಯಾಮೋಹವಿಲ್ಲ. "ಕನ್ನಡ ಸಾರಸ್ವತ ಪ್ರಜ್ಞೆ ನನ್ನ ವಿಚಾರದಲ್ಲಿ ಎಂದೂ ಕೃಪಣವಾಗಿಲ್ಲ. ಜೀವನ ಏನೇನು ಕೊಡಬೇಕೋ ಅದನ್ನು ಬೇಕಾದ್ದಕ್ಕಿಂತ ಹೆಚ್ಚಿನದನ್ನೇ ಕೊಟ್ಟಿದೆ. ನನಗಿನ್ನೇನು ಬೇಕು? ಮುಕ್ಕಾಲು ಶತಮಾನ ಬದುಕಿದ್ದು ಹೆಚ್ಚಾಯ್ತೇನೋ ಅನ್ನಿಸುತ್ತಿದೆ. ಸಾವು ಯಾವಾಗ

ಕರೆದರೂ ಹೊರಡಲು ನಾನು ಸಿದ್ಧ" ಎಂದು ಅವರು ಹೇಳುವಾಗ ಆ ಮಾತಿನ ಹಿಂದಿನ ಪ್ರಾಮಾಣಿಕತೆ ಮತ್ತು ಧೈರ್ಯ ನನ್ನಲ್ಲಿ ಆಶ್ಚರ್ಯ ಹುಟ್ಟಿಸುತ್ತದೆ. ಆರು ವರ್ಷಗಳ ಹಿಂದೆ ತೆರೆದ ಹೃದಯದ ಶಸ್ತ್ರಚಿಕಿತ್ಸೆಗೆ ಒಳಗಾದಾಗ ಕೂಡ ಇದೇ ಧೈರ್ಯದಿಂದ ಅವರದನ್ನು ಎದುರಿಸಿದರು. ತೃಪ್ತ, ನಿರ್ಲಿಪ್ತ, ನಿರಾಳ ಮನಸ್ಸೇ 75ನೆಯ ವಯಸ್ಸಿನಲ್ಲಿಯೂ ಅವರು ಆರೋಗ್ಯವಾಗಿರಲು ಕಾರಣವಿರಬಹುದು.

ಜಿಎಸ್‌ಎಸ್ ಪ್ರವಾಸಪ್ರಿಯರು. ವಯಸ್ಸು, ಶಕ್ತಿ ಇದ್ದಾಗಂತೂ ಬೇಕಾದಷ್ಟು ತಿರುಗಾಡಿದ್ದಾರೆ. ಕಾಲಿಗೆ ಚಕ್ರ ಕಟ್ಟಿಕೊಂಡೇ ಹುಟ್ಟಿದ್ದಾರೆ ಎಂದು ಅನೇಕರು ಅವರನ್ನು ಹಾಸ್ಯಮಾಡಿದ್ದಾರೆ. ಹೆಚ್ಚು ಕಡಿಮೆ ಭಾರತದ ಎಲ್ಲ ಪ್ರದೇಶಗಳಲ್ಲಿಯೂ, ಅಮೆರಿಕಾ, ಇಂಗ್ಲೆಂಡ್, ಯೂರೋಪ್, ರಷ್ಯ, ಥೈಲ್ಯಾಂಡ್, ಸಿಂಗಪುರ ಮುಂತಾದ ವಿದೇಶಗಳಲ್ಲಿಯೂ ಪ್ರವಾಸ ಕೈಗೊಂಡಿದ್ದಾರೆ. ಪ್ರತಿಯೊಂದು ಪ್ರಮುಖ ಪ್ರವಾಸ ಕೈಗೊಂಡಾಗಲೂ ಪ್ರತಿದಿನವೂ ತಾವು ನೋಡಿದ್ದರ ಬಗೆಗೆ ದಿನಚರಿ ಬರೆದಿಟ್ಟುಕೊಂಡು, ಆಯಾ ಸ್ಥಳಗಳ ಬಗೆಗೆ ವಿಸ್ತಾರ ವಾಗಿ ಅಧ್ಯಯನ ಮಾಡಿ ವಿಷಯ ಸಂಗ್ರಹಣೆ ಮಾಡಿ, ಪ್ರವಾಸ ಮುಗಿಸಿ ಬಂದಕೂಡಲೇ ಒಂದು ಪ್ರವಾಸ ಕಥನವನ್ನು ಬರೆದು ಮುಗಿಸುತ್ತಾರೆ. ಉದ್ಯೋಗದಲ್ಲಿದ್ದಾಗಲಂತೂ ಭಾಷಣಗಳು, ವಿಚಾರಗೋಷ್ಠಿಗಳು, ಮೀಟಿಂಗ್‌ಗಳು ಅಂತ ವಾರಕ್ಕೊಮ್ಮೆಯಾದರೂ ಪ್ರಯಾಣ ಮಾಡದೆ ಇರುತ್ತಿರಲಿಲ್ಲ. ಇಂಗ್ಲೆಂಡ್, ಯೂರೋಪ್, ಅಮೆರಿಕಾ, ರಷ್ಯ, ಹಿಮಾಲಯ ಈ ಎಲ್ಲದರ ಬಗೆಗೂ ಅಧ್ಯಯನಪೂರ್ಣ ಪ್ರವಾಸಕಥನ ಬರೆದಿದ್ದಾರೆ. ಈಗ 75ನೆಯ ವಯಸ್ಸಿನಲ್ಲಿಯೂ ಅವರು ಪ್ರವಾಸ ಪ್ರಿಯರೇ. ಆದರೆ ವಯಸ್ಸಿನ ಕಾರಣದಿಂದಾಗಿ ನಾವು ಕುಟುಂಬದವರು ಅವರಿಗೆ ಕಡಿವಾಣ ಹಾಕಿದ್ದೇವೆ. ಪ್ರವಾಸ ಹೊರಟರೂ ಅಷ್ಟೆ, ಎಲ್ಲ ಕ್ರಮಬದ್ಧವಾಗಿರಬೇಕು. ಪ್ರವಾಸದ ಯೋಜನೆ ಸಿದ್ಧಪಡಿಸಿ, ಎಲ್ಲ ಕಡೆಗೆ ಫೋನ್ ಮಾಡಿ, ಪತ್ರವ್ಯವಹಾರ ನಡೆಸಿ, ವಸತಿ ಇತ್ಯಾದಿಗಳ ಬಗೆಗೆ ಖಚಿತ ಪಡಿಸಿಕೊಂಡು, ಎಲ್ಲಿಯೂ ತೊಂದರೆಯಾಗದಂತೆ ತಮ್ಮ ಯೋಜನೆಗೆ ಅನುಗುಣವಾಗಿಯೇ ಪ್ರವಾಸ ನಡೆಯುವಂತೆ ಎಚ್ಚರ ವಹಿಸುತ್ತಾರೆ.

ಇಷ್ಟೆಲ್ಲ ಗುಣಗಳಿಗೆ ದೃಷ್ಟಿಬೊಟ್ಟಿಟ್ಟಂತೆ, ಅವರ ಸ್ವಭಾವದಲ್ಲಿರುವ ಕಪ್ಪು ಚುಕ್ಕೆಯೆಂದರೆ ಅವರ ಶೀಘ್ರಕೋಪ ಮತ್ತು ಆತುರದ, ಗಡಿಬಿಡಿಯ ನಡವಳಿಕೆ. ಬಾಯಿಂದ ಮಾತು ಹೊರಡುವುದಕ್ಕೆ ಮೊದಲೇ ಆ ಕೆಲಸ ಆಗಿ ಮುಗಿದಿರಬೇಕೆನ್ನುವಷ್ಟು ಆತುರ. ಎಲ್ಲಿಗಾದರೂ ಹೊರಟರಂತೂ ಮಹಾ ಗಡಿಬಿಡಿ. ಇಂಥ ಸ್ವಭಾವದ ಇವರು ಒಂಟಿಯಾಗಿ ಹೇಗಾದರೂ ದೇಶವಿದೇಶಗಳನ್ನು ಸುತ್ತಿಬಂದಿದ್ದಾರೆಯೋ ಎಂದು ನಾವು ಆಶ್ಚರ್ಯಪಟ್ಟಿದ್ದೇವೆ. ಇನ್ನು ಅವರ ಕೋಪವೋ—ಆರ್ಭಟ ಮಾಡಿ ತಣ್ಣಗಾಗುವ ಪಟಾಕಿಯಂತೆ. ಆ ಕ್ಷಣ ಕಳೆದ ನಂತರ ಮನಸ್ಸಿನಲ್ಲಿ ಯಾವ ಆಕ್ರೋಶ ಅಸಮಾಧಾನಗಳೂ ಇರುವುದಿಲ್ಲ. ಆದರೆ ಜಗಳವಾಡಿ ಮಾತು ಬಿಟ್ಟರೆ ಮಾತ್ರ ಮೊದಲು ಸೋತು ರಾಜಿ ಮಾಡಿಕೊಂಡು ಮಾತಾಡಿಸಬೇಕಾದವಳು ನಾನೇ. ಶಿವ-ರುದ್ರ ಈ ಎರಡೂ ಗುಣಗಳು ಅವರ

ವ್ಯಕ್ತಿತ್ವದಲ್ಲಿದೆ. ಅವರಿಗೆ ಹಿರಿಯರು ಇಟ್ಟ ಹೆಸರು ಅನ್ವರ್ಥವಾಗಿದೆ. ನನ್ನ ಎಷ್ಟೋ ಜನ ಗೆಳತಿಯರು ಪ್ರೊಫೆಸರ್ ಬಹಳ ಶಾಂತ ಸ್ವಭಾವದವರಂತೆ ಕಾಣುತ್ತಾರೆ ಎಂದಾಗ ನನಗೆ ನಗು ಉಕ್ಕಿ ಹರಿದಿದೆ. ಆದರೆ ಯಾರ ಬಗೆಗಾದರೂ ಅಸಮಾಧಾನವಿದ್ದರೆ, ಅದನ್ನು ಮನಸ್ಸಿನಲ್ಲಿಟ್ಟುಕೊಂಡು ಸಾಧಿಸುವ, ಅವರಿಗೆ ಕೆಡುಕು ಮಾಡುವ ಪ್ರವೃತ್ತಿಯಂತೂ ಅವರಲ್ಲಿಲ್ಲ. ಇವರ ಹರಿತ ನಾಲಿಗೆಯಿಂದಾಗಿ ಅನೇಕರು ಇವರನ್ನು ತಪ್ಪು ತಿಳಿದು ಇವರ ಬಗ್ಗೆ ಇಲ್ಲಸಲ್ಲದ ವದಂತಿಗಳನ್ನು ಹಬ್ಬಿಸಿ ಹಗೆತನ ಸಾಧಿಸಿದ್ದಾರೆ. ಇನ್ನು ಸ್ವಲ್ಪ ನಯ, ವಿನಯ ಶಾಂತಸ್ವಭಾವ ಇವರಿಗಿದ್ದಿದ್ದರೆ, ಇವರಿಗಿರುವ ಪ್ರತಿಭೆ-ಸಾಧನೆಗಳಿಗೆ ಚಿನ್ನಕ್ಕೆ ಕುಂದುಣವಿಟ್ಟಂತಾಗುತ್ತಿತ್ತಲ್ಲಾ ಎಂದು ನಾವು ಎಷ್ಟೋ ಸಾರಿ ಅಂದುಕೊಂಡಿದ್ದೇವೆ.

ಜೀವನದ ಬಗೆಗೆ ಅವರದು ವೈಚಾರಿಕವಾದ ದೃಷ್ಟಿ. ದೇವರು, ಧರ್ಮ, ಜಾತಿ ಇದ್ಯಾವುದರ ಬಗೆಗೂ ಅವರಿಗೆ ನಂಬಿಕೆಯಿಲ್ಲ. ಅವರ ಪಾಲಿಗೆ ಮಾನವೀಯತೆಯೇ ಧರ್ಮ; ಜೀವನ ಪ್ರೀತಿ, ಮಾಡುವ ಕೆಲಸದಲ್ಲಿ ಪ್ರಾಮಾಣಿಕತೆ ಶ್ರದ್ಧೆ ಇವೇ ದೇವರು. "ಪ್ರೀತಿ, ಕರುಣೆ, ಸ್ನೇಹ ಮರುಕ—ಇವೇ ನಮ್ಮ ದೇವರು" ಎಂಬ ಅವರ ಕವನದ ಸಾಲುಗಳನ್ನು ಇಲ್ಲಿ ನೆನೆಯಬಹುದು. ಯಾವುದೇ ಧಾರ್ಮಿಕ ಕ್ರಿಯೆಯಲ್ಲಿಯೂ ಅವರು ಸ್ವಂತಕ್ಕಾಗಿ ತಮ್ಮನ್ನು ತೊಡಗಿಸಿಕೊಂಡವರಲ್ಲ. ದೇವರಿಗಾಗಿಯೇ ದೇವಸ್ಥಾನಕ್ಕೆ ಅವರೆಂದೂ ಹೋದವರಲ್ಲ. ದೇವಸ್ಥಾನ ಕಲಾಸ್ಥಾನವಾಗಿದ್ದರೆ ಮಾತ್ರ ಅವರಿಗೆ ಆಸಕ್ತಿ. ದಿನನಿತ್ಯದ ಯಾವ ಪೂಜೆಯನ್ನೂ ಮಾಡುವ ಅಭ್ಯಾಸ ಅವರಿಗಿಲ್ಲ. ಹಾಗೆಂದು ದೇವರು, ಪೂಜೆ ಇತ್ಯಾದಿಗಳಲ್ಲಿ ನಂಬಿಕೆಯಿರುವವ ಬಗೆಗೆ ಅವರಿಗೆ ತಿರಸ್ಕಾರವೂ ಇಲ್ಲ. ಆದರೆ, ದೇವರು ಧರ್ಮ ಇವುಗಳನ್ನು ತಮ್ಮ ಸ್ವಾರ್ಥಕ್ಕೆ, ಶೋಷಣೆಗೆ, ಜನರನ್ನು ಒಡೆಯುವುದಕ್ಕೆ ಸಾಧನ ಮಾಡಿಕೊಳ್ಳುವವರ ಬಗೆಗೆ ಮಾತ್ರ ಅವರಿಗೆ ಹೇಳತೀರದ ಕೋಪ. ಈ ಸಾತ್ವಿಕ ರೋಷ ಅವರ ಅನೇಕ ಕವನಗಳಲ್ಲಿಯೂ ವ್ಯಕ್ತವಾಗಿದೆ. ಕಷ್ಟದಲ್ಲಿದ್ದ ಎಷ್ಟೋ ಜನರಿಗೆ ಇವರು ಜಾತಿ-ಗೀತಿ ನೋಡದೆ ಕೆಲಸ ಕೊಡಿಸಿದ್ದಾರೆ. ಆದರೂ ಇವರನ್ನು ಕೆಲವರು ಜಾತಿವಾದಿ ಅಂದಾಗ ಇವರು ನೊಂದುಕೊಂಡದ್ದೂ ಉಂಟು. ದಲಿತವರ್ಗದ ಪರವಾದ ಚಳುವಳಿಗಳಲ್ಲಿ ಭಾಗವಹಿಸಿರುವುದಲ್ಲದೆ, ಅಂತರ್ಜಾತೀಯ ವಿವಾಹಗಳನ್ನೂ ಇವರು ಪ್ರೋತ್ಸಾಹಿಸಿದ್ದಾರೆ. ಈ ವಿಚಾರಗಳಲ್ಲಿ ಇವರೊಂದಿಗ ನನಗೂ ಸಹಮತವಿರುವುದರಿಂದ ಇಂಥ ವಿಷಯಗಳಲ್ಲಿ ನಮ್ಮ ನಡುವೆ ಘರ್ಷಣೆಗಳಿಲ್ಲ.

ಇನ್ನು, ನಮ್ಮ ಕುಟುಂಬದ ಬಗೆಗೆ ಹೇಳುವುದಾದರೆ, ಜಿಎಸ್‌ಎಸ್ ರವರ ಮೊದಲ ಪತ್ನಿ ರುದ್ರಾಣಿಯವರ ತ್ಯಾಗಮನೋಭಾವ, ಚಟುವಟಿಕೆ, ದಿಟ್ಟತನ ಆಶ್ಚರ್ಯಕರವಾದುದು. ತಮ್ಮ ಜೀವನದಲ್ಲಾದ ಮಾನಸಿಕ ಆಘಾತವನ್ನು ಎದುರಿಸಿ, ಫೀನಿಕ್ಸ್‌ನಂತೆ ಅದರಿಂದ ಮೇಲೆದ್ದು ಬಂದು ಸಾಂಸಾರಿಕ ಹಾಗು ಸಾರ್ವಜನಿಕ ಜೀವನದಲ್ಲಿ ಅವರು ಮಾಡುತ್ತಿರುವ ಸಾಧನೆ ಯಾರಿಗಾದರೂ ಬೆರಗು ಹುಟ್ಟಿಸುತ್ತದೆ. ಮಹಿಳೆಯರಿಗೆ ಸಂಬಂಧಿಸಿದ ಅನೇಕ

ಆಧ್ಯಾತ್ಮಿಕ ಹಾಗು ಸಾರ್ವಜನಿಕ ಸಂಸ್ಥೆಗಳಲ್ಲಿ ಅವರು ಸಕ್ರಿಯ ಸದಸ್ಯರಾಗಿ ದುಡಿಯುತ್ತಿದ್ದಾರೆ. ಕೆಲವು ಗೆಳತಿಯರೊಡನೆ ಸೇರಿ "ಸಂಧ್ಯಾ ದೀಪ" ಎಂಬ ವೃದ್ಧಾಶ್ರಮವೊಂದನ್ನು ಸ್ಥಾಪಿಸಿ ನಡೆಸುತ್ತಿದ್ದಾರೆ.

ನಾನು, ಬೆಂಗಳೂರು ವಿಶ್ವವಿದ್ಯಾಲಯದ ಖಾಸಗಿ ಕಾಲೇಜೊಂದರ ನಿವೃತ್ತ ಪ್ರಾಧ್ಯಾಪಕಿ. ನನ್ನ ಸೋಮಾರಿತನ ಮತ್ತು ಅನಾರೋಗ್ಯದಿಂದಾಗಿ, ಪ್ರಾಮಾಣಿಕವಾಗಿ ಪಾಠ ಮಾಡುವುದೊಂದನ್ನು ಬಿಟ್ಟು ಮತ್ತೇನನ್ನೂ ಸಾಧಿಸಲಾಗಿಲ್ಲ. ಈಗ, ನಿವೃತ್ತಳಾದ ನಂತರ ಸಾಹಿತ್ಯಕ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವ ಪ್ರಯತ್ನ ಮಾಡುತ್ತಿದ್ದೇನೆ. ಕರ್ನಾಟಕ ಲೇಖಕಿಯರ ಸಂಘದ ಕಾರ್ಯಕಾರೀ ಸಮಿತಿಯ ಸದಸ್ಯಳಾಗಿ, ಸಂಘದಿಂದ ಪ್ರಕಟವಾಗುವ 'ಲೇಖಕಿ' ಪತ್ರಿಕೆಯ ಸಂಪಾದಕಿಯಾಗಿ ಕೆಲಸ ಮಾಡುತ್ತಿದ್ದೇನೆ.

ಹಿರಿಯ ಮಗ ಜಯದೇವ್ ಸಂಸಾರಿಯಾಗದೆ, ಸಾರ್ವಜನಿಕ ಜೀವನಕ್ಕೆ ತನ್ನನ್ನು ಅರ್ಪಿಸಿಕೊಂಡಿದ್ದಾನೆ. ಚಾಮರಾಜನಗರದ ಜೆ.ಎಸ್.ಎಸ್. ಕಾಲೇಜಿನಲ್ಲಿ ಪ್ರಾಧ್ಯಾಪಕನಾಗಿದ್ದುಕೊಂಡು, ಬೀದಿಮಕ್ಕಳಿಗಾಗಿ ಅನಾಥಾಶ್ರಮವೊಂದನ್ನು ಕಟ್ಟಿ ನಲವತ್ತು ಮಕ್ಕಳಿಗೆ ಆಶ್ರಯನೀಡಿ ಅವರನ್ನು ತನ್ನ ಸ್ವಂತ ಮಕ್ಕಳಂತೆಯೇ ಬೆಳೆಸುತ್ತಿದ್ದಾನೆ.

ಮಗಳು ಜಯಂತಿ ಬೆಂಗಳೂರು ವಿಶ್ವವಿದ್ಯಾನಿಲಯದ ನಿವೃತ್ತ ಕನ್ನಡ ಪ್ರಾಧ್ಯಾಪಕ ಹಾಗು ನಾಟಕ ವಿಮರ್ಶಕರಾದ ಶ್ರೀ ಕೆ. ಮರುಳಸಿದ್ದಪ್ಪನವರ ಪತ್ನಿ. ಚಿತ್ರಕಲೆ, ವಸ್ತ್ರವಿನ್ಯಾಸ, ಇಕಬಾನ, ಗೃಹಾಲಂಕಾರಣ—ಹೀಗೆ ಅವಳ ಕಲಾಸಕ್ತಿ ಅನೇಕ ಕವಲಾಗಿ ಹರಿದಿದೆ. ತಂದೆಯ ಸಾಹಿತ್ಯಕ ಪ್ರತಿಭೆ ಮಗಳಲ್ಲಿ ಹೀಗೆ ಬೇರೊಂದು ರೂಪದಲ್ಲಿ ಮುಂದುವರಿದಂತೆ ಕಾಣುತ್ತದೆ. ಮಗಳ ಮಗನಾದ ಚೈತನ್ಯ ದೃಶ್ಯಮಾಧ್ಯಮ ಹಾಗು ರಂಗ ಚಟುವಟಿಕೆಗಳಲ್ಲಿ ತೊಡಗಿಕೊಂಡು ಈ ಚಿಕ್ಕವಯಸ್ಸಿನಲ್ಲಿಯೇ ಸಾಕಷ್ಟು ಹೆಸರು ಮಾಡಿದ್ದಾನೆ. ಅವನ ಪತ್ನಿ ರಾಧಿಕಾ, ಇಂಜಿನಿಯರ್ ಹಾಗು ಭರತನಾಟ್ಯ ಕಲಾವಿದೆ.

ಕಿರಿಯ ಮಗ ಶಿವಪ್ರಸಾದ್ ವೃತ್ತಿಯಿಂದ ಡಾಕ್ಟರ್. ಪತ್ನಿ ಡಾ. ಪೂರ್ಣಿಮಾ ಮತ್ತು ಮಗಳು ಅನನ್ಯಳೊಡನೆ ಆತ ಈಗ ಇಂಗ್ಲೆಂಡಿನಲ್ಲಿ ಕೆಲಸ ಮಾಡುತ್ತಿದ್ದಾನೆ. ಶಾಂತ ಸ್ವಭಾವದ ಆತ ತಂದೆಯಂತೆ ಪ್ರವಾಸ ಪ್ರಿಯ ಮತ್ತು ತಂದೆಯ ಶಿಸ್ತನ್ನು ರೂಢಿಸಿಕೊಂಡಿದ್ದಾನೆ. ಸಾಹಿತ್ಯ, ಕಲೆಗಳಲ್ಲಿಯೂ ಅವನು ಆಸಕ್ತ.

ಜಿಎಸ್‌ಎಸ್ ಅವರ ಪ್ರತಿಭೆ, ಪಾಂಡಿತ್ಯ, ಬೆಚ್ಚಗಿನ ನದಿಯಂತೆ ನಿರರ್ಗಳವಾಗಿ ಹರಿಯುವ ಅವರ ಪಾಠಮಾಡುವ ಶೈಲಿ, ಅವರ ಗಂಭೀರ ವ್ಯಕ್ತಿತ್ವ—ಇವೇ ಮೈಸೂರಿನ ಮಾನಸಗಂಗೋತ್ರಿಯಲ್ಲಿ ಹದಿವಯಸ್ಸಿನ ಮುಗ್ಧ ವಿದ್ಯಾರ್ಥಿನಿಯಾಗಿದ್ದ ನನ್ನನ್ನು ಮೋಡಿ ಮಾಡಿದ ಗುಣಗಳು. ಸಂಪ್ರದಾಯಸ್ಥ ಕುಟುಂಬದಲ್ಲಿ ಹುಟ್ಟಿ ಬೆಳೆದ, ಸಂಕೋಚ ಸ್ವಭಾವದ ನಾನು ಮತ್ತು ಯಾವ ಹೆಂಗಸರ ಬಳಿಯೂ ಸಲಿಗೆಯಿಂದ ಮಾತನಾಡದ, ಸಾಕಷ್ಟು ಸ್ಥಾನ ಮಾನ, ಮರ್ಯಾದೆಗಳನ್ನು ಗಳಿಸಿಕೊಂಡಿದ್ದ ಜಿಎಸ್‌ಎಸ್—ಇಂಥ ನಮ್ಮಿಬ್ಬರ ನಡುವೆ ಈ ರೀತಿಯ ಪ್ರೀತಿ ಬೆಳೆದದ್ದಾದರೂ ಹೇಗೆ ಎಂಬ ಪ್ರಶ್ನೆಗೆ ನನಗಿನ್ನೂ ಉತ್ತರ ದೊರೆತಿಲ್ಲ. ■

# ಮುಖಾಮುಖಿ - 1

ಒಬ್ಬ ಲೇಖಕ ಮಹತ್ವದ ಸಾಹಿತ್ಯಕ ವ್ಯಕ್ತಿತ್ವವನ್ನು ಸಾಧಿಸುವುದು ಒಂದು ನೆಲೆ. ಇಂಥ ಸಾಹಿತ್ಯಕ ವ್ಯಕ್ತಿತ್ವ ಗಳಿಸಿದ ವ್ಯಕ್ತಿ ಅಷ್ಟೇ ಘನವಾದ ಸಾಂಸ್ಕೃತಿಕ ವ್ಯಕ್ತಿತ್ವವನ್ನು ಗಳಿಸುವುದು ಇನ್ನೊಂದು ನೆಲೆ. ಹೀಗೆ ಸಾಹಿತ್ಯಕವಾಗಿ ಮತ್ತು ಸಾಂಸ್ಕೃತಿಕವಾಗಿ ಗಣ್ಯರಾದ ನಮ್ಮ ನಾಡಿನ ಕೆಲವೇ ಲೇಖಕರಲ್ಲಿ ಹಿರಿಯರಾದ ಡಾ. ಜಿ.ಎಸ್. ಶಿವರುದ್ರಪ್ಪನವರು ಒಬ್ಬರು. ಈ ದೃಷ್ಟಿಯಲ್ಲಿ ಬೇಂದ್ರೆ, ಕುವೆಂಪು, ಕಾರಂತ, ಅಡಿಗರ ಪರಂಪರೆಯನ್ನು ಮುಂದುವರೆಸಿದ ವ್ಯಕ್ತಿ ಜಿಎಸ್ಎಸ್. ಈ ಬಗೆಯ ಲೇಖಕರು ಒಂದು ನಾಡಿನ ದೈನಿಕ ಸ್ಪಂದನದಲ್ಲಿ ಬೆರೆತು ಹೋಗಿರುತ್ತಾರೆ. ಅವರ ಸಾಹಿತ್ಯಕ ಕೃತಿಯನ್ನು ಅವರ ಸಾಮಾಜಿಕ ಕ್ರಿಯೆಯೂ, ಸಾಮಾಜಿಕ ಕ್ರಿಯೆಯನ್ನು ಸಾಹಿತ್ಯಕ ಕೃತಿಯೂ ರೂಪಿಸುತ್ತಾ ಹೋಗುತ್ತವೆ. ಅವರ ವ್ಯಕ್ತಿತ್ವದಲ್ಲಿ ಬಸವಣ್ಣನವರು ಅಗ್ನಿದಿವ್ಯವಾಗಿ ವಿಧಿಸಿದಂಥ, 'ನಡೆ-ನುಡಿ'ಗಳ ಸಮನ್ವಯ ಸಿದ್ಧಿಸುತ್ತಾ ಹೋಗುತ್ತದೆ. ಯಾವುದೇ ಸಮಾಜದಲ್ಲೂ ಇಂಥ ಲೇಖಕರು ವಿರಳ, ಅಂಥ ವಿರಳ ವ್ಯಕ್ತಿಗಳಲ್ಲಿ ಜಿಎಸ್ಎಸ್ ಒಬ್ಬರು.

ಹೀಗೆ ಸಾಮಾಜಿಕವಾಗಿ ಮತ್ತು ಸಾಹಿತ್ಯಕವಾಗಿ ಮಹತ್ವದ ಲೇಖಕರಾಗಿ ಗಣ್ಯರಾಗಿರುವ ಡಾ. ಜಿ.ಎಸ್ ಶಿವರುದ್ರಪ್ಪನವರಿಗೆ 1997ರ ಪ್ರತಿಷ್ಠಿತ ಪಂಪ ಪ್ರಶಸ್ತಿ ದೊರೆತಿರುವುದು ನಾಡಿನ ಹಿಗ್ಗಿಗೆ ಕಾರಣವಾಗಿದೆ. ಈ ಹಿಗ್ಗಿನ ಸಂದರ್ಭದಲ್ಲಿ ಅವರನ್ನು ಸಂದರ್ಶಿಸಿ, ಅವರ ವ್ಯಕ್ತಿತ್ವವನ್ನು ರೂಪಿಸಿದಂಥ ಪ್ರಭಾವಗಳನ್ನು, ವಿಚಾರಗಳನ್ನು ಅವರ ನೆನಪಿನ ಮೂಸೆಯಿಂದ ಕೆದಕಿ ಹೊರಗೆ ಸಿಡಿಸುವ ಪ್ರಯತ್ನ ಮಾಡಿದಾಗ ಹೊರಹೊಮ್ಮಿದ ಭಾವ ಸ್ಪಂದನಗಳನ್ನು ಅವರ ಮಾತಿನ ಸರಣಿಯಲ್ಲೇ ಇಲ್ಲಿ ದಾಖಲು ಮಾಡಿದ್ದೇನೆ.

**- ಡಾ॥ ಎಚ್. ಎಸ್. ವೆಂಕಟೇಶಮೂರ್ತಿ**

---

**ಓದಿನ ರುಚಿ ಹತ್ತಿಸಿದ ಕಾರಂತರು**

ನಾನು, ಮಾಧ್ಯಮಿಕ ಶಾಲೆಯ ವಿದ್ಯಾರ್ಥಿ ಆಗಿದ್ದಾಗ ಶಿವರಾಮ ಕಾರಂತರ ಬಾಲಪ್ರಪಂಚದ ಸಂಚಿಕೆಗಳನ್ನು ಓದಿದೆ. ನನಗೆ ಓದಿನ ಬಗ್ಗೆ ರುಚಿ ಹುಟ್ಟಿಸಿದ್ದೇ ಕಾರಂತರ

ಈ ಬರವಣಿಗೆ. ಜಗತ್ತಿನ ಬಗ್ಗೆ ಕುತೂಹಲ ಎಚ್ಚರ, ಬೆರಗು ಇವನ್ನು ಕಾರಂತರು ನನ್ನಲ್ಲಿ ಹುಟ್ಟಿಸಿದರು.

ಕಾರಂತರನ್ನು ನಾನು ಮುಖತಃ ನೋಡಿದ್ದು ತುಮಕೂರಿನಲ್ಲಿ. ನಾನು ಆಗ ತುಮಕೂರಿನ ಸರ್ಕಾರಿ ಪ್ರೌಢಶಾಲೆಯಲ್ಲಿ ಎಸ್.ಎಸ್.ಎಲ್.ಸಿ. ವಿದ್ಯಾರ್ಥಿ. ಕಾರಂತರು ಅವತ್ತು 'ಸಂಚಾರದ ಹವ್ಯಾಸ' ಎಂಬ ವಿಷಯವನ್ನು ಕುರಿತು ಮಾತಾಡಿದರು. ಆ ಉಪನ್ಯಾಸ ನನ್ನ ಮೇಲೆ ಗಾಢ ಪ್ರಭಾವ ಬೀರಿತು. ಹೀಗೆ ನನಗೆ ಪ್ರವಾಸದ ಹುಚ್ಚು ಹಿಡಿಸಿದವರು ಕಾರಂತರೇ ಎನ್ನಬೇಕು.

ಆದರೆ ಬರವಣಿಗೆಯ ಆಸಕ್ತಿ ನನ್ನಲ್ಲಿ ಮೂಡಿದಾಗ ಮೊದಲು ಹುಟ್ಟಿದ್ದು ಕವಿತೆಯೇ. ಹೈಸ್ಕೂಲ್ ಪಠ್ಯಗಳಲ್ಲಿ ಇದ್ದ ಕುವೆಂಪು ಅವರ ಕವಿತೆಗಳು, ನಾಟಕಗಳು ನನ್ನ ಮೇಲೆ ಗಾಢ ಪ್ರಭಾವ ಬೀರಿದ್ದವು. ಆ ಪ್ರಭಾವದಿಂದ ಕೆಲವು ಪದ್ಯಗಳನ್ನೂ ಬರೆದಿದ್ದೆ. ಆದರೆ ಆ ಪದ್ಯಗಳಿಗೇ ತಮ್ಮದೇ ಆದ ಸ್ವಂತ ಮುಖ, ಸ್ವರೂಪ ಇದ್ದಿತು ಎನ್ನಲಾರೆ.

ಇಂಟರ್ ಮೀಡಿಯಟ್‌ನಲ್ಲಿ ಓದುತ್ತಿದ್ದಾಗ ತುಮಕೂರಿನಲ್ಲಿ ನಮ್ಮ ಇಂಗ್ಲಿಷ್ ಅಧ್ಯಾಪಕರು ಥಾಮಸ್ ಗ್ರೇಯ್ ಒಂದು ಪದ್ಯ ಪಾಠ ಮಾಡಿದಾಗ, ಆ ಪದ್ಯ ನನ್ನನ್ನು ಗಾಢವಾಗಿ ಪ್ರಭಾವಿಸಿತು. ಆ ಪದ್ಯದ ಗುಂಗಿನಲ್ಲಿ 'ಸಾಹಿತ್ಯ ನಿಧಿ' ಎಂಬ ಒಂದು ಕನ್ನಡ ಪದ್ಯ ರಚಿಸಿದೆ. 'ಕಡಲಿನ ಕತ್ತಲ ಗವಿಯಲ್ಲಿ' ಎಂದು ಶುರುವಾಗುವ ಪದ್ಯ ಅದು. ಅದನ್ನು ನಮ್ಮ ಕಾಲೇಜಿನಲ್ಲೇ ಕನ್ನಡದ ಅಧ್ಯಾಪಕರಾಗಿದ್ದ ಜಿ.ಪಿ. ರಾಜರತ್ನಂ ಓದಿ, ಮೆಚ್ಚಿ, ಪದ್ಯವನ್ನು ಮಾಸ್ತಿಯವರ 'ಜೀವನ' ಪತ್ರಿಕೆಗೆ ಕಳುಹಿಸುವಂತೆ ಸೂಚಿಸಿದರು. 'ಜೀವನ'ದಲ್ಲಿ ಆ ಕವಿತೆ ಪ್ರಕಟವಾಯಿತು. ಹೀಗೆ ಆರಂಭದಲ್ಲಿ ನನ್ನ ಕಾವ್ಯೋದ್ಯಮಕ್ಕೆ ಆಸರೆಯಾಗಿ ನಿಂತವರು ರಾಜರತ್ನಂ ಮತ್ತು ಮಾಸ್ತಿ.

ನಾನು ಕುವೆಂಪು ಅವರನ್ನು ನೇರವಾಗಿ ನೋಡಿದ್ದು ಮೈಸೂರಿನಲ್ಲಿ. ಅವರು ಮಹಾರಾಜಾ ಕಾಲೇಜಿನಲ್ಲಿ ಅಧ್ಯಾಪಕರು. ನಾನು ಬಿ.ಎ. ಆನರ್ಸ್ ವಿದ್ಯಾರ್ಥಿ. ಕುವೆಂಪು ಅವರನ್ನು ಮೊದಲ ಬಾರಿ ನೋಡಿದಾಗ ಕಾಣದ ಕಡಲನ್ನು ಪ್ರತ್ಯಕ್ಷ ಕಂಡಂತಾಯ್ತು. ತ.ಸು. ಶ್ಯಾಮರಾಯರ ಪರಿಚಯ ವಾತ್ಸಲ್ಯದ ಭಾಗ್ಯ ದೊರೆತಿದ್ದು ಆಗಲೇ. ನನ್ನ ಕವಿತೆಗೆ ನೆಲ ಮತ್ತು ನೀರು ಶ್ಯಾಮರಾಯರು, ಗಾಳಿ ಮತ್ತು ಬೆಳಕು ಕುವೆಂಪು.

ಶ್ಯಾಮರಾಯರ ಮತ್ತು ನನ್ನ ಸಂಬಂಧ ವೈಯಕ್ತಿಕವಾದದ್ದು. ವಾತ್ಸಲ್ಯ ಸ್ವರೂಪಿಯಾದದ್ದು. ಅದಕ್ಕೇ ಅವರನ್ನು ನಾನು 'ವಾತ್ಸಲ್ಯದ ಪ್ರತಿಮಾ ಸ್ವರೂಪರು' ಎಂದು ಕರೆದಿದ್ದೇನೆ.

ಕುವೆಂಪು ಮತ್ತು ನನ್ನ ಸಂಬಂಧ ವೈಯಕ್ತಿಕ ನೆಲೆಯದಲ್ಲ. ಅವರದ್ದು ಒಂದು ಬಗೆಯ ಭೂಮ ವ್ಯಕ್ತಿತ್ವ. ಕುವೆಂಪು ಬಗ್ಗೆ ನನಗಿದ್ದ ಗೌರವ, ಬೆರಗೂ ಇವೇ ನಮ್ಮ ನಡುವೆ ಒಂದು ಅಂತರವನ್ನು ಏರ್ಪಡಿಸಿತ್ತು. ಕುವೆಂಪು ನಕ್ಷತ್ರ ಖಚಿತ ನಭವಾಗಿ ನನ್ನನ್ನು ಆವರಿಸಿದ್ದರು. ನನ್ನ ಕಾವ್ಯ ವ್ಯಕ್ತಿತ್ವಕ್ಕೆ ಹೊಸ ಹುಟ್ಟನ್ನು ಕರುಣಿಸಿದವರು ಅವರು.

ಪರಂಪರೆಯ ಬಗ್ಗೆ ಗಾಢವಾದ ಅರಿವು ಮತ್ತು ಶ್ರದ್ಧೆ ಪ್ರಾಪ್ತವಾದದ್ದು ನನಗೆ ನವೋದಯದ ಹಿರಿಯರಿಂದ. ಕುವೆಂಪು ನನಗೆ ಜಾಗತಿಕ ವಿಸ್ತಾರದಲ್ಲಿ ನಮ್ಮ ಪರಂಪರೆಯನ್ನು ಅರಿಯುವ ಕ್ರಮವನ್ನು ಕಲಿಸಿದರು. ತೀನಂಶ್ರೀ ಅವರು ನಮ್ಮ ಪಾರಂಪರಿಕ ಕಾವ್ಯಚಿಂತನೆಯ ಭದ್ರವಾದ ತಿಳುವಳಿಕೆ ಸಮಕಾಲೀನ ಕಾವ್ಯಚಿಂತನೆಗೆ ಮತ್ತು ಸೃಷ್ಟಿಶೀಲತೆಗೆ ಎಷ್ಟು ಮುಖ್ಯ ಎಂಬುದನ್ನು ತೋರಿಸಿಕೊಟ್ಟರು. ಪು.ತಿ. ನರಸಿಂಹಾಚಾರ್ ಮತ್ತು ತ.ಸು. ಶ್ಯಾಮರಾಯರು ಪ್ರಾಚೀನ ಕಾವ್ಯ ಪರಂಪರೆಯ ಮಹೋನ್ನತ ಸಾಧನೆಯ ಬಗ್ಗೆ ನನ್ನಲ್ಲಿ ಅರಿವು ಮೂಡಿಸಿದರು. ಹೀಗೆ ನವೋದಯದ ಹಿರಿಯರಿಂದ ನನಗೆ ಗಾಢವಾದ ಪರಂಪರೆಯ ಪ್ರಜ್ಞೆ ಉಂಟಾಯಿತು. ನನ್ನ ದೃಷ್ಟಿಯಲ್ಲಿ ಒಬ್ಬ ಬರಹಗಾರನಾಗುವುದು ಎಂದರೇ ಒಂದು ಪರಂಪರೆಯಲ್ಲಿ ನಿಂತು ಮಾತನಾಡತೊಡಗುವುದು. ಪರಂಪರೆಯನ್ನು ಮೈಗೂಡಿಸಿಕೊಳ್ಳದ ಹೊರತು ಒಬ್ಬ ಲೇಖಕ ನಿಜವಾದ ಲೇಖಕ ಆಗಲಾರ.

### ಪರಂಪರೆಯ ನೆಲೆಯಲ್ಲಿ ವೈಯಕ್ತಿಕ ಧ್ವನಿ

ನವೋದಯ ಪರಂಪರೆಯ, ಅದರಲ್ಲೂ ಮುಖ್ಯವಾಗಿ ಕುವೆಂಪು ಅವರ ಗಾಢ ಪ್ರಭಾವ ನನ್ನ ಮೇಲೆ ಇದ್ದರೂ, ಪರಂಪರೆಯ ನೆಲೆಯಲ್ಲೇ ನಾನು ನನ್ನ ವೈಯಕ್ತಿಕ ಧ್ವನಿಯನ್ನು ಮೇಲೆತ್ತುವ ಪ್ರಯತ್ನ ಮಾಡಿದೆ. ಬದುಕನ್ನು ನಾನು ನೋಡುವ, ಪರಿಭಾವಿಸುವ ಕ್ರಮ ನನ್ನನ್ನು, ನನ್ನ ಹಿರಿಯರಿಂದ ಬೇರ್ಪಡಿಸಿಕೊಳ್ಳಲು ನನಗೆ ಸಹಾಯ ಮಾಡಿತು ಎಂದು ನಾನು ಭಾವಿಸುತ್ತೇನೆ.

ಬದಲಾದ ಭಾರತದ ಸಂದರ್ಭದಲ್ಲಿ ಮಾನವ ಸಂಬಂಧದ ವಿಘಟನೆ ನನ್ನ ಮುಖ್ಯ ಕಾವ್ಯವಸ್ತುವಾಗಲಿಕ್ಕೆ ಈ ದೃಷ್ಟಿಕೋನದ ಭಿನ್ನತೆಯೇ ಕಾರಣ. ಜಾತಿ, ಭಾಷೆ, ವರ್ಣ ಎಲ್ಲವೂ ಮನುಷ್ಯ ಸಂಬಂಧದ ವಿಘಟನೆಗೆ ಕಾರಣವಾಗಿವೆ.

ಆಧುನಿಕ ರಾಜಕೀಯ ಸಂದರ್ಭ ಈ ವಿಘಟನೆಯು ಮತ್ತಷ್ಟು ತೀವ್ರವಾಗಿ, ತ್ವರಿತವಾಗಿ ನಡೆಯಲು ಕಾರಣವಾಗಿದೆ. ಈ ಅರಿವು ನನ್ನ ಕಾವ್ಯದಲ್ಲಿ ಕಾಣುವ ಗಾಢವಾದ ವಿಷಾದಕ್ಕೆ ದಾರಿ ಮಾಡಿದೆ. ರಾಂಗ್ ನಂಬರ್‌ಗೆ ಟೆಲಿಫೋನ್ ಮಾಡಿ ಉತ್ತರಕ್ಕೆ ಕಾಯುತ್ತಾ ಕೂತಿದ್ದೇವೆ. ಇದು ನಮ್ಮ ದಯನೀಯ ಪರಿಸ್ಥಿತಿ. ಇಂಥ ಸಂದರ್ಭದಲ್ಲಿ ಮಾನವೀಯತೆ ಮತ್ತು ಪ್ರೀತಿಯ ಅನ್ವೇಷಣೆಯೇ ನನ್ನ ಕಾವ್ಯದ ಮುಖ್ಯ ಕಾಳಜಿಯಾಗಿ ಪರಿಣಮಿಸಿದೆ ಎನ್ನಬಹುದು. ನಿಜವಾದ ಜೀವನ ಪ್ರೀತಿ ಉಳ್ಳವನು ಬದುಕನ್ನು ಯಾವತ್ತಿಗೂ ವಿಕೃತಿಗೊಳಿಸಲಾರ.

ಜಗತ್ತು ಈವತ್ತು ಭ್ರಷ್ಟವಾಗಿದೆ, ವಿಚ್ಛಿದ್ರವಾಗಿದೆ ಎಂಬ ಅರಿವು ಇದ್ದರೆ ಮಾತ್ರ ಸಾಲದು. ಜಗತ್ತು ಹೀಗಿರುವುದಕ್ಕೆ ನಾವೂ ಕಾರಣ ಎಂಬ ಎಚ್ಚರ ಮತ್ತು ಪಾಪಪ್ರಜ್ಞೆ, ಪ್ರತಿಯೊಬ್ಬರ ಮನಸ್ಸಿನಲ್ಲೂ ಹುಟ್ಟಿಕೊಂಡಾಗ ಮಾತ್ರ ಪರಿಸ್ಥಿತಿ ಬದಲಾದೀತು. ಅಂಥ ಎಚ್ಚರ ಮತ್ತು ಪ್ರಜ್ಞೆಯನ್ನು ಮೂಡಿಸುವ ಕೇಂದ್ರ ಕಾಳಜಿ ನನ್ನ ಸೃಷ್ಟಿಶೀಲತೆಯ ಹಿಂದೆ.

**ಈಗ ಮೂಲಜಲ ಬಗ್ಗಡವಾಗಿ ಕೆಸರು**
**ಒಳಗೂ ಹೊರಗು, ಕೊಳೆತು ನಾರಿದೆ ತೀರ್ಥ**
**ದೇವಾಲಯದ ಮೂರ್ತಿಗಳು ಭಗ್ನ: ತಕ್ಕಡಿ**
**ಯೆಲ್ಲ ತಲೆ ಕೆಳಗು. ತಿನ್ನುವನ್ನದ ತುಂಬ**
**ಕಲ್ಲು, ಎಲ್ಲೆಂದರಲ್ಲಿ ಬೆಳೆದು ದಂಡಕಾರಣ್ಯ**
**ಹದ್ದು-ನರಿ-ತೋಳದ ರಾಕ್ಷಸ ರಾಜ್ಯ.**
**ದಾರಿ ಒಂದೇ: ಇದುವೆಲ್ಲವನ್ನೂ ಕೊಚ್ಚಿ**
**ಮತ್ತೆ ಕಟ್ಟಬೇಕಾಗಿದೆ ಹೊಸ ಜಗತ್ತ**

ಈಗ ಒಂದು ಹೊಸ ಜಗತ್ತನ್ನು ಕಟ್ಟಬೇಕಾಗಿದೆ. ಅದಕ್ಕೆ ಬೇಕಾಗಿರುವಂಥ ಮೂಲ ದ್ರವ್ಯ ಮನುಷ್ಯನಲ್ಲಿರುವ ಒಳ್ಳೆಯತನ. ಅದರ ಬಗ್ಗೆ—ಅಂದರೆ ಮನುಷ್ಯನ ಒಳ್ಳೆಯತನದ ಬಗ್ಗೆ ನನಗೆ ಗಾಢವಾದ ನಂಬಿಕೆಯಿದೆ.

ಸಮಾನತೆಯನ್ನು ಕಾಣುವುದು, ಕಟ್ಟುವುದು ಆಧ್ಯಾತ್ಮ ಸರ್ವಂ ಖಲ್ವಿದಂ ಬ್ರಹ್ಮ ಎಂಬ ಮಾತಿನ ಸಾರ ಅದು. ಅದ್ವೈತವನ್ನು ಒಂದು ಆಧಾರತತ್ವವಾಗಿ ಅಂಗೀಕರಿಸುವ ಮನೋಭಾವವೇ ಆಧ್ಯಾತ್ಮ ನನ್ನ ಆಧ್ಯಾತ್ಮಿಕ ಚಿಂತನೆಯ ಸ್ವರೂಪ ಇದು. ಅದ್ವೈತವನ್ನು ಸಾಮಾಜಿಕ ನೆಲೆಯಲ್ಲಿ ವ್ಯಾಖ್ಯಾನಿಸಿದಾಗ ಅದು ಗಾಂಧಿ ಪ್ರತಿಪಾದಿಸಿದ ಸರ್ವೋದಯದ ಅರ್ಥವನ್ನು ಪಡೆದುಕೊಳ್ಳುತ್ತದೆ. ನನ್ನ ಆಧ್ಯಾತ್ಮ ಮೇಲಕ್ಕೆ ಜಿಗಿಯುವ ಪ್ರವೃತ್ತಿಯಲ್ಲ; ಅದು ವಾಸ್ತವದ ನೆಲೆಗೆ ಎಷ್ಟು ಅನ್ವಯವಾಗುತ್ತದೆ ಎಂಬ ತುಡಿತ.

**ಉಡುಗಣವೇಷ್ಟಿತ**
**ಚಂದ್ರ ಸುಶೋಭಿತ**
**ದಿವ್ಯಾಂಬರ ಸಂಚಾರಿ**
**ಕಣ್ಣ ನೀರಿನಲಿ**
**ಮಣ್ಣ ಧೂಳಿನಲ್ಲಿ**
**ಹೊರಳುತ್ತಿರುವರ ಸಹಚಾರಿ!**

ದಿವ್ಯಾಂಬರ ಸಂಚಾರಿ, ಮಣ್ಣ ಧೂಳಿನಲಿ ಹೊರಳುತ್ತಿರುವರ ಸಹಚಾರಿಯಾಗಿ ಮಾತ್ರ ನನಗೆ ಪ್ರಸ್ತುತನಾಗುತ್ತಾನೆ. ಮುಖ್ಯನಾಗುತ್ತಾನೆ, ಹೀಗೆ ನನ್ನ ಆಧ್ಯಾತ್ಮಕ್ಕೆ ನೆಲವೇ ನೆಲೆ.

ನನ್ನ ಸದ್ಯದ ತುಡಿತ, ಚರಿತ್ರೆಯ ಮತ್ತು ಮನುಷ್ಯನ ಸಂಬಂಧದ ವಿಶ್ಲೇಷಣೆ. ಚರಿತ್ರೆಯನ್ನು ಎರಡು ರೀತಿ ಓದಬಹುದು. ಒಂದು, ಅದನ್ನು ಪುರಾಣವಾಗಿ ಓದುವುದು, ಇನ್ನೊಂದು ಅದನ್ನು ವೈಭವೀಕರಿಸದೆ, ನಮ್ಮ ವೈಚಾರಿಕ ಅಗತ್ಯಕ್ಕೆ ತಕ್ಕಂತೆ ಓದುವುದು. ಈ ಎರಡೂ ಓದುಗಳು ಮನುಷ್ಯನ ಜೀವನವನ್ನು ಸ್ಥಗಿತಗೊಳಿಸುತ್ತವೆ. ಜೀವನ ಮತ್ತೆ

ಚಲನಶೀಲವಾಗಬೇಕಾದರೆ ನಾವು ಚರಿತ್ರೆಯಿಂದ ಕಲಿಯಬೇಕಾದ್ದನ್ನು ಕಲಿತು ಅದನ್ನು ದಾಟಿ ಮುಂದೆ ಹೋಗಬೇಕು. ಹೀಗೆ ಚರಿತ್ರೆಯಿಂದ ಪಾಠ ಕಲಿತು, ಅದನ್ನು ದಾಟಿದ ವ್ಯಕ್ತಿ ಬಸವಣ್ಣ. ಈ ಹೊಸ ಸಂವೇದನೆ ವ್ಯಕ್ತವಾಗಿರುವ ಕೆಲವು ಸಾಲು ನೆನಪಾಗುತ್ತಿವೆ:

**ಹೊಸ ತಿಳಿವಿನೆಚ್ಚರದಲ್ಲಿ ಲೋಕ ಸಾಗಿದೆ**
**ಮಗಳೆ. ದಾಟ ಬಾ ಮಹದೇವಿಯಕ್ಕನ ಹಾಗೆ**
**ನಿರ್ಭಯದ ನಿಲುವಿಗೆ. ಆತ್ಮಗೌರವದ ಗಿರಿಶಿಖರ**
**ದೆತ್ತರದಲ್ಲಿ ಅರಳಿಕೊಳ್ಳಲಿ ಬದುಕು ಹೊಸ ಬೆಳಕಿಗೆ**

ಚರಿತ್ರೆಯನ್ನು ದಾಟುವ ಯತ್ನವನ್ನು ನಮ್ಮ ಹಿರೀಕರೂ ತಮ್ಮದೇ ಕ್ರಮಗಳಲ್ಲಿ ಮಾಡುತ್ತಾ ಬಂದಿದ್ದಾರೆ. ಕುವೆಂಪು ಆಧ್ಯಾತ್ಮದ ಮೂಲಕ, ಕಾರಂತರು ವೈಚಾರಿಕತೆಯ ಮೂಲಕ. ಬೇಂದ್ರೆ ಅನುಭಾವದ ಮೂಲಕ ಚರಿತ್ರೆಯಿಂದ ತನ್ನ ಭೂತ ಕಾಲದ ಉಪಾಧಿಗಳಿಂದ, ವರ್ತಮಾನ ಮಿತಿಗಳಿಂದ ಮುಕ್ತವಾಗಲು ಹೊರದಾರಿಯನ್ನು ಕಂಡುಕೊಂಡವರು.

ಚರಿತ್ರೆಯಿಂದ ಆದ ಗಾಯಗಳ ಗುರುತು ನನ್ನ ಎದೆಯ ತುಂಬ ಇದೆ. ಆ ಗಾಯಗಳನ್ನು ಮಾಯಿಸುವ ಮದ್ದನ್ನು ನನ್ನ ಕಾವ್ಯ ಈಗ ಹುಡುಕುತ್ತಿದೆ.... ಸದ್ಯಕ್ಕಂತೂ ಆಧ್ಯಾತ್ಮ ವೈಚಾರಿಕತೆ, ಅನುಭಾವದ ಸಿದ್ಧಮಾರ್ಗಗಳು ನಮ್ಮ ಕಣ್ಣ ಮುಂದೇ ಇವೆ. ಆದರೆ ಇಂಥ ಮಾರ್ಗಗಳು ಎಷ್ಟು ಹೆಚ್ಚಿದ್ದರೆ ಅಷ್ಟು ಒಳ್ಳೆಯದು. ಆದುದರಿಂದಲೇ ಪ್ರತಿಯೊಬ್ಬ ಕವಿ ಕೂಡ ತನ್ನದೇ ದಾರಿ ಹುಡುಕುವ ಪ್ರಯತ್ನ ಮಾಡುತ್ತಲೇ ಇರಬೇಕು.

*(ಸಾಪ್ತಾಹಿಕ ಪುರವಣಿ: ಪ್ರಜಾವಾಣಿ-20.12.1998)*



# ಮುಖಾಮುಖಿ - 2

*ಪಂಪ ಪ್ರಶಸ್ತಿ ಸಂದ ಸಂದರ್ಭದಲ್ಲಿ ಜಿಎಸ್‌ಎಸ್, ಭದ್ರಾವತಿ ಆಕಾಶವಾಣಿಗಾಗಿ ನೀಡಿದ ಸಂದರ್ಶನ, ಫೆಬ್ರವರಿ, 1999*

---

ಡಿಎಸ್‌ಎನ್: ಕನ್ನಡ ಸಾಹಿತ್ಯಲೋಕದಲ್ಲಿ ಜಿಎಸ್‌ಎಸ್ ಎಂದೇ ಹೆಸರುವಾಸಿಯಾದಂತಹ ಡಾ|| ಜಿ.ಎಸ್. ಶಿವರುದ್ರಪ್ಪ ಅವರನ್ನು ನಮ್ಮ ಕೇಳುಗರಿಗೆ ವಿಶೇಷವಾಗಿ ಪರಿಚಯ ಮಾಡಿಕೊಡುವ ಅವಶ್ಯಕತೆ ಇಲ್ಲ ಅಂತ ಕಾಣುತ್ತೆ. 'ಎಲ್ಲ ಕೇಳಲಿ ಎಂದು ನಾನು ಹಾಡುವುದಿಲ್ಲ, ಹಾಡುವುದು ಅನಿವಾರ್ಯ ಕರ್ಮ ಎನಗೆ' ಎಂದೇ ಕಳೆದ 50 ವರ್ಷಗಳಿಗಿಂತಲೂ ಹೆಚ್ಚು ಕಾಲದಿಂದ ಕನ್ನಡ ಕಾವ್ಯ ರಸಿಕರ ಮುಂದೆ ಎದೆ ತುಂಬಿ ಹಾಡಿದ ಕವಿ ಶಿವರುದ್ರಪ್ಪ ಅವರು. ಇವರು ಕವಿ ಮಾತ್ರ ಅಲ್ಲ, ಕಾವ್ಯಮೀಮಾಂಸೆ ಕ್ಷೇತ್ರವಲ್ಲಿ ಕೂಡಾ ಕೆಲಸಮಾಡಿ ವಿದ್ವಾಂಸರು ಅಂತ ಹೆಸರು ಪಡೆದವರು. ಇದರ ಜತೆಗೆ ಕನ್ನಡ ಪ್ರಾಧ್ಯಾಪಕರಾಗಿ ಹಲವಾರು ಪ್ರತಿಭಾವಂತ ಶಿಷ್ಯರನ್ನು ಕನ್ನಡ ಸಾಹಿತ್ಯಕ್ಕೆ ಕೊಟ್ಟವರು. ಇಂತಹ ಜಿಎಸ್‌ಎಸ್ ಅವರು ಇವತ್ತು ನಮ್ಮೊಡನಿದ್ದಾರೆ. ಅವರೊಡನೆ ಇವತ್ತಿನ ಸಾಹಿತ್ಯ ಮತ್ತು ಸಾಹಿತ್ಯ ವಾತಾವರಣದ ಬಗ್ಗೆ ಲೋಕಾಭಿರಾಮವಾಗಿ ಮಾತಾಡುವ ಆಶಯ ನಮ್ಮದು. ನಮಸ್ಕಾರ ಸರ್.

ಜಿಎಸ್‌ಎಸ್: ನಮಸ್ಕಾರ.

ಡಿಎಸ್‌ಎನ್: ಮೊದಲಿಗೆ, ಇತ್ತೀಚೆಗೆ ತಮಗೆ ಪಂಪ ಪ್ರಶಸ್ತಿ ಬಂದಿದೆ ಸರ್....

ಜಿಎಸ್‌ಎಸ್: ಹೌದು.

ಡಿಎಸ್‌ಎನ್: ನಿಮಗೆ ದೊರಕಿರುವ ಅನೇಕ ಪ್ರಶಸ್ತಿಗಳ ನಡುವೆ ಇದೊಂದು ದೊಡ್ಡ ಪ್ರಶಸ್ತಿನೇ. ಕರ್ನಾಟಕ ಸರ್ಕಾರ ಕೊಡತಕ್ಕಂತಹ ಅತ್ಯುನ್ನತ ಸಾಹಿತ್ಯ ಪ್ರಶಸ್ತಿ...

ಜಿಎಸ್‌ಎಸ್: ಖಂಡಿತವಾಗಿಯೂ.

ಡಿಎಸ್‌ಎನ್: *ಈ ಪಂಪ ಪ್ರಶಸ್ತಿ ನಿಮಗೆ ನಿಮ್ಮ ಸಾಹಿತ್ಯ ಜೀವನದಲ್ಲಿ ಎಷ್ಟು ಮುಖ್ಯ ಅನಿಸುತ್ತೆ ಸರ್ ಮತ್ತು ಯಾಕೆ?*

ಜಿಎಸ್‌ಎಸ್: ಪ್ರಶಸ್ತಿಗಳು ಬಹಳ ಮುಖ್ಯ ಅಂತ ಯಾವತ್ತೂ ಅನಿಸಿಲ್ಲ. ಯಾಕೆಂದರೆ, ಯಾವತ್ತೂ ನಾನು ಪ್ರಶಸ್ತಿಗಳನ್ನು ನಿರೀಕ್ಷಿಸಿದವನೇ ಅಲ್ಲ. ಬಹುಶಃ ಪ್ರಶಸ್ತಿಗಳು ಬಂದಿದ್ದರಿಂದ ಸಂತೋಷವಾಗಿಲ್ಲ ಅಂತ ಹೇಳಲಾರೆ. ಸಂತೋಷವಾಗಿದೆ. ರಾಷ್ಟ್ರೀಯವಾದ ಪ್ರಶಸ್ತಿ—ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಮತ್ತು ಖಾಸಗಿಯಾದ ಭೂಸನೂರುಮಠ ಪ್ರಶಸ್ತಿ, ಶಿವಮೊಗ್ಗ ಕರ್ನಾಟಕದ ಸಂಘದ ಸದಸ್ಯತ್ವ, ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಇಂತಹವೆಲ್ಲ ಬಂದಿವೆ. ಇವುಗಳು ಸಹಜವಾಗಿಯೇ ಒಂದು ಸಾಂಸ್ಕೃತಿಕ ಸಂದರ್ಭದಲ್ಲಿ ಕೆಲಸ ಮಾಡಿದ ಅನೇಕರಿಗೆ ಬರುವಂತಹ ಪ್ರಶಸ್ತಿಗಳೇ. ಪಂಪ ಪ್ರಶಸ್ತಿ ನೀವು ಹೇಳಿದ ಹಾಗೆ, ಒಂದು ರಾಜ್ಯದ ಅತ್ಯಂತ ಉನ್ನತ ಮಟ್ಟದ ಪ್ರಶಸ್ತಿ ಎನ್ನುವ ಕಾರಣಕ್ಕೆ ಉಳಿದ ಪ್ರಶಸ್ತಿಗಳಿಗಿಂತ ಇದು ಹೆಚ್ಚು ಪ್ರಿಯವಾದದ್ದು ಮತ್ತು ಸಂತೋಷವಾದದ್ದು ಆಗಿದೆ ಅಂತ ಹೇಳೋದಕ್ಕೆ ಸಂಕೋಚ ಪಡಬೇಕಾಗಿಲ್ಲ ನಾನೇನೂ...

ಡಿಎಸ್‌ಎನ್: *ಪಂಪನ ಹೆಸರಿನಲ್ಲಿ ಇರೋದ್ರಿಂದ ಏನಾದರೂ ವಿಶೇಷವಾದ ಒಲವು..*

ಜಿಎಸ್‌ಎಸ್: ಬಹಳ ಬಹಳ ಬಹಳ ಇಷ್ಟವಾದದ್ದು. ಯಾಕೆಂದರೆ ಕನ್ನಡ ಸಾಹಿತ್ಯದ ಸೀಮಾಪುರುಷರಿಬ್ಬರು. ಪಂಪ ಮತ್ತು ಕುವೆಂಪು. ಪಂಪನಿಂದ ಕುವೆಂಪುವರೆಗೆ ಅನ್ನುವ ಸಾಹಿತ್ಯದ ಒಂದು ಮಾತಿದೆಯಲ್ಲಾ ಅದು ಪ್ರಾಸಂಗಿಕ ಅಂತ ನನಗನಿಸ್ತಲೇ ಇಲ್ಲ. ಇವೆರಡು ಹೆಸರುಗಳು ಎರಡು ಸಾಂಸ್ಕೃತಿಕ ಸೀಮಾರೇಖೆಗಳನ್ನು ಸೂಚಿಸ್ತವೆ ಮತ್ತು ಪಂಪನಿಗೂ ಕುವೆಂಪು ಅವರಿಗೂ ಅನೇಕ ಸಾಮ್ಯಗಳಿವೆ. ಪಂಪ "ಮನುಷ್ಯ ಜಾತಿ ತಾನೊಂದೆ ವಲಂ" ಅಂತ ಹೇಳಿದಾನೆ. ಕುವೆಂಪು "ವಿಶ್ವ ಮಾನವ" ಕಲ್ಪನೆಯನ್ನು ಅದರ ಆಧಾರದ ಮೇಲೆ ಕಟ್ತಾರೆ. ಪಂಪ ರಾಜತ್ವವನ್ನು ಕುರಿತು ಹೇಗೆ ಒಂದು ರೀತಿಯಾದ ಪ್ರತಿಭಟನೆ ಸೂಚಿಸಿದನೋ ಹಾಗೆ ಕುವೆಂಪು ರಾಜತ್ವದ ಬಗ್ಗೆ ಪ್ರತಿಭಟನೆ ಸೂಚಿಸ್ತಾರೆ. ಪಂಪ ಎಷ್ಟರ ಮಟ್ಟಿಗೆ ನಿಸರ್ಗ ಪ್ರೀತಿಯ ಬಗ್ಗೆ ಅದಮ್ಯವಾದ ಹಂಬಲವನ್ನುಳ್ಳವನಾಗಿದ್ದನೋ ಕುವೆಂಪು ಕೂಡಾ ಅಷ್ಟೇ ಗಾಢವಾದ ನಿಸರ್ಗ ಪ್ರೀತಿ ಉಳ್ಳವರು. ಪಂಪ ಕನ್ನಡದ ಮೊಟ್ಟಮೊದಲ ಕಥಾವೈತ್ಯ ಪ್ರತಿಭೆಯಾದರೆ ಕುವೆಂಪು ಬಹುಶಃ ಕೊಟ್ಟ ಕೊನೆಯ ಕಥನದ ಮಹತ್ವದ ಕವಿ ಅಂತ ಹೇಳಬಹುದು.

ಡಿಎಸ್‌ಎನ್: *ಕೊಟ್ಟಕೊನೆ ಅಂತ ಹೇಳ್ತೀರಾ ಸರ್...?*

ಜಿಎಸ್ಎಸ್: ಸದ್ಯಕ್ಕೆ, ನಮ್ಮ ಮಟ್ಟಿಗೆ... ಈ ದೃಷ್ಟಿಯಿಂದ ಪಂಪನಿಗೂ ಕುವೆಂಪುಗೂ ಬಹಳ ಸಾಮ್ಯವಿದೆ ಮತ್ತು ಕುವೆಂಪು ಶಿಷ್ಯನಾಗಿ ಪಂಪನ ಹೆಸರಿನಲ್ಲಿ ಬರುವ ಪ್ರಶಸ್ತಿಯನ್ನು ಪಡೆದುಕೊಳ್ಳುವುದು ಮತ್ತು ಪಂಪನ ಬನವಾಸಿಯೂ ಕುವೆಂಪು ಅವರ ಕುಪ್ಪಳ್ಳಿಯೂ ಒಟ್ಟಿಗೆ ಕೂಡಿರುವ ಸಹ್ಯಾದ್ರಿ ಪರಿಸರದ ಶಿಕಾರಿಪುರವು ನನ್ನೂರು ಆಗಿರುವುದರಿಂದ ಇದು ಇನ್ನೂ ಹೆಚ್ಚು ಪ್ರಿಯವಾಗಿದೆ ಎನ್ನಬಹುದು.

ಡಿಎಸ್ಎನ್: *ಅಂದ ಹಾಗೆ ಪ್ರಶಸ್ತಿಗಳ ಬಗ್ಗೆಯೇ ಒಂದು ಮಾತಿದೆ. ಈ ಇತ್ತೀಚಿನ ದಿನಗಳಲ್ಲಿ ಊರಿಗೊಂದು ಪ್ರಶಸ್ತಿಯಾಗಿದೆ ಅಂತ. ಅನೇಕ ಸಂಘ ಸಂಸ್ಥೆಗಳು 500 ರೂಪಾಯಿಯಿಂದ 20,000 ರೂಪಾಯಿಗಳವರೆಗೆ ಅನೇಕ ಪ್ರಶಸ್ತಿಗಳನ್ನು ಕೊಡ್ತಾ ಇದ್ದಾರೆ. ಯಾರಿಗೆ ಯಾತಕ್ಕೋಸ್ಕರ ಯಾವ ಪ್ರಶಸ್ತಿ ಕೊಡ್ತಾ ಇದ್ದಾರೆ ಅಂತ ಗೊಂದಲಾನೇ ಉಂಟಾಗಿದೆ. ಇದರಿಂದಾಗಿ ಒಳ್ಳೆಯ ಸಾಹಿತ್ಯ ಬರೀತಿರುವವರು ಯಾರು? ಕೆಟ್ಟ ಸಾಹಿತ್ಯ ಬರೀತಿರುವವರು ಯಾರು? ಅಭಿರುಚಿ ಯಾವುದು ಉತ್ತಮವಾದದ್ದು ಅನ್ನುವುದರ ಬಗ್ಗೆ ಗೊಂದಲನೇ ಎದ್ದಿದೆ. ಇದರ ಬಗ್ಗೆ ನಿಮ್ಮ ಪ್ರತಿಕ್ರಿಯೆ ಏನು ಸರ್?*

ಜಿಎಸ್ಎಸ್: ಒಂದು ಕಾಲಕ್ಕೆ ಪ್ರಶಸ್ತಿಗಳೇ ಇರಲಿಲ್ಲ. ಮಹತ್ವದ ಕೆಲಸ ಪಡೆಯದೇ ಹೋದ ಅನೇಕ ದೊಡ್ಡ ದೊಡ್ಡವರು ನಮ್ಮಲ್ಲಿದ್ದಾರೆ ಎನ್ನುವುದು ಒಂದು ಕೊರಗಿನ ವಿಷಯ. ಆದರೆ ಇವತ್ತು ಪ್ರಶಸ್ತಿಗಳು ಸಿಕ್ಕಾಪಟ್ಟೆ ಇವೆ. ಯಾರಿಗೆ ಬೇಕಾದ್ರೂ ಪ್ರಶಸ್ತಿ ಬರಬಹುದು. ಪ್ರಶಸ್ತಿಗಳಿಂದ ತಪ್ಪಿಸಿಕೊಳ್ಳಲಾರದಷ್ಟು ಪ್ರಶಸ್ತಿಗಳು ನಮ್ಮಲ್ಲಿ ಇವೆ ಅಂತ ಹೇಳಬಹುದು. ಹೀಗಾಗಿ ಕನ್ನಡ ಸಾಹಿತ್ಯ ಪರಿಸರದಲ್ಲಿ ಅಲ್ಪಸ್ವಲ್ಪ ಕೆಲಸ ಮಾಡಿದ ಯಾರೂ ಕೂಡಾ ಪ್ರಶಸ್ತಿಯ ಪರಿಗಣನೆಗೆ ಅರ್ಹರಾಗದೇ ಹೋಗುವಂತಿಲ್ಲದ ಕಾಲ ಬಂದಿರುವುದು ಒಳ್ಳೆದು ಅಂತ ಒಂದು ದೃಷ್ಟಿಯಲ್ಲಿ ಹೇಳಿದ್ರೂ ಕೂಡಾ, ನೀವು ಹೇಳಿದ ಹಾಗೆ ಇಷ್ಟೊಂದು ಸಿಕ್ಕಾಪಟ್ಟೆ ಪ್ರಶಸ್ತಿಗಳಿಂದ ಯಾರು ಯಾವುದಕ್ಕೆ ಅರ್ಹರು ಅನ್ನುವುದು ಗೊತ್ತಾಗದಿರೋ ಸಾಧ್ಯತೆಗಳೂ ಉಂಟು.

ಡಿಎಸ್ಎನ್: *ಇದರಿಂದ ಅಭಿರುಚಿಯ ಗೊಂದಲ ಉಂಟಾಗೋದಿಲ್ವಾ ಸರ್?*

ಜಿಎಸ್ಎಸ್: ಒಳ್ಳೇದು ಕೆಟ್ಟದ್ದು ಅನ್ನುವ ಅಭಿರುಚಿಯನ್ನು ನಿರ್ಣಯ ಮಾಡುವವರು ಓದುಗರು. ಆದುದರಿಂದ ಗೊಂದಲ ಬಹುಶಃ ಉಂಟಾಗಲಾರದು. ಅವರಿಗೆ ಗೊತ್ತಾಗುತ್ತೆ—ನೋಡಿ ಇವರಿಗೆ ಈ ಪ್ರಶಸ್ತಿ ಕೊಟ್ಟಿದ್ದಾರೆ, ಇದು

ಕೊಡಬಾರದಾಗಿತ್ತು ಅಂತ ಹೇಳುವವರೂ ಇದ್ದಾರೆ. ಆ್ಞ... ಇವರಿಗೆ ಎಂದೋ ಬರಬೇಕಾಗಿತ್ತು ಇವತ್ತು ಬಂದಿದೆ ಅಂತ ಹೇಳುವವರೂ ಇದ್ದಾರೆ. ಅಲ್ದೇ ನಮ್ಗೆ ಗೊತ್ತಾಗುತ್ತೆ ಅನೇಕ ಕಡೆ... ಪ್ರಶಸ್ತಿಗಳು ಬಂದಾಗ ಪಡೆದಂತಹ ಜನ ಅದಕ್ಕೆ ಅರ್ಹರೇ ಅಲ್ವೇ ಅನ್ನುವ ಅನುಮಾನಗಳು. ಆ ಅನುಮಾನಗಳ ಕುರಿತು ಯೋಚನೆ ಮಾಡುವಂತಹ ಸಂದರ್ಭ ಕೂಡಾ ನಮ್ಮ ಸಹೃದಯರಿಗೆ ಇದೆ. ಆದ್ದರಿಂದ ಅಭಿರುಚಿಯಲ್ಲಿ ಗೊಂದಲ ಏನೂ ಉಂಟಾಗುವುದಿಲ್ಲ ಅಂತ ಕಾಣುತ್ತೆ.

ಡಿಎಸ್ಎನ್: *ಬಹುಶಃ ಇದೇ ಮಾತನ್ನು ವಿಮರ್ಶಾ ರಾಜಕಾರಣದ ಬಗ್ಗೆ ಕೂಡಾ ಹೇಳಬಹುದೂಂತ ಕಾಣುತ್ತೆ. ಯಾಕಂದ್ರೆ ತಮ್ಮದೇ ಪತ್ರಿಕಾ ವಿಮರ್ಶೆ ಮೂಲಕ ಯಾರನ್ನು ಬೇಕಾದ್ರೆ ತುಳೀಬಹುದು ಯಾರನ್ನು ಬೇಕಾದ್ರು ಎತ್ತಿ ಹಿಡೀಬಹುದು ಅನ್ನುವ ಒಂದು ರೀತಿಯ ವಿಮರ್ಶೆ ಗುಂಪುಗಾರಿಕೆ ಕೂಡಾ ಹೆಚ್ಚಾಗ್ತಿದೆ ಅನ್ನೋ ಮಾತು ಕೇಳಿ ಬರ್ತಾ ಇದೆ...*

ಜಿಎಸ್ಎಸ್: ಹೌದು, ಉದಾಹರಣೆಗೆ ನನ್ನ ವಿಚಾರನೇ ತಗೊಳ್ಳಿ. ಕನ್ನಡ ವಿಮರ್ಶೆ ನನ್ನನ್ನು ಅಷ್ಟಾಗಿ ಉತ್ಸಾಹದಿಂದ ಚರ್ಚಿಸಿಲ್ಲ. ಆದ್ರೆ ಮರುಮುದ್ರಣದ ಮೇಲೆ ಮರುಮುದ್ರಣಗಳು ಬರುವ ಹಾಗೆ ನಿಶ್ಯಬ್ದವಾಗಿ ನನ್ನ ಕೃತಿಗಳು ಖರ್ಚಾಗುತ್ತಿರುವುದು ನೋಡಿದ್ರೆ ಆ ವಿಮರ್ಶೆಗೆ ಮೂಲವಾದ ಯಾವುದೋ ಇನ್ನೊಂದು ಯಾವುದೋ ಒಂದು ಅಂತರಂಗ ಇದೆಯಲ್ಲಾ ಕನ್ನಡ ಜನಮನಸ್ಸಿನ ಅಂತರಾತ್ಮ ಅದು ಒಪ್ಪಿಕೊಳ್ತಾ ಇದೆ ನನ್ನನ್ನ. ನನಗೆ ಅದೇ ದೊಡ್ಡ ವಿಮರ್ಶೆ ಅಂತ ಅನ್ನಿಸ್ತಾ ಇದೆ.

ಡಿಎಸ್ಎನ್: *ವಿಮರ್ಶಾ ರಾಜಕಾರಣದಿಂದ ಆತ್ಯಂತಿಕವಾಗಿ ಯಾವುದೇ ಪ್ರಯೋಜನ ಇಲ್ಲ....*

ಜಿಎಸ್ಎಸ್: ಇಲ್ಲ. ಅದು ಬಹಳ ತಾತ್ಕಾಲಿಕ ಕೂಡಾ ಹೌದು.

ಡಿಎಸ್ಎನ್: *ಆಮೇಲೆ, ನೀವು ಬರೆಯಲಿಕ್ಕೆ ಆರಂಭ ಮಾಡಿದ ಕಾಲದಲ್ಲಿ ಸಾಹಿತ್ಯಿಕ ವಾತಾವರಣ ಹೇಗಿತ್ತು ಸರ್? ಸಾಕಷ್ಟು ಪ್ರೋತ್ಸಾಹ ಹಿರಿಯರಿಂದ ಸಿಗ್ತಾ ಇತ್ತಾ? ಇತ್ತೀಚಿನ ದಿನಗಳಲ್ಲಿ ಸಾಹಿತ್ಯಿಕ ಪ್ರೋತ್ಸಾಹ ಹಿರಿಯರಿಂದ ಇಲ್ವೇ ಇಲ್ಲ ಅನ್ನುವ ಮಾತು ಕೂಡಾ ಇದೆ....*

ಜಿಎಸ್ಎಸ್: ಆಗ್ಲೂ ಬಹಳ ಹಿರಿಯರಾದವರೂ ಯಾರನ್ನಾದರೂ ಓದುತ್ತಿದ್ದರು ಅಂತ ಹೇಳೋದು ಕಷ್ಟಾನೆ. ಉದಾಹರಣೆಗೆ ಶಿವರಾಮ ಕಾರಂತರಾಗಲಿ, ಕುವೆಂಪು ಅವರು ಆಗಲಿ ಉಳಿದವರನ್ನು ಓದುವಷ್ಟು ವ್ಯವಧಾನ

ಇಲ್ಲದಷ್ಟು ಅವರ ಸೃಜನಶೀಲತೆ ಅವರನ್ನು ಆಕ್ರಮಿಸಿಕೊಂಡಿತ್ತು ಅಷ್ಟೇನೆ. ಹಾಗಂತ ಹೇಳಿದ್ರೆ—ತಿರಸ್ಕಾರದಿಂದ ನೋಡ್ತಾ ಇರಲಿಲ್ಲ. ನಮ್ಮನ್ನೆಲ್ಲಾ ಬೆಳೆಸಿದವರು ಅವರು. ಕಾರಂತರಾಗ್ಲೀ, ಕುವೆಂಪು ಅವರಾಗ್ಲೀ ಅವರ ವ್ಯಕ್ತಿತ್ವದಲ್ಲೇ ಆ ಬಗೆಯ ಉದಾರತೆ ಇತ್ತು. ನಮ್ಮ ಪುಸ್ತಕ ಓದಲೇ ಬೇಕಾಗಿರಲಿಲ್ಲ. ಕಡೇಪಕ್ಷ, ಕುವೆಂಪು ಅವರಿಗೆ, ನಾನು ಏನು ಬರೆದಿದ್ದೇನೆ ಎಂದು ಕರೆದು ಕೇಳುವಷ್ಟು ಸೌಜನ್ಯತೆ ಇತ್ತು. ಒಂದು ಮುನ್ನುಡಿ ಬರೆದುಕೊಡಿ ಅಂದ್ರೆ ಬರ್ದು ಕೊಡ್ತಾ ಇದ್ರು. ಕುವೆಂಪು ಅವರನ್ನು ಹೇಗೆ ಅವರ ಹಿಂದಿನ ತಲೆಮಾರಿನವ್ರು ಗುರುತಿಸಿ ಗೌರವಿಸಿದ್ರೋ ಹಾಗೆ ನಮ್ಮ ನವೋದಯ ಸಂದರ್ಭದಲ್ಲಿ ಕೂಡಾ ಹೊಸದಾಗಿ ಬರೆಯೋರ್ಗೆ ಈ ಪ್ರೋತ್ಸಾಹದ ಕೊರತೆ ಅಷ್ಟು ಇರಲಿಲ್ಲ. ಇವತ್ತು ಪ್ರಕಾಶನ ಸಂಸ್ಥೆಗಳು ಹೆಚ್ಚಾಗಿವೆ. ಪ್ರಕಟಣೆಯ ಅವಕಾಶಗಳು ಹಿಂದಿಗಿಂತ ಹೆಚ್ಚಾಗಿವೆ. ವಿಮರ್ಶೆಯ ಅನುಕೂಲಗಳು, ಅವಕಾಶಗಳೂ ಮೊದಲಿಗಿಂತ ಹೆಚ್ಚಾಗಿವೆ. ಹೀಗಾಗಿ ಮೊದಲಿಗಿಂತ ಈಗ ಬರೆಯೋದು ಹೆಚ್ಚು ಸುಲಭ ಅಂತ ಕೂಡಾ ಅಂತ ನನಗನ್ನಿಸ್ತಾ ಇದೆ.

*ಡಿಎಸ್ಎನ್: ಅದರಿಂದ ಸಾಹಿತ್ಯಕ್ಕೆ ಅಪಾಯ ಇಲ್ವಾ ಸರ್?*

*ಜಿಎಸ್ಎಸ್: ಇದೆ; ಅಪಾಯ ಇದೆ; ಇದ್ದೇ ಇರುತ್ತೆ.*

*ಡಿಎಸ್ಎಸ್: ಆಮೇಲೆ, ಗಿರೀಶ್ ಕಾರ್ನಾಡ್ ಅವರು ಇತ್ತೀಚೆಗೆ ಜ್ಞಾನಪೀಠ ಪ್ರಶಸ್ತಿ ಬಂದ ಸಂದರ್ಭದಲ್ಲಿ ಒಂದು ಮಾತು ಹೇಳಿದ್ರು—ಜ್ಞಾನಪೀಠ ಪ್ರಶಸ್ತಿ ಪಡೆದ ಮೊದಲಿಗರೇನಿದ್ದಾರೆ ಕುವೆಂಪು ಆಗಲಿ, ಕಾರಂತರಾಗಲಿ, ಬೇಂದ್ರೆಯವರಾಗ್ಲಿ, ಅವರ ಸಾಹಿತ್ಯ ಸಮೃದ್ಧಿ ಏನಿದೆ ಅದು ಇತ್ತೀಚಿನ ತಲೆಮಾರಿನ ಲೇಖಕರಲ್ಲಿ—ತಮ್ಮನ್ನೂ ಸೇರಿಸಿಕೊಂಡು ಹೇಳಿದ್ದು ಅವರು—ಕಾಣ್ತಾ ಇಲ್ಲ ಅಂತ....*

ಜಿಎಸ್ಎಸ್: ಅದನ್ನು ನಾನೇ, ಅವರಿಗೆ ಪ್ರಶಸ್ತಿ ಬಂದಾಗ ಒಂದು ಪತ್ರಿಕೆಗೆ ಹೇಳಿಕೆ ಕೊಡುವಾಗ ಈ ಮಾತು ಹೇಳಿದ್ದೀನಿ. ನಾಟಕಕಾರರಾಗಿ ಗಿರೀಶ್ ಕಾರ್ನಾಡ್ ಅವರು ಏನು ಸಾಧಿಸಿದ್ದಾರೆ ಅದಕ್ಕೆ ಸಂದ ಪ್ರಶಸ್ತಿ ಅದು ಅಂತ. ಹಿಂದಿನ ತಲೆಮಾರಿನ ಜ್ಞಾನಪೀಠ ಪ್ರಶಸ್ತಿ ಪಡೆದ ಲೇಖಕರಿಗೂ ಇವರಿಗೂ ಇರುವ ವ್ಯತ್ಯಾಸ ಅಂದ್ರೆ ಅವರ ಸಾಹಿತ್ಯ ಬಹುಮುಖಿಯಾದದ್ದು, ಸಮೃದ್ಧವಾದದ್ದು. ಆದ್ರೆ ಇದು ಒಂದು ಪ್ರಕಾರಕ್ಕೆ ಸೀಮಿತವಾದದ್ದು. ಬಹುಶಃ ಇನ್ನು ಮೇಲೆ ಹೀಗೆ ಆಗ್ತದೋ ಏನೋ ಗೊತ್ತಿಲ್ಲ ನನಗೆ.

ಡಿಎಸ್‌ಎನ್: *ಯಾಕೆ ಹೀಗಾಗ್ತಿದೆ ಸರ್?*

ಜಿಎಸ್‌ಎಸ್: ಯಾಕೆಂದ್ರೆ ಕುವೆಂಪು ಅವ್ರ ಹಾಗೆ, ಕಾರಂತರ ಹಾಗೆ, ಬೇಂದ್ರೆಯವರ ಹಾಗೆ ಬರೆಯುವವರು ಎಲ್ಲಿದ್ದಾರೆ ಈಗ?

ಡಿಎಸ್‌ಎನ್: *ಅದೇ ನಾನು ಕೇಳ್ತಾ ಇರೋದು. ತಲೆಮಾರಿನಿಂದ ತಲೆಮಾರಿಗೆ ಸಾಹಿತ್ಯ ಸಮೃದ್ಧಿ ಕಡಿಮೆಯಾಗ್ತಿದೆಯಲ್ಲಾ, ಇದಕ್ಕೆ ಏನು ಮುಖ್ಯ ಕಾರಣ, ಇದರಿಂದ ಒಟ್ಟಾರೆ ಕನ್ನಡ ಸಾಹಿತ್ಯದ ಮೇಲೆ ಏನು ಪರಿಣಾಮ ಆಗಬಹುದು ಸರ್?*

ಜಿಎಸ್‌ಎಸ್: ನಾವು ಎಲ್ಲಾ ಕಾಲಕ್ಕೂ ಸಮೃದ್ಧಿಯನ್ನು ನಿರೀಕ್ಷಿಸಲಿಕ್ಕೆ ಆಗುವುದಿಲ್ಲ. ನನ್ನ ಪ್ರಕಾರ, ಮಳೆಗಾಲವನ್ನು ಎಲ್ಲ ಕಾಲದಲ್ಲೂ ನಿರೀಕ್ಷಿಸಲಿಕ್ಕೆ ಆಗುವುದಿಲ್ಲ. ನದಿಯಲ್ಲಿ ಪ್ರವಾಹವನ್ನು ಯಾವಾಗಲೂ ನಿರೀಕ್ಷಿಸಲಿಕ್ಕೆ ಆಗಲ್ಲ. ಚಳುವಳಿಗಳ ಮಳೆಗಾಲದಲ್ಲಿ ಸಾಹಿತ್ಯಕ್ಕೆ ಬರುವ ಸಮೃದ್ಧಿ, ಉಳಿದ ಕಾಲದಲ್ಲಿ ಸ್ವಲ್ಪ ಕಡಿಮೆಯಾಗಬಹುದು.

ಡಿಎಸ್‌ಎನ್: *ಅಂದ್ರೆ ಕನ್ನಡ ಸಾಹಿತ್ಯಲೋಕದಲ್ಲೂ ಒಂದು ಋತುಚಕ್ರ ಇದ್ದೇ ಇರುತ್ತೆ ಅಂತ ಆಯ್ತು.*

ಜಿಎಸ್‌ಎಸ್: ಖಂಡಿತವಾಗಿಯೂ ಇದ್ದೇ ಇರುತ್ತೆ. ಹಾಗೆ ನೋಡಿದ್ರೆ ವಿಮರ್ಶಾಲೋಕದಲ್ಲಿ ನಾವೆಷ್ಟು ವಿಸ್ತಾರವಾಗ್ತಿದೀವಿ ಈಗ ನಾವು. ಸೃಜನಶೀಲ ಕೃತಿಗಳಿಗಿಂತ ವೈಚಾರಿಕ ಕೃತಿಗಳು ಹೆಚ್ಚಾಗಿ ಬರ್ತಾವೆ. ಆದ್ರಿಂದ ಇದನ್ನು ವೈಚಾರಿಕತೆಯ ಕಾಲ ಅಂತ ಕರೆಯಲಿಕ್ಕೆ ನಾನು ಅಪೇಕ್ಷೆ ಪಡ್ತೀನಿ. ಮತ್ತೆ, ಒಂದು ಸಾಹಿತ್ಯದ ಚಲನಶೀಲತೆಯನ್ನು, ಮಾಪನವನ್ನು ಕೇವಲ ಸೃಜನಶೀಲ ಸಾಹಿತ್ಯದ ಮೇಲೆ ಮಾಡುವುದು ಸರಿಯಲ್ಲ ಅನ್ನೋದು ಕೂಡಾ ಬಹಳ ಮುಖ್ಯವಾದ ಸಂಗತಿ ನಮಗೆ. ಒಟ್ಟು total ಆಗಿ, ಏನು ಒಂದು ಕಾಲಮಾನ, ಒಟ್ಟಾಗಿ ಸಮಗ್ರವಾಗಿ ಬೆಳೆದಿದೆ ಅನ್ನೋದನ್ನು ನಾವು ಒಟ್ಟಾಗಿ ತೆಗೆದುಕೊಂಡು ನಾವು ಅದರ ಬೆಳವಣಿಗೆ ಗುರುತಿಸಬೇಕೇ ಹೊರತಾಗಿ ಕೇವಲ ಸೃಜನಶೀಲ ಕೃತಿಗಳ ಆಧಾರದ ಮೇಲೆ ಒಂದು ಕಾಲಮಾನದ ಸಾಹಿತ್ಯದ ಗತಿಯನ್ನು ಮತ್ತು ಪ್ರಗತಿಯನ್ನು ನಿರ್ಣಯಿಸುವುದು ಸರಿಯಲ್ಲ ಅನ್ನುವುದೇ ನನ್ನ ಇತ್ತೀಚಿನ ಅಭಿಪ್ರಾಯ.

ಡಿಎಸ್‌ಎನ್: *ಆದರೆ ಈ ಪ್ರಶ್ನೋತ್ತರದ ಹಿಂದೆ ಇನ್ನೊಂದು ಸಂಗತಿ ಇದೆ ಅಂತ ಕಾಣುತ್ತೆ ಸರ್... ಏನೂಂತ ಅಂದ್ರೆ, ಇತ್ತೀಚಿನ ದಿನಗಳಲ್ಲಿ—ಅಂದ್ರೆ ಕಳೆದ ಕೆಲವು ವರ್ಷಗಳಿಂದೀಚೆಗೆ ಕನ್ನಡದ ಜನರಲ್ಲಿ ಕನ್ನಡ ಭಾಷೆಯ ಬಳಕೇನೇ ತುಂಬ ಕಡಿಮೆ ಆಗ್ತಿದೆ—ಶಿಕ್ಷಣ ಮಾಧ್ಯಮವಾಗಿ ಕನ್ನಡ ನಶಿಸಿ ಹೋಗ್ತಾ ಇದೆ...*

*ಕನ್ನಡ ಭಾಷೆಯ ಶಬ್ದಗಳನ್ನು ಬಳಸುವ ಒಂದು ಪ್ರೀತಿ-ಖುಷಿನೇ ತಪ್ಪಿ ಹೋಗ್ತಾ ಇದೆ. ಅನೇಕ ಶಬ್ದಗಳು ನಶಿಸಿ ಹೋಗ್ತಾ ಇವೆ, ವಾಕ್ಯರಚನೆ ಯದ್ವಾತದ್ವಾ ಆಗ್ತಾ ಇದೆ, ಕಾಗುಣಿತದ ಪಾಡಂತೂ ಹೇಳಬಾರದು.... ಇಂತಹ ಸಂದರ್ಭದಲ್ಲಿ ಲೇಖಕರು ಹುಟ್ಟುವುದು ಹೇಗೆ ಸಾಧ್ಯ? ಸೃಜನಶೀಲತೆ ಕನ್ನಡ ಭಾಷೆಯಲ್ಲಿ ವ್ಯಕ್ತವಾಗುವುದು ಹೇಗೆ ಸಾಧ್ಯ?*

ಜಿಎಸ್‌ಎಸ್: ಲೇಖಕರೂ ಹುಟ್ಟೋದಿಲ್ಲ. ಓದುಗರು ಬರೋದಿಲ್ಲ. ಆ ಸ್ಥಿತಿ ಬಂದಿದೆ ನಮಗೀಗ. ಇಷ್ಟೊಂದು ಪ್ರಶಸ್ತಿಗಳಿಂದ ಸಮೃದ್ಧವಾದ ಸಾಹಿತ್ಯದ ಬೇರು, ಬುಡ ಒಣಗ್ತಾ ಇದೆ. ಹೀಗಾಗಿ ಕನ್ನಡ ಮಾಧ್ಯಮದಲ್ಲಿ ಓದುವುದಕ್ಕಿಂತ ಇಂಗ್ಲೀಷ್ ಮಾಧ್ಯಮದಲ್ಲಿ ಓದುವುದು ಹೆಚ್ಚು ಲಾಭದಾಯಕ ಎನ್ನುವ ಪರಿಸ್ಥಿತಿ ನಿರ್ಮಾಣವಾಗ್ತಾ ಇರೋದು ಮತ್ತು ಇಂಗ್ಲೀಷ್ ಮಾಧ್ಯಮವನ್ನೇ ನಮ್ಮ ಮಕ್ಕಳು ಅನಿವಾರ್ಯವಾಗಿ ಆಶ್ರಯಿಸಬೇಕಾದ ಒಂದು ವ್ಯಾಪಾರೀ ಜಾಲ ಸೃಷ್ಟಿಯಾಗುತ್ತಿರೋದ್ರಿಂದ ಮತ್ತು ಅನೇಕ ಭ್ರಮೆಗಳು ಇದನ್ನು ಪೋಷಿಸ್ತಾ ಇರೋದ್ರಿಂದ ನಮ್ಮ ಮಕ್ಕಳು ಕನ್ನಡದಿಂದ ದೂರವಾಗ್ತಾ ಇದ್ದಾರೆ. ನಾಳೆ ದಿವಸ ನಾವು ಬರೆದಿದ್ದನ್ನ ಓದುವವರು ಗತಿಯಿಲ್ಲ. ಬರೆಯುವವರೂ ಇಲ್ಲ. ಮತ್ತೊಂದು ಅಂದ್ರೆ ಬೇರೆ ಬೇರೆಯ ಸಂಸ್ಕೃತಿಗಳ ಆಕ್ರಮಣ ಇದೆಯಲ್ಲ ನಮ್ಮ ಮೇಲೆ, ಅದು ಕೂಡಾ ಇದಕ್ಕೊಂದು ಕಾರಣ ಆಗ್ತದೆ. ನಮ್ಮ ವೈಚಾರಿಕತೆಯನ್ನ, ಸೃಜನಶೀಲತೆಯನ್ನ ಧ್ವಂಸಮಾಡುವಷ್ಟರ ಮಟ್ಟಿಗೆ ವಿಕಾರ ಸಂಸ್ಕೃತಿಗಳ ಆಕ್ರಮಣ ನಮ್ಮ ಜನಜೀವನದ ಮೇಲೆ ಆಗ್ತಾ ಇದೆ, ನಮ್ಮ ಮಕ್ಕಳ ಮೇಲೆ ಆಗ್ತಾ ಇದೆ. ಹೀಗಾಗಿ ಯಾವ ಮಾಧ್ಯಮಗಳನ್ನ—ವಿಶೇಷವಾಗಿ ದೃಶ್ಯ ಮಾಧ್ಯಮಗಳು—ಪರಿಣಾಮಕಾರಿಯಾಗಿ ಬಳಸಿದ್ದಲ್ಲಿ ಮಹತ್ವದ ಬದಲಾವಣೆಗೆ ಕಾರಣವಾಗಬಹುದಾಗಿತ್ತೋ ಅದೇ ಮಾಧ್ಯಮಗಳು ಬಹುಶಃ ಕಲ್ಪನಾ ದರಿದ್ರರ, ಅಥವಾ ವ್ಯಾಪಾರಿ ಮನೋಧರ್ಮದವರ ಕೈಗೆ ಸಿಕ್ಕು ಹೀಗೆ ಒಂದು ಕೀಳು ಸಂಸ್ಕೃತಿಯ ಪ್ರಸರಣದಲ್ಲಿ ತೊಡಗಿರೋದ್ರಿಂದ ಒಟ್ಟಾರೆಯಾಗಿ ನಮ್ಮ ನಾಳಿನ ಭವಿಷ್ಯ ಬಹಳ ನಿರಾಶಾದಾಯಕವಾಗಿದೆ ಅಂತ ನನಗನಿಸ್ತಾ ಇದೆ. ಸಾಹಿತ್ಯದ ಭವಿಷ್ಯ ಮಾತ್ರ ಅಲ್ಲ, ನಮ್ಮ ನಾಡಿನ ಭವಿಷ್ಯವೇ...

ಡಿಎಸ್‌ಎನ್: *ಈ ಬಿಕ್ಕಟ್ಟಿನ ಸಂದರ್ಭದಲ್ಲಿ ಸಾಹಿತಿಗಳ ಪಾತ್ರ ಏನನಿಸುತ್ತೆ ಸರ್? ಮೊದಲಿನಿಂದಲೂ ಕೂಡಾ ಸಾಮಾಜಿಕ ಸಂದರ್ಭಗಳಿಗೆ ಪ್ರತಿಕ್ರಿಯಿಸ್ತಾ ಬಂದಿರುವಂತಹ ದೊಡ್ಡ ಸಾಮಾಜಿಕ ಕವಿ ನೀವು.*

ಜಿಎಸ್‌ಎಸ್: ಸಾಹಿತಿಗಳು ಏನು ಮಾಡಬಹುದು? protest ಮಾಡಬಹುದು. ಪ್ರತಿಭಟನೆ

ಮಾಡಬಹುದು. ಸರಿ ಇಲ್ಲ ಅಂತ ಹೇಳ್ಬಹುದು—ಮಕ್ಕಳಿಗೆ ಸಂದರ್ಭ ಸಿಕ್ಕಾಗ ಇದನ್ನೆಲ್ಲಾ ಪ್ರತಿಭಟಿಸುವಂತಹ ವೈಚಾರಿಕತೆ ಬೆಳೆಸಿಕೊಳ್ಳಿ ಅಂತ ಹೇಳಬಹುದು. ನಮ್ಮ ಇವತ್ತಿನ ಅಗತ್ಯ ಅಂದ್ರೆ ವೈಚಾರಿಕತೆಯ ಅಭಾವ. ಯಾರೂ ಯಾವುದ್ರ ಕುರಿತೂ ಗಂಭೀರವಾಗಿ ವಿಚಾರ ಮಾಡ್ತಾ ಇಲ್ಲ. ತಾತ್ಕಾಲಿಕವಾಗಿ ಏನು ಸಿಗುತ್ತೋ ಅಷ್ಟರಲ್ಲಿ ತೃಪ್ತರಾಗಿಬಿಡ್ತಾರೆಯೇ ಹೊರತಾಗಿ ನಮ್ಮ ಮೇಲೆ ಈ ಅನ್ಯಪ್ರಭಾವಗಳು ಮಾಡುವ ದುಷ್ಪರಿಣಾಮಗಳು ಏನು, ಇದನ್ನು ಹೇಗೆ ಪ್ರತಿಭಟಿಸಬೇಕು ಎನ್ನುವ ಎಚ್ಚರ ನಮ್ಮಲ್ಲಿ ಬರ್ತಾ ಇಲ್ಲ.

ಡಿಎಸ್‌ಎನ್: *ಅಂದ್ರೆ ವೈಚಾರಿಕತೆಯ ಕೊರತೆ ಅಂತ...*

ಜಿಎಸ್‌ಎಸ್: ಹೌದು, ಈ ಎಚ್ಚರವನ್ನು ನಮ್ಮ ಶಿಕ್ಷಣ ಹುಟ್ಟಿಸಬೇಕಾಗಿದೆ. ಲೇಖಕರು ಹುಟ್ಟಿಸಬೇಕಾಗಿದೆ. ರಾಜಕಾರಣಿಗಳು ಹುಟ್ಟಿಸಬೇಕಾಗಿದೆ. ಜಗದ್ಗುರುಗಳು ಹುಟ್ಟಿಸಬೇಕಾಗಿದೆ. ಇವರೆಲ್ಲ ಈ ಪರಿಸ್ಥಿತಿ ಹೀಗಿರುವುದಕ್ಕೆ ಕಾರಣ ಅಷ್ಟೆ.

ಡಿಎಸ್‌ಎನ್: *ಆದ್ರೆ ನೀವು ಹಿಂದೆ ಹೇಳಿದ್ರಿ, ಇದು ವೈಚಾರಿಕ ಸಾಹಿತ್ಯದ ದೊಡ್ಡ ಕಾಲ ಅಂತ. ಇನ್ನೊಂದು ಕಡೆ ವೈಚಾರಿಕತೆಯ ಅಭಾವ ಅಂತಿರಾ..*

ಜಿಎಸ್‌ಎಸ್: ಈಗ ವೈಚಾರಿಕತೆಯ ದೊಡ್ಡಕಾಲ ಅನ್ನೋರು, ಬರೆಯುವವರೆಲ್ಲಾ, 50 + ವರ್ಷದ ವಯಸ್ಸಿನವರು ಅಷ್ಟೇನೆ. ಅಂದರೆ ನನ್ನ ಮುಂದಿನ ತಲೆಮಾರಿನವರು ಬೆಳೆಸುವ ವಿಮರ್ಶಾಕ್ರಮವನ್ನು ಕುರಿತಾಗಿ ನಾನು ಹೇಳ್ತಾ ಇದ್ದೇನೆ ಹೊರತಾಗಿ ಅದರ ಮುಂದಿನದನ್ನು ದೇವ್ರೇ ಕಾಪಾಡಬೇಕು.

ಡಿಎಸ್‌ಎನ್: *ಹಾಗಾಗಿ ಕನ್ನಡ ಸಾಹಿತ್ಯ ಅಥವಾ ಭಾರತದ ಯಾವುದೇ ಭಾಷೆಯ ಸಾಹಿತ್ಯ ಈಗ ಬಡವಾಗುತ್ತಿರುವ ಈ ಸಂದರ್ಭದಲ್ಲಿ ಏಳುವ ಬಹು ದೊಡ್ಡ ಪ್ರಶ್ನೆ ಅಂದ್ರೆ, ಸಾಹಿತ್ಯವೇ ಕಳೆದು ಹೋದ್ರೆ ಇನ್ನು ಜನಜೀವನದಲ್ಲಿ ಏನು ಉಳಿಯುತ್ತೆ?*

ಜಿಎಸ್‌ಎಸ್: ಏನೂ ಉಳಿಯೋದಿಲ್ಲ. ಕೇವಲ ಪ್ರಾಯೋಜನಿಕ ಬುದ್ಧಿ ಮಾತ್ರ ಉಳಿಯಬಹುದು ಅಷ್ಟೆ.

ಡಿಎಸ್‌ಎನ್: *ದೊಡ್ಡ ದುರಂತ ಇದು...*

ಜಿಎಸ್‌ಎಸ್: ಹೌದು.

ಡಿಎಸ್‌ಎನ್: *ಇದಕ್ಕೆ ಸಂಬಂಧಪಟ್ಟಂತೇನೇ ಇನ್ನೊಂದು ದುರಂತದ ಕಡೆ ನಿಮ್ಮ ಗಮನ ಸೆಳೆಯಬಯಸುತ್ತೇನೆ ಸರ್. ಇತ್ತೀಚೆಗೆ ಸಾಹಿತಿಗಳ ಮತ್ತು ಸರ್ಕಾರದ*

*ಒಡನಾಟ ಜಾಸ್ತಿಯಾಗ್ತಾ ಇದೆ. ಅನುಕೂಲತೆಗಳಿಗೋಸ್ಕರ, ಸ್ಥಾನಮಾನಗಳಿಗೋಸ್ಕರ ಸಾಹಿತಿಗಳು ರಾಜಕಾರಣಿಗಳ ಸುತ್ತಮುತ್ತ ಓಡಾಡ್ತಿದಾರೆ ಅಂತ ಹೇಳ್ತಾರೆ. ಇದಕ್ಕೆ ನೀವು ಹೇಗೆ ಪ್ರತಿಕ್ರಿಯಿಸ್ತೀರಿ? ಇದರಿಂದ ಸಾಹಿತ್ಯದ ಮೇಲೆ ಏನು ಪ್ರಭಾವ ಆಗ್ಬಹುದು ಸರ್?*

ಜಿಎಸ್ಎಸ್: ಹಾಗೆ ಆಗ್ಬಾರದು. ಆಗ್ತಾ ಇದೆ. ಇದನ್ನು ನಾವು ಅಸಹಾಯಕರಾಗಿ ನೋಡ್ತಾ ಇದೇವೆ. ಯಾಕೆ? ಸಾಹಿತಿಗಳಿಗೆ ರಾಜಕಾರಣಿಗಳನ್ನು ಓಲೈಸುವ ಅಗತ್ಯಗಳೇ ಇಲ್ಲ. ಯಾಕೆಂದ್ರೆ ಸಾಹಿತಿಯ ನಿಜವಾದ ವ್ಯಕ್ತಿತ್ವ ಯಾವುದೇ ಅಧೀನತೆಗಳನ್ನು ನಿರಾಕರಿಸುವ ಮನೋಧರ್ಮ—ನಿಜವಾದ ಸಾಹಿತಿಯದು...

*ಡಿಎಸ್ಎನ್: ಬಹಳ ಒಳ್ಳೆಯ ಲೇಖಕ ನಿಜವಾದ ಬಂಡಾಯಗಾರ ಅಂತಲೂ ಹೇಳ್ತಾರೆ.*

ಜಿಎಸ್ಎಸ್: ಹೌದು, ಹೀಗೆ ಅಧೀನತೆಯನ್ನು ಮೀರುವುದು ಹೇಗೆ ಅನ್ನುವುದನ್ನು ಪಂಪನಿಂದ ಇವತ್ತಿನ ಕುವೆಂಪುವರೆಗೆ ಎತ್ತಿ ಹೇಳುವ ಕವಿಗಳಿದ್ದಾರೆ. ಆದರೆ ಯಾಕೆ ಸಾಹಿತಿಗಳು ಹೀಗೆ ಮಾಡ್ತಾರೆ—ಅದು ವೈಯಕ್ತಿಕವಾದ ವಿಚಾರವಷ್ಟೆ. ಅದು ಸಾರ್ವತ್ರಿಕವಾಗಿ ಅನ್ವಯವಾಗುವಂತಹ ಸಂಗತಿಯಲ್ಲ.

*ಡಿಎಸ್ಎನ್: ಒಟ್ಟಾರೆ ಜೀವನದ ದಿಕ್ಕೇ ಬದಲಾಗ್ತಾ ಇದೆ. ಸಾಹಿತಿಗಳೂ ಇದಕ್ಕೆ ಹೊರತಲ್ಲ ಅಂತ ಕಾಣುತ್ತದೆ.*

ಜಿಎಸ್ಎಸ್: ಬಹುಶಃ ಇದು ಪ್ರಾಯೋಜನಿಕ ಬುದ್ಧಿಯ ಪರಿಣಾಮ ಅಂತ ಕಾಣುತ್ತೆ.

*ಡಿಎಸ್ಎನ್: ಇರಬಹುದು ಸರ್... ಅದೇನೇ ಇರಲಿ ಈ ಸಂಕ್ಷಿಪ್ತ ಸಂದರ್ಶನದಲ್ಲಿ ಸಾಕಷ್ಟು ವಿಸ್ತಾರವಾದ ವಿಚಾರಗಳು ಹೊರಹೊಮ್ಮಿದಂತೆ ಕಾಣುತ್ತೆ. ವಿಶ್ವಾಸದಿಂದ ಈ ಮಾತುಕತೆಯಲ್ಲಿ ಭಾಗವಹಿಸಿದಕ್ಕೆ ವಂದನೆಗಳು ಸರ್.*

ಜಿಎಸ್ಎಸ್: ನಮಸ್ಕಾರ.

**(ಬರಹಕ್ಕೆ: ಎಸ್. ಉಷಾಲತಾ)**

# ಮುಖಾಮುಖಿ - 3

***ಕನ್ನಡ ಕವಿಗಳೂ ವಿಮರ್ಶಕರೂ ಆದ ಜಿ.ಎಸ್. ಶಿವರುದ್ರಪ್ಪನವರು, ಕನ್ನಡ ವಿಶ್ವವಿದ್ಯಾಲಯಕ್ಕೆ ಬಂದಾಗ, ಕನ್ನಡ ಭಾಷೆ ಮತ್ತು ಸಾಹಿತ್ಯ ವಿಭಾಗದ ಸದಸ್ಯರು 6.7.99ರಂದು ಮಾಡಿದ ಸಂದರ್ಶನವಿದು. ಜನಪದ ಮಹಾಕಾವ್ಯ ಹಾಗೂ ಸಮುದಾಯದ ಪುರಾಣಗಳನ್ನು ಆಧುನಿಕ ಕವಿಗಳು ಬಳಸಿಕೊಳ್ಳುತ್ತಿರುವ ಬಗ್ಗೆ ಚರ್ಚೆ ಮಾಡುತ್ತಾ, ಮಾಡುತ್ತಾ ಮಾತುಕತೆ ಶುರುವಾಯಿತು.***

* * *

ಪ್ರಶ್ನೆ: ಜನಪದ ಮಹಾಕಾವ್ಯಗಳನ್ನು ಓದುತ್ತಾ ಇದೀನಿ ಅಂದ್ರಿ. ನಿಮ್ಮ ಅನುಭವ ಏನು ಸಾರ್.

ಜಿಎಸ್ಎಸ್: ಕನ್ನಡದ ಸಂದರ್ಭದಲ್ಲಿ ದಲಿತ-ಬಂಡಾಯ ಚಳುವಳಿಯ ಪ್ರಾರಂಭದ ಅನಂತರದ ಸುಮಾರು ಕಾಲುಶತಮಾನದ ಅವಧಿಯಲ್ಲಿ, ಕೇವಲ ಮೌಖಿಕ ವಾದ ಪರಂಪರೆಯೊಳಗಿದ್ದ ಅನೇಕ ಕೃತಿಗಳು ಪ್ರಕಟವಾಗಿ, ಅಜ್ಞಾತವಾದ ದೇಶೀಯ ಧ್ವನಿಗಳು ಪರಿಚಿತವಾದದ್ದು ಬಹು ಮುಖ್ಯವಾದ ಸಂಗತಿಯಾಗಿದೆ. ಇವುಗಳಲ್ಲಿ ನೀವು ಪ್ರಸ್ತಾಪ ಮಾಡಿದ ಮಲೆಮಾದೇಶ್ವರ, ಮಂಟೇಸ್ವಾಮಿ ಇವರನ್ನು ಕುರಿತ ಮಹಾಕಾವ್ಯಗಳೂ ಸೇರುತ್ತವೆ. ಅಷ್ಟೇ ಅಲ್ಲ ಅನೇಕ ತತ್ವಪದಕಾರರ, ಸ್ವರ ವಚನಕಾರರ, ಸೂಫೀಸಂತರ, ಶರಣರ ಹಾಗೂ ಅನುಭಾವಿಗಳ ಬಹು ಸಂಖ್ಯೆಯ ಬರಹಗಳೂ ಈಗ ಲಭ್ಯವಾಗಿವೆ. ನವೋದಯ ಪೂರ್ವದ ಒಂದೆರಡು ಶತಮಾನಗಳಿಗೆ ಸೇರುವ ಈ ಎಲ್ಲ ಸಾಮಗ್ರಿಯನ್ನು ನೋಡಿದ ಮೇಲೆ ನನಗೆ ಅನ್ನಿಸುತ್ತದೆ, ನವೋದಯ ಪೂರ್ವದ ಸುಮಾರು ಎರಡು ಶತಮಾನಗಳ ಕಾಲವನ್ನು, ಕನ್ನಡ ಸಾಹಿತ್ಯ ಚರಿತ್ರೆಯು 'ಸ್ಥಗಿತಗೊಂಡ ಕಾಲ' ಎಂದು ಇದುವರೆಗೂ ತಿಳಿದುಕೊಂಡಿದ್ದು ತಪ್ಪಾಯಿತು ಎಂದು. ಇಪ್ಪತ್ತನೆಯ ಶತಮಾನದ ಅಂಚಿನಲ್ಲಿ ನಿಂತು, ಈ ಕಾಲದ ಉಜ್ವಲವಾದ ಸಾಹಿತ್ಯವನ್ನು ಕುರಿತು ಹೊರಳಿ ನೋಡುವ ನಾವು, ಮತ್ತೆ 18-19ನೇ ಶತಮಾನವನ್ನೂ, ಈಗ ಉಪಲಬ್ಧವಾದ ಸಾಮಗ್ರಿಯ ಹಿನ್ನೆಲೆಯಿಂದ ಪುನರಾವಲೋಕನಕ್ಕೆ ಗುರಿಪಡಿಸುವುದು ಅಗತ್ಯವಾಗಿದೆ.

ಯಾಕೆಂದರೆ ಆ ಕಾಲದ ಬಹುಸಂಖ್ಯೆಯ ಶರಣರು-ಸಂತರು ಮತ್ತು ವಿವಿಧ ಬುಡಕಟ್ಟುಗಳನ್ನು ಸಂಘಟಿಸಿದ ನಾಯಕರು, ಅಂದಿನ ವಸಾಹತುಶಾಹೀ ಸಂದರ್ಭದ ಬರ್ಬರತೆಯನ್ನು ತಮ್ಮ ಅನುಭಾವಿಕ ನೆಲೆಯಿಂದ ಹೇಗೆ ಎದುರಿಸಿದರೆಂಬುದನ್ನು ಪರಿಶೀಲಿಸಿದರೆ, ಅದೊಂದು 'ಸ್ಥಗಿತಗೊಂಡ ಕಾಲ' ಎಂದು ಹೇಳಲು ಬರುವುದಿಲ್ಲ. ಅವರೆಲ್ಲರೂ ಮುಖ್ಯವಾಗಿ, ವ್ಯಕ್ತಿ ಸ್ವಾತಂತ್ರ್ಯದ ಘನತೆಯನ್ನು, ಪ್ರಭುತ್ವ ವಿರೋಧಿ ಧೋರಣೆಗಳನ್ನೂ ಎತ್ತಿ ಹಿಡಿಯುತ್ತ, ಎಲ್ಲದಕ್ಕಿಂತ ಮಿಗಿಲಾಗಿ ಕೋಮುಸಾಮರಸ್ಯದ ಆಕೃತಿಗಳನ್ನು ನಿರ್ಮಾಣ ಮಾಡಿದರು. ನವೋದಯ ಸಾಹಿತ್ಯ ಸಂದರ್ಭದ ಮುಖ್ಯ ಧಾರ್ಮಿಕ ನಿಲುವಾದ, ಸಾಂಸ್ಥಿಕ ಧರ್ಮಗಳ ನಿರಾಕರಣೆಯು—ಇದನ್ನು ಬೇಕಾದರೆ 'ಧರ್ಮ ನಿರಪೇಕ್ಷಕ ನಿಲುವು' ಎಂದಾದರೂ ಕರೆಯಿರಿ, ಧಾರ್ಮಿಕ ಉದಾರವಾದ ಎಂದಾದರೂ ಕರೆಯಿರಿ—ವಾಸ್ತವವಾಗಿ, ನವೋದಯ ಪೂರ್ವದ ಈ ಸಂತರು-ಶರಣರು-ಅನುಭಾವಿಗಳು ಈ ಮೊದಲೇ ರೂಪಿಸಿದ ಕೋಮು ಸಾಮರಸ್ಯದ ಪರಿಣಾಮವೇ ಎಂದು ತಿಳಿಯಬೇಕಾಗಿದೆ. ಆದರೆ ದುರಂತದ ಸಂಗತಿ ಎಂದರೆ 20ನೆಯ ಶತಮಾನದ ಕೊನೆಯ ದಶಕಗಳ ಹೊತ್ತಿಗೆ, ಶಕ್ತಿ ರಾಜಕಾರಣದ ಪರಿಣಾಮವಾಗಿ, ಬಹುಕಾಲದಿಂದ ನಮಗೆ ದತ್ತವಾದ ಆಕೃತಿಗಳು ಛಿದ್ರ ಛಿದ್ರವಾಗುತ್ತಿರುವುದನ್ನು ನಾವು ಅಸಹಾಯಕರಾಗಿ ನೋಡುವ ಸ್ಥಿತಿ ಬಂದಿದೆ. 21ನೆಯ ಶತಮಾನವು ಎದುರಿಸಬೇಕಾದ ಬಹುದೊಡ್ಡ ಸವಾಲು ಎಂದರೆ, ಭಗ್ನಗೊಂಡ ಈ ಸಾಮರಸ್ಯದ ಆಕೃತಿಗಳನ್ನು ಕೂಡಿಸುವುದು ಹೇಗೆ ಎನ್ನುವುದು.

ಎರಡನೇದು, ಈ ಉಪಲಬ್ಧವಾದ ಸಾಮಗ್ರಿಗಳ ಅಧ್ಯಯನದಿಂದ ಈಗಾಗಲೇ ಸ್ವಲ್ಪಮಟ್ಟಿಗೆ ನಮಗೆ ಮೂಡಿರುವಂತಹ ದೇಸೀ ಪರವಾದ ಕಾಳಜಿಗಳು ಇವೆಯಲ್ಲ, ಅಂದ್ರೆ ಯಾವುದೇ ಪ್ರೇರಣೆ ಪ್ರಭಾವಗಳ ಹಂಗಿಲ್ಲದೇ ಕನ್ನಡ ಸಾಹಿತ್ಯ ತಾನು ನಿಂತ ನೆಲದ ಜಾನಪದ ಐತಿಹ್ಯ, ಪುರಾಣ, ಇತಿಹಾಸ ಇವುಗಳ ಬೇರು ಹಿಡಕೊಂಡು ಹೊಸದಾಗಿ ಅರಳಿಕೊಳ್ಳಬೇಕು ಎಂಬ ಹೊಸ ಎಚ್ಚರ ಹುಟ್ಟಿಕೊಳ್ತಲ್ಲ, (ದಲಿತ-ಬಂಡಾಯ ಧೋರಣೆ ಕೂಡಾ ಮುಖ್ಯವಾಗಿ, ಇದೇ ನಿರ್ಲಕ್ಷಿತ ಸ್ತರಗಳದ್ದು ಅಂತಿಟ್ಕೊಳ್ಳಿ). ಈ ಬಗೆಯ ದೇಶೀಪರವಾದ ಧೋರಣೆಗಳನ್ನು ರೂಢಿಸುವುದಕ್ಕೆ ಈಗ ಸಿಕ್ಕಿರೋ ಮೆಟಿರಿಯಲ್ ಒಂದು ಪ್ರಚೋದನೆಯಾಗಿ ಕೆಲಸ ಮಾಡಬಹುದಾ ಅನ್ನುವುದನ್ನು ನೋಡಬಹುದು.

ಪ್ರಶ್ನೆ: *ಅಲ್ಲ ಸಾರ್, ಈಗ ಈ ನವೋದಯ ಸಾಹಿತ್ಯದ ಆರಂಭಕ್ಕೆ ಏನು ಪಾಶ್ಚಾತ್ಯ ಸಾಹಿತ್ಯದ ಪ್ರೇರಣೆಯಾಯ್ತು ಅಂದ್ರಲ್ಲಾ....*

ಜಿಎಸ್ಎಸ್: ಆರಂಭದಿಂದ ಹಿಡಿದು ದಲಿತ-ಬಂಡಾಯ ತನಕಾನೂ ಇಟ್ಕೊಳ್ರೀ. ಒಂದಲ್ಲ ಒಂದು ರೀತಿಯ ಪಾಶ್ಚಾತ್ಯ ಪ್ರೇರಣೆಗಳು ನಮ್ಮ ಹಿಂದೆ ಕೆಲಸ ಮಾಡ್ತಲೇ ಇವೆ. ಹೀಗೆ ನಮಗೆ ಬೇಕಾದ ಪ್ರೇರಣೆಗಳನ್ನು ನಾವು ಎಲ್ಲಿಂದ ಬೇಕಾದರೂ ಪಡೆದುಕೋಬಹುದು. ಅದೇನೂ ತಪ್ಪಲ್ಲ. ಆದರೆ ಇವುಗಳಿಂದ ಹುಟ್ಟಿದ ಸಾಹಿತ್ಯ ಕೇವಲ ಅನುಕರಣವಾಯಿತೇ ಅನುಸರಣವಾಯಿತೇ ಅನ್ನೋದನ್ನ ನೋಡ್ದಾಗ, ಒಂದೊಂದು ಸಲ ಅನ್ಯಸಾಹಿತ್ಯದ ದಟ್ಟವಾದ ನೆರಳು ಕಾಣಿಸಿಕೊಂಡರೂ, ಒಟ್ಟಾರೆಯಾಗಿ ಹೇಳೋದಾದ್ರೆ ನಮ್ಮ ಸ್ವಂತದ್ದನ್ನ ಬೆಳೆದುಕೊಂಡಿದೀವಿ ಅನ್ನಿಸುತ್ತದೆ. ನಮ್ಮ ಪ್ರಾದೇಶಿಕ ಪ್ರತಿಭೆ, ಪಶ್ಚಿಮದ ಪ್ರಭಾವಗಳಿಗೆ ಸೃಜನಾತ್ಮಕವಾಗಿ ಮುಖಾಮುಖಿಯಾಗುತ್ತ ತನಗೆಷ್ಟು ಬೇಕೋ ಅಷ್ಟನ್ನ ತಗೊಂಡಿದೆ. ನವೋದಯದ ಸಂದರ್ಭದಲ್ಲಿ ಪಾಶ್ಚಾತ್ಯ ಪ್ರೇರಣೆಯನ್ನ ಸ್ವೀಕರಿಸದ ನಾಟಕಗಳನ್ನು ನೋಡ್ರಿ. ಶೇಕ್ಸ್‌ಪಿಯರನ ಒಂದೂ ನೇರವಾದ ಅನುವಾದ ನಮ್ಮಲ್ಲಿಲ್ಲ. 'ಶೂರಸೇನ ಚರಿತ್ರೆ' ಅಂತೆ. 'ಪುಂಡಗಂಡ ತುಂಟ ಹೆಂಡ್ತಿ', ಈ ತರ ಅನೇಕ ಹೆಸರುಗಳು ಸಿಕ್ತಾವೆ ಅಲ್ಲಿ. ಎಲ್ಲವನ್ನು ಭಾರತೀಕರಣ ಅಥವಾ ಕನ್ನಡೀಕರಣಗೊಳಿಸುವ ಒಂದು ಕ್ರಮವಿತ್ತು.

ಪ್ರಶ್ನೆ: *ಸರ್ ನಾವು ಕೇಳಬಯಸಿದ್ವೇನಂದ್ರೆ, ನಮ್ಮ ಹೊಸಗನ್ನಡ ಸಾಹಿತ್ಯದ ಸ್ವರೂಪ ಇದೆಯಲ್ಲ, ಅದು ಪಾಶ್ಚಾತ್ಯ ಪ್ರೇರಣೆಯಿಂದ ಶುರುವಾಯ್ತು ಅನ್ನೋ ಒಂದು ಥಿಯರಿಯನ್ನ ಹೇಗೆ ಪುನರ್‌ವಿಮರ್ಶಿಸಬಹುದು ಅಂತ. ಯಾಕೆಂದರೆ 18-19 ಶತಮಾನದ ಒಳಗೆ ನಮ್ಮ ಕನ್ನಡ ಸಂಸ್ಕೃತಿ ಸೃಷ್ಟಿಸಿದ ಅನೇಕ ಚಲನೆಗಳು.....*

ಜಿಎಸ್ಎಸ್: ಅದನ್ನ ಕುರಿತೇ ಮಾತಾಡ್ತಾ ಇದ್ದೀವಲ್ಲ. ಬೇಂದ್ರೆಯವರ ಬರೆಹಗಳನ್ನೆ ನೋಡಿ. ಎಲ್ಲಕ್ಕಿಂತ ಭಿನ್ನವಾಗಿವೆ. ಬೇಂದ್ರೆ, ಪುತಿನ ಇವರ ಪ್ರತಿಕ್ರಿಯೆ ಇದೆಯಲ್ಲ, ವೆಸ್ಟರ್ನ್ ಥಾಟ್ಸ್‌ಗೆ ಅವು ತುಂಬ ಬೇರೆಯಾಗಿವೆ. ಅವರ ಕಾವ್ಯದ ಬೇರುಗಳನ್ನ ವೆಸ್ಟ್‌ನಲ್ಲಿ ಹುಡುಕೋಕಾಗಲ್ಲ.

ಪ್ರಶ್ನೆ: *ಮಧುರಚೆನ್ನರದ್ದು?*

ಜಿಎಸ್ಎಸ್: ಮಧುರಚೆನ್ನರ ಬಗ್ಗೆ ಇನ್ನು ಒಂದು ಮಾತು ಹೇಳಬೇಕು. ಈಗ ಮೊದಲೆ ನಾನು ಹೇಳಿದೆನಲ್ಲ, ಕನ್ನಡ ಸಾಹಿತ್ಯದ ಹಿಂದೆ ಶರಣರ ನಂತರ ತತ್ವಪದಕಾರರ ಒಂದು ಅಭಿವ್ಯಕ್ತಿ ಇತ್ತಲ್ಲ, ಅದರ ಒಂದು ಮಾಡ್ರನ್ ವರ್ಶನ್ ಮಧುರಚೆನ್ನರದು.

*ಪ್ರಶ್ನೆ:* *ಇದೇ ಮಾತನ್ನ ಕುವೆಂಪು ವಿಷಯದಲ್ಲಿ ಹೇಳೋಕಾಗುತ್ತಾ?*

ಜಿಎಸ್ಎಸ್: ಕುವೆಂಪು ಮಿಸ್ಟಿಕ್ ಅಂತಾ ಯಾರ್ ಹೇಳ್ತಾರೆ?

*ಪ್ರಶ್ನೆ:* *ಅಲ್ಲ, 18-19ನೇ ಶತಮಾನದ ಕರ್ನಾಟಕ ಸಂಸ್ಕೃತಿ ಸೃಜಿಸಿದ ಈ ಧಾರೆಗಳಿಗೆ ಕುವೆಂಪು ಮುಖಾಮುಖಿಯಾದ ಬಗೆ ಇದೆಯಲ್ಲ.*

ಜಿಎಸ್ಎಸ್: ಬಹಳ ಇಟ್ರೆಸ್ಟಿಂಗ್ ಕ್ವೆಶ್ಚನ್ ಇದು. ಕುವೆಂಪು ಹುಟ್ಟಿದ್ದು ಬೇಂದ್ರೆಗಿಂತ ಭಿನ್ನವಾದ ಪರಿಸರದಲ್ಲಿ; ಅನಕ್ಷರಸ್ತರ, ತುಳಿತಕ್ಕೊಳಗಾದ ಸಾಮಾಜಿಕ ಸ್ತರದಲ್ಲಿ ಹುಟ್ಟಿದ ಕುವೆಂಪು ಆರಿಸಿಕೊಂಡ ದಾರಿಯೇ ಬೇರೆ. ಕುವೆಂಪು ಬೇಂದ್ರೆ ಥರಾ ಅವರ ಪರಿಸರದ ಭಾಷೆಯಲ್ಲಿಯೇ ಬರೆದಿದ್ರೆ ಯಾರೂ ಅದನ್ನು ಮೆಚ್ಚುತ್ತಿರಲಿಲ್ಲ. 'ಶೂದ್ರನಿಗೆ ಶಿಷ್ಟಭಾಷೆ ಹ್ಯಾಗೆ ಬಂದೀತು' ಅಂದಿರೋರು. ಬೇಂದ್ರೆ ಅದನ್ನ ಬಿಟ್ಟುಕೊಟ್ಟು ಬರೆದದ್ದೇ ಒಂದು ಹಿರೋಯಿಸಂ ಆಯ್ತು.

*ಪ್ರಶ್ನೆ:* *ಅಂದ್ರೆ ಕುವೆಂಪು ಅವರಿಗೆ ಬೇರೆ ಚಾರಿತ್ರಿಕ ಒತ್ತಡ ಇತ್ತು.*

ಜಿಎಸ್ಎಸ್: ಹೌದು. ಕುವೆಂಪು ವಸಾಹತುಶಾಹಿಯನ್ನು ಸ್ವಾಗತ ಮಾಡಿದೋರು. ಯಾಕೆಂದ್ರೆ ಇಂಗ್ಲೀಷರ ಆಡಳಿತ ಮತ್ತು ಶಿಕ್ಷಣ ಇವೆರಡೂ ಕೂಡಾ ಕೆಳವರ್ಗದವರಿಗೆ ಬಿಡುಗಡೆಯ ದಾರಿ ಎನ್ನುವಂತಹ ಧೋರಣೆ ಅವರದು. ಅರವಿಂದರು ಒಂದು ಕಡೆ ಈ ವಸಾಹತುಶಾಹಿ ಸಂದರ್ಭದ ಬಂಗಾಳಿ ಸಾಹಿತ್ಯದ ಬಗ್ಗೆ ಬರೆಯುತ್ತ ಮೂರು ಪ್ರತಿಕ್ರಿಯೆ ತೋರಿಸ್ತಾರೆ. ಒಂದು ಭಾಳಾ ಮುಕ್ತವಾಗಿ ಪಾಶ್ಚಾತ್ಯ ಪ್ರಭಾವಗಳನ್ನು ಬರಮಾಡಿಕೊಳ್ಳೋದು. ಎರಡನೇದು ಅದನ್ನು ಬರಮಾಡಿಕೊಂಡರೂ ಅದಕ್ಕೆ ಸಂಪೂರ್ಣ ವಶವಾಗದೆ, ನಮಗೆಷ್ಟು ಬೇಕು ಅಷ್ಟನ್ನ ಉಪಯೋಗಿಸ್ಕೊಂಡು ನಮ್ಮಲ್ಲಿ ಹೊಂದಿಸಿ ಕೊಳ್ಳೋದು. ಮೂರನೇದು ಸಂಪೂರ್ಣವಾಗಿ ಆ ಪ್ರಭಾವವೇ ಬೇಕಾಗಿಲ್ಲ ಅನ್ನೋ ಧೋರಣೆ. ಅದು ಇಲ್ಲಿಗೂ ಅಪ್ಲೈ ಆಗುತ್ತೆ. ನಮ್ಮಲ್ಲಿ ಈ ಮೂರೂ ಇತ್ತು. ಒಂದು ನಾವು ಬದಲಾಗೋದಿಕ್ಕೆ ಪಶ್ಚಿಮದ ಪ್ರೇರಣೆ ಇಲ್ದೇ ಇದ್ರೆ ಅಸಂಗತರಾಗ್ತೀವಂತ. ಇನ್ನೊಂದು ನೀವು ಒಪ್ಪಲೀ ಬಿಡ್ಲೀ, there was military power behind it. ಆದರೆ ಸೈನಿಕ ಬ್ರಿಟಿಷರನ್ನು ನಾವು ಎಷ್ಟು ದೂರ ಇರಿಸಿದ್ವೊ, ಇಂಗ್ಲಿಷನ್ನ ಅಷ್ಟೇ ಪ್ರೀತಿಸಿದಿವಿ. ಕುವೆಂಪು ಅದನ್ನ ಬರ್ಕೋತಾರೆ. ನನಗೆ ಇಂಗ್ಲಿಷರನ್ನ ಕಂಡ್ರೆ ಎಷ್ಟು ದ್ವೇಷವೋ ಇಂಗ್ಲಿಷ್ ಭಾಷೆ ಕಂಡ್ರೆ ಅಷ್ಟೇ ಪ್ರೇಮ ಅಂತ. ಇವೆಲ್ಲ ಚಾರಿತ್ರಿಕ ಸತ್ಯಗಳು. ಬೇಂದ್ರೆಯವರಿಗಿಂತ ಕುವೆಂಪು ನಮಗೆ ಅನೇಕ ಕಾರಣಗಳಿಂದ ಸಾಂಸ್ಕೃತಿಕ ವಾಗಿ ಬಹಳ ಮುಖ್ಯವಾಗುತ್ತಾರೆ.

*ಪ್ರಶ್ನೆ:* *ಬೇಂದ್ರೆ ಮತ್ತು ಕುವೆಂಪು ಅವರಲ್ಲಿ, ಕುವೆಂಪು ಜೊತೆಗೆ ನೀವು ಗುರ್ತಿಸಿಕೊಂಡ್ರಿ, ಯಾಕೆ?*

ಜಿಎಸ್ಎಸ್: ಕುವೆಂಪು ಅವರ ಸಾಕ್ಷಾತ್ ಶಿಷ್ಯ ನಾನು. ಅವ್ರ ವ್ಯಕ್ತಿತ್ವ ಅದ್ಭುತವಾಗಿತ್ತು. ಅವ್ರು ಅನೇಕ ಕಾರಣಗಳಿಗಾಗಿ ನನ್ನನ್ನ ಭಾಳ ಇಷ್ಟಪಡ್ತಾ ಇದ್ರು. ನಾನು ಕುವೆಂಪು ಅವ್ರ ಛಾಯೆಯಲ್ಲಿ ಬೆಳೆದವನು. ಆದರೆ ಛಾಯಾನುವರ್ತಿ ಅಲ್ಲ.

*ಪ್ರಶ್ನೆ:* *ಮತ್ತೆ ಅವ್ರ ವೈಚಾರಿಕತೆ ಕೂಡ ನಿಮಗೆ......*

ಜಿಎಸ್ಎಸ್: ಅದ್ಭುತವಾದ ವೈಚಾರಿಕತೆ ಅವರದು. ಅದು ಈ ದೇಶದ ಚರಿತ್ರೆ ಹಾಗೂ ವಾಸ್ತವವನ್ನು ತೀಕ್ಷ್ಣವಾಗಿ ಪರೀಕ್ಷಿಸಿ ನೋಡುವ ವೈಚಾರಿಕತೆ. ನಾವು ವಿದ್ಯಾರ್ಥಿಗಳಾಗಿದ್ದ ಕಾಲಕ್ಕೆ ಬೇಂದ್ರೆಯವರ ಸಂಪರ್ಕ ನಮಗೆ ಬರಲಿಲ್ಲ. ಬೇಂದ್ರೆಯವರ ಭಾಷೆಯೇ ಆ ಕಾಲಕ್ಕೆ ನಮಗೆ ಅಪರಿಚಿತ-ವಿಲಕ್ಷಣ. 'ಅಂಬಿಕಾತನಯನತ್ತೆ ಬಾ' ಅಂದ್ರೇನು? ಗೊತ್ತಿಲ್ಲ. ಅತ್ತೇನೋ ಮಾವನೋ ಅಳಿಯನೋ ಏನಿದು? 'ನೀ ಹೀಂಗ ನೋಡಬ್ಯಾಡ ನನ್ನ' ಇದೆಲ್ಲ ನಮಗೆ ಬಹಳ ವಿಲಕ್ಷಣವಾದ ರೀತೀಲಿ ಕಾಣ್ತಿದ್ವು. ಮುಂದೆ ಬೇಂದ್ರೆಯವರ ಗ್ರೇಟ್‌ನೆಸ್ ಗೊತ್ತಾಯಿತು. ಅದು ಬೇರೆ ವಿಚಾರ. ಅಲ್ದೇ ಕನ್ನಡಕ್ಕೆ ಬಿಎಂಶ್ರೀ, ಕುವೆಂಪು ತಂದ ಕಾವ್ಯರೂಪಾನೇ ನಿಜಕ್ಕೂ ಹೊಸದು. ಬೇಂದ್ರೇದು ಅಲ್ಲ. Bendre was a contiunation of the Folk tradition. ಆ ಹಾಡುಗಳು ಹಾಗೂ ಅವರ ಕಾವ್ಯದ ರೂಪಗಳು ನಮಗೆ ಅಪರಿಚಿತವಾಗಿರ್ಲಿಲ್ಲ. ಆದ್ರೆ ಪರಿಚಿತವಾದ ಸಾಮಗ್ರಿಯ ಮೂಲಕ ಎಷ್ಟು ಅಪರಿಚಿತ ವಿನೂತನವಾದ ಕಾವ್ಯವನ್ನು ಕಟ್ಟಿದ್ರು ಅನ್ನೋದು, ಈಗ ಅರ್ಥವಾಗ್ತಾ ಇದೆ.

*ಪ್ರಶ್ನೆ:* *'ಕಾನೂರು ಹೆಗ್ಗಡತಿ'ಯಂತಹ ಒಂದು ನಾವೆಲ್ ಹುಟ್ಟಿದ್ರೂ ಕೂಡಾ, ನಿಮ್ಮ ತಲೆಮಾರಿನವರು ಕುವೆಂಪು ಅವರ ಪೊಯಿಟ್ರಿಯಿಂದ ಪ್ರಭಾವಿತರಾದ್ರಿ. ಅವರ ಕಾವ್ಯ ಶೈಲಿ ಮಾಡಿದ ಪರಿಣಾಮಕ್ಕೆ ಹೋಲಿಸಿದ್ರೆ ನಾವೆಲ್ಲುಗಳು ಮಾಡಿದ ಪರಿಣಾಮಗಳು ಕಡಿಮೆ ಅಂತಾ ಅನ್ನಿಸೋದಿಲ್ಲವೇ?*

ಜಿಎಸ್ಎಸ್: ನನ್ನ ಕ್ಷೇತ್ರ ನಾವೆಲ್ ಅಲ್ಲ. ನಾನು ವಿಮರ್ಶೆ ಮತ್ತು ಕಾವ್ಯಕ್ಕೆ ಸೀಮಿತವಾದೆ. ಆದ್ರೆ 'ಕಾನೂರು ಸುಬ್ಬಮ್ಮ ಹೆಗ್ಗಡತಿ' ಒಳ್ಳೇ ಕಾದಂಬರಿ ಅಂತಾ ಗೊತ್ತಿತ್ತು. ಅದರ ಬಗ್ಗೆ ನಿಜವಾದ ಚರ್ಚೆ ಶುರುವಾದದ್ದು ಇತ್ತೀಚೆಗೆ ಅನಿಸುತ್ತೆ. ಆಗ ಕತೆ ಕಾದಂಬರಿ ಕುರಿತು ಯಾರೂ ಚರ್ಚೆ ಮಾಡ್ತಿರಲಿಲ್ಲ. ಕಾರಣವೇನೆಂದರೆ ನಮ್ಮ ಇಡೀ ಭಾರತೀಯ ಪರಂಪರೆಯೊಳಗೆ ಕಾವ್ಯ ಕೇಂದ್ರಿತ ಚರ್ಚೆಯೇ ಸಾಹಿತ್ಯದ ಚರ್ಚೆ. ಕಾವ್ಯ ಮೀಮಾಂಸೆಯೇ ಸಾಹಿತ್ಯ ಮೀಮಾಂಸೆ. ಅದು

ನವೋದಯದಲ್ಲೂ ಕಂಟಿನ್ಯೂ ಆಯ್ತು. So poetry was the centre of discussion of all literary theories, ಪ್ರಗತಿಶೀಲದಲ್ಲಿ ಆ ಚರ್ಚೆ ನಡೀಲಿಲ್ಲ. ನವ್ಯದಲ್ಲಿ ಮತ್ತೆ ಕಾವ್ಯ ಕೇಂದ್ರಿತ ಚರ್ಚೆ ಶುರುವಾಯ್ತು. ಆದರೆ ದಲಿತ-ಬಂಡಾಯದ ಸಂದರ್ಭದಲ್ಲಿ ಮಾತ್ರ ಸೆಂಟರ್ ಛೇಂಜ್ ಆಯ್ತು. ಅಲ್ಲಿ ಸಮಾಜಕೇಂದ್ರಿತ ಸಾಹಿತ್ಯ ಚರ್ಚೆ ಮುಖ್ಯವಾಯ್ತು. ಈ ನಾವಲ್ ಇದೆಯಲ್ಲ ಅದರ ವಸ್ತು ಕೂಡ ಸಮಾಜಕೇಂದ್ರಿತವಾದದ್ದು. ಹೀಗಾಗಿ ಕಥೆ ಕಾದಂಬರಿಗಳ ವಿಮರ್ಶೆ ನವ್ಯದ ಸಂದರ್ಭದಲ್ಲಿ ಪ್ರಾರಂಭವಾದರೂ, ಅದು ಬೇರೆಯ ಆಯಾಮಗಳನ್ನು ಪಡೆದುಕೊಂಡದ್ದು ನವ್ಯೋತ್ತರದಲ್ಲೇ.

ಪ್ರಶ್ನೆ: *ಸರ್ ಬೇಂದ್ರೆ ನಿಮಗೆ ದೊಡ್ಡ ಕವಿಯಾಗಿ ದಕ್ಕಲಿಕ್ಕೆ ಪ್ರಾರಂಭವಾದ ಮೇಲೂ ನೀವು ಇನ್‌ಫ್ಲುಯೆನ್ಸ್ ಆದಂತೆ ಕಾಣಲ್ಲ.*

ಜಿಎಸ್ಎಸ್: ಇಲ್ಲ, ಆಗೋಕೆ ಸಾಧ್ಯವಿಲ್ಲ. It was too late. ಇನ್‌ಫ್ಲುಯೆನ್ಸ್ ಆಗೋದಕ್ಕೂ ಒಂದು ವಯೋಮಾನ ಬೇಕು ಅಂತ ಕಾಣುತ್ತೆ.

ಪ್ರಶ್ನೆ: *ನೀವು ಮತ್ತೆ ಬಂಡಾಯಕ್ಕೆ ಒಲಿದಿರಿ. ಆಗ ವಯೋಮಾನ ತಡೆಹಿಡೀಲಿಲ್ವಾ?*

ಜಿಎಸ್ಎಸ್: ನನ್ನನ್ನು ತಡೆ ಹಿಡಿಯೋ ಪ್ರಶ್ನೇನೇ ಇಲ್ಲ. It is a question of my temperment you see. ಕುವೆಂಪು ವೈಚಾರಿಕವಾಗಿ ಬೇಂದ್ರೆಗಿಂತ ದೊಡ್ಡ ಬಂಡಾಯಗಾರರು ಅನ್ನೋದನ್ನು ಮರೀಬೇಡಿ. ನಾನು ಬೆಳೆದದ್ದು ಅಲ್ಲಿ. ನಾನು ಬೇಂದ್ರೆಯಿಂದ ಇನ್‌ಫ್ಲುಯೆನ್ಸ್ ಆಗ್ಬೇಕಾದ್ರೆ ಯಾವುದರಲ್ಲಾಗ ಬೇಕು? ಭಾಷೆಯಲ್ಲೆ? ಉಹುಂ. ಅವರ ಕಾವ್ಯದ ಭಾಷೆ ನನ್ನ ಕಡೆಯ ಭಾಷೆ ಅಲ್ಲ. ಬಹುಶಃ ಅವರ ಲಿರಿಕಲ್ ಕ್ವಾಲಿಟಿ ನನಗೆ ತುಂಬ ಇಷ್ಟ. ಆದ್ರೆ ಬೇಂದ್ರೆಗಿಂತ ಪ್ರಬಲವಾದ ಇನ್‌ಫ್ಲುಯೆನ್ಸು ನನ್ನ ಪಕ್ಕದಲ್ಲಿತ್ತು. ಕುವೆಂಪು ಅವರ ವೈಚಾರಿಕತೆ, ಅವರ ಬಂಡಾಯ ಮನೋಧರ್ಮ, ಅವರ ಅದ್ವೈತ. ಇದು ಶೂದ್ರನಾದ ನನಗೆ was nearer than ಬೇಂದ್ರೆ.

ಪ್ರಶ್ನೆ: *ಕುವೆಂಪು ಬಿಟ್ಟರೆ ಬೇರೆ ಯಾವ ಲೇಖಕನ ಪ್ರಭಾವ ನಿಮಗೆ ಆಯಿತು?*

ಜಿಎಸ್ಎಸ್: ವರ್ಡ್ಸ್‌ವರ್ತ್. ಆಮೇಲೆ ಕೀಟ್ಸ್‌ನ್ನ, ಎಲಿಯಟ್‌ನ ಓದ್ಕೊಂಡಿದೀನಿ. ಇನ್‌ಫ್ಲುಯನ್ಸ್‌ಗೋಸ್ಕರ ಯಾರೂ ಓದಲ್ಲ, ಓದಬಾರದು. ನಾವು ಬೆಳೆಯೋದಕ್ಕೋಸ್ಕರ ಓದ್ತೀವಿ.

ಪ್ರಶ್ನೆ: *ಕುವೆಂಪು ವಚನಕಾರರ ಮನೋಧರ್ಮಕ್ಕೆ ಹತ್ರ ಇದ್ರೂ ಅವರಿಗೆ ವಚನಕಾರರು ಮುಖ್ಯವಾಗಿಲ್ಲ.*

ಜಿಎಸ್ಎಸ್: That is the problem. ಕುವೆಂಪು ವಚನಕಾರರ ಪ್ರಭಾವಕ್ಕೆ ಒಳಗಾಗಲಿಲ್ಲ. ಒಳಗಾಗಿದ್ರೆ ಭಾಳ ಚೆನ್ನಾಗಿತ್ತು ಅನ್ನಿಸುತ್ತೆ. ಕುವೆಂಪುರವರ ಚಿಂತನಕ್ರಮ

ಇದೆಯಲ್ಲ ದೇವಸ್ಥಾನ, ಧರ್ಮ, ಕೆಳವರ್ಗದ ಕಾಳಜಿಗಳು, ಸಾಮಾಜಿಕ ನ್ಯಾಯ; ಇವೆಲ್ಲ ವೈಚಾರಿಕವಾಗಿ ವಚನಕಾರರಿಗೆ ಹತ್ರ. ಭಾಷಿಕವಾಗಿ ಅವರದು ಮಾರ್ಗ, ದೇಶಿಯಲ್ಲ. ಕುವೆಂಪು ಯಾಕೆ ವಚನಕಾರರಿಂದ ಪ್ರಭಾವಿತರಾಗಲಿಲ್ಲ ಅನ್ನೋದು ನನಗೆ ಈ ಹೊತ್ತಿಗೂ ಆಶ್ಚರ್ಯ. ನಮಗೆ ಆನರ್ಸ್ ತರಗತೀಲಿ ಅಂಬಿಗರ ಚೌಡಯ್ಯನ ವಚನಗಳನ್ನು ಪಾಠ ಮಾಡ್ತಾ ಇದ್ರು. ಕುವೆಂಪು ಅನೇಕ ವರ್ಷಗಳ ಕಾಲ 'ರಾಮಾಯಣ ದರ್ಶನಂ' ಮಹಾಕಾವ್ಯದೊಳಗೆ ಮುಳುಗಿ ಹೋಗಿದ್ರು. ಇದನ್ನು ಬರೆಯೋದಕ್ಕೆ ಅವರು ಸುಮಾರು ಹತ್ತು ವರ್ಷ ತಗೊಂಡ್ರು. ಕಾಲೇಜಿಗೆ ಬಂದು ಅವ್ರು ಪಾಠ ಮಾಡ್ತಿದ್ರು. ಹೋಗ್ತಿದ್ರು. ನಮ್ಮ ನಿಮ್ಮಂಗೆ ಬಿಡುವು ಮಾಡಿಕೊಂಡು 'ಅದು ಓದಬೇಕು, ಇದು ಓದಬೇಕು' ಆ ಥರಾ ಇರ್ಲಿಲ್ಲ. 50ರ ದಶಕದವರೆಗೆ He was so busy. ಅವ್ರು, ಇಡೀ 'ರಾಮಾಯಣ ದರ್ಶನಂ' ಬರೆಯೋದಲ್ಲ, ಅದನ್ನು ಬದುಕ್ತಾ ಇದ್ದರು. ಎಷ್ಟರಮಟ್ಟಿಗೆ ಅದನ್ನು ಬದುಕ್ತಾ ಇದ್ದರು ಅಂತಂದ್ರೆ, ಕಾಲೇಜಿಗೆ ಹೋಗ್ತಿರೋವಾಗ ಯಾರಾದರೂ 'ನೀವೀಗ ಎಲ್ಲಿದ್ದೀರಿ' ಅಂದ್ರೆ 'ನಾನೀಗ ಸಮುದ್ರಕ್ಕೆ ಸೇತುವೆ ಕಟ್ಟಿಸ್ತಾ ಇದೀನಿ'. 'ಈಗೆಲ್ಲಿದೀರಿ?' ಅಂದ್ರೆ, 'ನಾನೀಗ ಕಿಷ್ಕಿಂಧದಲ್ಲಿದ್ದೀನಿ'- ಈ ಥರಾ ಪ್ರತಿಕ್ರಿಯಿಸ್ತಿದ್ರು. ವರ್ಷಗಳ ಕಾಲ ಆ ಮೂಡಲ್ಲಿ ಬದುಕೋದಿದೆಯಲ್ಲ, ಅದು ನಮಗೆ ಅರ್ಥ ಆಗಬೇಕು. ಒಂದು ಎಪಿಕ್ ರೈಟಿಂಗ್ ಅನ್ನೋದೇ ಹಾಗೆ. ಹೀಗಾಗಿ ಅವ್ರೀಗೆ ಎಲ್ಲವನ್ನು ಓದೋಕಾಗ್ಲಿಲ್ಲ.

ಪ್ರಶ್ನೆ: *ಆ ಕಾಲಕ್ಕೆ ಹಳಕಟ್ಟಿಯವರು ಸಂಪಾದಿಸಿದ ವಚನ ಇತ್ತಲ್ಲ ಸಾರ್. ಬಹುಶಃ ಮುಂದೆ ರಾಮಕೃಷ್ಣ ಆಶ್ರಮದ ಪ್ರಭಾವ ಅವರನ್ನ ರೂಪಿಸತೊಡಗಿತು.*

ಜಿಎಸ್‌ಎಸ್: ನೀವು ಹೇಳಿದ್ದು ಸರಿ. ಕನ್ನಡದಲ್ಲಿ ಏನಾದ್ರು ರಾಮಕೃಷ್ಣ, ವಿವೇಕಾನಂದರು ಇಂಟರ್‌ಪ್ರಿಟ್ ಆಗಿದ್ರೆ ಅದು ಕುವೆಂಪು ಮೂಲಕಾನೇ. ವಿವೇಕಾನಂದರ ವೈಚಾರಿಕತೆ, ವಚನಕಾರರಿಗಿಂತ ಅವರಿಗೆ ಭಾಳಾ ಹಿಡಿಸ್ತು. ಹೀಗೆ ಈ ಸಂಬಂಧಗಳನ್ನು ಲಿಂಕ್ ಮಾಡಬಹುದು, ಅಷ್ಟೇನೆ.

ಪ್ರಶ್ನೆ: *ಬಹುಶಃ ಕುವೆಂಪು ಅವರು ಬಸವಣ್ಣನವರನ್ನು ಒಬ್ಬ ಪೊಯೆಟ್ ಅನ್ನೋದಕ್ಕಿಂತ ಹೆಚ್ಚಾಗಿ ಒಬ್ಬ ಸಮಾಜ ಸುಧಾರಕ ಅಂತ ಗ್ರಹಿಸಿದ ಹಾಗೆ ಕಾಣುತ್ತೆ. ಉದಾ:ಗೆ ಅವರ 'ಶ್ರೀ ಬಸವೇಶ್ವರರು' ಲೇಖನ. ನೀವು ನಿಮ್ಮ ಗುರುಗಳಿಗಿಂತ ಬೇರೆಯಾಗಿ ವಚನಕಾರರ ಗ್ರಹಿಸೋದಿಕ್ಕೆ ಶುರುಮಾಡಿದಿರಿ. ಒಬ್ಬ ವಿದ್ವಾಂಸರಾಗಿ ಬೇಕಾದಷ್ಟು ಬರೆದಿದ್ದೀರಿ. ಆದರೆ ಪೊಯೆಟ್ ಆಗಿ ನೀವು ವಚನಕಾರರನ್ನು ಹ್ಯಾಗೆ ಮುಖಾಮುಖಿ ಮಾಡಿದಿರಿ?*

ಜಿಎಸ್ಎಸ್: ಬಹುಶಃ ನನ್ನ ಭಾಷೆಯ ಮೇಲೆ ವಚನಕಾರರ ಪ್ರಭಾವ ಆಗಿರಬೇಕು. ವಚನಕಾರರ ವೈಚಾರಿಕತೆ ನನ್ನ ಮೇಲೆ ತುಂಬ ಪ್ರಭಾವ ಬೀರಿದೆ.

*ಪ್ರಶ್ನೆ: ಅಲ್ಲಮ ಮತ್ತು ಬಸವಣ್ಣ ಇವರಿಬ್ರಲ್ಲಿ ನಿಮ್ಮ ಆಯ್ಕೆ ಯಾರು?*

ಜಿಎಸ್ಎಸ್: ಬಸವಣ್ಣ. ಇವನಿಗಿರುವ ಸ್ಪಂದಮಾನತ್ವ ಇನ್ನಾರಿಗಿದೆ? ಆ ಸಂಕಟ, ಆ ಸಂಘರ್ಷ ನೋಡಿದರೆ He is most Human. ಅಲ್ಲಮ ಅತೀತವಾದವನು. ಅಲ್ಲಮ is great. Basava is dearer. ಅಲ್ಲಮ ಆಕಾಶ, ಬಸವಣ್ಣ ಈ ನೆಲ.

*ಪ್ರಶ್ನೆ: ಇತ್ತೀಚಿನ ದಲಿತ ಕಾವ್ಯಗಳ ಜೊತೆ ನಿಮ್ಮ ಅನುಸಂಧಾನ ವಿವರಿಸಿ.*

ಜಿಎಸ್ಎಸ್: ಈಚೆಗೆ ಕೆ.ಬಿ. ಸಿದ್ದಯ್ಯನವರ 'ದಕ್ಲ ದೇವಿ ಕಥಾಕಾವ್ಯ' ಅದ್ನ ನೋಡ್ತಾ ಇದ್ರೆ ಮಂಟೇಸ್ವಾಮಿ ಕಾವ್ಯಕ್ಕೂ ಅದಕ್ಕೂ ವ್ಯತ್ಯಾಸಾನೇ ಕಾಣೋದಿಲ್ಲ. ಇದು ನೋಡ್ರಿ, ನಮ್ಮ ಸಿದ್ದಯ್ಯ ಇದೇ ಈ ಜನಪದೀಯ ಪರಂಪರೆಯ ಭಾಷೆ-ಕಾವ್ಯ ಇದರ ಹಿನ್ನೆಲೆಯಲ್ಲಿ ಬೆಳೆದವನು. ಅದ್ನ ಹ್ಯಾಗೆ ಬಳಸಿ ಕೊಂಡಿದಾನೇ ನಮಗೆ ಆಶ್ಚರ್ಯಕರವಾಗಿದೆ. ಮಂಟೇಸ್ವಾಮಿ ಕಾವ್ಯದ structureನಲ್ಲಿ ಕಥೆ ಬರೀತಾ ಸಮಕಾಲೀನತೆಯನ್ನು ವ್ಯಾಖ್ಯಾನಿಸುವ ಕ್ರಮ ವಿಶಿಷ್ಟವಾಗಿದೆ. ದಲಿತ ಕಾವ್ಯವನ್ನ ನಮ್ಮ ಡಿ.ಆರ್. ನಾಗರಾಜ ಎರಡು ಭಾಗ ಮಾಡ್ತಾರೆ. ಒಂದು ಸಾಮಾಜಿಕ ಆಕ್ರೋಶದ ನೆಲೆಯ ಕಾವ್ಯ (Poetry of Social Rage) ಇನ್ನೊಂದು ಅನುಭಾವದ ನೆಲೆಯ ಕಾವ್ಯ (Poetry of Spirutual Quest). ಸಾಮಾಜಿಕ ಆಕ್ರೋಶದ ನೆಲೆಯ ಕಾವ್ಯಕ್ಕೆ ಅಂಬೇಡ್ಕರ್ ಮೂಲಪ್ರೇರಣೆ. ಸಿದ್ದಲಿಂಗಯ್ಯನ ಪದ್ಯ, ಮುಳ್ಳೂರು ನಾಗರಾಜರ ಕಾವ್ಯ. ಈ ಅನುಭಾವ ನೆಲೆಯ ಕಾವ್ಯ ಇದೆಯಲ್ಲ, ಅನುಭಾವದ ಮೂಲಕ ದುಃಖವನ್ನು ಸಂಕಟವನ್ನು ದಾಟಿಕೊಂಡು ಹೋಗುವಂತಹ ಪ್ರಯತ್ನ ಇದೆಯಲ್ಲ, ಇದಕ್ಕೆ ದೇವನೂರು ಮಹಾದೇವ ಮತ್ತು ಸಿದ್ದಯ್ಯ ಬಹಳ ಬೆಸ್ಟ್ ಎಕ್ಸಾಂಪಲ್ಸ್. ದಕ್ಕಲರು ಅಂತಾ ಒಂದು ಜನಾಂಗ ಇದೆ. ಅಸ್ಪೃಶ್ಯರಲ್ಲಿ ಅಸ್ಪೃಶ್ಯರು ಅವು. ಅದು ಎಂಥಾ ಜನಾಂಗ ಅಂತಂದ್ರೆ, ಅವು ಅಸ್ಪೃಶ್ಯರ ಮೇಲೆ ಡಿಪೆಂಡಾಗಿ ಇರೋರು. ಸ್ವಂತ ಅಡಿಗೆ ಮಾಡೋ ಹಂಗಿಲ್ಲ. ರಾತ್ರಿ ಹೊತ್ತು ಬರೋದು. ಒಂದು ಮರದ ಬುಡದಲ್ಲಿ ಕೂತು, ಕೇರಿಯ ಜನ ಹಾಕುವ ಆಹಾರವನ್ನು ಎತ್ಕೊಂಡು ತಿನ್ನಾರೆ. ಇವರದೊಂದು ಮಿಥ್ ಇದೆ, ಏನಂದ್ರೆ ಭೂಮಿ ಸೃಷ್ಟಿ ಯಾಗೋದಕ್ಕಿಂತ ಆರು ತಿಂಗಳು ಮೊದಲು ಹುಟ್ಕೊಂಡನಂತೆ ಅವರ

ಮೂಲ ಪುರುಷ. ಇದು ನೋಡ್ರೀ, ಎಷ್ಟು ಇಂಟ್ರೆಸ್ಟಿಂಗ್. ಈ ಪುರಾಣ ಅನ್ನೋದು ಕೂಡಾ ವ್ಯಕ್ತಿತ್ವ ಹಾಗೂ ಪ್ರತ್ಯೇಕ ಅಸ್ತಿತ್ವದ ಮಹತ್ತನ್ನು ಗುರ್ತಿಸೊ ಒಂದು ವಿಧಾನ. ಮೇಲ್ವರ್ಗದವರಿಗೆ ಪ್ರತಿಷ್ಠೆ. ಕೆಳವರ್ಗದವರಿಗೆ ಐಡೆಂಟಿಟಿ. ನಾವು ಶ್ರೇಣೀಕರಣದಲ್ಲಿ ಏನಾಗಿದ್ದೇವೋ ಅದಕ್ಕೆ ಸಮಾಜ ಕಾರಣ, ನಾವಲ್ಲ. ಆದರೆ ನಾವೂ ಮನುಷ್ಯರು. ನಮಗೊಂದು ಐಡೆಂಟಿಟಿ ಇದೆ. ಅದನ್ನ ಕಾಯ್ಕೋಬೇಕು ಅನ್ನೋದಿದೆಯಲ್ಲ, ಅದು ದೊಡ್ಡ ವಿಚಾರ. ಅದಕ್ಕೇ ಅವರ ಪುರಾಣ ಹೇಳುತ್ತದೆ—'ನಮ್ಮ ಮೂಲಪುರುಷ ಭೂಮಿ ಹುಟ್ಟೋದಕ್ಕಿಂತ ಆರು ತಿಂಗಳು ಮೊದಲು ಹುಟ್ಟೋನು'.

ಪ್ರಶ್ನೆ: *ಮಂಟೇಸ್ವಾಮಿ ಕಾವ್ಯದಲ್ಲಿ ಕೂಡ ಭೂಮಿ ಹುಟ್ಟೋದಕ್ಕಿಂತ ಮೊದಲೇ ಮಂಟೇಸ್ವಾಮಿ ಹುಟ್ತಾನೆ; ಆದಕ್ಕೇ ಅವನಿಗೆ 'ಧರೆಗೆ ದೊಡ್ಡವರು' ಅಂತಾ ಹೆಸರು.*

ಜಿಎಸ್ಎಸ್: ಸಿದ್ದಯ್ಯನವರ 'ದಕ್ಲದೇವಿ ಕಥೆ'ಯೊಳಗೆ ಒಂದು ಇಂಟ್ರೆಸ್ಟಿಂಗ್ ಪ್ರಸಂಗ ಬರ್ತದೆ. ಚೆಲುವ ಅನ್ನೋನೊಬ್ಬ ತಪಸ್ ಮಾಡ್ತಾನೆ. ಜಲದೇವಿ ಪ್ರತ್ಯಕ್ಷಳಾಗಿ ನಿನಗೇನು ವರಾಬೇಕು ಅಂತ ಕೇಳ್ತಾಳೆ. ಅವನ್ಹೇಳ್ತಾನೆ: "ಕೆರೆ ಏರಿಗೆ ಏರಿಯೆಲ್ಲಾ ಮಾಂಸಖಂಡವಾಗಲಿ, ನೀರೆಲ್ಲ ಹೆಂಡವಾಗಿಬಿಡ್ಲಿ ತಾಯೀ" (ನಗು) ನನಗೆ ಶಾಕ್! ದಲಿತರ ಬದುಕಿನಲ್ಲಿ ಬಹಳ ಮುಖ್ಯವಾದದ್ದು ಹಸಿವು ಮತ್ತು ಅವಮಾನ. ಹಸಿವಿಗೆ ಮಾಂಸಖಂಡಬೇಕು.... ಹೆಂಡಾ ಅವಮಾನ ಮರೆಯೋದಕ್ಕೆ. ದಲಿತರ ಸಂಕಟಾನ ಇದೊಂದು ಇಮೇಜ್ ಅಭಿವ್ಯಕ್ತಿ ಮಾಡುವ ಕ್ರಮ ಬಹಳ ವಿಶಿಷ್ಟವಾಗಿದೆ ಅಂತ ನನಗನಿಸ್ತು.

ಪ್ರಶ್ನೆ: *ಆದ್ರೆ ಸಾರ್, ಏಸ್ತಟಿಕ್ಕಾಗಿ ಈ ಪ್ರತಿಮಾತ್ಮಕ ವಿಧಾನ ಚೆನ್ನಾಗಿರಬಹುದು. ಹೆಂಡಾಕುಡಿದು ಅವಮಾನ ಮರೆಯೋ ಹಾಗೂ ನೇರವಾಗಿ ಕೋಪ ಕಾರೋ ವಿಧಾನಗಳಲ್ಲಿ, ದಲಿತ ಸಮುದಾಯ ಈ ಹೊತ್ತು ಯಾವುದನ್ನು ಮತ್ತು ಯಾಕೆ ಆರಿಸ್ಕೋತಾ ಇದೆ ಅನ್ನೋದನ್ನೂ ನೋಡಬೇಕಾಗ್ತದೆ.*

ಜಿಎಸ್ಎಸ್: ಎರಡರಲ್ಲಿ ಒಂದು ಹೆಚ್ಚು ಇನ್ನೊಂದು ಕಡಿಮೆ ಅಂತ ನಾನು ಹೇಳ್ತಾ ಇಲ್ಲ. ಈ ಎರಡೂ ಕೂಡ ಜನಾಂಗದಲ್ಲಿ ಜಾಗೃತಿಯನ್ನು ಉಂಟು ಮಾಡೋ ಕೆಲಸ ಮಾಡ್ತಾವೆ. ಆದರೆ ಸಿದ್ಲಿಂಗಯ್ಯನ ಕೋಪದ ಕಾವ್ಯ ಬಂದ ಮೇಲೆ ಇಂಥ ಕಾವ್ಯ ಬರೋಕೆ ಸಾಧ್ಯವಾಯ್ತು. ಸಾಮಾಜಿಕ ವಾಸ್ತವವನ್ನು ನೇರವಾಗಿ ಹೇಳೋ ವಿಧಾನಕ್ಕಿಂತ ಈ ಪ್ರತಿಮಾತ್ಮಕ ವಿಧಾನಕೂಡ ಪವರ್‌ಫುಲ್ ಆಗಿಲ್ಲವೆ?

ಪ್ರಶ್ನೆ: *ಸರ್, ಮೂಲಭೂತ ಪ್ರಶ್ನೆ ಅಂದ್ರೆ, ದಲಿತರು ವರ್ತಮಾನದಲ್ಲಿ ಫೇಸ್ ಮಾಡ್ತಾ ಇರೋ ಪ್ರಾಬ್ಲಮ್ಸ್ ಹಾಗೂ ಅವರು ಸಾಂಸ್ಕೃತಿಕವಾಗಿ ಪಡೆದಿರುವ ಸಮೃದ್ಧ ಪುರಾಣ ಜಗತ್ತು, ಇವು ಒಟ್ಟಾಗಿ ಹೇಗೆ ಹೋಗಬೇಕು ಅನ್ನೋದು. ಇದು ದೊಡ್ಡ ಫಿಲಾಸಫಿಕಲ್ ಅಂಡ್ ಪೊಲಟಿಕಲ್ ಪ್ರಾಬ್ಲಂ ಅನಿಸುತ್ತೆ.*

ಜಿಎಸ್‌ಎಸ್: ಇನ್ನೂ ಒಂದು ವಿಷಯ. ಸಾಮಾಜಿಕ ನೆಲೆಯ ಕೋಪ ಪ್ರತಿಭಟನೆ ಇವು ಮಾತ್ರ ಅಲ್ಲ. ದಲಿತ ಸಾಹಿತ್ಯಕ್ಕೆ ಇನ್ನೂ ಬೇರೆಯ ಆಯಾಮಗಳೂ ಸೂಕ್ಷ್ಮಗಳೂ ಸೌಂದರ್ಯಗಳೂ ಇವೆ.

ಪ್ರಶ್ನೆ: *50 ವರ್ಷ ನಿಮ್ಮ ಕಾವ್ಯ ನಡೆದು ಬಂದಿದೆ. ಹೆಚ್ಚು ಕಡಿಮೆ ಈ ಶತಮಾನದ ಮುಕ್ಕಾಲು ಭಾಗಕ್ಕೆ ನೀವು ಸಾಕ್ಷಿಯಾಗಿದೀರಿ. ಅನೇಕ ಸಾಹಿತ್ಯದ ಘಟ್ಟಗಳು ನಿಮ್ಮ ಕಣ್ಣ ಮುಂದೆ ಹಾದಿವೆ. ಮೂಲತಃ ರಮ್ಯ ಸಂಪ್ರದಾಯದ ನೀವು ನವ್ಯ ಕಾಲದ ಘಟ್ಟದ 25 ವರ್ಷಗಳಲ್ಲಿ ನಿಮ್ಮೊಳಗೆ ಏನು ಸಂಭವಿಸಿತು?*

ಜಿಎಸ್‌ಎಸ್: ನವ್ಯದ ಧೋರಣೆಗಳನ್ನು ನಾನು ಸ್ವೀಕರಿಸಲಿಲ್ಲ. ಆದ್ರೆ ಅಭಿವ್ಯಕ್ತಿ ವಿಧಾನವನ್ನು ಸ್ವೀಕರಿಸಿದೆ. ಬಹುಶಃ ನವ್ಯದ ಸಂದರ್ಭದಲ್ಲಿ ಏನು ಫೀಲ್ ಮಾಡಿದ್ರೋ, ನಗರೀಕರಣ, ಅದರ ದುರಂತಗಳು ಇದನ್ನೆಲ್ಲ ನಾನೂ ಫೀಲ್ ಮಾಡಿದೆ. ಇದೆಲ್ಲ ನಮಗೆ ನವ್ಯದಿಂದ ಬರಬೇಕಾಗಿರಲಿಲ್ಲ. ನವ್ಯದ ಸಂದರ್ಭದ ನನ್ನ ಕೃತಿಗಳಲ್ಲಿ a question of identity ಮುಖ್ಯ. ವ್ಯಕ್ತಿತ್ವ ಅನ್ನೋದು ಧಕ್ಕೆಗೊಳಗಾಗ್ತಾ ಇತ್ತು. ಜಾತಿ ಇರಬಹುದು, ಮತ ಪಂಥ ಇರಬಹುದು, ನಗರೀಕರಣ ಇರಬಹುದು. ಹೀಗೆ ಮನುಷ್ಯರ-ಮನುಷ್ಯರ ನಡುವೆ ಇರೋ ಸಂಬಂಧಗಳನ್ನು ಒಡೆಯುವಂತಹ ವಿಚ್ಛಿದ್ರಕಾರಕ ಶಕ್ತಿಗಳ ವಿರುದ್ಧ ಧ್ವನಿ ಎತ್ತುವುದು ನನ್ನ ಮುಖ್ಯ ಕಾಳಜಿಯಾಗಿತ್ತು. ಜೀವನವನ್ನು ಯಾರು ನಿಜವಾಗಿ ಪ್ರೀತಿಸ್ತಾರೋ ಅವರು ಜೀವನವನ್ನು ವಿರೂಪಗೊಳಿಸೋಕ್ಕೆ ಹೋಗೋದಿಲ್ಲ. ಅದಕ್ಕೋಸ್ಕರ ಪ್ರೀತಿಯನ್ನು ಒಂದು ಮೌಲ್ಯವಾಗಿ ಉದ್ದಕ್ಕೂ ನಾನು ಪ್ರಸ್ತಾಪಮಾಡ್ತೀನಿ. ಹಣತೆಯನ್ನು ಒಂದು ಪ್ರತೀಕವಾಗಿ ಮಂಡಿಸಿದ್ದೀನಿ. ದೀಪಹಚ್ಚುವ ಕ್ರಿಯೆ. ಆಮೇಲೆ ಸೇತುವೆ ಕಟ್ಟುವ ಕ್ರಿಯೆ. ಹೀಗೆ ಪ್ರೀತಿ ಮಾನವೀಯ ಸಂಬಂಧದ ಬೆಸುಗೆ ನನ್ನ ಮುಖ್ಯ ಕಾಳಜಿಯಾಯಿತು.

ಪ್ರಶ್ನೆ: *ಅಲ್ಲ ಸಾರ್, ಒಂದು ಫಾರಂನಿಂದ ಅದರ ಒಳಗಿನ ಜೀವನದೃಷ್ಟಿಯನ್ನು ಹೊರತುಪಡಿಸಿ ಇನ್‌ಫ್ಲೂಯೆನ್ಸ್ ಆಗೋದು ಸಾಧ್ಯವಿದೆಯಾ?*

ಜಿಎಸ್‌ಎಸ್: ಯಾಕಾಗಲ್ಲ? ಚಳುವಳಿಗೆ ನಿಮಗೂ ಸಂಬಂಧ ಏನೂ ಅಂತಾ ಕೇಳಿದ್ರೆ ಅದಕ್ಕೆ ನನ್ನ ಉತ್ತರ ಇದು: "ಇವತ್ತು ಎಲ್ಲ ಸಾಹಿತ್ಯ ಚಳುವಳಿಗಳೂ ಭಾಳ ಒಳ್ಳೆ ಕೆಲಸ ಮಾಡಿವೆ. ಇವೆಲ್ಲ ಚಳುವಳಿಗಳೂ ಕೂಡಾ, ನಮ್ಮ ಸಾಹಿತ್ಯದ

ಸಂದರ್ಭದಲ್ಲಿ ಅವತ್ತವತ್ತಿನ ಚಾರಿತ್ರಿಕ, ಸಾಂಸ್ಕೃತಿಕ ಒತ್ತಡಗಳಿಂದಲೇ ಹೊಸ ಹೊಸ ಅನುಭವಗಳನ್ನ ಅನಾವರಣ ಮಾಡ್ತಾ ಬಂದವು. ಆದ್ರೆ ಈ ಚಳುವಳಿಯನ್ನು ಕಟ್ಟುತ್ತಾ ಗಟ್ಟಿಮುಟ್ಟಾದ ಸಾಹಿತಿಗಳಂತೆಯೇ, ಚಳುವಳಿಯ ಒಳಗಿದ್ದೂ ಅಪ್ರಸ್ತುತವಾದ ಸಾಹಿತಿಗಳು ಇದಾರೆ. ನಾನು ಚಳುವಳಿಯೊಳಗೆ ಯಾಕ್ ಸೇರಿಕೊಳ್ಳಲಿಲ್ಲ ಅಂತಂದ್ರೆ, ನಾನು ಯಾವುದಕ್ಕೂ ಬದ್ಧವಾಗೋದಿಕ್ಕೆ ಇಷ್ಟಪಡೋದಿಲ್ಲ. ಕುವೆಂಪು ಇದ್ದಾರಲ್ಲ ಎಲ್ಲ ಚಳುವಳಿಗಳನ್ನು ಮೀರಿದವರು. ಅವರು ಪ್ರತಿಪಾದನೆ ಮಾಡ್ತಿದ್ದ 'ಅನಿಕೇತನ'ದಲ್ಲೇ ಆ ನಿಲುವಿದೆ. ಪು.ತಿ.ನ. ಹೇಳ್ತಾ ಇದ್ರು "ನೋಡಿ ಯಾವುದಕ್ಕೂ ಗಂಟು ಹಾಕ್ಕೋಬೇಡಿ. ನೀವು ನಿಜವಾದ ಆಸ್ವಾದ ಮಾಡಬೇಕಾದ್ರೆ ಹೊರಗಡೆ ನಿಂತುಕೊಂಡು ಏನು ಬೇಕಾದ್ರೂ ತಗೋಳ್ರಿ." ಪುತಿನ ಆಗ್ಲಿ ಕುವೆಂಪು ಅವರಾಗ್ಲೀ ಇವರ್‍ಯಾರಿಗೂ ಕೂಡಾ, ಚಳುವಳಿಯೊಳಗಿದ್ದುಕೊಂಡು ಬೆಳೀಬೇಕಾದ ಅಗತ್ಯ ಇರ್ಲಿಲ್ಲ.

ಪ್ರಶ್ನೆ: *ಆದರೆ ಕುವೆಂಪು ಅವರು—ನೇರವಾಗಿ ಸಾಮುದಾಯಿಕ ಚಳುವಳಿಗಳಲ್ಲಿ ಭಾಗವಹಿಸದೇ ಹೋದ್ರೂ ಕೂಡಾ—ಸಮುದಾಯ ಪ್ರಜ್ಞೆಯ ಒಂದು ಸ್ಟ್ರಾಂಗ್ ಐಡಿಯಾಲಜಿನ ವಿಕಸನ ಮಾಡ್ಕೊಂಡಿದ್ರು.*

ಜಿಎಸ್ಎಸ್: ಒಬ್ಬ ಲೇಖಕ ಚಳುವಳಿಗೆ ಸಂಬಂಧಿಸಿಕೊಳ್ಳುವುದು ಸಂಬಂಧಿಸಿಕೊಳ್ಳದೇ ಇರೋದು ಅವನ ವೈಯಕ್ತಿಕ ನಿಲುವು ಅಷ್ಟೇ. ಹಾಗಂತ ನಾವು ಚಳುವಳಿಗಳನ್ನು ಗೌಣವಾಗಿ ಕಾಣಬಾರದು. ಎಲ್ಲ ಚಳುವಳಿಗಳು ಹೇಗೆ ಕಾಲದಿಂದ ಕಾಲಕ್ಕೆ ಬದಲಾವಣೆಗಳನ್ನು ತರೋಕೆ ವೇಗವರ್ಧಕಗಳಂತೆ ವರ್ತಿಸಿದ್ವು ಅನ್ನೋದನ್ನ ಬಹಳ ಜವಾಬ್ದಾರಿಯಿಂದ ನೋಡಬೇಕು. ನಾನು ಎಲ್ಲ ಚಳುವಳಿಗಳ ಜೊತೆ ಸಂಘಟಿಸಿಕೊಳ್ಳದಿದ್ರೂ, ಅವುಗಳಿಂದ ಎಷ್ಟನ್ನ ತಗೋಬೇಕು ಅಷ್ಟನ್ನು ತಗೊಂಡು ಬೆಳೆದಿದೀನಿ. ನವ್ಯದ ಸಂದರ್ಭದಲ್ಲಿ ನಮ್ಮನ್ನು ಭಾಳ ಗೇಲಿ ಮಾಡಿದ್ರು. ಅಲ್ಲೂ ಸಲ್ಲದ ಇಲ್ಲೂ ಸಲ್ಲದ ಕವಿ, ಹಾಗೆ ಹೀಗೆ ಅಂತ. ನಾನು ಆ ಚಳುವಳಿಯ ಜತೆಗೆ ಇರಬೇಕೆಂಬುದು ಅವರ ಅಪೇಕ್ಷೆಯಾಗಿತ್ತೋ ಏನೋ. ನಾನು ಹೋಗಲಿಲ್ಲ. ಹೋಗದೇ ಇರೋದಕ್ಕೆ ಇನ್ನೊಂದು ಕಾರಣ ಅಂದ್ರೆ, ಇಡೀ ನವೋದಯದ ಹಿರಿಯರನ್ನ ಅವ್ರು ಬಾಳ ಹೀನಾಯವಾಗಿ ಕಂಡ್ರು; ಕುವೆಂಪು ಬಗ್ಗೆ, ಮಾಸ್ತಿ ಬಗ್ಗೆ, ಬಿ.ಎಂ.ಶ್ರೀ. ಕೆ.ಎಸ್.ನ. ಬಗ್ಗೆ ಅವರ ಪ್ರತಿಕ್ರಿಯೆ ಇದೆಯಲ್ಲ, ಭಾಳ ಅನಾರೋಗ್ಯಕರವಾಗಿತ್ತು. ಹಿಂದಿನ ಕವಿಗಳ ಜೊತೆಗೆ ವ್ಯವಹಾರ ನನಗಿದೆ. ಅವ್ರು ಎಂಥಾ ಗಂಭೀರವಾದೋರು ಅಂದ್ರ they never bothered about their prestige. ನೋಡಿ ಅವರಿಗೆ ಸಂಪೂರ್ಣ ಸಾಹಿತ್ಯಿಕ ಸಾಂಸ್ಕೃತಿಕ ಕಾಳಜಿಗಳು ಇದ್ವೇ

ಹೊರತಾಗಿ-ನಾನು ಎಸ್ಟ್ಯಾಬ್ಲಿಶ್ ಆಗ್ಬೇಕು ದೊಡ್ಡೋನಾಗಬೇಕು, ಈ ಥರಾ ನವ್ಯದ ಅನೇಕ ಹುಚ್ಚುಗಳಿವೆಯಲ್ಲ ಅವಿರಲಿಲ್ಲ. ಆದರೆ ನವ್ಯ ಚಳುವಳಿ ಕೂಡಾ ಗಮನೀಯವಾದ ಕೊಡುಗೆಯನ್ನು ಕೊಟ್ಟಿದೆ. ವೈಚಾರಿಕತೆಯ ಒಂದು ಎಚ್ಚರವನ್ನು ಕೊಟ್ಟಿದೆ.

*ಪ್ರಶ್ನೆ:* *ನಿಮ್ಮನ್ನ 'ಸಮನ್ವಯ ಕವಿ' ಅಂತ ಕರೆದವರು ನವ್ಯರೇನಾ?*

ಜಿಎಸ್‌ಎಸ್: ಹೌದು. ಆದರೆ ಸಮನ್ವಯ ಅನ್ನೋದನ್ನ ಒಳ್ಳೇ ಅರ್ಥದಲಿ ಉಪಯೋಗಿಸ ಲಿಲ್ಲ. ಅದನ್ನು ನಮ್ಮನ್ನ ಬಯ್ಯೋದಕ್ಕೆ ಬಳಸಿದ ಪದ. ಸಮನ್ವಯ ಅಂದಾಗ ಅಲ್ಲೊಂದಿಷ್ಟು ಇಲ್ಲೊಂದಿಷ್ಟು ಕಲಬೆರಕೆ ಅನ್ನೋ ಉದ್ದೇಶ ಇತ್ತೇ ಹೊರತಾಗಿ, ಸೈದ್ಧಾಂತಿಕವಾದ ನಿಲುವಿರಲಿಲ್ಲ. ಈ ಕುರಿತು ಆರೋಗ್ಯ ಪೂರ್ಣವಾದಂತಹ ಚರ್ಚೆ ಇನ್ನೂ ಆಗಿಲ್ಲ.

*ಪ್ರಶ್ನೆ:* *ಆ ಪರಿಭಾಷೆಗೆ ಒಂದು ಫಿಲಾಸಫಿಕಲ್ ಡೈಮೆನ್‌ಶನ್ ಕೊಟ್ಟ ಹಾಗೆ ಕಾಣಲಿಲ್ಲ.*

ಜಿಎಸ್‌ಎಸ್: ಕೊಟ್ಟಿದ್ರೆ ಚೆನ್ನಾಗಿತ್ತು. ಅದನ್ನ ಯಾರೂ ಡಿಫೈನ್ ಮಾಡ್ಲಿಲ್ಲ. ಮಾಡಿದ್ರೂ ಕೂಡಾ, ಯಾವುದೇ ಒಂದು ಕಾವ್ಯ ಓದುವಾಗಿ ನವ್ಯ ಅಂತಾ ಓದ್ತೀರಾ, ನವೋದಯ ಅಂತ ಓದ್ತೀರಾ, ಬಂಡಾಯ ಅಂತಾ ಓದ್ತೀರಾ, ಕಾವ್ಯ ಅಂತಾ ಓದ್ತೀರಾ? ಕೇಳಿಕೊಳ್ಳಬೇಕಾದಂತಹ ಪ್ರಶ್ನೆ 'ಈ ಕವಿತೆ ನನಗೆ ಎಷ್ಟು ಪ್ರಸ್ತುತ? ಅಂತ'; ಒಂದು ಕಾವ್ಯ ಯಾವ ಪಂಥಕ್ಕೆ ಸೇರಿದ್ದು ಅನ್ನೋದು ಮುಖ್ಯವೇ ಆಗೋದಿಲ್ಲ.

*ಪ್ರಶ್ನೆ:* *'ಸೌಂದರ್ಯ ಸಮೀಕ್ಷೆ'ಯಲ್ಲಿ ನಿಮ್ಮ ತಾತ್ವಿಕ ಚೌಕಟ್ಟು ಇದೆಯಲ್ಲ, ಅದನ್ನು ದಲಿತ-ಬಂಡಾಯ ಬಂದ ಮೇಲೆ ಬದಲಾಯಿಸಬೇಕು ಅನಿಸುತ್ತಿದೆಯಾ?*

ಜಿಎಸ್‌ಎಸ್: ಖಂಡಿತ ಇಲ್ಲ, ನಾನು ಬರೆದದ್ದು ಯಾವಾಗ ಸ್ವಾಮಿ? Heardly I was 28 or 29. ನನ್ನ ವಯೋಮಾನ, ಮನೋಧರ್ಮ, ನನ್ನ ಪರಿಸರ, ನಾನು ಬರೆದ ಸಂದರ್ಭ, ನನಗೆ ಗೈಡ್ ಮಾಡ್ದೋರು ಇದ್ನೆಲ್ಲಾ ಜ್ಞಾಪಿಸ್ಕೊಳ್ಳಿ. ಆದ್ರೂ 'ಸೌಂದರ್ಯ ಸಮೀಕ್ಷೆ'ಯಲ್ಲಿ ಮೊಟ್ಟ ಮೊದಲಿಗೆ ಸೌಂದರ್ಯದ ಮೂಲಮಾನದಿಂದ ಇಡೀ ಕಾವ್ಯ ಅಳೆಯುವ ಪ್ರಯತ್ನ ನಡೆಯಿತು.

*ಪ್ರಶ್ನೆ:* *ಅಲ್ಲ, ಈ ಹೊತ್ತಿನ ಕಾವ್ಯದಲ್ಲಿ ಸೌಂದರ್ಯದ ನೆಲೆ ಬದಲಾಗಿದೆ.*

ಜಿಎಸ್‌ಎಸ್: ಬದಲಾಗಿರಬಹುದು. ಆದರೆ ಎಲ್ಲ ಕಾಲಕ್ಕೂ ಸಲ್ಲುವ ಮೂಲಮಾನ ಗಳಿರುತ್ತವಲ್ಲ?

*ಪ್ರಶ್ನೆ:* *ಅಲ್ಲ, ಅದನ್ನ ರಿಜೆಕ್ಟ್ ಮಾಡ್ಬೇಕು ಅನ್ನೋ ಅರ್ಥದಲ್ಲಿ ಕೇಳ್ತಾ ಇಲ್ಲ.*

ಜಿಎಸ್‌ಎಸ್: ರಿಜೆಕ್ಟ್ ಮಾಡ್ಲೇ ಬೇಕಾಗಿಲ್ಲ. ಅದು ಅಷ್ಟೊಂದು ಅಪ್ರಸ್ತುತವಾಗಿದ್ದರೆ, ಅದು 5 ಮುದ್ರಣ ಕಾಣ್ತಾ ಇರಲಿಲ್ಲ.

*ಪ್ರಶ್ನೆ: ಅಲ್ಲ, ಅದರ ತಾತ್ವಿಕ ಚೌಕಟ್ಟಿದೆಯಲ್ಲ ಅದನ್ನು ಅಭಿವೃದ್ಧಿಗೊಳಿಸಬಹುದಲ್ಲ.*

ಜಿಎಸ್‌ಎಸ್: ಅದು ಪಿಎಚ್.ಡಿ ಥೀಸಿಸ್ಸು. ಈಗ ನಾನದನ್ನು ತಿದ್ದುವ ಹಾಗಿಲ್ಲ. ಆದರೆ ಅದನ್ನು ನಾನು ಬರೆದ ನಂತರ ಅದಕ್ಕೆ ಬದಲಾದ ಅಥವಾ ಪೂರಕವಾದ ಕೆಲಸವೇ ನಡೆದಿಲ್ಲವಲ್ಲ!

*ಪ್ರಶ್ನೆ: ಸಾರ್, ಜನಪದ ಮಹಾಕಾವ್ಯಗಳ ಚರ್ಚೆಯನ್ನ ಮತ್ತೆ ಎತ್ತಿಕೊಳ್ಳೋಣ. 'ಮಂಟೇಸ್ವಾಮಿ', 'ಮಲೆಯ ಮಾದೇಶ್ವರ' ಕಾವ್ಯಕ್ಕೆ ಬಂದಾಗ ಅವುಗಳ ಆಯ್ಕೆ ಅಲ್ಲಮ, ಬಸವಣ್ಣ ಅಲ್ಲ. ಯಾಕಿರಬಹುದು?*

ಜಿಎಸ್‌ಎಸ್: ಬಸವಣ್ಣ ಒಂದು ಕಡೆ ಕೂತು ಸಂಘಟನೆ ಮಾಡಿದಂಥಹ ವ್ಯಕ್ತಿ. ಮಂಟೇಸ್ವಾಮೀದು ಚಲನಶೀಲವಾದ ವ್ಯಕ್ತಿತ್ವ. ಒಂದು ಕೇಂದ್ರದಲ್ಲಿ ಕೂತು ಸಂಘಟನೆ ಮಾಡಿದಂತಹ ವ್ಯಕ್ತಿಯ ನಿಲುವುಗಳಿಗೂ ಎಲ್ಲೆಂದರಲ್ಲಿ ಸಂಚಾರ ಮಾಡ್ಕೊಂಡು, ಊರೂರಿಗೆ ಹೋಗ್ತಾ ಹೋಗ್ತಾ ಜನರನ್ನ ಎಚ್ಚರಿಸ್ತಾ ಹೋದ ವ್ಯಕ್ತಿಗೂ ವ್ಯತ್ಯಾಸ ಇದೆಯಲ್ಲ? ಇದೇ ಮಂಟೇಸ್ವಾಮಿ ಕೊನೆಯಲ್ಲಿ ಎಲ್ಲೋ ಹೋಗಿ ನೆಲಸ್ತಾನೆ. ಇವರಿಗೆ ಅಲ್ಲಮನೇ ಆದರ್ಶ. ಸ್ಥಾವರಕ್ಕಳಿವುಂಟು ಅಂತಾ ಬಸವಣ್ಣನವರಿಗೆ ಗೊತ್ತು. ಅವರ ಚಳುವಳಿ ಏನಾಯ್ತು? ಅಲ್ಲಮನದು ಜಂಗಮ. ಜಂಗಮಕ್ಕಳಿವಿಲ್ಲ.

*ಪ್ರಶ್ನೆ: ಈ ಸಂತರು ತತ್ವಪದಕಾರರಲ್ಲೂ ಬಸವಣ್ಣನಕ್ಕಿಂತ ಅಲ್ಲಮನ ಪ್ರಭಾವ ಹೆಚ್ಚು ಕಾಣ್ತೇವಿ? 20ನೇ ಶತಮಾನದ ಕ್ರೈಸೀಸ್‌ಗಳಲ್ಲಿ ಬಸವಣ್ಣ ನಮಗೆ ಅರ್ಥಪೂರ್ಣ ಅನಿಸ್ತಾನೆ. ಆದರೆ ಕಳೆದ 8 ಶತಮಾನದ ನಡುವಣ ಕರ್ನಾಟಕದ ಸಾಮಾಜಿಕ ಬೆಳವಣಿಗೆಯ ಒಳಗೆ, ಸಮುದಾಯಗಳು ಯಾಕೆ ಬಸವಣ್ಣ ಮತ್ತು ಅವನು ಪ್ರತಿನಿಧಿಸಿದ್ದ ಪರಂಪರೆಯನ್ನು ಬಿಟ್ಟು ಅಲ್ಲಮನ ಪರಂಪರೆಗೆ ಅಷ್ಟೊಂದು ಆತುಕೊಂಡರು? ತನ್ನ ಚಿಂತನೆಯ ಕಾರಣಕ್ಕೆ ಹೀರೋ ಆಗಬೇಕಾಗಿದ್ದ ಬಸವಣ್ಣ ಹಾಗೆ ಆಗಲಿಲ್ಲ. ಈ ಚರಿತ್ರೆಯ ವ್ಯಂಗ್ಯ ಯಾಕೆ ಅಂತಾ?*

ಜಿಎಸ್‌ಎಸ್: ಹ್ಞಾಂ! ಭಸವಣ್ಣನವರ ನಂತರ ಮಠಗಳು ನಿರ್ಮಾಣವಾದವು. ಮಠ ಅನ್ನೋದೇ ಒಂಥರಾ ಸ್ಥಾವರವಾಗೋದು.... ಒಂದು ರೀತಿ ಡಿಕೆಡನ್ಸ್ ಶುರುವಾಯ್ತು. ಅನೇಕ ಕಳಚಿಕೊಂಡ ಹಳೆಯ ಆಚರಣೆಗಳು ಮಠ ಬಂದ ಕೂಡಲೇ ಮತ್ತೆ ಸುತ್ತಿಕೊಳ್ತವೆ. ಪುರೋಹಿತ ಹುಟ್ಕೊಳ್ತಾನೆ. ಹೀಗಾಗಿ ವೀರಶೈವ ಜನಾಂಗದೊಳಗೆ ಬಸವಣ್ಣನೂ ಇಲ್ಲ, ಅಲ್ಲಮನೂ ಇಲ್ಲ.

ಸಾಮಾನ್ಯ ಜನಕ್ಕೆ ಅವ್ರಿಬ್ರೂ ಗೊತ್ತಿಲ್ಲ. ಬಸವಣ್ಣನವರ ಕಾಲದಲ್ಲಿ ವಚನಕಾರರಿಂದ ಅವೊತ್ತಿನ ಜನ ಹೊಸ ಹುಟ್ಟು ಪಡೆದದ್ದೇನೋ ನಿಜ. ಆದರೆ ಮುಂದಿನ ಕಾಲದಲ್ಲಿ ಮತ್ತೆ ರೂಢಿಜಡತೆಯ ಪಾಚಿ ಆವರಿಸಿಬಿಟ್ಟಿತು. ಅವ್ರಿಗೆ ಈ ಮಠಗಳಿದ್ದಾವಲ್ಲ, ಪ್ರವಚನಕಾರರಿದ್ದಾರಲ್ಲ ಇವರು ಮುಖ್ಯವಾಗಿ ಬಿಟ್ರು. ಹೀಗಾಗಿ the mediators went on interpreting Veerashaivism in the name of Basava without his spirit. ನಮ್ಮ ಅನೇಕ ಸ್ವಾಮಿಗಳ ಹಾಗೂ ಪ್ರವಚನಕಾರರ ಭಾಷಣಗಳನ್ನು ಕೇಳಿದೀನಿ. ಅವು ಒಂದು ಜನಾಂಗವನ್ನು ವೈಚಾರಿಕವಾಗಿ ಬೆಳೆಯಿಸುವ ಕೆಲ್ಸ ಮಾಡುತ್ತಿಲ್ಲ. ಶಿಕ್ಷಣ ಕ್ಷೇತ್ರಕ್ಕೆ ದೊಡ್ಡ ಕೊಡುಗೆಗಳನ್ನು ಕೊಟ್ಟಿವೆ ಮಠಗಳು. ಅದರಲ್ಲಿ ಅನುಮಾನವೇ ಇಲ್ಲ. ನನ್ನಂಥವನು ಓದು ಬರಹ ಮಾಡಿ ಮುಂದಕ್ಬರೋಕೆ ಸಾಧ್ಯವಾಗಿದ್ದು ಈ ಮಠಗಳಿಂದಲೇ. ಅಶನ ಮತ್ತು ಶಿಕ್ಷಣಕ್ಕೆ ವ್ಯವಸ್ಥೆಯನ್ನು ವೀರಶೈವ ಮಠಗಳು ಮಾಡಿದ ಹಾಗೆ ಇನ್ಯಾರೂ ಮಾಡಿದ ಹಾಗೆ ಕಾಣೋಲ್ಲ. ಅದಕ್ಕೆ ತಕ್ಕ ಪ್ರಮಾಣದಲ್ಲಿ ತಮ್ಮ ಶರಣ ಶರಣೆಯರನ್ನ ವೈಚಾರಿಕವಾಗಿ ಬೆಳಸಿದವು ಅಂತಾ ಹೇಳೋದಿಕ್ಕೆ ನನಗೆ ಧೈರ್ಯ ಸಾಲದು.

ಪ್ರಶ್ನೆ: *ನಿಮ್ಮ ವಿಮರ್ಶೆ ಚಿಂತನೆಗಳ ಜೊತೆಗೇ ನೀವು ಬೆಂಗಳೂರು ವಿಶ್ವ ವಿದ್ಯಾಲಯದಲ್ಲಿದ್ದು ಕನ್ನಡ ವಿಭಾಗದಿಂದ ನಡೆಸಿದ ವಿಚಾರ ಸಂಕಿರಣಗಳು ಕನ್ನಡ ವಿಮರ್ಶೆಯನ್ನು ಬೆಳೆಸುವಲ್ಲಿ ಮುಖ್ಯ ಪಾತ್ರ ವಹಿಸಿವೆ. ಇದು ಹೇಗೆ ಸಾಧ್ಯ ಆಯ್ತು?*

ಜಿಎಸ್ಎಸ್: ಆಕಸ್ಮಿಕ ಅಷ್ಟೇ. ಮೈಸೂರಿನಲ್ಲಿದ್ದಿದ್ರೆ ಬಹುಶಃ ನಾನು ಹತ್ತರಲ್ಲಿ ಹನ್ನೊಂದಾಗಿದ್ದು ಬಿಡ್ತಿದ್ದೇನೇನೋ. ಆಕಸ್ಮಿಕವಾಗಿ ನಾನು ಬೆಂಗಳೂರಿಗೆ ಬಂದೆ. ಈ ಸಂದರ್ಭದಲ್ಲಿ ನಾನು "ಏನ್ ಮಾಡ್ತಾ ಇವೆ ನಮ್ಮ ವಿಶ್ವವಿದ್ಯಾಲಯಗಳು? ನಮ್ಮ ಕನ್ನಡ ಅಧ್ಯಯನ ಸಂಸ್ಥೆ ಪೀಠಗಳು? ಪೀಠವೂ ಆಗದೆ ಸಂಸ್ಥೆಯೂ ಆಗದೆ ಏನು ಮಾಡೊಕೆ ಸಾಧ್ಯ?" ಅಂತ ಯೋಚ್ನೆ ಮಾಡ್ದೆ. ನಾನು ಕೇಂದ್ರ ಮಾಡ್ದೆ. ಕೇಂದ್ರ ಯಾವಾಗ್ಲೂ ಎಲ್ಲರನ್ನು ಬರಮಾಡಿಕೊಳ್ಳೋ ಜಾಗ ಅದು. ಕನ್ನಡ ಅಧ್ಯಯನ ಪೀಠದವರು ವಚನ ಸಾಹಿತ್ಯದ ಪರಿಷ್ಕರಣ ಯೋಜನೆ ತಗೊಂಡ್ರು. ಬಹಳ ಮೌಲಿಕವಾದ್ದು ಅದು. ಕನ್ನಡ ಅಧ್ಯಯನ ಸಂಸ್ಥೆಯವರು ಸಾಹಿತ್ಯ ಚರಿತ್ರೆ, ವಿಶ್ವಕೋಶ, ಜಾನಪದ ಈ ಕ್ಷೇತ್ರಗಳ ಕಡೆ ಗಮನಕೊಟ್ಟರು. ಬಹಳ ಮುಖ್ಯವಾದದ್ದೆ. ಕನ್ನಡದಲ್ಲಿ ವಿಮರ್ಶೆಯ ಕೆಲಸ ಆಗ್ಬೇಕಾಗಿತ್ತು. ಅದಕ್ಕಾಗಿ ಒಂದು ಪ್ಲಾಟ್‌ಫಾರಂ ಕ್ರಿಯೇಟ್ ಮಾಡಬೇಕು. ಚರ್ಚೆ ನಡೀಬೇಕು. ಆಗ ಹತ್ತು ಹಲವು ಪಂಗಡಗಳು ಇದ್ವು. ನವೋದಯದವರಿದ್ರು,

ನವ್ಯರು ಇದ್ರು. ದಲಿತ್ರು ಇದ್ರು, ಪ್ರಗತಿಶೀಲರು ಇದ್ರು. ಅವರನ್ನೆಲ್ಲ ಕೂಡಿಸೋದಿಕ್ಕೆ ಒಂದು ವೇದಿಕೆ ಇರಲಿಲ್ಲ. ಅದನ್ನ ನಾನು ನಿರ್ಮಾಣ ಮಾಡಿದೆ. ನಾನು ಇವತ್ತು ಸಂತೋಷಪಡುವಂತಹ ಕೆಲ್ಸ ಅದು. ಅಲ್ಲಿ ಬೇಂದ್ರೆ ಬಂದ್ರು. ಲಂಕೇಶ್ ಬಂದ್ರು. ಕಾರಂತರೂ, ಚಂಪಾ ಎಲ್ಲ, ಎಲ್ಲ ಕೈಕೈ ಹಿಡ್ಕೊಂಡು ಜಗಳಾ ಮಾಡಿದ್ರು. ವಿಮರ್ಶೆ ಬೆಳೀಬೇಕಾದ್ರೆ ಎಲ್ಲ ಕೂಡಬೇಕು, ಚರ್ಚೆ ಮಾಡಬೇಕು. ಭಿನ್ನವಿದ್ದೂ ಬೆರೆಯಬಹುದು ಅನ್ನುವುದು ಮುಖ್ಯ. ಅದು ಚೆನ್ನಾಗಿ ನಡೀತು.

*ಪ್ರಶ್ನೆ:* *ಅನೇಕ ಲೇಖಕರು, ಸಮಕಾಲೀನ ಲೇಖಕರನ್ನು ಓದೋದಿಲ್ಲ. ನೀವು ಓದ್ತೀರಿ. ಪ್ರತಿಕ್ರಿಯಿಸ್ತೀರಿ. ಕವಿಯಾಗಿ ಸೃಷ್ಟಿ ಮಾಡ್ತೀರಿ. ಈಗ ಕಳೆದ 10 ವರ್ಷಗಳಿಂದ ಕನ್ನಡದ ಕ್ರಿಯೆಟಿವಿಟಿ ಕ್ರೈಸಿಸ್‌ನಲ್ಲಿದೆ ಅನ್ನೋ ಮಾತನ್ನ ಹಿಂದೆ ಬಂದಾಗ ಹೇಳಿದ್ರಿ. ಅದನ್ನ ಸ್ವಲ್ಪ ವಿವರಿಸಿ.*

ಜಿಎಸ್‌ಎಸ್: ಇದು ಚಳುವಳಿಗಳ ಯುಗ. ಮಳೆಗಾಲದಲ್ಲಿ ಹೊಳೆ ತುಂಬಿ ಹರಿಯುವ ರೀತಿನೇ ಬೇರೆ. ಇದನ್ನು ಎಲ್ಲ ಕಾಲದಲ್ಲೂ ನಿರೀಕ್ಷಿಸೋದಕ್ಕಾಗಲ್ಲ. ಆದ್ರೂ ಕನ್ನಡ ಸಾಹಿತ್ಯ ಯಾವತ್ತೂ ಕೂಡ ತನ್ನ ವಾಟರ್ ಲೆವೆಲ್‌ನಿಂದ ಕೆಳಗಿಳಿಯಲಿಲ್ಲ. ನನಗನ್ನಿಸುತ್ತೆ ಈಗ ಕಳೆದ 10 ವರ್ಷಗಳಲ್ಲಿ 'water level is there'; ಆದ್ರೆ ಯಾಕೋ ಅದು ಒಂದೇ ಲೆವೆಲ್‌ನಲ್ಲಿದೆ. ಹೊಸ ಬೆಳವಣಿಗೆಗಳು ಕಾಣಿಸ್ತಾ ಇಲ್ಲ. ಬಹುಶಃ ಇದಕ್ಕೆ ಏನು ಕಾರಣ ಅಂದ್ರೆ, ಈಗ ಹಿಂದಿನ ಚಳುವಳಿಗಳು ಆವಿಷ್ಕಾರ ಮಾಡಿದ ಎಲ್ಲ ಸಾಧ್ಯತೆಗಳು ಮುಗೀತಾ ಇವೆ. ರೈಟ್ ಫ್ರಂ ಬಿ.ಎಂ. ಶ್ರೀಕಂಠಯ್ಯ, ಎಲ್ಲ ಕಾಲದಲ್ಲೂ ಕೂಡಾ ಬದಲಾಗುವಂತಹ ಸಾಹಿತ್ಯಕ್ಕೆ ಹೊಸ ರೂಪ ಹೊಸ ಆಯಾಮ ಕೊಡುವಂತಹ ಪ್ರಯತ್ನಗಳೂ ನಮ್ಮಲ್ಲಿ ನಡೆದಿವೆ. ಈಗ ಎಲ್ಲ ಚಳುವಳಿಗಳೂ ಒಂದರ್ಥದಲ್ಲಿ ನಿಲುಗಡೆಗೆ ಬಂದಿವೆ. ಚಳುವಳಿಗಳಿಂದ ನಾವು ಕಲಿತ ಪಾಠವನ್ನು ಮತ್ತೆ ರಿವೈಜ್ ಮಾಡ್ಕೊಂಡು, ಹೊಸ ದಾರಿ ಹುಡುಕುವ ಸಂಧಿಕಾಲದಲ್ಲಿ ನಾವಿದೀವಿ ಅಂತಾ ನಾನು ಅಂದ್ಕೊಂಡಿದೀನಿ. ಸಂಧಿಕಾಲದಲ್ಲಿ ಯಾವಾಗ್ಲೂ ಕೂಡಾ ಒಂದು ಅಸ್ಪಷ್ಟತೆ, ಮಬ್ಬು, ಗೊಂದಲ ಇದ್ದೇ ಇರುತ್ತೆ.

*ಪ್ರಶ್ನೆ:* *ಈಗ ತುಂಬ ಪ್ರಾಮಿಸಿಂಗ್ ಆಗಿ ಬರೀತಿರೋ ರೈಟರ್ಸ್, ನಿಮ್ಮ ಪ್ರಕಾರ ಯಾರು?*

ಜಿಎಸ್‌ಎಸ್: ಶಿವಪ್ರಕಾಶ್, ವೆಂಕಟೇಶಮೂರ್ತಿ, ಆಮೇಲೆ ಬಿದರಳ್ಳಿ ನರಸಿಂಹಮೂರ್ತಿ ಅಂತಹ ಮೂರ್ನಾಲ್ಕು ಜನಾ ಬರಿತಿದಾರೆ. ಆದ್ರೆ ಅವುದು ಎಷ್ಟು ಹೊಸದಾರಿ ತೆರೀತದೆಯೋ ಗೊತ್ತಿಲ್ಲ. A trend setting writing

ಪ್ರಾರಂಭವಾಗದ ಹೊರತು, ಮುಂದಿನ ದಾರಿ ಕಾಣುವುದಿಲ್ಲ. ಕುವೆಂಪು ಬರೆದ ಹಾಗೆ, ಬೇಂದ್ರೆ ಬರೆದ ಹಾಗೆ ಅಡಿಗರು ಬರೆದ ಹಾಗೆ 'ಇದು ಒಂದು ಮಾರ್ಗ ಮಾಡಬಹುದು' ಅಂತ ಅನ್ನಿಸಬೇಕು. ಅಂಥಾದ್ದು ಕಾಣ್ತಾ ಇಲ್ಲ. ಆದರೆ ಈಗ ತುಂಬಾ ಸಂತೋಷ ಪಡಬೇಕಾದ್ದು, ವೈಚಾರಿಕ ಸಾಹಿತ್ಯ ನಮ್ಮಲ್ಲಿ ಚೆನ್ನಾಗಿ ಬೆಳಿತಾ ಇದೆ. ಸಾಹಿತ್ಯದ ಉತ್ಕರ್ಷವನ್ನು ಕೇವಲ ಕ್ರಿಯೇಟಿವ್ ಲಿಟರೇಚರ್ ಮೇಲೆ ಅಳೆಯೋದು ತಪ್ಪು. No there are other types of literature also. ಮತ್ತು ಕವಿಗೆ ಅನಗತ್ಯವಾದ ಪ್ರಾಧಾನ್ಯ ಸಲ್ಲುವುದು ನಿಲ್ಲಬೇಕು (ನಗು) ಯಾಕೇಂದ್ರೆ (ರಹಮತ್ ತರೀಕೆರೆಯನ್ನು ಉದ್ದೇಶಿಸಿ) ನಿಮ್ಮಂಥ ಒಬ್ಬ ವಿಮರ್ಶಕರು ಸೂಫಿಸಂ ಬಗ್ಗೆ ಬರೀತೀರಿ. It is a very important work. (ಅಮರೇಶ ನುಗಡೋಣಿಯನ್ನುದ್ದೇಶಿಸಿ) ಇವ್ರು ಕಥೆಗಳ್ನ ಬರೀತಾರೆ. ಸೋ, ಹೊಸಬರು ಮತ್ತು ಹೊಸ ಪ್ರಯೋಗಗಳು ಎಲ್ಲೆಲ್ಲಿ ಯಾವ್ಯಾವ ಪ್ರಕಾರದಲ್ಲಿ ಆಗ್ತ ಇವೆ, ಅವುಗಳನ್ನೆಲ್ಲ ನಾವು ಪರಿಗಣಿಸುವಂಥ ಒಂದು ಪ್ರವೃತ್ತಿ ಬೆಳೀಬೇಕು.

ಪ್ರಶ್ನೆ: *ಕನ್ನಡದಲ್ಲಿ ಸಂಶೋಧನೆಯ ಸ್ವರೂಪ ಹ್ಯಾಗಿದೆ ಸಾರ್?*

ಜಿಎಸ್ಎಸ್: ಸಂಶೋಧನೆ ಯಾಕೋ ದುರದೃಷ್ಟವಶಾತ್ ಭಾಳ ಪೂರ್ ಆಗಿದೆ. ಕಾರಣ, ಕಷ್ಟಪಟ್ಟು ಅಧ್ಯಯನ ಮಾಡುವಂತಹ ಪ್ರವೃತ್ತೀನೇ ಕಾಣಸ್ತಾ ಇಲ್ಲ. ಈವರೆಗಿನ ಸಂಶೋಧನೆಗಳೆಲ್ಲ ವಿಶ್ವವಿದ್ಯಾಲಯದ ಪರಿಸರದಿಂದ್ಲೆ ಹೆಚ್ಚಾಗಿ ಬಂದಿದ್ರೂ, ನಮ್ಮ ವಿಶ್ವವಿದ್ಯಾಲಯಗಳು ಇವತ್ತು ಅವರೋಹಿಣಿ ಕಾಲದಲ್ಲಿವೆ. ಅವೆಲ್ಲ ಇಂಕ್ರಿಮೆಂಟ್, ಭಡ್ತಿ, ಸಂಬಳ ಮತ್ತು ಸಾಹಿತ್ಯೇತರವಾದ ಚಟುವಟಿಕೆಗಳ ಕಡೆಗೇ ಹೆಚ್ಚು ಹೋಗ್ತಾ ಇದೆ ಅಂತಾ ನನ್ನ ಅನಿಸಿಕೆ.

ಪ್ರಶ್ನೆ: *ಶಂಬಾ ಅಥವಾ ಮುಳಿಯ ತಿಮ್ಮಪ್ಪಯ್ಯ ತರಹದವರು ಯೂನಿವರ್ಸಿಟಿಗಳಲ್ಲಿ ಇದ್ದೋರಲ್ಲ.*

ಜಿಎಸ್ಎಸ್: ಅಂಥಾ ಇಂಡಿವಿಜುಯಲ್ ಸ್ಕಾಲರ್‌ಗಳೂ ಈಗ ಕಾಣ್ತಾ ಇಲ್ಲ. ಮತ್ತು ವಿಶ್ವವಿದ್ಯಾಲಯಗಳಲ್ಲಿದ್ದಂಥ ಕಲ್ಬುರ್ಗಿಯಂಥವರು, ಚಿದಾನಂದಮೂರ್ತಿಯಂಥವರು, ವೆಂಕಟಾಚಲಶಾಸ್ತ್ರಿಯಂಥವರು ಕೂಡಾ ಹೊಸತಲೆಮಾರಲ್ಲಿ ಬರ್ಲಿಲ್ಲ.

ಪ್ರಶ್ನೆ: *ನೀವು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಶುರುಮಾಡಿದ ವಿಮರ್ಶಕರ ಟೀಮಿದೆಯಲ್ಲ, ಅದಕ್ಕೆ ಹೋಲಿಸಿದ್ರೆ ಈ ಕಾಲದ ವಿಮರ್ಶೆ ಹೇಗೆ ಅನ್ನಿಸುತ್ತೆ?*

ಜಿಎಸ್‌ಎಸ್: ವಿಮರ್ಶೆ ಸಾಹಿತ್ಯ ಕೇಂದ್ರಿತವಾದ ನಿಲುವಿನಿಂದ ಸಾಂಸ್ಕೃತಿಕ ಆಯಾಮಗಳನ್ನ ಒಳಗೊಳ್ಳುವ ನಿಟ್ಟಿನಲ್ಲಿ ಬೆಳೀತಾ ಇದೆಯಲ್ಲ, ಅದು ಇನ್ನೂ ಹೆಚ್ಚು ಆಶಾದಾಯಕವಾಗಿ ಕಾಣ್ತಾ ಇದೆ. ಡಾ. ಡಿ.ಆರ್. ನಾಗರಾಜ, ವಿಮರ್ಶೆಗೆ ಸಾಂಸ್ಕೃತಿಕ ಆಯಾಮವನ್ನು ಕೊಟ್ಟೋರಲ್ಲಿ ಮುಖ್ಯವಾದೋರು. ಜಿ.ಎಸ್. ಆಮೂರ, ಕೆ.ವಿ. ನಾರಾಯಣ, ಕೆ.ಜಿ. ನಾಗರಾಜಪ್ಪ, ಎಚ್.ಎಸ್. ರಾಘವೇಂದ್ರರಾವ್, ನರಹಳ್ಳಿ ಬಾಲಸುಬ್ರಹ್ಮಣ್ಯ, ರಹಮತ್ ತರೀಕೆರೆ—ಇಂಥವರಿಂದ ಈ ಹೊತ್ತಿನ ವಿಮರ್ಶೆ ವಿಭಿನ್ನವಾಗಿ ವಿಸ್ತಾರಗೊಳ್ಳುತ್ತದೆ.

ಪ್ರಶ್ನೆ: *ನೀವು ರೂಪಿಸಿದ ಪಠ್ಯಪುಸ್ತಕಗಳು, ಅದರಲ್ಲೂ ವಿಚಾರ ಸಾಹಿತ್ಯ ಅನೇಕ ತಲೆಮಾರಿನ ಮನಸನ್ನ ಕಟ್ಟೋದಿಕ್ಕೆ ಸಹಾಯಕವಾದವು. ಈ ಪ್ರೇರಣೆ ನಿಮಗೆ ಎಲ್ಲಿಂದ ಸಿಕ್ತು?*

ಜಿಎಸ್‌ಎಸ್: ಅದಕ್ಕೂ ಕುವೆಂಪು ಅವರೇ ಪ್ರೇರಣೆ. ಕುವೆಂಪು ಪಂಪನನ್ನು ಪಾಠಮಾಡುವಾಗ ಕೇವಲ ಕನ್ನಡ contextನಲ್ಲಿ ಚರ್ಚೆ ಮಾಡ್ತಿರಲಿಲ್ಲ. ಹೋಮರ್ ಜತೆ ಇಟ್ಟು ಮಿಲ್ಟನ್ ಜತೆ ಇಟ್ಟು ಚರ್ಚಿಸುತ್ತಿದ್ರು ನೋಡಿ. ಹೀಗಾಗಿ ನನಗನ್ನಿಸಿತು ತೌಲನಿಕ ಅಧ್ಯಯನದಿಂದ ಮಾತ್ರ ಕನ್ನಡಿಗರು ಬೆಳೆಯೋಕೆ ಸಾಧ್ಯ. ಕನ್ನಡಿಗರಿಗೆ ಕನ್ನಡ ಅಷ್ಟೇ ಸಾಲದು. ಅವ್ರು ಅನ್ಯ ಸಾಹಿತ್ಯದ ತಿಳಿವಳಿಕೆಯಿಂದ ಬೆಳೀಬೇಕು. ಅವರು ಬೆಳಿಯದ ಹೊರತು ಸಾಹಿತ್ಯ ಬೆಳೆಯೋದಿಲ್ಲ. ವಿಮರ್ಶೆ ಬೆಳಿಯೋದಿಲ್ಲ. ವಿಚಾರ ಬೆಳೆಯೋದಿಲ್ಲ. ಇದನ್ನ ಬೆಳೆಸೋ ವಿಧಾನ ಅಂತಂದ್ರೆ To put them in the context of Globe.

ಪ್ರಶ್ನೆ: ಕುವೆಂಪು ಅವರ ವಿಶ್ವಮಾನವ ಕಲ್ಪನೆ ರೂಪುಗೊಂಡಿದ್ದು ಹೀಗೆ. ಆದರೆ ಈ ಪರಿಕಲ್ಪನೆಗೂ ಈಗಿನ ಗ್ಲೋಬಲೈಜೇಶನ್‌ಗೂ ತಾತ್ವಿಕವಾದ ವ್ಯತ್ಯಾಸವಿದೆ.

ಜಿಎಸ್‌ಎಸ್: ಗಾಂಧೀದು ಒಂದು ಸುಪ್ರಸಿದ್ಧ ಹೇಳಿಕೆ ಇದೆ. 'ನಾನು ನನ್ನ ಮನೆಯ ಕಿಟಕಿ ಬಾಗಿಲುಗಳನ್ನ ಉದಾರವಾಗಿ ತೆಗೆದಿಟ್ಟಿರುತ್ತೇನೆ. ಜಗತ್ತಿನ ಎಲ್ಲ ಸಂಸ್ಕೃತಿಗಳ ಗಾಳಿಯೂ ಅದರ ಮೇಲೆ ಬೀಸಲಿ. ನಾನು ಮಾತ್ರ I refuse to be blown off my feet. (ನಗು) ಇದನ್ನ ಇವತ್ತಿಗೆ ಅನ್ವಯಿಸಿಕೊಂಡು ನೋಡ್ರಿ. ನಾವು ಸ್ವತಂತ್ರ ಭಾರತದಲ್ಲಿ ನಮ್ಮ ಮನೆಯ ಕಿಟಕಿ ಬಾಗಿಲುಗಳನ್ನು ಉದಾರವಾಗಿ ತೆಗ್ದಿದೀವಿ. ಜಗತ್ತಿನ ಎಲ್ಲ ಸಂಸ್ಕೃತಿಯ ಗಾಳಿಗಳೂ ನಮ್ಮ ಮೇಲೆ ಬೀಸ್ತಾ ಇವೆ. ಆದರೆ ಗಾಂಧಿ ಹೇಳಿದ ಹಾಗೆ I refuse to be blown off of my feet ಅನ್ನೋದು ನಿಜವಾಗಿದೆಯೇ? Are we rooted firmly? This is the question we have to ask. ಭಾರತ ಸ್ವತಂತ್ರವಾದದ್ದು ಅಂತರರಾಷ್ಟ್ರೀಯ ಸಂಬಂಧವನ್ನು ಸ್ಥಾಪಿಸಿಕೊಳ್ಳೋದಿಕ್ಕೇ

ಹೊರತು, ಯಾವ್ಯಾವುದೋ ಬಂಡವಾಳಶಾಹಿ ಪ್ರಭುತ್ವಗಳ ದೂರ ನಿಯಂತ್ರಣಕ್ಕೆ ಒಳಗಾಗೋಕಲ್ಲ. 'ಅಂತರರಾಷ್ಟ್ರೀಯ' ವಾಗೋದು ಅಂದರೆ ನಮಗೆ ನಾವು ಸ್ವತಂತ್ರವಾಗಿ ಇದ್ಕೊಂಡು, ಬೇರೆ ರಾಷ್ಟ್ರಗಳೊಂದಿಗೆ ನಮ್ಮ ಸಂಬಂಧಗಳನ್ನು ಬೆಸೆಯುತ್ತಾ ವಿಶಿಷ್ಟವಾಗಿರೋದು. ವಿಶಿಷ್ಟತೆ ಅನ್ನೋದು ಯಾವಾಗಲೂ ಕೂಡಾ ಸಮಷ್ಟಿಯೊಂದಿಗೆ ಸಂಬಂಧ ಇಟ್ಕೊಂಡು ತನ್ನ ಐಡೆಂಟಿಟಿಯನ್ನು ಕಾಪಾಡಿಕೊಳ್ಳೋದು. ಆ ಬಗೆಯ ವಿಶಿಷ್ಟತೆಯನ್ನು ನಾವು ಕಾಪಾಡಿಕೊಳ್ತಿದೀವಾ? ಸ್ವಾತಂತ್ರ್ಯೋತ್ತರ ಕಾಲದಲ್ಲಿ ಪ್ರಬಲ ವಾಗುತ್ತಿರುವ ಇಂಗ್ಲೀಷ್‌ನ ವ್ಯಾಮೋಹ ಏನನ್ನ ಸೂಚಿಸ್ತಾ ಇದೆ? ಪಾಶ್ಚಾತ್ಯ ದೇಶಗಳ ಮಾದರಿಗಳು ನಮ್ಮದಕ್ಕಿಂತ ಉತ್ಕೃಷ್ಟ ಅನ್ನೋ ಭಾವನೆ ನಮ್ಮಲ್ಲಿ ಹೋಗೇ ಇಲ್ಲ. ನಮ್ಮದೇ ಆದದ್ದು ಉತ್ಕೃಷ್ಟವಾದದ್ದು ಅಂತಾ ತೋರಿಸೋ ಪ್ರಯತ್ನಾನೇ ಇಲ್ಲ. ಹೀಗಾಗಿ ಈ ಹೊತ್ತಿನ ಬೇರೆ ಬೇರೆ ಪ್ರಭಾವ ಮತ್ತು ನಿಯಂತ್ರಣಗಳು ಇವೆಯಲ್ಲ, ಇವುಗಳಿಗೆ ಒಂದು ಪ್ರತಿರೋಧವಾಗಿ ನಮ್ಮ ದೇಶೀಪರವಾದ ಬೆಳವಣಿಗೆ ಆಗಬೇಕು ಅಂತಾ ಹೇಳ್ತೀವಲ್ಲ, ಇದು ಹೇಗೆ ಆಗೋದು?

ಪ್ರಶ್ನೆ: *ಸರ್ ಈ ದೇಶೀ ಪರಿಕಲ್ಪನೆ ಇದೆಯಲ್ಲ, ಅದನ್ನ ಎಲ್ರೂ ತಮ್ಮ ಮೂಗಿನ ನೇರಕ್ಕೆ ಬಳಸ್ತಿದಾರೆ. ಇದಕ್ಕೊಂದು ಖಚಿತ ಸ್ವರೂಪ ಇಲ್ಲ. ಇದನ್ನು ಕೋಮುವಾದಿಗಳೂ ಬಳಸ್ತಿದಾರೆ. ಸಂಸ್ಕೃತಿ ಚಿಂತಕರೂ ಬಳಸ್ತಿದಾರೆ.*

ಜಿಎಸ್‌ಎಸ್: ಈಗ ಗಾಂಧಿ ಹೇಳಿದ ಸ್ವರಾಜ್ಯ ಮತ್ತು ಸ್ವದೇಶಿ ಅನ್ನೋ ಕಾನ್ಸೆಪ್ಟ್ ಇದೆಯಲ್ಲ. ಅಲ್ಲೂ ಕೂಡಾ ಸ್ವತಂತ್ರವಾಗೋದು, ಅಂದರೆ ಅನ್ಯಪ್ರಭುತ್ವಗಳಿಂದ ಪಾರಾಗಿ ನಾವು ನಾವಾಗಿಯೇ ವಿಕಾಸವಾಗೋದು ಹೇಗೆ ಅನ್ನೋ ಕಾಳಜಿಗಳೇ ಹಿಂದಿರತಕ್ಕದ್ದು.

ಪ್ರಶ್ನೆ: *ನೀವು ಗ್ಲೋಬಲೈಜೇಶನ್‌ಗೆ ಹೆಚ್ಚು ತೆರೆದುಕೊಳ್ತಾ ಇರೋ ಮಹಾನಗರದಲ್ಲಿ ಇರೋದರಿಂದಾನೇ ಇದನ್ನೆಲ್ಲ ಫೀಲ್ ಮಾಡ್ತಿರಬೇಕು.*

ಜಿಎಸ್‌ಎಸ್: ನೀವು ಏನು ಹೇಳಿದ್ರೂ, ನಮ್ಮ ಸಾಹಿತ್ಯದೊಳಗೆ ಇನ್ನೂ ನಗರೀಕರಣ ಪ್ರಾರಂಭವಾಗೇ ಇಲ್ಲ. ನಾವೆಲ್ಲ ಹಳ್ಳಿ ಮೂಲದಿಂದ್ಲೇ ಬಂದಂಥ ಜನ. ಈ ಹೊತ್ತಿಗೂವೇ, ನಮ್ಮ ಎಲ್ಲ ಮುಖ್ಯ ಲೇಖಕರು ನಗರದಲ್ಲಿದ್ರೂ, ಅವ್ರು ಬರೆಯೋದೆಲ್ಲ ಹಳ್ಳಿಯ ನೆನಪುಗಳನ್ನೆ.

ಪ್ರಶ್ನೆ: *ಇವರೆಲ್ಲ ನಗರಕ್ಕೆ ಬಂದಿರೋದರಿಂದಾನೇ ತೀವ್ರವಾಗಿ ಹಳ್ಳಿ ನೆನಪು ಬರ್ತಾ ಇದೆಯಾ?*

ಜಿಎಸ್ಎಸ್: ಇರಬಹುದು.

ಪ್ರಶ್ನೆ: *ನಿಮ್ಮ ಪೊಯೆಟ್ರೀನಲ್ಲಿ ಎರಡು ಮುಖ್ಯ ಮುಖಗಳು ಇವೆ. ಒಂದು: ನಿಸರ್ಗದ ಒಳಗೆ ಒಂದು ಚೈತನ್ಯಶೀಲ ಸಮೃದ್ಧಿ ಇದೇಂತ. ತಕ್ಷಣ ನೆನಪಿಗೆ ಬರೋದು 'ಹೂವು' ಪದ್ಯ. ಎರಡು: ಮನುಷ್ಯ ಕಟ್ಟಿಕೊಂಡಿರೋ ಈ ಸಮಾಜದೊಳಗೆ ಮಾತ್ರ ಈ ಚೈತನ್ಯಶೀಲತೆಗೆ ಬದಲಾಗಿ ಇವಿಲ್ಸ್‌ಗಳಿವೆ ಅಂತ. ಯಾಕೆ ಹೀಗೆ?*

ಜಿಎಸ್ಎಸ್: "ಬೇಸರವೇ ಇಲ್ಲ. ನಿಸರ್ಗಕ್ಕೆ ಹೊಚ್ಚ ಹೊಸದಾಗಿ ಹೊಮ್ಮುವುದಕ್ಕೆ; ಬೇಸರವೇ ಇಲ್ಲ ಮನಸ್ಸಿಗೆ ಇವುಗಳ ಜತೆ ಬರೆಯುವುದಕ್ಕೆ". ಯಾವತ್ತೂ, ನಿಸರ್ಗಕ್ಕೂ ನಮಗೂ ಇರುವ ಸಂಬಂಧ ಕಳ್ಕೋಬಾರ್ದು. ಇವತ್ತಿಗೂ ಎನ್‌ವಿರಾನ್‌ಮೆಂಟ್ ಪ್ರಾಬ್ಲಂ ಇದೆ. ಈಗ ಜಗತ್ತು ಎದುರಿಸುತ್ತಿರುವ ಮಹಾ ದುರಂತಗಳಲ್ಲಿ ಪರಿಸರನಾಶದ ತಲ್ಲಣಗಳಿವೆಯಲ್ಲ, ಭಾಳ ದೊಡ್ಡದು. ಕುವೆಂಪು ಅವರು ಕಲಿಸಿದ ನಿಸರ್ಗ ಪ್ರೀತಿ ಅನ್ನೋದು ಎಷ್ಟು ದೊಡ್ಡ ಮೌಲ್ಯ ಅನ್ನೋದು ಈಗ ಅರ್ಥವಾಗ್ತಿದೆ. ನಿಸರ್ಗವನ್ನು ಪ್ರೀತಿಸೋದು ಸೌಂದರ್ಯನಿಷ್ಠ ಅಥವಾ ಆಧ್ಯಾತ್ಮಿಕ ಮೌಲ್ಯ ಮಾತ್ರವಲ್ಲ, ಅದು ಸಾಮಾಜಿಕ ಮೌಲ್ಯ ಕೂಡಾ ಅನ್ನೋದು, ನಮಗೆ ಪರಿಸರನಾಶದ ದಿನಗಳಲ್ಲಿ ಗೊತ್ತಾಗುತ್ತಿದೆ. ನಮ್ಮಲ್ಲಿ ನಿಸರ್ಗವನ್ನು ಆರಾಧಿಸ್ತೇವೆ ಅಷ್ಟೇ. ಅದು ನಮ್ಮ ಬದುಕಿನ ಅನಿವಾರ್ಯವಾದ ಭಾಗ ಅನ್ನೋ ಪ್ರಜ್ಞೆ ನಮ್ಮಲ್ಲಿ ಹುಟ್ಟಿಲ್ಲ.

ಪ್ರಶ್ನೆ: *ಆದ್ರೆ ಜನಪದ ಸಮುದಾಯಗಳಲ್ಲಿ ನಿಸರ್ಗದ ಒಡನಾಟ ಭಾಳ ಪ್ರಾಕ್ಟಿಕಲ್ ಆಗಿರ್‍ತದೆ.*

ಜಿಎಸ್ಎಸ್: ಆ ಜನ ಬದುಕಿದ್ದೇ ಅದರಲ್ಲಲ್ವ? ಆಮೇಲೆ ಬರ್ತಾ ಬರ್ತಾ ನಮಗೆ ಮರ ನೆಡೋದು ಒಂದು ಚಳುವಳಿ, ಗಿಡ ಬೆಳೆಸೋದು ಒಂದು ಚಳುವಳಿ ಆಯ್ತು. ಈ ಕಾನ್ಸೆಪ್ಟ್ ನಮಗೆ ಎಲ್ಲಿತ್ತು? ಅದೊಂದು ಸಾಮಾಜಿಕ ಜವಾಬ್ದಾರಿ ಅನ್ನೋ ಕಲ್ಪನೆ ಯಾಕೆ ಬಂತು? ಅಂತಾ ಹೇಳಿದ್ರೆ, ನಮಗೂ ನಿಸರ್ಗಕ್ಕೂ ನಡುವೆ ಇರುವ ಅಂತರ ಅಷ್ಟು ದೂರವಾಗಿದೆ.

ಪ್ರಶ್ನೆ: *ನಿಮ್ಮ ಕಾವ್ಯಕ್ಕೆ ಮತ್ತೆ ಬರೋಣ. ಮೊದಲ್ನೇದು ನಿಸರ್ಗವನ್ನು ಕೀರ್ತಿಸುವ ಪೊಯಟ್ರಿ ಆದ್ರೆ, ಎರಡನೇ ಘಟ್ಟದಲ್ಲಿ ಯಾಕೆ ಈ ಮನುಷ್ಯ ಸಮಾಜದ, ಸಾರ್ವಜನಿಕ ಬದುಕಿನ ಚಿತ್ರ ತುಂಬ ಕ್ರಿಟಿಕಲ್ ಆಗಿದೆ, ಡಿಪ್ರೆಸ್ಸಡ್ ಆಗಿವೆ?*

ಜಿಎಸ್ಎಸ್: ಸ್ವಾತಂತ್ರ್ಯೋತ್ತರ ಭಾರತದಲ್ಲಿ man became more selfish, more cruel, more self centred. more political. ಮನುಷ್ಯ ಸಂಬಂಧಗಳನ್ನ ಕೆಡಿಸುವ ವಿಚ್ಛಿದ್ರಕಾರಕ ಶಕ್ತಿಗಳು ಅಂತ ಏನು ಕರೀತೀವಿ, ಅದರೊಳಗೆ ಇವು ಸೇರ್ತವೆ. So I am always against divisive forces.

ಪ್ರಶ್ನೆ: *ಅವು ಪರ್ಸನಲ್ ಆಗಿದ್ರೆ ಮುಖ್ಯವಲ್ಲ. ಆದ್ರೆ ಸಂಘಟಿತವಾಗಿ ಇಡೀ ಸಮಾಜದ ಮೇಲೆ ಕವಿದಾಗ (ಉದಾ: ಕೋಮುವಾದ) ಅದು ತುಂಬ ಡೇಂಜರಸ್. ಈಗ ಕಳೆದ 10 ವರ್ಷಗಳ ನಿಮ್ಮ ಕಾವ್ಯ ಇಂಥ ಕೆಡಹು ಶಕ್ತಿಗಳ ಅಬ್ಬರಕ್ಕೆ ಹೆಚ್ಚು ರಿಯಾಕ್ಟ್ ಮಾಡ್ತಾ ಬಂದಿದೆ. ಆದರೆ ಅದು ಪಾಸಿಟೀವ್ ಆಗಿದೆ. ಪ್ರೀತಿಯ ಭಾಗವಾಗಿಯೇ ಈ ಪ್ರೊಟೆಸ್ಟ್ ಕೂಡಾ ಇದೆ.*

ಜಿಎಸ್ಎಸ್: ನಿಮ್ಮ ಈ ಒಳನೋಟಗಳಿಗಾಗಿ ವಂದನೆ.

**(ಬರಹಕ್ಕೆ: ನಾಗಭೂಷಣ ಪಾಟೀಲ್)**

## ಮುಖಾಮುಖಿ - 4

*ಕನ್ನಡದ ಪ್ರಸಿದ್ಧ ಕವಿ ಡಾ. ಜಿ. ಎಸ್. ಶಿವರುದ್ರಪ್ಪ ಅವರು ಕಳೆದ ಐದು ದಶಕಗಳಿಂದ ಸಾಹಿತ್ಯ ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಕಾವ್ಯ, ವಿಮರ್ಶೆ, ಪ್ರಬಂಧ, ಪ್ರವಾಸ ಸಾಹಿತ್ಯ ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಶ್ರದ್ಧೆಯಿಂದ ಕೃತಿಗಳನ್ನು ಕಟ್ಟಿದ ಪ್ರೊ. ಜಿಎಸ್ಎಸ್ ಅಧ್ಯಾಪಕರಾಗಿ, ದಕ್ಷ ಆಡಳಿತಗಾರರಾಗಿ ಹೆಸರಾದವರು. ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗವನ್ನು ಅವರು ಕಟ್ಟಿದ ರೀತಿ ಇವತ್ತಿಗೂ ಮಾದರಿಯಾಗಬಲ್ಲದು. ಕರ್ನಾಟಕ ಸಾಹಿತ್ಯ ಅಕಾದೆಮಿಯ ಅಧ್ಯಕ್ಷರಾಗಿ ಅವರು ಮಾಡಿದ ಕಾರ್ಯಗಳು ಕೂಡಾ ಸಾಹಿತ್ಯ ಪ್ರೇಮಿಗಳ ನೆನಪಿನಲ್ಲಿ ಉಳಿದಿವೆ.*

*ಕಳೆದ ಐದು ದಶಕಗಳ ಅವಧಿಯಲ್ಲಿ ಕನ್ನಡ ಸಾಹಿತ್ಯ ವಿವಿಧ ಸಾಹಿತ್ಯಕ ಚಳವಳಿಗಳನ್ನು ಕಂಡರೂ ಜಿಎಸ್ಎಸ್ ಯಾವುದೇ ಚಳವಳಿಗೆ ಸೀಮಿತವಾಗಲಿಲ್ಲ; ನಿಂತುಹೋಗಲಿಲ್ಲ. ಅಂತಃಸತ್ವವನ್ನು ಉಳಿಸಿಕೊಂಡು ತಮ್ಮ ಕಾವ್ಯವನ್ನು ಬೆಚ್ಚಗೆ ಉಳಿಸಿಕೊಂಡು ಬಂದವರು. ಕುವೆಂಪು ಅವರ ನೆಚ್ಚಿನ ಶಿಷ್ಯರಾದ ಜಿಎಸ್ಎಸ್ ಅಷ್ಟಾಗಿ ವಿವಾದಕ್ಕೆ ಗುರಿಯಾದವರಲ್ಲ. ಆದರೂ ತಮ್ಮ ನಿಲುವನ್ನು ಅವರು ಬಿಟ್ಟುಕೊಟ್ಟವರೂ ಅಲ್ಲ. ಇದೀಗ ಗೊಂದಲ ಎಬ್ಬಿಸಿರುವ ಕೆಲವು ವೀರಶೈವ ಮುಖಂಡರ ಕೋಪಕ್ಕೆ ವಿನಾಕಾರಣ ಗುರಿಯಾಗಿದ್ದಾರೆ. ಡಾ. ಶಿವರುದ್ರಪ್ಪ ಮತ್ತು ಡಾ. ಚಿದಾನಂದಮೂರ್ತಿ ಅವರಿಗೆ ವೀರಶೈವ ಸಮಾಜದಿಂದ 'ಬಹಿಷ್ಕಾರ' ಹಾಕಿರುವುದಾಗಿ ಈ 'ಮುಖಂಡರು' ಘೋಷಿಸಿದ್ದಾರೆ.*

*ಈ ಹಿನ್ನಲೆಯಲ್ಲಿ ಡಾ. ಜಿಎಸ್ಎಸ್ ಅವರೊಂದಿಗೆ 'ಪ್ರಜಾವಾಣಿ' ನಡೆಸಿದ ಸಂವಾದ ಇಲ್ಲಿದೆ.*

* * *

*ಪ್ರಶ್ನೆ: ವೀರಶೈವ ಸಮಾಜದಿಂದ ನಿಮ್ಮನ್ನು 'ಬಹಿಷ್ಕರಿಸಿ'ರುವುದಾಗಿ ಕೆಲವರು ಹೇಳಿದ್ದಾರೆ. ಈ ಬಗ್ಗೆ ನಿಮ್ಮ ಪ್ರತಿಕ್ರಿಯೆ ಏನು?*

**ಪ್ರೊ. ಜಿ.ಎಸ್. ಶಿವರುದ್ರಪ್ಪ:** ವೀರಶೈವ ಸಮಾಜದಿಂದ ನನ್ನನ್ನು ಹೊರಹಾಕಿದರು ಎಂಬುದು ಸಂತೋಷದ ಮತ್ತು ತಮಾಷೆಯ ಸಂಗತಿ. ಜಾತಿ, ಮತ, ಪಂಥಗಳ ಪರಿಧಿಯಿಂದ ದೂರವಿರಬೇಕೆಂದು ಬಯಸುವ ಯಾರಿಗೇ ಆಗಲಿ ಈ 'ಬಹಿಷ್ಕಾರ' ಸಂತೋಷ ತರುವ ಸಂಗತಿಯೇ. ಹೀಗಾಗಿ ನನಗೆ ಸಹಜವಾಗಿಯೇ ಸಂತೋಷವಾಗಿದೆ.

ಇನ್ನು ತಮಾಷೆ ಯಾಕೆಂದರೆ, ಬಹಿಷ್ಕರಿಸಲು ನಾನು 'ವೀರಶೈವ ಸಮಾಜದ' ಒಳಗಡೆ ಇದ್ದೇನೋ, ಹೊರಗಡೆ ಇದ್ದೇನೋ ಎಂಬ ಅನುಮಾನ. ಇಂಥ ಅಸಂಬದ್ಧ ಸಂಗತಿಗಳಿಗೆ ನಾನು ಪ್ರತಿಕ್ರಿಯಿಸಬೇಕಾದ ಅಗತ್ಯವೇ ಕಾಣುತ್ತಿಲ್ಲ.

***ಪ್ರಶ್ನೆ:*** *ನೀವು ವೀರಶೈವ ಧರ್ಮಕ್ಕೆ ಅಥವಾ ಸಮಾಜಕ್ಕೆ ಸೇರಿದವರೇ?*

**ಜಿಎಸ್‌ಎಸ್:** ಯಾರೇ ಆದರೂ, ಯಾವುದೇ ಮತಧರ್ಮದಲ್ಲಿ ಹುಟ್ಟಿರುವುದು ಅವರ ಆಯ್ಕೆಯಲ್ಲ; ಅದು ಕೇವಲ ಆಕಸ್ಮಿಕ. ಹೀಗೆ ಆಕಸ್ಮಿಕವಾಗಿ ಹುಟ್ಟಿದ ವ್ಯಕ್ತಿ ತಾನು ಹುಟ್ಟಿದ ಮತಧರ್ಮದ ಚರಿತ್ರೆ ಮತ್ತು ಪರಂಪರೆಯ ಒಳಗೆ ಸೇರಿದವನಾಗಿರುತ್ತಾನೆ. ಹಾಗೆ ನಾನು ವೀರಶೈವ ಧರ್ಮದಲ್ಲಿ ಹುಟ್ಟಿದವನಾಗಿರಬಹುದು. ಹಾಗಾದ ಮಾತ್ರಕ್ಕೆ ನಾನು ವೀರಶೈವ ಧರ್ಮಕ್ಕೆ ಮಾತ್ರ ಸೇರಿದವನೆಂದು ನಾನು ಯಾವತ್ತೂ ತಿಳಿದುಕೊಂಡಿಲ್ಲ. ನನ್ನನ್ನು ಒಬ್ಬ ಕನ್ನಡ ಕವಿ ಎಂದು ಕರೆಸಿಕೊಳ್ಳುವುದರಲ್ಲಿ ನನಗೆ ಆಸಕ್ತಿ ಇದೆಯೇ ಹೊರತು ವೀರಶೈವ ಕವಿ ಎಂದು ಕರೆಸಿಕೊಳ್ಳುವುದರಲ್ಲಿ ಅಲ್ಲ. ಯಾಕೆಂದರೆ ವೀರಶೈವ ಎಂಬುದು ಕನ್ನಡ ಸಂಸ್ಕೃತಿಯ ಒಂದು ಭಾಗವೇ ಹೊರತು ಅದು ಕನ್ನಡದ ಸರ್ವಸ್ವ ಅಲ್ಲ. ಇದರ ಮೇಲೆ ಒಬ್ಬ ಸಾಹಿತಿ ನಿಜವಾದ ಸಾಹಿತಿಯಾಗುವುದು ತನ್ನನ್ನು ತಾನು ಮೀರುವುದರಿಂದಲೇ. ಎಲ್ಲ ಬಗೆಯ ಜಾತಿ, ಮತ, ಧರ್ಮಗಳಿಂದ ತನ್ನನ್ನು ಬಿಡಿಸಿಕೊಂಡು ನಿಲ್ಲುವುದೇ ಸೃಜನಶೀಲತೆಯ ಲಕ್ಷಣ. ಯಾವ ವ್ಯಕ್ತಿ ತನ್ನ ಸೃಜನಶೀಲತೆಯ ಸಂದರ್ಭದಲ್ಲಾದರೂ ತನ್ನ ಜಾತಿ, ಮತಗಳನ್ನು ಮೀರಲಾರನೋ ಅವನು ಶ್ರೇಷ್ಠ ಸಾಹಿತಿಯಾಗಲಾರ.

ವಾಸ್ತವವಾಗಿ ವೀರಶೈವ, ಲಿಂಗಾಯತ ಎರಡೂ ಸಮಾನಾರ್ಥಕ ಪದಗಳೇ. ನನಗೆ ಈ ಎರಡೂ ಪದಗಳಿಗಿಂತ ಈ ಧರ್ಮವನ್ನು ಶರಣ ಧರ್ಮ ಎಂದು ಕರೆಯುವುದೇ ಹೆಚ್ಚು ಸೂಕ್ತ ಎನ್ನಿಸುತ್ತದೆ. ಒಂದರ್ಥದಲ್ಲಿ ನಾನು ಈ ಶರಣಧರ್ಮಕ್ಕೆ ಸೇರಿದವನು ಎಂಬ ಬಗ್ಗೆ ಹೆಮ್ಮೆ ಕೂಡಾ ಇದೆ. ಯಾಕೆಂದರೆ ಅದು ವೈಚಾರಿಕವಾದ, ಉದಾರವಾದ, ಸಾಮಾಜಿಕ ಜವಾಬ್ದಾರಿ ಉಳ್ಳ, ಎಲ್ಲ ಮನುಷ್ಯರ ಏಕತೆಯ ಪರವಾಗಿರುವ ಧರ್ಮವಾಗಿ ರೂಪಗೊಂಡಿದ್ದು. ಈ ಚರಿತ್ರೆಯನ್ನು ಗಮನಿಸಿದಾಗ ಸಂತೋಷವಾಗುತ್ತದೆ. ಈ ಶರಣಧರ್ಮ ತನ್ನ ಮೂಲಸ್ವರೂಪದಲ್ಲಿ ಶ್ರೀಸಾಮಾನ್ಯನ ಪರವಾಗಿ ನಿಂತದ್ದು. ಶ್ರೀಸಾಮಾನ್ಯರ ಎಲ್ಲ ವರ್ಗಗಳ ಹಿತದ ಬಗ್ಗೆ ಕಾಳಜಿ ಇಟ್ಟುಕೊಂಡದ್ದು.

***ಪ್ರಶ್ನೆ:*** *ಧಾರ್ಮಿಕ ಬಹಿಷ್ಕಾರಕ್ಕೂ ವೀರಶೈವ ಧರ್ಮಕ್ಕೂ ಏನಾದರೂ ಸಂಬಂಧ ವಿದೆಯೇ?*

**ಜಿಎಸ್‌ಎಸ್:** ವೀರಶೈವ ಧರ್ಮದಲ್ಲಿ 'ಬಹಿಷ್ಕಾರ'ಕ್ಕೆ ಅರ್ಥವೇ ಇಲ್ಲ. ಈ ಧರ್ಮ ಅಲಕ್ಷಿತ ಸ್ಥರದ, ಅನಾದರಕ್ಕೆ ಒಳಗಾದ ಬೇರೆ ಬೇರೆ ವರ್ಗಗಳ ಎಲ್ಲರನ್ನೂ 'ಒಳಗೆ' ತೆಗೆದುಕೊಂಡದ್ದು; ಹೊರಕ್ಕೆ ಹಾಕಿದ್ದಲ್ಲ. ಹೀಗಾಗಿ ಇಲ್ಲಿ 'ಬಹಿಷ್ಕಾರ' ಎನ್ನುವುದು ಅಸಂಬದ್ಧ ಮತ್ತು ಅರ್ಥಹೀನವಾದದ್ದು.

*ಪ್ರಶ್ನೆ: ವೀರಶೈವರೂ ಹಿಂದೂಗಳು ಎಂದು ಕೆಲವರು ವಾದಿಸುವಲ್ಲಿ ಈ ಧರ್ಮ ಹಿಂದೂ ಧರ್ಮಕ್ಕಿಂತ ಭಿನ್ನವಾದದ್ದಲ್ಲ ಎಂಬ ಅಭಿಪ್ರಾಯವಿದೆಯಲ್ಲವೇ?*

**ಜಿಎಸ್‌ಎಸ್:** ಶರಣಧರ್ಮದ ನಿಜವಾದ ಸ್ವರೂಪವನ್ನು ಅರಿಯಬೇಕಾದರೆ ಅದರ 'ಸಂವಿಧಾನ'ದಂತಿರುವ ವಚನಗಳ ಒಟ್ಟು ನಿಲುವನ್ನು ನಾವು ಸರಿಯಾಗಿ ಗ್ರಹಿಸಬೇಕಾಗಿದೆ. ಈ ದೇಶದ ಬಹುಮುಖೀ ಸಂಸ್ಕೃತಿಯಲ್ಲಿ ವೀರಶೈವ ಸಂಸ್ಕೃತಿಗೂ ತನ್ನದೇ ಆದ ಚಹರೆಗಳು, ಲಕ್ಷಣಗಳು ಇವೆ ಎಂಬುದನ್ನು ಗಮನಿಸಿದರೆ ಈ ಸಮಾಜದ ಜನರ ಒಟ್ಟು ಜೀವನ ವಿಧಾನವು ವೈದಿಕ ಸಂಸ್ಕೃತಿಯ ಜೀವನ ವಿಧಾನಕ್ಕಿಂತ ಅನೇಕ ರೀತಿಯಲ್ಲಿ ಭಿನ್ನವಾಗಿದೆ. ಆದರೆ ಶರಣಧರ್ಮದ ಉತ್ಕರ್ಷದ ಕಾಲದಿಂದ ಈ ಹಲವು ಶತಮಾನಗಳಲ್ಲಿ ಎಲ್ಲ ಮತ ಧರ್ಮಗಳಂತೆಯೇ ಇದರಲ್ಲಿಯೂ ಅನೇಕ ಬದಲಾವಣೆಗಳೂ, ಸೇರ್ಪಡೆಗಳೂ ಉಂಟಾಗಿ ಅದು ತನ್ನ ಮೂಲ ಸ್ವರೂಪವನ್ನು ಇತರ ಎಲ್ಲ ಧರ್ಮಗಳಂತೆ ಕಳೆದುಕೊಂಡಂತೆ ತೋರುವುದಾದರೂ, ವೈದಿಕ ಧರ್ಮದ ಎಷ್ಟೋ ಅಂಶಗಳನ್ನು ಮತ್ತೆ ಇದು ತನ್ನಲ್ಲಿ ಅಳವಡಿಸಿಕೊಂಡರೂ ಆ ಕಾರಣಕ್ಕೆ ಇದು ಹಿಂದೂ ಧರ್ಮದಿಂದ ಭಿನ್ನವಾದುದೇನೂ ಅಲ್ಲ ಎಂಬ ತೀರ್ಮಾನಕ್ಕೆ ಬರುವುದು ಉಚಿತವಾದುದಲ್ಲ.

ವಾಸ್ತವವಾಗಿ, ಶರಣ ಧರ್ಮ ಹಿಂದೂ ವೈದಿಕ ಧರ್ಮಕ್ಕೆ ತೋರಿದ ಪ್ರತಿಭಟನೆ ಮತ್ತು ಪ್ರತಿಕ್ರಿಯೆಯ ಪರಿಣಾಮ. ಈ ಹೊತ್ತು ವೀರಶೈವ ಧರ್ಮ ಹಿಂದೂಧರ್ಮದಿಂದ ಭಿನ್ನವಲ್ಲ ಎಂದು ಮಂಡಿಸುವ ಯಾವುದೇ ವಾದ ಅಥವಾ ಸಿದ್ಧಾಂತ ಮೂಲಭೂತವಾಗಿ 12ನೇ ಶತಮಾನದ ಬಸವಣ್ಣನವರ ನೇತೃತ್ವದಲ್ಲಿ ನಡೆದ ಸಮಾಜೋ-ಧಾರ್ಮಿಕ ವೈಚಾರಿಕ ಕ್ರಾಂತಿಯ ಮೌಲಿಕತೆಯನ್ನು ನಿರಾಕರಿಸುವ ಅಥವಾ ಕಡೆಗಣಿಸಿ ನೋಡುವ ಪ್ರಯತ್ನವೇ ಆಗುತ್ತದೆ. ಹಾಗೆ ನೋಡಿದರೆ ಬಸವಣ್ಣ ಪ್ರತಿಪಾದಿಸಿದ ಕ್ರಾಂತಿಕಾರಕ ಸಂಗತಿಗಳು ಈ ದೇಶದ ಧಾರ್ಮಿಕ ಪರಂಪರೆಯೊಳಗೆ ಮೊದಲಿನಿಂದಲೂ ಒಂದಲ್ಲ ಒಂದು ರೀತಿಯಲ್ಲಿ ಪ್ರಚಲಿತವಾಗಿದ್ದವುಗಳೆಂಬುದನ್ನು ಒಪ್ಪಿಕೊಂಡರೂ, ಅವುಗಳೆಲ್ಲ ಬಹುಮಟ್ಟಿಗೆ ಸಿದ್ಧಾಂತದ ರೂಪದಲ್ಲಿದ್ದವೇ ಹೊರತು ಬಸವಣ್ಣನವರ ಕಾಲದಲ್ಲಿಯಂತೆ ವಾಸ್ತವ ಪ್ರಾಯೋಗಿಕ ರೂಪಕ್ಕೆ ಇಳಿದ ಒಂದು ಸಂದರ್ಭ ಕಡಿಮೆ ಎಂದೇ ಹೇಳಬಹುದು. ಈ ದೃಷ್ಟಿಯಿಂದ 12ನೇ ಶತಮಾನದ ಬಸವಣ್ಣನವರ ವಿಚಾರ ಕ್ರಾಂತಿ ಒಂದು ಅಪೂರ್ವವಾದ ಚಾರಿತ್ರಿಕ ಘಟನೆ ಎನ್ನುವಲ್ಲಿ ಸಂದೇಹವೇ ಇಲ್ಲ. ಬುದ್ಧನ ನಂತರ ಬಹುಶಃ ಈ ಬಗೆಯಲ್ಲಿ ಜನಸಾಮಾನ್ಯರನ್ನು ಸಂಘಟಿಸಿ, ಅವರಲ್ಲಿ ವೈಚಾರಿಕತೆಯನ್ನು, ಆತ್ಮಪ್ರತ್ಯಯವನ್ನು, ಪ್ರತಿಭಟನೆಯ ಕೆಚ್ಚನ್ನು ಮೂಡಿಸಿದಂಥ ಸಂದರ್ಭ ಬಹುಶಃ ಮತ್ತೊಂದು ಇರಲಾರದು.

*ಪ್ರಶ್ನೆ: ಧರ್ಮಗಳೆಲ್ಲ ಜಾತಿಗಳಾಗಿ ಮಲಿನಗೊಂಡಿರುವ ಇವತ್ತಿನ ಸಂದರ್ಭದಲ್ಲಿ ಯಾವುದೇ ಧರ್ಮದ ಪರವಾಗಿ ವಾದ ಮಂಡಿಸುವುದು ಎಷ್ಟು ಸಮಂಜಸ?*

**ಜಿಎಸ್ಎಸ್:** ಇವತ್ತು ಯಾವ ಧರ್ಮವೂ ತನ್ನ ಮೂಲ ಸ್ವರೂಪದಲ್ಲಿ ಉಳಿದಿಲ್ಲ ಎಂಬುದು ನಿಜ; ವೀರಶೈವ ಧರ್ಮ ಕೂಡಾ. ಆದ್ದರಿಂದಲೇ ಇವತ್ತು ವೀರಶೈವ ಧರ್ಮ ಅಥವಾ ಹಿಂದೂ ಧರ್ಮದ ಪರವಾಗಿ ಮಾತನಾಡುವುದು ಅಸಂಗತ. ಮತ-ಧರ್ಮ ವ್ಯಕ್ತಿಯ ವೈಯಕ್ತಿಕ ನಂಬಿಕೆ ಮತ್ತು ಬದ್ಧತೆ. ಅದರಾಚೆಗೆ ಅದು ಇಲ್ಲ. ಜತೆಗೆ ಕುವೆಂಪು ಅವರು ಪ್ರತಿಪಾದಿಸಿದ್ದು, ನಿಜವಾದ ಆಧ್ಯಾತ್ಮವೆಂದರೆ ಎಲ್ಲ ಜಾತಿ ಮತಗಳ ಎಲ್ಲೆಗಳನ್ನು ಮೀರಿ ಮನುಷ್ಯನ ವ್ಯಕ್ತಿತ್ವ ಅನಿಕೇತನ ಪ್ರಜ್ಞೆಯಲ್ಲಿ ಅರಳಬೇಕು ಎನ್ನುವುದೇ ಇವತ್ತಿನ ಧಾರ್ಮಿಕ ನಿಲುವು. ಕುವೆಂಪು ಅವರ ಶಿಷ್ಯನಾಗಿ ಈ ನಿಲುವೇ ನನಗೆ ಮುಖ್ಯವಾದದ್ದು.

***ಪ್ರಶ್ನೆ:*** *ಮಠಗಳು, ವಿಶೇಷವಾಗಿ ವೀರಶೈವ ಮಠಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು?*

**ಜಿಎಸ್ಎಸ್:** ಒಂದು ಸಮಾಜವನ್ನು ವೈಚಾರಿಕವಾಗಿ ಬೆಳೆಸಿದ ಬಸವಣ್ಣನವರ ಗುರು ಪರಂಪರೆಗೆ ಸೇರಿದ ಮಠಗಳು ಆಶನ, ವಸತಿ, ಶಿಕ್ಷಣ ಇತ್ಯಾದಿಗಳ ಮೂಲಕ ಲಿಂಗಾಯಿತರನ್ನು ಮಾತ್ರವಲ್ಲದೆ ಇಡೀ ಶೂದ್ರ ಸಮುದಾಯದ ಎಚ್ಚರಕ್ಕೆ ಕಾರಣವಾದ ಮಹತ್ತರವಾದ ಸಾಧನೆ ಮಾಡಿದ್ದರೂ, ಸಂದಿಗ್ಧ ಸಮಯಗಳಲ್ಲಿ ಸಮಾಜದ ವೈಚಾರಿಕ ಎಚ್ಚರವನ್ನು ಕಾಯುವಲ್ಲಿ ಯಾಕೆ ಹಿಂಜರಿಯುತ್ತಿವೆ ಎಂಬುದರ ಬಗ್ಗೆ ನನಗೆ ಆಶ್ಚರ್ಯವಾಗುತ್ತಿದೆ.

***ಪ್ರಶ್ನೆ:*** *ನೀವು ಹೇಳುವುದು ಸ್ವಲ್ಪಮಟ್ಟಿಗೆ ನಿಜವಿರಬಹುದು. ಆದರೆ ಈ ಮಠಗಳು ಕೂಡಾ ಜಾತಿಯ ವಿಷಬೀಜಗಳನ್ನು ಬಿತ್ತುವ, ಶಿಕ್ಷಣವನ್ನು ವ್ಯಾಪಾರಕ್ಕೆ ತಿರುಗಿಸಿದ, ರಾಜಕೀಯ ಲಾಭಕ್ಕೆ ಸದಾ ಹಂಬಲಿಸುತ್ತ, ರಾಜಕೀಯವನ್ನು ಪರೋಕ್ಷವಾಗಿ ನಿಯಂತ್ರಿಸುತ್ತಿರುವ ಕೇಂದ್ರಗಳಾಗಿ ಮಾರ್ಪಟ್ಟಿವೆಯಲ್ಲವೇ?*

**ಜಿಎಸ್ಎಸ್:** ನೀವು ವಾಸ್ತವ ಸ್ಥಿತಿಯನ್ನೇ ಹೇಳುತ್ತಿದ್ದೀರಿ. ರಾಜಕಾರಣಿಗಳ ಮತ್ತು ಮಠಾಧಿಪತಿಗಳ ಅನ್ಯೋನ್ಯ ಹೊಂದಿಕೆಯನ್ನು ನೋಡಿದರೆ ರಾಜಕಾರಣ ಮತ್ತು ಧರ್ಮ ಒಂದೇ ನಾಣ್ಯದ ಎರಡು ಮುಖಗಳನ್ನು ತೋರಿಸುತ್ತಿವೆ.

***ಪ್ರಶ್ನೆ:*** *ಈ ಮಠಗಳು ಮತ್ತೊಂದು ಅಪಾಯಕಾರಿ ಕೇಂದ್ರಗಳೂ ಆಗಿವೆ: ಹಿಂದೂ ಮತ್ತು ಆ ಮೂಲಕ ಧಾರ್ಮಿಕ ಮೂಲಭೂತವಾದದ ಸಿದ್ಧಾಂತವನ್ನು ಬೆಂಬಲಿಸುತ್ತ, ಅಲ್ಪಸಂಖ್ಯಾತರ ಮನದಲ್ಲಿ ಸದಾ ಭೀತಿಯನ್ನು ಬಿತ್ತುತ್ತಿವೆಯಲ್ಲವೇ?*

**ಜಿಎಸ್ಎಸ್:** ಇದು ಎಲ್ಲ ಮಠಗಳಿಗೂ ಅನ್ವಯಿಸುವ ಮಾತು ಎಂದು ನನಗೆ ತೋರುವುದಿಲ್ಲ.

***ಪ್ರಶ್ನೆ:*** *ಪ್ರತಿಯೊಂದು ಜಾತಿಯೂ ಮಠಗಳ ನಿರ್ಮಾಣದತ್ತ ಮುಂದಾಗುತ್ತ, ಸ್ವಾಮಿಯೊಬ್ಬನನ್ನು ಪ್ರತಿಷ್ಠಾಪಿಸುತ್ತಿರುವುದು ಏನನ್ನು ಸೂಚಿಸುತ್ತಿವೆ?*

**ಜಿಎಸ್ಎಸ್:** ಇವತ್ತು ಮಠಗಳೆಲ್ಲ ಹುಟ್ಟಿರುವುದು ಜಾತಿಯ ಓಟ್ ಬ್ಯಾಂಕ್ ಆಧಾರದ ಮೇಲೆ. ಪ್ರತಿಯೊಂದು ಜಾತಿಗೂ ಒಂದು ಮಠ ಸ್ಥಾಪನೆಯಾಗಿರುವುದು

ಧಾರ್ಮಿಕ ಉದ್ದೇಶಕ್ಕಿಂತ ರಾಜಕೀಯ ಉದ್ದೇಶಕ್ಕೇ ಎಂಬುದು ರಹಸ್ಯದ ಸಂಗತಿಯೇನಲ್ಲ. ನಮ್ಮ ದೇಶದಲ್ಲಿ ಮಠ, ಸ್ವಾಮಿ, ಧರ್ಮ ಎಂದರೆ ಇವತ್ತಿಗೂ ಗಾಢವಾದ ನಂಬಿಕೆ ಇದೆ. ಹೀಗಾಗಿ ಮಠ ಮತ್ತು ಸ್ವಾಮಿಯನ್ನು ಮುಂದೆ ಮಾಡಿಕೊಂಡು ಜಾತಿಯ ಜನರನ್ನು ಸಂಘಟಿಸುವುದು ಸುಲಭ. ಇದಕ್ಕಾಗಿಯೇ ಪ್ರತಿಯೊಂದು ಜಾತಿಯೂ ಪ್ರಯತ್ನಿಸುತ್ತಿವೆ.

***ಪ್ರಶ್ನೆ:*** *ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ರಂಗದಲ್ಲಿ ಇನ್ನೂ ತಮ್ಮ ಪಾಲನ್ನು ಪಡೆಯದ ಕೋಮುಗಳು ಜನಗಣತಿಯ ಸಂದರ್ಭದಲ್ಲಿ ತಮ್ಮ ಕೋಮನ್ನು ನಮೂದಿಸಬೇಕಾದ ಕ್ರಮ ಸರಿ. ಆದರೆ ಈ ಎಲ್ಲ ರಂಗದಲ್ಲೂ ತಮ್ಮ ಪ್ರಾಬಲ್ಯವನ್ನು ಮೆರೆದು ಉಳಿದವರಿಗೆ ಅನ್ಯಾಯಮಾಡಿರುವ ದೊಡ್ಡ ಜಾತಿಗಳು ಜನಗಣತಿಯ ಸಂದರ್ಭದಲ್ಲಿ ತಮ್ಮ ಜಾತಿಗಳ ಹೆಸರು ದಾಖಲಿಸುವುದು ಸಣ್ಣಪುಟ್ಟ ಜಾತಿಗಳಿಗೆ ಬಗೆಯುವ ದ್ರೋಹವಲ್ಲವೇ?*

**ಜಿಎಸ್‌ಎಸ್:** ಅಷ್ಟೇ ಅಲ್ಲ, ಭಾರತೀಯ ಸಂವಿಧಾನವನ್ನು ಒಪ್ಪಿಕೊಳ್ಳುವ ಜಾತ್ಯತೀತ ಮನೋಭಾವಕ್ಕೂ ಇದು ದ್ರೋಹವೇ. ಸಂಖ್ಯಾಬಲದ ಮೂಲಕವೇ ಶ್ರೇಷ್ಠತೆಯನ್ನು ಸಾಬೀತುಪಡಿಸುವ ಅಹಂಕಾರ ಇದು: ಇದನ್ನು ಬಿಟ್ಟರೆ ತಾವೊಂದು ಮಹತ್ವದ ಸಿದ್ಧಾಂತಕ್ಕೆ ಅಥವಾ ಒಂದು ಶ್ರೇಷ್ಠ ಪರಂಪರೆಗೆ ಸೇರಿದವರು ಎಂಬುದನ್ನು ಸೂಚಿಸುವುದಕ್ಕಲ್ಲ. ಸಣ್ಣಪುಟ್ಟ ಜಾತಿಗಳಿಗೆ ಸಿಕ್ಕುವ ಸೌಲಭ್ಯದ ಜೊತೆಗೆ ಸ್ಪರ್ಧಿಸುವ ರಾಜಕೀಯ ಹುನ್ನಾರವೂ ಇಲ್ಲಿ ಕಾಣಿಸುತ್ತದೆ.

(ಸಂದರ್ಶನ: ಜಿ.ಪಿ. ಬಸವರಾಜು)

## ಪತ್ರಗಳು

೧

ಪ್ರಿಯ ಶ್ರೀ ಶಿವರುದ್ರಪ್ಪ

ನೀವು ಪ್ರೀತಿಯಿಂದ ಕಳಿಸಿದ 'ನನ್ನ-ನಿನ್ನ ನಡುವೆ' ತಲುಪಿತು. ತಲುಪಿದೊಡನೆಯೆ ಓದಲಾರಂಭಿಸಿದೆ. ಮೇಲಿಂದ ಮೇಲೆ ಓದಿ ಮುಗಿಸಿದರೂ ಇನ್ನೊಮ್ಮೆ ಓದುವುದಿದೆ.

'ನನ್ನ-ನಿನ್ನ ನಡುವೆ'ಯಲ್ಲಿ ನಿಮ್ಮ ಈವರೆಗಿನ ಪ್ರಾತಿನಿಧಿಕ ಕವನಗಳನ್ನು ಸಂಗ್ರಹಿಸಿದ್ದೀರೆಂದು ನಂಬುತ್ತೇನೆ. ಕಾವ್ಯಾಭ್ಯಾಸಿಗಳಿಗೆ ತುಂಬ ಉಪಯೋಗವಾಗುವಂಥದು. ಅಲ್ಲದೆ, ಸರಕಾರ ಕಡಿಮೆ ಬೆಲೆಗೆ ಇದನ್ನು ಒದಗಿಸಿರುವುದರಿಂದ ಹಲವಾರು ಜನರ ಕೈಗೆ ಪುಸ್ತಕ ಸೇರುವುದೆಂಬ ನಂಬಿಕೆ.

ಕಾಲದಿಂದ ಕಾಲಕ್ಕೆ ಕಾವ್ಯದ ಮರುಮಾಪನ ನಡೆಯಬೇಕೆಂದು ಈಲಿಯಟ್ ಹೇಳುತ್ತಾನೆ. ಈ ದೃಷ್ಟಿಯಿಂದ ಕನ್ನಡದಲ್ಲೀಗ ಇಂಥದೊಂದು ಮರುಮಾಪನ ನಡೆಯ ಬೇಕಾಗಿದೆ. ಹಾಗೇನಾದರೂ ನಾನು ಮಾಡುವುದು ಸಾಧ್ಯವಿರುತ್ತಿದ್ದರೆ ನಿಮ್ಮ ಕಾವ್ಯವನ್ನು ಮೊದಲ ಪಂಕ್ತಿಯಲ್ಲಿಡುತ್ತಿದ್ದೆ. (ಇದು ಹೊಗಳಿಕೆಯ ಮಾತಲ್ಲ; ನಾನು ಹೊಗಳಿಕೆ ಮಾತು ಆಡದವನು). ಮುಖ್ಯವಾಗಿ ಉತ್ತಮ ಕಾವ್ಯದ 2 ಗುಣಗಳನ್ನು ನಾನಿಲ್ಲಿ ಗುರುತಿಸುತ್ತೇನೆ. ಮೊದಲನೆಯದಾಗಿ ಕಾವ್ಯಶೈಲಿಯಲ್ಲಿ ನೀವು ತೋರುವ ಸಂಯಮ. ನವೋದಯ, ನವ್ಯ, ಬಂಡಾಯ ಎಲ್ಲರ ಕಾಲದಲ್ಲೂ ಬರೆಯುತ್ತ ಬಂದ ನೀವು ಯಾವುದೇ ಪಂಥದ ಅತಿರೇಕಗಳನ್ನೂ ಒಳಗೊಂಡಿಲ್ಲವೆಂಬುದು ಗಮನಾರ್ಹ. ಎರಡನೆಯದಾಗಿ, ಕಾವ್ಯಗುಣದಲ್ಲಿ ಕಂಡುಬರುವ ಔದಾರ್ಯ, ಸಹನಶೀಲತೆ, ವಿಶಾಲತೆ ಮುಂತಾದುವು ಕ್ರೋಧ, ಹಿಂಸೆ, ಕ್ರೌರ್ಯ ನಿಮ್ಮ ಧರ್ಮಕ್ಕೆ ಹೊರತು.

ಇನ್ನು ಬಿಡಿ ಬಿಡಿಯಾದ ಕವನಗಳ ಕುರಿತು ಹೇಳುವುದಾದರೆ ಅನೇಕ ಕವನಗಳು ನನಗೆ ತುಂಬ ಇಷ್ಟವಾಗಿವೆ. ಇಡಿಯ ಸಂಕಲನದಲ್ಲಿ ನನ್ನ ಮನಸ್ಸನ್ನು ತೀವ್ರವಾಗಿ ತುಂಬಿಕೊಂಡ ಕವನ "ನನ್ನ ಮರಿಮಗನ ಮಗನಿಗೆ". ಕನ್ನಡದ ಈಚಿನ ಕವಿತೆಗಳಲ್ಲಿ ನಾನು ಬಹುವಾಗಿ ಮೆಚ್ಚುವ ಹತ್ತು ಕವಿತೆಗಳ್ನು ಆರಿಸಿಕೊಡಿ ಎಂದು ನನ್ನನ್ನು ಯಾರಾದರೂ ಕೇಳಿದರೆ ಇದನ್ನು ಸೇರಿಸುತ್ತೇನೆ. "ಯಾರ ನೆನಪನು ನಿನಗೆ ಬಿಟ್ಟು ಹೋಗಲಿ"—ಎಂಬ ಆಶಯ ಅದ್ಭುತವಾದ್ದು.

ಸಾಹಿತ್ಯ ವಿಮರ್ಶಕನಲ್ಲದ; ಈಚಿನ ಜೂಲೂಸುಗಳನ್ನು ಸೇರದ; ಕರ್ನಾಟಕದಿಂದ ದೂರವಿರುವ ನಾನು ಇಷ್ಟೇ ಆಶಿಸುವುದು—ಸದ್ಗುಣಗಳಿರುವ ವಿಮರ್ಶಕರು ಯಾರಾದೂ ಒಟ್ಟು ಕನ್ನಡದ ಸಂದರ್ಭದಲ್ಲಿ ನಿಮ್ಮ ಕೊಡುಗೆಯನ್ನು ಗುರುತಿಸಲಿ—ಎಂದು.

ಇನ್ನೇನು ಬರೆಯಲಿ?

21 ರಂದು ಹೈದರಾಬಾದಿಗೆ ನಾನು, ಹೆಂಡತಿ ಮಕ್ಕಳು ಮರಳಿದೆವು. ಬಂದ ನಂತರ ಸಾಹಿತ್ಯ ಕುರಿತಾದ ಮಾತೇನಾದರೂ ಬರೆದಿದ್ದರೆ ಅದು ಈ ಪತ್ರ ಮಾತ್ರ!

"ತೀ.ನಂ.ಶ್ರೀ" ಮತ್ತು "ಕುವೆಂಪು ಅವರಿಗೆ" ಕವನಗಳು ಕೂಡ ನನಗೆ ಅತ್ಯಂತ ಇಷ್ಟವಾದುವು.

ನಿಮ್ಮ

31.5.83 ಕೆ. ವಿ. ತಿರುಮಲೇಶ್

ಹೈದರಾಬಾದು

೨

ಪ್ರಿಯ ಡಾ. ಶಿವರುದ್ರಪ್ಪನವರಿಗೆ—

ನಿಮ್ಮ 16.2.84ರ ಪತ್ರಕ್ಕೆ ಈವರೆಗೆ ಉತ್ತರ ಬರೆಯಲಾಗಲಿಲ್ಲ—ಯಾಕೆಂದರೆ ಕಾರ್ಯಬಾಹುಳ್ಯದ ಮೂಲಕ ನಿಮ್ಮ 'ಕಾವ್ಯಾರ್ಥ ಚಿಂತನ'ವನ್ನು ಓದಲು ಸಮಯವೇ ದೊರೆಯಲಿಲ್ಲ. ಮಾರ್ಚ್ 15 ರಿಂದ 31ರವರೆಗೆ ಡಾ. ಕೆ. ಕೃಷ್ಣಮೂರ್ತಿಯವರು ನಮ್ಮಲ್ಲಿಗೆ visiting professor ಅಂತ ಬಂದು Indian poetics ದ ಮೇಲೆ ನಮ್ಮ M.Phil ವಿದ್ಯಾರ್ಥಿಗಳಿಗೆ ಲೆಕ್ಚರ್ಸ್ ಕೊಟ್ಟರು. ಅವರಿಲ್ಲಿದ್ದಾಗ ಅವರು 'ಕಾವ್ಯರ್ಥ ಚಿಂತನ' ಓದಿ ಒಂದು ವಿಮರ್ಶೆ ಬರೆದರು. ಈಗಲೇ ನಾನೂ ನಿಮ್ಮ ಪುಸ್ತಕವನ್ನು —ಅದರಲ್ಲಿಯ ಕೆಲವು ಪ್ರಕರಣಗಳನ್ನು—ಓದಿದೆ.... ನಾನೂ ಈ ತಕ್ಷಣ Indian poetics ಕಲಿಸುತ್ತಿರುವೆ ನಾದ್ದರಿಂದ ನನಗೆ ನಿಮ್ಮ ಕೆಲವು ಪ್ರಕರಣಗಳು ಅತ್ಯಂತ ಉಪಯುಕ್ತವಾಗುತ್ತಿವೆ. ನಿಮ್ಮ 'ರೀತಿಯ ಸ್ವರೂಪ-ಶೈಲಿಯ ಸಮಸ್ಯೆ' ಅತ್ಯಂತ ಪಾಂಡಿತ್ಯಪ್ರಮಾಣವಾದ ಹಾಗೂ ಚಿಂತನಶೀಲವಾದ ಪ್ರಕರಣ ನನಗೆ ಅತ್ಯಂತ ಹಿಡಿಸಿತು. ಅದೇ ರೀತಿ 'ಉಪಮೆ-ರೂಪಕ-ಪ್ರತಿಮೆ' ಪ್ರಕರಣವೂ ಅತ್ಯಂತ ಸುಂದರವಾಗಿದೆ. ಕನ್ನಡದಲ್ಲಿ ಈ ತರಹದ ಪುಸ್ತಕ ಬಂದಿರುವುದೇ ನಮ್ಮ ಸೌಭಾಗ್ಯ. ಭಾರತೀಯ ಕಾವ್ಯಮೀಮಾಂಸೆಯನ್ನೂ ಪಾಶ್ಚಿಮಾತ್ಯ ಕಾವ್ಯಮೀಮಾಂಸೆಯನ್ನೂ ಅರಗಿಸಿಕೊಂಡು ಸ್ವತಂತ್ರವಾಗಿ ವಿಚಾರಮಾಡುವ ಶಕ್ತಿ ನಿಮ್ಮನ್ನು ಬಿಟ್ಟರೆ ನಮ್ಮಲ್ಲಿ ಯಾರಿಗಿದೆ ಹೇಳಿ? Comparative criticism ನಲ್ಲಿ ನೀವು ಸಾಧಿಸಿದ ಈ ಯಶಸ್ಸಿಗಾಗಿ ಹಾರ್ದಿಕ ಅಭಿನಂದನೆಗಳು.

ಈ ಪುಸ್ತಕದ ಬಗ್ಗೆ ಒಂದು ದೀರ್ಘವಾದ ಲೇಖನ ಬರೆಯಬೇಕು ನಿಜ. ಆದರೆ

ಸಮಯದ ಅಭಾವ. ಈ ಸೂಟಿಯಲ್ಲಿ ನೋಡೋಣ-ಏನಾದರೂ ಚೂರು ಸಮಯ ಸಿಗುತ್ತದೋ ಎಂದು.

ಕೃಷ್ಣಮೂರ್ತಿಯವರ ಲೇಖನವನ್ನು ಕಣ್ಣಾಡಿಸಿ ನೋಡಿದ್ದೇನೆ. ಅದೆಲ್ಲಿ ಪ್ರಕಟವಾಗಿದೆ?

ಸದ್ಯ ಏನು ನಡೆಸಿದ್ದೀರಿ ?

ಇಂತಿ ಸ. ವಂದನೆಗಳು

11.4.84 ನಿಮ್ಮ

ಕೊಲ್ಹಾಪುರ ಶಾಂತಿನಾಥ ದೇಸಾಯಿ

೨

ಪ್ರಿಯ ಶ್ರೀ ಶಿವರುದ್ರಪ್ಪ,

ವಂದನೆಗಳು ನಾನು ಬರೆಯುವುದೇ ಇಲ್ಲ ಇನ್ನು ಮುಂದೆ ಎಂದು ನಿರೀಕ್ಷಿಸಿದಿರ? 'ಕಾವ್ಯಾರ್ಥ ಚಿಂತನ' ಓದಿದೆ. ಓದಿ ಹಲವು ಹತ್ತು ವಿಷಯಗಳನ್ನು ತಿಳಿದುಕೊಂಡೆ. ಮುಖ್ಯವಾಗಿ, ನಿಮ್ಮ ಪ್ರಬಂಧಕ್ರಮ ನನಗೆ ಹಿಡಿಸಿತು. ಓದುಗರ ಮನಸ್ಸಿನಲ್ಲಿ ಬರಬಹುದಾದ ಪ್ರಶ್ನೆಗಳನ್ನು ಊಹಿಸಿಕೊಂಡು ಅದಕ್ಕೆ ಉತ್ತರಿಸಲು ಯತ್ನಿಸಿರುವಿರಿ. "ಭಾರತೀಯ ಕಾವ್ಯಮೀಮಾಂಸೆಯಲ್ಲಿ ಸಾಹಿತ್ಯ ವಿಮರ್ಶೆ" ಎಂಬ ಕೊನೆಯ ಪರಿಚ್ಛೇದ ಬಹುಶಃ ಈತನಕ ಯಾರೂ ಎತ್ತದ ಸಮಸ್ಯೆಯನ್ನು ಎತ್ತಿಕೊಂಡು ಉಪಯುಕ್ತವಾದ ವಿವರಣೆ ನೀಡುತ್ತವೆ. ಭಾರತೀಯ ಕಾವ್ಯಮೀಮಾಂಸೆಯಲ್ಲಿ ಚರ್ಚೆ ನಡೆದಿರುವುದು ಬಿಡಿ ಬಿಡಿ ಪದ್ಯಗಳನ್ನೆತ್ತಿಕೊಂಡೇ ಎಂದು ನೀವು ಹೇಳಿದುದು ಬಹಳ ಅರ್ಥಪೂರ್ಣವಾದ ಮಾತು. ಅದೇ ರೀತಿ 'ಕವಿಶಿಕ್ಷೆ'ಯ ಕುರಿತು ಹೇಳಿರುವುದು ಕೂಡ. ನಮ್ಮ ಸಂಗೀತ ಸಂಪ್ರದಾಯವನ್ನೆ ತೆಗೆದುಕೊಳ್ಳಿರಿ. ಇಲ್ಲಿ ಸಂಗೀತಗಾರನ ಕೆಲಸ ಮೊದಲಿನವರು ಹಾಕಿಕೊಟ್ಟ ಸಂಗೀತಬಂಧವನ್ನು ಸರಿಯಾಗಿ ನುಡಿಸುವುದು—ಆದರೆ ಅವನು ತನ್ನ ಸ್ವಂತಿಕೆಯನ್ನು ತೋರಿಸುವುದಕ್ಕೆ ಆಸ್ಪದವಿಲ್ಲದೆ ಇಲ್ಲ; ಇದು ಅವನು ಕೈಕಾರ್ಯ ಮಾಡಬಹುದಾದ 'ಮನೋಧರ್ಮ'ದಲ್ಲಿ. ನಮ್ಮ ಪೂರ್ವದ ಸಾಹಿತ್ಯ ಕೂಡ ಈ classical ಅಥವಾ ಮಾರ್ಗ ಸಂಪ್ರದಾಯಕ್ಕೇ ಸೇರಿದ್ದು, ಇಲ್ಲೂ 'ಮನೋಧರ್ಮ'ಕ್ಕೆ ಎಡೆಯಿತ್ತು. ಉದಾಹರಣೆಗೆ ಲಕ್ಷ್ಮೀಶ ಮತ್ತು ರಾಘವಾಂಕ ಇಬ್ಬರೂ ಒಂದೇ ವೃತ್ತವನ್ನು ಬಳಸಿದರೂ ಪ್ರತ್ಯೇಕವಾಗಿ ವಿಜೃಂಭಿಸುತ್ತಾರೆ. ಸಾಹಿತ್ಯ ವಿಮರ್ಶೆ ಈ 'ಮನೋಧರ್ಮ'ದ ವಿಮರ್ಶೆ. ನಮ್ಮ ಹಿಂದಿನ ಸಾಹಿತ್ಯದಲ್ಲಿ ಇಂಥ ವಿಮರ್ಶೆ ಕಂಡುಬರುವುದಿಲ್ಲ. ನಿಮ್ಮ "ಕವಿಸಮಯ" ಇನ್ನೊಂದು ಒಳ್ಳೆಯ ವಿಶ್ಲೇಷಣೆ—ಹೀಗೆ ಎತ್ತಿ ಹೆಸರಿಸುತ್ತ ಹೋಗಬಹುದು. ಎಲ್ಲ ಸಾಹಿತ್ಯ ವಿದ್ಯಾರ್ಥಿಗಳಿಗೂ ಉಪಯುಕ್ತವಾಗುವ ಪುಸ್ತಕವೊಂದನ್ನು ನೀವು ತಂದಿದ್ದೀರಿ ಎಂಬುದರಲ್ಲಿ ಸಂಶಯವಿಲ್ಲ.

ಖಾಸಗಿ ಪತ್ರದಲ್ಲಿ ಏನನ್ನು ಬರೆದರೂ 'ಔಪಚಾರಿಕ'ವಾಗಿಬಿಡುತ್ತದೆ! ಇರಲಿ. ನಿಮ್ಮ ಉತ್ತರಭಾರತದ ಪ್ರವಾಸವೇನಾಯಿತು? ಅದರ ಫಲವಾಗಿ ಪದ್ಯಗಳೇನಾದರೂ ಬಂದುವೆ? ನನ್ನ ಅನುಭವದಂತೆ, ಹೊಸ ಜನರ ಭೇಟಿ, ಹೊಸ ಪ್ರದೇಶಗಳಲ್ಲಿ ಪ್ರಯಾಣ—ಕವಿತೆಗೆ ಸ್ಫೂರ್ತಿಯನ್ನು ಕೊಡುತ್ತದೆ. ನಾನೂ ಸದ್ಯ ಅಂಥ ಕೆಲವು ಕವಿತೆಗಳನ್ನು ಬರೆದದ್ದರಿಂದ ಬಹುಶಃ ಹಾಗೆ ಹೇಳುತ್ತಿದ್ದೇನೇನೊ.

ಒಂದು ಕವನಸಂಕಲನ ತರಲು ಯೋಚನೆಯಿದೆ. ಪ್ರಕಾಶಕರು ಸಿಗಬೇಕು.

ಶ್ರೀ ನಾಡಿಗರು ಹೇಗಿದ್ದಾರೆ? ಅವರು ನನಗೆ ನಿಮ್ಮ ಯುನಿವರ್ಸಿಟಿಯ ಇಂಗ್ಲಿಷ್ ರೀಡರ್ ಹುದ್ದೆಗೆ ಅರ್ಜಿ ಹಾಕಲು ಒತ್ತಾಯಿಸಿದರು. ಹಾಕಿದ್ದೇನೆ. ಸಂದರ್ಶನಕ್ಕೆ ಕರೆಬಂದರೆ ನಿಮ್ಮೆಲ್ಲರ ಭೇಟಿಯ ಅವಕಾಶ ದೊರಕೀತು. ಕೆಲಸ ಸಿಗುತ್ತದೆಯೆಂಬ ಆಸೆಯೇನೂ ನನಗಿಲ್ಲ.

ನಿಮ್ಮ ವಿಭಾಗದ ಪತ್ರಿಕೆಗೆ ಕವಿತೆಯೊಂದನ್ನು ಕಳಿಸಿಕೊಡಲೆ?

ವಂದನೆಗಳೊಂದಿಗೆ,

ನಿಮ್ಮ

5.9.84 ಕೆ. ವಿ. ತಿರುಮಲೇಶ್

ಹೈದರಾಬಾದು

೪

ಪ್ರಿಯ ಡಾ. ಜಿ.ಎಸ್. ಶಿವರುದ್ರಪ್ಪ,

ಅಧ್ಯಕ್ಷರು ಕರ್ನಾಟಕ ಸಾಹಿತ್ಯ ಅಕಾಡೆಮಿ ಅವರಿಗೆ, ವಂದನೆಗಳು

ದಿನಾಂಕ 17.7.90ರಂದು ನಡೆವ ಅಕಾಡೆಮಿಯ ಸರ್ವಸದಸ್ಯರ ಸೂಚನಾಪತ್ರ ಮತ್ತು ನಿಮ್ಮ 26.6.90ರ ಪತ್ರ-ಎರಡೂ ತಲುಪಿವೆ; ಕೊನೆಯ ಈ ಸಭೆಗೆ ತಪ್ಪದೆ ಬರುವೆ.

ಈ ಮೂರು ವರ್ಷಗಳಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಮಾಡಿದ ಕೆಲಸಗಳು ಅತ್ಯಂತ ಮಹತ್ವಪೂರ್ಣವಾದುವು. ಹಿಂದಿನ 22 ವರ್ಷಗಳಲ್ಲಿ ಆಗದ ಕಾರ್ಯಗಳು ನೀವು ಅಧ್ಯಕ್ಷರಾದ ಅವಧಿಯಲ್ಲಿ ಆದುವು. ಅಕಾಡೆಮಿ ಸ್ಥಾಪನೆಗೊಂಡಂದಿನಿಂದ ಅದರ ಒಂದಿಲ್ಲೊಂದು ಬಗೆಯ ಸಂಪರ್ಕ ನನಗಿದೆ; ಅಲ್ಲದೆ ಹಿಂದೆ ಸದಸ್ಯನೂ ಆಗಿದ್ದೆ. ನೀವು ಅನೇಕ ಐತಿಹಾಸಿಕ ದಾಖಲೆ ನಿರ್ಮಿಸಿದಿರಿ. ಗ್ರಂಥಗಳ ಪ್ರಕಟಣೆ, 'ಅನಿಕೇತನ' ತ್ರೈಮಾಸಿಕ —ಇವು ಅಪೂರ್ವ. "ಭಾರತೀಯ ಸಾಹಿತ್ಯ ಸಮೀಕ್ಷೆ" ಪ್ರಕಟನೆಯಂತೂ ನಿಮ್ಮ ರಚನಾತ್ಮಕ ಮತ್ತು ಕರ್ತೃತ್ವಶಕ್ತಿಗೆ ಸುಂದರ ತುರಾಯಿ.

ನಿಮ್ಮಂತೆ ಯಾರೂ ಪ್ರತಿನಿತ್ಯ ಅಕಾಡೆಮಿ ಕಚೇರಿಗೆ ಬಂದು ಕಾರ್ಯನಿರ್ವಹಿಸಿದವರಿಲ್ಲ; ಮನೆಯ ಕೆಲಸಕ್ಕಿಂತಲೂ ಹೆಚ್ಚಿನದೆಂದು ಭಾವಿಸಿ ನಿಮ್ಮ ಬಹು ಅಮೂಲ್ಯ ವೇಳೆಯನ್ನು ಅಕಾಡೆಮಿಗಾಗಿ ವ್ಯಯಿಸಿದಿರಿ; ಇಂಥದಕ್ಕೇ ರಾಷ್ಟ್ರನಿರ್ಮಾಣ, ಜನಾಂಗ ನಿರ್ಮಾಣ, ಪರಂಪರೆ ನಿರ್ಮಾಣ ಎನ್ನುತ್ತಾರೆಂದು ನನ್ನ ಭಾವನೆ. ನಿಮ್ಮ ಸೇವೆಯಿಂದ ಅಕಾಡೆಮಿ ಹೊಸಜೀವ, ಹೊಸ ಆತ್ಮವನ್ನು ಪಡೆಯಿತು. ಪ್ರೀತಿ, ಸೌಹಾರ್ದತೆ, ಅಂತಃಕರಣಗಳಿಂದ ಕೂಡಿದ ನಿಮ್ಮ ಅಧ್ಯಕ್ಷತೆಯ ಅವಧಿಯಲ್ಲಿ ಅಕಾಡೆಮಿ ಒಂದು ಕುಟುಂಬದಂತೆ ಕೂಡಿ ಕಾರ್ಯನಿರ್ವಹಿಸಿದ್ದು ಮುಂಬರುವವರಿಗೆ ದಾರಿದೀಪ, ಆ ಕುಟುಂಬದ ಸದಸ್ಯನಾಗಿದ್ದ ನಾನು ತುಂಬ ಸಂತೃಪ್ತಿ ಪಡೆದಿದ್ದೇನೆ. ಈ ಕೆಲವು ಮಾತುಗಳು ಹೇಳದಿರಲು ನನಗೆ ಸಾಧ್ಯವಿಲ್ಲ. ಇವು ಹೊಗಳಿಕೆಯಲ್ಲ; ಸತ್ಯವನ್ನು ಸತ್ಯವೆಂದು ನುಡಿದರೆ ಹೊಗಳಿಕೆಯಾಗುವುದಿಲ್ಲ.

17.2.1990 ನಿಮ್ಮ
ರಾಯಚೂರು **ಶಾಂತರಸ**

❀

ಪ್ರೀತಿಯ ಶಿವರುದ್ರಪ್ಪ,

ನಿಮ್ಮ ಕಾಗದ ತಲುಪಿತು. ವಂದನೆಗಳು

ನಾನು 17.7.90ರ ಸಭೆಗೆ ಬರುತ್ತೇನೆ. ನೀವು ಅಧ್ಯಕ್ಷರಾಗಿರುವ ಈ ಅವಧಿಯಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ತನ್ನ ಇತಿಹಾಸದಲ್ಲೇ ಅತ್ಯುತ್ಕೃಷ್ಟವಾದ ರೀತಿಯಲ್ಲಿ ಕಾರ್ಯ ನಿರ್ವಹಣೆ ಮಾಡಿದೆ ಎಂಬುದು ನನ್ನ ಪ್ರಾಮಾಣಿಕವಾದ ಅಭಿಪ್ರಾಯ. ನಾನೂ ಅಕಾಡೆಮಿಯ ಸದಸ್ಯನಾಗಿರುವುದರಿಂದ ಅಕಾಡೆಮಿಯ ಗೌರವವನ್ನು ಎತ್ತಿ ಹಿಡಿಯುವುದಕ್ಕಾಗಿ ನೀವು ಪಟ್ಟ ಶ್ರಮವನ್ನು ಕಣ್ಣಾರೆ ಕಂಡಿದ್ದೇನೆ.

ಅಕಾಡೆಮಿಯ ಅಧ್ಯಕ್ಷರು ಮೊದಲ ವರ್ಗದ ಸಾಹಿತಿಯಾಗಿದ್ದು ಸಾಹಿತ್ಯಕ ಕಾರಣಗಳಿಗಾಗಿ ಜನರ ಗೌರವವನ್ನು ಸಂಪಾದಿಸಿರಬೇಕು. ತನ್ನ ಸಹೋದ್ಯೋಗಿಗಳು ತನ್ನನ್ನು ಗೌರವಿಸುವಂತೆ ನಡೆದುಕೊಳ್ಳಬೇಕು. ತಾನು ಅಧ್ಯಕ್ಷನಾಗಿರುವ ಅಕಾಡೆಮಿಯ ಗೌರವವನ್ನು ರಕ್ಷಿಸುವುದು ತನ್ನ ಕರ್ತವ್ಯ ಎಂದು ಹಗಲಿರುಳೂ ದುಡಿಯಬೇಕು. ಸಾಹಿತ್ಯದ ಸರ್ವತೋಮುಖವಾದ ಏಳಿಗೆಯನ್ನು ಗಮನದಲ್ಲಿಟ್ಟುಕೊಂಡು ಅದಕ್ಕಾಗಿ ಯೋಜನೆಗಳನ್ನು ರೂಪಿಸಬೇಕು, ಅವುಗಳನ್ನು ಕಾರ್ಯಗತಗೊಳಿಸಬೇಕು. ನಾವು ವೆಚ್ಚ ಮಾಡುತ್ತಿರುವ ಹಣ ಜನತೆಯದು, ಅದರಲ್ಲಿ ಒಂದು ಕಾಸೂ ಪೋಲಾಗಬಾರದು ಎಂಬ ಎಚ್ಚರ ಸದಾ ಇರಬೇಕು. ಹಣದ ಆಮಿಷದಿಂದ ಮೈಲಿಗಟ್ಟಲೆ ದೂರ ಇರಬೇಕು. ಜಾತೀಯತೆ ಹತ್ತಿರ ಸುಳಿಯದಂತೆ ನೋಡಿಕೊಳ್ಳಬೇಕು. ತಮ್ಮ ಬಳಗೆ ಒಂದಲ್ಲ ಒಂದು ಕಾರಣಕ್ಕಾಗಿ ಬರುವ ಜನರನ್ನು—ಅವರಿಗೆ ನೆರವಾಗಲೂ ಸಾಧ್ಯವಾಗದಿದ್ದರೂ—ವಿಶ್ವಾಸದಿಂದ ಕಾಣಬೇಕು.

ಆಶ್ಚರ್ಯದ ಸಂಗತಿಯೆಂದರೆ ಮೇಲಿನ ಎಲ್ಲ ಅಗತ್ಯಗಳೂ ನಿಮಗೆ ಸಹಜವಾಗಿ ಮೈಗೂಡಿವೆ. ಹೀಗಾಗಿ ನಿಮ್ಮ ಅಧ್ಯಕ್ಷತೆಯ ಅವಧಿಯಲ್ಲಿ ಅಕಾಡೆಮಿಯ ತುಂಬ ಒಳ್ಳೆಯ ಹೆಸರು ಪಡೆಯಿತು, ದೀರ್ಘಕಾಲ ಕನ್ನಡಿಗರಿಗೆ ಉಪಯುಕ್ತವಾಗುವಂತಹ ಕೃತಿಗಳನ್ನು ಪ್ರಕಟಿಸಿತು. ಇಂಥ ಅಕಾಡೆಮಿಯ ಸದಸ್ಯರಾಗಿರುವುದು ಹೆಮ್ಮೆಯ ವಿಷಯ ಎಂಬ ಧನ್ಯತೆಯ ಭಾವ ನನ್ನಂತಹವರಿಗೆ ದೊರೆಯಿತು.

ನಿಮಗೆ ಹೃತ್ಪೂರ್ವಕ ಅಭಿನಂದನೆಗಳು

ಪ್ರೀತಿಯಿಂದ

ನಿಮ್ಮ

7.7.90 ಪ್ರಭುಶಂಕರ

ಮೈಸೂರು

೬

ಪ್ರಿಯ ಶಿವರುದ್ರಪ್ಪನವರಿಗೆ,

'ಚಕ್ರಗತಿ' ಪ್ರತಿ ತಲುಪಿದೆ. ಕೃತಜ್ಞತೆಗಳು.

ಪುಸ್ತಕ ತುಂಬ ಚೆನ್ನಾಗಿ ಬಂದಿದೆ—ಯಾವ ಆಡಂಬರವೂ ಇಲ್ಲದೆ, ಸರಳ ಸುಂದರವಾಗಿ.

ಎಲ್ಲ ಕವಿತೆಗಳನ್ನೂ ಮತ್ತೊಮ್ಮೆ ಓದಿದೆ. ಎಂಥ ಭಾವವನ್ನೂ ಪ್ರಶಾಂತ ಚಿತ್ತಕ್ಕೊಯ್ಯುವ ಪಕ್ವತೆ ಈ ಕವಿತೆಗಳ ಲಯದಲ್ಲಿ, ನಡಿಗೆಯಲ್ಲಿ, ಶೈಲಿಯಲ್ಲಿ ಮೈದೋರಿದೆ. 'ಪ್ರಶ್ನೆ-ಉತ್ತರ', 'ನನ್ನ ನೆನಪಿನಾಳದಲ್ಲಿ', 'ಕೆಲವು ಪ್ರಶ್ನೆಗಳು', 'ಕಂಪಿನ ಕರೆ', 'ದಾವಣಗೆರೆಯ ನೆನಪುಗಳು', 'ಕೇಂದ್ರಬಿಂದು', 'ಪ್ರತೀಕ್ಷೆ', 'ಅಸ್ತಮಾನ'—ಮೊದಲಾದ ಉತ್ತಮ ರಚನೆಗಳಲ್ಲಿರುವ ವೈವಿಧ್ಯ, ಭಾವಸೂಕ್ಷ್ಮತೆ ಉನ್ನತಮಟ್ಟದ್ದಾಗಿ ನನಗೆ ತೋರಿತು.

ಅನುವಾದಗಳಂತೂ ತುಂಬ ಸೊಗಸಾಗಿವೆ. ಮೂಲದ ವಸ್ತು, ರೀತಿ ಮತ್ತು ಶೈಲಿಗೆ ಎಲ್ಲಿಯೂ ಭಂಗ ಬಂದಿಲ್ಲ—ಇಷ್ಟೇ ಅಲ್ಲ, ಕೆಲವೆಡೆ ಮೂಲಕ್ಕಿಂತಲೂ ಹೆಚ್ಚಿನ ಸೊಗಸು ಇಲ್ಲಿ ಕಾಣಿಸಿಕೊಂಡಿದೆ. ಬಹುಶಃ ಆಯ್ಕೆಯೂ ಇದಕ್ಕೆ ಕಾರಣವಾಗಿರಬೇಕು.

ಸಂಗ್ರಹದ ಹೆಸರೂ ಅರ್ಥಪೂರ್ಣವಾಗಿದೆ; ಅಭಿನಂದನೆಗಳು.

'ಮಾಸ್ಕೊದಲ್ಲಿ ಇಪ್ಪತ್ತೆರಡು ದಿನ' ಇಲ್ಲಿ ಬಿ.ಎ. IIIಕ್ಕೆ ಪಠ್ಯವಾಗಿದೆಯೆಂದು ಅಧಿಕೃತವಾಗಿ ತಿಳಿದು ಬಂದಿದೆ. ನಿಮಗೂ ವಿಶ್ವವಿದ್ಯಾಲಯದವರಿಂದ ಕಾಗದ ಬಂದಿರಬಹುದು.

ಮತ್ತೆಲ್ಲ ಕ್ಷೇಮ

ವಂದನೆಗಳೊಂದಿಗೆ,

27.8.92 ನಿಮ್ಮ

ಧಾರವಾಡ ಚನ್ನವೀರ ಕಣವಿ

೭

ಪ್ರಿಯ ಡಾ. ಶಿವರುದ್ರಪ್ಪನವರಿಗೆ

ವಂದನೆಗಳು, ನೀವು ವಿಶ್ವಾಸದಿಂದ ಕಳಿಸಿದ 'ಚಕ್ರಗತಿ'ಯ ಪ್ರತಿ ತಲುಪಿದೆ. ಈ ಸಂಗ್ರಹದ ಕೆಲ ಕವಿತೆಗಳನ್ನು ಪತ್ರಿಕೆಗಳಲ್ಲಿ ಈ ಮೊದಲೇ ಓದಿದ್ದೆ. ಆದರೆ ಬಹಳಷ್ಟು ನನಗೆ ಹೊಸವು.

ಕವಿಗೆ ಅತ್ಯಂತ ಮುಖ್ಯವಾದ ಆಶ್ಚರ್ಯಭಾವವನ್ನು (sense of wonder) ನೀವು ಉಳಿಸಿಕೊಂಡು ಬಂದಿರುವುದು ಸಂತೋಷವನ್ನುಂಟುಮಾಡುತ್ತದೆ. ಇಂದರಿಂದಾಗಿ ಕವಿತೆಗಳಲ್ಲಿ ನಾವೀನ್ಯತೆ ಹುಟ್ಟಿಕೊಂಡಿದೆ. ಇದೂ ಅಲ್ಲದೆ ಸದ್ಯದ ವಿಷಮ ಪರಿಸ್ಥಿತಿಯಲ್ಲಿಯೂ ನೀವು ಜೀವನದಲ್ಲಿನ ಶ್ರದ್ಧೆಯನ್ನು ಕಳೆದುಕೊಂಡಿಲ್ಲ. ಇದೂ ಅಷ್ಟೇ ಮುಖ್ಯವಾದದ್ದು. ಚಕ್ರಗತಿ ನಿಮ್ಮ ಉಳಿದ ಸಂಗ್ರಹಗಳ ಹಾಗೆ ಓದುಗರನ್ನು ಆಕರ್ಷಿಸುವುದೆನ್ನುವುದರಲ್ಲಿ ಸಂಶಯವಿಲ್ಲ. ಅಭಿನಂದನೆಗಳು.

ಸ್ನೇಹದಿಂದ

19.8.1992 ಜಿ. ಎಸ್. ಆಮೂರ

೮

ಪ್ರಿಯರಾದ ಶ್ರೀ ಜಿಎಸ್‌ಎಸ್ ಅವರಿಗೆ

ನೀವು ಪ್ರೀತಿಯಿಂದ ಕೊಟ್ಟ 'ಚಕ್ರಗತಿ'ಯನ್ನು ಆಸಕ್ತಿ-ಕುತೂಹಲಗಳಿಂದ ಓದಿದೆ. ತುಂಬ ಭಿನ್ನ ರೀತಿಯಲ್ಲಿರುವ ಈ ಸಂಕಲನ ನಿಮ್ಮ ಉಳಿದೆಲ್ಲ ಸಂಗ್ರಹಗಳಿಗಿಂತ ಹೊಸ ದಾರಿಯಲ್ಲಿ ಇರಬಹುದೇ ಎನಿಸಿತು. ಅದೇನೇ ಇರಲಿ, ಮನಸ್ಸಿಗೆ ಮುದ ಕೊಡುವ ಅನೇಕ ಪದ್ಯಗಳು ಈ ಸಂಗ್ರಹದಲ್ಲಿವೆ. ಇಲ್ಲಿರುವ ಅನುವಾದಗಳು ಕೂಡಾ ಚೆನ್ನಾಗಿದ್ದು, ಮನಸ್ಸಿಗೆ ಸಂತೋಷ ಉಂಟುಮಾಡುತ್ತದೆ.

ಗದ್ಯಕ್ಕೆ ತುಂಬ ಹತ್ತಿರವಾಗಿ, ಪದ್ಯದ ಸೂಕ್ಷ್ಮತೆ ಉಳಿಸಿಕೊಂಡು ಬೆಳೆಯುವ, ಮನಸ್ಸನ್ನು ಆವರಿಸುವ ಇಲ್ಲಿನ ಪದ್ಯಗಳು ವಿಸ್ಮಯ ಹುಟ್ಟಿಸುವಷ್ಟು ಚೆನ್ನಾಗಿವೆ. ಕಾವ್ಯ ನಿರ್ಮಿತಿಯ ನಿಮ್ಮ ಕೌಶಲ, ಭಾಷೆಯ ಸೂಕ್ತ ಬಳಕೆ, ಅತ್ಯಂತ ಮನೋಜ್ಞವಾಗಿ ಸಂಗತಿಗಳನ್ನು ಹೇಳುವ ಕ್ರಮ—ಇವೆಲ್ಲ ನಿಮ್ಮ ಪದ್ಯಗಳನ್ನು ಓದುಗನ ಹೃದಯಕ್ಕೆ ಕೊಂಡೊಯ್ಯುತ್ತವೆ.

ನಾನಾಗಲೇ ಓದಿ ಮೆಚ್ಚಿಕೊಂಡಿದ್ದ ಅನೇಕ ಪದ್ಯಗಳು ಈ ಸಂಗ್ರಹದಲ್ಲಿವೆ. ಎಲ್ಲವನ್ನೂ ಒಟ್ಟಿಗೆ ಓದುವುದೊಂದು ಹೊಸ ಬಗೆಯ ಅನುಭವ.

'ಸಂಭವ', 'ಚಕ್ರಗತಿ', 'ಯುಗಾದಿಗಳ ಹಾದಿಯಲ್ಲಿ', 'ಕಪ್ಪೆ ಮತ್ತು ಆನೆ', 'ಒಂದು

ಸಂಗತಿ', 'ಷಹಜಾದೆಗೆ', 'ಕಂಪಿನ ಕರೆ', 'ನನ್ನ ದಾವಣಗೆರೆಯ ನೆನಪುಗಳು', 'ಗಾಳ', 'ಷಿಕಾರಿ', 'ಅಸ್ತಮಾನ'—ನನಗೆ ತುಂಬ ಪ್ರಿಯವಾದ ಪದ್ಯಗಳು.

ಅನುವಾದಗಳಲ್ಲಿ 'ಯುದ್ಧಗಳ ನಡುವೆ', 'ರಾತ್ರಿಯಲ್ಲಿ ಕೊಳಲು', 'ಕಿರುಚು', 'ಜನರನ್ನು ಸುಲಿಯುವುದು', 'ಬಿದಿರು ಮೆಳೆಗಳ ತೋಪು', 'ಅವನ-ಅವಳು' ಮತ್ತು 'ಜೈಲಿನ ದಿನಚರಿಯಿಂದ' ಹೃದಯಕ್ಕೆ ಹತ್ತಿರವಾಗುತ್ತವೆ.

'ಬಿ.ಎಂ.ಶ್ರೀ' ತುಂಬ ಚೆನ್ನಾಗಿದೆ. ಎರಡನೆಯ ಚುಟುಕ ವಚನಗಳಿಗೆ ತುಂಬ ಹತ್ತಿರವಾಗಿದ್ದು ಮೋಹಕವಾಗಿದೆ. ಇಂಥ ಪದ್ಯಗಳನ್ನು ಚುಟುಕ ಎಂದು ಕರೆಯಲು ಮನಸ್ಸು ಬರುವುದಿಲ್ಲ.

ಏಕಲವ್ಯನನ್ನು ಕುರಿತ ಮೂರೂ ಪದ್ಯಗಳು ಚೆನ್ನಾಗಿದ್ದರೂ, ಮೊದಲನೆಯ 'ಚಕ್ರಗತಿ'ಗೆ ಹೆಚ್ಚು ಆಯಾಮಗಳಿವೆ ಎಂದೆನ್ನಿಸಿತು. 'ಗಾಳ' ಮತ್ತು 'ಷಿಕಾರಿ' ನಿಮ್ಮ ಕಾವ್ಯ ಕೌಶಲವನ್ನು ಬಿಂಬಿಸುತ್ತವೆ. 'ಕಪ್ಪೆ ಮತ್ತು ಆನೆ' ಹಾಗೂ 'ಒಂದು ಸಂಗತಿ' ಇದೇ ಮಾದರಿಯ ಚೆಲುವಾದ ಪದ್ಯಗಳು.

'ಸಂಭವ' ಪದ್ಯದ ಕೊನೆಯ ನಾಲ್ಕು ಸಾಲುಗಳು ಅಗತ್ಯವಿರಲಿಲ್ಲ ಎನಿಸಿತು. ಹಾಗೆಯೇ 'ಯುಗಾದಿಗಳ ಹಾದಿಯಲ್ಲಿ' ಕವಿತೆಯ ಕೊನೆಯ ಸ್ಟಾಂಜಾದ ಇದ್ದ ಮರವನ್ನೆಲ್ಲ ಯಾರೋ ಕಡಿದಿದ್ದಾರೆ ಎಂಬ ಸಾಲು ಬೇಕಿರಲಿಲ್ಲ. ನಂತರ—ಬಿಸಿಲು, ಬಿಸಿಲೋ ಬಿಸಿಲು, ಸುಡುವ ಬಿಸಿಲು—ಸಾಲಿನ ಬದಲು ಸುಡು ಬಿಸಿಲು—ಸಾಕಿತ್ತು. ('ಷಹಜಾದೆ'ಗೆ ಕವಿತೆಯಲ್ಲಿ* ಇರಬೇಕಾದದ್ದು ಷಾರಯಾರ್ ಪದದ ಮೇಲೆ)

ನಾನು ಮೆಚ್ಚುವ ಪದ್ಯಗಳಲ್ಲಿ ಹೀಗೆ ಸಣ್ಣಪುಟ್ಟ ದೋಷಗಳು (ಹಾಗೆ ನನಗೆ ತೋರಿರುವ) ಕಾಣಸಿಗುತ್ತವೆ. ಇವೆಲ್ಲ ಅಷ್ಟೊಂದು ಮುಖ್ಯವಲ್ಲ. ಒಟ್ಟಾರೆ ಈ ಸಂಗ್ರಹದ ಪದ್ಯಗಳು ಉಂಟುಮಾಡುವ ಪರಿಣಾಮ, ಕಟ್ಟಿಕೊಡುವ ಅನುಭವ ನನ್ನನ್ನು ಹಿಡಿದು ನಿಲ್ಲಿಸುತ್ತದೆ. ಇದಕ್ಕಾಗಿ ಅಭಿನಂದನೆಗಳು.

ನಿಮ್ಮ 'ಪ್ರೀತಿ ಇಲ್ಲದ ಮೇಲೆ' ಸಂಗ್ರಹ ನನಗೆ ಸಂತೋಷ ಉಂಟುಮಾಡಿತ್ತು. ಅದರ ನಂತರ 'ತೀರ್ಥವಾಣಿ' ಪ್ರಕಟವಾಯಿತೇ? ಅವನ್ನು ಓದಿರುವ ನೆನಪಾಗುತ್ತಿಲ್ಲ. ಅದು ಯಾವಾಗ ಬಂತು?

ಹನ್ನೆರಡನೆಯ ಸಂಕಲನದಲ್ಲೂ ನೀವು ಬಹಳ ಮುಖ್ಯ ಕವಿಯಾಗಿ ಬೆಳೆಯುತ್ತಿರುವುದು ಹೆಮ್ಮೆಯ ವಿಚಾರ. ನಿಮ್ಮ ಮುಂದಿನ ಕವಿತಾ ಸಂಗ್ರಹವನ್ನು ಇನ್ನಷ್ಟು ಆಸಕ್ತಿಯಿಂದ ಎದುರು ನೋಡುತ್ತೇವೆ.

ಇಂತು

ನಿಮ್ಮ

7.9.92

ಜಿ. ಪಿ. ಬಸವರಾಜು

ಮೈಸೂರು

೬

ಪ್ರಿಯ ಡಾ. ಶಿವರುದ್ರಪ್ಪ,

ನಮಸ್ಕಾರ.

ಮೊದಲು ನಾನು ನಿಮ್ಮ ಕ್ಷಮೆ ಬೇಡಬೇಕು. 'ಚಕ್ರಗತಿ' ಪ್ರತಿ ತಲುಪಿ 10-15 ದಿನಗಳಾದವು. ಸಂಗ್ರಹವನ್ನು ಓದಿದೆ. ಆದರೆ ನನ್ನ ಹಲ್ಲಿನ ತೊಂದರೆಯಿಂದ ಮಾತನಾಡಲೂ ಬರೆಯಲೂ ಆಗಲಿಲ್ಲ. ಮೂರುನಾಲ್ಕು ಹಲ್ಲುಗಳು ಬಹಳ ಕಷ್ಟಕೊಟ್ಟವು. ಅವನ್ನು ತೆಗೆಸಿದ್ದಾಯಿತು. ಈಗ ಉತ್ತಮ.

ಸಂಗ್ರಹ ಓದಿ ತುಂಬಾ ಸಂತೋಷವಾಯಿತು. Academic criticism ಬಿಟ್ಟು ಬರೆಯುತ್ತೇನೆ. ಭಾಷೆಯನ್ನು ನೀವು ರೂಪಿಸಿಕೊಂಡಿರುವ ರೀತಿ ಅಚ್ಚರಿಯನ್ನುಂಟುಮಾಡುತ್ತದೆ. ಅತ್ಯಂತ ಸರಳವಾಗಿ ಉಳಿದೂ ಆಳವಾದ ಚಿಂತನೆಯನ್ನು, ಸೂಕ್ಷ್ಮ ಭಾವವನ್ನ ಹಿಡಿಯಬಲ್ಲ ಭಾಷೆ. ಸೂಕ್ಷ್ಮವಾದ ಭಾವಕ್ಕೆ ಅಗತ್ಯವಾದ ಮೆಲುದನಿಯಲ್ಲಿ ನಿಮ್ಮ ಕಾವ್ಯ ಬದುಕಿನ ಅನ್ಯಾಯ, ಶೋಷಣೆಗಳನ್ನು ಕಡೆಗಣಿಸದೆ ಹೃದಯವಂತಿಕೆಯನ್ನ, ಕನಸುಗಾರಿಕೆಯನ್ನ, ಉಳಿಸಿಕೊಂಡಿದೆ. 'ನಿನಗೆಲ್ಲಿದೆ ಹೊರದಾರಿ?', 'ಕತ್ತಲು ಬೆಳಕು', 'ಕೆಲವು ಪ್ರಶ್ನೆಗಳು' (ಈ ಎರಡರ ನಡುವೆ, ಸಾಲುಗಳು ಅದ್ಭುತವಾಗಿವೆ) ಇಂತಹ ಕವನಗಳು ನನ್ನನ್ನು ಗಾಢವಾಗಿ ಮುಟ್ಟಿದವು. ಏಕಲವ್ಯನ ವಿಧಿ, ಕೃಷ್ಣನ ಮಹಾಪ್ರಯಾಣ ಇಂಥ ಪ್ರಸಂಗಗಳಲ್ಲಿ ನೀವು ತುಂಬಿರುವ ಅರ್ಥವಂತಿಕೆ, ಕವಿ-ಕವನ-ಅನುಭವ ಬಾಂಧವ್ಯದ ಸೂಕ್ಷ್ಮ ವಿಶ್ಲೇಷಣೆ. ದೇಹದೊಳಗಿನ ಚೇತನ-ಹೊರಜಗತ್ತಿನ ಬಾಂಧವ್ಯಗಳ ಮನನವು ಸುಸಂಸ್ಕೃತ, ಸೂಕ್ಷ್ಮ ಸಂವೇದನೆಯ ಮನಸ್ಸಿನ ಕೊಡುಗೆಗಳು. ತುಂಬಾ ಒಳ್ಳೆಯ ಸಂಗ್ರಹವನ್ನು ಹೊರತಂದಿದ್ದೀರಿ. ಅಭಿನಂದನೆಗಳು.

ನೀವು ಆರೋಗ್ಯ ಎಂದು ನಂಬಿದ್ದೇನೆ. ನನಗೆ ಕನ್ನಡ ವಿಶ್ವವಿದ್ಯಾನಿಲಯದ ಸಂದರ್ಶಕ ಪ್ರಾಧ್ಯಾಪಕನಾಗಬೇಕೆಂದು ಡಾ. ಕಂಬಾರರು ವಿಶ್ವಾಸದ ಒತ್ತಾಯ ತಂದರು. ನಿನ್ನೆ ತಾನೆ ಒಪ್ಪಿಗೆಕೊಟ್ಟೆ. ವರ್ಷದಲ್ಲಿ ಕೆಲವು ತಿಂಗಳು ಪಂಪಾಪತಿಯ ಸನ್ನಿಧಿ.

ನಮಸ್ಕಾರ

ವಿಶ್ವಾಸದ

ಎಲ್. ಎಸ್. ಶೇಷಗಿರಿರಾವ್

17.10.92

ಬೆಂಗಳೂರು

೧೦

ಪ್ರೀತಿಯ ಗುರುಗಳಾದ ಡಾ. ಜಿ.ಎಸ್. ಶಿವರುದ್ರಪ್ಪನವರಿಗೆ,

ಗೌರವಪೂರ್ವಕ ನಮಸ್ಕಾರಗಳು. ನನಗೆ ಔಪಚಾರಿಕವಾದ ಪತ್ರಗಳನ್ನು ಬರೆಯುವುದು ಸುಲಭ. ಆದರೆ ಭಾವನೆಗಳನ್ನು ತೊಡಗಿಸಿಕೊಂಡು ನಡೆಸುವ ಬರವಣಿಗೆ ನಿರ್ದಿಷ್ಟ ಕ್ಷಣಗಳನ್ನು ಬಯಸುತ್ತದೆ. ಇದು ಅಂಥದೊಂದು ಮುಹೂರ್ತ.

ತಾನು ಬೆಳೆಸಿದ ಬಳ್ಳಿಯಲ್ಲಿ ಹೂ ಬಿಟ್ಟಾಗ ತನಗೇ ಪುತ್ರೋತ್ಸವವಾದಷ್ಟು ಸಂತೋಷಪಡುತ್ತಿದ್ದ ಶಕುಂತಲೆಯ ಪ್ರಸ್ತಾಪ, ನಿಮಗೂ ಪರಿಚಿತವೇ. ನನ್ನ ಬಗ್ಗೆ ಹಾಗೆಯೇ ನನ್ನಂತಹ ಹಲವು ಶಿಷ್ಯರ ಬಗ್ಗೆ ನೀವು ತೋರಿಸುತ್ತಾ ಬಂದಿರುವ ವಾತ್ಸಲ್ಯವನ್ನು ನೆನಪಿಗೆ ತಂದುಕೊಂಡಾಗ, ಆ ಕ್ಷಣವೇ ನನ್ನ ಸ್ಮರಣೆಯಲ್ಲಿ ಸುಳಿದಿದ್ದು ಈ ಶಕುಂತಲೆಯೇ. ಸರಿಸುಮಾರು ಕಾಲುಶತಮಾನದಿಂದ ನೀವು ನನಗೆ ಪ್ರೇರಕರಾಗಿ, ಆದರ್ಶರಾಗಿ, gentlemanly ಎನ್ನಬಹುದಾದ ನಡವಳಿಕೆಯ ಮಾದರಿಯಾಗಿದ್ದೀರಿ. ಹಾಗೆಂದು ನಿಮ್ಮ ಕಾರ್ಯತತ್ಪರತೆ ಮತ್ತು ಅಚ್ಚುಕಟ್ಟುಗಳನ್ನು ನಾನೆಂದೂ ಅಳವಡಿಸಿಕೊಂಡಿಲ್ಲ. ಅದು ನನ್ನ ದೌರ್ಬಲ್ಯ.

ನನಗೆ ಪಿಎಚ್.ಡಿ ಬಂದುದನ್ನು ಆ ಕೂಡಲೇ ತಂತಿಯ ಮೂಲಕ ತಿಳಿಸುವುದರಲ್ಲಿ ಹಾಗೆಯೇ ಘೋಷಣಾಪತ್ರದ ಬೆರಳಚ್ಚು ಪ್ರತಿಯನ್ನು ಕಳಿಸುವುದರಲ್ಲಿ ನೀವು ತೋರಿಸಿದ ಕಾಳಜಿಯನ್ನು ನನ್ನ ಆತ್ಮೀಯ ಬಂಧು-ಮಿತ್ರರೇ ತೋರಿಸಲಿಲ್ಲ. ಒಂದು ವ್ಯಕ್ತಿತ್ವದ ಘನತೆ ತಿಳಿದುಬರುವುದು ಇಂಥ ಸಣ್ಣಪುಟ್ಟ ವಿವರಗಳಲ್ಲಿಯೇ ಎಂದು ತಿಳಿದಿದ್ದೇನೆ.

ಹಾಗೆಯೇ ನಾನು ಈ ಕೆಲಸ ಮುಗಿಸಲು ಹತ್ತು ವರ್ಷಗಳನ್ನು ತೆಗೆದುಕೊಂಡೆ. ಬರೆದುದು ಮಾತ್ರ ಕೊನೆಯ ಒಂದು ವರ್ಷವೇ. ಈ ಸುದೀರ್ಘ ಅವಧಿಯಲ್ಲಿ ನಿಮಗೆ ಕಾರಣಗಳನ್ನು ಕೊಡದೆ, ನೆಪಗಳನ್ನು ಕೊಡದೆ ಕಾಲಕಳೆದಾಗ ಒಮ್ಮೆಯೂ ನೀವು ನನ್ನ ಮನಸ್ಸಿಗೆ ನೋವುಂಟು ಮಾಡುವಂತೆ ಮಾತನಾಡಲಿಲ್ಲ; ಒತ್ತಾಯ ತರಲಿಲ್ಲ. ನಿಮಗೆ ಹಾಗೆನಿಸಿದ್ದರೆ ನನ್ನ Registration ಅನ್ನೇ ರದ್ದು ಮಾಡಬಹುದಾಗಿತ್ತು. ಬದಲಾಗಿ ನೀವು ನನ್ನ ಮೇಲೆ ಅಪಾರವಾದ ತಾಳ್ಮೆ ಮತ್ತು ಭರವಸೆಗಳನ್ನು ತೋರಿಸಿದಿರಿ.

ಆಮೇಲೆ ಬರೆಯತೊಡಗಿದಾಗಲೂ ಅಷ್ಟೇ. ಪ್ರತಿಯೊಂದು ಅಧ್ಯಾಯವನ್ನೂ ವಾರಗಟ್ಟಲೆ ಇಟ್ಟುಕೊಂಡು ಕಾಯಿಸಬಹುದಾಗಿತ್ತು. ನೀವಾದರೂ ತಕ್ಷಣ ತಕ್ಷಣವೇ ಹಿಂದಿರುಗಿಸಿದಿರಿ. ದಾವಣಗೆರೆಯ ಸಾಹಿತ್ಯ ಸಮ್ಮೇಳನಕ್ಕೆ ಹೊರಡುವುದಕ್ಕೆ ಹಿಂದಿನ ದಿನವೂ ನನ್ನ ಬರವಣಿಗೆಯನ್ನು ಪರಿಶೀಲನೆ ಮಾಡಿ ಕೊಟ್ಟುಹೋದುದನ್ನು ನಾನು ಹೇಗೆ ತಾನೇ ಮರೆಯಲಿ?

ಕೊನೆಗೆ viva voce ಕೂಡ ನೀವು ವಿಶೇಷ ಆಸಕ್ತಿ ವಹಿಸುವುದರಿಂದಲೇ ಬೇಗ ನಡೆಯಿತು.

ಇದೆಲ್ಲದರ ಬಗ್ಗೆ ಮಾತುಗಳ ಮೂಲಕ ಕೃತಜ್ಞತೆಯನ್ನು ಹೇಳಲು ಸಾಧ್ಯವಿಲ್ಲ. ನನ್ನದು ಕೃತಕ ವಿನಯವೂ ಅಲ್ಲವೆಂದು ಹೇಳುವ ಅಗತ್ಯವಿಲ್ಲವೆಂದು ನನಗೆ ಗೊತ್ತು. ನಿಮ್ಮ ಮಾತುಗಳಲ್ಲಿಯೇ ಹೇಳುವುದಾದರೆ, 'ಒಲವಿಗೆ ಪ್ರತಿ ಒಲವಲ್ಲದೆ ಬೇರೇನಿದೆ ಕೊಡುಗೆ?'

ನೀವು ಕಳಿಸಿದ ಲೇಖನಗಳ ಹಸ್ತಪ್ರತಿ ತಲುಪಿದೆ. ಕೆಲದಿನಗಳಲ್ಲಿಯೇ blurb ಬರೆದು ಕಳಿಸುತ್ತೇನೆ.

ನಿಮ್ಮ ಮನೆಯವರಿಗೆಲ್ಲ ನನ್ನ ನಮಸ್ಕಾರ ಮತ್ತು ಕೃತಜ್ಞತೆಗಳನ್ನು ತಿಳಿಸಿ. ಪ್ರೀತಿಯೊಂದಿಗೆ,

ನಿಮ್ಮ

18.1.1994 ರಾಘವೇಂದ್ರ

ಹಂಪಿ

೧೧

*ಹಿರಿಯ ಮಿತ್ರರಾದ ಡಾ. ಜಿ. ಎಸ್. ಶಿವರುದ್ರಪ್ಪನವರಲ್ಲಿ,*

ನಮಸ್ಕಾರಗಳು.

ನೀವು ವಿಶ್ವಾಸದಿಂದ 'ವ್ಯಕ್ತಮಧ್ಯ' ಸಂಗ್ರಹವನ್ನು ನನಗೆ ಕೊಟ್ಟು 25 ದಿನಗಳು ಕಳೆದವು. ಪುಟ್ಟ ಗಾತ್ರದ ದೊಡ್ಡ ಸಾಧನೆಯ ಈ ಸಂಗ್ರಹವನ್ನು ನಾನು ಎಂದೋ ಓದಿ ಮುಗಿಸಬೇಕಾಗಿತ್ತು. ಆದರೆ ಮಧ್ಯೆ ಕೆಲವು ದಿನ ಕಣ್ಣಿಗೆ ವಿಶ್ರಾಂತಿ ಕೊಡುವ ಅಗತ್ಯ ಬಂದದ್ದು, ನಾನು ಸಪ್ನ ಬುಕ್ ಹೌಸಿಗಾಗಿ ನಿರ್ವಹಿಸುತ್ತಿರುವ ಯೋಜನೆಯಲ್ಲಿ ಅನಿರೀಕ್ಷಿತ ಒತ್ತಡ ಬಂದದ್ದು ಅಡ್ಡಿ ಬಂದವು.

ಕವನಗಳನ್ನು ಓದುವ ಮುನ್ನ ಸುಮ್ಮನೆ ಪುಟ ತಿರುತಿರುವಿ ಹಾಕುತ್ತಿದ್ದಾಗ ಎರಡು ಪಂಕ್ತಿಗಳು ಕಣ್ಣಿಗೆ ಬಿದ್ದವು:

**ಗುಡುಗು ಮಂಜಿನೊಳು ಮನೆಗೆ ಬಂದಿರಿ**
**ಹೊಸ್ತಿಲಲಿ ಹೂವಾದಿರಿ**

ಎಂದೂ ಕಾವ್ಯದಲ್ಲಿ magicನ ಅಂಶ ಉಂಟೇ ಉಂಟು- ಒಳ್ಳೆಯ ಕಾವ್ಯದಲ್ಲಿ. ಅಂಥ magic ಇಲ್ಲಿದೆ ಎಂದು ಕಣ್ಣು, ಮನಸ್ಸು ಎರಡೂ ಅಲ್ಲಿಯೇ ಎರಡು ಕ್ಷಣ ನಿಂಥವು. ಇಡೀ ಕವನವನ್ನು ಓದಿದೆ. It is a poem which lifts one above oneself, a poem which gives an insight into the potentiality of man, arousing reverence for mankind. How vividly and fascinatingly this short poem embodies the richness and the glory of the creative spirit!

ಕವನಗಳನ್ನು ಓದುವಾಗ ನಿಮ್ಮ ಈಚೆಗಿನ ಕಾವ್ಯದ ವೈಶಿಷ್ಯದ ಅನುಭವ ಮತ್ತೆ ಮತ್ತೆ ಆಯಿತು—ಕಾಲ ದೇಶಗಳಲ್ಲಿ ಒಂದು ಬಿಂದುವಿನಲ್ಲಿ ನಿಂತು ಬದುಕನ್ನು ವೀಕ್ಷಿಸುವಾಗ ಇದ್ದಕ್ಕಿದ್ದಂತೆ ಅನಂತತೆ ಅಥವಾ ವಿಶಾಲ ಬದುಕು ತೆರೆದುಕೊಳ್ಳುವ ಅನುಭವ. ಇದರಿಂದಾಗಿ ಕವನದ ಅನುಭವವು ಎರಡು ಮಟ್ಟಗಳಲ್ಲಿ ಮೌಲ್ಯಮಾಪನವಾಗುವುದು. ಕವನದ ಹುಟ್ಟನ್ನು ಕುರಿತು ಕನ್ನಡ ಕವಿಗಳು ಹಲವು ಕವನಗಳನ್ನು ಬರೆದಿದ್ದಾರೆ. ನಿಮ್ಮ 'ಕವಿತೆ ಕಂಡದ್ದು ಹೀಗೆ' ಕವನದ ಸೃಷ್ಟಿಯನ್ನು ಒಳಗೊಂಡು ಅದರಾಚೆ ಸೃಜನಶೀಲತೆಯನ್ನೆ ಮುಟ್ಟಿದೆ. ಮೊದಲಿನಿಂದ ನಿಮ್ಮ ಕಾವ್ಯದಲ್ಲಿ ಕತ್ತಲು-ಬೆಳಕುಗಳು ಪ್ರಮುಖ ಪಾತ್ರ ವಹಿಸಿವೆ; ಈ ಸಂಕಲನದಲ್ಲಿಯೂ ಅವು ಬದುಕಿನ ಮೂಲ ಸ್ವರೂಪದ ಅನುಭವ ಮಾಡಿಕೊಡುತ್ತಿವೆ. ಬುದ್ಧಿಗೆ ಪ್ರಾಮುಖ್ಯತೆ ಕೊಟ್ಟು ಸಂಪ್ರದಾಯವನ್ನು ಶೋಧಿಸುವ ನಿಮ್ಮ ಕಾವ್ಯದಲ್ಲಿ ಬುದ್ಧಿಶಕ್ತಿಯಾಚೆಯಿಂದ, ಸಾರ್ಥಕ ಬದುಕಿನ ದೃಷ್ಟಿಯಿಂದ ಎಲ್ಲದರ ಬೆಲೆಕಟ್ಟುವ ಪ್ರಕ್ರಿಯೆ ನಡೆದಿದೆ. ತಂತ್ರದ ದೃಷ್ಟಿಯಿಂದ ನಿಮ್ಮ ಪ್ರಯೋಗ ಕುತೂಹಲಕಾರಿ. 'ಸ್ಟಾಂಜ'ದ ಆಕಾರವನ್ನು ಉಳಿಸಿಕೊಂಡೂ ಇಡೀ ಕವನ ಒಂದು continuous ಸ್ಪಂದನವಾಗುವುದನ್ನು ಹಲವು ಕವನಗಳಲ್ಲಿ ಕಂಡೆ. ವಿಮರ್ಶಕರ ತಲೆಗಳಲ್ಲಿ ಕಾಡುವ, ಪ್ರಬುದ್ಧರ ಮನಸ್ಸಿನಲ್ಲಿ ಬೆಳೆಯುವ, ಅನೇಕಾರ್ಥಗಳ ಹೊಳೆಯಿಸುತ್ತ ರೆಕ್ಕೆ ಬಿಚ್ಚಿ ಹಾರಾಡುವ ಕವನಗಳನ್ನು ಕೊಟ್ಟಿರುವ ನಿಮ್ಮ ಸೃಜನಶೀಲತೆ ಎಂದೂ ಬತ್ತದಿರಲಿ ಎಂದು ಹಾರೈಸುತ್ತೇನೆ. 'ಕವಿತೆ ಕಂಡದ್ದು ಹೀಗೆ', 'ಸುಜಾತ', 'ನವೋದಯ', 'ಪೂರ್ಣಾನದಿಯ ಮೊಸಳೆ' (ಇದು ಬೆಳೆಯುವ ರೀತಿಯಲ್ಲಿ ಬೆರಗು ಗೊಳಿಸುವಂಥಹುದು) 'ಮುಖಾಮುಖಿ'—ಇಂಥ ಕವನಗಳನ್ನು ಓದಿದ್ದೇ ಒಂದು ಸಂತೋಷ. ಪ್ರತಿಯೊಬ್ಬ ಶ್ರೇಷ್ಠ ಕವಿಯ ಒಳ್ಳೆಯ ಕವನಗಳು 'ಕಾವ್ಯ ಎಂದರೆ ಏನು?' ಎಂದು ಮತ್ತೆ ಚಿಂತಿಸುವುದಕ್ಕೆ ಆಹ್ವಾನ ಎನ್ನುವ ನನ್ನ ಅನುಭವದ ಸ್ಥಿರೀಕರಣವಾಗಿದೆ.

ನಿಮಗೆ ಎಲ್ಲ ಶುಭ ಕೋರುತ್ತ,

ನಿಮ್ಮ ವಿಶ್ವಾಸದ

1.2.2000
**ಎಲ್. ಎಸ್. ಶೇಷಗಿರಿ ರಾವ್**

ಬೆಂಗಳೂರು

೧೨

ಪ್ರಿಯರಾದ ಶ್ರೀ ಜಿ.ಎಸ್.ಎಸ್. ಅವರಿಗೆ,

ನೀವು ಪ್ರೀತಿಯಿಂದ ಕೊಟ್ಟ 'ವ್ಯಕ್ತಮಧ್ಯ'ವನ್ನು ಓದಿದೆ.

ಈಗಾಗಲೇ ನಾನು ಓದಿ, ಮೆಚ್ಚಿಕೊಂಡಿರುವ ಹಲವು ಕವಿತೆಗಳಿರುವ ಈ ಸಂಕಲನ ಈಗಲೂ ಖುಷಿಯಿಂದಲೇ ಓದಿಸಿಕೊಂಡಿತು. ಅತ್ಯಂತ ಹಗುರವಾದ ರೀತಿಯಲ್ಲಿಯೇ

ನಿಮ್ಮ ಕಾವ್ಯ ಹುಟ್ಟುತ್ತದೆ. ಆದರೆ ಅದು ಬೆಳೆದು ಮನಸ್ಸಿನಾಳಕ್ಕೆ ಇಳಿಯುವ ಪರಿ, ನಂತರ ಅದು ಬೀರುವ ಪರಿಣಾಮ ಗಾಢವಾದದ್ದು. ಇಲ್ಲಿನ ಬಹುಪಾಲು ಕವಿತೆಗಳಿಗೆ ಈ ಗುಣ ಇದೆ.

ಇಲ್ಲಿ ಮಾಡಿರುವ 'ಚತುಷ್ಪಾದ'ಗಳ ಪ್ರಯೋಗ ಕೂಡಾ ಆಕರ್ಷಕವಾಗಿದೆ. ಬಳ್ಳಿ ದಾಂಗುಡಿಯಿಟ್ಟಂತೆ ಈ ಚತುಷ್ಪಾದಗಳು ಮುಂದೆ ಮುಂದೆ ಸಾಗುವ ರೀತಿ ಬೆರಗು ಹುಟ್ಟಿಸುತ್ತದೆ. ಕಾವ್ಯದ ಬಗೆಗೆ ನೀವು ತೋರುತ್ತ ಬಂದಿರುವ ಗಾಢ ಶ್ರದ್ಧೆ ಮತ್ತು ಪ್ರಗತಿ ಹಾಗೆಯೇ ಪ್ರಯೋಗಗಳು ಯುವ ಜನರಿಗೆ ಮಾದರಿಯಾಗಬಲ್ಲವು.

ನಿಮ್ಮ

21.1.2000 **ಜಿ. ಪಿ. ಬಸವರಾಜು**

ಬೆಂಗಳೂರು

೧೩

ಆತ್ಮೀಯರಾದ ಡಾ. ಜಿ.ಎಸ್.ಎಸ್. ಅವರಿಗೆ,

ಪ್ರೀತಿಯ ನಮನಗಳು.

ಮೊದಲಿಗೆ, ಬರುತ್ತಿರುವ ಹುಟ್ಟುಹಬ್ಬದ (7.2.2000) ಹಾರ್ದಿಕ ಶುಭಾಶಯಗಳು. ಶತಮಾನ ಬಾರಿಸಲೇಬೇಕು ಎಂಬ ಕಳಕಳಿಯ ಕೋರಿಕೆ.

ಜೊತೆಗೆ ಹೊಸ ಶತಮಾನ, ಸಹಸ್ರಮಾನಗಳ ಸಂಕ್ರಮಣಕ್ಕೆ ಸ್ವಾಗತ. ನಿಮ್ಮ ಪಾಲಿಗೆ ಇದೊಂದು ನಿರಭ್ರ ಪ್ರೀತಿಯ, ನಿರಾಳಪರ್ವ ಆಗಿರಲಿ ಎಂದು ಅಂತರಾಳದಿಂದ ಹಾರೈಸುತ್ತೇನೆ.

ವಿಶ್ವಾಸವಿಟ್ಟು ನೀವು ಕಳಿಸಿ ಕೊಟ್ಟ 'ವ್ಯಕ್ತ-ಮಧ್ಯ' ಸಂಕಲನದ ಕವಿತೆಗಳನ್ನ ಒಂದೊಂದೆ ಮೆಲ್ಲುತ್ತ, ಮೆಲುಕುಹಾಕುತ್ತ, ಮತ್ತೆ ಮತ್ತೆ ಓದುತ್ತ ಖುಷಿಪಟ್ಟೆ.

ಒಂದೊಂದು ಕವಿತೆಯೂ ಚಿತ್ರವತ್ತಾಗಿ, ಸರಳವಾಗಿ, ಆತ್ಮೀಯವಾಗಿ ಒಂದೊಂದು ಪುಟ್ಟ ಗುಟ್ಟು ಹೇಳುತ್ತಿರುವಂತ ಅನುಭವವಾಯಿತು. ಇಲ್ಲಿನ ಎಲ್ಲ ಕವಿತೆಗಳೂ ಸಲೀಸಾಗಿ ಓದಿಸಿಕೊಳ್ಳುತ್ತವೆ ಮತ್ತು ಸಹಜ ಸೆಳೆತ ಹೊಂದಿವೆ.

'ಕವಿ-ಕವಿತೆ', 'ಕವಿತೆ ಕಂಡದ್ದು ಹೀಗೆ', 'ನವೋದಯ', 'ಸ್ಪಂದನ', 'ನಿಮ್ಮ ಹಾಗೇ ನಿಮ್ಮ ಕವಿತೆ'—ಇವು ಹೊಸಯುಗದಲ್ಲಿ ಕವಿತೆಯ ಸ್ಥಾನಮಾನ, ಅದರ ಮೂಲಸ್ವರೂಪ, ಪ್ರಭಾವಗಳನ್ನು ಕುರಿತು ಮನಮುಟ್ಟುವಂತೆ ಹೇಳುತ್ತವೆ.

'ಒಂದು ನೆನಪು' ತನ್ನಷ್ಟಕ್ಕೆ ತಾನೆ ಇಡಿಯಾಗಿ ಒಂದು ರೂಪಕವಾಗಿ ಉರಿಯುತ್ತದೆ. ನೆನಪಿನಾಳದಲ್ಲಿ ಹಚ್ಚಿಟ್ಟ ಹಣತೆಯಂತೆ ಕಾಣುತ್ತದೆ.

'ಅವಸ್ಥೆ' ಬದುಕನ್ನು ನೀವು ಹೇಗೆ ತೆಗೆದುಕೊಂಡಿದ್ದೀರಿ, ಅದರ ನೋವುಗಳನ್ನ ಹೇಗೆ

ಸ್ವೀಕರಿಸಿದ್ದೀರಿ ಎಂಬುದರ ಬಗ್ಗೆ ಒಂದು ಕಾವ್ಯಾತ್ಮಕ ವ್ಯಾಖ್ಯಾನವೆ ಆಗಿದೆ. ಹೌದು, ನೀವು ನಮ್ಮ ನಡುವಿನಲ್ಲಿ 'ಕಾಡುಬಳ್ಳಿಗಳು ಹೆಣೆದುಕೊಂಡಿರುವೊಂದು ಸಸ್ಯ ವಿಶೇಷದಂತೆ' ಇದ್ದೀರಿ. ನಿಮ್ಮಿಂದಾಗಿ ನಮಗೆಲ್ಲ ಧಾರಾಳವಾಗಿ ಪ್ರಾಣವಾಯು ದೊರೆಯುತ್ತಿದೆ.

'ಗೋಡೆಗಳು' 'ಪೂರ್ಣಾನದಿಯ ಮೊಸಳೆ', 'ಬುದ್ಧಪೂರ್ಣಿಮೆಯ ದಿನ', 'ಪಂಪೋತ್ಸವ' ಇವೆಲ್ಲ ಹದವಾದ ವ್ಯಂಗ್ಯ ವಿಡಂಬನೆಗಳ ಮೂಲಕ ಜಡಗೊಂಡ ಮನಸ್ಸುಗಳನ್ನು ಬಡಿದೆಬ್ಬಿಸುತ್ತವೆ.

ಒಟ್ಟಿನಲ್ಲಿ ಇಡಿ ಸಂಕಲನದ ಕವನಗಳು ಎಲ್ಲರಿಗೂ ಸುಲಭವಾಗಿ ಅರ್ಥವಾಗುತ್ತವೆ ಮತ್ತು ದಕ್ಕುತ್ತವೆ. ಹೀಗಾಗಿ ಎಲ್ಲರು ಇವನ್ನು ಮತ್ತೆ ಮತ್ತೆ ಓದಲು ಇಷ್ಟಪಡುತ್ತಾರೆ.

Run on stanza pattern ಘಟನೆಗೆ ಕೊಂಡಿ ಜೋಡಿಸುವಾಗಿನ ತಂತ್ರದಂತಿದೆ. stanza ಗಳು ತಮ್ಮಷ್ಟಕ್ಕೆ ತಾವು ತುಂಡಾಗಿ ನಿಲ್ಲದೆ ಇಡಿ ಪದ್ಯ ಒಂದು entity ಎಂಬುದನ್ನ ಸಾರುತ್ತವೆ. ಮೊದಲಿಂದ ಕೊನೆಯವರೆಗು ಒಂದು 'ನಿರಂತರತೆ' ಅಥವಾ `continuity' ಇರುವುದು ಅರಿವಾಗುತ್ತದೆ. ಸಂಗೀತದಲ್ಲಿ ಆವರ್ತನದಿಂದ ಆವರ್ತನಕ್ಕೆ ಸಾಗುವಾಗ ಉಸಿರು ತೆಗೆದುಕೊಳ್ಳುವ 'ಯತಿ'ಯಂತೆ, ಇಲ್ಲಿ stanza ಗಳು ಇದ್ದೂ ಇಲ್ಲದಂತೆ ಇಡಿ ಕವಿತೆಯ ಚೆಲುವಿಗೆ ದುಡಿಯುತ್ತವೆ. ಇದೊಂದು ಅರ್ಥಪೂರ್ಣ ಪ್ರಯೋಗ. ಇದಕ್ಕಾಗಿ ನನ್ನ ಅಭಿನಂದನೆಗಳು.

ಪ್ರವಾಸ ಕಥನಗಳ ಜಂಟಿ–ಹೊತ್ತಿಗೆ ಹೊರಬಂತೆ? ಅದರ ಪ್ರತಿಯೊಂದು ನನಗೆ ಬೇಕು.

ತಮ್ಮವನೇ ಆದ

21.1.2000 **ಬದರಹಳ್ಳಿ ನರಸಿಂಹಮೂರ್ತಿ**

ಹೊನ್ನಾಳಿ

೧೪

ಸರ್,

'ವ್ಯಕ್ತಮಧ್ಯ' ಓದಿ ಬರೆಯುತ್ತೇನೆ ಎಂದೆ. ಓದಿ ಸಂತೋಷಪಡಬಹುದು ಆ ಸಂತೋಷವನ್ನು ಮಾತಿನಲ್ಲಿ ಜೋಡಿಸುವುದು ಕಷ್ಟ.

ಹಿಂದಿನಿಂದಲೂ ಕಂಡಿದ್ದ ನಿಮ್ಮ ಮೂಲವಸ್ತುಗಳು ಇಲ್ಲೂ ಕಾವ್ಯತ್ವ ಸಾಧಿಸಿ, ಹೊಳಹು ಕಾಣಿಸುತ್ತಿವೆ. ಕಾಲ-ಚರಿತ್ರೆ-ಮನುಷ್ಯ-ಕತ್ತಲ ವಿರುದ್ಧ ಏಕಾಂಗಿ ಸಮರದ ಹಣತೆಯ ಹತ-ಶೋಷಕ ಜಗತ್ತಿನ ವಿರುದ್ಧದ ತೀವ್ರ ವಿಡಂಬನೆ—ಈ ಎಲ್ಲವೂ ವ್ಯಕ್ತಿಯ ಪರಿಪ್ರೇಕ್ಷ್ಯದಲ್ಲಿ. ಹಾಗಾಗಿ ಇವು ಬಿಡಿ ಕವಿತೆಗಳಾಗಿದ್ದೂ ಬಿಡಿ ಕವಿತೆಗಳು ಅನ್ನಿಸುವುದಿಲ್ಲ. ಇಲ್ಲಿ ಕಾವ್ಯ, ಹೊಕ್ಕಳು ಬಳ್ಳಿಯ ಸಂಬಂಧದಲ್ಲಿ ಹಬ್ಬಿಕೊಳ್ಳುತ್ತದೆ. ಮನುಷ್ಯನೇ ನಾಭೀಮೂಲ.

ಅರ್ಥದ ಅನೇಕ ಮಜಲುಗಳಿಂದ ನನಗೆ ತುಂಬ ಪ್ರಿಯವಾದ ಕವಿತೆ 'ಸಿಂಡರೆಲಾ'. ಇಲ್ಲಿ ಕಾವ್ಯವಸ್ತುವನ್ನು ಮೂಲಕಥೆಯ ಹಂದರದಿಂದ ಸಂಪೂರ್ಣವಾಗಿ ಮುಕ್ತಗೊಳಿಸಿರುವುದು ಆಶ್ಚರ್ಯ ಉಂಟುಮಾಡುತ್ತದೆ. ಇಡೀ ಕಥೆ ರೂಪಕ ಶರೀರಧಾರಣೆ ಮಾಡುತ್ತದೆ. ಸಾಮಾನ್ಯತೆ-ಅಸಾಮಾನ್ಯತೆಯ ನಡುವೆ ಬದುಕಿನ ಜೀಕು ಅದ್ಭುತವಾಗಿ ಮೂಡಿಬಂದಿದೆ. ನರ್ತನದ ವರ್ತುಲದ ಆಚೆ ಸಿಂಡರೆಲಾ ಒಬ್ಬ ಸರ್ವೇ ಸಾಧಾರಣ ಹುಡುಗಿ. ಇದೇ ಅಲ್ಲವೇ 'ಪ್ರತಿಭಾಕ್ಷಣ'ದ ಮಹತ್ವ. ಎಲ್ಲಿ ಹೋದಳು ಈ ಉತ್ಸವದ ಕೇಂದ್ರವಾಗುತ್ತಾ ಇದುವರೆಗೆ ನರ್ತಿಸಿದ ಅನಂಗನ ಬಳ್ಳಿ?—ಎಂಬ ಪ್ರಶ್ನೆ ನೀಲಾಂಜನೆಯ ನೃತ್ಯ ಸಂದರ್ಭವನ್ನು ನೆನಪಿಸಿ ಅಲ್ಲಿನ ಅರ್ಥವನ್ನು ದೋಚಿಕೊಳ್ಳುತ್ತದೆ. 'ಅರೆಮುಗಿವಿನ' ದುರಂತವನ್ನು ಕವಿತೆ ಧ್ವನಿಸುತ್ತದೆ. 'ಒಂದೇ ಒಂದು ಹೊಳೆಯುವ ಬೂಡ್ಸು' ಎನ್ನುವ ಸಾಲಿನ ಧ್ವನಿರಮ್ಯತೆ ಗಮನಿಸಬೇಕಾದ್ದು. ಸಿಂಡರೆಲಾ ಅಡುಗೆ ಮನೆಯೊಳಗೆ—'ಸುಂದರವಾದ ಶ್ಲೋಕದಿಂದುದುರಿ ನಿರರ್ಥಕವಾದ ಪಾದದ ಹಾಗೆ'—ಸಾಲು ರೂಪಕದ ಶೃಂಗವನ್ನೇ ಸಾಧಿಸುತ್ತದೆ. ಹೊಸ್ತಿಲ ಆಚೆ-ಮತ್ತೆ ಅಡುಗೆಮನೆ ಎಂಬ ವಿರೋಧ ಸೂಚಿಗಳು ಕವಿತೆಗೆ ಸ್ತ್ರೀ ಸಂವೇದನೆಯ ಸ್ಪರ್ಶವನ್ನು ಕೊಡುತ್ತವೆ. ಪ್ರೀತಿ-ಪ್ರತಿಭೆಯ ಕರುಣೆ ಎನ್ನುವಲ್ಲಿ ಪ್ರೀತಿ ವ್ಯಕ್ತಿಗತ ಸಂದರ್ಭವನ್ನು ಸೂಚಿಸಿದರೆ ಪ್ರತಿಭೆ ಕಲಾಸಂವೇದನೆಯ ಸಂದರ್ಭವನ್ನು ಸೂಚಿಸುತ್ತದೆ. ಅದಕ್ಕೇ ಅನೇಕ ಮಜಲಲ್ಲಿ ಅರ್ಥದ ಉಡ್ಡಯಣ ಸಾಧಿಸುವ ಕವಿತೆ ಇದು ಎಂದು ನಾನು ಹೇಳಿದ್ದು.

'ಸುಜಾತ' ಹುತ್ತಗಟ್ಟಿದ ಆತ್ಮ ಕಂಡುಕೊಂಡ ಪರಮಜ್ಞಾನದ ಹೊಸ ಮಗ್ಗುಲನ್ನು ಸೂಚಿಸುವಂತಿದೆ. ಪಾಯದ = ವರ್ಷ ಋತುವಿನ ಹದಮಳೆ, ಒಣಗಿ ಮೂಕವಾಗಿದ್ದ ಮರಕ್ಕೆ ಹಸಿರಿನ ಜೀವಶಕ್ತಿ ಮತ್ತು ಅಭಿವ್ಯಕ್ತಿ ಕೊಟ್ಟ ಪ್ರೀತಿ. ಇದು ಪರಮ ಬೆಳಕಿನ ಹೊಸನೆಲೆಯ ವ್ಯಾಖ್ಯಾನ. 'ಪ್ರೀತಿ ಇಲ್ಲದ ಮೇಲೆ?' ಕವಿತೆಯ ಶಿಲ್ಪಾತ್ಮಕ ಅಭಿವ್ಯಕ್ತಿ—'ಸುಜಾತ'.

'ಗೋಡೆಗಳು'—ಕನಕದಾಸರದ್ದೇ ಮಾತು—ಬಯಲು ಆಲಯದೊಳಗೊ ಆಲಯವು ಬಯಲೊಳಗೋ—ಎಂಬುದರ ಮೂರ್ತ ರೂಪಕ. ಸಮಾಜದ ಸಕಾರಾತ್ಮಕ ಚಲನೆಯ ಸುಂದರ ಅಭಿವ್ಯಕ್ತಿ. ಕನಕರು ಪ್ರಗತಿಪರ ಆಶಯದ ಪ್ರತೀಕವಾಗಿ ರೂಪಿತರಾಗಿದ್ದಾರೆ. ಇಷ್ಟವಾದ ಕವನ.

'ಪೂರ್ಣಾನದಿಯ ಮೊಸಳೆ', 'ಒಂದು ನೆನಪು', 'ಒಂದಿರುಳು', 'ಮುಖಾಮುಖಿ'—episodical poems. ಪ್ರಕರಣಗಳ ಧ್ವನಿಶಕ್ತಿಯನ್ನು ಹುರಿಗೊಳಿಸಿ ಇಟ್ಟಂಥ ಕಾಡುವ ಪದ್ಯಗಳು. 'ಪೂರ್ಣನದಿಯ ಮೊಸಳೆ' ಅರ್ಥಕ್ಕೆ ಸುಲಭವಾಗಿ ಸಿಕ್ಕದಷ್ಟು ಧ್ವನಿಪೂರ್ಣ. ಹಾಗೇ 'ಒಂದಿರುಳು' ಕವಿತೆ ಕೂಡ. ಇವನ್ನು ಒಂದು ಆಘಾತದ ಅನುಭವವನ್ನಾಗಿಯೇ ಗ್ರಹಿಸಬೇಕು. 'ಲೇಕ್ ಡಿಸ್ಟ್ರಿಕ್ಟಿನಲ್ಲಿ'—ಕುವೆಂಪು ಮತ್ತು Wordsworth ರನ್ನು ಅವರ

ವಸ್ತುಪ್ರಪಂಚದ ಮೂಲಕವೇ ಮುಖಾಮುಖಿಗೊಳಿಸುವುದು ಅರ್ಥಪೂರ್ಣವಾಗಿದೆ.

'ಅವಸ್ಥೆ' ಪ್ರಾಯಶಃ ಸಂಕಲನದ ಸರ್ವಶ್ರೇಷ್ಠ ರಚನೆ. ಕೋಟ್ಯಾಂತರ ವರ್ಷಗಳ ಜೀವವಿಕಾಸದ ಚರಿತ್ರೆಯೇ ಇಲ್ಲಿ ರೂಪಕ ಶರೀರವನ್ನು ಪಡೆದಂತಿದೆ. Becoming one with the universe ಎಂಬ ಜೆನ್ ತತ್ವದ ಕಲಾಶರೀರದಂತಿದೆ ಪದ್ಯ.

'ಚರಿತ್ರೆಯ ಕಾಲಜ್ಞಾನ' ಕಠೋರ ವಾಸ್ತವದ ನಿಷ್ಠುರ ಅರಿವಿನಿಂದ ರೂಪಗೊಂಡ ಕವಿತೆ.

ಸಂಕಲನದ ಮುಖ್ಯ ಪದ್ಯಗಳಲ್ಲಿ ಕಾಣುವ ತಾತ್ವಿಕತೆಯ ಬಗ್ಗೆ ಒಂದು ಮಾತು. 'ಅದ್ವೈತ ಚಿಂತನೆ' or 'ಐಕ್ಯ ಕಲ್ಪನೆ' ಈಚೆಗೆ ನಿಮ್ಮನ್ನು ಕಾಡುತ್ತಿರುವ ಚಿಂತನೆಯೇ?

'ನಟ್ಟಿರುಳಲ್ಲಿ', 'ಪೂರ್ಣನದಿಯ ಮೊಸಳೆ', 'ಒಂದಿರುಳು', 'ಮುಖಾಮುಖಿ', 'ಎರಡು ನೀಲಿಯ ನಡುವೆ', 'ಆರೋಹಣ', 'ಅವಸ್ಥೆ'—ಈ ಮುಖ್ಯಕವಿತೆಗಳನ್ನು ನಿಮ್ಮ ತಾತ್ವಿಕತೆಯ ಪರ್ಯಾಲೋಚನೆಗಾಗಿ ಅಭ್ಯಾಸಮಾಡುವುದು ಅಗತ್ಯವಿದೆ ಎನ್ನಿಸಿದೆ.

ಈ ಪತ್ರದಲ್ಲಿ ನಾನು ಉಲ್ಲೇಖಿಸದಿರುವ ಕೆಲವು ಕವಿತೆಗಳು ಏಕೋ ನನ್ನನ್ನು ಆಳದಲ್ಲಿ ತಾಗಿಲ್ಲ. ಅದಕ್ಕೆ ಕಾರಣವನ್ನು ಕೂಡ ನಾನು ಮುಂದಿನ ಓದಿನಲ್ಲಿ ಕಂಡುಕೊಳ್ಳಬೇಕು.

'ಅವಸ್ಥೆ', 'ಸಿಂಡರೆಲಾ' ನಿಮ್ಮ ಕಾವ್ಯೋದ್ಯೋಗದ ಶ್ರೇಷ್ಠ ಕವಿತೆಗಳ ಸಾಲಿನಲ್ಲಿ ನಿಲುತ್ತುವೆ. ಇಂಥ ಕವಿತೆಗಳು ನನಗೆ ಬರೆಯುವ ಹುಮ್ಮಸ್ಸನ್ನೂ, ಕಿಚ್ಚನ್ನೂ ಕರಣಿಸುತ್ತವೆ. ಅದಕ್ಕಾಗಿ ತುಂಬ ಕೃತಜ್ಞ.

ಪ್ರೀತಿಯಿಂದ

ನಿಮ್ಮ

28.3.2000 ಎಚ್. ಎಸ್. ವೆಂಕಟೇಶಮೂರ್ತಿ

ಬೆಂಗಳೂರು

೧೫

ಪ್ರಿಯರಾದ ಶ್ರೀ ಜಿಎಸ್ಎಸ್ ಅವರಿಗೆ—

ಪ್ರೀತಿಯ ನಮಸ್ಕಾರಗಳು.

'ವ್ಯಕ್ತಮಧ್ಯ'ದ ಕವಿತೆಗಳನ್ನೆಲ್ಲ (ಹಿಂದೆ ಬಿಡಿ-ಬಿಡಿಯಾಗಿ ಓದಿದ್ದನ್ನು ಈಗ ಒಟ್ಟಿಗೆ) ಓದಿ, ತುಂಬಾ ಸಂತೋಷ ಪಟ್ಟಿದ್ದೇನೆ. ಕೆ.ಎಸ್. ನರಸಿಂಹಸ್ವಾಮಿಯವರ ಕವಿತೆಗಳಂತೆಯೇ, ನಿಮ್ಮ ಕವಿತೆಗಳೂ ನನಗೆ ಮೊದಲಿಂದ ತುಂಬಾ ಇಷ್ಟ. ಏಕೆಂದರೆ ಇವು ಸರಳವಾದರೂ ಗಹನ, ಗಹನವಾದರೂ ಸರಳ. Simple and profound. ನಿಮ್ಮ ನಿರಂತರ ಕಾಳಜಿಗಳಾದ ಕತ್ತಲು, ಬೆಳಕು, ಹಣತೆ, ಇತಿಹಾಸ, ವರ್ತಮಾನ, ಪ್ರೀತಿಯ ಅಗತ್ಯ—ಇವು ಈ ಸಂಕಲನದಲ್ಲೂ ಮುಂದುವರಿದಿವೆ (ಸಹಜವಾಗಿಯೇ). ಆದರೆ ಇವೆಲ್ಲ

ಹೊಸ ಹೊಸ ಪ್ರತಿಮೆ, ಪ್ರತೀಕಗಳ ಮೂಲಕ, ಹೊಸ·ಹೊಳಪು ಬೆಳಕುಗಳೊಂದಿಗೆ ಇಲ್ಲಿ ಪುನರವತರಿಸಿವೆ. ಸಂಕಲನದ ಎಲ್ಲ ಕವಿತೆಗಳೂ ನನಗೆ ಇಷ್ಟವೇ. ಆದರೆ ತುಂಬಾ ಇಷ್ಟವಾದದ್ದು: 'ಕಿಷ್ಕಿಂಧೆಯ ಕತ್ತಲು' ಮತ್ತು 'ಅವಸ್ಥೆ'. 'ಕಿಷ್ಕಿಂಧೆಯ ಕತ್ತಲು' ಇತ್ತೀಚೆಗೆ ನಾನು ಓದಿದ ಶ್ರೇಷ್ಠ ಕವಿತೆಗಳಲ್ಲಿ ಒಂದು. ಇದಕ್ಕೆ ಕಾರಣಗಳನ್ನು ಕೊಡುವ ಅಗತ್ಯ ಇಲ್ಲವೆಂದು ಭಾವಿಸುತ್ತೇನೆ. ನೀವು ಬಲ್ಲಂತೆ, ನಾನು ವಿಮರ್ಶಕನಲ್ಲ, ಕವಿ ಮಾತ್ರ. ನಿಮ್ಮ ಅದಮ್ಯ ಜೀವನ ಪ್ರೀತಿಗೆ 'ಅವಸ್ಥೆ' ಕವಿತೆ ಉಜ್ವಲ ಉದಾಹರಣೆಗೆಯಾಗಿದೆ. ಹಾಗೆಯೇ ನಿಮ್ಮ ಅದಮ್ಯ ಆಶಾವಾದಕ್ಕೆ 'ಕಿಷ್ಕಿಂಧೆಯ ಕತ್ತಲು' ನಿದರ್ಶನವಾಗಿದೆ. ತಮ್ಮ ಹೊಸ ದೃಷ್ಟಿ ಮತ್ತು ಅರ್ಥವಂತಿಕೆಗಳಿಂದ 'ಹೂವು-ನಕ್ಷತ್ರ', 'ಪೂರ್ಣಾನದಿಯ ಮೊಸಳೆ', 'ಒಂದು ನೆನಪು', 'ಸಿಂಡರೆಲಾ', 'ಲೇಕ್ ಡಿಸ್ಟ್ರಿಕ್ಟಿನಲ್ಲಿ', 'ಆರೋಹಣ' ನನಗೆ ಪ್ರಿಯವಾಗಿವೆ.

ಇನ್ನು, ನಿಮ್ಮ 'ಮುಕ್ತ ಬಂಧ'ದ ಪ್ರಯೋಗವನ್ನು ನಾನು ಸಾಕಷ್ಟು ವರ್ಷಗಳಿಂದ ಗಮನಿಸುತ್ತಾ ಬಂದಿದ್ದೇನೆ. ಇದು ನಿಜಕ್ಕೂ ಅನನ್ಯವಾದ ಪ್ರಯೋಗವೇ ಸರಿ. ಆದರೆ ಇದು ಕೇವಲ ಪ್ರಯೋಗಕ್ಕಾಗಿ ಪ್ರಯೋಗವಾಗದೆ, ನಿಮ್ಮ ಕವಿತೆಗಳಲ್ಲಿ ಸಹಜವಾಗಿ, ಲೀಲಾಜಾಲವಾಗಿ ಒದಗಿ ಬಂದಿದೆ; ಅಷ್ಟೇ ಅರ್ಥಪೂರ್ಣವಾಗಿ ಸಹ. ಇದು ಸದ್ಯಕ್ಕಂತೂ ಅನನ್ಯ ಸಾಮಾನ್ಯವಾಗಿಯೇ ನನಗೆ ತೋರುತ್ತಿದೆ. ವೆಂಕಟೇಶಮೂರ್ತಿ ಇಂಥ ಕೆಲವು ಪ್ರಯೋಗಗಳನ್ನು ಮಾಡಿರಬಹುದೆಂದು ಭಾವಿಸುತ್ತೇನೆ.

'ವ್ಯಕ್ತಮಧ್ಯ'ದ ಮೂಲಕ ನೀವು ನನಗೆ ನೀಡಿದ ಕಾವ್ಯಾನಂದಕ್ಕಾಗಿ ಹಾಗೂ ಹೊಸ ಹೊಳಹುಗಳಿಗಾಗಿ ಹಾರ್ದಿಕ ಧನ್ಯವಾದಗಳು.

ನಾನು ನಿಮಗೆ ಕಳಿಸಿಕೊಟ್ಟ ನನ್ನ ಎರಡು ಹೊಸ ಕವಿತೆಗಳ ('ನನ್ನವಳು' ಮತ್ತು 'ಮಾನವ') ಹಸ್ತಪ್ರತಿಗಳು ನಿಮಗೆ ತಲುಪಿರಬಹುದೆಂದು ಭಾವಿಸುತ್ತೇನೆ. ಅವುಗಳ ಬಗ್ಗೆ ನಿಮ್ಮ ಅನಿಸಿಕೆಗಳನ್ನು ತಿಳಿಯಲು ಕಾತರನಾಗಿದ್ದೇನೆ.

ನಿಮ್ಮ ಪ್ರೀತಿಯ

20.4.2000 ಬಿ. ಆರ್. ಲಕ್ಷ್ಮಣರಾವ್

ಚಿಂತಾಮಣಿ

೧೬

ಮಾನ್ಯ ಹಿರಿಯರಾದ ಡಾ. ಜಿ.ಎಸ್. ಶಿವರುದ್ರಪ್ಪ
ಅವರಿಗೆ-ಗೌರವಪೂರ್ವಕ ಪ್ರಣಾಮಗಳು.

ಓದುವ ಪ್ರೀತಿಗಾಗಿ ಅಂದು ನೀವು ಕೊಟ್ಟ ಎರಡೂ ಪುಸ್ತಕಗಳ ಮೇಲೆ ಕಣ್ಣಾಡಿಸಿದ್ದೇನೆ. ತಿಳಿ ನೀರಿನಂತೆ ಪಾರದರ್ಶಕವಾಗಿರುವ ನಿಮ್ಮ ಶೈಲಿಯ ಬಗ್ಗೆ ಮತ್ತು

ಆಲೋಚನೆಗಳ ಬಗ್ಗೆ ನಾನು ಮತ್ತೆ ಬರೆಯಬೇಕಿಲ್ಲ. "ವ್ಯಕ್ತಮಧ್ಯ" ಸಂಕಲನದ ಛಂದೋಪ್ರಯೋಗ ಖಂಡಿತವಾಗಿಯೂ ಒಂದು ಹೊಸ ಕಾಣಿಕೆ. ಭಾಷಾಲಯ ಮತ್ತು ಛಂದೋಲಯಗಳ ಹದವಾದ ಸಾಮರಸ್ಯದಲ್ಲಿ ಚೌಪದಿಗಳನ್ನು ಸಂಘಟಿಸಿಕೊಳ್ಳುತ್ತ ಮುನ್ನಡೆಯುವ ಬಗೆ, ಕನ್ನಡಕ್ಕೆ ಹೊಸತು. ಆಧುನಿಕ ಕನ್ನಡಕಾವ್ಯ ಹೊಸ ಶಿಲ್ಪದ ದಾರಿ ಕಾಣದೆ ತೊಳಲುತ್ತಲಿದ್ದ ಪ್ರಸಂಗದಲ್ಲಿ ತಾವು ಮಂಡಿಸಿದ ಈ ಪ್ರಯೋಗ ನಮ್ಮ ಕವಿಗಳನ್ನು ಆಕರ್ಷಿಸುವುದೆಂದು ನನ್ನ ಭಾವನೆ.

ಇಂತು ವಂದನೆಗಳು.

ವಿಶ್ವಾಸದ

30.6.2000 ಡಾ॥ ಎಂ. ಎಂ. ಕಲಬುರ್ಗಿ

ಬೆಂಗಳೂರು

೧೭

ಪ್ರಿಯ ಮಿತ್ರ ಡಾ. ಶಿವರುದ್ರಪ್ಪ

ನಮಸ್ಕಾರ

ನಿಮ್ಮೊಡನೆ ಇಂಗ್ಲೆಂಡಿನ ಚಾತುರ್ಮಾಸವನ್ನು ಯೂರೋಪಿನ ಸಂಗ್ರಹ ಪ್ರವಾಸವನ್ನೂ ಮುಗಿಸಿಕೊಂಡು ಅದೇ ಗುಂಗಿನಲ್ಲಿ ಮನೆಗೆ ಹಿಂದಿರುಗಿದ್ದೇನೆ ಎಂದು ಹೇಳಲು ಈ ಪತ್ರ. ಪ್ರಾಯಶಃ ನಾನೇ ಹೋಗಿದ್ದರೆ ಗುರುತಿಸದೆ ಹೋಗಿರುತ್ತಿದ್ದ ನೂರು ವಿವರಗಳನ್ನು ನನಗೆ ಕಾಣಿಸಿದ್ದೀರಿ. ಈ ಎಲ್ಲ ನಾಡುಗಳನ್ನೂ ನೋಡುವುದರೊಂದಿಗೆ ನನಗೆ ಚಿಂತನಶೀಲವಾದ, ಇತಿಹಾಸಪ್ರಜ್ಞೆ ಇರುವ, ತೌಲನಿಕ ಅರಿವಿರುವ ಮನಸ್ಸೊಂದರ ಪ್ರತಿಕ್ರಿಯೆಯೂ ಉದ್ದಕ್ಕೂ ಲಾಭವಾದದ್ದು ಒಂದು ಸುಯೋಗ.

ನಿಜವಾಗಿ ಬಹು ಸುಂದರವಾದ ಪುಸ್ತಕವನ್ನು ಕನ್ನಡಿಗರ ಕೈಯಲ್ಲಿ ಇರಿಸಿದ್ದೀರಿ. ಸುಂದರ ದೃಶ್ಯಗಳ ನಿಮ್ಮ ವರ್ಣನೆಯು ವರ್ಣನೆಯೇ ಅಲ್ಲ, ಶಬ್ದಗಳಲ್ಲಿ ಪುನರ್‌ಸೃಷ್ಟಿ. ನೀವು ಕೊಡುವ ಮಾಹಿತಿಯೂ ಅರ್ಥವತ್ತಾಗುತ್ತದೆ. ಊರುಗಳ ರಸ್ತೆಗಳ ಜೋಡಣೆಯಿಂದ ಹಿಡಿದು ಕೌನ್ಸಿಲ್ ಹಾಲ್, ಬಕಿಂಗ್ ಹಂ ಅರಮನೆ, ಬ್ರಿಟಿಷ್ ಮ್ಯೂಸಿಯಂ, 'ಛೇಂಬರ್ಸ್ ಆಫ್ ಹಾರರ್ಸ್', ಬಾತ್‌ಗಳವರೆಗೆ ಎಲ್ಲ ಕಡೆ ನೀವೇ ಗೈಡ್ ಆದಿರಿ, ಜೊತೆಗೆ ಗೈಡ್ ಮಾಡಲಾರದ ಕಾರ್ಯವನ್ನೂ ಮಾಡಿದಿರಿ—ಪ್ರತಿ ಸ್ಥಳದ ಜನಸಂದಣಿ, ತಿಂಡಿತಿನಸು ಎಲ್ಲ ಅನುಭವಕ್ಕೆ ಬರುವಂತೆ 'ಗೈಡ್' ಮಾಡಿದ್ದೀರಿ. ಷೇಕ್ಸ್‌ಪಿಯರ್ ಹುಟ್ಟಿ ಬೆಳೆದು ತೀರಿಕೊಂಡ ಸ್ಟ್ರಾಟ್‌ಫರ್ಡ್-ಆನ್-ಏವನ್, ಬರ್ನ್ಸ್ ಕಂಟ್ರಿ, ವರ್ಡ್ಸ್‌ವರ್ತ್ ಕಂಟ್ರಿ ಎಲ್ಲವುಗಳ ವರ್ಣನೆ ಅತ್ಯಂತ ಸಮರ್ಥವಾದ ಸಾಧನೆ. ನೀವು ವರ್ಡ್ಸ್‌ವರ್ತ್‌ನನ್ನು ಕುರಿತು

ಮೆಚ್ಚುಗೆಯಿಂದ ಬರೆದಿದ್ದೀರಿ. ಇತ್ತೀಚೆಗೆ ಸಿ.ಡಿ. ನರಸಿಂಹಯ್ಯನವರು ಒಂದು ಲೇಖನದಲ್ಲಿ, ಅವನು ವಾರಕ್ಕೊಮ್ಮೆ ಲೇಕ್ ಡಿಸ್ಟ್ರಿಕ್ಕಿಗೆ ಹೋಗಿ ಬರುತ್ತಿದ್ದ ಪ್ರವಾಸಿಗ; ಅವನ ಕಾವ್ಯಕ್ಕೆ ಹೆಚ್ಚು ಗಮನ ಕೊಡಬೇಕಾಗಿಲ್ಲ ಎಂದು ಬರೆದಿದ್ದಾರೆ ಎಂದು ಸ್ನೇಹಿತರು ಹೇಳಿದರು. ವರ್ಡ್ಸ್‌ವರ್ತ್‌ನ ವಿಷಯಕ್ಕೆ ಇನ್ನೊಂದು ಮಾತು. ಅವನ 'Composed upon the Beach near calais-August 1802' ಸುನೀತದಲ್ಲಿ 'It is a beauteous evening, calm and free' ಎಂದು ಪ್ರಾರಂಭವಾಗುತ್ತದೆ. ಅವನು ಸಂಬೋಧಿಸುವ 'Dear child' ಆ್ಯನೆಟ್ ವೆಲಾನಳಲ್ಲಿ ಅವನು ಪಡೆದ ಕ್ಯಾರೊಲಿನ್. (ಪ್ರಾಯಶಃ 1802ರಲ್ಲಿ ವರ್ಡ್ಸ್‌ವರ್ತ್‌ನ ಮದುವೆ ನಿಶ್ಚಯವಾದನಂತರ, ಆ್ಯನೇಶ ಮತ್ತು ಅವಳ ಮಗಳು ಇಂಗ್ಲೆಂಡಿಗೆ ಬಂದಿದ್ದರು) ವರ್ಡ್ಸ್‌ವರ್ತ್ ಕಂಟ್ರಿ, ಬರ್ನ್ಸ್ ಕಂಟ್ರಿಗಳಲ್ಲಿ ನಾನೇ ನಡೆದಾಡಿದ ಅನುಭವ ಆಯಿತು. ಈಗ ಮತ್ತೆ ನಾನು ಇವರ ಕವನಗಳ ಪಾಠ ಹೇಳುವಂತಿದ್ದರೆ ಇನ್ನಷ್ಟು ಚೆನ್ನಾಗಿ ಹೇಳಬಹುದಾಗಿತ್ತೇನೊ! ಆ ಜನತೆಯ ಶಿಸ್ತನ್ನು ತುಂಬ ಚೆನ್ನಾಗಿ ಮನದಟ್ಟುಮಾಡಿಕೊಟ್ಟಿದ್ದೀರಿ.

ಈಚೆಗೆ ನನ್ನ ಪ್ರವಾಸವೆಲ್ಲ ಆರಾಮಕುರ್ಚಿಯಲ್ಲಿ ಕುಳಿತೇ ನಡೆಯುತ್ತದೆ. ನಿಮ್ಮ ಪುಸ್ತಕದಿಂದ ಶ್ರಮವಿಲ್ಲದೆ ಸಾರ್ಥಕವಾಗಿ ಸ್ವಲ್ಪಮಟ್ಟಿಗಾದರೂ ಇಂಗ್ಲೆಂಡ್ ಮತ್ತು ಯೂರೋಪಿನ ಭಾಗವನ್ನು ಕಂಡು ಬಂದಂತಾಯಿತು.

ನಿಮ್ಮ ಪ್ರವಾಸಕಥನ ಕೃತಿಗಳು ಕನ್ನಡದ ಪ್ರವಾಸಸಾಹಿತ್ಯದ ಶ್ರೀಮಂತಿಕೆಯನ್ನೆ ಹೆಚ್ಚಿಸಿವೆ. ವರ್ಣನೆ, ವೃತ್ತಾಂತ, ಚಿಂತನೆ ಎಲ್ಲದರ ಅಗತ್ಯಗಳನ್ನು ಸಮರ್ಥವಾಗಿ ಪೂರೈಸಬಲ್ಲ ಪದಸಂಪತ್ತು, ದೃಶ್ಯ-ಚಿಂತನೆ ಎಲ್ಲದರ ಛಾಯೆಯನ್ನು ಸಹ ಹಿಡಿದು ಇಟ್ಟುಕೊಳ್ಳ ಬಲ್ಲ ಭಾಷೆ, ನೋಟ-ಭಾವ-ಚಿಂತನೆಗಳ ತ್ರಿವೇಣೀ ಸಂಗಮವಾದ ಶೈಲಿ ಎಲ್ಲ ಈ ಪ್ರಕಾರಕ್ಕೆ ಹೇಳಿಮಾಡಿಸಿದಂಥವು. ಅಭಿನಂದನೆಗಳು.

ಬಹು ಒಳ್ಳೆಯ ಪುಸ್ತಕವನ್ನು ಓದಿದ ಸಂತೋಷವು, ಪ್ರಿಯ ಸ್ನೇಹಿತರಾದ ಡಾ. ಜಿಎಸ್ಎಸ್ ಬರೆದದ್ದೂ, ವಿಶ್ವಾಸದಿಂದ ಕೊಟ್ಟದ್ದು ಎಂದು ಇಮ್ಮಡಿಯಾಗಿದೆ. ನೀವು ಬಂದಾಗ ನಾನು ಮನೆಯಲ್ಲಿರಲಿಲ್ಲ ಎಂದೇ ಬೇಸರ.

ನೀವೂ ಮನೆಯಲ್ಲಿ ಎಲ್ಲರೂ ಆರೋಗ್ಯವಷ್ಟೆ!

ವಿಶ್ವಾಸದ

ಎಲ್. ಎಸ್. ಶೇಷಗಿರಿರಾವ್

1.9.1997

ಬೆಂಗಳೂರು

## ಕಾವ್ಯಾರ್ಥ ಚಿಂತನ

ಪ್ರ: ಶಾರದಾ ಪ್ರಕಾಶನ, ಬೆಂಗಳೂರು - 53.
ಪು: vii+264, ಬೆಲೆ: ರೂ. 20.00

---

ಸಾಹಿತ್ಯತತ್ತ್ವ ಮತ್ತು ವಿಮರ್ಶೆಗಳನ್ನು ಕುರಿತಂತೆ ಸಂಸ್ಕೃತದಲ್ಲಿ ಒಂದು ಶಾಸ್ತ್ರಪರಂಪರೆಯಿದೆ; ಪಾಶ್ಚಾತ್ಯರಲ್ಲಿ ಇನ್ನೂ ವಿಪುಲತರವಾದ ಗ್ರಂಥರಾಶಿಯಿದೆ. ಕನ್ನಡದಲ್ಲಿ ಇವುಗಳನ್ನು ಪರಿಚಯಿಸುವ ಗ್ರಂಥಗಳು ಬಂದಿರುವಂತೆ ಎರಡನ್ನೂ ಕೆಲವೊಂದು ಸಂದರ್ಭಗಳಲ್ಲಿ ಹೋಲಿಸಿ ನೋಡುವ ಪ್ರಯತ್ನಗಳೂ ನಡೆದಿವೆ. ಇವುಗಳಲ್ಲಿ ತೀ.ನಂ.ಶ್ರೀಕಂಠಯ್ಯನವರ "ಭಾರತೀಯ ಕಾವ್ಯಮೀಮಾಂಸೆ" ಮತ್ತು ಕುವೆಂಪು ಅವರ "ರಸೋ ವೈ ಸಃ" ಇವು ಮೌಲಿಕ ಗ್ರಂಥಗಳು. ಆ ಎರಡು ಗ್ರಂಥಗಳ ಸಾರಸರ್ವಸ್ವವನ್ನೂ ಹೀರಿಕೊಂಡು ಸಂಸ್ಕೃತ ಮತ್ತು ಆಧುನಿಕ ಪಾಶ್ಚಾತ್ಯ ಚಿಂತನಧಾರೆಗಳ ಮುಖ್ಯ ಮೂಲಗ್ರಂಥಗಳನ್ನೂ ವಿವರಣಗ್ರಂಥಗಳನ್ನೂ ಪುನರವಲೋಕನಕ್ಕೆ ಗುರಿಮಾಡಿ, ಇವೆರಡು ಧಾರೆಗಳಲ್ಲಿರುವ ಸಾದೃಶ್ಯ-ವೈಸಾದೃಶ್ಯಗಳ, ಸಾಂಗತ್ಯ-ಅಸಾಂಗತ್ಯಗಳ, ಇಂದಿಗೆ ಉಪಯುಕ್ತತೆ-ಅನುಪಯುಕ್ತತೆಗಳ ಒಂದು ನಿಚ್ಚಳ ನೋಟ "ಕಾವ್ಯವಿದ್ಯಾ ಪ್ರಚಯಪರಿಚಯ"ದ ಫಲವಾಗಿ ಪರಿಪಾಕಗೊಂಡ ಪರಿಣತ ಶೈಲಿಯಲ್ಲಿ ಓದುಗನಿಗೆ ದೊರೆಯುವಂತೆ ರಚಿತವಾಗಿರುವ ಶಿವರುದ್ರಪ್ಪನವರ ಈ ಕೃತಿ ಈಚಿನ ದಿನಮಾನದಲ್ಲಿ ಕನ್ನಡ ಸಾಹಿತ್ಯಶಾಸ್ತ್ರದ ತೌಲನಿಕ ಅಧ್ಯಯನ ಶಾಖೆಗೆ ಒಂದು ಮಹತ್ತರವಾದ ಕೊಡುಗೆ.

ಸಂಸ್ಕೃತ ಲಾಕ್ಷಣಿಕರ 'ಪರಿಕಲ್ಪನೆ'ಗಳಿರಲಿ, ಪಾಶ್ಚಾತ್ಯ ವಿಮರ್ಶಕವರೇಣ್ಯರ 'ಪರಿಕಲ್ಪನೆ'ಗಳೇ ಇರಲಿ, ಕಾಲದಿಂದ ಕಾಲಕ್ಕೆ ಅವುಗಳ ಅರ್ಥವ್ಯಾಪ್ತಿಯಲ್ಲಿ ಉಂಟಾದ ಸಂಕೋಚ-ವಿಕಾಸಗಳೇ ಇರಲಿ—ಎಲ್ಲವನ್ನೂ ಮೊದಲಿಗೆ ಸಾಧಾರವಾಗಿ ಹಾಗು ಸಾರಗ್ರಾಹಿಯಾಗಿ ಲೇಖಕರು ಸಂಗ್ರಹಿಸಿ ಕೊಡುತ್ತಾರೆ. ಆದರೆ ಎಲ್ಲಿಯೂ ಅವರ ನಿರೂಪಣೆ ಪರೋಕ್ತಿಗಳ ಪಟ್ಟಿಯಾಗಿ ಪರಿಣಮಿಸದಂತೆ ಹೆಜ್ಜೆ ಹೆಜ್ಜೆಗೂ ತಮ್ಮ ಸೂಕ್ಷ್ಮ ಸಂವೇದನೆ ಸ್ಪಂದಿಸುವಂತೆ ಅವನ್ನು ವ್ಯಾಖ್ಯಾನಿಸಿ ವಿವರಿಸುತ್ತಾರೆ. ಆಯ್ದ ಉದಾಹರಣೆಗಳಿಗೆ ಅನ್ವಯಿಸಿ ತೋರಿಸಿ ಬೋಧನಕೌಶಲವನ್ನು ಪ್ರಕಟಿಸುತ್ತಾರೆ. ಈ ಪ್ರಯತ್ನದಲ್ಲಿ ಅವರು ಬಹುತೇಕ ಇಂದಿನ ಸಾಹಿತ್ಯವಿಮರ್ಶೆಯ ಎಲ್ಲ ಪ್ರಮುಖ ಪ್ರಮೇಯಗಳನ್ನೂ ಪ್ರಣಾಲಿಗಳನ್ನೂ ಬಹಳ ಸಹಜವೆನಿಸುವಂತೆ ತಮ್ಮ ಚಿಂತನೆಗೆ ಒಳಗಾಗಿಸುತ್ತಾರೆ. ಇಲ್ಲಿ ಹೊಸ ವಿಚಾರಗಳನ್ನು

ಹಳೆಯ ಪಾತ್ರೆಗಳಲ್ಲಿ ತುಂಬುವ ನಿರರ್ಥಕ ಸಂಭ್ರಮವಿಲ್ಲ; ಹಳೆಯ ವಿಚಾರವೆಲ್ಲ ಹಳಸಲೇ ಆಗಿರಬೇಕೆಂದು ಕಡೆಗಣಿಸುವ ಧಾರ್ಷ್ಟ್ಯವೂ ಇಲ್ಲ. ಎರಡು ಧಾರೆಗಳನ್ನೂ ಹೋಲಿಸುವ ಮುನ್ನ ಎರಡನ್ನೂ ಇಂದಿನ ಪರಿಸರಪ್ರಜ್ಞೆಗೆ ಅನುಗುಣವಾಗಿ ಅರ್ಥಯಿಸುವ ಸ್ವೋಪಜ್ಞತೆಯಿದೆ. ಹಾಗೆ ಮಾಡುವಾಗ ಮೂಲ ಪರಿಕಲ್ಪನೆಗಳ ವಿಪರ್ಯಾಸವಾಗದಂತೆ ನೋಡಿಕೊಳ್ಳಲು ಅವರು ಮರೆತಿಲ್ಲ. ಸಾಂಪ್ರದಾಯಿಕರು ಇವರ ಅರ್ಥವಿಧಾನವನ್ನು ಒಪ್ಪದೆಯೂ ಹೋಗಬಹುದು. ಅದರಿಂದೇನೂ ಬಾಧೆಯಿಲ್ಲ. ಏಕೆಂದರೆ ಸೂಕ್ಷ್ಮ ಸಂವೇದನೆಯೇ ಮುಖ್ಯವಾದ ಚಿಂತನದಿಂದ ಇಂದಿನ ನಮ್ಮ ಉಪಯೋಗಕ್ಕೆ ಎಲ್ಲಿಯವರೆಗೆ ಹಿಂದಿನ ವಿಚಾರಗಳನ್ನು ಎಳೆದುಕೊಳ್ಳಬಹುದು ಎಂದು ಒಂದು ದಿಕ್ಸೂಚನೆ ಮಾಡುವುದು ಮಾತ್ರ ಈ ಲೇಖಕರ ವಿವಕ್ಷೆ. ಸಾಹಿತ್ಯ ಶಾಸ್ತ್ರದಲ್ಲಿ ಕಡೆಯ ಮಾತೆಂಬುದು ಒಂದು ಗಗನಕುಸುಮ!

ಪ್ರತಿಭೆ, ರಸ-ಭಾವ, ವಿಭಾವ-ಅನುಭಾವ, ಧ್ವನಿ, ವಕ್ರೋಕ್ತಿ, ರೀತಿ-ಗುಣ, ಅಲಂಕಾರ, ಔಚಿತ್ಯ-ಅನೌಚಿತ್ಯ—ಇವು ಇಲ್ಲಿ ಚಿಂತನೆಗೆ ಒಳಗಾಗಿರುವ ಭಾರತೀಯ ಪರಿಕಲ್ಪನೆಗಳು. ಅಲಂಕಾರಗಳಲ್ಲಿ 'ರೂಪಕ', 'ಉಪಮೆ'ಗಳು ವಿಶೇಷ ಗಮನ ಸೆಳೆದಿವೆ. 'ಬಂಧ', 'ಪಾಕ'ಗಳ ವಿಷಯವೂ ಸೇರ್ಪಡೆಯಾಗಿದೆ. ಎಂದ ಮೇಲೆ 'ಬಿಟ್ಟುಹೋಗಿರುವ ಮುಖ್ಯಾಂಶವೇನು'—ಎಂದು ಕೇಳಿದರೆ, 'ಏನೂ ತೋರದು' ಎಂದೇ ಉತ್ತರಿಸುವಂತಿದೆ. ಹಾಗೆಯೇ ಈ ಪರಿಕಲ್ಪನೆಗಳನ್ನು ಕುರಿತಂತೆ ಅಲಂಕಾರಿಕರಲ್ಲೇ ಭಿನ್ನಾಭಿಪ್ರಾಯ ತುಂಬಿರುವುದರಿಂದ, 'ಎಲ್ಲಕ್ಕೂ ಇಲ್ಲಿ ಪ್ರಾತಿನಿಧ್ಯ ದೊರೆತಿದೆಯೇ?' ಎಂದು ಕೇಳಬಹುದು. ಪ್ರಾಯಿಕವಾಗಿ ಯಾವ ಆಯ್ದ ದೃಷ್ಟಿಕೋನದಿಂದ ಈ ಲೇಖಕರು ಚಿಂತನೆಗೆ ಹೊರಡುತ್ತಾರೋ, ಅಷ್ಟಕ್ಕೆ ಸೀಮಿತವಾದಂತೆ ವಿಭಿನ್ನ ಲೇಖಕರ ವಿಭಿನ್ನ ವಿಚಾರಗಳನ್ನು ಪ್ರತಿಯೊಂದು ಪ್ರಮೇಯದ ಬಗೆಗೂ ಸಾಮಾನ್ಯವಾಗಿ ಇವರು ಉಲ್ಲೇಖಿಸುವುದೇ ಹೆಚ್ಚು. ಅತ್ಯಗತ್ಯವಾದ ಯಾವ ಅಭಿಪ್ರಾಯವನ್ನೂ ಅವರು ಕೈತಪ್ಪಿಸುವುದಿಲ್ಲ. ಒಮ್ಮೆ ವ್ಯಾಖ್ಯಾನ-ವಿವರಣೆ ಆರಂಭವಾದರೆ ಸಾಕು; ಇನ್ನೊಂದು ವ್ಯಾಖ್ಯಾನ-ವಿವರಣೆಗೆ ಅವಕಾಶ ಕಲ್ಪಿಸಿಕೊಟ್ಟಂತೆಯೇ ಸರಿ. ಹೀಗೆ ಪುನರ್ವಿಚಾರಕ್ಕೆ ಪ್ರಚೋದನೆ ಅಥವಾ ಚಾಲನೆ ಕೊಡುವ ಗುಣವೇ ಈ ಗ್ರಂಥದಲ್ಲಿ ಪ್ರಶಂಸಾರ್ಹ! ಉದಾಹರಣೆಗೆ—

1 " 'ಅರ್ಥ' ವೆಂಬುದೇ ಕವಿಯ ಅನುಭವ-ವಿಶೇಷ." (ಪು. 229). ಪ್ರಾಯಿಕವಾಗಿ ಯಾವ ಪ್ರಾಚೀನ ಲಾಕ್ಷಣಿಕನೂ 'ಅರ್ಥ'ವನ್ನು 'ಅನುಭವ'ಕ್ಕೆ ಸಮಾನಪದವೆಂದು ಬಳಸಿಲ್ಲ. 'ಅರ್ಥೋಽನಭಿಧೇಯ-ರೈ-ವಸ್ತು-ಪ್ರಯೋಜನ-ನಿವೃತ್ತಿಷು' ಎಂಬ ನಾನಾರ್ಥಕೋಶ ವಾಕ್ಯದಲ್ಲಿಯೂ 'ಅನುಭವ'ಕ್ಕೆ ಎಡೆಯಿಲ್ಲ. ಕವಿಯ ಅನುಭವ ಕವಿಗೆ ಗೊತ್ತು; ರಸಿಕನಿಗೆ ಗೊತ್ತಾಗುವ ಅರ್ಥ ಅದಕ್ಕಿಂತ ಬೇರೆ ಎಂದೇ ಹಿಂದಿನವರ ಗ್ರಹಿಕೆ. ಆದರೆ ಕವಿಯ 'ಅನುಭವ' 'ಅರ್ಥ'ವಾಗಬಾರದೇಕೆ? ಇದನ್ನೇ ನಾವು ಆಧುನಿಕ ವ್ಯಾಖ್ಯಾನ ಎನ್ನುವುದು.

2. 'ಕಾವ್ಯದಲ್ಲಾದರೆ ರಸ-ರೂಪಗಳ ಸಂಯೋಗ ಹೇಗೆ ಉತ್ತಮ ಶೈಲಿಯ ಲಕ್ಷಣವಾಗುವುದೋ ಹಾಗೆ, ನಾಟಕದಲ್ಲಿ ಭಾವ ಮತ್ತು ಅನುಭಾವಗಳ ಸಮರ್ಪಕವಾದ ಸಂಯೋಗವೇ ಉತ್ತಮ ಅಭಿನಯವಾಗುತ್ತದೆ'. (ಪು. 188). ಆಪಾತತಃ, ಇಲ್ಲಿ ನಾಟಕೇತರ ಕಾವ್ಯಕ್ಕೂ ನಾಟಕಕ್ಕೂ ವಿಭಾಜಕ ಧರ್ಮವೆಂದರೆ—ಒಂದರಲ್ಲಿ ಭಾವಾನುಭಾವಗಳ 'ಸಂಯೋಗ'ವಿಲ್ಲದಿರುವುದು, ಇನ್ನೊಂದರಲ್ಲಿ ಇರುವುದು, ಎಂಬರ್ಥದಲ್ಲಿ ಎಂಬಂತೆ ಭಾಸವಾಗುತ್ತದೆ. ಆದರೆ ಈ ಮಾತು ಇವರೇ ಪು. 234 ರಲ್ಲಿ ಕೊಟ್ಟಿರುವ ಅಡಿಟಿಪ್ಪಣಿಗೆ ವಿರೋಧವನ್ನೂ ಒಳಗೊಳ್ಳುತ್ತದೆ. ನಾಟಕೇತರವಾದ ಕಾವ್ಯದಲ್ಲೂ ವರ್ಣಿತ ಸಾಮಗ್ರಿಯೆಲ್ಲ ರಸದೃಷ್ಟಿಯಿಂದ ನೋಡುವವನಿಗೆ ಭಾವ ಸೂಚಕವಾದ ವಿಭಾವ ಮತ್ತು ಅನುಭಾವವೇ ವಿನಾ ಬೇರೆಯಲ್ಲ. ಇಲ್ಲಿ ಅಭಿನಯ ಆಂಗಿಕಾದಿಯಾಗಿ ಇರುವುದಿಲ್ಲ; ಆದರೆ ವಾಚಿಕವಾಗಿ ಇದ್ದೇ ಇರುತ್ತದೆ. ಅಲ್ಲದೆ ಕಾವ್ಯದಲ್ಲಿ content ಮತ್ತು form ಗಳಿಗೆ ಪ್ರತಿಯಾಗಿ 'ರಸ'- 'ರೂಪ' ಎಂಬ ಪ್ರತಿಶಬ್ದಗಳು ಸೂಕ್ತವೆ? 'ಅರ್ಥ'- 'ರೂಪ' ಎಂದರೆ ತಪ್ಪೇನು? ಆದರೆ 'ರಸ' ಕಾವ್ಯಾರ್ಥವೆನ್ನುವ ಲಾಕ್ಷಣಿಕರು 'ಅರ್ಥ' ಶಬ್ದವನ್ನು 'ಪುರುಷಾರ್ಥ' ಎಂಬಲ್ಲಿಯಂತೆ 'ಕಾವ್ಯದ ಪರಮಪ್ರಯೋಜನ' ಎಂಬ ಅರ್ಥದಲ್ಲಿ ಬಳಸುತ್ತಿದ್ದುದನ್ನು 'ಅಭಿನವ ಭಾರತಿ'ಯಲ್ಲಿ ನೋಡುತ್ತೇವೆ.

3. 'ಭಾರತೀಯ ಕಾವ್ಯಮೀಮಾಂಸೆಯಲ್ಲಿ ಕವಿಯ ಸಾಂಸಾರಿಕಭಾವವು ಕಾವ್ಯರೂಪವನ್ನು ತಾಳುವುದೆ ಎಂಬ ಶಂಕೆಯೊಂದು ನಮ್ಮ ಆಲಂಕಾರಿಕರಲ್ಲಿ ಪ್ರಸ್ತಾಪಿತವಾಗಿದೆ' (ಪು. 194) ಇದು ವಿಸಂಗತ ಶಂಕೆಯೆಂದು ನಮಗೆ ತೋರುತ್ತದೆ. ಏಕೆಂದರೆ ಭರ್ತೃಹರಿಯ 'ವೈರಾಗ್ಯಶತಕ', ನಾನಾ ಕವಿಗಳ ಭಕ್ತಿಸ್ತೋತ್ರಗಳು, ಅಮರುಕ ಮುಂತಾದವರ ಶೃಂಗಾರಶತಕಗಳು, ಸಾಮಾಜಿಕ ವಿಡಂಬನೆ ಮುಂತಾದುವಕ್ಕೆ ಮೀಸಲಾದ ಅನ್ಯೋಕ್ತಿ-ಶತಕಗಳು—ಇವುಗಳಲ್ಲೆಲ್ಲ ಕವಿಯ ವೈಯಕ್ತಿಕ ಭಾವ ಸಾಕಷ್ಟು ನಿಚ್ಚಳವಾಗಿ ಕಾವ್ಯರೂಪವನ್ನು ತಳೆದುದನ್ನು ನೋಡುತ್ತೇವೆ. 'ಕ್ರೌಂಚವಧ'ದ ಪ್ರಸಂಗ, ಹಸಿಯ ಭಾವ ನೇರವಾಗಿ ಕಾವ್ಯಕಾರಣವಲ್ಲವೆಂಬುದನ್ನು ಸೂಚಿಸುವುದಾದರೂ—ಇದು ಅಭಿನವಗುಪ್ತನ ಅಭಿಪ್ರಾಯ ಮಾತ್ರ—ಪ್ರೇಕ್ಷಕ ಭಾವದಿಂದ ನಿರ್ಲಿಪ್ತನಾಗಿ ತನ್ನ ವೈಯಕ್ತಿಕ ಅನುಭವವನ್ನೇ ಸಾಕ್ಷಿಪುರುಷನಂತೆ ಅಭಿವ್ಯಕ್ತಿಗೊಳಿಸಿದಾಗಲೂ ಕಾವ್ಯಕಾರಣವಾಗದೆಂದಲ್ಲ, ಎಂದು ವ್ಯಾಖ್ಯಾನಿಸಬಹುದು. ಭಾರತೀಯರ 'ಸಾಧಾರಣೀಕರಣ' ಪ್ರಮೇಯ ಹೆಚ್ಚಾಗಿ ರಸಿಕನ ಅನುಭವಕ್ಕೆ ಅನ್ವಯಿಸತಕ್ಕದ್ದೇ ವಿನಾ ಅಷ್ಟಾಗಿ ಕವಿಯ ಅನುಭವಕ್ಕಲ್ಲ. ಲೇಖಕರ ವಾಕ್ಯಕ್ಕೆ ಕೂಡ ನಾವು ಬರೆದ ಅರ್ಥವೇ ತಾತ್ಪರ್ಯವೆನ್ನಲೂ ಬಹುದು.

4. ಅವನ (=ಕುಂತಕನ) ಪ್ರಕಾರ ಸ್ವಭಾವೋಕ್ತಿ ಎಂದರೆ ಕವಿಸ್ವಭಾವದ ಉಕ್ತಿ.... 'ಎಲ್ಲ ಕಾವ್ಯಾಭಿವ್ಯಕ್ತಿಯೂ ಸ್ವಭಾವೋಕ್ತಿಯೇ' (ಪು. 180). ಮೇಲಿನ ವಾಕ್ಯಕ್ಕೂ ಇದಕ್ಕೂ ವಿರೋಧವಿಲ್ಲವೆನ್ನೋಣ! ಆದರೆ ನಾವು ತಿಳಿದಂತೆ, ಕುಂತಕನಿಗೆ ಕಾವ್ಯದಲ್ಲಿರುವುದೆಲ್ಲ 'ಅಲಂಕಾರ' ಹಾಗು 'ಅಲಂಕಾರ್ಯ' ಎಂಬ ಈ ಎರಡು ವರ್ಗಗಳಲ್ಲಿ ಅಂತರ್ಗತವಾಗುತ್ತದೆ.

ರೂಪಕಾದಿಗಳೆಲ್ಲ 'ಅಲಂಕಾರ'ಗಳೇ ಹೊರತು ಎಂದೂ 'ಆಲಂಕಾರ್ಯ'ವಲ್ಲ, 'ಅಲಂಕಾರ್ಯ' ಯಾವುದೆಂದರೆ 'ವಸ್ತುಸ್ವಭಾವ' ಮತ್ತು 'ರಸಾದಿ'. ಭಾಮಹಾದಿಗಳು 'ಸ್ವಭಾವೋಕ್ತಿ'ಯನ್ನು 'ಅಲಂಕಾರ್ಯ'ವೆನ್ನದೆ 'ಅಲಂಕಾರ' ಎಂದದ್ದು ಅವರ ತಪ್ಪು ಎಂಬುದು ಕುಂತಕನ ಟೀಕೆ. ಆದರೆ ಅದನ್ನು 'ಅಲಂಕಾರ್ಯ' ಎಂದದ್ದರಿಂದ ಸಕಲ ಕಾವ್ಯಾಭಿವ್ಯಕ್ತಿಯೂ ಸ್ವಭಾವೋಕ್ತಿಯೇ ಎಂದು ಅವನು ಹೇಳಿದಂತಾಗುವುದಿಲ್ಲ; ಏಕೆಂದರೆ ಸ್ವಭಾವೋಕ್ತಿ ಭಿನ್ನವಾದ ರಸಾದಿ ಅಲಂಕಾರ್ಯ ಕಾವ್ಯಾಭಿವ್ಯಕ್ತಿಯ ಮನನೀಯ ಅಂಗವಾಗಿದೆ. ಕವಿಸ್ವಭಾವಕ್ಕೆ ಅನುಗುಣವಾದವು 'ಮಾರ್ಗಗಳು' ಹಾಗೂ ಅವುಗಳ ಲಾವಣ್ಯಾದಿ ಗುಣಗಳು ಎಂಬುದಷ್ಟೇ ಕುಂತಕನ ಹೊಸ ನಿಲವು.

ಹಾಗೆಯೇ ಪಾಶ್ಚಾತ್ಯರ ಕಾವ್ಯಸಿದ್ಧಾಂತಗಳಲ್ಲಿಯೂ imagination, fancy, inspiration, imagery, naturalism, realism, psychic distance, sign, symbol, expressionism, style, technique, metaphor, objective correlative, genius, imitation, creation ಇವೇ ಮುಂತಾದ ಮೂಲಭೂತ ಪರಿಕಲ್ಪನೆಗಳ ಚೇತೋಹಾರಿ ವ್ಯಾಖ್ಯೆ, ವಿವರಣೆ, ಇಲ್ಲಿ ಸಮಯೋಚಿತ ಲಕ್ಷ್ಯ-ಲಕ್ಷಣ-ಸಮನ್ವಯದ ವಿಧಾನದಿಂದ ಸೊಗಸಾಗಿ ಮೂಡಿಬಂದಿದೆ. ತೌಲನಿಕ ವಿವೇಚನೆಯೂ ಹೃದಯಂಗಮವಾಗಿದೆ. ನಮಗೆ ಎನಿಸುವಂತೆ ರೂಪಕದಲ್ಲಿರುವ 'ಅಧ್ಯಾರೋಪ'ದ ತತ್ತ್ವದಂತೆ 'ಅತಿಶಯೋಕ್ತಿ'ಯ ಬೀಜವಾದ 'ಅಧ್ಯವಸಾಯ'ದ ತತ್ತ್ವ ತುಂಬಾ ವಿಚಾರಯೋಗ್ಯವಾಗಿದೆ. ಕಾವ್ಯಾಭಿವ್ಯಕ್ತಿಯ ಪ್ರತಿಮಾವಿಧಾನದ ವಿವೇಚನೆ ಮಾಡುವಾಗ ಗಣನೆಗೆ ತೆಗೆದುಕೊಳ್ಳಬಹುದಾದ ಮತ್ತೆ ಕೆಲವು ಅಲಂಕಾರಗಳೆಂದರೆ 'ಅನ್ಯೋಕ್ತಿ' (ಅಥವಾ 'ಅಪ್ರಸ್ತುತಪ್ರಶಂಸೆ') 'ಸಮಾಸೋಕ್ತಿ', 'ಛೇಕೋಕ್ತಿ', 'ಪರ್ಯಾಯೋಕ್ತ' 'ಪ್ರೌಢೋಕ್ತಿ' ಮುಂತಾದವು. ಇವೆಲ್ಲ ಬರಿಯ ಸೀಮಿತ ಚಾಟುಪದ್ಯಗಳ ಅಲಂಕಾರಗಳಷ್ಟೇ ಆಗಿರದೆ ಒಂದೊಂದೂ ಒಂದು ಕಾವ್ಯಪ್ರಕಾರವಾಗುವಷ್ಟು ವಿಶಾಲ ವ್ಯಾಪ್ತಿಯನ್ನು ಹೊಂದಿವೆ.

ಇಲ್ಲಿರುವ 13 ನಿಬಂಧಗಳಲ್ಲೂ ಏಕರೀತಿಯಾಗಿ ಸ್ಫುಟಗೊಂಡಿರುವ ಅಂಶವೆಂದರೆ— ಯಾವ ಭಾರತೀಯ ಪರಿಕಲ್ಪನೆ ಎಷ್ಟರಮಟ್ಟಿಗೆ ಯಾವ ಪಾಶ್ಚಾತ್ಯ ಪರಿಕಲ್ಪನೆಗೆ ಸಂವಾದಿಯಾಗಿದೆ ಅಥವಾ ಆಗಬಲ್ಲದು ಎಂಬ ನಿರ್ದೇಶನ. ಇದೇ ನಿಜವಾಗಿ ಈ ಗ್ರಂಥದ ಅಂತಸ್ಸಾರ ಮತ್ತು ಲೇಖಕರು ಇಟ್ಟಿರುವ ದಟ್ಟಡಿ. ಇಂದು ವಿಶ್ವವಿದ್ಯಾಲಯಗಳ ಸ್ನಾತಕೋತ್ತರ ತರಗತಿಗಳಲ್ಲಿ ತೌಲನಿಕ ಸಾಹಿತ್ಯವಿಮರ್ಶೆಯನ್ನು ಒಂದು ಪತ್ರಿಕೆಗಾಗಿ ಅಧ್ಯಯನ ಮಾಡುವ ಸಾಹಿತ್ಯ ವಿದ್ಯಾರ್ಥಿಗಳಿಗೆ ವಿಚಾರಗಳ ಸಂಕೀರ್ಣತೆ ಹಾಗು ಅನಂತ ವೈಶಾಲ್ಯದಿಂದಾಗಿ ದಿಕ್ಕುಗಾಣದ ಪರಿಸ್ಥಿತಿಯಾಗಿದೆ. ಅವನ್ನೆಲ್ಲ ಒಂದು ವ್ಯವಸ್ಥಿತ ಅಚ್ಚುಕಟ್ಟಿಗೆ ಒಳಪಡಿಸಿ, ಎಲ್ಲ ಬಗೆಯ ಅಭಿಪ್ರಾಯಗಳನ್ನೂ ಸರಳವಾಗಿ ಬುದ್ಧಿಗ್ರಾಹ್ಯವಾಗುವಂತೆ, ನೇರವಾಗಿ ಹೃದಯಕ್ಕೆ ಮುಟ್ಟುವಂತೆ ಮಾಡುವಲ್ಲಿ ಈ ಲೇಖಕರು ಹೆಚ್ಚಿನ ಸಿದ್ಧಿಯನ್ನು ಸಾಧಿಸಿದ್ದಾರೆ. ಇಂಗ್ಲಿಷ್, ಕನ್ನಡ, ಸಂಸ್ಕೃತ ಮುಂತಾದ ಎಲ್ಲ ಪ್ರೌಢ ವಿದ್ಯಾರ್ಥಿಗಳಿಗೂ

ಇದು ತುಂಬಾ ಉಪಕಾರಕವಾಗಿದೆ; ಏಕೆಂದರೆ ಇಂದಿನ ಸಾಹಿತ್ಯ ವಿಚಾರಗಳಿಗೂ ಪೂರ್ವದ ವಿಚಾರಗಳಿಗೂ ಒಂದು ಸುಂದರವಾದ ಸೇತುವೆಯನ್ನು ಈ ಗ್ರಂಥ ಕಲ್ಪಿಸುತ್ತದೆ. ಜ್ಞಾತದಿಂದ ಅಜ್ಞಾತವನ್ನು ಪರಿಚಯಿಸುವ ಈ ಪ್ರಯತ್ನ ಪ್ರಶಂಸನೀಯ.

ಇದು ಅನೇಕ ಬಿಡಿ ಪ್ರಬಂಧಗಳ ಸಂಕಲನವಾಗಿರುವುದರಿಂದ ಎಲ್ಲವನ್ನೂ ಒಟ್ಟುಗೂಡಿಸುವ ಏಕಸೂತ್ರ ಸ್ಪಷ್ಟವಿಲ್ಲ. ಭಾವಗೀತೆ, ನಾಟಕ, ಮಹಾಕಾವ್ಯ—ಮುಂತಾದ ಕಾವ್ಯ ಪ್ರಕಾರಗಳನ್ನಾಧರಿಸಿದ ವಿಮರ್ಶೆಯ ತತ್ತ್ವಗಳಾಗಲಿ, ಒಂದೊಂದು ಕಾವ್ಯಪ್ರಕಾರದಲ್ಲೂ ನಿರ್ದಿಷ್ಟ ಕೃತಿಗಳ ಉತ್ಕೃಷ್ಟತೆಯ ತಾರತಮ್ಯಗಳನ್ನು ಅಳೆಯುವ ಮಾನದಂಡಗಳಿಗಾಗಲಿ, ಸಾಹಿತ್ಯವಿಮರ್ಶೆ ತಳೆಯಬಹುದಾದ ನಾನಾ ರೂಪಗಳಿಗಾಗಲಿ ಇಲ್ಲಿ ಹೆಚ್ಚಿನ ಪ್ರವೇಶ ದೊರೆತಿಲ್ಲ.

ಏನೆಂದರೂ, ಸಾಹಿತ್ಯವಿದ್ಯಾರ್ಥಿಗಳೇ ಇರಲಿ, ಸಾಹಿತ್ಯಾಸಕ್ತರೇ ಇರಲಿ, ಒಮ್ಮೆ ಓದತೊಡಗಿದರೆ ಕಡೆಯವರೆಗೂ ಅವರ ಆಸಕ್ತಿಯನ್ನು ಕೆರಳಿಸಿ ಸೆರೆಹಿಡಿಯುವಂತಿದೆ ಲೇಖಕರ ಭಾಷೆಯ ಸೊಬಗು ಹಾಗು ನಿರೂಪಣೆಯ ವೈಶದ್ಯ. ಇದು ಒಮ್ಮೆ ಓದಿ ಅತ್ತ ಇಡುವಂತಹ ಪುಸ್ತಕವಲ್ಲ. ಮತ್ತೆ ಮತ್ತೆ ಓದಿ, ಮತ್ತೆ ಮತ್ತೆ ಚಿಂತನ ಮಾಡಿ ಅರಗಿಸಿ ಕೊಳ್ಳಬೇಕಾದಂತಹ ಉತ್ತಮ ಗ್ರಂಥ. ಹೀಗೆ ಕವಿಪ್ರತಿಭೆ, ವಿಮರ್ಶಕಪ್ರಜ್ಞೆ, ಚಿಂತನಸ್ಫೂರ್ತಿ—ಮೂರೂ ಮೇಳೈಸಿ ಇಂದು ಬರೆಯಬಲ್ಲವರು ನಮ್ಮಲ್ಲಿ ಬಹಳ ಜನರಿಲ್ಲ.

**—ಡಾ॥ ಕೆ. ಕೃಷ್ಣಮೂರ್ತಿ**

*('ರುಜುವಾತು', ಜುಲೈ-ಸೆಪ್ಟೆಂಬರ್, ೧೯೮೪)*



## ಸಮಗ್ರ ಕಾವ್ಯ (ಪರಿಷ್ಕೃತ ಆವೃತ್ತಿ)

**ಪ್ರ: ಕಾಮಧೇನು ಪ್ರಕಾಶನ, ಬೆಂಗಳೂರು, 1997**

**ಪುಟ: 564; ಬೆಲೆ: ರೂ. 200**

---

ಸ್ವಾತಂತ್ರ್ಯೋತ್ತರ ಕಾಲದ ಕನ್ನಡದ ಪ್ರಮುಖ ಕವಿಗಳಲ್ಲಿ ಒಬ್ಬರು ಜಿ.ಎಸ್. ಶಿವರುದ್ರಪ್ಪನವರು. ಕವಿಯಾಗಿ, ವಿಮರ್ಶಕರಾಗಿ, ಅಚ್ಚುಮೆಚ್ಚಿನ ಪ್ರಾಧ್ಯಾಪಕರಾಗಿ, ಸಮರ್ಥ ಆಡಳಿತಗಾರರಾಗಿ ಖ್ಯಾತಿ ಪಡೆದಿರುವ ಜಿಎಸ್ಎಸ್ ಅವರ ಹನ್ನೆರಡು ಕವನ ಸಂಕಲನಗಳ ಸಮಗ್ರ ಕಾವ್ಯ ಪ್ರೊ. ಕೆ.ವಿ. ನಾರಾಯಣ ಅವರ ಅರ್ಥಪೂರ್ಣ ಮುನ್ನುಡಿಯೊಂದಿಗೆ ಮೊದಲ ಬಾರಿಗೆ 1987ರಲ್ಲಿ ಪ್ರಕಟವಾಯಿತು (ಹಾಗೆಯೇ ಅವರ ಸಮಗ್ರ ಗದ್ಯ—ಕೆಲವು ಪ್ರಮುಖ ವಿಮರ್ಶಾಕೃತಿಗಳನ್ನು ಹೊರತುಪಡಿಸಿ—ಮೂರು ಸಂಪುಟಗಳಲ್ಲಿ 94-96ರ ಅವಧಿಯಲ್ಲಿ ಪ್ರಕಟವಾಯಿತು.) ಇದೀಗ ಈ ಸಂಕಲನದ ಮೂರನೆಯ ಆವೃತ್ತಿ ಹೊರಬಂದಿದೆ.

1997ರಲ್ಲಿ ಹೊರಬಂದಿರುವ ಆವೃತ್ತಿಯನ್ನು 'ಪರಿಷ್ಕೃತ' ಆವೃತ್ತಿಯೆಂದು ಲೇಖಕರು ಕರೆದಿದ್ದಾರೆ. ಮೊದಲಿನ ಎರಡು ಆವೃತ್ತಿಗಳಲ್ಲಿ 'ಸಮಗ್ರ ಸಾಹಿತ್ಯ'ದ ಪರಿಕಲ್ಪನೆಯಂತೆ (ಇದರ ಫ್ರೆಂಚ್ ಮೂಲ ಚಾರಿತ್ರಿಕ ವಿಮರ್ಶಾ ಪರಿಕಲ್ಪನೆ 'ಊವ್ರ'- Oeuvre) ಎಲ್ಲಾ ಕವನಗಳೂ ಕಾಲಕ್ಕನುಗುಣವಾಗಿ ಜೋಡಿಸಲ್ಪಟ್ಟಿದ್ದರೆ, ಅಂತಹ "ಅನುಕ್ರಮವಾದ ಜೋಡಣೆಯನ್ನು ಈ ಸಂಪುಟದಲ್ಲಿ 'ಮುರಿದು', ಆ ಎಲ್ಲಾ ಕವಿತೆಗಳನ್ನು ಸ್ಥೂಲವಾದ ಒಂದು ವಸ್ತು ವಿಭಾಗದಲ್ಲಿ" ಅಳವಡಿಸಲಾಗಿದೆ. ಈ ಕ್ರಮದಿಂದಾಗಿ 'ಸಮಗ್ರ ಕಾವ್ಯ'ದ ಮೂಲ ಉದ್ದೇಶಕ್ಕೇ ಒಂದು ರೀತಿಯಲ್ಲಿ ಧಕ್ಕೆಯುಂಟಾಗಿದೆ: ವಸ್ತುವನ್ನಾಧರಿಸಿದ ಜೋಡಣೆಯಿಂದ, ವಿವಿಧ ಕಾಲಘಟ್ಟಗಳಲ್ಲಿ ಕವಿಯ ಮೇಲಾದ ಪ್ರಭಾವಗಳು, ಅವರ ಕಾವ್ಯ ಪ್ರಪಂಚವನ್ನು ಹೊಸತಾಗಿ ಪ್ರವೇಶಿಸಿದ / ಮರೆಯಾದ ವಸ್ತು-ವಿಷಯಗಳು, ಒಂದು ವಸ್ತುವಿನ ಬಗ್ಗೆಯೇ ಬದಲಾದ ಅಥವಾ ಬದಲಾಗದ ಧೋರಣೆಗಳು—ಇವುಗಳೇನನ್ನೂ ಈ ಪರಿಷ್ಕೃತ ಆವೃತ್ತಿಯಲ್ಲಿ ಸುಲಭವಾಗಿ ಗುರುತಿಸಲು ಸಾಧ್ಯವಿಲ್ಲ. ಆದರೆ, ಒಂದು ವಿಷಯದ / ವಸ್ತುವಿನ ಬಗ್ಗೆ ಇರುವ ಎಲ್ಲಾ ಕವನಗಳೂ ಒಂದೆಡೆ ಇರುವುದರಿಂದ ಪರಾಮರ್ಶನ ಸುಲಭವಾಗುತ್ತದೆ. ಅಲ್ಲದೆ, ಪ್ರತಿಯೊಂದು ಕವನದ ಕೆಳಗೆ ಅದು ಪ್ರಕಟಗೊಂಡ ಸಂಗ್ರಹದ ಹೆಸರು ಮತ್ತು ವರ್ಷಗಳನ್ನೂ ನಮೂದಿಸಿರುವುದರಿಂದ ಇಂತಹ ಜೋಡಣೆಯ ಇತಿಮಿತಿಗಳು ಕಮ್ಮಿಯಾಗುತ್ತವೆ.

ಇನ್ನೂ ಮುಂದುವರಿಯುವ ಮೊದಲು, ಆನುಷಂಗಿಕವಾಗಿ ಒಂದೆರಡು ನೆನಪುಗಳನ್ನು ಓದುಗರೊಡನೆ ಹಂಚಿಕೊಳ್ಳಬೇಕು. ನಾನು ಮಹಾರಾಜಾಸ್ ಕಾಲೇಜಿನ ಆನರ್ಸ್ ವಿದ್ಯಾರ್ಥಿಯಾಗಿದ್ದಾಗ (ಪ್ರಾಯಃ 54ರಲ್ಲಿ) ಒಂದು ಕಾರ್ಯಕ್ರಮದಲ್ಲಿ ಆಗತಾನೇ ಪ್ರಕಟಗೊಂಡಿದ್ದ ಜಿಎಸ್‌ಎಸ್ ಅವರ 'ಜಡೆ' ಕವನವನ್ನು ಪ್ರೊ. ಪ್ರಭುಶಂಕರ್ ಅತ್ಯಂತ ರಸವತ್ತಾಗಿ ಓದಿ, ಇಡೀ ಜೂನಿಯರ್ ಬಿಎ ಸಭಾಂಗಣವನ್ನು ರೋಮಾಂಚನಗೊಳಿಸಿದ್ದು ನನ್ನ ಹಸಿರು ನೆನಪುಗಳಲ್ಲಿ ಒಂದಾಗಿದೆ. ಅನಂತರ, ಸುಮಾರು ಒಂದು ದಶಕದವರೆಗೆ, ಅನೇಕ ಸಮಾರಂಭಗಳಲ್ಲಿ ಇವರ 'ಉಡುಗಣ ವೇಷ್ಟಿತ', 'ನೀಲಾಕಾಶದ ತಾರೆ ನೀನು' ಮುಂತಾದ ಕವನಗಳನ್ನು ಅನೇಕ ಗಾಯಕ-ಗಾಯಕಿಯರು ಮೈಸೂರು-ಬೆಂಗಳೂರು ನಗರಗಳಲ್ಲೇ ಅಲ್ಲದೆ, ದೂರದ ಸೊಲ್ಲಾಪುರದಲ್ಲಿಯೂ ಹಾಡಿ ಜನರಿಗೆ ಮುದನೀಡುತ್ತಿದ್ದುದು ನನಗೆ ನೆನಪಿದೆ. ಎಂದರೆ, ಬೇಂದ್ರೆ, ಕೆಎಸ್‌ನ ಅವರಂತೆ ಜಿಎಸ್‌ಎಸ್ ಅವರೂ ತಮ್ಮ ಗೇಯತೆಯ ಮೂಲಕ ಒಂದು ಕಾಲಕ್ಕೆ ಅತ್ಯಂತ ಜನಪ್ರಿಯವಾಗಿದ್ದ ಕವಿಗಳು.

ನೆನಪಿನ ಬಗ್ಗೆ ಮತ್ತೊಂದು ಮಾತು. ತಮ್ಮ ಮುನ್ನುಡಿಯಲ್ಲಿ 'ಸಾಹಿತ್ಯ ನಿಧಿ' ಎಂಬುದು ತಮ್ಮ ಮೊದಲ ಕವನ ಎಂದು ಲೇಖಕರು ಹೇಳುತ್ತಾರೆ. ಆದರೆ, ನನ್ನ ನೆನಪನ್ನು ನಂಬುವುದಾದರೆ, ಇವರ ಮೊದಲ ಕವನ ಕುವೆಂಪು ಅವರ "ಕಿಂದರಿ ಜೋಗಿ"ಯನ್ನು ಅನುಕರಿಸಿ ಬರೆದದ್ದು (ಕವನದ ಹೆಸರು ಮರೆತಿದೆ). ಅದರಲ್ಲಿ ಇಲಿಗಳ ಬದಲು ಬೆಕ್ಕುಗಳ ಕಾಟವಿತ್ತು. ಮತ್ತು ಅದೊಂದು ದೀರ್ಘ ಕವನ ಸ್ವತಂತ್ರವಾಗಿ ಅಚ್ಚಾಗಿತ್ತು.

ಏಳು ಭಾಗಗಳಲ್ಲಿ ವಸ್ತುವಿನುಗುಣವಾಗಿ (ಕಾವ್ಯವನ್ನು ಕುರಿತ ಸ್ವಾಭಿಮುಖೀ ಕವನಗಳು, ಪ್ರಕೃತಿಯ ವಿವಿಧ ರೂಪಗಳಿಗೆ ಸ್ಪಂದಿಸಿರುವ ಕವನಗಳು, ಪ್ರೀತಿ-ಸ್ನೇಹ-ದಾಂಪತ್ಯದ ಬಗ್ಗೆ ಬರೆದಿರುವ ಕವನಗಳು, ಇತ್ಯಾದಿ) ಜೋಡಿಸಲ್ಪಟ್ಟಿರುವ ಒಟ್ಟು 554 ಕವನಗಳನ್ನು ಓದಿದಾಗ ಜಿಎಸ್‌ಎಸ್ ಅವರ ಕಾವ್ಯದ ಬಗ್ಗೆ ಅನೇಕ ಅಂಶಗಳು ಸ್ಪಷ್ಟವಾಗುತ್ತವೆ. ಮೊದಲನೆಯದಾಗಿ, 'ನಂಬುಗೆಯ ಹಾದಿ' ಎಂಬ ಮುನ್ನುಡಿಯಲ್ಲಿ ಪ್ರೊ. ಕೆ.ವಿ. ನಾರಾಯಣ ಅವರು ಸರಿಯಾಗಿ ತೀರ್ಮಾನಿಸಿರುವಂತೆ, ಜಿಎಸ್‌ಎಸ್, ಕಣವಿ ಮುಂತಾದವರನ್ನು 'ಸಮನ್ವಯ ಕವಿಗಳು' ಎಂದು ಕರೆಯುವುದರಲ್ಲಿ ಏನೂ ಅರ್ಥವಿಲ್ಲ— ಅದೊಂದು "ನಿರುಪಯುಕ್ತ ಚೌಕಟ್ಟು". ರಮ್ಯ, ನವ್ಯ ಮುಂತಾದ ಪದಗಳು ಕೇವಲ ಕಾಲವನ್ನೇ ಅಲ್ಲದೆ ಸಂವೇದನೆಯ ಸ್ವರೂಪವನ್ನು ಮತ್ತು ಜೀವನ ದೃಷ್ಟಿಕೋನವನ್ನೂ ಸೂಚಿಸುತ್ತವೆ. ಆದ್ದರಿಂದ ಇವೆರಡು ಮಾರ್ಗಗಳನ್ನೂ ಜಿಎಸ್‌ಎಸ್ 'ಸಮನ್ವಯ' ಗೊಳಿಸುತ್ತಾರೆಂಬುದು ಅಷ್ಟೇನೂ ಅರ್ಥಪೂರ್ಣವಾಗುವುದಿಲ್ಲ. ಹಾಗಾದರೆ, ಜಿಎಸ್‌ಎಸ್ ಅವರ ಕಾವ್ಯಸ್ವರೂಪ ಬದಲಾಗುವುದೇ ಇಲ್ಲವೇನು? ಕಾರ್ತೀಕ ಕವನ ಸಂಕಲನದಲ್ಲಿ ಮುಖ್ಯವಾಗಿ *ಗೋಡೆ*, ಕಾಡಿನ ಕತ್ತಲೆಯಲ್ಲಿ ಸಂಕಲನಗಳಲ್ಲಿ, ಭಾಷೆ-ಭಾವಗಳೆರಡರ ನೆಲೆಯಲ್ಲಿಯೂ ಎದ್ದುಕಾಣುವ ಬದಲಾವಣೆಯನ್ನು ಹೇಗೆ ಗುರುತಿಸಬೇಕು?

ಈ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕುತ್ತಾ ಹೋದಂತೆ, ನಮಗರಿವಾಗುವ ಒಂದು ಮುಖ್ಯ ಸಂತಿಯೆಂದರೆ ಜಿಎಸ್‌ಎಸ್ 'ಸಮನ್ವಯ ಕವಿಗಳಲ್ಲ—ಸೂಕ್ಷ್ಮ ಸ್ವಪ್ರಜ್ಞೆಯ ಕವಿಗಳು' ಎಂಬುದು. ಈ ಹೇಳಿಕೆಯನ್ನು ವಿವರಿಸಬೇಕಾದರೆ ಜಿಎಸ್‌ಎಸ್ (ಮತ್ತು ಅವರಂತೆಯೇ ಅಡಿಗ, ಕಣವಿ ಇತ್ಯಾದಿ) ಕಾವ್ಯ ರಚನೆಗೆ ಕೈಹಾಕುವ ಸಂದರ್ಭದಲ್ಲಿ ಕುವೆಂಪು ಅತ್ಯಂತ ಎತ್ತರಕ್ಕೆ ಬೆಳೆದಿದ್ದರು—ಎಷ್ಟು ಎತ್ತರಕ್ಕೆಂದರೆ ಭಾಷೆ ಮತ್ತು ಆಕೃತಿಗಳಲ್ಲಿ ಅವರ ಪ್ರಭಾವದಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇರಲಿಲ್ಲ. ಆದ್ದರಿಂದಲೆ, ನಿರೀಕ್ಷೆಯಂತೆ ಜಿಎಸ್‌ಎಸ್ ಅವರ *ಸಾಮಗಾನ* ಸಂಕಲನದ ಪ್ರತಿಯೊಂದು ಕವನದ ಮೇಲೂ ಕುವೆಂಪು ಪ್ರಭಾವ ದಟ್ಟವಾಗಿರುವುದು ಕಾಣಿಸುತ್ತದೆ. ಈ ಸಂದರ್ಭದಲ್ಲಿ ಕವಿ ತನ್ನನ್ನು 'ದ್ರಷ್ಟಾರ'ನಂತೆ ಪರಿಭಾವಿಸಿ, ಇತರರನ್ನು ಎಚ್ಚರಿಸುವ ಕೆಲಸವನ್ನು ಕಾವ್ಯದ ಮೂಲಕ ಮಾಡಲು ಪ್ರಯತ್ನಿಸುತ್ತಾರೆ. 'ಕೂಗಿದೆ ಕೇಳಿ', 'ಮೂಡುವನದೋ ಹೊಸ ವರುಷದ ರವಿ', 'ನೋಡಿದೋ ಬ್ರಹ್ಮಗಿರಿ'—ಇತ್ಯಾದಿ ಸಂಬೋಧನೆಗಳು ಮೊದಲ ಕವನ ಸಂಕಲನಗಳ ಹೆಚ್ಚಿನ ಕವನಗಳಲ್ಲಿ ಕಂಡುಬರುತ್ತವೆ. ಮತ್ತೆ ಭಾಷೆಯೂ ಕುವೆಂಪು ಭಾಷೆಯೆ: 'ಪ್ರಾಚೀ ದಿಗ್ವಧುವಿನ ವದನ', 'ಸ್ವರ್ಣಸಲಿಲ', 'ವಿಶ್ವದಶ್ರುಗಾನ' ಇತ್ಯಾದಿ. ಈ ಅಂಶಕ್ಕೆ ಹೆಚ್ಚು ಸಮರ್ಥನೆ ಬೇಕಾಗಿಲ್ಲ.

ಇಲ್ಲಿ ನಾವು ಗಮನಿಸಬೇಕಾದ ಸಂಗತಿಯೆಂದರೆ ಜಿಎಸ್‌ಎಸ್ ಅವರಿಗೂ ಈ ಅಂಶದ ಅರಿವಿತ್ತು; ಇದನ್ನೇ ನಾನು ಸ್ವಪ್ರಜ್ಞೆಯೆಂದು ಕರೆದದ್ದು. ಇಂತಹ ಸ್ವವಿಮರ್ಶೆಯನ್ನು ನಾವು ಅವರ ಅನೇಕ ಕವನಗಳಲ್ಲಿ ಗುರುತಿಸುತ್ತೇವೆ.

**ಎಳೆದ, ಮೆತ್ತಗೆ ಎಳೆದ; ಅದೋ ಬಂತು, ಬಂದೇ**
**ಬಂತು. ನೋಡಿದರೆ ಮೀನಲ್ಲ; ಹಳೆಯ ಟನ್ನು** *(ಗಾಳ)*

**'....... ಅದು ಹುಡುಕಿ**
**ತಂದದ್ದು ನಾ ಹೊಡೆದ ಹಕ್ಕಿಯನ್ನಲ್ಲ; ನಿನ್ನೆ-**
**ಯೋ ಮೊನ್ನೆಯೋ ಯಾರೋ ಹೊಡೆದ ಬೇರೊಂದು ಹಕ್ಕಿಯನ್ನು!'**

*(ಷಿಕಾರಿ)* ಇತ್ಯಾದಿ.

ಕುವೆಂಪು ಪ್ರಭಾವದಿಂದ ಹೊರಬಂದು ತನ್ನ ಸ್ವಂತಿಕೆಯನ್ನು ಕಂಡುಕೊಳ್ಳಲು ಐವತ್ತರ ದಶಕದ ಕೊನೆಯಲ್ಲಿ ಪ್ರಭಾವಶಾಲಿಯಾಗುತ್ತಿದ್ದ ನವ್ಯ ಕಾವ್ಯದ ಭಾಷೆಯನ್ನು ಜಿಎಸ್‌ಎಸ್ ತಮ್ಮದಾಗಿಸಿಕೊಂಡರು. ಬದಲಾದ ಭಾಷೆಯ ಜತೆಯಾಗಿ, ತನ್ಮಯತೆಯ ಸ್ಥಾನದಲ್ಲಿ ವಿಮರ್ಶಾತ್ಮಕ ಎಚ್ಚರ, ಆರಾಧನಾ ಧಾಟಿಯ ಸ್ಥಾನದಲ್ಲಿ ಪರೀಕ್ಷಕ ಧೋರಣೆ ಮತ್ತು ಸಂಭ್ರಮದ ಸ್ಥಾನದಲ್ಲಿ ವಿಷಾದ—ಇವುಗಳು ಬಂದುವು. ಈ ಗುಣಗಳೇ ಅವರ *ಗೋಡೆ*, *ಕಾಡಿನ ಕತ್ತಲೆಯಲ್ಲಿ*, *ಚಕ್ರಗತಿ* ಮುಂತಾದ ಸಂಕಲನಗಳನ್ನು ರೂಪಿಸಿರುವುದನ್ನು ನಾವು ಕಾಣುತ್ತೇವೆ.

ಈ ನೆಲೆಯಲ್ಲಿ, ಎಂದರೆ ಸ್ವಾಭಿಮುಖತೆಯ ನೆಲೆಯಲ್ಲಿ, ಜಿಎಸ್ಎಸ್ ಅವರಿಗೂ ಅಡಿಗರಿಗೂ ಅನೇಕ ಸಮಾನ ಅಂಶಗಳಿವೆ. ರಮ್ಯ ಸಂಪ್ರದಾಯದಲ್ಲಿ ಪ್ರಾರಂಭಿಸಿ, ಸಾಕಷ್ಟು ಯಶಸ್ಸು ಗಳಿಸಿದ ನಂತರ, "ಅನ್ಯರೊರೆದುದನೆ ಬರೆದುದನೆ ನಾ ಬರೆಬರೆದು। ಬಿನ್ನಗಾಗಿದೆ ಮನವು" ಎಂಬ ಅರಿವಿನೊಡನೆ ಅಡಿಗರು ತಮ್ಮ ಅನುಭವದ ಅಭಿವ್ಯಕ್ತಿಗೆ ನೂತನ ಮಾರ್ಗವನ್ನು ಕಂಡುಕೊಂಡರು. ಹಾಗೆಯೇ, ಜಿಎಸ್ಎಸ್ ಅವರ 'ಸ್ವಗತ' (1981) ಮತ್ತು ಅಡಿಗರ 'ಕೂಪ ಮಂಡೂಕ', 'ಪಂಡಿತರಿಗೆ' ಮತ್ತು 'ಅರ್ಥವಾಗುವಂತೆ'— ಇವೇ ಮುಂತಾದ ಕವನಗಳಲ್ಲಿ ಅನೇಕ ಸಮಾನ ಅನುಭವಾಂಶಗಳನ್ನು ಕಾಣುತ್ತೇವೆ. ಒಂದು ಮುಖ್ಯ ವ್ಯತ್ಯಾಸವೆಂದರೆ, ಅಡಿಗರ ನವ್ಯ ಕಾವ್ಯದ ರಾಜಕೀಯ ಆಯಾಮ ಜಿಎಸ್ಎಸ್ ಅವರ ಕಾವ್ಯಕ್ಕೆ ಇಲ್ಲ. ಜಿಎಸ್ಎಸ್ ಅವರ ಕಾವ್ಯದ ಆಧ್ಯಾತ್ಮಿಕ ಆಯಾಮ ಅಡಿಗರಲ್ಲಿಲ್ಲ.

ಜಿಎಸ್ಎಸ್ ಅವರ ನಾಲ್ಕು ದಶಕಗಳ ಕಾವ್ಯದುದ್ದಕ್ಕೂ ಕಂಡುಬರುವ ಒಂದು ಪ್ರಮುಖ ಚಿಂತನಾಧಾರೆಯೆಂದರೆ ಬದುಕಿನಲ್ಲಿ ಹಾಸುಹೊಕ್ಕಾಗಿರುವ ಕ್ರೂರ ವ್ಯಂಗ್ಯ ವೈರುಧ್ಯಗಳು. ಇವರ ಪ್ರಥಮ ಸಂಕಲನವಾದ 'ಸಾಮಗಾನ'ದಲ್ಲಿಯೇ ಈ ಸಂಗತಿಯ ಅರಿವು ಕಂಡು ಬರುತ್ತದೆ, ( ಮತ್ತು ಇವರದು ಕುವೆಂಪು ಮಾದರಿಯಿಂದ ಬೇರೆಯಾದದ್ದು ಎಂಬುದನ್ನು ಸ್ಪಷ್ಟಪಡಿಸುತ್ತದೆ). 'ತಂತುಕೃತಿ' ಎಂಬ ಕವನ ಪ್ರಾರಂಭದಲ್ಲಿ ಒಂದು ಜೇಡನ ಬಲೆಯ ಸೂಕ್ಷ್ಮ ಕಲೆಯನ್ನು ಚಿತ್ರಿಸುತ್ತದೆ. ಆದರೆ, ಅನತಿ ಕಾಲದಲ್ಲಿಯೇ ಆ "ಸುಂದರ ಸೊಬಗಿನ ಬಲೆ" ಒಂದು ಕೀಟಕ್ಕೆ ಯಮಬಂಧವಾಗುತ್ತದೆ. ಆ ಸಂದರ್ಭವನ್ನು ಕವಿ ಹೀಗೆ ವರ್ಣಿಸುತ್ತಾರೆ:

'ಮೈ ನಡುಗಿತು; ಸಿಡಿದೊಡೆಯಿತು ಸೌಂದರ್ಯ!
ಸಾವು ಬದುಕಿನ ಹೋರಾಟದ ಕ್ರೌರ್ಯ
ಎದೆ ತುಂಬಿತು.....
ಎಂದಿನ ತೆರದಲಿ ಹೊಂಬಿಸಿಲಿಳಿಯನು
ಚುಂಬನಗೈದಿತ್ತು!"

'ಪ್ರೀತಿ-ರೋಷದ ನಡುವೆ ಉರುಳಿ ಹೊರಳುವ, ಬದುಕಿನ ಬಗ್ಗೆ ಇಂತಹುದೇ ಚಿಂತನೆ ಇವರ ಅನೇಕ ಕವನಗಳಲ್ಲಿ ಕಂಡುಬರುತ್ತದೆ. ಸೃಷ್ಟಿಕಾರಣ ಶಕ್ತಿ ಎಷ್ಟು ವಿಕ್ಷಿಪ್ತವೆಂದರೆ, ಅದು "ಕಿತ್ತುಕೊಂಡಲ್ಲದೆಯೇ ಎಂದೆಂದಿಗೂ ಕೊಡದ । ಆ ಕೃಪಣತಂತ್ರ" (ಕಾಡಿನ ಕತ್ತಲೆಯಲ್ಲಿ, 1981) ಮರಗಳ ಕೆಳಗೆ ಸಲ್ಲಾಪಮಾಡುವ ಹುಡುಗ-ಹುಡುಗಿಯರಿಗೆ:

'ಪಾಪ, ಗೊತ್ತಿಲ್ಲ ಅವರಿಗೆ, ಮೇಲಿನ ಬಣ್ಣ
ಕೆಲವು ದಿನಕ್ಕೇ ಉದುರಿ, ಮತ್ತೆ ಮರ

ಬೋಳಾಗುವುದು; ಬೇರಿಂದ ಕೊಂಬೆಗೆ
ನೆಗೆದ ಈ ಉತ್ಸಾಹ ಕೆಲವು ದಿನ ಹಾರಾಡಿ
ಕೆಳಕ್ಕೆ ಉದುರಿ, ತರಗಾಗುತ್ತ ಬಾಡುವುದು' *(ವರ್ಷಕ್ಕೊಮ್ಮೆ, 1987)*

ಈ ತಾತ್ವಿಕ ಚಿಂತನೆ ಇವರ ಕೊನೆಯ ಸಂಕಲನವಾದ "ಚಕ್ರಗತಿ"ಯ ಕವಿತೆಯೊಂದರಲ್ಲಿ ಪರಿಣಾಮಕಾರಿಯಾಗಿ ಈ ಸಾಲುಗಳಲ್ಲಿ ರೂಪು ಪಡೆಯುತ್ತದೆ:

'ನಾವು ಮಾತ್ರ ಈ ನೆಲದಲ್ಲಿ ಕಾಲೂರಿ
ನಿಂತಿದ್ದರೂ, ಮತ್ತೆ ಈ ನೆಲದ
ಮಣ್ಣಿಗಂಟಕೊಂಡೇ ಬದುಕುವವರು,
ಆದರೂ ಒಂದೊಂದು ಸಲ
ಆಕಾಶದ ಕನಸು ಕಾಣುವವರು!' *(ನಾವು ಮತ್ತು ಮರಗಳು, 1992)*

(ಈ ಸಂದರ್ಭದಲ್ಲಿ, ಹಿಂದೆ ಸೂಚಿಸಿದ ಸಾಮ್ಯವನ್ನೇ ಮುಂದುವರಿಸುವುದಾದರೆ, ಅಡಿಗರ ಕಾವ್ಯದುದ್ದಕ್ಕೂ ಕಂಡುಬರುವ 'ಬೃಂದಾವನದ X ಮಣ್ಣಿನ ಕಣ್ಣು; ಆಕಾಶ ಯಾನದ ಕನಸು X ಅಸ್ಥಿಪಂಜರಬದ್ಧ ಪ್ರಾಣಿ'—ದ್ವಂದ್ವ ರೂಪಕ ನೆನಪಿಗೆ ಬರುತ್ತದೆ).

1970 ರಿಂದಾಚೆಗೆ ಹೊರಬಂದ ಜಿಎಸ್‌ಎಸ್ ಅವರ *ಗೋಡೆ* (1972), *ಕಾಡಿನ ಕತ್ತಲೆಯಲ್ಲಿ* (1991), *ಪ್ರೀತಿ ಇಲ್ಲದ ಮೇಲೆ* (1987) ಮತ್ತು *ಚಕ್ರಗತಿ* (1992) ಕವನಸಂಕಲನಗಳಲ್ಲಿ, ಹೆಚ್ಚಿನ ಕವನಗಳ ಸ್ವರೂಪ ವಿಡಂಬನೆ, ಇತ್ತೀಚಿನ ಸಂದರ್ಶನ ವೊಂದರಲ್ಲಿ ಅವರೇ ಇಂತಹ ವಿಡಂಬನೆಯ ಆಳದಲ್ಲಿರುವ ತಾತ್ವಿಕ ನಿಲುವನ್ನು ಹೀಗೆ ವಿವರಿಸುತ್ತಾರೆ:

"ಜಾತಿ ಭಾಷೆ, ವರ್ಣ ಎಲ್ಲವೂ ಮನುಷ್ಯ ಸಂಬಂಧದ ವಿಘಟನೆಗೆ ಕಾರಣವಾಗಿದೆ.... ರಾಂಗ್ ನಂಬರ್‌ಗೆ ಟೆಲಿಫೋನ್ ಮಾಡಿ ಉತ್ತರಕ್ಕೆ ಕಾಯುತ್ತ ಕೂತಿದ್ದೇವೆ. ಇದು ನಮ್ಮ ದಯನೀಯ ಪರಿಸ್ಥಿತಿ" ('ಪ್ರಜಾವಾಣಿ' 20-12-98).

ರಾಜಕೀಯ- ಸಾಮಾಜಿಕ- ಸಾಹಿತ್ಯಿಕ ಕ್ಷೇತ್ರಗಳ ಇಂತಹ 'ದಯನೀಯ ಪರಿಸ್ಥಿತಿ'ಯನ್ನು ಇವರ ವಿಡಂಬನಾತ್ಮಕ ಕವನಗಳು ಬಯಲು ಮಾಡುತ್ತವೆ. ಆದರೆ, ಇಲ್ಲಿ ನಾವು ಮರೆಯಬಾರದ ಒಂದು ಅಂಶವೆಂದರೆ, ಸಾಧಾರಣವಾಗಿ ವಿಡಂಬನಕಾರ ತಾನು ವಿಡಂಬಿಸುವ ಸಮಾಜದಿಂದ / ಸಮುದಾಯದಿಂದ ಹೊರಗೆ ತನ್ನನ್ನು ಗುರುತಿಸಿಕೊಳ್ಳುತ್ತಾನೆ. ಆದರೆ ಜಿಎಸ್‌ಎಸ್ ಅವರಿಗೆ ತಾವೂ ಅಂತಹ ಸಮಾಜದ / ಸಮುದಾಯದ ಒಂದು ಭಾಗವೇ ಎಂಬ ಅರಿವು ಸರ್ವದಾ ಜಾಗ್ರತವಾಗಿರುತ್ತದೆ. ಈ ದಿಕ್ಕಿನಲ್ಲಿ, ಸೃಷ್ಟಿಪುರಾಣವನ್ನು ಪುನರ್ವ್ಯಾಖ್ಯಾನಿಸುವ ಅವರ ಒಂದು ಪ್ರಮುಖ ಕವನ "ಹೊಸ ಹುಟ್ಟು". ಬೈಬಲ್ಲಿನ ನೋಆ ಕಥೆಗೆ ಸಮಾನಾಂತರವಾಗಿ ಬರುವ ಈ ಕವನದಲ್ಲಿ ಮೀನು ಬರುವ ಜಲಪ್ರಳಯದಿಂದ ಉಳಿಯಲು ಒಂದು ಹಡಗನ್ನು ಕಟ್ಟುವಂತೆ ಮನುವಿಗೆ ಹೇಳುತ್ತದೆ. ಮನು ಹೀಗೆ ಉತ್ತರಿಸುತ್ತಾನೆ:

'ನಾನೊಲ್ಲೆ
ಇರುವ ಈ ಎಲ್ಲವನ್ನೂ ನಿರ್ನಾಮಗೊಳಿಸಿ
ನಾಳಿನ ದಿವಸ ನಾನು ನನ್ನ ಪರಿವಾರ
ಉಳಿದು ಬದುಕುವ ಭಾಗ್ಯ ನನಗೆ ಬೇಡ.
ನೀ ವರ್ಣಿಸಿದ ವಾಸ್ತವದ ಒಂದಂಶ
ನಾನೂ ಕೂಡ'

*(ಪ್ರೀತಿ ಇಲ್ಲದ ಮೇಲೆ, 1987)*

'ವಾಸ್ತವದ ಒಂದಂಶ ನಾನೂ ಕೂಡ'—ಇಂತಹ ಆರೋಗ್ಯಕರ ಸ್ವಪ್ರಜ್ಞೆ ಶ್ರೇಷ್ಠ ಸೃಜನಶೀಲ ಸಾಹಿತ್ಯದ ಒಂದು ಅವಿಭಾಜ್ಯ ಅಂಗ.

—ಡಾ|| ಸಿ. ಎನ್. ರಾಮಚಂದ್ರನ್

*(ಪ್ರಜಾವಾಣಿ: ಸಾಪ್ತಾಹಿಕ ಪುರವಣಿ-7.2.1999)*



## ಸಮಗ್ರ ಕಾವ್ಯ

**ಪ್ರ: ಸ್ನೇಹ ಪ್ರಕಾಶನ, ಬೆಂಗಳೂರು, 1987**

---

**ಜಿ.**ಎಸ್. ಶಿವರುದ್ರಪ್ಪನವರು 1947 ರಿಂದ ಇಲ್ಲಿಯವರೆಗೆ ಬರೆದ ಮತ್ತು ಅನುವಾದಿಸಿದ ಐದುನೂರಾ ಆರು ಕವನಗಳ ಬೃಹತ್ ಸಂಪುಟ "ಸಮಗ್ರ ಕಾವ್ಯ" ಈಗ ಪ್ರಕಟವಾಗಿದೆ. "ಸಾಮಗಾನ" (1947-51), "ಚೆಲುವು ಒಲವು" (51-53), "ದೇವಶಿಲ್ಪ" (53-56), "ದೀಪದ ಹೆಜ್ಜೆ" (56-59), "ಕಾರ್ತೀಕ" (59-61), "ಅನಾವರಣ" (61-63), "ತೆರೆದ ದಾರಿ" (63-66), "ಗೋಡೆ" (66-72), "ಕಾಡಿನ ಕತ್ತಲಲ್ಲಿ" (72-81), "ಪ್ರೀತಿ ಇಲ್ಲದ ಮೇಲೆ" (82-87) ಮತ್ತು "ತೀರ್ಥವಾಣಿ" (ಬಂಗಾಳಿ ಭಕ್ತಿಗೀತೆಗಳ ಅನುವಾದ: 1953) ಎಂಬ ಹನ್ನೊಂದು ಸಂಕಲನಗಳಲ್ಲಿ ಹಂಚಿಹೋಗಿದ್ದ ಕವನಗಳು ಈಗ ಒತ್ತಟ್ಟಿಗೆ ಸಿಗುವ ಹಾಗಿದೆ.

ಕಳೆದ ನಾಲ್ಕು ದಶಕಗಳಿಂದ ಸತತವಾಗಿ ಕಾವ್ಯ ರಚಿಸಿಕೊಂಡು ಬರುತ್ತಿರುವ ಶಿವರುದ್ರಪ್ಪನವರು ಕಾವ್ಯವನ್ನು ಮನೋಧರ್ಮವೆಂಬಂತೆ ಉಳಿಸಿಕೊಂಡು ಬಂದಿದ್ದಾರೆ. ಅಂದರೆ ಇವರಿಗೆ ಕಾವ್ಯವೆನ್ನುವುದು ಸತತ ಶ್ರಮದಿಂದ ಪ್ರಜ್ಞಾಪೂರ್ವಕ ರೂಢಿಸಿಕೊಂಡ ಕೃಷಿಯಲ್ಲ. ಅಥವಾ ಕೇವಲ ಪ್ರಯತ್ನಗಳಿಂದಲೇ ಸಾಧಿಸಬೇಕಾದ ಗುರಿಯೂ ಅಲ್ಲ. ಶಿವರುದ್ರಪ್ಪನವರಿಗೆ ಕಾವ್ಯವೆನ್ನುವುದು ಒಂದು ಮನೋಧರ್ಮ, ಜೀವನಶೈಲಿ. ಹಾಗಾಗಿ ಇವರು ಕಾವ್ಯಸಿದ್ಧಾಂತ, ಪಂಥಗಳ ಗೋಜು ಹಚ್ಚಿಕೊಳ್ಳದೆ ಬರೆದರು. ಪಂಡಿತರಿಗಾಗಿ, ವಿಮರ್ಶಕರಿಗಾಗಿ ಬರೆಯದೆ ಸಹೃದಯರನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಬರೆದರು. ಶಿವರುದ್ರಪ್ಪನವರಿಗೆ ಕಾವ್ಯವೆನ್ನುವುದು ಭಾಷೆಯೊಂದಿಗೆ ಆಟವೂ ಅಲ್ಲ. ಅವರ ಕಾವ್ಯ ಪ್ರಧಾನವಾಗಿ ನೇರ, ಸರಳ. ಕಾವ್ಯವೆಂದರೆ ಬದುಕನ್ನು ಗ್ರಹಿಸುವ, ಬದುಕಿಗೆ ಪ್ರತಿಕ್ರಿಯಿಸುವ ಒಂದು ರೀತಿ ಮಾತ್ರ. ಹೀಗಾಗಿ ಶಿವರುದ್ರಪ್ಪನವರ ಕಾವ್ಯದಲ್ಲಿ ಬೆಚ್ಚಿಬೀಳಿಸುವಂಥ ಅನುಭವ ಸಾಮಗ್ರಿಯೂ ಇಲ್ಲ; ಭಾಷೆಯೊಂದಿಗೆ ಆಟವಾಡುತ್ತ ಓದುಗನನ್ನು ಮಂತ್ರಮುಗ್ಧಗೊಳಿಸುವಂಥ ಕುಶಲತೆಯೂ ಇಲ್ಲ. ಇವೆರಡೂ ಇಲ್ಲದೆಯೂ ಶಿವರುದ್ರಪ್ಪನವರು ಒಬ್ಬ ಯಶಸ್ವಿ ಕವಿಯಾಗಿ ಉಳಿದುಬಂದಿದ್ದಾರೆ ಎಂಬುದು ಮುಖ್ಯ. ಭಾವ ಪ್ರಾಮಾಣಿಕತೆಯೊಂದನ್ನೇ ನೆಚ್ಚಿಕೊಂಡು ಸುತ್ತಲ ಬದುಕು ತನ್ನ ಮನಸ್ಸಿನಲ್ಲಿ ಹುಟ್ಟಿಸಿದ ತರಂಗಗಳನ್ನು ಸಹಜವೆಂಬಂತೆ ಹಾಡುತ್ತ ಬಂದಿರುವ ಕವಿ ಅದರ ಸೋಲು ಗೆಲುವುಗಳ ಬಗ್ಗೆ ಅಷ್ಟಾಗಿ

ತಲೆ ಕೆಡಿಸಿಕೊಂಡವರಲ್ಲ. ತಮ್ಮ ಕಾವ್ಯದ ಬಗ್ಗೆ ಯಾವುದೇ ಭ್ರಮೆಗಳನ್ನು ಇಟ್ಟುಕೊಂಡಿಲ್ಲದೆ ಅಥವಾ ಅನಗತ್ಯ ಕೀಳರಿಮೆ ಇಟ್ಟುಕೊಳ್ಳದೆ ಕಾವ್ಯವೆನ್ನುವುದು ತಮ್ಮ ಗ್ರಹಿಕೆ ಮತ್ತು ಅಭಿವ್ಯಕ್ತಿಗಳ ಏಕೈಕ ಅನಿವಾರ್ಯ ಮಾರ್ಗವೆಂಬಂತೆ ಶಿವರುದ್ರಪ್ಪನವರು ಕಾವ್ಯ ರಚಿಸುತ್ತ ಬಂದಿದ್ದಾರೆ. ಹೀಗಾಗಿ ಹಾಡು ಅವರಿಗೆ ಕ್ರೀಡೆಯೂ ಅಲ್ಲ; ವಿಲಾಸವೂ ಅಲ್ಲ. ಅದೊಂದು ಸಂವಹನೆಯ ಕ್ರಮ. ಶಿವರುದ್ರಪ್ಪನವರ ಕಾವ್ಯ ಸಾಧನೆಯನ್ನು ಈ ಹಿನ್ನೆಲೆಯಲ್ಲಿ ಗಮನಿಸಬೇಕು. ಶಿವರುದ್ರಪ್ಪನವರ ಕವನಗಳಲ್ಲಿಯೇ ಅವುಗಳ ಉದ್ದೇಶ, ಸ್ವರೂಪಗಳ ಪ್ರಸ್ತಾಪವೂ ಇದೆ. "ತೃಪ್ತಿ" ಎಂಬ ಕವನವನ್ನು ನೋಡಿ:

ಎದೆ ತುಂಬಿ ಹಾಡಿದೆನು ಅಂದು ನಾನು
ಮನವಿಟ್ಟು ಕೇಳಿದಿರಿ ಅಲ್ಲಿ ನೀವು
ಇಂದು ನಾ ಹಾಡಿದರು ಅಂದಿನಂತೆಯೆ ಕುಳಿತು
ಕೇಳುವಿರಿ ಸಾಕೆನಗೆ ಅದುವೆ ಬಹುಮಾನ
ಹಾಡು ಹಕ್ಕಿಗೆ ಬೇಕೆ ಬಿರುದು ಸನ್ಮಾನ?
ಎಲ್ಲ ಕೇಳಲಿ ಎಂದು ನಾನು ಹಾಡುವುದಿಲ್ಲ,
ಹಾಡುವುದು ಅನಿವಾರ್ಯ ಕರ್ಮ ನನಗೆ.
ಕೇಳುವವರಿಹರೆಂದು ನಾಬಲ್ಲೆನದರಿಂದ
ಹಾಡುವೆನು ಮೈದುಂಬಿ ಎಂದಿನಂತೆ.
ಯಾರು ಕಿವಿ ಮುಚ್ಚಿದರು ನನಗಿಲ್ಲ ಚಿಂತೆ.

"ಹಿನ್ನುಡಿ" ಎಂಬ ಇನ್ನೊಂದು ಕವನದಲ್ಲಿ ಕವಿ ಹೇಳುತ್ತಾರೆ:

ಅದೂ ಬೇಕು ಇದೂ ಬೇಕು
ಎಲ್ಲವೂ ಬೇಕು ನನಗೆ
ದಾರಿ ನೂರಾರಿವೆ ಬೆಳಕಿನರಮನೆಗೆ
ಬೇಡ ನನಗೆ ಸಿದ್ಧಾಂತಗಳ ರಾದ್ಧಾಂತ;
ನನಗಿಲ್ಲ, ಇದೇ ಸರಿ ಇಷ್ಟೇ ಸರಿ ಎನುವ ಪಂತ
ನಾ ಬಲ್ಲೆ, ಇವು ಎಲ್ಲ ಏರುವೆಯ
ಒಂದೊಂದು ಹಂತ.
ನೂರಾರು ಭಾವದ ಬಾವಿ; ಎತ್ತಿಕೋ
ನಿನಗೆ ಬೇಕಾದಷ್ಟು ಸಿಹಿನೀರ.
ಪಾತ್ರೆಯಾಕಾರಗಳ ಕುರಿತು ಏತಕೆ ಜಗಳ?
ನಮಗೆ ಬೇಕಾದದ್ದು ದಾಹ ಪರಿಹಾರ.

"ಕಾವ್ಯ ಕೃಪೆ", "ಕಾವ್ಯ ಮಾರ್ಗ", "ಹಳೆಯ ಹಾಡು", "ರಾಗಾನ್ವೇಷಣೆ", "ಇರುಳ ಮೌನಗಳಲ್ಲಿ", "ಮರಕುಟುಕ ಹಕ್ಕಿಗೆ", "ಒಳದನಿ", "ಕವಿಯ ಮನಸು", "ಪ್ರಕೃತಿ-ಕವಿ", "ಕಾವ್ಯಕೆ ನಮನ", "ಕವಿ, ಕಾವ್ಯಕ್ಕೆ", "ಕವಿತೆಗೆ", "ಕವಿ-ವೇದಾಂತಿ", "ಕವಿತೆ ಬರೆಯುವುದು ಹೇಗೆ?", "ಈ ಕವಿತೆ", "ಸಂಪಾದಕರಿಗೆ", "ಕವಿ-ಕಿವಿ", "ನಾನು ಬರೆಯುತ್ತೇನೆ", "ನಾನೇಕೆ ಬರೆಯುತ್ತೇನೆ" ಮುಂತಾದ ಕವನಗಳಲ್ಲಿ ಶಿವರುದ್ರಪ್ಪನವರು ತಮ್ಮ ಕಾವ್ಯದ ಲಕ್ಷಣಗಳನ್ನು ಸೂಚ್ಯವಾಗಿ ಹೇಳಿಕೊಂಡಿದ್ದಾರೆ. ಅವರದು ಮಂದ್ರ ಸ್ವರ. ಮೃದುವಾಗಿ ಮೆಲುಸ್ತರದಲ್ಲಿ ಸಾಗುವ ಶಿವರುದ್ರಪ್ಪನವರ ಕವನಗಳು ಮುಖ್ಯವಾಗಿ ಸಾತ್ವಿಕ. ತಮ್ಮ ಸಹಜ ಗುಣಗಳಿಂದ ಮೃದುತ್ವ ಮತ್ತು ಸಾತ್ವಿಕತೆಗಳನ್ನು ಬಿಟ್ಟುಕೊಡದೇ ಶಿವರುದ್ರಪ್ಪನವರು ಪ್ರಕೃತಿಯ ಚೆಲುವನ್ನು, ಬದುಕಿನ ನಿಗೂಢತೆಯನ್ನು, ಸಾಮಾಜಿಕ ವೈಚಿತ್ರ್ಯಗಳನ್ನು ತಮ್ಮ ಕಾವ್ಯದಲ್ಲಿ ದಾಖಲಿಸಿರುವ ರೀತಿ ಮೆಚ್ಚುವಂಥದ್ದು. ಯಾವುದೇ ಬಗೆಯ ಆವೇಶದಲ್ಲಿ ಕಳೆದುಹೋಗದೆ ಕವಿ ತನ್ನ ಸುತ್ತಮುತ್ತಲ ಎಲ್ಲ ಬಗೆಯ ವಿದ್ಯಮಾನಗಳಿಗೆ ಪ್ರತಿಕ್ರಿಯಿಸುತ್ತ ಬಂದಿದ್ದಾರೆ. ನಲವತ್ತು ವರ್ಷಗಳ ಈ ದೀರ್ಘ ಕಾವ್ಯ ಪ್ರಯಾಣದಲ್ಲಿ ಶಿವರುದ್ರಪ್ಪನವರು ಹಲವು ಬಗೆಯ ಅನುಭವಗಳಿಗೆ ಮುಖಾಮುಖಿಯಾಗಿಯೂ ತಮ್ಮ ಮೃದುತ್ವ ಮತ್ತು ಸಾತ್ವಿಕತೆಗಳನ್ನು ಉಳಿಸಿಕೊಂಡು ಬಂದಿರುವುದು ಗಮನಾರ್ಹ. ಮೃದುತ್ವ ಶಿವರುದ್ರಪ್ಪನವರಲ್ಲಿ ಎಂದೂ ದೌರ್ಬಲ್ಯವಾಗಲಿಲ್ಲ. ಅದೊಂದು ಮನಸ್ಥಿತಿ ಮಾತ್ರ. ಸಾತ್ವಿಕತೆ ಎಂದೂ ಭೋಳೆಯಾಗಲಿಲ್ಲ. ಸರಳತೆ, ಸಜ್ಜನಿಕೆಗಳು ಅಂಥ ದೊಡ್ಡ ಮೌಲ್ಯಗಳೇನಲ್ಲ ಎಂದು ಕಾಣಿಸಿದ ಸಂದರ್ಭಗಳಲ್ಲೂ ಶಿವರುದ್ರಪ್ಪನವರು ತಮ್ಮ ಸಹಜ ಗುಣಗಳನ್ನುಳಿಸಿಕೊಂಡೇ ಎಲ್ಲ ಬದಲಾವಣೆಗೂ ಸ್ಪಂದಿಸಿದ್ದು, ಗಟ್ಟಿಯಾದ ಕಾವ್ಯ ರಚಿಸಿದ್ದು ಮೆಚ್ಚುಗೆ ಹುಟ್ಟಿಸುತ್ತದೆ. ಶಿವರುದ್ರಪ್ಪನವರ ಕಾವ್ಯ ಸಂಯಮ, ಸ್ತಿಮಿತತೆ ಬದುಕಿನ ಚೆಲುವಿಗೆ ಇಲ್ಲವೆ ವಿಷಮತೆಗೆ ಕುರುಡಾಗಲಿಲ್ಲ. ಶಿವರುದ್ರಪ್ಪನವರು ಮೈಮರೆತು ಹಾಡುವ ಕವಿಯಲ್ಲ ಅಷ್ಟೆ. ಭಾವಾವಿಷ್ಟತೆಯನ್ನೇ ತೀವ್ರತೆ ಎಂದು ಕರೆಯುವುದಾದರೆ ಅಂಥ ತೀವ್ರತೆ ಶಿವರುದ್ರಪ್ಪನವರ ಕಾವ್ಯದಲ್ಲಿಲ್ಲ. ಕೃತಕವೆನಿಸದ ಶಿಷ್ಟತೆ ಅವರ ಕಾವ್ಯದ ಒಂದು ಮುಖ್ಯ ಲಕ್ಷಣ. ಶಿವರುದ್ರಪ್ಪನವರದು ಸುಶಿಕ್ಷಿತ ಮನಸ್ಸು. ಆದರೆ ಈ ಶಿಕ್ಷಣ ಬದುಕಿನ ಸಹಜ ಗುಣಗಳನ್ನು ಧ್ವಂಸಗೊಳಿಸುವಂಥದ್ದಲ್ಲ. ಅವುಗಳನ್ನು ನಯಗೊಳಿಸುವಂಥದ್ದು. ಆದ್ದರಿಂದಲೇ ಇವರ ಕಾವ್ಯದಲ್ಲಿ ಒಂದು ಬಗೆಯ ಸಮತೋಲನ ಎದ್ದುಕಾಣುತ್ತದೆ. ಕವಿ ತೀರ ಮುಗ್ಧನೂ ಅಲ್ಲ, ನೀತಿ ಪಾಠದ ಮಾಸ್ತರನೂ ಅಲ್ಲ. ಆತ ಉರಿಯುವುದೂ ಇಲ್ಲ, ಉರಿಸುವುದೂ ಇಲ್ಲ. ಸಮಾಧಾನದಿಂದ ಎಲ್ಲವನ್ನೂ ಗಮನಿಸುತ್ತಾನೆ; ತೋರಿಸುತ್ತಾನೆ. ದುರ್ಬಲವಾಗದ ಕೋಮಲತೆ, ಸಮಶೀತೋಷ್ಣ ಭಾವತರಂಗ ಶಿವರುದ್ರಪ್ಪನವರ ಕಾವ್ಯದ ಲಕ್ಷಣಗಳು. ಆದ್ದರಿಂದಲೇ ಇಲ್ಲಿ ಕಡಲಿನ ಆಳಗಳ ವಿರಾಟ್ ದರ್ಶನವಿಲ್ಲ; ಬದಲಾಗಿ ಮೇಲುನೋಟಕ್ಕೆ ಸಾಮಾನ್ಯವೆನಿಸುವ ಆದರೆ ಗಮನಿಸದೇ ಮುಂದೆ ಹೋಗಲು ಸಾಧ್ಯವಿಲ್ಲದಂಥ ನದಿ, ತೊರೆ, ಭಾವಿಗಳಿದ್ದಾವೆ. ಇವುಗಳನ್ನು ಕವಿ ಸಾವಧಾನದಿಂದ ಪರಿಶೀಲಿಸುತ್ತಾನೆ. ಸಣ್ಣ ಸಣ್ಣ

ಅನುಭವಗಳಿಂದಲೇ ದೊಡ್ಡದನ್ನು ಕಲ್ಪಿಸಿಕೊಳ್ಳುವ, ಹಿಡಿಯುವ ಪ್ರಯತ್ನ ಮಾಡುತ್ತಾನೆ. ಸಾಮಾನ್ಯ ಮನುಷ್ಯನೊಬ್ಬ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸಾಶ್ರಮಗಳನ್ನು ಕ್ರಮವಾಗಿ ದಾಟಿ ಬಂದು, ಜೀವನದ ಕರ್ಮಗಳನ್ನು ನಿಧಾನವಾಗಿ ಸವೆಸಿ ಬಂದು ಮೋಕ್ಷವನ್ನು ಗಳಿಸುವ ರೀತಿ ಶಿವರುದ್ರಪ್ಪನವರ ಕಾವ್ಯ. ಇಲ್ಲಿ ಆಶ್ಚರ್ಯಕರ ತಿರುವುಗಳಿಲ್ಲ. ದಿಗ್ಭ್ರಮೆಗೊಳಿಸುವಂಥ ಏರುತಗ್ಗುಗಳಿಲ್ಲ. ಸಮತಟ್ಟಾದ ನೆಲದ ಮೇಲಿನ ಶಿಸ್ತಿನ, ಶುಚಿ ಜೀವನದಲ್ಲಿ ಸಜ್ಜನರಾದ ಸುಶಿಕ್ಷಿತ ಮನುಷ್ಯನೊಬ್ಬ ಕಾವು ಕಳೆದುಕೊಳ್ಳದೇ ಬಹುಕಾಲ ಬದುಕುವುದು ಒಂದು ದೊಡ್ಡ ಸಾಧನೆಯೇ ಸರಿ. ಬಹುಕಾಲ ಬದುಕಿಯೇ, ಜೀವಂತಿಕೆಯನ್ನು ಸದಾಕಾಲ ಕಾಪಾಡಿಕೊಂಡು, ಪಕ್ವವಾಗುವ ರೀತಿ ಶಿವರುದ್ರಪ್ಪನವರ ಕಾವ್ಯ. ಯಾವುದೇ ವ್ಯಂಗ್ಯವಿಲ್ಲದೆ ಹೇಳುವುದಾದರೆ ಶಿವರುದ್ರಪ್ಪನವರ ಕಾವ್ಯ ಎಳನೀರು ಇದ್ದಂತೆ. ಅದಕ್ಕೆ ರುಚಿಯಿಲ್ಲ, ಆದರೆ ಆರೋಗ್ಯದಾಯಕ, ಜೀವನ ಪೋಷಕ. ಮಾದಕ ದ್ರವ್ಯಗಳಲ್ಲೇ ಮುಳುಗಿದವರಿಗೆ ಎಳನೀರಿನ ಗುಣ ಗೊತ್ತಾಗುವುದಿಲ್ಲ. ಎಳನೀರು ಒಮ್ಮೊಮ್ಮೆ ಸಿಹಿಯಾಗಿರಲೂಬಹುದು. ಹಾಗಿದ್ದರೆ ಅದು ನಮ್ಮ ಪುಣ್ಯ.

ಶಿವರುದ್ರಪ್ಪನವರ ಮೊದಲ ಕವನಗಳಲ್ಲಿ ಕವಿಯ ಪ್ರಕೃತಿ ಪ್ರೇಮವನ್ನು ಕಾಣುತ್ತೇವೆ. "ಪ್ರಕೃತಿಮಾತೆಯ ಸ್ತನ್ಯಪಾನದಿ ಪುಷ್ಟಿಗೊಳ್ಳುವುದು ಚೇತನ" ಎಂದು ನಂಬಿರುವ ಕವಿ ಪ್ರಕೃತಿಯ ಆರಾಧನೆಗೆ ಓದುಗರನ್ನು ಆಹ್ವಾನಿಸುತ್ತಿದ್ದಾನೆ. ಕಣ್ಣು, ಹೃದಯಗಳನ್ನು ಪ್ರಕೃತಿಪೂಜೆಗೆ ಸಜ್ಜುಗೊಳಿಸಿಕೊಳ್ಳಲು ಹೇಳುತ್ತಿದ್ದಾನೆ. ಪ್ರಕೃತಿಯ ಸೌಂದರ್ಯವೆಂದರೆ ಕವಿಗೆ, "ಭಾಷಾತೀತದ ಮಧುಮಯ ಲೀಲೆ". "ಕಣ್ಣೀರೊಳು ಮಿಂದರೂ ಸೌಂದರ್ಯದ ಆರಾಧನೆಯಲ್ಲಿ ತೊಡಗಿ ತಪಗೈಯುವ ಮನುಜನೆದೆಯ ಶಕ್ತಿ"ಯನ್ನು ಕುರಿತು ಶಿವರುದ್ರಪ್ಪನವರು ಮತ್ತೆ ಮತ್ತೆ ಹಾಡಿದ್ದಾರೆ. ಈ ಆರಾಧನೆಯಲ್ಲಿ ಬದುಕಿನಿಂದ ಪಲಾಯನ ಮಾಡುವ ಉಪಾಯವಿಲ್ಲ. ಪ್ರಕೃತಿಯ ಅನುಭವದಿಂದಾಗುವ ಭಾವ ಶ್ರೀಮಂತಿಕೆಯೇ ಇಲ್ಲಿ ಮುಖ್ಯ. ಮೃದುಗಾಳಿಯ ಮರ್ಮರ ನಾದದಲಿ ಬಳುಕುವ ಲಾಸ್ಯವನಾಡುವ ಹೂಬಳ್ಳಿಯಂತೆ.

**"ತಕ ಥೈ ದಿ ಥೈ,**
**ತಕ ಧೋಂ ದಿಕ ಧೋಂ**
**ಬಯಲಾಟದ ರಾವಣನಂತೆ**
**ಕುಣಿ ಕುಣಿಯುತ ತಿರುಗುವ"**

ಸುಂಟರಗಾಳಿಯೂ ಕವಿಗೆ ವಿಸ್ಮಯವನ್ನು ತರುತ್ತದೆ. "ನೆಲದ ಕರೆ", "ತರಗೆಲೆ", "ಮರಕುಟಕ ಹಕ್ಕಿಗೆ", "ತಂತು ಕೃತಿ" ಮೊದಲಾದ ಕವನಗಳಲ್ಲಿ ಪ್ರಕೃತಿ ಕೇವಲ ವಿವರವಾಗದೆ ಕವಿಯ ಆಗಿನ ಮನಸ್ಥಿತಿಯನ್ನು ಸೂಚಿಸುವ ವಸ್ತು ಪ್ರತಿರೂಪಗಳಾಗಿಯೂ ಬೆಳೆಯುವುದನ್ನು ನೋಡಬಹುದು. ಪ್ರಕೃತಿಯನ್ನು ಕೇವಲ ವಿವರಿಸುತ್ತಿದ್ದ ಕವಿ ಪ್ರಬುದ್ಧನಾಗಿ ಬೆಳೆಯುತ್ತಿದ್ದಂತೆ ತನ್ನ ಭಾವಗಳನ್ನು ತೋಡಿಕೊಳ್ಳಲು ಪ್ರಕೃತಿಯಲ್ಲಿ ಪ್ರತಿಮೆಗಳನ್ನೂ ಶೋಧಿಸಿಕೊಳ್ಳಲಾರಂಭಿಸುತ್ತಾನೆ. ತಾಯಿ-ಮಕ್ಕಳ ಸಂಬಂಧವನ್ನು ಪ್ರಕೃತಿ-ಮನುಷ್ಯರ

ಸಂಬಂಧಗಳಿಗೆ ಸಮೀಕರಿಸುವ ಪ್ರಯತ್ನಗಳನ್ನೂ ಅಲ್ಲಲ್ಲಿ ಕಾಣುತ್ತೇವೆ. ಹೀಗಾಗಿ ಪ್ರಕೃತಿ ಶಿವರುದ್ರಪ್ಪನವರ ಕಾವ್ಯದಲ್ಲಿ ಜಡವಾಗುವುದಿಲ್ಲ. ಅದರ ವಿವಿಧ ಅವಸ್ಥೆಗಳಲ್ಲಿ ಅವರು ಬದುಕಿನ ಬೇರೆ ಬೇರೆ ಅವಸ್ಥೆಗಳನ್ನೇ ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಾರೆ.

ಶಿವರುದ್ರಪ್ಪನವರ ಮೊದಲ ಮೂರು ಕವನಸಂಕಲನಗಳಲ್ಲಿ ಭಾವ ತುಂಬ ಮಾರ್ದವ. ಅಲ್ಲಲ್ಲಿ ನಿಟ್ಟುಸಿರು ಕೇಳಿಸಿದರೂ ಅದು ಗಾಢ ವಿಷಾದದ ರೂಪವನ್ನೇನೂ ಪಡೆದುಕೊಳ್ಳುವುದಿಲ್ಲ. ಪ್ರೇಮ, ಸ್ನೇಹಗಳ ನೆಲೆಯಲ್ಲಿಯೇ ಪ್ರಧಾನವಾಗುವ ಮನುಷ್ಯ ಸಂಬಂಧಗಳು ಹಾಗೂ ಚಲಿಸುವ ಕಾಲ ಕೂಡ ಇಲ್ಲಿ ಪ್ರಕೃತಿಯ ಚಿತ್ರಗಳೆಂಬಂತೆ ವರ್ಣಿತವಾಗುತ್ತವೆ. ಈ ದೃಷ್ಟಿಯಿಂದ ನೋಡಿದಾಗ ನಾಲ್ಕನೆಯ ಸಂಕಲನ "ದೀಪದ ಹೆಜ್ಜೆ"ಯಲ್ಲಿ ಶಿವರುದ್ರಪ್ಪನವರ ಬೆಳವಣಿಗೆಯಲ್ಲಿ ಮುಖ್ಯ ಘಟ್ಟವೊಂದನ್ನು ಗುರುತಿಸಿಕೊಳ್ಳಬಹುದು. ಈ ಸಂಕಲನದ "ಹುಟ್ಟಿದ ಹಬ್ಬ", "ಪ್ರಶ್ನೆ-ಉತ್ತರ", "ನೆರಳಿಲ್ಲದ ದಾರಿ", "ಅರೆ ಮುಗಿದ ಕವನ", "ಹೂವುಗಳ ನಿಟ್ಟುಸಿರು", "ಒಂದಿರುಳು", 'ಔತಣ", "ಸಂಜೆ ದಾರಿ", "ಗಡಿಯಾರದಡಿಯಲ್ಲಿ", "ಮಬ್ಬಿನಿಂದ ಮಬ್ಬಿಗೆ", "ಪ್ರಶ್ನೆ", "ಜಡಿ ಮಳೆಯ ಇರುಳಿನಡಿ", "ನಿರ್ಧಾರ", "ಬಿಡುಗಡೆಯ ನೆನಪು" ಮುಂತಾದ ಕವನಗಳಲ್ಲಿ ಶಿವರುದ್ರಪ್ಪನವರು ತಮ್ಮ ಅತ್ಯುತ್ತಮ ಸಾಧನೆ ಮಾಡಿದ್ದಾರೆ ಎನಿಸುತ್ತದೆ. ಇಲ್ಲಿ ಕವಿ ಕೇವಲ ವೀಕ್ಷಕನಲ್ಲ. ಬದುಕಿನ ನಾಟಕದಲ್ಲಿ, ತಾನೂ ಸಕ್ರಿಯ ಪಾತ್ರಧಾರಿ. ಪ್ರಾಕೃತಿಕ ಜಗತ್ತಿನಿಂದ ಕವಿ ಮನುಷ್ಯ ಜಗತ್ತಿಗೆ ಹತ್ತಿರವಾಗುತ್ತಿದ್ದಾನೆ. ಬದುಕಿನ ಒಳಹೊರಗನ್ನು ಸಾಕಷ್ಟು ಅನುಭವಿಸಿರುವ ಕವಿ ಕೇಳುತ್ತಿದ್ದಾನೆ:

**ಅಯ್ಯೋ ಏನನ್ಯಾಯ**
**ದಿನದಿನವು ಆ ಅದೇ ಸೂರ್ಯ ಚಂದಿರ ಚುಕ್ಕಿಗಳ**
**ಜಾತ್ರೆ ಬಾನಿನ ತುಂಬ**
**ಮಾಗಿ ಬರದೇ ಅಲ್ಲಿ, ಇಲ್ಲಿ ಬಂದಂತೆ?**
**ತಾರೆಯಿಲೆ ಹಣ್ಣಾಗಿ ಕಳಚಿ ಬೀಳದೇ ನೀಲಿಯ**
**ಮರದ**
**ಹರೆಹರೆಯಿಂದ**
**ಮೂಡದೇ ಹೊಸ ಚಿಗುರ ಬೆಳಕು?**
**ನಮಗೇಕೆ, ನಮಗಷ್ಟೆ ಏಕೆ ಋತು ಋತುವಿಗೂ**
**ಮಾಗಿ "ಕೊಳೆವ ಬದುಕು?"**
**ಬದುಕು ಈಗ "ನೆರಳಿಲ್ಲದ ದಾರಿ"**
**ಇದು ನೆರಳಿಲ್ಲದ ದಾರಿ**
**ನೀಲಿಯ ನಿರ್ಭಾವದ ಬಾನೋ**
**ಬರು ಬಿಸಿಲಿನ ಗೋರಿ**
**ಕನವರಿಸಿದೆ ನಿಟ್ಟುಸಿರಿನ ದಾರಿ:**

'ಬಂದೀತೆಂದಿಗೆ ಈ ಕಡೆಗೆ
ಗಂಗೆಯು ಮೆರವಣಿಗೆ'

'ಯಾವ ಪುರುಷಾರ್ಥವನು ಪಡೆದುದಾಯಿತು ಜೀವ?' ಎಂದು "ಸಂಜೆ ದಾರಿ"ಯಲ್ಲಿ ಕೇಳುವ ಕವಿ "ಮಬ್ಬಿನಿಂದ ಮಬ್ಬಿಗೆ" ಎಂಬ ಕವನದಲ್ಲಿ ಕಾಲದ ಪ್ರತಿಮೆಗಳಲ್ಲಿ ಬದುಕಿನ ಪ್ರಯಾಣದ ಸ್ವರೂಪವನ್ನು ದಾಖಲಿಸುವ ರೀತಿ ಅನನ್ಯವಾದದ್ದು. ಬದುಕು ಹಿಡಿದಿಟ್ಟುಕೊಳ್ಳುವಂಥದಲ್ಲ. ಬದುಕಿಯೇ ಅದನ್ನು ಅನುಭವಿಸಬೇಕು. ಅನುಭವಿಸಿಯೇ ಅದನ್ನು ಅರಿಯಬೇಕು. ಚಲನೆಯೇ ಅದರ ಸ್ವರೂಪ. ಬಾಲ್ಯ ಕಳೆದು ಯೌವನಕ್ಕೆ ಕಾಲಿಟ್ಟಾಗ, ತಾವು ಕಂಡುಕೊಂಡ ಸತ್ಯವೇನು? ಬಾಲ್ಯ ಕಣ್ಮರೆಯಾಗಿದ್ದಕ್ಕೆ ವಿಷಾದ ಪಡಬೇಕೋ, ಯೌವನ ಪಡೆದದ್ದಕ್ಕೆ ಸಂಭ್ರಮಿತರಾಗಬೇಕೋ? ಈ ಸಂಭ್ರಮ ಕೂಡ ಮುಪ್ಪು ಆವರಿಸುತ್ತಿದ್ದಂತೆ ಇಲ್ಲವಾಗುವುದಲ್ಲ? ಚಲನೆಯಿಲ್ಲದಿದ್ದರೆ ಬದುಕು ಕೂಡ ಜಡವಾಗುತ್ತದೆ. ಬದುಕು ಚಲನಶೀಲವಾಗಿರುವುದರಿಂದ ಮುಪ್ಪು ಕೂಡ ಅನಿವಾರ್ಯ. ಈ ದ್ವಂದ್ವದಿಂದ ಮನುಷ್ಯನಿಗೆ ಬಿಡುಗಡೆಯೇ ಇಲ್ಲವೆ? ನಿರ್ದಯವಾಗಿ ಚಲಿಸುವ ಕಾಲ ಮನುಷ್ಯನನ್ನು ಮಾಡುತ್ತದೆಯೆ, ಮುಗಿಸುತ್ತದೆಯೆ?

ಒಂದು, ಎರಡು, ಮೂರು
ಬಾರಿಸಿತು ಗಡಿಯಾರ ತನ್ನ ಪಾಡಿಗೆ ತಾನು
ಅಯ್ಯೋ ಯಾವಾಗ ಈ ಮುಳ್ಳು ಒಂದು
ಎರಡನ್ನು ದಾಟ ಮೂರಕ್ಕೆ ಬಂದಿತೋ
ಹಿಡಿದುಕೊ ಅಲ್ಲೆ ಆ ಗಡಿಯಾರಗಳ ಮುಳ್ಳು
ಭದ್ರ.
ಬಡಬೇಡ ಮುಂದಕ್ಕೆ ಕೊಂಚ ಕಾಲ.
ಗಡಿಯಾರ ನಕ್ಕಿತು, 'ಎಂಥ ಚಪಲ'

"ದೀಪದ ಹೆಜ್ಜೆ" ಸಂಕಲನದ ಬಹಳಷ್ಟು ಕವನಗಳಲ್ಲಿ ಶಿವರುದ್ರಪ್ಪನವರು ಮನುಷ್ಯನನ್ನು ಕಾಡುವ ಒಂಟಿತನ, ಸಾಮಾಜಿಕ ಸಮಸ್ಯೆಗಳು, ಮೃತ್ಯುಪ್ರಜ್ಞೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದ್ದಾರೆ. ಈ ಹಂತದಲ್ಲಿ ಅವರು ಭೌತಿಕ ವಿವರಗಳಿಂದ ಹೊರಟು ಪಾರಭೌತಿಕ ಹಂತಗಳನ್ನು ತಲುಪುವ ಕ್ರಮ ಶ್ಲಾಘನೀಯ. ಮೆಟಫಿಸಿಕಲ್ ಪ್ರಶ್ನೆಗಳು ಶಿವರುದ್ರಪ್ಪನವರ ಕಾವ್ಯದಲ್ಲಿ ಒಗಟುಗಳಾಗಿ ಬರುವುದಿಲ್ಲ. ಕವಿ ಬದುಕಿಗೆ ನೇರವಾಗಿ ಮುಖಾಮುಖಿಯಾಗುವ ಜೀವಂತ ಪ್ರಕ್ರಿಯೆಯಲ್ಲಿ ತಾನೇ ತಾನಾಗಿ ಮೂಡಿಬರುತ್ತವೆ. ಸಮಸ್ಯೆಗಳಿಂದ ಪ್ರಾರಂಭದಲ್ಲಿ ಭಾವುಕರಾಗುವ ಕವಿ ಸತ್ಯದರ್ಶನವಾಗುತ್ತಿದ್ದಂತೆ ಗಳಿಸಿಕೊಳ್ಳುವ ನಿರ್ಭಾವುಕತೆ ಮೆಚ್ಚುಗೆ ಹುಟ್ಟಿಸುತ್ತದೆ. ಈ ನಿರ್ಭಾವುಕತೆಯಲ್ಲಿ ಸಿನಿಕತನವಿಲ್ಲ. ಸತ್ಯವನ್ನು ಒಪ್ಪಿಕೊಳ್ಳುವ ಎದೆಗಾರಿಕೆಯಿದೆ; ಬದುಕು ಹೇಗಿದ್ದರೂ ಅದನ್ನು ಸ್ವೀಕರಿಸುತ್ತೇನೆಂಬ ನಿಷ್ಠುರತೆಯಿದೆ. ನಾವು ಮಾಡಬಹುದಾದದ್ದು ಇಷ್ಟೆ:

ಬಾಡಿಗೆಯ ಮನೆಯಿಂದ ಬಾಡಿಗೆಯ ಮನೆಗೆ
ನಡೆದಿರುವೆ
ಇರುವ ಮನೆಯನು ಮೊದಲು ಸರಿ
ಮಾಡಿಕೋ
ಕಸಗುಡಿಸು; ದೀಪವ ಹಚ್ಚು

"ದೀಪದ ಹೆಜ್ಜೆ" ಸಂಕಲನದ ಮೂಲಕ ಆಧುನಿಕ ಕನ್ನಡ ಕಾವ್ಯ ಕ್ಷೇತ್ರದಲ್ಲಿ ಬಲವಾಗಿ ಬೇರುಬಿಟ್ಟ ಶಿವರುದ್ರಪ್ಪನವರು "ಕಾರ್ತೀಕ", "ಅನಾವರಣ", "ತೆರೆದ ದಾರಿ" ಸಂಕಲನಗಳಲ್ಲಿ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡರು. ಆರಂಭದಲ್ಲಿ ನವೋದಯ ಸಾಹಿತ್ಯದಿಂದ ಸ್ಫೂರ್ತಿ ಪಡೆದಿದ್ದ ಶಿವರುದ್ರಪ್ಪನವರ ಕಾವ್ಯ ಮುಂದೆ ನವ್ಯದ ಸತ್ತ್ವವನ್ನು ಹೀರಿಕೊಂಡು ಬೆಳೆಯಿತು. ತಮ್ಮತನವನ್ನು ಕಳೆದುಕೊಳ್ಳದೆ ಆಧುನಿಕ ಕನ್ನಡ ಕಾವ್ಯಮಾರ್ಗದ ಎಲ್ಲ ಹೊಸ ಅಂಶಗಳನ್ನು ಹೀರಿಕೊಂಡು ಬೆಳೆದ ಶಿವರುದ್ರಪ್ಪನವರು ತಮ್ಮ ಕಾವ್ಯಜಗತ್ತನ್ನು ವಿಸ್ತರಿಸಿಕೊಂಡರು. "ಶಾರದೆ", "ಪುರುಷಸೂಕ್ತ", "ಮಳೆ ರಾತ್ರಿಯ ಒಂದು ಕ್ಷಣ", "ಕನಸಿನಿಂದ ನನಸಿಗೆ", "ಶಾಕುಂತಲದ ಐದನೆಯ ಅಂಕ", "ಅನಾಮಧೇಯ", "ಕೋಗಿಲೆಗೆ ಉಪದೇಶ", "ಹಳೇ ಪೇಪರ್ ಖಾಲಿ ಶೀಷೆ", "ಕೋಳಿ ಕೂಗಿತು", "ರಾಷ್ಟ್ರಪಕ್ಷಿ", "ಕುಲುಮೆಯ ಒಳಗೆ ಕಿಡಿಯಿಲ್ಲ", "ಬಾರಯ್ಯ ಬೆಳುದಿಂಗಳೇ" ಮುಂತಾದ ಕವನಗಳಲ್ಲಿ ಈ ಬೆಳವಣಿಗೆಯನ್ನು ಸ್ಪಷ್ಟವಾಗಿ ಗುರುತಿಸಿಕೊಳ್ಳಬಹುದಾಗಿದೆ.

"ತೆರೆದ ದಾರಿ", "ಗೋಡೆ", "ಕಾಡಿನ ಕತ್ತಲಲ್ಲಿ" ಸಂಕಲನಗಳಲ್ಲಿ ಕವಿಯ ಗಮನ ಸಾಮಾಜಿಕ ಮತ್ತು ರಾಜಕೀಯ ವಿಕೃತಿಗಳತ್ತ ಪ್ರಧಾನವಾಗಿದೆ. "ದುಃಸ್ವಪ್ನ" ಎಂಬ ಕವನದಲ್ಲಿ ಕವಿ ಹೇಳುತ್ತಾನೆ:

ಕಂಡೆ
ಎಂತೆಂಥವರು ಏನೇನೋ ಆದದ್ದ ಕಂಡೆ
ಗೊಮ್ಮಟನಾಗಿ ನಿಂತಿದ್ದ ಮಹಾ ಮೂರ್ತಿ
ಕರಗಿ ಕೊಚ್ಚೆಯಾಗಿ ಹರಿದದ್ದ ಕಂಡೆ
ಇಂದ್ರನೈರಾವತಕ್ಕೆ ತೋಣಚಿ ಹತ್ತಿ
ಬೀದಿ ನಾಯಾಗಿ ಬೂದಿಯಲಿ ಹೊರಳಾಡಿದ್ದ ಕಂಡೆ
ನಿಗಿನಿಗಿ ಉರಿವ ಉಜ್ವಲವಾದ ಮಾತೆಲ್ಲ
ಬರೀ ಬೂದಿಯಾಗಿ ತೆಪ್ಪಗಾದದ್ದ ಕಂಡೆ
.............
.............
ದೊಡ್ಡ ಪೀಠಗಳ ಮೇಲೆ ಸಣ್ಣ ಜನ
ಇಲಿ ಹೆಗ್ಗಣಗಳಾಗಿ ಹರಿದಾಡಿದ್ದ ಕಂಡೆ

ಕಂಡು ಎಚ್ಚರಗೊಂಡೆ
ಎಚ್ಚರವೆಲ್ಲ ನಿಗಿನಿಗಿ ಉರಿವ ಕೆಂಡದ ಉಂಡೆ

"ಬೆಳಗಾಗದಿರಲಿ", "ಸೋಲಿನ ಹಾಡು", "ಒಡೆದ ಕನ್ನಡಿ", "ಮುಂಬೈ ಜಾತಕ", "ಮಾರ್ಕೆಟ್ಟಿನಲ್ಲಿ ಬೇಸಿಗೆ", "ರೈಲು ಬರುತ್ತದೆ", "ವಿಫಲ", "ಯುದ್ಧ ಮಧ್ಯೆ", "ಬೆಂಗಾಡು", "ರಿಪೇರಿ", "ಗುಲಾಮರು", "ಯುಗಾದಿಯ ಹಾದಿಯಲ್ಲಿ", "ಗಾಂಧೀ ಶತಮಾನೋತ್ಸವ", "ಭೀಮಾಲಾಪ", "ದೊಡ್ಡಪ್ಪ ಹೇಳಿದ್ದು" ಮುಂತಾದ ಕವನಗಳಲ್ಲಿ ನಮ್ಮ ಬದುಕಿನ ಅವನತಿಯನ್ನು, ವಿಕೃತಗೊಳ್ಳುತ್ತಿರುವ ಮನುಷ್ಯ ಸಂಬಂಧಗಳನ್ನು ಕುರಿತು ಬರೆದಿದ್ದಾರೆ. ಅರವತ್ತರ ದಶಕದ ಪ್ರಾರಂಭದಲ್ಲಿ ಕಾಣಿಸಿಕೊಂಡ ವಿಷಾದ ಎಪ್ಪತ್ತರ ದಶಕದವರೆಗೂ ದಟ್ಟವಾಗುತ್ತ ನಮ್ಮ ಸಮಕಾಲೀನ ಸಮಾಜದಲ್ಲಿ ಕವಿದಿದ್ದ ನಿರಾಶೆಯ ಒಂದು ಚಿತ್ರವನ್ನೇ ಈ ಕವನಗಳು ಕೊಡುತ್ತವೆ. "ಗೋಡೆ", "ನನ್ನ ನಿನ್ನ ನಡುವೆ" ಮುಂತಾದ ಕವನಗಳನ್ನು ಶಿವರುದ್ರಪ್ಪನವರು ಈ ಹಂತದಲ್ಲೇ ಬರೆದರೆನ್ನುವುದೂ ಗಮನಿಸಬೇಕಾದ ಸಂಗತಿಯಾಗಿದೆ.

"ಕಾಡಿನ ಕತ್ತಲಲ್ಲಿ" ಮತ್ತು "ಪ್ರೀತಿ ಇಲ್ಲದ ಮೇಲೆ" ಸಂಕಲನಗಳಲ್ಲಿ ನೋಟ ಸಾಮಾಜಿಕವಾಗಿಯೇ ಇದ್ದರೂ ಅದಕ್ಕೆ ವೈಯಕ್ತಿಕ ಛಾಪೊಂದನ್ನು ತರಲು ಶಿವರುದ್ರಪ್ಪನವರು ಪ್ರಯತ್ನಿಸಿದ್ದಾರೆ. ಈ ಹಂತದಲ್ಲಿ ಅವರು ದಲಿತ ಮತ್ತು ಬಂಡಾಯ ಚಳವಳಿಗಳಿಂದ ಕೂಡ ಪ್ರೇರಣೆಗಳನ್ನು ಪಡೆದಿರಬಹುದು ಎನಿಸುತ್ತದೆ. "ಇನ್ನೆಂದು ಬೆಳಗು ನಿಮಗೆ", "ಏನು ವ್ಯತ್ಯಾಸ", "ಚರಂಡಿಗಳು ಮತ್ತು ನಾಯಿಗಳು", "ದೋಷಿ", "ಉತ್ತರಾಧಿಕಾರಿ", "ಚರಿತ್ರೆ-ಪುರಾಣ", "ಯಾವ ಹಾಡ ಹಾಡಲಿ", "ಎಲ್ಲೋ ಮಗು ಅಳತಾ ಇದೆ", "ಅವಸ್ಥೆ", "ಸ್ವಾತಂತ್ರ್ಯೋತ್ಸವ-1984", "ಮನೆ ಕಟ್ಟುವ ಮಂದಿ" ಮೊದಲಾದ ಕವನಗಳಲ್ಲಿ ಸಾಮಾಜಿಕ ಸಮಸ್ಯೆಗಳ ಮೂಲಕ್ಕೇ ಹೋಗುವ ಹವಣಿಕೆಯಿದೆ. ವರ್ಣ ಮತ್ತು ವರ್ಗ ಸಮಾಜದ ಮೌಲ್ಯವ್ಯವಸ್ಥೆ ಶೋಷಣೆಯ ಕೇಂದ್ರದಲ್ಲಿರುವುದನ್ನು ಕವಿ ಕಂಡು ಕೊಳ್ಳುತ್ತಿದ್ದಾನೆ. ಹಿಂದೆ ಕರುಣೆ, ಸಹಾನುಭೂತಿಗಳನ್ನು ಮಾತ್ರ ಧ್ವನಿಸುತ್ತಿದ್ದ ಕವಿ ಈಗ ಅವುಗಳಾಚೆಗೂ ಹೋಗಿ ಸಾಮಾಜಿಕ ಮತ್ತು ಆರ್ಥಿಕ ಸಂಬಂಧಗಳನ್ನು ಶೋಧಿಸಲು ಪ್ರಯತ್ನಿಸುತ್ತಿದ್ದಾನೆ. "ಮನೆ ಕಟ್ಟುವ ಮಂದಿ"ಯಲ್ಲಿ ಕವಿ ಕೇಳುತ್ತಿದ್ದಾನೆ:

ಮನೆ ಕಟ್ಟುವುದೇ ಕೆಲಸ ಈ ಜನಕ್ಕೆ,
ಮಳೆಯಲ್ಲಿ, ಬಿಸಿಲಲ್ಲಿ, ಗಾಳಿಯಲ್ಲಿ
ಮಣ್ಣು ಹೊರುತ್ತಾ, ದಿನದಿಂದ ದಿನಕ್ಕೆ,
ತಾವೆ ಕಟ್ಟುತ್ತಿರುವ ಮನೆ ಮಹಡಿ ಮಹಡಿ
ಗಳಾಗಿ ಏರುವುದನ್ನು ಕಾಣುತ್ತಾ
ಅದರ ಬದಿ ಜೋಪಡಿಯಲ್ಲಿ ಕೊರಗುತ್ತಾ
ಸವೆದುಹೋಗುತ್ತಿರುವ ಈ ಮಂದಿಗೆ

**ಅನ್ನಿಸುವುದಿಲ್ಲವೆ, ತಮಗೂ ಒಂದು**
**ಮನೆಯಿಲ್ಲವೆಂದು?**

"ಅವಸ್ಥೆ" ಎಂಬ ಕವನದಲ್ಲಿ ಕವಿ ಅನುಭವಿಸುವ ಪಾಪಪ್ರಜ್ಞೆಗೆ ಕಾರಣ ಸಾಮಾಜಿಕ ಸತ್ಯಗಳ ಹೊಸ ದರ್ಶನವೇ:

**ಚಳಿಗೆ ಗಡಗಡ ನಡುಗಿ**
**ಮುದುರಿ ಮೂಲೆಗೆ ಕೂತ**
**ಹರುಕು ಚಂದಿಯ ಪುಟ್ಟ ಹುಡುಗನ್ನ ಕಂಡು**
**ಬೆಚ್ಚನೆಯ ಬಟ್ಟೆ ತೊಟ್ಟ ನನ್ನೊಳಗೂ**
**ನಡುಕ ಶುರುವಾಗುತ್ತದೆ.**
**ಅವನು ಹಾಗಿರೋದಕ್ಕೆ**
**ನಾನೂ ಕಾರಣ ಅನ್ನಿಸುತ್ತೆ.**

ಕನ್ನಡದ ಒಬ್ಬ ಹಿರಿಯ ಕವಿಯ ಐದುನೂರಾ ಆರು ಕವನಗಳ ಸಮಗ್ರ ಸಂಪುಟದ ಬಗ್ಗೆ ಈ ಪುಟ್ಟ ಲೇಖನದ ಚೌಕಟ್ಟಿನಲ್ಲಿ ಸಮಗ್ರವಾಗಿ ಬರೆಯಲು ಸಾಧ್ಯವಾಗುತ್ತಿಲ್ಲ. ಅವರ ಕಾವ್ಯದ ಬಗ್ಗೆ ಇದುವರೆಗೆ ಬಂದಿರುವ ಲೇಖನಗಳನ್ನು ಮುಂದಿಟ್ಟುಕೊಂಡು ಶಿವರುದ್ರಪ್ಪನವರ ಕಾವ್ಯವನ್ನು ವಿವರವಾಗಿ ಅಭ್ಯಾಸ ಮಾಡಬೇಕಾದ ಅಗತ್ಯವಿದೆ.

**—ಟಿ. ಪಿ. ಅಶೋಕ**

*(ಮಯೂರ, ಡಿಸೆಂಬರ್ 1987)*



## ಸಮಗ್ರ ಗದ್ಯ: ಭಾಗ-1

**ಪ್ರಕಾಶಕರು: ಶಾರದಾ ಪ್ರಕಾಶನ, ಗಾಂಧಿನಗರ, ಬೆಂಗಳೂರು.**

**ಪುಟಗಳು: 456; ಬೆಲೆ: ರೂ. 115**

## ಸಮಗ್ರ ಗದ್ಯ: ಭಾಗ-2

**ಪ್ರಕಾಶಕರು: ಸ್ನೇಹ ಪ್ರಕಾಶನ, ವಿಜಯನಗರ 2 ನೇ ಹಂತ, ಬೆಂಗಳೂರು.**

**ಪುಟಗಳು: 440; ಬೆಲೆ: ರೂ. 75**

---

**ಜಿ.**ಎಸ್. ಶಿವರುದ್ರಪ್ಪನವರು ತಮ್ಮ ಮೊದಲ ವಿಮರ್ಶಾ ಲೇಖನವನ್ನು ಪ್ರಕಟಿಸಿದ್ದು ಸುಮಾರು 1954-55ರ ವೇಳೆಗೆ. ಅಂದಿನಿಂದ ಇಂದಿನವರೆಗೆ ನಾಲ್ಕು ದಶಕಗಳ ಕಾಲ ನಿರಂತರವಾಗಿ ಅವರು ತಮ್ಮ ಸಾಹಿತ್ಯ ಚಿಂತನೆಯನ್ನು ನಿಶಿತವಾಗಿಟ್ಟುಕೊಂಡು ಕಾಲಕಾಲಕ್ಕೆ ಸಾಕಷ್ಟು ಎಚ್ಚರದಿಂದ ತಮ್ಮ ಪ್ರತಿಕ್ರಿಯೆಯನ್ನು ದಾಖಲಿಸುತ್ತ ಬಂದಿದ್ದಾರೆ. ಈ ಎಲ್ಲ ದಾಖಲೆ ಈಗ 'ಸಮಗ್ರ ಗದ್ಯ' ಎಂಬ ಮೂರು ಸಂಪುಟಗಳಲ್ಲಿ ಪ್ರಕಟವಾಗುತ್ತಿದೆ. ಈ ಯೋಜನೆಯ ಮೊದಲೆರಡು ಸಂಪುಟಗಳು ಈಗಾಗಲೇ ಪ್ರಕಟವಾಗಿದ್ದು, ಮೂರನೆಯ ಸಂಪುಟ ಬರಬೇಕಿದೆ.

ಸಮಗ್ರ ಗದ್ಯ-ಮೊದಲ ಸಂಪುಟದ ಮೂವತ್ತೆರಡು ಲೇಖನಗಳಲ್ಲಿ ಶಿವರುದ್ರಪ್ಪನವರು ನಮ್ಮ ಹಳಗನ್ನಡ ಕಾವ್ಯ ಪರಂಪರೆಯೊಂದಿಗೆ ನಡೆಸಿದ ಸಂವಾದವಿದ್ದರೆ, ಎರಡನೆಯ ಸಂಪುಟದಲ್ಲಿ ನಲವತ್ತೈದು ಲೇಖನಗಳಿದ್ದು, ಇದರಲ್ಲಿ ಎರಡು ಭಾಗಗಳಿವೆ. ಮೊದಲನೆಯ ಭಾಗದ ಲೇಖನಗಳು ಸಾಹಿತ್ಯತತ್ವ ಹಾಗೂ ಸಾಹಿತ್ಯ ವಿಮರ್ಶೆಯ ಸಂದರ್ಭದ ಕೆಲವು ಪರಿಕಲ್ಪನೆಗಳನ್ನು ಕುರಿತವುಗಳಾದರೆ, ಎರಡನೆಯ ಭಾಗದ ಲೇಖನಗಳು ಮುಖ್ಯವಾಗಿ ಹೊಸಗನ್ನಡದ ಸಾಹಿತ್ಯ ಚಳವಳಿಗಳನ್ನು ಹಾಗೂ ಆ ಸಂದರ್ಭದಲ್ಲಿನ ಕೆಲವು ಮುಖ್ಯ ಲೇಖಕರ ಕೊಡುಗೆಗಳನ್ನೂ ಪರಿಶೀಲಿಸುವಂಥವಾಗಿವೆ. ಅಂದರೆ ಮೊದಲ ಸಂಪುಟ ಪ್ರಾಚೀನ ಸಾಹಿತ್ಯವನ್ನು ಕುರಿತದ್ದಾದರೆ ಎರಡನೆಯ ಸಂಪುಟ ಆಧುನಿಕ ಸಾಹಿತ್ಯವನ್ನು, ಅದಕ್ಕೆ ಸಂಬಂಧಿಸಿದ ಸಾಹಿತ್ಯತತ್ವಗಳನ್ನೂ ಕುರಿತದ್ದು. ಒಟ್ಟಾರೆಯಾಗಿ ಈ ಎರಡೂ ಸಂಪುಟಗಳಲ್ಲಿ ಪ್ರಾಚೀನ ಸಾಹಿತ್ಯದಿಂದ ಹಿಡಿದು ಸಮಕಾಲೀನ ಸಾಹಿತ್ಯ ಸಂದರ್ಭದವರೆಗಿನ 'ಕನ್ನಡ ಸಾಹಿತ್ಯ ಪರಂಪರೆ'ಯೊಂದಿಗೆ ಶಿವರುದ್ರಪ್ಪನವರು ನಡೆಸಿದ ಸಂವಾದ ಹಾಗೂ ತೋರಿದ ಪ್ರತಿಕ್ರಿಯೆಗಳು ದಾಖಲಾಗಿವೆ.

ಶಿವರುದ್ರಪ್ಪನವರು ತಮ್ಮ ಮೊದಲ ಸಂಪುಟಕ್ಕೆ 'ಹಿಂದಣ ಹೆಜ್ಜೆ' ಎಂಬ ಉಪಶೀರ್ಷಿಕೆಯನ್ನು ನೀಡಿದ್ದಾರೆ. ಎರಡನೆಯ ಸಂಪುಟಕ್ಕೆ ಇಂಥ ಯಾವ ಉಪಶೀರ್ಷಿಕೆಯೂ ಇಲ್ಲ. 'ಹಿಂದಣ ಹೆಜ್ಜೆ' ಎಂಬ ಮಾತನ್ನು ಜಿಎಸ್‌ಎಸ್ ಎಚ್ಚರದಿಂದ ಬಳಸಿದ್ದಾರೆ. ಇದು 'ಹಿಂದಣ ಹೆಜ್ಜೆಯ ನೋಡಿ ಕಂಡಲ್ಲದೆ ನಿಂದ ಹೆಜ್ಜೆಯನರಿಯಬಾರದು' ಎಂಬ ಅಲ್ಲಮಪ್ರಭುವಿನ ವಚನದಿಂದ ಆಯ್ದುಕೊಂಡಿರುವಂಥದು. ಜಿಎಸ್‌ಎಸ್ ಅವರೇ ಹೇಳು ವಂತೆ—"ಪರಂಪರೆ ಎನ್ನುವುದು ಹಿಂದಣ ಹೆಜ್ಜೆ ಗುರುತುಗಳ ಒಂದು ಸುದೀರ್ಘಪಥ. ಆ ಹಿಂದಣ ಹೆಜ್ಜೆಗಳನ್ನು 'ನೋಡಿ ಕಂಡಲ್ಲದೆ' ನಾವು 'ನಿಂದ ಹೆಜ್ಜೆ'ಯನ್ನು ಅಥವಾ ನಮ್ಮ 'ವರ್ತಮಾನ'ವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಪರಂಪರೆ ಹಾಗೂ ವರ್ತಮಾನಗಳ ಸಂಬಂಧವನ್ನು ವಿಶಿಷ್ಟವಾದ ರೀತಿಯಲ್ಲಿ ವ್ಯಾಖ್ಯಾನಿಸುವ ಈ ಮಾತು ಅತ್ಯಂತ ಮುಖ್ಯವಾದದ್ದು. ಸಾಹಿತ್ಯ ನಿರ್ಮಿತಿ ಎನ್ನುವುದು ತನ್ನ ವರ್ತಮಾನದ ಸಮಕಾಲೀನ ಅನುಭವಗಳ ನೆಲೆಯಲ್ಲಿ ನಿಂತು ಸೃಜನಶೀಲ ಮನಸ್ಸು ತನ್ನ ಹಿಂದಿನ ಪರಂಪರೆಯೊಂದಿಗೆ ಏರ್ಪಡಿಸಿಕೊಳ್ಳುವ ಸಂಬಂಧ ಹಾಗೂ ಪ್ರತಿಕ್ರಿಯೆಗಳ ಪರಿಣಾಮವಾಗಿದೆ. ಹಾಗೆಯೆ ನಿಜವಾದ ಸಾಹಿತ್ಯ ವಿಮರ್ಶೆಯಾಗಲೀ, ಸಂಶೋಧನೆಯಾಗಲೀ ಪರಂಪರೆಯ ಅರಿವು ಮತ್ತು ಅನುಸಂಧಾನದಿಂದ ನಡೆಯಬೇಕಾದ ಕ್ರಿಯೆಯಾಗಿದೆ."

ಈ ಹಿನ್ನೆಲೆಯಲ್ಲಿ ಜಿಎಸ್‌ಎಸ್ ಅವರ ವಿಮರ್ಶಾ ಬರಹಗಳನ್ನೆಲ್ಲಾ ಸಮಗ್ರವಾಗಿ ನೋಡಿದಾಗ "ಕನ್ನಡ ಪರಂಪರೆಯನ್ನು ಕಂಡುಕೊಳ್ಳುವ" ಪ್ರಯತ್ನವಾಗಿ ಅವರ ವಿಮರ್ಶೆ ಕಾಣಿಸುತ್ತದೆ. ಸಾಹಿತ್ಯ ವಿಮರ್ಶಕರಾಗಿ ಶಿವರುದ್ರಪ್ಪನವರು ನಮ್ಮ ಸಂದರ್ಭದಲ್ಲಿ ಬಹಳ ಮುಖ್ಯರಾಗುವುದು ಈ ನೆಲೆಯಲ್ಲಿಯೇ. ಇಡಿಯಾಗಿ ಕನ್ನಡ ಸಾಹಿತ್ಯವನ್ನು ವಿವೇಚಿಸಿ ಅದರ ಅನನ್ಯತೆಯನ್ನು, ಸಾತತ್ಯವನ್ನು ಸಮರ್ಪಕ ರೀತಿಯಲ್ಲಿ ಗುರುತಿಸಿರುವುದು ಜಿಎಸ್‌ಎಸ್ ವಿಶಿಷ್ಟತೆ.

ಪಂಪ, ವಚನಕಾರರು, ಹರಿಹರ, ರಾಘವಾಂಕ, ಲಕ್ಷ್ಮೀಶ, ಸರ್ವಜ್ಞ—ಹೀಗೆ ಹಳಗನ್ನಡ ಸಾಹಿತ್ಯದ ಪ್ರಮುಖ ಧ್ವನಿಗಳನ್ನು ಜಿಎಸ್‌ಎಸ್ ಆಧುನಿಕ ಸಂವೇದನೆಯ ನೆಲೆಯಿಂದ ವ್ಯಾಖ್ಯಾನಿಸಿದ್ದಾರೆ. ಬಿ.ಎಂ.ಶ್ರೀ, ಗೋವಿಂದ ಪೈ, ಕುವೆಂಪು, ಬೇಂದ್ರೆ, ಪುತಿನ, ಮಾಸ್ತಿ, ವೀಸೀ, ವಿನಾಯಕ, ಕಣವಿ, ಅಡಿಗ—ಹೀಗೆ ಆಧುನಿಕ ಸಾಹಿತ್ಯದ ಪ್ರಮುಖರನ್ನು ಚರ್ಚಿಸಿದ್ದಾರೆ. ಸಾಹಿತ್ಯದ ಪ್ರೇರಣೆ, ಕವಿ-ಸಹೃದಯ ಸಂಬಂಧ, ಸಮಕಾಲೀನ ಪ್ರಜ್ಞೆ, ಸಾಮಾಜಿಕ ಚಿಂತನೆ, ಅಭಿವ್ಯಕ್ತಿ ಸ್ವಾತಂತ್ರ್ಯ, ಸಾಹಿತ್ಯದಲ್ಲಿ ಪ್ರಾಮಾಣಿಕತೆ ಮೊದಲಾದ ಪರಿಕಲ್ಪನೆಗಳನ್ನು ವಿಶ್ಲೇಷಿಸಿದ್ದಾರೆ. ಹೀಗೆ ಪಂಪನಿಂದ ಅಡಿಗರವರೆಗೆ ಪ್ರಮುಖ ಕವಿ-ಕೃತಿಗಳನ್ನು ವಿವೇಚಿಸಿರುವ, ಪ್ರಮುಖ ಸಾಹಿತ್ಯ ಚಳವಳಿ ಪರಿಕಲ್ಪನೆಗಳಿಗೆ ಪ್ರತಿಕ್ರಿಯಿಸಿರುವ ಶಿವರುದ್ರಪ್ಪನವರು 'ಕನ್ನಡ ಪರಂಪರೆಯ ಚರಿತ್ರೆ'ಯನ್ನು ವಿಶಿಷ್ಟರೀತಿಯಲ್ಲಿ ಬರೆದಂತೆ ತೋರುತ್ತದೆ.

ಜಿಎಸ್‌ಎಸ್ ವಿಮರ್ಶಾ ಕ್ಷೇತ್ರವನ್ನು ಪ್ರವೇಶಿಸುವ ವೇಳೆಗಾಗಲೇ ಪಾಶ್ಚಾತ್ಯ ಸಾಹಿತ್ಯದ ಪ್ರಭಾವ ನಮ್ಮ ಚಿಂತನೆಯನ್ನು ರೂಪಿಸುತ್ತಿತ್ತು. ಜಾಗತಿಕ ಸಾಹಿತ್ಯದ ಪರಿಚಯವಾಗತೊಡಗಿತ್ತು. ಪಾಶ್ಚಾತ್ಯ ಶಿಕ್ಷಣದ ಫಲವಾಗಿ ಮೂಡಿದ 'ಆಧುನಿಕ ಸಂವೇದನೆ' ವಾತಾವರಣದಲ್ಲಿಯೇ ಇತ್ತು. ಎ.ಆರ್. ಕೃಷ್ಣಶಾಸ್ತ್ರಿ, ತೀ.ನಂ. ಶ್ರೀಕಂಠಯ್ಯ, ಎಸ್.ವಿ. ರಂಗಣ್ಣ, ಕುವೆಂಪು, ವೀಸೀ, ಮಾಸ್ತಿ—ಮೊದಲಾದವರು ಹಳಗನ್ನಡ ಸಾಹಿತ್ಯ, ಸಾಹಿತ್ಯ ತತ್ತ್ವ ಮೊದಲಾದವುಗಳನ್ನು ಕುರಿತಂತೆ ತಮ್ಮ ಚಿಂತನೆಯನ್ನು ಮಂಡಿಸುತ್ತಿದ್ದರು. ಈ ಸಂದರ್ಭದಲ್ಲಿ ಜಿಎಸ್‌ಎಸ್ ತಮ್ಮ ಸಾಹಿತ್ಯ ಚಿಂತನೆಯನ್ನು ರೂಪಿಸಿಕೊಳ್ಳತೊಡಗಿದರು. ಹೀಗಾಗಿ ಪರಂಪರೆಯನ್ನು ನೋಡುವ ಹೊಸನೋಟವೊಂದು ಜಿಎಸ್‌ಎಸ್ ಅವರಿಗೆ ಆರಂಭದಲ್ಲೇ ಒದಗಿ ಬಂದಿತು. ಜೊತೆಗೆ ಆ ವೇಳೆಗಾಗಲೇ ಪ್ರಗತಿಶೀಲ ಚಳವಳಿ ಪ್ರಬಲವಾಗಿದ್ದು, ನವ್ಯಚಳವಳಿ ಆರಂಭವಾಗುತ್ತಿದ್ದುದರಿಂದ ಸಾಹಿತ್ಯವನ್ನು ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಯಾಗಿಯೂ ಕಾಣುವ ಮನೋಭಾವ ಸೇರಿಕೊಂಡಂತೆ ತೋರುತ್ತದೆ. ಇದರಿಂದಾಗಿ "ಕೃತಿಗಳ ವರ್ಣನೆ, ವಿವರಣೆ, ರಸಗ್ರಹಣಗಳಿಗೆ ವಿಮರ್ಶೆಯನ್ನು ಮೀಸಲಿಡದೆ, ಆ ಕೃತಿಗಳ ಸಾಹಿತ್ಯಕ, ಕೆಲವೊಮ್ಮ ಸಾಂಸ್ಕೃತಿಕ ಮಹತ್ತ್ವವನ್ನು ಎತ್ತಿ ಹೇಳುವುದರ ಕಡೆಗೆ ಜಿಎಸ್‌ಎಸ್ ಅವರ ವಿಮರ್ಶೆ ಒಲಿಯುತ್ತದೆ" ಎಂದು ಕೆ.ವಿ. ನಾರಾಯಣ ಅವರು ಗುರ್ತಿಸಿರುವುದು ಉಚಿತವಾಗಿಯೇ ಇದೆ.

ಜಿಎಸ್‌ಎಸ್ ಯಾವುದೇ ವಿಚಾರವನ್ನು ಒಂದು ವಾಗ್ವಾದವೆಂಬಂತೆ ಮಂಡಿಸುವುದಿಲ್ಲ. ಮೆಲುದನಿಯಲ್ಲೇ ಹೇಳಿದರೂ ರೂಢಿಯ ರೀತಿಗಿಂತ ಭಿನ್ನವಾದ ನಿಲುವನ್ನು ತಾಳುವಲ್ಲಿ ಅವರು ಉತ್ಸಾಹ ತೋರಿಸುತ್ತಾರೆ. ಇದರಿಂದಾಗಿ ಅವರ ವಿಮರ್ಶೆ ಅನೇಕ ಉಪಯುಕ್ತ ಮಾಹಿತಿಗಳನ್ನು ನೀಡುತ್ತಲೇ ಅಪೂರ್ವ-ಒಳನೋಟಗಳನ್ನೂ ಸಹಜವೆಂಬಂತೆ ಕಾಣಿಸಿಬಿಡುತ್ತದೆ. ಜಿಎಸ್‌ಎಸ್ ಹೀಗೆ ಕಾಣಿಸುವ ಅನೇಕ ಸಂಗತಿಗಳನ್ನು ಕನ್ನಡ ವಿಮರ್ಶೆ ಇನ್ನೂ ಅಧ್ಯಯನ ಮಾಡಬೇಕಿದೆ. ಬಂಡಾಯ ಸಾಹಿತ್ಯವನ್ನು ಕುರಿತ ಲೇಖನದಲ್ಲಿ ಅವರು 'ಕನ್ನಡ ಸಾಹಿತ್ಯದ ವಸ್ತು ಪರಂಪರೆ'ಯನ್ನು ಗುರ್ತಿಸುವ, ಪ್ರಾಸಂಗಿಕವೆಂಬಂತೆ ತೋರುವ ಗ್ರಹಿಕೆಯನ್ನೇ ನಾವು ಉದಾಹರಣೆಯನ್ನಾಗಿ ಗಮನಿಸಬಹುದು. ಇಡೀ ಕನ್ನಡ ಸಾಹಿತ್ಯದಲ್ಲಿ 'ವಸ್ತು' ಬೆಳೆದು ಬಂದ ಬಗೆಯನ್ನು ಜಿಎಸ್‌ಎಸ್ ಇಲ್ಲಿ ಸಾರರೂಪಿಯಾಗಿ ಹೇಳುತ್ತಾರೆ. ಜಿಎಸ್‌ಎಸ್ ಅವರ ಲೇಖನಗಳಲ್ಲಿ ಇಂತಹ 'ಸಾರರೂಪೀ ಅಂಶಗಳು' ಅಲ್ಲಲ್ಲಿ ಸಾಕಷ್ಟು ಕಾಣಿಸಿಕೊಳ್ಳುತ್ತವೆ. ಇವೆಲ್ಲ ಚರ್ಚಿಸಿ ಬೆಳೆಸಬಹುದಾದಂಥವು. ಪಂಪನು ಚಿತ್ರಿಸುವ ರಣರಂಗದ ಪರಿಸರದಲ್ಲಿ ಬರುವ ಸಾಮಾನ್ಯರ ಭಾವನೆಯನ್ನು ಜಿಎಸ್‌ಎಸ್ ವ್ಯಾಖ್ಯಾನಿಸುವ ಕ್ರಮವನ್ನೂ ಸಹ ನಾವಿಲ್ಲಿ ಗಮನಿಸಬಹುದು. ಪಂಪನ ಈ ಸನ್ನಿವೇಶ ಚಿತ್ರಣವನ್ನು ಶಿವರುದ್ರಪ್ಪನವರು ಹೋಮರ್‌ನ ಅಂಥದೇ ಸನ್ನಿವೇಶವೊಂದರ ಜೊತೆ ಹೋಲಿಸಿ ಕಡೆಗೆ ಅವರು ತಲುಪುವ ನಿಲುವನ್ನು ಗಮನಿಸಿ: "ನಮ್ಮ ಸಾಂಸ್ಕೃತಿಕ ಇತಿಹಾಸವೆಲ್ಲವೂ ಮಾನವನ ನೋವುಗಳನ್ನೂ, ತಾಕಲಾಟಗಳನ್ನೂ ಗಣನೆಗೆ ತೆಗೆದುಕೊಳ್ಳದೆ, ತತ್ಪರಿಣಾಮವಾದ

ಸಾಧನೆಗಳನ್ನೂ ಮತ್ತು ಮೌಲ್ಯಗಳನ್ನು ಮಾತ್ರವೇ ವ್ಯಾಖ್ಯಾನಿಸುವ ಸ್ವರೂಪದ್ದಾಗಿರುವುದರಿಂದ ಅದು ಕೇವಲ ಸಂಸ್ಕೃತಿಯ ವೈಭವೀಕರಣವಾಗಿದೆಯೇನೋ ಎಂಬ ಅನುಮಾನ ನನಗೆ". ಇಂಥ ಸಕಾರಣ ಅನುಮಾನಗಳು ಶಿವರುದ್ರಪ್ಪನವರ ಲೇಖನಗಳಲ್ಲಿ ಸಾಕಷ್ಟಿವೆ. ವಚನ ಸಾಹಿತ್ಯವನ್ನು ಅವರು ವಿಶ್ಲೇಷಿಸುತ್ತ "ಅವರ ಧೋರಣೆಗಳು ನೈತಿಕ ಹಾಗೂ ಪಾರಮಾರ್ಥಿಕ ಮನುಷ್ಯನನ್ನು ನಿರ್ಮಿಸುವ ಉದ್ದೇಶಕ್ಕಾಗಿವೆಯೇ ಹೊರತು, ನಿಜವಾದ ಸಾಮಾಜಿಕ ಮನುಷ್ಯನನ್ನು ನಿರ್ಮಿಸುವ ಉದ್ದೇಶದವುಗಳಾಗಿಲ್ಲ" ಎಂದು ಹೇಳುತ್ತಾರೆ. "ಹರಿಹರನ ಕಾವ್ಯದಲ್ಲಿ ಮೊಟ್ಟಮೊದಲಿಗೆ ಸಮಾಜದ ಕೆಳಗಿನ ಸ್ತರದಿಂದ ಬಂದ ಸಾಮಾನ್ಯಜನ, ಒಬ್ಬ ಬೆಸ್ತ, ಒಬ್ಬ ಬೇಡ, ಒಬ್ಬ ಒಕ್ಕಲಿಗ, ಒಬ್ಬ ಕುಂಬಾರ—ಇಂಥ ಸಾಮಾನ್ಯ ಜನ ಕಾವ್ಯದ ಕಥಾನಾಯಕರಾದದ್ದು ಮೇಲುನೋಟಕ್ಕೆ ಮಹತ್ತ್ವದ್ದೆಂಬಂತೆ ತೋರಿದರೂ, ಅವರು ಯಾರೂ ಅವರವರು ಬಂದ ಸಾಮಾಜಿಕ ಸ್ತರವನ್ನು ನಿಜವಾದ ಅರ್ಥದಲ್ಲಿ ಪ್ರತಿನಿಧಿಸದೆ ತಮ್ಮ ಭಕ್ತಿಯಿಂದ ಭಗವತ್ಪರವಾದ ಅಥವಾ ಕೈಲಾಸದ ದಾರಿಯಲ್ಲಿ ಹೊರಟ ಅಸಾಮಾನ್ಯರೇ ಆಗಿದ್ದಾರೆ" ಎಂದು ಗುರ್ತಿಸುತ್ತಾರೆ. ಕನ್ನಡ ಸಾಹಿತ್ಯ ಅನೇಕ ಹಂತಗಳಲ್ಲಿ ಭಿನ್ನ ಸಂಸ್ಕೃತಿಗಳೊಡನೆ ಘರ್ಷಿಸುತ್ತ, ತನ್ನ ಅನನ್ಯತೆಯನ್ನು ಉಳಿಸಿಕೊಳ್ಳುತ್ತ ಬೆಳೆದುಬಂದಿದೆ. ಪಂಪ, ವಚನಕಾರರು, ಹರಿಹರ-ರಾಘವಾಂಕ, ಜನ್ನ, ಕುಮಾರವ್ಯಾಸ—ಹೀಗೆ ಯಾವುದೇ ಪ್ರಮುಖ ಧ್ವನಿಯನ್ನು ನೋಡಿದರೂ ಪರಂಪರೆಗೆ ತನ್ನದೇ ಆದ ರೀತಿಯಲ್ಲಿ ಪ್ರತಿಕ್ರಿಯಿಸುತ್ತ ಕನ್ನಡ ಸಾಹಿತ್ಯ ಬೆಳೆದುಬಂದಿದೆ. ಈ ಬೆಳವಣಿಗೆಯನ್ನು ಜಿಎಸ್ಎಸ್ ತಮ್ಮ ಲೇಖನಗಳಲ್ಲಿ ಅತ್ಯಂತ ಸಮರ್ಪಕವಾಗಿ ಗುರುತಿಸಿದ್ದಾರೆ. ರಾಘವಾಂಕ, ರತ್ನಾಕರ—ಮೊದಲಾದವರನ್ನು ಕುರಿತ ಲೇಖನಗಳಂತೂ ಕೇವಲ ಒಬ್ಬ ಕವಿಯನ್ನು ಕುರಿತ ವಿಶ್ಲೇಷಣೆ ಮಾತ್ರವಾಗದೆ ಪರಂಪರೆಯನ್ನು ವ್ಯಾಖ್ಯಾನಿಸುವ, ಅರ್ಥೈಸುವ, ವ್ಯಾಪ್ತಿ ಪಡೆದುಕೊಳ್ಳುತ್ತವೆ. 'ಪರಂಪರೆ ಮತ್ತು ರಾಘವಾಂಕ ಪ್ರತಿಭೆ' ಎಂಬ ಶೀರ್ಷಿಕೆಯೇ ಜಿಎಸ್ಎಸ್ ಅವರ ವಿಮರ್ಶೆಯ ಸ್ವರೂಪವನ್ನೂ ಸೂಚಿಸುತ್ತದೆ. ಇದು ಎಲಿಯಟ್‌ನ 'ಪರಂಪರೆ ಮತ್ತು ವ್ಯಕ್ತಿಪ್ರತಿಭೆ' ಪರಿಕಲ್ಪನೆಯೇ ಆದರೂ, ಅದನ್ನು ಜಿಎಸ್ಎಸ್ ನಮ್ಮ ಪ್ರಾಚೀನ ಕಾವ್ಯ ಪರಂಪರೆಯ ಅರ್ಥೈಸುವಿಕೆಯಲ್ಲಿ ಬಳಸಿಕೊಂಡಿರುವುದು ಗಮನಿಸಬೇಕಾದ ಸಂಗತಿ. ಹೀಗಾಗಿ ಜಿಎಸ್ಎಸ್ ಅವರ ಆಸಕ್ತಿ ಸಹಜವಾಗಿಯೇ 'ಪರಂಪರೆ'ಯ ಅರ್ಥೈಸುವಿಕೆ.

ಆಧುನಿಕ ಸಾಹಿತ್ಯವನ್ನು ವಿಶ್ಲೇಷಿಸುವಾಗಲೂ ಶಿವರುದ್ರಪ್ಪನವರು ಇದೇ ನಿಲುವನ್ನು ತಾಳುತ್ತಾರೆ. ಪ್ರಾಯೋಗಿಕ ವಿಮರ್ಶೆಯ ಮಾದರಿಯ ಬರಹಗಳು ಅವರಲ್ಲಿ ಸಿಗುವುದೇ ಇಲ್ಲ. ಪುತಿನ ಅವರ ವಿಶಿಷ್ಟತೆ, ಬಿಎಂಶ್ರೀ ನವೋಯದಯ ನಾಂದಿ, ನವೋದಯದ ಚೌಕಟ್ಟಿನಲ್ಲಿ ಗೋವಿಂದಪೈ, ವೀಸೀ ಅವರ ಕಾವ್ಯದ ವೈಶಿಷ್ಟ್ಯಗಳು, ವಿನಾಯಕರ ಕಾವ್ಯಮಾರ್ಗ, ಕೆಎಸ್‌ನ ರ ಪ್ರೇಮ ಕವಿತೆಗಳು—ಹೀಗೆ ಒಬ್ಬ ಕವಿಯನ್ನು ಇಡಿಯಾಗಿ, ಸಾಹಿತ್ಯ ಪರಂಪರೆಯಲ್ಲಿಟ್ಟು ನೋಡುವುದೇ ಜಿಎಸ್ಎಸ್ ಅವರ ಕ್ರಮ.

ಕಾವ್ಯ ನಿರ್ಮಿತಿ, ಸಾಹಿತ್ಯ ವಿಮರ್ಶೆ ಹಾಗೂ ಕಾವ್ಯ ಮೀಮಾಂಸೆ—ಈ ಮೂರರಲ್ಲೂ ಜಿಎಸ್ಎಸ್ ಅವರಿಗೆ ಸಮಾನ ಆಸಕ್ತಿ. ಈ ಎಲ್ಲವೂ ಒಂದು ಮತ್ತೊಂದಕ್ಕೆ ಅವಿರೋಧವಾದ ಹಾಗೂ ಪೂರಕವಾದ ಕ್ರಿಯೆಗಳೆಂದು ಅವರು ನಂಬುತ್ತಾರೆ. ಆದ್ದರಿಂದ ಅವರ ಮನಸ್ಸು ಕಾವ್ಯದ ಉತ್ತಮಾಂಶಗಳನ್ನು ಗುರ್ತಿಸುವತ್ತ, ಕಾವ್ಯತತ್ವಗಳನ್ನು ಅನ್ವೇಷಿಸುವತ್ತ ಸುಲಭವಾಗಿ ಹೊರಳಿಬಿಡುತ್ತದೆ. 'ಪಂಪನ ಪುಷ್ಪೋದ್ಯಾನ', 'ಬಸವಣ್ಣನವರ ವಚನಗಳಲ್ಲಿ ಕಾವ್ಯಸೌಂದರ್ಯ', 'ಶ್ರವಣ ಬೆಳಗೊಳದ ಕನ್ನಡದ ಶಾಸನಗಳಲ್ಲಿ ಕಾವ್ಯಗುಣ'—ಮುಂತಾದ ಲೇಖನಗಳು ಮಾತ್ರವಲ್ಲ, ಉಳಿದ ಲೇಖನಗಳಲ್ಲೂ ಆಯಾಯ ಕವಿ-ಕೃತಿಗಳ ಕಾವ್ಯ ಚೆಲುವಿನತ್ತ ಜಿಎಸ್ಎಸ್ ನಮ್ಮ ಗಮನ ಸೆಳೆಯುತ್ತಾರೆ. ಹಾಗೆಯೇ ಕಾಯಕ ತತ್ವ, ಸಾಮಾಜಿಕ ಹೊಣೆಗಾರಿಕೆ, ಅಭಿವ್ಯಕ್ತಿ ಸ್ವಾತಂತ್ರ್ಯ, ಸಮಕಾಲೀನ ಪ್ರಜ್ಞೆ, ಪ್ರಾಮಾಣಿಕತೆ-ಮೊದಲಾದ ಸಾಹಿತ್ಯ ಸಂದರ್ಭದ ಪರಿಕಲ್ಪನೆಗಳನ್ನೂ ವಿಶ್ಲೇಷಿಸುತ್ತಾರೆ. ಈ ಎಲ್ಲದರ ಮೂಲಕ ರಸಗ್ರಹಣ ಶಕ್ತಿ, ಯುಕ್ತಾಯುಕ್ತ ವಿವೇಚನೆ, ಸದಭಿರುಚಿಗಳನ್ನು ಕಾಯ್ದುಕೊಳ್ಳುವ ಇರಾದೆ ಎದ್ದು ಕಾಣುತ್ತದೆ.

ಜಿಎಸ್ಎಸ್ ಅವರದು ಸಾಮಾನ್ಯವಾಗಿ ನಿರುದ್ವಿಗ್ನವಾದ ಸಮಚಿತ್ತದ ಬರವಣಿಗೆ. ಇದು ವಿಮರ್ಶೆಗೆ ಹದವಾದ ರೀತಿ. ತಮಗೆ ಒಪ್ಪಿಗೆಯಿಲ್ಲದಿದ್ದಾಗಲೂ ಅದನ್ನು ಹೇಳಿ, ಆ ನಂತರ ತಮ್ಮ ನಿಲುವನ್ನು ಒಲವನ್ನು ದಾಖಲಿಸುವುದು ಅವರ ಕ್ರಮ. ಆದರೆ ಕೆಲವೊಮ್ಮೆ ಅವರು ಈ ಹದವನ್ನು ಕಳೆದುಕೊಂಡು ಅಸಹನೆಯ ದನಿಯಲ್ಲಿ ಮಾತನಾಡುವುದನ್ನೂ ಅವರ ಲೇಖನಗಳಲ್ಲಿ ಕಾಣುತ್ತೇವೆ. ಒಂದೆರಡು ಸಂದರ್ಭಗಳಲ್ಲಿ ಇದು ದಟ್ಟವಾಗಿ ಕಾಣಿಸುತ್ತದೆ. ನಿದರ್ಶನಕ್ಕಾಗಿ 'ಕುಮಾರವ್ಯಾಸನ ಭಾರತ: ಕೆಲವು ಮರುಚಿಂತನೆಗಳು' ಲೇಖನವನ್ನು ಗಮನಿಸಬಹುದು. ಪಂಪ, ಕುಮಾರವ್ಯಾಸರಲ್ಲಿ ಶಿವರುದ್ರಪ್ಪನವರ ಒಲವು ನಿಸ್ಸಂದೇಹವಾಗಿ ಪಂಪನ ಕಡೆಗೆ. ಹೀಗಾಗಿ ಅವರು ಕುಮಾರವ್ಯಾಸನ ಬಗ್ಗೆ ಬರೆಯಹೊರಟು, ಪಂಪನ ಬಗ್ಗೆ ವಕಾಲತ್ತು ವಹಿಸಿದವರಂತೆ ಮಾತನಾಡತೊಡಗುತ್ತಾರೆ. ಇದು ಜಿಎಸ್ಎಸ್ ಅವರ ಸಹಜ ರೀತಿಯಲ್ಲ. ನವ್ಯದ ಬಗ್ಗೆ ಮಾತನಾಡುವಾಗಲೂ ಇಂಥದೇ ಅಸಹನೆ ಹಣಕಿಹಾಕುತ್ತದೆ. ಹಾಗೆ ನೋಡಿದರೆ ಜಿಎಸ್ಎಸ್ 'ನವ್ಯ ಸಾಹಿತ್ಯ'ವನ್ನು ಕುರಿತು ಬರೆದದ್ದು ಕಡಿಮೆಯೇ. ಪ್ರಾಸಂಗಿಕವಾಗಿ ನವ್ಯದ ಪ್ರಸ್ತಾಪ ಬರುವುದನ್ನು ಬಿಟ್ಟರೆ 'ಗೋಪಾಲಕೃಷ್ಣ ಅಡಿಗರ ಕಾವ್ಯ'ವನ್ನು ಕುರಿತಂತೆ ಒಂದು ಲೇಖನವಿದೆ, ಅಷ್ಟೆ. ಅವರ ಸಾಹಿತ್ಯ ಚಿಂತನೆಯೆಲ್ಲವೂ ಬಹುಮಟ್ಟಿಗೆ ನವೋದಯ ಸಾಹಿತ್ಯ ಸಂದರ್ಭಕ್ಕೆ ಸಂಬಂಧಿಸಿದಂತೆಯೇ ಇದೆ. ಜಿಎಸ್ಎಸ್ ಅವರಿಗೂ ಇದರ ಅರಿವಿದೆ. ಅವರೇ ಹೇಳುತ್ತಾರೆ—"ಈ ಸಂಪುಟದ ಬಹುತೇಕ ಬರಹಗಳು ನವೋದಯ ಸಾಹಿತ್ಯ ಸಂದರ್ಭವನ್ನು ಹಾಗೂ ಅದರೊಂದಿಗೆ ಸಂಬಂಧಿಸಿದ ಕವಿಗಳನ್ನೂ ಕುರಿತದ್ದಾಗಿದೆ ಎನ್ನುವುದು ಆಕಸ್ಮಿಕದ ಸಂಗತಿಯೇನಲ್ಲ. ಯಾಕೆಂದರೆ ನಾನು ಕವಿತೆ ಹಾಗೂ ಸಾಹಿತ್ಯ-ವಿಮರ್ಶೆಯನ್ನು ಆರಂಭಿಸಿದ್ದೇ ನವೋದಯದ ಉತ್ಕರ್ಷದ ಕಾಲದಲ್ಲಿ ಮತ್ತು ನನ್ನ ಸಾಹಿತ್ಯಕ ವ್ಯಕ್ತಿತ್ವ ರೂಪುಗೊಂಡದ್ದು

ಹಾಗೂ ಬೆಳೆದದ್ದು ನವೋದಯದ ಕಾಲಮಾನದ ಸತ್ವದಿಂದಲೇ. ಆದರೂ ನಾನು ಉದ್ದಕ್ಕೂ ವಿವಿಧ ಚಳವಳಿಗಳ ಮೂಲಕ ಹಾದುಬಂದಿರುವುದರಿಂದ ಹಾಗೂ ಅವುಗಳ ಸತ್ವಗಳಿಂದ ಬೆಳೆದಿರುವುದರಿಂದ ಇನ್ನಿತರ ಸಾಹಿತ್ಯ ಚಳವಳಿಗಳ ಸಾಧನೆಗಳನ್ನೂ ತಕ್ಕ ಎಚ್ಚರ ಹಾಗೂ ಗೌರವಗಳಿಂದಲೇ ಗುರುತಿಸಲು ಪ್ರಯತ್ನಿಸಿದ್ದೇನೆ". 'ಪರಂಪರೆ ಮತ್ತು ಹೊಸಗನ್ನಡದ ಕಾವ್ಯ', 'ಬಂಡಾಯ ಸಾಹಿತ್ಯವನ್ನು ಕುರಿತು', 'ಗೋಪಾಲಕೃಷ್ಣ ಅಡಿಗರ ಕಾವ್ಯ'—ಇಂಥಲ್ಲಿ ಈ 'ಎಚ್ಚರ' ಮತ್ತು 'ಗೌರವ'ಗಳನ್ನು ನಾವು ಕಾಣಬಹುದಾಗಿದೆ.

ಶಿವರುದ್ರಪ್ಪನವರ ಈ ಎರಡೂ ಸಂಪುಟಗಳು ಸೇರಿದರೆ ಒಟ್ಟು ಎಪ್ಪತ್ತೇಳು ಲೇಖನಗಳಿವೆ. ಇವುಗಳಲ್ಲಿ 'ಕಾರಂತರ ಮೂಕಜ್ಜಿಯ ಕನಸುಗಳು; ಕೆಲವು ಮಾತುಗಳು' ಎಂಬ ಒಂದು ಲೇಖನವನ್ನು ಬಿಟ್ಟರೆ ಉಳಿದಂತೆ 'ಕಾವ್ಯ-ವಿಮರ್ಶೆ- ಮೀಮಾಂಸೆ'ಯನ್ನು ಹೊರತುಪಡಿಸಿ ಉಳಿದ ಯಾವ ಪ್ರಕಾರಗಳ ಬಗ್ಗೆಯೂ ಜಿಎಸ್‌ಎಸ್ ಅವರ ಗಮನ ಹೋಗದಿರುವುದು ಆಶ್ಚರ್ಯಕರವಾಗಿ ಕಾಣಿಸುತ್ತದೆ. ಇದರಿಂದಾಗಿಯೇ ಇರಬೇಕು ಪ್ರಗತಿಶೀಲ ಚಳವಳಿ ಶಿವರುದ್ರಪ್ಪನವರ ಚರ್ಚೆಯ ವಲಯದಿಂದಾಚೆಗೇ ಉಳಿಯುತ್ತದೆ.

ಜಿಎಸ್‌ಎಸ್ ಅವರ ವಿಮರ್ಶಾಬರಹ, ವಾಗ್ವಾದಗಳನ್ನು ಸೃಷ್ಟಿಸುವಂಥದಲ್ಲ; ಆದರೆ ಅಂಥ ವಾಗ್ವಾದಗಳಿಗೆ ಬೇಕಾದ ಭೂಮಿಕೆ ಸಿದ್ಧಪಡಿಸುವ ಅನೇಕ ಉಪಯುಕ್ತ ಮಾಹಿತಿಗಳನ್ನೊಳಗೊಂಡಂಥದು. ತಕ್ಷಣ ತನ್ನ ಪ್ರಖರತೆಯಿಂದ ಕಣ್ಸೆಳೆಯುವಂಥದಲ್ಲ; ಪದಪುಂಜಗಳಲ್ಲಿ ಮೆರೆಯುವುದಿಲ್ಲ; ಓದುಗನನ್ನು ಜೊತೆಗೆ ಕರೆದೊಯ್ಯುತ್ತ ಪರ-ವಿರೋಧ ಸಂಗತಿಗಳನ್ನು ಮನಗಾಣಿಸುತ್ತ ಸಂಕೀರ್ಣ ಸಂಗತಿಗಳನ್ನೂ ತಲುಪಿಸಲು ಪ್ರಯತ್ನಿಸುತ್ತದೆ.

ನಾಲ್ಕು ದಶಕಗಳಿಂದಲೂ ಶಿವರುದ್ರಪ್ಪನವರು ವಿಮರ್ಶೆ ಬರೆಯುತ್ತಿದ್ದಾರೆ. 'ಕನ್ನಡದ ಪರಂಪರೆ' ಬೆಳೆದುಬಂದ ಹಾದಿಯನ್ನು ತುಂಬ ಸಮರ್ಥವಾಗಿ ಗುರುತಿಸಿದ್ದಾರೆ. ಕನ್ನಡ ಸಾಹಿತ್ಯದ ಪ್ರಮುಖ ಹಂತಗಳಿಗೆ ಅರ್ಥಪೂರ್ಣವಾಗಿ ಪ್ರತಿಕ್ರಿಯಿಸಿದ್ದಾರೆ. ಆದರೆ ಇವರ ವಿಮರ್ಶಾ ಬರವಣಿಗೆಯನ್ನು ಕುರಿತಂತೆ ಸಾಕಷ್ಟು ಚರ್ಚೆಯಾಗದಿರುವುದು ಮಾತ್ರ ಆಶ್ಚರ್ಯದ ಸಂಗತಿ. ವೈಯಕ್ತಿಕ ಬರವಣಿಗೆಗಳ ಮೂಲಕ ಮಾತ್ರವಲ್ಲ, ವಿಶ್ವವಿದ್ಯಾಲಯ, ಅಕಾಡೆಮಿ ಸಂಸ್ಥೆಗಳ ಮೂಲಕವೂ ಅವರು ಕನ್ನಡ ವಿಮರ್ಶೆಯ ಬೆಳವಣಿಗೆಗೆ ನೀಡಿರುವ ಕೊಡುಗೆ ಅವರ ಬಗ್ಗೆ ಗೌರವ ಮೂಡಿಸುವಂಥದಾಗಿದೆ. ಕನ್ನಡ ವಿಮರ್ಶೆಯ ಈ ಹಂತದಲ್ಲಿ 'ಹಿಂದಣ ಹೆಜ್ಜೆ'ಯನ್ನು 'ನೋಡಿ ಕಾಣು'ವುದು ವಿಮರ್ಶೆಯ ಮುಂದಿನ ಬೆಳವಣಿಗೆಯ ದೃಷ್ಟಿಯಿಂದ ಅನಿವಾರ್ಯ ಅಗತ್ಯವಾಗಿದೆ.

—ಡಾ॥ ನರಹಳ್ಳಿ ಬಾಲಸುಬ್ರಹ್ಮಣ್ಯ

*(ಮಯೂರ, ಮಾರ್ಚ್ 1995)*

■

## *ಸಮಗ್ರ ಗದ್ಯ : ಸಂಪುಟ-2*

**ಪ್ರಕಾಶಕರು: ಸ್ನೇಹ ಪ್ರಕಾಶನ, ವಿಜಯನಗರ 2 ನೇ ಹಂತ, ಬೆಂಗಳೂರು.**
**ಪುಟಗಳು: 440; ಬೆಲೆ: ರೂ. 75.**

---

ಜೆಎಸ್‌ಎಸ್ ಅವರು ಬರೆದ ಲೇಖನಗಳ ಮೊದಲನೆಯ ಸಂಪುಟ ಈಗಾಗಲೇ ಹೊರಬಂದಿದ್ದು. ಈಗ ಎರಡನೆಯ ಸಂಪುಟವು ಹೊರಬರುತ್ತಿದೆ. ಮೊದಲನೆಯ ಸಂಪುಟವು ಪ್ರಾಚೀನ ಸಾಹಿತ್ಯವನ್ನು ಕುರಿತಿದ್ದರೆ; ಎರಡನೆಯ ಸಂಪುಟವು ಸಾಹಿತ್ಯ ತತ್ವ ಮತ್ತು ಸಮಕಾಲೀನ ಕನ್ನಡ ಸಾಹಿತ್ಯವನ್ನು ಕುರಿತದ್ದಿದೆ. ಪ್ರಸ್ತುತ ಸಂಪುಟದ ಲೇಖನಗಳ ವಿಷಯವ್ಯಾಪ್ತಿ, ವಿಶ್ಲೇಷಣೆ, ನಡೆಸಿದ ಅಧ್ಯಯನಗಳ ನೆಲೆ, ಕನ್ನಡ ಸಾಹಿತ್ಯದ ಅಭ್ಯಾಸಿಗಳಿಗೆ ತುಂಬ ಉಪಯೋಗವೆಂದು ಹೇಳಿದರೆ ಉತ್ಪ್ರೇಕ್ಷೆಯೇನೂ ಅಲ್ಲ. ಸಮಕಾಲೀನ ಕನ್ನಡ ಸಾಹಿತ್ಯದೊಂದಿಗೆ ಅವರು ನಡೆಸಿದ ನಿರಂತರ ಸಂವಾದ ವಾಗ್ವಾದಗಳು ಬಹಳ ಉಪಯುಕ್ತವಾಗಿವೆ. ಜಿ.ಎಸ್.ಎಸ್ ಒಬ್ಬ ಮುಖ್ಯ ಕವಿಯಾಗಿದ್ದೂ ಆ ನೆಲೆಯಿಂದ ಸಾಹಿತ್ಯ ತತ್ತ್ವವನ್ನು ಕುರಿತು ನಡೆಸಿದ ಅಧ್ಯಯನ; ತತ್ಫಲವಾದ ಬರಹವು ಅಮೂಲ್ಯವೂ ಸಾಮಯಿಕವೂ ಆಗಿದೆ.

ಪ್ರಸ್ತುತ ಸಂಪುಟದಲ್ಲಿ ಎರಡು ಭಾಗಗಳಿದ್ದು ಮೊದಲನೆಯ ಭಾಗವು ಸಾಹಿತ್ಯ ಮೀಮಾಂಸೆಯ ಸ್ವರೂಪವನ್ನು ಕುರಿತಿದೆ. ಎರಡನೆಯ ಭಾಗವು ಸಮಕಾಲೀನ ಸಾಹಿತ್ಯದ ಕವಿ, ಲೇಖಕರ ಕೃತಿ-ಸಾಹಿತ್ಯದ ನೆಲೆ ಬೆಲೆಯನ್ನು ಶೋಧಿಸಲು ತೊಡಗುತ್ತದೆ. ಇಲ್ಲಿಯ ಬರಹಗಳಲ್ಲಿ ಕಾಣುವ ನಿಚ್ಚಳವಾದ ವಿಮರ್ಶಾ ದೃಷ್ಟಿ ಅಪರೂಪದ್ದು. ಇದು ಎರಡು ಕಡೆಗಳಿಂದ ಪಕ್ವಗೊಂಡದ್ದು. ಸ್ವತಃ ಕವಿಯಾಗಿದ್ದು ಕೃತಿಯ ಸೂಕ್ಷ್ಮನೆಲೆಯನ್ನು ಪ್ರವೇಶಿಸಲು ಬೇಕಾಗುವ ಸೃಜನಶೀಲ ಪ್ರತಿಭೆಯನ್ನು ಪಡೆದಿರುವುದು ಮೊದಲನೆಯ ಕಾರಣ; ಇನ್ನು ಎರಡನೆಯದು, ಪಾಶ್ಚಾತ್ಯ ಮತ್ತು ಪೌರ್ವಾತ್ಯ ಸಾಹಿತ್ಯ ವಿಮರ್ಶೆ ಮತ್ತು ಮೀಮಾಂಸೆಗಳಿಂದ ಪುಷ್ಟಗೊಂಡ ಮನಸ್ಸು. ಜಿ.ಎಸ್.ಎಸ್ ಅವರ ಬರಹದ ಹಿಂದಿರುವ ಈ ಎರಡು ಕಾರಣ ಭೂಮಿಕೆಗಳ ಸ್ಪರ್ಶ ಅಪೂರ್ವದ್ದು. ಇವುಗಳಿಂದಾಗಿ ಜಿ.ಎಸ್.ಎಸ್ ಅವರ ಬರಹದಲ್ಲಿ ಪಕ್ವತೆ, ಪಾರಿಶುದ್ಧತೆ, ನಿಚ್ಚಳತೆ, ಸರಳತೆ ಮತ್ತು ವಸ್ತುನಿಷ್ಠದೃಷ್ಟಿಕೋನಗಳು ಪ್ರಾಪ್ತವಾಗಿವೆ. ಅವರ ವಿಮರ್ಶಾ ಬರಹವು ಸಂದಿಗ್ಧತೆಗೆ ಕಾರಣವಿಲ್ಲದೆ ಇರುವುದು ಇದಕ್ಕಾಗಿಯೇ. ವಿಮರ್ಶೆ ಮತ್ತು ಸಾಹಿತ್ಯ ತತ್ತ್ವಗಳಿಗೆ ಸಂಬಂಧಿಸಿದ ಲೇಖನಗಳನ್ನು ಓದುವವರಿಗೆ ಈ ಬಗೆಯ ಅಪೂರ್ವ ಅನುಭವವು ತನಗೆ ತಾನೆ ಒಡಮೂಡುತ್ತದೆ.

ಮೊದಲನೆಯ ಭಾಗದಲ್ಲಿ ಇಪ್ಪತ್ತಮೂರು ಲೇಖನಗಳಿವೆ. ಈ ಲೇಖನಗಳೂ ಕೂಡ ಮೂರು ಮಾದರಿಗಳನ್ನು ಒಳಗೊಂಡಿವೆ. ಮೊದಲನೆಯ ಮಾದರಿ ಪರಿಕಲ್ಪನೆಗಳ ಹಂತಕ್ಕೆ ಸೇರಿದ್ದು. ಉದಾಹರಣೆಗೆ ಕವಿ, ಸಹೃದಯ, ಕಾವ್ಯ, ಹಾಡುಗಾರಿಕೆ, ಕಾಲಧರ್ಮ, ದಲಿತ ಸಾಹಿತ್ಯ, ಬಂಡಾಯ ಸಾಹಿತ್ಯ, ಬಂಡಾಯ ಸಾಹಿತ್ಯ ಉಪರಾಷ್ಟ್ರೀಯತೆ. ಎರಡನೆಯ ಮಾದರಿ ಸಾಹಿತ್ಯ ತತ್ವಗಳಿಗೆ ಸೇರಿದ ವಿಶ್ಲೇಷಣೆ. ಅದಕ್ಕೆ ಉದಾಹರಣೆ ಹೇಳಬಹುದಾದರೆ: ಸಾಹಿತ್ಯ ಮತ್ತು ಸಮಕಾಲೀನ ಪ್ರಜ್ಞೆ, ಲೇಖಕ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ, ಸಾಹಿತ್ಯ ಮತ್ತು ಗುಂಪುಗಾರಿಕೆ, ಉಪರಾಷ್ಟ್ರೀಯತೆ ಮತ್ತು ಕನ್ನಡಸಾಹಿತ್ಯ. ಈ ಬಗೆಯ ಲೇಖನಗಳಿಂದ ಬೇರೆಯಾದದ್ದು ಮೂರನೆಯ ಮಾದರಿಯ ಲೇಖನಗಳು. ಈ ಲೇಖನಗಳು ತೌಲನಿಕ ನೆಲೆಗಳನ್ನು ಪಡೆದಿವೆ. ಅವುಗಳು ಇಲ್ಲಿ ಕಡಿಮೆ ಇವೆ. ಕನ್ನಡ ಕವಿಗಳ ಭಾವಪ್ರಜ್ಞೆ ಮತ್ತು ಕಾವ್ಯಮೀಮಾಂಸೆಗೆ ಸೇರಿದ ಬರಹಗಳನ್ನು ಕಾಣಬಹುದು. ಈ ಎಲ್ಲ ಲೇಖನಗಳು ಕಳೆದ ಮೂರೂವರೆ ದಶಕಗಳ ಚಿಂತನೆಯ ವ್ಯಾಪ್ತಿಯನ್ನೂ ಪಡೆದಿವೆ. ಕನ್ನಡ ವಿಮರ್ಶಾ ಚಿಂತನೆಯು ಅನೇಕ ಬಗೆಯ ಅವಸ್ಥಾಂತರಗಳನ್ನು ಪಡೆದಿರುವುದು ಸರಿಯಷ್ಟೆ. ಆ ಎಲ್ಲ ಬಗೆಯ ವಿಮರ್ಶಾ ವಿವೇಕಗಳಿಗೂ ಜಿಎಸ್ಎಸ್ ಎದೆತೆರೆದು ಸ್ವಾಗತಿಸಿದ್ದಾರೆ. ನವೋದಯ ಸಾಹಿತ್ಯ ಮೀಮಾಂಸೆಯನ್ನು ರೂಪಿಸುವುದರಲ್ಲಿ ಇವರ ಕಾಣಿಕೆಗಳಿರುವಂತೆ; ನವ್ಯೋತ್ತರ ಸಾಹಿತ್ಯ ಮೀಮಾಂಸೆಗೆ ಸಂಬಂಧಿಸಿದ ಕಾಣ್ಕೆಗಳೂ ಇವರ ಜತೆಗಿವೆ. ಇದು ಒಬ್ಬ ವಿಶಿಷ್ಟ ವಿಮರ್ಶಾಚಿಂತಕನ ಸುದೀರ್ಘ ಫಲವೂ ಆಗಿದೆ.

ಪ್ರಸ್ತುತ ಸಂಪುಟದ ಎರಡನೆಯ ಭಾಗವು ಮೊದಲ ಭಾಗಕ್ಕೆ ಲಕ್ಷ್ಯದಂತಿದೆ ಮತ್ತು ಪ್ರತ್ಯೇಕವಾಗಿ ಬೆಳೆಸಿದ ವಿಮರ್ಶೆಯ ಮುಖ್ಯ ನೆಲೆಗಳನ್ನು ಹಿಡಿಯುವಂತಿದೆ. ಈ ಭಾಗದಲ್ಲಿ ಇಪ್ಪತ್ತೆರಡು ಲೇಖನಗಳಿವೆ. ಬಿ.ಎಂ.ಶ್ರೀ., ಗೋವಿಂದ ಪೈ, ಬೇಂದ್ರೆ, ಪು.ತಿ.ನ., ಗೋಕಾಕ್, ಕುವೆಂಪು, ಕೆ.ಎಸ್.ನ., ಅಡಿಗ, ಕಾರಂತ, ಕಣವಿ, ಮಾಸ್ತಿ—ಈ ಎಲ್ಲ ಲೇಖಕರ ಕೃತಿಗಳ ಬಗೆಗೆ ಬರೆದಿರುವ ಲೇಖನಗಳು ವಿಶ್ಲೇಷಣಾತ್ಮಕವಾಗಿವೆ ಹಾಗೂ ವೈಶಿಷ್ಟ್ಯಗಳನ್ನು ಕುರಿತಾಗಿವೆ. ಮುಖ್ಯ ಕವಿಗಳ ಕಾವ್ಯಗಳನ್ನು ಕುರಿತ ಅಧ್ಯಯನದಲ್ಲಿ ಜಿಎಸ್ಎಸ್ ಮೆಚ್ಚುವುದು ಅಥವಾ ಅವರನ್ನು ಗುರುತಿಸುವುದು ಕಾಲದ ವೈಶಿಷ್ಟ್ಯತೆ ಮತ್ತು ಕಾವ್ಯದ ಧ್ಯಾನಸ್ಥಿತಿಯನ್ನು ಮಾತ್ರ. ಇದರಿಂದಾಗಿ ಇಲ್ಲಿನ ಬರಹಗಳ ಹಿಂದೆ ಬಹುಮುಖತೆಯ ಪರಿವೇಷ ಒಂದರೊಡನೊಂದು ಕೀಲಿಸಿಕೊಳ್ಳುತ್ತವೆ. ಬಹುಕಾಲದ ಅಧ್ಯಯನ ಮತ್ತು ಚಿಂತನೆಗಳಿಗೆ ಗ್ರಾಸವನ್ನು ಒದಗಿಸುತ್ತವೆ. ಇಲ್ಲಿಯ ಲೇಖನಗಳ ವ್ಯಾಪ್ತಿಯೂ ಕಳೆದ ಮೂರೂವರೆ ದಶಕಗಳ ವಿಸ್ತಾರವನ್ನು ಪಡೆದಿವೆ. ಒಂದೆರಡು ಪರಿಚಯದ ಲೇಖನಗಳನ್ನು ಹೊರತುಪಡಿಸಿದರೆ ವಿ.ಸೀ., ಕಣವಿ ಮತ್ತು ವಿನಾಯಕರನ್ನು ಕುರಿತ ಲೇಖನಗಳು ಅವರ ಕಾವ್ಯವನ್ನು ಇನ್ನಷ್ಟು ಗಂಭೀರವಾಗಿ ಪರಿಶೀಲಿಸಬೇಕಾದ ಕಡೆ ಗಮನವನ್ನು ಸೆಳೆಯುವಂತಿವೆ. ಇದು ಸಾಮಾನ್ಯ ಸಂಗತಿಯಲ್ಲ.

ಜಿ.ಎಸ್.ಎಸ್ ಅವರ ಮೂರು ಮುಖ್ಯ ವ್ಯಕ್ತಿಗಳಾದ ಕವಿ, ವಿಮರ್ಶಕ ಮತ್ತು ಮೀಮಾಂಸಕ ವ್ಯಕ್ತಿತ್ವಗಳು ಪ್ರಸ್ತುತ ಸಂಪುಟದ ಕೇಂದ್ರ ನೆಲೆಗಳಾಗಿವೆ. ಆದ್ದರಿಂದ ಬರಹಗಳಿಗೆ ಸಮಗ್ರಾಹಿ ರೂಪಣವು ಪ್ರಾಪ್ತವಾಗಿದೆ. ಬೆನ್ನುಡಿಯಲ್ಲಿ ಎಚ್.ಎಸ್. ರಾಘವೇಂದ್ರರಾಯರು: "ಸಂಕೀರ್ಣವಾದರೂ ಅಸ್ಪಷ್ಟವಾಗದ, ದಿಟ್ಟವಾದರೂ ಉದ್ಧಟವಾಗದ ಇಲ್ಲಿನ ಶೈಲಿಯು ಅನುಕರಣೀಯವಾದುದು"—ಎಂಬ ಮಾತು ಸಂಪುಟದ ಹಿಂದಿನ ಸತ್ಯಕ್ಕೆ ಕನ್ನಡಿ ಹಿಡಿಯುತ್ತದೆ.

**—ಡಾ॥ ಮಲ್ಲೇಪುರಂ ಜಿ. ವೆಂಕಟೇಶ**

*(ಕನ್ನಡಪ್ರಭ: ಸಾಪ್ತಾಹಿಕ ಪ್ರಭ: 12.2.1995)*



## *ಸಮಗ್ರ ಗದ್ಯ: ಸಂಪುಟ-3*

**ಪ್ರಕಾಶಕರು: ಕಾಮಧೇನು ಪ್ರಕಾಶನ, ಶೇಷಾದ್ರಿಪುರಂ, ಬೆಂಗಳೂರು-3**
**ಪುಟ: 440; ಬೆಲೆ: ರೂ. 150**

---

**ಕ**ನ್ನಡದ ಹಿರಿಯ ಪ್ರಾಧ್ಯಾಪಕ-ಕವಿ-ವಿಮರ್ಶಕ-ಚಿಂತಕರಾದ ಡಾ. ಜಿ.ಎಸ್. ಶಿವರುದ್ರಪ್ಪನವರ 'ಸಮಗ್ರ ಗದ್ಯ'ದ ಮೂರನೆಯ ಸಂಪುಟ ಹೊರ ಬಂದಿರುವುದು ಸಾಹಿತ್ಯಾಸಕ್ತರೆಲ್ಲರಿಗೂ ತುಂಬಾ ಸಂತೋಷದ ಸಂಗತಿ. ಈ ಸಂಪುಟದಲ್ಲಿ ಜಿ.ಎಸ್.ಎಸ್ ಅವರು ವಿವಿಧ ಕಾಲಘಟ್ಟಗಳಲ್ಲಿ ಬರೆದ ಸ್ವತಂತ್ರ ಕೃತಿಗಳು ಮತ್ತು ಒಂದು ದೀರ್ಘ ಲೇಖನ ಸೇರಿದೆ: "ಕನ್ನಡ ಸಾಹಿತ್ಯ ಸಮೀಕ್ಷೆ" (1975), 'ಮಹಾ ಕಾವ್ಯ ಸ್ವರೂಪ' (1976). 'ಕನ್ನಡ ಕವಿಗಳ ಕಾವ್ಯ ಕಲ್ಪನೆ' (1989), 'ಹೊಸಗನ್ನಡ ಕವಿತೆಗಳಲ್ಲಿ ಕಾವ್ಯ ಚಿಂತನೆ' (1991). 'ವಿಮರ್ಶೆಯ ಪೂರ್ವ-ಪಶ್ಚಿಮ' (1961), ಮತ್ತು 'ಕನ್ನಡ ಸಾಹಿತ್ಯ ಚಳವಳಿಗಳು ಮತ್ತು ಸಾಹಿತ್ಯ ಪರಂಪರೆ' (1995). ಲೇಖಕರೇ ಸೂಚಿಸಿರುವಂತೆ ಅವರ ಒಂದು ಮುಖ್ಯ ಕೃತಿ 'ಕಾವ್ಯಾರ್ಥ ಚಿಂತನ' ಈ ಸಂಪುಟದಲ್ಲಿ ಸೇರಿಲ್ಲ. ಏಕೆಂದರೆ, 'ಅವುಗಳಿಗೆ ಬೇರೆಯೇ ಆದ ಸ್ವತಂತ್ರ ಸಂಪುಟಗಳ ಅಸ್ತಿತ್ವವಿದೆ' (ಮುನ್ನುಡಿ). ಹಾಗಿದ್ದರೆ, ಮೂರು ದಶಕಗಳಷ್ಟು ಹಿಂದೆ ಬರೆದ ಮತ್ತು ಇತರ ಕೃತಿಗಳಿಗಿಂತ ಬೇರೆಯಾಗಿ ನಿಲ್ಲುವ 'ವಿಮರ್ಶೆಯ ಪೂರ್ವ-ಪಶ್ಚಿಮ' ಈ ಸಂಪುಟದಲ್ಲಿ ಹೇಗೆ ಸೇರಿದೆ ಅರ್ಥವಾಗುವುದಿಲ್ಲ. ಏಕೆಂದರೆ, ಈ ಸಂಪುಟದ ಉಳಿದೆಲ್ಲಾ ಕೃತಿಗಳು ಕನ್ನಡ ಸಾಹಿತ್ಯವನ್ನು ಕೇಂದ್ರದಲ್ಲಿರಿಸಿಕೊಂಡ ಬರಹಗಳಾಗಿವೆ.

ಈ ಕೃತಿಗಳೆಲ್ಲವೂ ಸ್ವತಂತ್ರ್ಯವಾಗಿ ಪ್ರಕಟಗೊಂಡಾಗ ತಮ್ಮ ಮೌಲಿಕ ವಿಚಾರಗಳಿಂದಾಗಿ, ವಿಶಿಷ್ಟ ಒಳನೋಟಗಳಿಂದಾಗಿ ಮತ್ತು ಮುಖ್ಯವಾಗಿ ತಮ್ಮ ವಸ್ತುನಿಷ್ಠ ಚಿಂತನೆಯ ಸ್ವರೂಪ ದಿಂದಾಗಿ ಜನಮನ್ನಣೆಯನ್ನು ಗಳಿಸಿದ್ದುವು; ಮತ್ತು ಈ ಕಾರಣಗಳಿಂದಾಗಿಯೇ ಇಂದೂ ಕೂಡ ಅವು ಪ್ರಸ್ತುತವಾಗಿವೆ. ವಿದ್ವಾಂಸರಿಗೂ ಮತ್ತು ವಿದ್ಯಾರ್ಥಿಗಳಿಗೂ ಸಮನಾಗಿ ರುಚಿಸುವ ಸಾಹಿತ್ಯ ಚಿಂತನೆಯನ್ನು ಮಾಡಬಲ್ಲ ಕನ್ನಡದ ಕೆಲವೇ ಕೆಲವು ವಿಮರ್ಶಕರಲ್ಲಿ ಜಿ.ಎಸ್.ಎಸ್ ಒಬ್ಬರು. (ಕೂಡಲೇ ನೆನಪಿಗೆ ಬರುವ ಇನ್ನೊಂದು ಹೆಸರು ತೀನಂಶ್ರೀ ಅವರದ್ದು. ಪರಿಕಲ್ಪನೆಗಳ ಗ್ರಹಿಕೆಯಲ್ಲಿ, ವ್ಯಾಖ್ಯಾನದ ಸ್ಪಷ್ಟತೆಯಲ್ಲಿ ಮತ್ತು ಉಚಿತ ನಿದರ್ಶನಗಳನ್ನು ಸರಾಗವಾಗಿ ಪ್ರಾಚೀನ—ಅರ್ವಾಚೀನ ಹಾಗೂ ಭಾರತೀಯ—

ಪಾಶ್ಚಿಮಾತ್ಯ ಸಾಹಿತ್ಯಗಳಿಂದ ಆರಿಸುವ ವಿದಗ್ಧತೆಯಲ್ಲಿ ಜಿಎಸ್‌ಎಸ್ ಮತ್ತೆ ಮತ್ತೆ 'ಭಾರತೀಯ ಕಾವ್ಯ ಮೀಮಾಂಸೆಯ' ತೀನಂಶ್ರೀ ಯವರನ್ನು ನೆನಪಿಗೆ ತರುತ್ತಾರೆ).

ಈ ಸಂಪುಟದ ಮೊದಲನೆಯ ಕೃತಿ, 'ಕನ್ನಡ ಸಾಹಿತ್ಯ ಸಮೀಕ್ಷೆ', ಒಂದು ಹೊಸ ರೀತಿಯ ಕನ್ನಡ ಸಾಹಿತ್ಯ ಚರಿತ್ರೆ. ಕನ್ನಡ ಕವಿಗಳ ವಿಶ್ವದೃಷ್ಟಿ, ಕಾವ್ಯದ ಸ್ವರೂಪ ಮತ್ತು ಭಾಷಾ ಪ್ರಯೋಗ ಇವುಗಳ ನೆಲೆಯಲ್ಲಿ ಕನ್ನಡ ಸಾಹಿತ್ಯ ತನ್ನ ದೀರ್ಘ ಇತಿಹಾಸದಲ್ಲಿ ಆಗಾಗ್ಗೆ ಪಡೆದುಕೊಂಡ ಪ್ರಮುಖ 'ತಿರುವು'ಗಳಿಗೆ ಒತ್ತುಕೊಟ್ಟು, ಅವುಗಳನ್ನು 'ಕ್ರಾಂತಿ ಘಟ್ಟ'ಗಳೆಂದು ಪರಿಗಣಿಸಿ, ಅವುಗಳನ್ನು ಮುನ್ನೆಲೆಯಲ್ಲಿಟ್ಟು ಸುಮಾರು ಸಾವಿರ ವರ್ಷಗಳ ಇತಿಹಾಸವನ್ನು ಸೂಕ್ಷ್ಮವಾಗಿ ಜಿಎಸ್‌ಎಸ್ ದಾಖಲಿಸುತ್ತಾರೆ. ಸಾಮಾನ್ಯ ಇತಿಹಾಸಕಾರರು ಗುರುತಿಸದ ಅಥವಾ ಎತ್ತದ ಕೆಲವು ಕುತೂಹಲಕರ ಪ್ರಶ್ನೆಗಳನ್ನು ಎತ್ತುತ್ತಾರೆ. ಉದಾಹರಣೆಗೆ: "ಒಂದು ಸ್ವಾರಸ್ಯವಾದ ಸಂಗತಿ ಎಂದರೆ, ಹತ್ತನೆಯ ಶತಮಾನದ 'ವೀರಯುಗ'ದ ಕವಿಗಳಲ್ಲಿ ಇಲ್ಲದ ಒಂದು ಕೆಚ್ಚು, ಹನ್ನೆರಡನೆಯ ಶತಮಾನದ ಅನಂತರದ 'ಭಕ್ತಿಯುಗ'ದ ಕವಿಗಳಲ್ಲಿ ಕಾಣಿಸಿಕೊಂಡಿದೆ' (ಪುಟ. 37) "ನಾವು ಮೌಲ್ಯವೆಂದು ಕೊಂಡಾಡುವ 'ವೀರ'ದ ಮೂಲವೇ ಯುದ್ಧ.... ಹೀಗಿರುವಾಗ, ಜೈನಧರ್ಮದ ಕವಿಗಳಾದ ಪಂಪ, ರನ್ನರು.... 'ವೀರಕಾವ್ಯ'ಗಳನ್ನು ಬರೆದದ್ದು ಯಾಕೆ? ಹಾಗೆ ಬರೆಯುವಾಗ ಯುದ್ಧ ಮೊದಲಾದವುಗಳನ್ನು ವೈಭವಿಸುವ ಅವರ ಬರವಣಿಗೆಯ ಮನಸ್ಥಿತಿಗೂ, ಅದಕ್ಕೆ ಸಂಪೂರ್ಣ ವಿರುದ್ಧವಾದ ಅದೇ ಮನಸ್ಸಿನ ಧಾರ್ಮಿಕ ತತ್ವ ಪ್ರಣಾಲಿಗೂ ಘರ್ಷಣೆಯಾಗಿದ್ದಿರಲಾರದೆ?" (ಪು.101) ಇತ್ಯಾದಿ. ಆದರೆ ಈ ಪ್ರಶ್ನೆಗಳಿಗೆ ಅವರು ಕೊಡುವ ಉತ್ತರ—ಪಂಪ-ರನ್ನರು ರೂಪಿಸಿಕೊಂಡ "ಸಮನ್ವಯ ದೃಷ್ಟಿ"—ಅರ್ಧಸತ್ಯವೆಂದು ತೋರುತ್ತದೆ. ಈ ಕವಿಗಳ ಕೃತಿಗಳನ್ನು ಇನ್ನೂ ಆಳವಾಗಿ ವಿಶ್ಲೇಷಿಸಿದರೆ ಅವುಗಳಲ್ಲಿ ವ್ಯಾಪಕವಾಗಿರುವ ದ್ವಂದ್ವಗಳು ಮತ್ತು ಸ್ವವಿರೋಧಗಳು ಇಡೀ ಕೃತಿಯನ್ನೇ ಇಬ್ಭಾಗ ಮಾಡಿರುವುದು ಕಂಡುಬರಬಹುದು.

"ಕನ್ನಡ ಕವಿಗಳ ಕಾವ್ಯ" ಮತ್ತು "ಹೊಸಗನ್ನಡ ಕವಿತೆಗಳಲ್ಲಿ ಕಾವ್ಯ ಚಿಂತನೆ"—ಇವೆರಡೂ ಜಿಎಸ್‌ಎಸ್ ಅವರ ಸೂಕ್ಷ್ಮ ವಿಶ್ಲೇಷಣಾ ಶಕ್ತಿಯ ಉತ್ತಮ ನಿದರ್ಶನಗಳು. ಸಾಂಪ್ರದಾಯಿಕ ಮಹಾಕಾವ್ಯ ಲಕ್ಷಣಗಳೆಂದು ಇತರ ವಿಮರ್ಶಕರು ನಿರ್ಲಕ್ಷಿಸಿದ್ದ 'ಕುಕವಿ ನಿಂದೆ' 'ಸತ್ಕವಿ ಪ್ರಶಂಸೆ' 'ಕಾವ್ಯ ಪ್ರಯೋಜನ' ಮುಂತಾದ ಮಹಾ ಕಾವ್ಯಗಳ ಪೀಠಿಕಾ ಪ್ರಕರಣಗಳ ಅಂಶಗಳನ್ನೇ ಪ್ರಧಾನವಾಗಿಟ್ಟುಕೊಂಡು, ಅವುಗಳಲ್ಲಿ ನೇರವಾಗಿ ಅಥವಾ ಸೂಚ್ಯವಾಗಿ ಕಂಡುಬರುವ ಕಾವ್ಯಮೀಮಾಂಸೆಯ ಅಂಶಗಳನ್ನು (ಕವಿ-ಸಹೃದಯ ಸಂಬಂಧ, ಕಾವ್ಯ ಸ್ವರೂಪ, ಸಾಹಿತ್ಯದ ವಿವಿಧ ಗುರಿಗಳು, ಇತ್ಯಾದಿ) ಜಿಎಸ್‌ಎಸ್ ಅಧಿಕಾರಯುತವಾಗಿ ಚರ್ಚಿಸುತ್ತಾರೆ. ಪಂಪನ "ಇದು ನಿಚ್ಚಂ ಪೊಸತು..." ಎಂಬ ಹೇಳಿಕೆಯನ್ನು ರಾಜಶೇಖರನ ಪ್ರತಿಭೆಯ ವ್ಯಾಖ್ಯಾನದೊಡನಿಟ್ಟು ಚರ್ಚಿಸುತ್ತಾರೆ. ಹೀಗೆಯೇ, ಪಂಪ ರಾಮಾಯಣದ ಪ್ರಾರ್ಥನಾ ಪದ್ಯ, ಬಸವಣ್ಣನವರ 'ಬಯಲ ರೂಪ ಮಾಡಬಲ್ಲಾತನೆ ಶರಣನು....' ಎಂಬ ಉಕ್ತಿ—ಇವೇ ಮುಂತಾದವುಗಳಿಗೆ ಜಿಎಸ್‌ಎಸ್ ಮಾಡುವ ವ್ಯಾಖ್ಯಾನ ಮತ್ತು

ಅವುಗಳ ಮೂಲಕ ಕಾವ್ಯ ಮೀಮಾಂಸೆಗೆ ಅವರು ಕೊಡುವ ಒಳನೋಟಗಳು ಅಪೂರ್ವ. ಸಾಹಿತ್ಯ ಕೃತಿಗಳ "ಸ್ವಾಭಿಮುಖತೆ"ಯ (Self consciousness ಅಥವಾ Reflexivity) ಬಗ್ಗೆ ಕನ್ನಡದಲ್ಲಿ ಬಂದಿರುವ ಪ್ರಥಮ ಹಾಗೂ ಪ್ರಮುಖ ಲೇಖನಗಳು ಇವು.

ಈ ಸಂಪುಟದ ಎಲ್ಲಾ ಕೃತಿಗಳನ್ನೂ ಕುರಿತ ವಿಮರ್ಶೆ ಈ ಸಂದರ್ಭದಲ್ಲಿ ಸಾಧ್ಯವಿಲ್ಲದಿರುವುದರಿಂದ ಮತ್ತು ಮೊದಲೇ ಪ್ರಕಟವಾಗಿರುವ ಈ ಕೃತಿಗಳು ಸಾಹಿತ್ಯಾಸಕ್ತರಿಗೆ ಚಿರಪರಿಚಿತವಾಗಿರುವುದರಿಂದ, ಕೊನೆಯದಾಗಿ, ನನಗೆ ಅಷ್ಟೇನೂ ತೃಪ್ತಿಕೊಡದ "ವಿಮರ್ಶೆಯ ಪೂರ್ವ-ಪಶ್ಚಿಮ"ದ ಬಗ್ಗೆ ಒಂದೆರಡು ಅಂಶಗಳನ್ನು ಪ್ರಸ್ತಾಪಿಸಬಹುದು.

'ಸಮಗ್ರ ಸಾಹಿತ್ಯ' ಎಂಬುದು ಒಂದು ಪರಿಕಲ್ಪನೆ—19ನೆಯ ಶತಮಾನದ ಉತ್ತರಾರ್ಧದಲ್ಲಿ ಫ್ರೆಂಚ್ ಚಾರಿತ್ರಿಕ ವಿಮರ್ಶಕರು ಬೆಳೆಸಿದ ಪರಿಕಲ್ಪನೆ. 'ಊವ್ರ' (ovevre) ಎಂದು ಅವರು ರೂಪಿಸಿದ ಈ ಪರಿಕಲ್ಪನೆಯ ಗೃಹೀತಗಳು ಮುಖ್ಯವಾಗಿ ಎರಡು: (i) ಒಬ್ಬ ಪ್ರಮುಖ ಲೇಖಕನ ಎಲ್ಲಾ ಕೃತಿಗಳೂ ಅಧಿಕೃತವಾಗಿ (Authorised Edition) ಒಂದೆಡೆ ದೊರೆಯುತ್ತವೆ—ಕಾಲಾನುಕ್ರಮವಾಗಿ (ii) ಇಂತಹ ಸಮಗ್ರ ಸಾಹಿತ್ಯದ ಅಧ್ಯಯನದಿಂದ ಒಬ್ಬ ಲೇಖಕನ ಕೃತಿಗಳನ್ನೇ ತೌಲನಿಕವಾಗಿ ಅಧ್ಯಯನ ಮಾಡುವ ಅವಕಾಶ ಒದಗಿ, ಅದರಿಂದಾಗಿ ಆ ಲೇಖಕನ ವೈಚಾರಿಕ-ಸಾಹಿತ್ಯಕ ನಕ್ಷೆಯ ಒಂದು ಸ್ಪಷ್ಟ ಚಿತ್ರ ಓದುಗರಿಗೆ ದೊರಕುತ್ತದೆ. ಎಂದರೆ, ಈ ಪರಿಕಲ್ಪನೆಯ ಆಳದಲ್ಲಿ, ಒಬ್ಬ ಲೇಖಕನನ್ನು ಸಂಪೂರ್ಣವಾಗಿ ಅರಿಯಬೇಕಾದರೆ ಬಿಡಿಕೃತಿಗಳನ್ನಲ್ಲದೆ ಅವನ 'ಸಮಗ್ರ ಸಾಹಿತ್ಯ'ವನ್ನು ಒಟ್ಟಾರೆಯಾಗಿ ಪರಿಶೀಲಿಸಬೇಕು ಎಂಬ ಆಗ್ರಹವಿದೆ. ಅರ್ಥಾತ್, ಚಾರಿತ್ರಿಕ ವಿಮರ್ಶಕರ ದೃಷ್ಟಿಯಲ್ಲಿ, 'ರಾಷ್ಟ್ರ ಸಾಹಿತ್ಯ'ದ ಕಿರು ರೂಪವೇ ಒಬ್ಬ ಲೇಖಕನ ಸಮಗ್ರ ಸಾಹಿತ್ಯ.

ಸಮಗ್ರ ಸಾಹಿತ್ಯದ ಪರಿಕಲ್ಪನೆಯನ್ನು ರೂಪಿಸುವಾಗ ಫ್ರೆಂಚ್ ವಿಮರ್ಶಕರು ಮುಖ್ಯವಾಗಿ ಸೃಜನಶೀಲ ಸಾಹಿತ್ಯವನ್ನು ಪರಿಗಣಿಸಿದ್ದರು. ಆದರೆ ವೈಚಾರಿಕ ಸಾಹಿತ್ಯವನ್ನೂ ಈ ನೆಲೆಯಲ್ಲಿ ನೋಡುವಾಗ ಅನೇಕ ಪ್ರಶ್ನೆಗಳು ಏಳುತ್ತವೆ. ಕೃತಿಗಳನ್ನು ಬಿಡಿಯಾಗಿ ಓದುವಾಗ ಕಂಡು ಬರದ ಅಥವಾ ಎದ್ದು ಕಾಣದ ಪುನರುಕ್ತಿಯ ಮಿತಿ ಆ ಕೃತಿಗಳನ್ನು ಒಟ್ಟಾಗಿ ನೋಡಿದಾಗ ಕಂಡುಬರುತ್ತದೆ. (ಅದೇ ಉದಾಹರಣೆಗಳು, ಅದೇ ವಿವರಣೆ ಮತ್ತೆ ಮತ್ತೆ 'ಸಮಗ್ರ ಗದ್ಯ'ದಲ್ಲಿ ಕಂಡುಬರುತ್ತವೆ). ಇನ್ನ ಮುಖ್ಯವಾಗಿ ಒಂದು ಕಾಲಘಟ್ಟದ ಮಿತಿಯಲ್ಲಿ ಬರೆಯಲ್ಪಟ್ಟ ಕೃತಿಯೊಂದನ್ನು ಅದೇ ಲೇಖಕನ ಇತರ ಉತ್ತಮ ಕೃತಿಗಳೊಡನೆ ಸಂಗ್ರಹಿಸುವುದು ಎಷ್ಟು ಉಚಿತ? ಜಿಎಸ್‌ಎಸ್ ಅವರ ಪ್ರಬುದ್ಧ ಕೃತಿ "ಕಾವ್ಯಾರ್ಥ ಚಿಂತನ"—ಭಾರತೀಯ-ಪಾಶ್ಚಿಮಾತ್ಯ ಮೌಲಿಕ ಪರಿಕಲ್ಪನೆಗಳ ಆಳವಾದ ತೌಲನಿಕ ಜಿಜ್ಞಾಸೆ. ಆ ಕೃತಿ ಇರುವಾಗ, ಇಂದು 'ಔಟ್‌ಡೇಟೆಡ್' ಎಂದು ತೋರುವ "ವಿಮರ್ಶೆಯ ಪೂರ್ವ-ಪಶ್ಚಿಮ" ಕೃತಿಯನ್ನು 'ಸಮಗ್ರ ಗದ್ಯ'ದಲ್ಲಿ ಸಂಗ್ರಹಿಸಬೇಕೆ?

"ವಿಮರ್ಶೆಯ ಪೂರ್ವ-ಪಶ್ಚಿಮ" ಕೃತಿಯಲ್ಲಿ ಇಂದು ಪ್ರಚಲಿತವಿರುವ ಹೆಚ್ಚಿನ ವಿಮರ್ಶಾ ಮಾರ್ಗಗಳ ಮತ್ತು ಪರಿಕಲ್ಪನೆಗಳ ಚರ್ಚೆಯಿಲ್ಲ ಎಂಬುದೊಂದೇ ಈ ಕೃತಿಯ

ಮಿತಿಯಲ್ಲ. ಈ ಕೃತಿಯುದ್ದಕ್ಕೂ ಕಂಡುಬರುವ ಅನೇಕ ಹೇಳಿಕೆಗಳು ಮತ್ತು ನಿಲುವುಗಳು ಇಂದು ಪ್ರಶ್ನಾರ್ಹ. 'ಅನುಭವ ತಂತ್ರ' ಎಂಬ ಭಾಗದಲ್ಲಿ 'ತಂತ್ರ'ವು ಕೃತಿಯಿಂದ ಹೊರತಾದ, ಮತ್ತು ಸ್ವತಂತ್ರ ಅಸ್ತಿತ್ವ ಉಳ್ಳ ವಸ್ತುವೆಂದು ಜಿಎಸ್ಎಸ್ ಭಾವಿಸುತ್ತಾರೆ. ಆದ್ದರಿಂದಲೇ "ಕೇವಲ ತಂತ್ರದ ಮೇಲೆಯೇ ಕೃತಿಯ ಬೆಲೆ ನಿಂತಿಲ್ಲ" (389) ಎಂದು ಹೇಳುತ್ತಾ 'ತಂತ್ರ ವಿಮರ್ಶೆ' (387) ಎಂಬ ಒಂದು ಅಸಾಧ್ಯ ವಿಮರ್ಶಾ ಮಾರ್ಗವನ್ನು ಕಲ್ಪಿಸುತ್ತಾರೆ—ಮತ್ತೆ, 'ದರ್ಶನ ವಿಮರ್ಶೆ' ಎಂಬ ಒಂದು ಪ್ರತ್ಯೇಕ ವಿಮರ್ಶಾ ಪ್ರಸ್ಥಾನವನ್ನು ಸ್ಥಾಪಿಸುವುದು ಕಷ್ಟ—ಏಕೆಂದರೆ, ಎಲ್ಲಾ ವಿಮರ್ಶಾ ಪ್ರಸ್ಥಾನಗಳೂ ಕೃತಿ ನಮಗೆ ಕಟ್ಟಿಕೊಡುವ 'ಕಾಣ್ಕೆ' ಅಥವಾ ದರ್ಶನವನ್ನೇ ಅನಾವರಣಗೊಳಿಸಲು ಪ್ರಯತ್ನಿಸುತ್ತವೆ. ಒಂದು ಕೃತಿಯ ಬಗ್ಗೆ ವಿಮರ್ಶಕರ ಭಿನ್ನಾಭಿಪ್ರಾಯಗಳಿರುವುದಕ್ಕೆ ('ವಿಮರ್ಶೆಯ ಏರುಪೇರು') ವಿಮರ್ಶಕರ 'ವೈಯಕ್ತಿಕ ಅಭಿಮಾನ' ಅಥವಾ 'ಪಂಥ ಪ್ರವೃತ್ತಿ' ಸೂತ್ರ ಕಾರಣವಲ್ಲ. ವಿಮರ್ಶಕರ ಭಿನ್ನ ವೈಚಾರಿಕ-ತಾತ್ವಿಕ ನಿಲುವುಗಳು ಕೃತಿಯ ಭಿನ್ನ ಭಿನ್ನ 'ಓದು'ಗಳಿಗೆ ಕಾರಣವಾಗುತ್ತವೆ. ಒಟ್ಟಿನಲ್ಲಿ, 'ಸಮಗ್ರ ಗದ್ಯ'ದಲ್ಲಿ 'ವಿಮರ್ಶೆಯ ಪೂರ್ವಪಶ್ಚಿಮ' ಸೇರದಿದ್ದರೂ ಅಷ್ಟೇನೂ ಲೋಪವಾಗುತ್ತಿರಲಿಲ್ಲವೆಂದು ತೋರುತ್ತದೆ.

**ಡಾ|| ಸಿ. ಎನ್. ರಾಮಚಂದ್ರನ್**

*(ಪ್ರಜಾವಾಣಿ: ಸಾಪ್ತಾಹಿಕ ಪುರವಣಿ-22.6.1997)*



## ವ್ಯಕ್ತಮಧ್ಯ (ಕವನ ಸಂಕಲನ)

**ಪ್ರಕಾಶಕರು: ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು.**

**ಪುಟಗಳು: 70, ಬೆಲೆ: ರೂ. 55**

---

'ವಯಸ್ಸಾಗುವುದು ಕವಿಗೆ ಕವಿತೆಗಳಿಗಲ್ಲ'—ಹೀಗೆ ಈ ಸಂಕಲನ 'ಕವಿ-ಕವಿತೆ' ಕವನ ಪ್ರಾರಂಭವಾಗುತ್ತದೆ. ವ್ಯಕ್ತ ಮಧ್ಯ ಸಂಕಲನದ ಕವನಗಳನ್ನು ಓದಿದನಂತರ ಈ ಮಾತು ಖಂಡಿತಾ ನಿಜವೆನಿಸುತ್ತದೆ—ಕನಿಷ್ಠ ಪಕ್ಷ ಜಿ.ಎಸ್.ಎಸ್ ಅವರ ಬಗ್ಗೆ.

ವ್ಯಕ್ತ ಮಧ್ಯ ಕನ್ನಡದ ಹಿರಿಯ, ಚಿಂತನಶೀಲ, ಸ್ವಪ್ರಜ್ಞೆಯ ಕವಿ–ವಿಮರ್ಶಕ–ಚಿಂತಕ ಡಾ. ಜಿ.ಎಸ್. ಶಿವರುದ್ರಪ್ಪನವರ ಹದಿಮೂರನೆಯ ಕವನ ಸಂಕಲನ. ನಲವತ್ತು ಕವನಗಳಿರುವ ಈ ಸಂಕಲನ ಹಿಂದಿನ ಸಂಕಲನಗಳ ಅನೇಕ ಆಶಯ-ಕಾಳಜಿಗಳನ್ನು ಮುಂದುವರಿಸುವಂತೆಯೇ ಹೊಸ ಆಶಯ- ಕಾಳಜಿ-ರಚನಾಕ್ರಮಗಳಿಗೂ ರೂಪುಕೊಡುತ್ತದೆ. ಭಾವಗೀತೆ, ಕಥನಕವನ, ಸಾನೆಟ್ ಇತ್ಯಾದಿ ಅನೇಕ ಕಾವ್ಯಪ್ರಭೇದಗಳನ್ನು ದುಡಿಸಿಕೊಳ್ಳುವ ಈ ಸಂಕಲನದ ಕವನಗಳು ಚರಿತ್ರೆಯ ಗತಿ-ವಿಗತಿ, ಬದುಕಿನ ನಿಗೂಢತೆ-ಗೂಢತೆ, ಕಾವ್ಯವೆಂಬ ರಚನೆಯ ವಿಸ್ಮಯ-ವೈಭವ ಇತ್ಯಾದಿಗಳನ್ನು ಆಳವಾಗಿ ಶೋಧಿಸುತ್ತವೆ.

ಮೊದಲಿಗೆ, ತುಂಬಾ ಅರ್ಥಪೂರ್ಣವಾದ ಈ ಕವನ ಸಂಕಲನದ ಹೆಸರಿನ ಬಗ್ಗೆ ಜಿ.ಎಸ್.ಎಸ್ ಅವರೇ ಸೂಚಿಸಿರುವಂತೆ 'ವ್ಯಕ್ತಮಧ್ಯ' ಎಂಬ ಪ್ರಯೋಗ ಭಗವದ್ಗೀತೆಯ ಈ ಶ್ಲೋಕದಲ್ಲಿ ಬರುತ್ತದೆ.

**ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ।**
**ಅವ್ಯಕ್ತ ನಿಧನಾನ್ಯೇವ ತತ್ರಕಾ ಪರಿದೇವನಾ॥** (2:28)

ಹುಟ್ಟಿನ ಹಿಂದು ಮತ್ತು ಸಾವಿನ ಮುಂದು ಇವೆರಡೂ ಅವ್ಯಕ್ತವಾಗಿರುವ ಮತ್ತು ವ್ಯಕ್ತವಾಗಿರುವ ಇವೆರಡರ ಮಧ್ಯಭಾಗದ (ಎಂದರೆ ನಮ್ಮ ಬದುಕಿನ) ಬಗ್ಗೆ ಏತಕ್ಕೆ ದುಃಖಿಸುತ್ತೀಯೆ?—ಎಂದು ಕೃಷ್ಣನು ಅರ್ಜುನನ್ನು ಕೇಳುತ್ತಾನೆ. ಆದರೆ, ಕವಿ ದಾರ್ಶನಿಕನಲ್ಲ, ಅವನಿಗೆ ವ್ಯಕ್ತಮಧ್ಯದ ಬಗ್ಗೆ ಆಸಕ್ತಿ-ಕಾಳಜಿಗಳಿಗಿರುವಂತೆಯೇ ಅವ್ಯಕ್ತಭಾಗಗಳ ಬಗ್ಗೆಯೂ ಕುತೂಹಲ-ಜಿಜ್ಞಾಸೆಗಳಿರುತ್ತವೆ. ವ್ಯಕ್ತಮಧ್ಯದಲ್ಲಿ ನಿಂತು ಅವ್ಯಕ್ತ ಆದಿ-ಅಂತ್ಯಗಳನ್ನು ಕವಿ ಇಣುಕಿ ನೋಡಲು ತನ್ನ ಕಲ್ಪನೆಯ ಏಣಿಯನ್ನೇರುತ್ತಾನೆ ಇಳಿಯುತ್ತಾನೆ.

ವ್ಯಕ್ತದ ನೆಲೆಯಿಂದ ಅವ್ಯಕ್ತವನ್ನು ಶೋಧಿಸುವ, ಆ ಮೂಲಕ ಭೂತ-ವರ್ತಮಾನ-

ಭವಿಷ್ಯತ್ತುಗಳ ಆಳದಲ್ಲಿರುವ ಕೊಂಡಿಗಳನ್ನು ಗುರುತಿಸುವ ಅನೇಕ ಕವನಗಳು ಈ ಸಂಕಲನದಲ್ಲಿವೆ: 'ಪೂರ್ಣ ನದಿಯ ಮೊಸಳೆ', 'ಒಂದಿರುಳು' 'ಎರಡು ನೀಲಿಯ ನಡುವೆ' ಇತ್ಯಾದಿ. ಕವಿ ಗೆಳೆಯರೊಡನೆ ಶಂಕರಾಚಾರ್ಯರ ಜನ್ಮಸ್ಥಳವಾದ ಕಾಲಟಿಗೆ ಹೋಗಿದ್ದಾಗ, ಒಮ್ಮೆ ಪೂರ್ಣಾನದಿಯ ದಂಡೆಯ ಮೇಲೆ ಉದ್ದಕ್ಕೂ ನಡೆದು, ಒಂದು ಕಡೆ ಮರಳಿನ ಮೇಲೆ ಕುಳಿತು ಮೈ ಮರೆಯುತ್ತಾರೆ. ಏನೋ ಸದ್ದಾಗಿ ಹಿಂತಿರುಗಿ ನೋಡಿದರೆ ಒಂದು ಭಾರಿ ಮೊಸಳೆ ಕಾಣಿಸುತ್ತದೆ. ಮತ್ತೆ 'ಅದೇನು ಚಮತ್ಕಾರವೋ ಏನೋ ಬಂದಂತೆ। ವರ್ತಮಾನಕ್ಕೆ ಪ್ರಾಚೀನತೆಯ ನಾಲಗೆ । ದನಿಯೊಂದು ಕೇಳಿಸಿತು: 'ಹೌದು ವತ್ಸಾ । ಹೌದು ನಾನೇ ಆವತ್ತಿನ ಮೊಸಳೆ' (ಪು. 21). 'ಒಂದಿರುಳು' ಕವನ ಕವಿಗಾದ ಒಂದು ರಾತ್ರಿಯ ಅದ್ಭುತ ಅನುಭವವನ್ನು ಚಿತ್ರಿಸುತ್ತದೆ. ಕರೆಂಟಿಲ್ಲದ ಒಂದು ರಾತ್ರಿ ಕವಿ ಎದ್ದಾಗ ಬೆಳದಿಂಗಳಿನ ಮಬ್ಬು ಬೆಳಕಿನಲ್ಲಿ, ಬೆಳದಿಂಗಳೇ ಬೆಳಕಾಗಿ ಕೂತಿದೆಯೋ ಎಂದು ತೋರುವ ಒಂದು ಬೆಕ್ಕು ಅವರಿಗೆ ಕಾಣಿಸುತ್ತದೆ: ಆಗ,

> **'..... ಆ ಕಣ್ಣಿನೊಳಗಿಳಿದು ನನಗು ಅದಕ್ಕು**
> **ಇರುವ ಅನಾದಿಕಾಲದ ಬಾಂಧವ್ಯಗಳ**
> **ಗುರುತಿಸುತ್ತಿದ್ದಂತೆ, ಛಂಗನೆ ನೆಗೆದು....** *(ಪು. 27)*

ಬೆಕ್ಕು ಮಾಯವಾಗುತ್ತದೆ. ಅದೊಂದು 'ಮೂರ್ತ ಅಮೂರ್ತಗಳು.... ಏಕಕಾಲಕ್ಕೆ.... ಸಂಧಿಸಿದ ಕ್ಷಣ'. ಮೆಡಿಟರೇನಿಯನ್ ಸಮುದ್ರದ ತೀರದಲ್ಲಿ ನಿಂತು ಒಮ್ಮೆ ಕವಿ ಆ 'ಕಡು ನೀಲಿ ಕಡಲ ವಿಸ್ತಾರವನ್ನು' ವೀಕ್ಷಿಸಿದಾಗ ಹೀಗೆ ಚಿಂತಿಸುತ್ತಾರೆ:

> **'..... ನಿರಂತರ ಚಲನೆ**
> **ಯೊಳಗೊಂದು ನೀಲಿ, ಅಂಚಚಲ ಸ್ಥಿ-**
> **ರತೆಯೊಳಗೊಂದು ನೀಲಿ. ಈ ನಾನು**
> **ಎರಡು ನೀಲಿಯ ನಡುವೆ ಕರಗಿ ಹೋ-**
> **ಗದೆ ನಿಂತ ರಹಸ್ಯವಾದರು ಏನು?'** *(ಪು. 46)*

ಇಂತಹ ಅಪೂರ್ವ ಕಾಣ್ಕೆಯ ಕ್ಷಣಗಳನ್ನು (ಜಿಎಸ್‌ಎಸ್ ಅವನ್ನು 'ಮಾಂತ್ರಿಕ ಮುಹೂರ್ತ'ಗಳೆಂದು 'ಸಿಂಡರೆಲಾ' ಕವನದಲ್ಲಿ ಕರೆಯುತ್ತಾರೆ; ಕ್ರಿಶ್ಚಿಯನ್ ಧಾರ್ಮಿಕ ಪರಿಭಾಷೆಯಲ್ಲಿ ಅವನ್ನು 'Epiphanic Moments' ಎಂದು ಗುರುತಿಸುತ್ತಾರೆ) ಈ ಸಂಕಲನದ ಅನೇಕ ಕವನಗಳು ಯಶಸ್ವಿಯಾಗಿ ಸೆರೆಹಿಡಿಯುತ್ತವೆ.

ಕಾಲವನ್ನು ಕುರಿತು ಚಿಂತನೆ ಮತ್ತು 'ಚರಿತ್ರೆ'ಯ ಚರಿತ್ರೆ ಇವು ಜಿಎಸ್‌ಎಸ್ ಅವರ ಎಲ್ಲಾ ಪ್ರಮುಖ ಸಂಕಲನಗಳಲ್ಲಿಯೂ ಕಂಡು ಬರುವ ಆಶಯಗಳು. ಈ ಸಂಕಲನದಲ್ಲಿರುವ ಇಂತಹ ಕವನಗಳಲ್ಲಿ ಮುಖ್ಯವಾದುದೊಂದು 'ಚರಿತ್ರೆ... ಅಂದರೆ...' 'ಚರಿತ್ರೆ ಅಂದರೆ ಅದೊಂದು ಮಬ್ಬು ಕವಿದ ಸುರಂಗ' ಎಂದು ಪ್ರಾರಂಭವಾಗುವ ಈ ಕವನ ಎರಡನೆಯ

ಭಾಗದಲ್ಲಿ 'ಮರೆತು ಹೋದ' ವಿಜಯನಗರ ಸಾಮ್ರಾಜ್ಯ ಮತ್ತು ಮರೆಯಲಾಗದ ಇತ್ತೀಚಿನ ಬಾಬ್ರಿ ಮಸೀದಿ ಇವೆರಡನ್ನೂ ಒಟ್ಟಿಗೇ ಇಟ್ಟು ಅರ್ಥೈಸಲು ಪ್ರಯತ್ನಿಸುತ್ತದೆ. ನಾವು ಚರಿತ್ರೆಯಿಂದ ಏನನ್ನೂ ಕಲಿಯುವುದೇ ಇಲ್ಲ—ಎಂಬ ಗಾಢ ವಿಷಾದದಲ್ಲಿ ಕವನ ಹೀಗೆ ಹೃದಯಸ್ಪರ್ಶಿಯಾಗಿ ಮುಗಿಯುತ್ತದೆ.

**'ಚರಿತ್ರೆ ಅಂದರೆ ನಡೆದುದಷ್ಟೇ ಅಲ್ಲ ನಡೆಯು**
**ತ್ತಿರುವುದೂ ಕೂಡ. ಎಲ್ಲಾ ಪಾಠಗಳೂ ಮರೆತು**
**ಮತ್ತೆ ಚಿತ್ತ ವಿಕಾರ. ಈ ಮಾನವತೆಯ ಹೃದ**
**ಯದ ಮೇಲೆ ಎಷ್ಟೊಂದು ಗಾಯಗಳ ಗುರುತು?'** *(ಪು. 54)*

'ಚರಿತ್ರೆ ಅಂದರೆ...' ಕವನ ಭಾರತದ ನೆಲೆಯಲ್ಲಿ ಭೂತ-ವರ್ತಮಾನಗಳನ್ನು ಎದುರು ಬದಿರಾಗಿಸುವಂತೆ, 'ಚರಿತ್ರೆಯ ಕಾಲಜ್ಞಾನ' ಭಾರತ ಮತ್ತು ಪುರಾತನ ಐಗುಪ್ತ ದೇಶಗಳನ್ನು ಒಟ್ಟಿಗೆ ತರುತ್ತದೆ. ಭಾರತದ ಪ್ರಸಿದ್ಧ ಭರತ ಚಕ್ರವರ್ತಿಯ ಕಥೆ ಮತ್ತು ಶೆಲಿ ಬರೆದ ಐಗುಪ್ತದ ಒಜಿಮಾಂಡಿಯನ್ ಚಕ್ರಾಧಿಪತಿಯ ಕಥೆ ಇವೆರಡನ್ನೂ ಒಂದೆಡೆ ತಂದು ಪಟ್ಟಭದ್ರರ ಕ್ಷಣಿಕ ಆಟಾಟೋಪಗಳನ್ನು ವ್ಯಂಗ್ಯಪೂರ್ವಕವಾಗಿ ಈ ಕವನ ವಿಶ್ಲೇಷಿಸುತ್ತದೆ. (ಕವನದ ಮೂರನೆಯ ಭಾಗ ಶೆಲಿಯ 'Bzymandios' ಎಂಬ ಸಾನೆಟ್‌ನ ಸುಂದರ ಅನುವಾದ. ಇದು ಅನುವಾದವೆಂದು ದಾಖಲಿಸಬಹುದಿತ್ತು) ಈ ಕವನಕ್ಕೆ ಮೊನಚು ಕೊಡುವುದು 'ಚರಿತ್ರೆಯನ್ನು ಬರೆಯುವ ಭಾರ ಹೊತ್ತ' ಕವಿಯ ಪಾತ್ರ: '.....ಅವರಿವರ ಬೆವರು ನೆತ್ತರಿನಲ್ಲಿ ಬೆಳೆಸಿದಹಂ ಕೃತಿಯ ಚಿತ್ತವಿಕಾರಕ್ಕೆ, ಶಾಶ್ವತದ ಚೌಕಟ್ಟು ಹಾಕುವ ವ್ಯರ್ಥ ಪ್ರಯತ್ನಕ್ಕೆ ಮುಖವಾಣಿಯಾಗಲೇ ನಾನು?' (ಪು. 57) ಎಂದು ಕವಿ ಚಿಂತಿಸುತ್ತಾನೆ.

ಕಾವ್ಯವನ್ನು, ಕಾವ್ಯಕ್ರಿಯೆಯನ್ನು ಗಂಭೀರವಾಗಿ ತೆಗೆದುಕೊಳ್ಳುವ ಕನ್ನಡದ ಪ್ರಮುಖ ಕವಿಗಳಲ್ಲಿ ಜಿಎಸ್ಎಸ್ ಒಬ್ಬರು. (ಕೂಡಲೇ ನೆನಪಿಗೆ ಬರುವ ಮತ್ತೊಂದು ಹೆಸರು ಅಡಿಗರದು). ಇವರ ಇತರ ಸಂಕಲನಗಳಂತೆ ಈ ಸಂಕಲವೂ ಅನೇಕ ಯಶಸ್ವೀ ಸ್ವಾಭಿಮುಖೀ ಕವನಗಳನ್ನು ಒಳಗೊಂಡಿದೆ ('ಕವಿ-ಕವಿತೆ' 'ಕವಿತೆ ಕಂಡದ್ದು ಹೀಗೆ', 'ಸಿಂಡರೆಲಾ', 'ಸ್ಥಾವರ', ಇತ್ಯಾದಿ). ತಮ್ಮ 'ಎರಡು ಮಾತು' ಭಾಗದಲ್ಲಿ 'ಕವಿತೆ ಎನ್ನುವುದು ಮೂಲತಃ ಶಬ್ದಾರ್ಥಗಳ ಒಂದು ವಿಶಿಷ್ಟರೀತಿಯ ಕಟ್ಟಡ ಎಂಬ ತಿಳುವಳಿಕೆಯೇ ನಮ್ಮ ಇತ್ತೀಚಿನ ಬಹುತೇಕ ಕವಿಗಳಿಗೆ ಇಲ್ಲವಾಗುತ್ತಿದೆಯೇನೋ' ಎಂದು ಜಿಎಸ್ಎಸ್ ವಿಷಾದಿಸುತ್ತಾರೆ. ಕವನವೆಂದರೆ ಭಾಷಣವಲ್ಲ, ಅನಿಸಿಕೆಯಲ್ಲ, ಹರಟೆಯಲ್ಲ; ಅದೊಂದು ಬಂಧ (ಕುಂತಕನು ವಿವರಿಸುವಂತೆ), ಅದೊಂದು ಕಲೆಗಾರಿಕೆ—ಎಂಬ ನಿಲುವನ್ನು ಈ ಸಂಕಲನದ ಅನೇಕ ಸ್ವಾಭಿಮುಖೀ ಕವನಗಳು ಅರ್ಥಪೂರ್ಣವಾಗಿ ದಾಖಲಿಸುತ್ತವೆ.

ಕಾವ್ಯಕ್ರಿಯೆಯಲ್ಲಿ ಮೊದಲಿಗೆ ಜಿಎಸ್ಎಸ್ ಮುಖ್ಯವೆಂದು ಪರಿಗಣಿಸುವುದು 'ಕಸುಬುಗಾರಿಕೆ'ಯನ್ನು-ಕುಂಬಾರ ಗುಂಡನಲ್ಲಿ ಕಾಣುವ, ನೇಕಾರ ಗಂಗಣ್ಣನಲ್ಲಿ ಕಾಣುವ ಕಸುಬುಗಾರಿಕೆ. ಅದರಿಷ್ಟೇ ಸಾಲದು; 'ಅನೇಕಾರ್ಥಗಳನ್ನು ಹೊಳೆಯಿಸುವ' 'ನೆಲಮುಗಿಲಿಗೂ

ನಡುವೆ ನಿಂತ' 'ಗಡಿಗಳ ದಾಟುವ ಜಂಗಮನಾಗುವ', 'ಕವನವೊಂದು' 'ವಾಗರ್ಥಚಂದ್ರನ ಪ್ರಣತಿ'. ಅದೊಂದು ಕನಸು, ಒಂದು ಬೆರಗು, ಒಂದು ಪವಾಡ ಮಾಂತ್ರಿಕ ಮುಹೂರ್ತದಲ್ಲುದ್ಭವಿಸುವ ಸಿಂಡರೆಲಾ. (ಈ ಸಂಕಲನದ ಉತ್ಕೃಷ್ಟ ಕವನಗಳಲ್ಲಿ ಹೆಚ್ಚಿನವು ಕಾವ್ಯಕ್ರಿಯೆಗೆ ಸಂಬಂಧಿಸಿದುವು ಎಂಬುದು ಜಿಎಸ್‌ಎಸ್ ಅವರ ಸ್ವಪ್ರಜ್ಞೆಯ ನೆಲೆಯಲ್ಲಿ ಗಮನೀಯವಾದ ಅಂಶ.)

ಕೊನೆಯದಾಗಿ (ಇನ್ನೂ ಪರಿಗಣಿಸಬೇಕಾದ ಅನೇಕ ಅಂಶಗಳಿದ್ದರೂ): ಸದಾ ಪ್ರಯೋಗಶೀಲರಾದ ಜಿಎಸ್‌ಎಸ್ ಈ ಸಂಕಲನದ ಅನೇಕ ಕವನಗಳಲ್ಲಿ ಒಂದು ವಿಶಿಷ್ಟ ಪ್ರಯೋಗವನ್ನು ಮಾಡುತ್ತಾರೆ. ಅದೆಂದರೆ—'ಚತುಷ್ಪದಿ' ಪದ್ಯಬಂಧವನ್ನು ಅದರ ಚೌಕಟ್ಟನ್ನು ದಾಟಿಸಿ ಪದ್ಯದಿಂದ ಪದ್ಯಕ್ಕೆ ಮುಂದುವರಿಸುವ ಪ್ರಯತ್ನ. ಈ ತಂತ್ರವನ್ನು ಅವರು 'ಮುಕ್ತ ಬಂಧ'ವೆಂದು ಕರೆಯುತ್ತಾರೆ. (ಇಂಗ್ಲೀಷ್‌ನಲ್ಲಿ ಇದರ ಸಂವಾದಿಯಾದ ಶಬ್ದ Enjambement: to stride over—ದಾಟುವಿಕೆ). ಛಂದಶ್ಯಾಸ್ತ್ರದ ನೆಲೆಯಲ್ಲಿ ಈ ಪ್ರಯೋಗದ ಸಾಧಕಬಾಧಕಗಳನ್ನು ವಿಶ್ಲೇಷಿಸುವ ಸಾಮರ್ಥ್ಯ ನನ್ನಲ್ಲಿಲ್ಲ. ಓದುಗನ ನೆಲೆಯಲ್ಲಿ ನನಗೆ ತೋರುವುದಿಷ್ಟು:

ಮುಕ್ತಬಂಧವನ್ನು, ಸಾಧಾರಣವಾಗಿ, ಜಿಎಸ್‌ಎಸ್ ಒಂದು ಕ್ರಿಯೆಯ / ಭಾವನೆಯ ನೈರಂತರ್ಯವನ್ನು ದಾಖಲಿಸಲು ಉಪಯೋಗಿಸುತ್ತಾರೆ: 'ಕವಿತೆ ಕಂಡದ್ದು ಹೀಗೆ' ಕವನದಲ್ಲಿ ಕುಂಬಾರನ / ನೇಕಾರನ ಕ್ರಿಯೆಯ ಸಂದರ್ಭದಲ್ಲಿ; ಹಿಂಸೆಯ ಅಖಂಡತೆಯನ್ನು ಚಿತ್ರಿಸುವಾಗ ('ಕತ್ತಲು'); ಹಠಯೋಗದ ಅವಿಚ್ಛಿನ್ನತೆಯನ್ನು ಕಟ್ಟುವಾಗ (ಸುಜಾತಾ) ಇತ್ಯಾದಿ. ಇಂತಹ ಸಂದರ್ಭಗಳಲ್ಲಿ, ಓದುಗರಿಗೆ, ಮುಕ್ತಬಂಧನ ಔಚಿತ್ಯ ಅರಿವಾಗುತ್ತದೆ. ಕವನ ಪ್ರಚೋದಿಸುವ ಭಾವನೆ / ಚಿಂತನೆ ತೀವ್ರವಾಗುತ್ತದೆ. ಇದು ನಿಜ.

ಆದರೆ, ಇಲ್ಲೊಂದು ಪ್ರಶ್ನೆಯೇಳುತ್ತದೆ: ಇಲ್ಲಿ ಮುಕ್ತಬಂಧವಿದೆಯೆಂದು ಗೊತ್ತಾಗುವುದು ನಾವು ಆ ಕವನವನ್ನು ಓದುವಾಗ ಮಾತ್ರ ಅಲ್ಲವೆ? (ಎಂದರೆ ಚತುಷ್ಪದಿಯೊಂದು ಮುಗಿದರೂ ಪಂಕ್ತಿಯು ಮುಂದುವರಿದಿರುವುದನ್ನು ನಾವು ಕಾಣುತ್ತೇವೆ). ಆದರೆ, ಕವನವನ್ನು ಕೇಳಿಸಿಕೊಂಡಾಗ ಮುಕ್ತಬಂಧ ಇದೇ ಪರಿಣಾಮವನ್ನುಂಟು ಮಾಡುತ್ತದೆಯೆ? ಇಂಗ್ಲೀಷ್ ಛಂದಸ್ಸಿನ ಪ್ರಕಾರ ಚತುಷ್ಪದಿಗಳಲ್ಲಿ ಅಂತ್ಯಪ್ರಾಸ (ab/ab/) ಕಡ್ಡಾಯವಾಗಿರುವುದರಿಂದ ಇಂತಹ ಮುಕ್ತಬಂಧ ಅಥವಾ Enjambement ಓದುವಾಗಲೂ, ಕೇಳುವಾಗಲೂ ನಮ್ಮ ಅನುಭವಕ್ಕೆ ಬರುತ್ತದೆ. ಆದರೆ ಕನ್ನಡದ ಸಂದರ್ಭದಲ್ಲಿ ಅಂತ್ಯಪ್ರಾಸ ಕಡ್ಡಾಯವಲ್ಲದುದರಿಂದ, ಪ್ರಾಯಃ ಮುಕ್ತಬಂಧ ಅಷ್ಟು ಪರಿಣಾಮಕಾರಿಯಾಗುವುದಿಲ್ಲವೆಂದು ತೋರುತ್ತದೆ. 'ಕವಿತೆ ಕಂಡದ್ದು ಹೀಗೆ' ಕವನದ ಮೂರು ಭಾಗಗಳಲ್ಲಿರುವ ಎರಡೆರಡು ಚತುಷ್ಪದಿಗಳನ್ನು ಮೂರು ಅಷ್ಟಪದಿಗಳಂತೆ ಬರೆದರೆ, ಓದಿದರೆ ಹೆಚ್ಚು ವ್ಯತ್ಯಾಸವೇನಾದರೂ ಆಗುತ್ತದೆಯೆ?

—ಡಾ॥ ಸಿ.ಎಸ್. ರಾಮಚಂದ್ರನ್

*(ಪ್ರಜಾವಾಣಿ: ಸಾಪ್ತಾಹಿಕ ಪುರವಣಿ-30.7.2000)*

## ವ್ಯಕ್ತಮಧ್ಯ (ಕವನ ಸಂಕಲನ)

ಪ್ರಕಾಶಕರು: ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು.

ಪುಟಗಳು: 70; ಬೆಲೆ: ರೂ. 55

---

ದತ್ತವಾಗಿದೆ ಮತ್ತೆ ವ್ಯಕ್ತಮಧ್ಯದ ಬದುಕು;
ಮೊದಲಿಗಿಂತಲೂ ಹೊಸತಾಗಿ ಕಂಡಿದೆ ಲೋಕ.
ಈವರೆಗು ಮಹಾವಿಸ್ಮೃತಿಯಲ್ಲಿ ಕರಗಿ, ಹೊರಬಂದ
ಅಸ್ತಿತ್ವಕ್ಕೆ ಎಲ್ಲವನ್ನೂ ತಬ್ಬಿಕೊಳ್ಳುವ ತವಕ (ಅವಸ್ಥೆ)

ಜಿ.ಎಸ್. ಶಿವರುದ್ರಪ್ಪನವರ ಹದಿಮೂರನೆಯ ಕವನ ಸಂಕಲನ 'ವ್ಯಕ್ತಮಧ್ಯ'ದ ಕವಿತೆಯೊಂದರ ಸಾಲುಗಳಿವು. ಈ ಸಂಕಲನದ ಕವನಗಳ ಬಗೆಗೆ ಒಂದಿಷ್ಟು ಮಾತುಗಳನ್ನು ದಾಖಲಿಸಲು ಪ್ರಾರಂಭಕ್ಕೆ ಈ ಸಾಲುಗಳನ್ನೇ ಆಯ್ಕೆ ಮಾಡಿಕೊಳ್ಳಲು ಕಾರಣವಿದೆ. ಮೊದಲನೆಯದಾಗಿ ಈ ಸಂಕಲನದ ಶೀರ್ಷಿಕೆ ಹಾಗೂ ಮೇಲಿನ ಕವನದ ಸಾಲುಗಳಲ್ಲಿ ಬಳಕೆಯಾಗಿರುವ 'ವ್ಯಕ್ತಮಧ್ಯ' ಪದಕ್ಕೆ ಅಗಾಧವಾದ ತಾತ್ವಿಕ ಇತಿಹಾಸ ಇದೆ ಎನ್ನುವುದು. ಮತ್ತು ಅದು ಬದುಕಿನ ಬಗೆಗೆ ಇರುವ ಒಂದು ಪ್ರಧಾನ ದೃಷ್ಟಿಕೋನವೂ ಆಗಿದೆ ಎನ್ನುವುದು.

ಈ ಶತಮಾನದ ಕಾವ್ಯದ ಪ್ರಧಾನ ಆಶಯಗಳಲ್ಲೊಂದಾಗಿರುವ 'ಕಾಲ' ಜಿಎಸ್ಎಸ್ ಕಾವ್ಯವನ್ನು ಸಾಕಷ್ಟು ಆವರಿಸಿದೆ. 'ಮಬ್ಬಿನಿಂದ ಮಬ್ಬಿಗೆ' ಇತ್ಯಾದಿ ಕವನಗಳಲ್ಲಿ ಕಾಣಬಹುದಾದ ಕಾಲದ ಗತಿಬಿಂಬಕ್ಕೂ ಇಲ್ಲಿಯ ಕಾಲದ ಗ್ರಹಿಕೆಗೂ ಬಹಳ ಮುಖ್ಯ ಬೆಳವಣಿಗೆಯನ್ನು ಕಾಣಲು ಸಾಧ್ಯವಿದೆ.

ನನಗೂ ಗೊತ್ತು; ಈ ಹೂವುಗಳ ಬದುಕು
ಕೆಲವೇ ಹೊತ್ತು,
ಆದರೆ ಕೆಲವೇ ಹೊತ್ತಿನ ಈ
ಹೂವುಗಳಿಗಿರುವ ಸೊಗಸು, ಆ
ನಕ್ಷತ್ರಗಳಿಗಿಲ್ಲ,
ಇಷ್ಟರಮೇಲೆ, ನಕ್ಷತ್ರಗಳೂ
ಶಾಶ್ವತವಾಗಿರುತ್ತವೆ ಎಂಬ ಭ್ರಮೆ
ನನಗೂ ಇಲ್ಲ! (ಹೂವು-ನಕ್ಷತ್ರ)

ಕಾಲ ಸಾಪೇಕ್ಷವಾದದ್ದು. ಇದು ಕೇವಲ ಸಿದ್ಧಾಂತದ ಮಾತು. ಈ ಸಾಪೇಕ್ಷ ಸಂಬಂಧ ಸ್ವರೂಪದ ಚಿಂತನೆಯ ಜಗ್ಗಾಟದಿಂದ ಬದುಕಿಗೆ ಬಂದ ಬೆಲೆ ಏನು? ಎನ್ನುವುದು ಮುಖ್ಯ.

'ವ್ಯಕ್ತಮಧ್ಯ' ಶಬ್ದ ಎರಡು ಅವ್ಯಕ್ತಗಳ ನಡುವಿನ ಬದುಕನ್ನು ಗ್ರಹಿಸುವ ಬಗೆಗೆ ಮಾತನಾಡುವ ಇಚ್ಛೆಯನ್ನು ವ್ಯಕ್ತಪಡಿಸುವುದರ ಜೊತೆಗೆ ಬೌದ್ಧ ಮಹಾಯಾನದ 'ಮಧ್ಯಮ ಮಾರ್ಗ'ದ ಬದುಕಿನ ಕ್ರಮವನ್ನೂ, ಅನಿಯಂತ್ರಿತ, ಅಖಂಡ 'ಕಾಲ'ವನ್ನು ನಮ್ಮ ಬದುಕಿನ ಕಿಂಚಿತ್ತು ಸದುಪಯೋಗಿ ಕಾಲವನ್ನಾಗಿಸಿಕೊಂಡು ಅಂಕೆಗೊಳಪಡಿಸಿಕೊಳ್ಳುವ ಹಂಬಲವನ್ನು ವ್ಯಕ್ತಪಡಿಸುವ ಸಾಮರ್ಥ್ಯವನ್ನೂ ಹೊಂದಿದೆ.

ಜಿಎಸ್ಎಸ್ ಕಾವ್ಯಮಾರ್ಗವನ್ನು 'ಮಧ್ಯಮ ಮಾರ್ಗ ಕಾವ್ಯ'ವೆಂದು ಗುರುತಿಸಿಕೊಳ್ಳ ಬೇಕಾದ ಅಗತ್ಯವನ್ನು ಒತ್ತಿ ಹೇಳಬೇಕಾಗಿದೆ. ಏಕೆಂದರೆ ಜಿಎಸ್ಎಸ್, ಕಣವಿಯವರಂತಹವರ ಕಾವ್ಯ ಎಲ್ಲ ಚಳುವಳಿಗಳ ಸಂದರ್ಭದಲ್ಲೂ, ಸಂಕ್ರಮಣ ಕಾಲದಲ್ಲೂ ಸಾಮಾನ್ಯ ಬದುಕಿನ ಗತಿಬಿಂಬವೇ ಆಗಿರುವುದು ಈ ಕಾವ್ಯಕ್ಕಿರುವ ಪ್ರಧಾನ ಕಾಳಜಿ ಏನೆಂಬುದನ್ನು ಹೇಳುತ್ತದೆ. ಜಿಎಸ್ಎಸ್ ಕಾವ್ಯವಾಗಲೀ, ಕಣವಿಯವರ ಕಾವ್ಯವಾಗಲೀ ಚಳುವಳಿಯೊಂದರ ರೂಪ, ಆಕೃತಿ, ನಿಷ್ಠೆಗಳಿಗೆ ಪೂರ್ತಿ ಮಣಿದು ನಿರ್ಜೀವ ತುದಿಗೆ ಹೋಗಿ ನಿಂತುಬಿಡುವುದಿಲ್ಲ. ಯಾವುದೇ ಬದಲಾವಣೆಯನ್ನೂ ಪ್ರೀತಿಯಿಂದ ಬರಮಾಡಿಕೊಂಡು 'ನಿನ್ನ ಬಳಿ ಈ ಲೋಕಕ್ಕೆ ಏಸುಂಟು?' ಎಂದು ವಿಚಾರಿಸಿ, ಎಷ್ಟು ಬೇಕೋ ಅಷ್ಟನ್ನು ಕರಗಿಸಿಕೊಳ್ಳಬಲ್ಲದು. ಇದಕ್ಕೆ ಬೇಕಾಗುವುದು ಉಗ್ರ ವರ್ತಮಾನ ಪ್ರಜ್ಞೆ, ಮತ್ತು ಪ್ರತಿ ಕ್ಷಣಕ್ಕೆ ಬದಲಾಗಬಲ್ಲ ಸತ್ಯದ ಹಾದಿಗೆ ತನ್ನನ್ನು ವರ್ಗಾಯಿಸಿಕೊಳ್ಳಬಲ್ಲ ಚಲನಶೀಲ ಮನಸ್ಸು. ಹಾಗಾಗಿ ಇವರನ್ನು 'ಮಧ್ಯಮ ಮಾರ್ಗಿ'ಗಳೆನ್ನುವುದೇ ಹೆಚ್ಚು ಸಮಂಜಸವಾದುದು.

ಇನ್ನು ಕಾಲವನ್ನು ಅದರ ಎಲ್ಲ ತಾತ್ವಿಕತೆಯಿಂದ ಮುಕ್ತಗೊಳಿಸಿ ಸಾಮಾನ್ಯ ಬದುಕಿನ ಗಂಟೆ, ದಿನ, ವರ್ಷಗಳನ್ನು ತುಂಡು ಹಾಕಿಕೊಂಡು ಕಾವ್ಯಕ್ಕೊಳಪಡಿಸುವುದು ಪ್ರಯಾಸದ ಕಾರ್ಯ. ಏಕೆಂದರೆ ಕಾಲದ ತಾತ್ವಿಕತೆಯೇ ಮನುಷ್ಯನ ಬುದ್ಧಿಶಕ್ತಿ ಮತ್ತು Intuitive knowledge ಗೆ ಒಂದು ಸವಾಲಾಗಿರುವುದರಿಂದ, ಆ ಸವಾಲನ್ನು ಸ್ವೀಕರಿಸುವ ಮನಸ್ಸು ಅನಂತಕಾಲದಲ್ಲಿ ಕಳೆದುಹೋಗಿ ಮತ್ತೆ ವಾಪಸ್ಸು ಬಾರದಿರುವ ಸಾಧ್ಯತೆಯೇ ಹೆಚ್ಚು. ಒಮ್ಮೆ ತೆರೆದ ಹೃದಯದ ಶಸ್ತ್ರಚಿಕಿತ್ಸೆಗೆ ಒಳಗಾದ ಕವಿಗೆ, ಅರಿವಿಗೆ ದಕ್ಕದ ಎರಡು ಅವ್ಯಕ್ತಗಳ ನಡುವಿನ ವ್ಯಕ್ತ ಬದುಕಿನ ಮಹತ್ವ ಇನ್ನೂ ವಿಶೇಷದ್ದೆನ್ನಿಸಿದೆ. ಇರುವಷ್ಟನ್ನು ಅಪ್ಯಾಯಮಾನತೆಯಿಂದ ತಳಮುಟ್ಟಿ ಬದುಕಬೇಕೆನ್ನುವ ಅದಮ್ಯ ಆಸೆ, ಎಲ್ಲವನ್ನೂ ತಬ್ಬಿಕೊಳ್ಳುವ ತವಕಕ್ಕೆ ಕಾರಣವಾಗಿದೆ. ಇದನ್ನು ಪುಷ್ಟೀಕರಿಸುವ ಸಾಲುಗಳು ಮತ್ತೆ "ಕವಿತೆ ಕಂಡದ್ದು ಹೀಗೆ" ಎನ್ನುವ ಕವನದಲ್ಲಿ ಹೀಗೆ ವ್ಯಕ್ತವಾಗಿವೆ.

**ಈಗಲೋ ಆಗಲೋ ಹಾರಿಹೋಗಲೆಂದನು-**
**ವಾದ ಅಸಂಖ್ಯ ಒಂಟಿ ಕಾಲಿನ ಪಕ್ಷಿಯಂತಿ-**
**ರುವ ತೆಂಗಿನ ಮರದ ವಿಸ್ತಾರ. ಈ ನೆಲದಾಳ**
**ಗಳಲ್ಲಿ ಬೇರೂರಿ, ವ್ಯಕ್ತಮಧ್ಯದೊಳಗೆಲ್ಲೊ**
**ಥಟ್ಟನೆ ಅರಳಿ, ನೆಲ ಮುಗಿಲಿಗೂ ನಡುವೆ**
**ನಿಂತ ಈ ಒಂದೊಂದೂ ಜೀವಂತ ಕವಿತೆಗಳೆ!**

*(ಕವಿತೆ ಕಂಡದ್ದು ಹೀಗೆ)*

ಇಲ್ಲೆಲ್ಲ ಅವ್ಯಕ್ತಗಳ ಬಗ್ಗೆ ಉದ್ದೇಶಪೂರ್ವಕ ಉಪೇಕ್ಷೆಯೊಂದು ಹಾಸುಹೊಕ್ಕಾಗಿದೆ. ಇಲ್ಲಿ ಜೀವಂತ ಬದುಕಿಗೆ ಪ್ರಥಮ ಪ್ರಾಶಸ್ತ್ಯ. ಬಹುಪಾಲು ಕವಿಗಳ ಹಾಗೆ ಅನೂಹ್ಯ ಜಗತ್ತಿಗೆ ಕೈತೋರುವಂಥದ್ದನ್ನೇನನ್ನೂ ಕವಿತೆ ಹುಡುಕಿ ಹೊರಡುವುದಿಲ್ಲ. ಬದಲಾಗಿ ಒಪ್ಪಮಾಡಿಕೊಳ್ಳಲು ಹೊರಟ ಎಲ್ಲ ಕಲಾತ್ಮಕ ಪ್ರಯತ್ನಗಳೂ ಕಾವ್ಯ ಪ್ರೇರಣೆಗಳಾಗಿವೆ.

**.... ಚಕ್ರದ ಮಧ್ಯೆ**
**ಮಣ್ಣಿನ ಮುದ್ದೆ, ಕುಂಬಾರ ಗುಂಡನ ಬೆರಳ**
**ಸ್ಪರ್ಶಕ್ಕೆ ಮಣ್ಣೊಳಗೆ ಮಲಗಿದ್ದ ಆಕೃತಿ-**
**ಗಳೊಂದೊಂದಾಗಿ ಮೂಡುವ ಪವಾಡಕ್ಕೆ**
**ನನಗೆ ಮುಗಿಯದ ಬೆರಗು. ಕವಿತೆ ಹುಟ್ಟು-**
**ವುದು ಹೇಗೆಂದು ಮೊದಲು ಕಂಡದ್ದು ಹೀಗೆ.**

*(ಕವಿತೆ ಕಂಡದ್ದು ಹೀಗೆ)*

ಮಾನವನ ಮೊಟ್ಟ ಮೊದಲ ಕಲಾಭಿವ್ಯಕ್ತಿ ಬಹುಶಃ ಕುಂಬಾರಿಕೆ. ಕುಂಬಾರನೇ ಜಗತ್ತಿನ ಮೊಟ್ಟಮೊದಲ ಕವಿ. ಹೀಗೆ ಕುಂಬಾರಿಕೆ, ನೇಯ್ಗೆಯಂತಹ ಜೀವನಪರ ಕ್ರಿಯೆಗಳು ಕಾವ್ಯಕ್ಕೆ ಪ್ರೇರಕವಾಗುವುದರಲ್ಲಿ ಕವಿಯ ಜೀವಪರ ದೃಷ್ಟಿ ವ್ಯಕ್ತವಾಗುತ್ತದೆ.

ವ್ಯಕ್ತದ ಆಚೀಚೆಗೆ ತುಡಿಯುವುದು ಕಾಲಾತೀತನಾಗುವ ಬಯಕೆಯನ್ನು ಅಂತರ್ಗತ ಗೊಳಿಸಿಕೊಂಡಿರುತ್ತದೆ. ಇಂತಹ ಬಯಕೆಯನ್ನು ಪ್ರಯತ್ನಪೂರ್ವಕ ಹತ್ತಿಕ್ಕಿ ಕಾಲಕ್ಕೆ ಬದ್ಧನಾಗಿ ಬದುಕಬೇಕೆನ್ನುವ ಆಶಯವನ್ನು ವ್ಯಕ್ತಪಡಿಸುವ ಕವನಗಳೂ ಇವೆ. ಕಾಲದ ಮೇಲೆ ಸವಾರಿಗೆ ಹೊರಟ ಓಝಿಮಂಡಿಯಾಸ್ ಮತ್ತು ಭರತ ಚಕ್ರೇಶ್ವರರನ್ನು ಕುರಿತ 'ಚರಿತ್ರೆಯ ಕಾಲಜ್ಞಾನ' ಕವನ ಇಂಥದ್ದೇ ಆಶಯವನ್ನು ವ್ಯಕ್ತಪಡಿಸುತ್ತದೆ.

**ಈ ಜಗದ ವೀರಾಧಿವೀರರೇ**
**ನೋಡಿ ನನ್ನ ಈ ಸಾಹಸದ ಗೆಯ್ಮೆಗಳ**
**ನಿರಾಸೆಯಿಂದ ನಿಟ್ಟುಸಿರಿಡಿರಿ. ಈಗ ಏನೂ**
**ಇಲ್ಲ, ನೋಡಿದರೆ ಆ ಬೃಹದಾಕೃತಿಯ**

**ಭಗ್ನಾವಶೇಷದ ಸುತ್ತ ಮೇರೆಯರಿಯದ**
**ಹಾಗೆ ಅಲೆ ಅಲೆಯಾಗಿ ಹಬ್ಬಿದೆ ಮರಳು.**
**ವಿಜಯಾರ್ಧಪರ್ವತದ ಮೇಲೆ ಯಾವತ್ತೋ**
**ಅಳಿಸಿಹೋಗಿವೆ ಅಸಂಖ್ಯ ರಾಜರ ಹೆಸರು!**

*(ಚರಿತ್ರೆಯ ಕಾಲಜ್ಞಾನ)*

ಕಾವ್ಯಕ್ಕೆ ಪ್ರತಿಭೆ, ಪ್ರತಿಭಾನ, ಸ್ಫೂರ್ತಿ ಮುಂತಾದ ಕಾವ್ಯಮೀಮಾಂಸೆಯ ಪರಿಕರಗಳಷ್ಟೇ ಸಾಲದು. ಅದಕ್ಕೆ ಬೇಕಾಗುವ ಮಾಂತ್ರಿಕ ಮುಹೂರ್ತದ ಜೊತೆಗೆ 'ಪ್ರೀತಿ' ಕೂಡ ಅಗತ್ಯವೆನ್ನಿಸುತ್ತದೆ 'ಸಿಂಡರೆಲಾ' ಕವನ.

**..... ಇತ್ತ**
**ಸಿಂಡರೆಲಾ ಅಡುಗೆ ಮನೆಯೊಳಗೆ: ಸುಂದರ**
**ವಾದ ಶ್ಲೋಕದಿಂದುದುರಿ ನಿರರ್ಥಕವಾದ ಪಾ**
**ದದ ಹಾಗೆ ಏಕಾಂಗಿಯಾಗಿ ಚಡಪಡಿಸುತ್ತ**
**ಪ್ರೀತಿ-ಪ್ರತಿಭೆಯ ಕರುಣೆ ಮತ್ತೆ ಹಿಡಿದೆತ್ತಿ**
**ಕೂಡಿಸುವ ಮಾಂತ್ರಿಕ ಮೂಹೂರ್ತಕ್ಕೆ ಕಾಯುತ್ತ**

*(ಸಿಂಡರೆಲಾ)*

ಅವ್ಯಕ್ತ-ವ್ಯಕ್ತಗಳ ನಡುವೆ ಜೋಲಿ ಹೊಡೆಯುವ ಕಾವ್ಯಕ್ರಿಯೆಯ ಸಾಫಲ್ಯ ಮಾತ್ರ ವ್ಯಕ್ತದಲ್ಲಿಯೇ ಎನ್ನುವುದು ಕವಿಯ ನಿಲುವು.

**ಲಂಕೆಯ ಮೇಲೆ ದಂಡೆತ್ತಿ ನಡೆದ ರಾಮನ ಹಿಂದೆ**
**ಯಾವತ್ತೋ ಹೊರಟು ಹೋಗಿದೆ ನಮ್ಮ ಪೌರು-**
**ಷದ ಕಿಷ್ಕಿಂಧೆ. ತುಂಗಭದ್ರೆಯ ತಡಿಯ ಬನ**
**ಬೆಟ್ಟಗಳ ಮೇಲೆ ಕವಿದುಕೊಂಡಿದೆ ಸಂಧ್ಯೆ**

*(ಕಿಷ್ಕಿಂಧೆಯ ಕತ್ತಲು)*

ರಾಮನ ಜೊತೆಗೆ ಲಂಕೆಯ ಮೇಲೆ ದಂಡೆತ್ತಿ ಹೋಗಿರುವ ಸೈನ್ಯದಲ್ಲಿ ಕಿಷ್ಕಿಂಧೆಯ ಎಲ್ಲ ಪುರುಷರೂ ಹೋಗಿದ್ದಾರೆ. ಈಗ ಗಂಡಸರೆಂದು ಅಲ್ಲಿ ಉಳಿದಿರುವವರು ಮಕ್ಕಳು ಮತ್ತು ಮುದುಕರು ಮಾತ್ರ. ಯಾವನ ಮಡದಿಯನ್ನೋ ಮತ್ತಾವನೋ ಕದ್ದೊಯ್ದದ್ದಕ್ಕೆ ನಗರದ ಎಲ್ಲ ಕುಟುಂಬಗಳೂ ಗಂಡಾಸರೆಯನ್ನು ಕಳೆದುಕೊಂಡಿವೆ.... ಇಡೀ ನಗರ ಅಳಿದುಳಿದ ಗಂಡಸರ ಪುನರಾಗಮನಕ್ಕೆ ಕಾಯುತ್ತಿದೆ.... 'ಅಗಮೆಮ್ನಾನ್' ನೆನಪಾಗುತ್ತದೆ. ಹತ್ತು ವರ್ಷದಿಂದ 'ಬೆಂಕಿಯ ಸುದ್ದಿ'ಗಾಗಿ ಕಾಯುತ್ತಿರುವ ಕಾವಲುಗಾರ ಮತ್ತು ಮತ್ತೆ ನಗರದ ಬದುಕು ಹೇಗಾದರೂ ಚಿಗುರುವಂತಾಗಲಿ ಎಂದು ಕಾಯುತ್ತಿರುವ ಮುದಿ-ಮೇಳದ ಎದೆಕುದಿ ಇಲ್ಲಿಯೂ ಇದೆ. ಈ ಕವನವೂ ಕ್ಲೆತಮ್ನೆಸ್ತ್ರಳಂತಹ ಹೆಣ್ಣೊಬ್ಬಳ (ವಾಲಿಯ ಮಡದಿ) ಮೇಲೆ ಬರೆದಿರುವ ಭಾಷ್ಯದೊಡನೆ ಮುಗಿಯುತ್ತದೆ.

ನಿನಗೆ ತಲ್ಲಣ ಸಹಜ. ಗೊತ್ತಿಲ್ಲವೇ ನನಗೆ ನೀನು
ಎಂಥವಳೆಂದು. ಈ ಹೆಣ್ಣು ಯಾವಾಗಲೂ
ಹೀಗೆಯೇ; ಶಂಕೆ ಬೆಂಕಿಯ ಕುಲುಮೆ;
ಹಾಗೆಯೇ, ಪ್ರೀತಿ-ವಾತ್ಸಲ್ಯಗಳು ಪುಟಿವ ಚಿಲುಮೆ!

*(ಕಿಷ್ಕಿಂಧೆಯ ಕತ್ತಲಲ್ಲಿ)*

'ಪೂರ್ಣಾನದಿಯ ಮೊಸಳೆ', 'ಮುಖಾಮುಖಿ' ಕವನಗಳು ಅದ್ವಯ ಸಾಧನೆಯನ್ನು ವಸ್ತುವನ್ನಾಗಿ ಆರಿಸಿಕೊಂಡ ಕವನಗಳು. ಅಕ್ಷರ ಪರಂಪರೆಯ ಆಧುನಿಕ ಕನ್ನಡ ಕಾವ್ಯಕ್ಕೆ 'ಅದ್ವಯ' ಕ್ವಚಿತ್ತಾಗಿ ಬಂದು ಹೋಗುವಂಥಾದ್ದು. ಆದರೆ ದೇಸೀ ಪರಂಪರೆಯ ಕನ್ನಡ ಕಾವ್ಯಕ್ಕೆ ಅದು ಜೀವದುಸಿರು. ಆಧುನಿಕ ಕನ್ನಡ ಕಾವ್ಯವನ್ನು ದೇಸಿ ಕಣ್ಣುಗಳಲ್ಲಿ ನೋಡಲಿಕ್ಕೆ ಸಾಧ್ಯವಾಗಿಲ್ಲ. ಕನ್ನಡದ 'ಕಾವ್ಯ ಸಮಾಜ'ಕ್ಕೆ ಆಧುನಿಕ ಕಾವ್ಯ ಹತ್ತಿರವಾಗಲು ಇಂತಹ ಪ್ರಯತ್ನಗಳಾಗುವುದು ಒಳ್ಳೆಯದು. ಹಾಗೆ ನೋಡಿದರೆ ದೇಸಿ ಕಾವ್ಯ—ಸಮಾಜ ಆಧುನಿಕ ಕನ್ನಡ ಕಾವ್ಯದ ಇಂತಹ ಕವನಗಳನ್ನು ತೀರಾ ಸರಳ ರಚನೆಗಳೆಂದೇ ಗಮನಿಸೀತು. ಆದರೆ ಈ ಕವಿಯ ಒಟ್ಟೂ ಕಾವ್ಯದ ಸಂದರ್ಭದಲ್ಲಿ ಈ ಕೆಲವು ಕವನಗಳನ್ನು ಅವರ ಕಾವ್ಯನಿಷ್ಠೆಯಲ್ಲಾದ ಒಂದು ಬದಲಾವಣೆಯೆಂದೂ ಗುರುತಿಸಲು ಸಾಧ್ಯ.

ನೋಡುತ್ತೇನೆ: ಇದೀ ನದಿ ಭಾರೀ ಮೊಸಳೆ-
ಯೊಂದರ ನಾಲಗೆಯಂತೆ ನಿಡಿದಾಗಿ ಚಾಚಿ
ಕೊಂಡಿದೆ. ಮೇಲೆ ತೆರೆದಾಕಾಶ, ಕೆಳಗೆ
ಹಾಸಿದ ಭೂಮಿ, ನಿಜವಾಗಿಯೂ ನಾವೆಲ್ಲ
ಮೊಸಳೆಯೊಂದರ ಬಾಯೊಳಗೆ ಇದ್ದೇವೆ
ಎಂದಿನಿಂದಲೋ ಏನೋ, ನಮಗೆ ಬಿಡುಗಡೆಯಿಲ್ಲ

*(ಪೂರ್ಣಾನದಿಯ ಮೊಸಳೆ)*

ಸುಮಾರು ಐದು ದಶಕಗಳಷ್ಟು ಸುದೀರ್ಘಕಾಲದ ದಣಿವಿಲ್ಲದ ಜಿಎಸ್‌ಎಸ್ ರವರ ಕಾವ್ಯಚೈತನ್ಯಕ್ಕೆ ಅಭಿನಂದನೆಗಳು.

**—ಎಸ್. ನಟರಾಜ ಬೂದಾಳ್**

*(ಸಾಹಿತ್ಯಸಂವಾದ-52)*





ಮೈಸೂರಿನ ಮಹಾರಾಜ ಕಾಲೇಜಿನ ಗುರುವರ್ಗ ಹಾಗೂ ಗೆಳೆಯರೊಂದಿಗೆ (1949)
ನಿಂತವರ ಪಂಕ್ತಿಯಲ್ಲಿ ಜಿಎಸ್‌ಎಸ್ 3ನೆಯವರು; ತ.ಸು ಶಾಮರಾಯರು 6ನೆಯವರು
ಕುಳಿತಿರುವವರಲ್ಲಿ ಐದನೆಯವರು ಕುವೆಂಪು; ಆರನೆಯವರು ಪ್ರೊ॥ ಡಿ.ಎಲ್. ನರಸಿಂಹಾಚಾರ್



ವಾತ್ಸಲ್ಯದ ಪ್ರತಿಮಾ ಸ್ವರೂಪರಾದ ಪ್ರೊ॥ ತ.ಸು. ಶಾಮರಾಯರೊಂದಿಗೆ (1992)



ಅಧ್ಯಯನದಲ್ಲಿ ಜಿಎಸ್ಎಸ್( 1963)

ಕವಿ ಕೆಎಸ್‌ನ, ಮಾಸ್ತಿಯವರು ಮತ್ತು ಪು.ತಿ.ನ ಅವರೊಂದಿಗೆ ಜಿಎಸ್ಎಸ್
'ಸ್ನೇಹಕಾರ್ತೀಕ 'ಸಂಭಾವನಾ ಗ್ರಂಥ ಸಮರ್ಪಣೆಯ ಸಂದರ್ಭದಲ್ಲಿ ( 1977)






ಶ್ರೀ ಕುವೆಂಪು :
'ಕಾವ್ಯಾರ್ಥ ಚಿಂತನ'ದೊಂದಿಗೆ (1983)



ಕುವೆಂಪು ಅವರೊಂದಿಗೆ
'ಉದಯರವಿ'ಯಲ್ಲಿ (1983)

ಕೇಂದ್ರ ಸಾಹಿತ್ಯ
ಅಕಾಡೆಮಿ ಪ್ರಶಸ್ತಿ
ದೆಹಲಿಯಲ್ಲಿ (1984)
ಬೀರೇಂದ್ರ ಕುಮಾರ
ಭಟ್ಟಾಚಾರ್ಯ
ಉಪಾಧ್ಯಕ್ಷರು: ಸಾಹಿತ್ಯ
ಅಕಾಡೆಮಿ

ಬನವಾಸಿಯಲ್ಲಿ 'ಪಂಪ ಪ್ರಶಸ್ತಿ' ಸ್ವೀಕಾರ (1998)





ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ (ದಾವಣಗೆರೆ) ಅಧ್ಯಕ್ಷರಾಗಿ (1992)

ಪ್ರಿಯಮಿತ್ರ ಚೆನ್ನವೀರ ಕಣವಿಯವರೊಂದಿಗೆ (1997)

ಮೊಮ್ಮಗಳು ಅನನ್ಯಳೊಂದಿಗೆ ( 1992)



ಜಿಎಸ್ಎಸ್ ಕುಟುಂಬ ವರ್ಗ

ನಿಂತವರು : ಜಯದೇವ, ಡಾ॥ ಶಿವಪ್ರಸಾದ್, ಡಾ॥ ಪೂರ್ಣಿಮಾ

ಕುಳಿತವರು : ಜಯಂತಿ, ಡಾ॥ ಕೆ.ಮರುಳಸಿದ್ದಪ್ಪ, ಜಿ.ಎಸ್.ರುದ್ರಾಣಿ, ಚೈತನ್ಯ, ಪದ್ಮಾ ( 1994)



ಪಂಪ ಪ್ರಶಸ್ತಿಯ
ಅಭಿನಂದನೆ :
ಶಿವಮೊಗ್ಗದ
ಸಮಾರಂಭ
(1999)



ತಾರುಣ್ಯದ ಉತ್ಸಾಹದಲ್ಲಿ (1953)

# ಜೀವನ ಪಥ

## ಡಾ॥ ಜಿ. ಎಸ್. ಶಿವರುದ್ರಪ್ಪ ಎಂ.ಎ., ಪಿಎಚ್.ಡಿ.

1. ಜನನ: 7.2.1926

2. ಸ್ಥಳ: ಷಿಕಾರಿಪುರ, ಶಿವಮೊಗ್ಗ ಜಿಲ್ಲೆ, ಕರ್ನಾಟಕ

3. ವಿದ್ಯಾಭ್ಯಾಸ:

   ಮೈಸೂರು ವಿಶ್ವವಿದ್ಯಾಲಯ—ಬಿ.ಎ. ಆನರ್ಸ್ (1949); ಎಂ.ಎ. (1953) ಪ್ರಪ್ರಥಮ ದರ್ಜೆಯಲ್ಲಿ ತೇರ್ಗಡೆ; ಮೂರು ಸುವರ್ಣ ಪದಕ ಹಾಗೂ ಎರಡು ಬಹುಮಾನಗಳು.

   ಪಿಎಚ್.ಡಿ. (1960) ಶ್ರೀ ಕುವೆಂಪು ಅವರ ಮಾರ್ಗದರ್ಶನದಲ್ಲಿ ಬರೆದ 'ಸೌಂದರ್ಯ ಸಮೀಕ್ಷೆ' ಎಂಬ ಪ್ರೌಢ ಪ್ರಬಂಧಕ್ಕೆ.

4. ವೃತ್ತಿ ಜೀವನ:

   (1) ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಾಪಕ (1949-1963)

   (2) ಹೈದರಾಬಾದ್ ಉಸ್ಮಾನಿಯ ವಿಶ್ವವಿದ್ಯಾಲಯದ ಆಹ್ವಾನದ ಮೇರೆಗೆ ರೀಡರ್ ಮತ್ತು ಕನ್ನಡ ವಿಭಾಗದ ಮುಖ್ಯಸ್ಥ (1963-1966)

   (3) ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ವಿಭಾಗದ ರೀಡರ್ (1966-1970)

   (4) ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ಪ್ರಾಧ್ಯಾಪಕ ಹಾಗೂ ನಿರ್ದೇಶಕ (1970-1986)

   (5) ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷ (1987-1990)

   (6) ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಕುವೆಂಪು ಪೀಠದ ಸಂದರ್ಶಕ ಪ್ರಾಧ್ಯಾಪಕ (1994-1995).

5. ಸಾಹಿತ್ಯ ಜೀವನ (ಪ್ರಕಟಣೆಗಳು):

(ಅ) ಕವನ ಸಂಗ್ರಹಗಳು:

1. ಸಾಮಗಾನ
2. ಚೆಲುವು ಒಲವು
3. ದೇವಶಿಲ್ಪ
4. ತೀರ್ಥವಾಣಿ
5. ಕಾರ್ತೀಕ
6. ದೀಪದ ಹೆಜ್ಜೆ
7. ಅನಾವರಣ
8. ತೆರೆದ ದಾರಿ
9. ಗೋಡೆ
10. ಕಾಡಿನ ಕತ್ತಲಲ್ಲಿ
11. ಪ್ರೀತಿ ಇಲ್ಲದ ಮೇಲೆ
12. ಚಕ್ರಗತಿ
13. ವ್ಯಕ್ತಮಧ್ಯ

(ಆ) ಗದ್ಯ ಕೃತಿಗಳು:

1. ಕರ್ಮಯೋಗಿ
2. ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ
3. ಗಂಗೆಯ ಶಿಖರಗಳಲ್ಲಿ
4. ವಿಮರ್ಶೆಯ ಪೂರ್ವ-ಪಶ್ಚಿಮ
5. ಪರಿಶೀಲನ
6. ಗತಿಬಿಂಬ
7. ಪ್ರತಿಕ್ರಿಯೆ
8. ನವೋದಯ
9. ಕನ್ನಡ ಸಾಹಿತ್ಯ ಸಮೀಕ್ಷೆ
10. ಅನುರಣನ
11. ಸೌಂದರ್ಯ ಸಮೀಕ್ಷೆ
12. ಮಹಾಕಾವ್ಯ ಸ್ವರೂಪ
13. ಕಾವ್ಯಾರ್ಥ ಚಿಂತನ
14. ಕನ್ನಡ ಕವಿಗಳ ಕಾವ್ಯ-ಕಲ್ಪನೆ
15. ಚತುರಂಗ
16. ಬೆಡಗು
17. ಅಮೆರಿಕದಲ್ಲಿ ಕನ್ನಡಿಗ
18. ಹೊಸಗನ್ನಡ ಕವಿತೆಗಳಲ್ಲಿ ಕಾವ್ಯಚಿಂತನ
19. ವಿಸ್ತರಣ
20. ಶಿವಯೋಗಿ ಸಿದ್ಧರಾಮ
21. ಸರ್ವಭೂಷಣ ಶಿವಯೋಗಿ
22. ಇಂಗ್ಲೆಂಡಿನಲ್ಲಿ ಚತುರ್ಮಾಸ
23. ಚದುರಿದ ಚಿಂತನೆಗಳು

(ಇ) ಸಂಪಾದಿತ:

1. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ—ಆರು ಸಂಪುಟಗಳಲ್ಲಿ.
2. ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ—ಹತ್ತು ಸಂಪುಟಗಳಲ್ಲಿ.
3. ಸಾಹಿತ್ಯ ವಾರ್ಷಿಕ—ಹದಿನಾಲ್ಕು ಸಂಪುಟಗಳಲ್ಲಿ.

**6. ಪ್ರಶಸ್ತಿ-ಗೌರವಗಳು:**

(1) 1974ರಲ್ಲಿ 'ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ' ಎಂಬ ಪ್ರವಾಸ ಕಥನಕ್ಕೆ 'ಸೋವಿಯೆತ್ ಲ್ಯಾಂಡ್ ನೆಹ್ರೂ' ಪ್ರಶಸ್ತಿ.

(2) 1982ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪುರಸ್ಕಾರ.

(3) 1983-84ರಲ್ಲಿ ಯು.ಜಿ.ಸಿ.ಯಿಂದ ರಾಷ್ಟ್ರೀಯ ಉಪನ್ಯಾಸಕ (National Lecturer) ಆಗಿ ನೇಮಕ.

(4) 1984ರಲ್ಲಿ 'ಕಾವ್ಯಾರ್ಥ ಚಿಂತನ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ

(5) 1984ರಲ್ಲಿ 'ಕಾವ್ಯಾರ್ಥ ಚಿಂತನ' ಕೃತಿಗೆ ವರ್ಷದ ಅತ್ಯುತ್ತಮ ಕೃತಿ ಎಂದು ಬಹುಮಾನ.

(6) 1984ರಲ್ಲಿ ಕರ್ನಾಟಕ ರಾಜ್ಯ ಸರ್ಕಾರದಿಂದ ರಾಜ್ಯೋತ್ಸವ ಪ್ರಶಸ್ತಿ.

(7) ಪ್ರೊ. ಭೂಸನೂರಮಠ ಪ್ರಶಸ್ತಿ – 1997.

(8) ಕರ್ನಾಟಕ ಸರ್ಕಾರದ ಪಂಪ ಪ್ರಶಸ್ತಿ – 1997.

(9) ಗೊರೂರು ಪ್ರಶಸ್ತಿ – 1999.

(10) ಡಾ. ಮಾಸ್ತಿ ಪ್ರಶಸ್ತಿ – 2000.

**7. ಇತರ:**

(1) 1963ರಲ್ಲಿ ದೆಹಲಿಯ ರಾಷ್ಟ್ರೀಯ ಕವಿ ಸಮ್ಮೇಳನದಲ್ಲಿ ಕರ್ನಾಟಕದ ಪ್ರತಿನಿಧಿ.

(2) 1964ರಲ್ಲಿ ತುಮಕೂರಿನಲ್ಲಿ ನಡೆದ ಅಖಿಲ ಭಾರತೀಯ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯ ಅಧ್ಯಕ್ಷತೆ.

(3) 1986ನೇ ಏಪ್ರಿಲ್‌ನಲ್ಲಿ ಮದರಾಸು ಕನ್ನಡಿಗರ ಸಮ್ಮೇಳನದ ಅಧ್ಯಕ್ಷತೆ.

(4) 1992ನೇ ಜನವರಿಯಲ್ಲಿ ದಾವಣಗೆರೆಯಲ್ಲಿ ನಡೆದ ಅಖಿಲ ಭಾರತ 61ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಗೌರವ.

**8. ಗೌರವ ಗ್ರಂಥಗಳು:**

(ಅ) ಸ್ನೇಹ ಕಾರ್ತೀಕ – 1977

(ಆ) ಗೌರವ – 2001

(ಇ) ಹಣತೆ – 2001

**9. ಪ್ರವಾಸ:**

(ಅ) 1973ನೇ ಸೆಪ್ಟೆಂಬರ್‌ನಲ್ಲಿ ಭಾರತ-ಸೋವಿಯೆತ್ ಸಾಂಸ್ಕೃತಿಕ ವಿನಿಮಯ ಯೋಜನೆಯಲ್ಲಿ ರಷ್ಯಾದಲ್ಲಿ ಪ್ರವಾಸ.

(ಆ) ಅಮೆರಿಕಾ, ಇಂಗ್ಲೆಂಡ್ (1987); ಥಾಯ್‌ಲೆಂಡ್-ಸಿಂಗಪುರ (1994); ಇಂಗ್ಲೆಂಡ್-ಯೂರೋಪು (1996); ಅಮೆರಿಕಾ (1997).

~ ~ ~ * * * ~ ~ ~

**ಡಾ|| ಜಿ. ಎಸ್. ಶಿವರುದ್ರಪ್ಪ**
867, 'ಚೈತ್ರ', 18ನೇ ಮುಖ್ಯ ರಸ್ತೆ
ಬನಶಂಕರಿ 2ನೇ ಹಂತ
ಬೆಂಗಳೂರು - 560 070 (ಕರ್ನಾಟಕ)
ದೂರವಾಣಿ: 6710767

# ಲೇಖಕರ ವಿಳಾಸ

❑ **ಡಾ|| ಯು. ಆರ್. ಅನಂತಮೂರ್ತಿ**
ನಂ. 498, 'ಸುರಗಿ'
ಹೆಚ್.ಐ.ಜಿ. ಹೌಸ್
ರಾಜಮಹಲ್ ವಿಲಾಸ್ 2ನೇ ಹಂತ

❑ **ಡಾ|| ಎಚ್. ನರಸಿಂಹಯ್ಯ**
C/o. ನ್ಯಾಷನಲ್ ಕಾಲೇಜು ಹಾಸ್ಟೆಲ್
ಬಸವನಗುಡಿ
ಬೆಂಗಳೂರು

❑ **ಡಾ|| ಎಂ. ಚಿದಾನಂದಮೂರ್ತಿ**
6ಎ, ನಾಲ್ಕನೇ ಕ್ರಾಸ್
11ನೇ ಮೇನ್, ವಿಜಯನಗರ
2ನೇ ಹಂತ, ಬೆಂಗಳೂರು - 40

❑ **ಡಾ|| ಟಿ. ವಿ. ವೆಂಕಟಾಚಲಶಾಸ್ತ್ರಿ**
'ಬ್ರಾಹ್ಮಿ', 68ಬಿ, ಆಶ್ರಮದ ರಸ್ತೆ
3ನೇ ಬ್ಲಾಕ್, ಜಯಲಕ್ಷ್ಮಿಪುರ
ಮೈಸೂರು - 570 012

❑ **ಚೆನ್ನವೀರ ಕಣವಿ**
'ಚೆಂಬೆಳಕು', ಕಲ್ಯಾಣನಗರ
ಧಾರವಾಡ - 580 007

❑ **ಡಾ|| ಸಿ. ಎನ್. ರಾಮಚಂದ್ರನ್**
ನಂ. 5,
ಪ್ರೇಮ್‌ಸಾಗರ್ ಅಪಾರ್ಟ್‌ಮೆಂಟ್
ಮಣ್ಣಗುಡ್ಡ
ಮಂಗಳೂರು - 575 003

❑ **ದೇಜಗೌ**
'ಕಲಾನಿಲಯ'
ಜಯಲಕ್ಷ್ಮಿಪುರ
ಮೈಸೂರು - 570 012

❑ **ಡಾ|| ರಾಜೇಂದ್ರ ಚೆನ್ನಿ**
ಇಂಗ್ಲೀಷ್ ಪ್ರಾಧ್ಯಾಪಕರು
ಕುವೆಂಪು ವಿಶ್ವವಿದ್ಯಾನಿಲಯ
ಜ್ಞಾನ ಸಹ್ಯಾದ್ರಿ, ಶಂಕರಘಟ್ಟ
ಶಿವಮೊಗ್ಗ ಜಿಲ್ಲೆ - 577 451

❑ **ವಿ. ಚಂದ್ರಶೇಖರ ನಂಗಲಿ**
ನಂ. 3284
ಪಿ.ಸಿ. ಬಡಾವಣೆ
ಕೋಲಾರ - 563 101

❑ **ಪ್ರೊ|| ಎಂ. ರಾಮಚಂದ್ರ**
'ಅಕ್ಷರ', ಶಬರಿ ಆಶ್ರಮ ಸಮೀಪ
ತೆಳ್ಳ ರಸ್ತೆ, ಕಾರ್ಕಳ - 574 104

❑ **ಡಾ|| ಎಚ್.ಎಸ್. ರಾಘವೇಂದ್ರರಾವ್**
ನಂ. 2 'ಶ್ರೀಮಾತಾ'
15ನೇ ಕ್ರಾಸ್, 5ನೇ ಹಂತ
ಜೆ.ಪಿ. ನಗರ, ಬೆಂಗಳೂರು - 78

❑ **ನಟರಾಜ ಬೂದಾಳು**
ಅಂಚೆತಂತಿ ವಾಸದ ಮನೆಗಳು
ಶೆಟ್ಟಿಹಳ್ಳಿ ರಸ್ತೆ
ತುಮಕೂರು - 572 102

- ಪ್ರೊ|| ಕೆ.ಜಿ. ನಾಗರಾಜಪ್ಪ
  'ಅಪೂರ್ವ' ನಂ. 73, 5ನೇ ಮುಖ್ಯರಸ್ತೆ
  ಮಾರುತಿ ಎಚ್.ಬಿ.ಸಿ.ಎಸ್. ಲೇಔಟ್
  (ಗುರಪ್ಪನ ಪಾಳ್ಯ)
  ಬಿ.ಟಿ.ಎಂ. ಮೊದಲನೇ ಹಂತ
  ಬೆಂಗಳೂರು - 560 029

- ಡಾ|| ನರಹಳ್ಳಿ ಬಾಲಸುಬ್ರಹ್ಮಣ್ಯ
  ಕನ್ನಡ ವಿಭಾಗದ ಮುಖ್ಯಸ್ಥರು
  ಶೇಷಾದ್ರಿಪುರಂ ಕಾಲೇಜು
  ಬೆಂಗಳೂರು

- ಡಾ||ಎಚ್.ಎಸ್. ವೆಂಕಟೇಶಮೂರ್ತಿ
  34, 'ದೇವಗಿರಿ'
  ಹೊಸಕೆರೆಹಳ್ಳಿ
  ಬೆಂಗಳೂರು - 560 095

- ಡಾ|| ತಾಳ್ತಜೆ ವಸಂತಕುಮಾರ
  ಪ್ರಾಧ್ಯಾಪಕ ಮತ್ತು ಮುಖ್ಯಸ್ಥ
  ಕನ್ನಡ ವಿಭಾಗ
  ಮುಂಬೈ ವಿಶ್ವವಿದ್ಯಾಲಯ
  ವಿದ್ಯಾನಗರಿ
  ಮುಂಬಯಿ - 400 098

- ಡಿ.ಎಸ್. ನಾಗಭೂಷಣ
  ಸಹಾಯಕ ನಿಲಯ ನಿರ್ದೇಶಕರು
  ಆಕಾಶವಾಣಿ
  ಚಿತ್ರದುರ್ಗ - 577 501

- ಕರುಣಾಕರ
  'ಮಾನಸ', ಜೆಟ್ಟಿಪಳ್ಳ, ಸುಳ್ಯ ತಾ
  ದಕ್ಷಿಣ ಕನ್ನಡ

- ಪ್ರೊ|| ಎಸ್.ಜಿ. ಸಿದ್ಧರಾಮಯ್ಯ
  'ಹೊಂಬೆಳಗು'
  ನಳಂದ ಕಾನ್ವೆಂಟ್ ರಸ್ತೆ
  ರಾಘವೇಂದ್ರನಗರ
  ತುಮಕೂರು - 572 102

- ಡಾ|| ಚಂದ್ರಶೇಖರ ಕಂಬಾರ
  'ಸಿರಿಸಂಪಿಗೆ' ನಂ. 136
  1ನೇ ಮುಖ್ಯರಸ್ತೆ, ಕೆಂಗೇರಿ ಉಪನಗರ
  ಬೆಂಗಳೂರು - 60

- ಡಾ|| ಜಾ.ಗೋ (ಗೋವಿಂದ ಜಾಲಿಹಾಳ)
  395, 9ನೇ ಮುಖ್ಯರಸ್ತೆ
  ಹನುಮಂತನಗರ
  ಬೆಂಗಳೂರು - 560 019

- ಡಾ|| ಸುಮತೀಂದ್ರ ನಾಡಿಗ
  38, 1ನೇ ಮೇನ್
  3ನೇ ಫೇಸ್, 5ನೇ ಬ್ಲಾಕ್
  ಬನಶಂಕರಿ 3ನೇ ಹಂತ
  ಬೆಂಗಳೂರು - 85

- ಡಾ|| ಕೆ. ವಿ. ನಾರಾಯಣ
  ಕುಲಸಚಿವರು
  ಹಂಪಿ ಕನ್ನಡ ವಿಶ್ವವಿದ್ಯಾಲಯ
  ವಿದ್ಯಾರಣ್ಯ 583 276
  ಬಳ್ಳಾರಿ ಜಿಲ್ಲೆ

- ಬದರಹಳ್ಳಿ ನರಸಿಂಹಮೂರ್ತಿ
  'ಅನಿಮಿಶ' ಕಾಲಜ್ಞಾನಿ ಕನಕದಾಸ ರಸ್ತೆ
  ದುರ್ಗಿಗುಡಿ ಬಡಾವಣೆ
  ಹೊನ್ನಾಳಿ - 577 217

❑ **ಡಾ|| ಶ್ರೀಕಂಠ ಕೂಡಿಗೆ**
ಪ್ರಾಧ್ಯಾಪಕರು, ಕನ್ನಡ ಭಾರತಿ
ಕುವೆಂಪು ವಿಶ್ವವಿದ್ಯಾನಿಲಯ
ಜ್ಞಾನ ಸಹ್ಯಾದ್ರಿ, ಶಂಕರಘಟ್ಟ
ಶಿವಮೊಗ್ಗ ಜಿಲ್ಲೆ - 577451

❑ **ಪ್ರೊ|| ಕೀರ್ತಿನಾಥ ಕುರ್ತಕೋಟಿ**
ನಂ. 1, ದೇಸಾಯಿ ಕಾಲೋನಿ
ಯೂನಿವರ್ಸಿಟಿ ಕ್ರಾಸ್
ಧಾರವಾಡ - 580 003

❑ **ಡಾ|| ಬಿ.ಎನ್. ಸುಮಿತ್ರಾಬಾಯಿ**
ನಂ. 509, 16ನೇ ಮೇನ್
ಬನಶಂಕರಿ ಮೊದಲನೇ ಹಂತ
ಶ್ರೀನಗರ, ಬೆಂಗಳೂರು - 560 050

❑ **ವಿಷ್ಣುನಾಯ್ಕ**
'ಪರಿಮಳ', ಅಂಬಾರ ಕೊಡ್ಳ
ಅಂಕೋಲ - 581314 (ಉ.ಕ)

❑ **ಕೆ.ಪಿ. ನಟರಾಜ**
ಎಚ್.ಎಂ.ಟಿ. ವಸತಿಗೃಹಗಳು
ತುಮಕೂರು

❑ **ಶಂಕರ ಕಟಗಿ**
'ಬುದ್ಧ ನಿವಾಸ' ಎಲ್‌ಜಿ 31,
ಹುಡ್ಕೋಕಾಲೋನಿ
ಜಲನಗರ, ಬಿಜಾಪುರ - 586 101

❑ **ಎ. ರಘುರಾಂ**
ಕನ್ನಡ ಉಪನ್ಯಾಸಕ
ಸರ್ಕಾರಿ ಪ್ರ.ದ. ಕಾಲೇಜು
ಸಿಂಧನೂರು, ರಾಯಚೂರು ಜಿಲ್ಲೆ

❑ **ಸ. ಉಷಾ**
ಕನ್ನಡ ಪ್ರಾಧ್ಯಾಪಕರು
ಹೊಯ್ಸಳೇಶ್ವರ ಕಾಲೇಜು
ಅರಸೀಕೆರೆ - 573 103

❑. **ಎಂ. ಆರ್. ಕಮಲ**
ನಂ. 405, 'ಉಮಾಶಂಕರ'
1ನೇ ಎನ್ ಬ್ಲಾಕ್
19ನೇ 'ಜ' ಮುಖ್ಯರಸ್ತೆ
ರಾಜಾಜಿನಗರ
ಬೆಂಗಳೂರು - 560 010

❑ **ಡಾ|| ಜಿ. ಎಂ. ಹೆಗಡೆ**
6ನೇ ತಿರುವು, ಕಲ್ಯಾಣನಗರ
ಧಾರವಾಡ - 580 007

❑ **ಎಚ್. ಆರ್. ಲೀಲಾವತಿ**
ನಂ. 36, 'ಜಯಲತ'
ಮಾರುತಿ ಗುಡಿ ಬೀದಿ
4ನೇ ಮುಖ್ಯರಸ್ತೆ, ಕುವೆಂಪುನಗರ
ಮೈಸೂರು - 570 009

❑. **ಶಿವಮೊಗ್ಗ ಸುಬ್ಬಣ್ಣ**
'ಶ್ರೀ ಗಣೇಶ'
ನಂ. 3063, 9ನೇ ಮುಖ್ಯರಸ್ತೆ
ಬನಶಂಕರಿ 2ನೇ ಹಂತ
ಬೆಂಗಳೂರು - 600 070

❑. **ಡಾ|| ಎಸ್. ವಿದ್ಯಾಶಂಕರ್**
138, 7ನೇ ಸಿ ಮುಖ್ಯರಸ್ತೆ
ವಿಜಯನಗರ 2ನೇ ಹಂತ
ಬೆಂಗಳೂರು - 560 040

- **ಡಾ|| ಪಿ. ವಿ. ನಾರಾಯಣ**
  'ತಂಗಾಳಿ' ನಂ. 30,
  ಆರ್.ಬಿ.ಐ. ಕಾಲೋನಿ
  ಜಯನಗರ 3ನೇ ಬ್ಲಾಕ್ (ಪೂರ್ವ)
  ಬೆಂಗಳೂರು - 560 011

- **ನಾ. ಡಿಸೋಜ**
  15/14, 2ನೇ ಕ್ರಾಸ್
  ನೆಹರೂ ನಗರ
  ಸಾಗರ - 577 401

- **ಎಚ್.ಎಸ್. ಪಾರ್ವತಿ**
  'ಸ್ನೇಹ', 3368, 13ನೇ ಅಡ್ಡ ರಸ್ತೆ
  ಕೆ.ಆರ್. ರಸ್ತೆ, ಶಾಸ್ತ್ರಿನಗರ
  ಬೆಂಗಳೂರು - 560 028

- **ಪ್ರಸನ್ನ**
  ನಂ. 27, ಪಟಾಲಮ್ಮಗುಡಿ ಬೀದಿ
  ಸೌತ್ಎಂಡ್ ಸರ್ಕಲ್ ಹತ್ತಿರ
  ಬಸವನಗುಡಿ
  ಬೆಂಗಳೂರು - 560 004

- **ಬಿ.ಆರ್. ಲಕ್ಷ್ಮಣರಾವ್**
  ಮಾರುತಿ ಸ್ಟುಡಿಯೋ
  ಕೆ.ಆರ್. ಬಡಾವಣೆ
  ಚಿಂತಾಮಣಿ - 563 125

- **ಡಾ|| ಎಸ್. ಚಂದ್ರಶೇಖರ್**
  ಪ್ರಾಧ್ಯಾಪಕರು, ಇತಿಹಾಸ ವಿಭಾಗ
  ಜ್ಞಾನಭಾರತಿ
  ಬೆಂಗಳೂರು ವಿಶ್ವವಿದ್ಯಾಲಯ
  ಬೆಂಗಳೂರು - 56

- **ಕುಂ. ವೀರಭದ್ರಪ್ಪ**
  ಲೇಖಕರು, 'ಅನ್ನಪೂರ್ಣ'
  ಪೊಲೀಸ್ ಠಾಣೆ ಹತ್ತಿರ
  ಕೊಟ್ಟೂರು (ಬಳ್ಳಾರಿ) 583 124

- **ಜಿ. ಪಿ. ಬಸವರಾಜು**
  ಹಿರಿಯ ಉಪಸಂಪಾದಕರು
  ಪ್ರಜಾವಾಣಿ, ಮಹಾತ್ಮಾಗಾಂಧಿ ರಸ್ತೆ
  ಬೆಂಗಳೂರು - 560 001

- **ಎಂ. ಚಂದ್ರಶೇಖರಯ್ಯ**
  (ಕನ್ನಡ ಉಪನ್ಯಾಸಕರು) ಬೆರಗು
  ನಂ. 807, ನರಸಿಂಹಸ್ವಾಮಿ ಗುಡಿರಸ್ತೆ
  ಹಳೇನಗರ, ಭದ್ರಾವತಿ - 577 301

- **ಡಾ|| ಬಸವರಾಜ ಸಬರದ**
  ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ
  ಗುಲಬರ್ಗಾ ವಿಶ್ವವಿದ್ಯಾಲಯ
  ಗುಲಬರ್ಗಾ - 585 106

- **ಚಿಂತಾಮಣಿ ಕೊಡ್ಲೆಕೆರೆ**
  ಸಿ.2-2, ಡಬ್ಲ್ಯೂಎಂ.ಎಸ್ ಕಾಂಪೌಂಡ್
  9ನೇ ಮುಖ್ಯರಸ್ತೆ, 43ನೇ ಕ್ರಾಸ್
  ಜಯನಗರ 5ನೇ ಬ್ಲಾಕ್
  ಬೆಂಗಳೂರು - 560 041

- **ಡಾ|| ಸಿ. ಪಿ. ಕೃಷ್ಣಕುಮಾರ್**
  2295/19, 'ಭಾರತಿ'
  6ನೇ ಕ್ರಾಸ್, 2ನೇ ಮೇನ್
  ವಿನಾಯಕನಗರ
  ಮೈಸೂರು - 570 012

- ಪ್ರೊ|| ಕೆ. ರಾಮದಾಸ್
  'ಚಾರ್ವಾಕ' 986
  ಪಂಚಮಂತ್ರರಸ್ತೆ, ಕುವೆಂಪುನಗರ
  ಮೈಸೂರು - 570 023

- ಪ್ರೊ|| ಆರ್. ನಿರ್ಮಲಾ
  'ಚಾರ್ವಾಕ' 986
  ಪಂಚಮಂತ್ರರಸ್ತೆ, ಕುವೆಂಪುನಗರ
  ಮೈಸೂರು - 570 023

- ಮಹೇಶ್ವರಪ್ಪ
  'ಹರಿಹರ ಕೃಪ'
  ನಿವೃತ್ತ ಕನ್ನಡ ಉಪನ್ಯಾಸಕರು
  ಜೆಸಿಆರ್ ಬಡಾವಣೆ
  ಚಿತ್ರದುರ್ಗ

- ಪಿ. ರೇವಮ್ಮ
  ರಾಘವೇಂದ್ರ ಮಠದ ಹಿಂಭಾಗ
  ಶೆಟ್ಟಿಹಳ್ಳಿ ಗೇಟ್ ಬಳಿ
  ತುಮಕೂರು

- ಟಿ.ಎಸ್. ದಕ್ಷಿಣಾಮೂರ್ತಿ
  ರಿಜಿಸ್ಟ್ರಾರ್,
  ಕರ್ನಾಟಕ ಸಾಹಿತ್ಯ ಅಕಾಡೆಮಿ
  ಕನ್ನಡ ಭವನ
  ಜೆ.ಸಿ. ರಸ್ತೆ, ಬೆಂಗಳೂರು - 2

- ಡಾ|| ವಿಜಯಾ ಸುಬ್ಬರಾಜ್
  ನಂ. 347, 13ನೇ ಬಿ ಕ್ರಾಸ್
  ವೈಯಾಲಿಕಾವಲ್
  ಬೆಂಗಳೂರು -3

- ಡಾ|| ಮೀರಾಸಾಬಿಹಳ್ಳಿ ಶಿವಣ್ಣ
  ಕನ್ನಡ ಪ್ರಾಧ್ಯಾಪಕರು,'ಜಾನಪದ',
  ದೂರವಾಣಿ ಗೋಪುರದ ಬಳಿ
  ಬಾಪೂಜಿ ಕಾಲೇಜು ರಸ್ತೆ
  ಚಳ್ಳಕೆರೆ 577 522 (ಚಿತ್ರದುರ್ಗ ಜಿಲ್ಲೆ)

- ಡಾ|| ಡಿ. ಮಂಗಳಾಪ್ರಿಯದರ್ಶಿನಿ
  ನಂ. 992, 'ಅನುಗ್ರಹ'
  11ನೇ ಮುಖ್ಯರಸ್ತೆ, 2ನೇ ಹಂತ
  1ನೇ ಬ್ಲಾಕ್, ಬಸವೇಶ್ವರನಗರ
  ಬೆಂಗಳೂರು - 79

- ಪ್ರೊ|| ಬಿ. ಪಿ. ವೀರೇಂದ್ರ ಕುಮಾರ್
  ಕನ್ನಡ ಪ್ರಾಧ್ಯಾಪಕರು
  ಎಚ್‌ಪಿಸಿಸಿ ಕಾಲೇಜು
  ಚಳ್ಳಕೆರೆ (ಚಿತ್ರದುರ್ಗ ಜಿಲ್ಲೆ) 577 522

- ಡಾ|| ಬೈರಮಂಗಲ ರಾಮೇಗೌಡ
  ಕನ್ನಡ ಉಪನ್ಯಾಸಕ
  ಸರ್ಕಾರಿ ಕಲಾ ಕಾಲೇಜು
  ತುಮಕೂರು - 572 103

- ಎನ್. ನಾಗರಾಜು
  ವ್ಯವಸ್ಥಾಪಕರು
  ಸರ್ಕಾರಿ ಕಲಾ ಕಾಲೇಜು
  ತುಮಕೂರು

- ಜಿ. ಎಸ್. ರುದ್ರಾಣಿ ಶಿವರುದ್ರಪ್ಪ
  867, ಚೈತ್ರ 18ನೇ ಮೇನ್
  ಬನಶಂಕರಿ 2ನೇ ಹಂತ
  ಬೆಂಗಳೂರು

- **ಜಿ.ಎಸ್. ಲಲಿತಾಂಬಿಕ**
  108, 7ಎ, 7ನೇ ಮುಖ್ಯರಸ್ತೆ
  3ನೇ ಬ್ಲಾಕ್, ಜಯನಗರ
  ಬೆಂಗಳೂರು - 560 011

- **ಪದ್ಮಾಶಿವರುದ್ರಪ್ಪ**
  ನಂ. 619, ಕಾರ್ತೀಕ್
  18ನೇ ಮೇನ್
  ಪದ್ಮನಾಭನಗರ
  ಬೆಂಗಳೂರು - 70

- **ಎಚ್. ದುಂಡಿರಾಜ್**
  ಸೀನಿಯರ್ ಮ್ಯಾನೇಜರ್
  ಕಾರ್ಪೊರೇಷನ್ ಬ್ಯಾಂಕ್
  60 ಅಡಿ ರಸ್ತೆ , ನಾಸಿಕ್ - 422 001
  ಮಹಾರಾಷ್ಟ್ರ

- **ಸತ್ಯನಾರಾಯಣರಾವ್ ಅಣತಿ**
  'ರಚನ' 2ನೇ ತಿರುವು, ಶರಾವತಿನಗರ
  ಹೊಸಮನೆ ಚರ್ಚೆ ಪಕ್ಕ
  ಶಿವಮೊಗ್ಗ - 577 201

- **ಡಾ|| ಎಸ್. ವಿ. ಪ್ರಭಾವತಿ**
  468, 25ನೇ ಮೈನ್
  ಬಿಟಿಎಂ ಬಡಾವಣೆ
  ಬೆಂಗಳೂರು - 560 076

- **ಪ್ರೊ|| ಟಿ.ಎಸ್. ನಾಗರಾಜಶೆಟ್ಟಿ**
  967, ಸಂತೋಷ ಸಾಗರ
  ಗೋವಿನಪುರ ಬಡಾವಣೆ
  ತಿಪಟೂರು - 572 202

- **ಸವಿತಾ ನಾಗಭೂಷಣ**
  ಡಿ2, ಆಕಾಶವಾಣಿ ವಸತಿ ಗೃಹ
  ಸಿ.ಕೆ.ಪುರ, ಚಿತ್ರದುರ್ಗ

- **ಪ್ರೊ|| ಟಿ. ಪಿ. ಅಶೋಕ**
  ಇಂಗ್ಲೀಷ್ ವಿಭಾಗ
  ಲಾಲ್ ಬಹದೂರ್ ಶಾಸ್ತ್ರಿ ಕಾಲೇಜು
  ಸಾಗರ - 577 401

- **ಡಾ|| ಮಲ್ಲೇಪುರಂ ಜಿ. ವೆಂಕಟೇಶ್**
  ಹಂಪಿ ಕನ್ನಡ ವಿಶ್ವವಿದ್ಯಾಲಯ
  ಕಮಲಾಪುರ
  ವಿದ್ಯಾರಣ್ಯ 583 276
  ಬಳ್ಳಾರಿ ಜಿಲ್ಲೆ

- **ಎಚ್. ಎಲ್. ಪುಷ್ಪ**
  'ನಿಸರ್ಗ'
  37/2ಎ, ಗೋವಿಂದರಾಜನಗರ
  ನಾಗರಬಾವಿ ರಸ್ತೆ
  ವಿಜಯನಗರ
  ಬೆಂಗಳೂರು - 560 040


~ ~ ~ * * * ~ ~ ~

# ಲೋಹಿಯಾ ಪ್ರಕಾಶನ

'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧೀನಗರ
ಬಳ್ಳಾರಿ - 583 103
✆ 08392-57412


## ನಮ್ಮ ಪ್ರಕಟಣೆಗಳು

**ಕಥಾ ಸಂಕಲನ**

| | | | |
|---|---|---|---|
| 1. | ಹಂಗಿನರಮನೆಯ ಹೊರಗೆ | ಡಾ. ರಾಜಶೇಖರ ನೀರಮಾನ್ವಿ | 60/- |
| 2. | ಅನಾಥ ಪಕ್ಷಿಯ ಕಲರವ | ವೀರಭದ್ರ | 125/- |
| 3. | ಕಾಳಬೆಳುದಿಂಗಳ ಸಿರಿ | ರಾಜಶೇಖರ ಹತಗುಂದಿ | 45/- |
| 4. | ಹಣದಿ | ಶಿವಕುಮಾರ ನಾಗವಾರ | 60/- |
| 5. | ಪಟ್ಟಾ | ಚಿತ್ರಶೇಖರ ಕಂಠಿ | 45/- |
| 6. | ಉಡಿಯಲ್ಲಿಯ ಉರಿ | ಕಲಿಗಣನಾಥ ಗುಡದೂರು | 45/- |
| 7. | ಮಣ್ಣಿನ ಕುಡಿಕೆ | ಡಾ. ಮಲ್ಲಿಕಾರ್ಜುನ ವಣೇನೂರು | 50/- |
| 8. | ಹಂಸೆ ಹಾರಿತ್ತು | ಬಿದರಹಳ್ಳಿ ನರಸಿಂಹಮೂರ್ತಿ | 75/- |
| 9. | ಬಾಳೆಗಿಡ ಗೊನೆಹಾಕಿತು | ಬಿ.ಎಂ. ಬಶೀರ್ | 30/- |

**ಕಾವ್ಯ**

| | | | |
|---|---|---|---|
| 10. | ಆ ಅಜ್ಜ - ಈ ಮೊಮ್ಮಗ | ಮುದೇನೂರ ಸಂಗಣ್ಣ | 75/- |
| 11. | ತಮಾಷಾ | ವಿಕ್ರಮ ವಿಸಾಜಿ | 45/- |
| 12. | ಜಾಲಿ ಹೂಗಳ ನಡುವೆ | ಬಿ. ಪೀರ್ ಬಾಷ | 45/- |
| 13. | ಮರಾಠಿ ದಲಿತ ಕಾವ್ಯ | ಡಾ. ಸರಜೂ ಕಾಟ್ಕರ್ | 75/- |
| 14. | ಕೆಡಹಬಲ್ಲರು ಅವರು ಕಟ್ಟಬಲ್ಲೆವು ನಾವು | ಪ್ರೊ. ಅಲ್ಲಮಪ್ರಭು ಬೆಟ್ಟದೂರು | 35/- |
| 15. | ಗಾಂಧೀಗಿಡ | ಸತೀಶ್ ಕುಲಕರ್ಣಿ | 35/- |
| 16. | ಕಣ್ಣಮುಂದಿನ ಬೆಳಕು | ದಸ್ತಗೀರ್‌ಸಾಬ್ ದಿನ್ನಿ | 35/- |
| 17. | ಸಿಸಿಫಸ್‌ರ ಸುತ್ತು | ಡಾ. ಬಸವರಾಜ ಸಾದರ | 50/- |

**ಕಾದಂಬರಿ**

| | | | |
|---|---|---|---|
| 18. | ಶಾಮಣ್ಣ | ಕುಂ. ವೀರಭದ್ರಪ್ಪ | 175/- |
| 19. | ಗಾಂಧಿಬಂದ | ಎಚ್. ನಾಗವೇಣಿ | 130/- |
| 20. | ಬದುಕು | ಗೀತಾ ನಾಗಭೂಷಣ | 190/- |

**ಪ್ರವಾಸ ಕಥನ**

| | | |
|---|---|---|
| 21. ನನ್ನೊಳಗಿನ ಹಾಡು ಕ್ಯೂಬಾ | ಜಿ.ಎನ್. ಮೋಹನ್ | 50/- |
| 22. ಪಂಚಮುಖಿ ಪಂಜಾಬ್ | ಜಿ.ಪಿ. ಬಸವರಾಜು | 60/- |
| 23. ನಾ ಕಂಡ ಬ್ರಝಿಲ್ | ಡಾ. ಸಿ. ನಾಗಭೂಷಣ | 60/- |

**ವೈಚಾರಿಕ ಮತ್ತು ಇತರೆ**

| | | |
|---|---|---|
| 24. ಲೋಹಿಯಾ | ಹಸನ್‌ನಯೀಂ ಸುರಕೋಡ | 120/- |
| 25. ಸರಳಸಿದ್ದರಾಮ ಚರಿತೆ | ಡಾ. ಎಲ್. ಬಸವರಾಜು | 60/- |
| 26. ಶ್ರೀ ಮಧುರಚೆನ್ನರ ಸ್ಮೃತಿಗಳು | ಡಾ. ಸಿಂಪಿ ಲಿಂಗಣ್ಣ | 60/- |
| 27. ಕಾಡು ಮತ್ತು ತೋಪು | ವಿ. ಚಂದ್ರಶೇಖರ ನಂಗಲಿ | 90/- |
| 28. ಅಮೃತ ಮತ್ತು ವಿಷ | ರಂಜಾನ್ ದರ್ಗಾ | 75/- |
| 29. ಶತಮಾನ | ಮೊಗಳ್ಳಿ ಗಣೇಶ | 50/- |
| 30. ಅಣುವೆಂಬ ಸದ್ದಿಲ್ಲದ ಸಾವ ಕುರಿತು | ಎನ್. ಜಗದೀಶ ಕೊಪ್ಪ | 25/- |
| 31. ನಿರ್‌ಬೀಜೀಕರಣದ ವಿರಾಟ್ ಸ್ವರೂಪ | ವಿ. ಚಂದ್ರಶೇಖರ ನಂಗಲಿ | 33/- |
| 32. ಬುದ್ಧ ಚರಿತೆ | ಡಾ. ಎಲ್. ಬಸವರಾಜು | 180/- |
| 33. ಸೌಂದರನಂದ | ಡಾ. ಎಲ್. ಬಸವರಾಜು | 150/- |
| 34. ನೀರದೀವಿಗೆ | ಡಾ. ಕೆ. ವೈ. ನಾರಾಯಣಸ್ವಾಮಿ | 100/- |
| 35. ನಮ್ಮ ಬಡತನ ಸಂವಿಧಾನಕ್ಕೊಂದು ಕಳಂಕ | ಜಸ್ವೀರ್‌ಸಿಂಗ್ | 25/- |
| 36. ಅಲ್ಲಮನ ವಚನಚಂದ್ರಿಕೆ | ಡಾ. ಎಲ್. ಬಸವರಾಜು | 250/- |
| 37. ಸೂಳೆ ಸಂಕವ್ವೆ (ನಾಟಕ) | ಮುದೇನೂರ ಸಂಗಣ್ಣ | 50/- |
| 38. ಚಾತುರ್ವರ್ಣ ಧರ್ಮದರ್ಶನ (3ನೇ ಮುದ್ರಣ) | ಕುಮಾರ ಕಕ್ಕಯ್ಯಪೋಳ | 75/- |
| 39. ನಾ ನಿಮ್ಮೊಳಗು | ಪ್ರೊ. ವಿ. ಚಂದ್ರಶೇಖರ ನಂಗಲಿ | 100/- |
| 40. ಬಗೆ | ಡಾ. ಸಬಿಹಾ ಭೂಮಿಗೌಡ | 60/- |

ಕನ್ನಡದ ಹಿರಿಯ ಕವಿಗಳೂ, ಕಾವ್ಯ ಮೀಮಾಂಸಕರೂ, ಪ್ರಾಧ್ಯಾಪಕರೂ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಇಂದಿನ ಕನ್ನಡ ಸಾಂಸ್ಕೃತಿಕ ಲೋಕದ ಎಲ್ಲ ಸೂಕ್ಷ್ಮ ಹಾಗೂ ಸಮತೋಲನಗಳ ಪ್ರಾತಿನಿಧಿಕ ಶಕ್ತಿಯೂ ಆಗಿರುವ ಡಾ|| ಜಿ. ಎಸ್. ಶಿವರುದ್ರಪ್ಪನವರಿಗೆ ಈಗ ಎಪ್ಪತ್ತೈದು ವರ್ಷಗಳು. ನೂರು ವರ್ಷ ಬಾಳಲಿ ಎಂಬ ಹಾರೈಕೆಯೇ ಅತ್ಯಂತ ಶ್ರೇಷ್ಠ ಹಾರೈಕೆಯೆನಿಸಿರುವ ನಮ್ಮ ಪರಂಪರೆಯಲ್ಲಿ ಜಿಎಸ್ಎಸ್ ಅವರಂತಹ ಒಂದು ಬಹುಮುಖ ಪ್ರತಿಭೆಯ ಚೇತನ ಎಪ್ಪತ್ತೈದು ವರ್ಷಗಳ ಬಾಳನ್ನು ಪೂರ್ಣಗೊಳಿಸಿರುವ ಸಂದರ್ಭವು, ಆ ಚೇತನದ ಸಂಪರ್ಕಕ್ಕೆ ಬಂದು ಒಂದಲ್ಲ ಒಂದು ರೀತಿಯಲ್ಲಿ ತಮ್ಮ ಬಾಳನ್ನು ಸಂಪನ್ನಗೊಳಿಸಿಕೊಂಡವರ ಪಾಲಿಗೆ ಒಂದು ವಿಶೇಷ ಆಚರಣೆಯ ಸಂದರ್ಭವೂ ಹೌದು. ಈ ವಿಶೇಷ ಆಚರಣೆಯ ಪ್ರತೀಕವೇ ಈ ಅಭಿನಂದನ ಗ್ರಂಥ 'ಹಣತೆ'; ಹಣತೆ ಜಿಎಸ್ಎಸ್ ಅವರ ಕಾವ್ಯಲೋಕದ ಸ್ಥಾಯಿ ಪ್ರತೀಕ ಹೇಗೋ ಹಾಗೆಯೇ ಕನ್ನಡ ಸಾಂಸ್ಕೃತಿಕ ಲೋಕದಲ್ಲಿ ಅವರು ನಿರ್ವಹಿಸುತ್ತಾ ಬಂದಿರುವ ಪಾತ್ರದ ಪ್ರತೀಕವೂ ಆಗಿದೆ ಎಂಬುದು ನಮ್ಮ ನಂಬಿಕೆ.



ಲೋಹಿಯಾ ಪ್ರಕಾಶನ, ಬಳ್ಳಾರಿ

ISBN 81-87731-27-3
ಬೆಲೆ ರೂ. 300.